# ದೇವಗಂಗೆ

## ಪಂಡಿತರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳಿಗೆ

## ಅವರ ಮಿತ್ರರು ಮತ್ತು ಹಿತೈಷಿಗಳು ಸಮರ್ಪಿಸಿದ ಪ್ರಶಸ್ತಿಗ್ರಂಥ

1968



ಪ್ರಕಾಶಕರು
ಶಾಸ್ತ್ರಿಗಳ ಷಷ್ಟ್ಯಬ್ದಿಶಾಂತಿ ಸಮಾರಂಭ ಸಮಿತಿ
ಬೆಂಗಳೂರು-೨

# ಮುನ್ನುಡಿ

ಪಂಡಿತರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಕನ್ನಡ ನಾಡಿನಲ್ಲೆಲ್ಲಾ ಸುಪ್ರಸಿದ್ಧರು. ಶ್ರೀಯುತರ ಹೆಸರನ್ನು ಕೇಳದವರು ಬಹುಶಃ ಕರ್ನಾಟಕದಲ್ಲಿ ಯಾರೂ ಇಲ್ಲವೆನ್ನಬಹುದು. ಸುಮಾರು ನಲವತ್ತೈದು ವರ್ಷಗಳ ಕಾಲದಿಂದ ಅಖಂಡ ಕರ್ನಾಟಕದಲ್ಲೆಲ್ಲಾ ಪ್ರವಾಸಮಾಡಿ ನಾಡಿನ ಏಕೀಕರಣಕ್ಕೆ ಮಿಗಿಲಾದ ಸೇವೆಯನ್ನು ಸಲ್ಲಿಸಿದ್ದಾರೆ. ತಮ್ಮ ವಿಚಾರಪೂರ್ಣ ಕೀರ್ತನ-ಭಾಷಣಗಳಿಂದ ಕನ್ನಡ ಜನರನ್ನು ಬಹಳವಾಗಿ ಹುರಿದುಂಬಿಸಿದ್ದಾರೆ.

ಶ್ರೀ ಶಾಸ್ತ್ರಿಗಳು ಪ್ರಾರಂಭದಲ್ಲಿ 'ಸ್ವತಂತ್ರಕರ್ನಾಟಕ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿ ಅದರ ಮೂಲಕ ಜನಜಾಗೃತಿಯನ್ನುಂಟುಮಾಡಿದರು. 'ಶರಣ ಸಾಹಿತ್ಯ' ಎಂಬ ಮಾಸಿಕದಿಂದ ಸಾಹಿತ್ಯಕ್ಷೇತ್ರಕ್ಕೆ ಅದರಲ್ಲೂ ವೀರಶೈವ ಸಾಹಿತ್ಯಕ್ಕೆ ವಿಶೇಷವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಈ 'ಶರಣ ಸಾಹಿತ್ಯವು' ಶಿವಶರಣರ ದಿವ್ಯಭವ್ಯ ಸಂದೇಶವನ್ನು ಮನೆಮನೆಗೂ ಕೊಂಡೊಯ್ಯುವ ಕೈದೀವಿಗೆಯಂತಿದೆ.

ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಕನ್ನಡ ಮತ್ತು ಸಂಸ್ಕೃತದಲ್ಲಿ ಘನ ಪಂಡಿತರು. ಹಿಂದಿ, ತೆಲುಗು, ತಮಿಳು ಮೊದಲಾದ ಭಾಷೆಗಳನ್ನೂ ಅರಿತವರು. ಶ್ರೀಯುತರನ್ನು ಅರಮನೆಯವರೂ—ಗುರುಮನೆಯವರೂ ಸನ್ಮಾನಿಸಿ ಸತ್ಕರಿಸಿದ್ದಾರೆ. ಇವರಿಗೆ ಮೈಸೂರು ಸರ್ಕಾರದಿಂದ "ಪಂಡಿತ ರತ್ನಂ" ಎಂಬ ಬಿರುದು ಪ್ರಾಪ್ತವಾಗಿದೆ. ಪಂಚ ಜಗದ್ಗುರು ಪೀಠಗಳಿಂದ ಬಿರುದು ಗಳಿಸಿದ್ದಾರೆ. ವಿದ್ವತ್ ಸಭೆಗಳಿಂದ ಮನ್ನಣೆ ಪಡೆದಿದ್ದಾರೆ. ಇವಕ್ಕಿಂತಲೂ ಮಿಗಿಲಾಗಿ ಇವರಿಗೆ ಭಾರತ ಸರ್ಕಾರದಿಂದ 'ಪದ್ಮಶ್ರೀ' ಎಂಬ ಪ್ರಶಸ್ತಿ ಲಭಿಸಿದೆ. ಇವೆಲ್ಲವೂ ಶ್ರೀ ಶಾಸ್ತ್ರಿಗಳ ಮೇಧಾಶಕ್ತಿಗೂ ಕ್ರಿಯಾಶಕ್ತಿಗೂ ಕರ್ತೃತ್ವಶಕ್ತಿಗೂ ನಿದರ್ಶನಗಳಾಗಿವೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶ್ರೀ ಶಾಸ್ತ್ರಿಗಳ ಹೆಸರು ಉಲ್ಲೇಖನಾರ್ಹವಾಗಿದೆ. ಇವರು ವೀರಶೈವ ಸಾಹಿತ್ಯ ಮತ್ತು ಇತಿಹಾಸ, ವೀರಶೈವ ಮಹಾಪುರುಷರು, ಕರ್ಣಾಟಕ ಸಂದರ್ಶನ, ಬಿದನೂರು ಪ್ರಭು ಶಿವಪ್ಪನಾಯಕ, ಕೆಳದಿಯ ರಾಣಿ ಚೆನ್ನಮ್ಮ ಮೊದಲಾದ ಹಲವಾರು ಗದ್ಯಕೃತಿಗಳನ್ನು ಬರೆದಿರು ವರಲ್ಲದೆ ವೀರೇಶ ಚರಿತೆ, ಮಾದೇಶ್ವರ ಸಾಂಗತ್ಯ, ಪುರಾತನ ತ್ರಿವಿಧಿ, ಶತಕ ಸಾಹಿತ್ಯ, ಗಣಸಹಸ್ರನಾಮ, ಷಡಕ್ಷರಮಂತ್ರ ಮಹಿಮೆ, ಬಸವೋದಾಹರಣಂ, ಪಂಪಾಸ್ಥಾನ ವರ್ಣನಂ, ಘನಲಿಂಗಿಯ ವಚನಗಳು ಮೊದಲಾದ ಹಲವಾರು ಪ್ರಾಚೀನ ಗ್ರಂಥಗಳನ್ನು ಸಂಪಾದಿಸಿ ತಮ್ಮ ಗ್ರಂಥ ಮಾಲೆಯಲ್ಲಿ ಪ್ರಕಟಿಸಿದ್ದಾರೆ.

ಶ್ರೀ ಶಾಸ್ತ್ರಿಗಳು ನಾಡುನುಡಿಗಳಿಗೆ ಸಲ್ಲಿಸುತ್ತಿರುವ ಬಹುಮುಖವಾದ ಸೇವೆಯನ್ನು ಪರಿಗಣಿಸಿ ಶ್ರೀಯುತರ ಷಷ್ಟ್ಯಬ್ದಿಸಮಾರಂಭ ಸಮಿತಿಯವರು ಅವರಿಗೆ ಸಂಭಾವನಾಗ್ರಂಥವನ್ನು ಸಮರ್ಪಿಸ ಬೇಕೆಂದು ನಿರ್ಧರಿಸಿ (೧೯೬೩) ಆ ಕಾರ್ಯಕ್ಕಾಗಿ ಸಂಪಾದಕ ಸಮಿತಿಯನ್ನು ನೇಮಿಸಿದರು. ಆಸಂಪಾದಕ ಸಮಿತಿಯ ಅಧ್ಯಕ್ಷರಾದ ಶ್ರೀ ಎನ್. ಬಸವಾರಾಧ್ಯ ಎಂ.ಎ., ಅವರು ಅತ್ಯಂತ ಪ್ರಯಾಸದಿಂದ ಈ ಗ್ರಂಥವನ್ನು ಸರ್ವಾಂಗ ಸುಂದರವಾಗಿ ಹೊರತಂದಿದ್ದಾರೆ. ಸ್ವಾಗತಸಮಿತಿಯ ಪರವಾಗಿ ಅವರಿಗೆ ನಮ್ಮ ಧನ್ಯವಾದಗಳು.

ಈ ಸಂಭಾವನಾಗ್ರಂಥ ರಚನೆಗೆ ಕಾರಣಕರ್ತರೂ ಸ್ವಾಗತಸಮಿತಿಯ ಅಧ್ಯಕ್ಷರೂ ಆಗಿದ್ದ ಕೈ|| ಜಿ. ಪರಮಶಿವಯ್ಯನವರು ಈ ಗ್ರಂಥ ಹೊರಬರುವುದರೊಳಗಾಗಿ ಶಿವೈಕ್ಯರಾದರು. ಮತ್ತು ಕೋಶಾಧಿಕಾರಿಗಳಾಗಿದ್ದ ರಾಜಸೇವಾಸಕ್ತ ಡಿ. ಸಿ. ಸುಬ್ಬರಾಯಪ್ಪನವರೂ ಮೊನ್ನೆ ತಾನೇ ದಿವಂಗತರಾದರು. ಈ ಪ್ರಶಸ್ತಿ ಗ್ರಂಥಕ್ಕೆ

ಉದಾರ ಧನಸಹಾಯ ಮಾಡಿದ ದಿ॥ ಧರ್ಮಪ್ರಕಾಶ ಎಸ್. ವಿ ಶ್ರೀನಿವಾಸಶೆಟ್ಟರು ಮತ್ತು ದಿ॥ ಕೆ. ಎಸ್. ಈಶ್ವರರಾಯರು ಈಗ ಇಲ್ಲವಾಗಿದ್ದಾರೆ. ದೈವೇಚ್ಛೆಗೆ ಉಪಾಯವಿಲ್ಲ. ಈ ಮಹನೀಯರೆಲ್ಲರ ಆತ್ಮಕ್ಕೆ ಭಗವಂತನು ಶಾಂತಿಯನ್ನೀಯಲಿ ಎಂದು ಈ ಸಂದರ್ಭದಲ್ಲಿ ನಾನು ಪ್ರಾರ್ಥಿಸುತ್ತೇನೆ. ಈ ಗ್ರಂಥಕ್ಕೆ ತಮ್ಮ ಅಮೂಲ್ಯವಾದ ಪ್ರಸ್ತಾವನೆಯನ್ನು ಬರೆದುಕೊಟ್ಟ ಮೈಸೂರು ಶ್ರೀಮನ್ಮಹಾರಾಜರವರಾದ ಪೂಜ್ಯ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಮಹಾಸ್ವಾಮಿಗಳವರಿಗೆ ಸಮಿತಿಯ ಪರವಾಗಿ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಈ ಗ್ರಂಥಕ್ಕೆ ಧನಸಹಾಯವನ್ನು ಮಾಡಿದ ನಾಡಿನ ಶ್ರೀಮಠಗಳ ಅಧ್ಯಕ್ಷರಾದ ಪೂಜ್ಯ ಶ್ರೀಗಳವರಿಗೂ ದಾನಿಗಳಿಗೂ ಲೇಖನಗಳನ್ನು ಒದಗಿಸಿದ ವಿದ್ವಾಂಸರಿಗೂ ಸಂದೇಶಗಳನ್ನು ಕಳಿಸಿದ ಮಾನ್ಯರಿಗೂ ಸಮಿತಿಯ ಪರವಾಗಿ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಇವರೆಲ್ಲರ ಬಂಧು ಪ್ರೇಮವೂ ಸಾಹಿತ್ಯ ಶ್ರದ್ಧೆಯೂ ಅಭಿನಂದನಾರ್ಹವಾದುದು.

ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳಿಗೆ ಸಮರ್ಪಿಸುವ ಈ ಸಂಭಾವನಾ ಗ್ರಂಥಕ್ಕೆ "ದೇವಗಂಗೆ" ಎಂದು ಸಂಪಾದಕ ಸಮಿತಿಯವರು ಹೆಸರಿಸಿದ್ದಾರೆ. ಕರ್ಣಾಟಕದ ಸುಮಾರು ೬೦ ಮಂದಿ ವಿದ್ವಾಂಸರ ಬರೆಹಗಳಿಂದ ಕಂಗೊಳಿಸುವ ಈ ಬೃಹದ್ ಗ್ರಂಥವು ಕ್ರೌನ್ ೧/೪ ಆಕಾರದ ಸುಮಾರು ೫೫೦ ಪುಟಗಳಷ್ಟಿದೆ. ಇದರಲ್ಲಿ ಸುಮಾರು ೪೫೦ ಪುಟಗಳು ವಿವಿಧ ವಿಷಯಗಳ ಮೇಲೆ ಗಣ್ಯ ವಿದ್ವಾಂಸರು ಬರೆದ ವಿದ್ವತ್ಪೂರ್ಣ ಲೇಖನಗಳಾಗಿವೆ. ಸುಮಾರು ೧೦೦ ಪುಟಗಳಷ್ಟು ಸಾಹಿತ್ಯವು ಶಾಸ್ತ್ರಿಗಳನ್ನು ಕುರಿತ ವಿಷಯಗಳನ್ನು ಒಳಗೊಂಡಿದೆ. ಒಟ್ಟಿನಲ್ಲಿ ಈ ಬೃಹತ್ಕೃತಿಯು ಕನ್ನಡನಾಡಿಗೆ ಸಮರ್ಪಿಸಿದ ಒಂದು ದಿವ್ಯಕೃತಿಯಾಗಿದೆ ಎಂದು ನಂಬುತ್ತೇನೆ. ಈ ಸಂಭಾವನಾ ಗ್ರಂಥಕ್ಕೆ "ದೇವಗಂಗೆ" ಎಂಬ ಹೆಸರು ನಿಜಕ್ಕೂ ಸಮಂಜಸವಾಗಿದೆ. ಗುಣಜ್ಞರಾದ ಕನ್ನಡಿಗರು ಇದರ ಪ್ರಯೋಜನವನ್ನು ಪಡೆಯುವರೆಂದು ನನ್ನ ಬಲವಾದ ವಿಶ್ವಾಸವಿದೆ.

॥ ಸಿರಿಗನ್ನಡಂ ಗೆಲ್ಗೆ-ಬಾಳ್ಗೆ ॥

ತಾ॥ ೨೮-೮-೧೯೬೮
ಬೆಂಗಳೂರು-೬

ಬಿ. ಡಿ. ಜತ್ತಿ
ಅಧ್ಯಕ್ಷರು
ಸ್ವಾಗತ ಸಮಿತಿ.

# ಬಿನ್ನಹ

ಕಳೆದ ನಾಲ್ಕು ದಶಕಗಳಿಂದ ಕನ್ನಡ ನಾಡು-ನುಡಿಗಳಿಗೆ ಅಮೋಘವಾದ ಸೇವೆಯನ್ನು ಹಲವು ಮುಖಗಳಿಂದ ಸಲ್ಲಿಸುತ್ತಿರುವ ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರಿಗೆ ಶ್ರೀಯುತರ ಷಷ್ಟ್ಯಬ್ದಿ ಶಾಂತಿ ಸಮಾರಂಭ ಸಮಿತಿಯವರು ಒಂದು ಸಂಭಾವನಾಗ್ರಂಥವನ್ನು ಅರ್ಪಿಸಬೇಕೆಂದು ನಿರ್ಧರಿಸಿ ಸಂಪಾದಕ ಸಮಿತಿಯನ್ನು ನಿಯಮಿಸಿದರು(೧೯೬೩). ಸಂಪಾದಕ ಸಮಿತಿಯ ಪರವಾಗಿ ನಾಡಿನ ಹಲವಾರು ವಿದ್ವಾಂಸರಿಗೆ ಲೇಖನಗಳನ್ನು ಕಳಿಸುವಂತೆ ಕೋರಿ ಪತ್ರಗಳನ್ನು ಬರೆಯಲಾಯಿತು. ನಮ್ಮ ಕರೆಗೆ ಓಗೊಟ್ಟು! ಸುಮಾರು ೫೮ ಮಂದಿ ವಿದ್ವಾಂಸರು ತಮ್ಮ ಅಮೂಲ್ಯವಾದ ಲೇಖನಗಳನ್ನು ಕಳಿಸಿಕೊಟ್ಟರು. ಹೀಗೆ ಬಂದ ಲೇಖನಗಳನ್ನೆಲ್ಲಾ ಸಂಪಾದಿಸಿ ೪೮ ಲೇಖನಗಳನ್ನು ಅಚ್ಚಿಗೆ ಕೊಡಲಾಯಿತು. ಉಳಿದ ಲೇಖನಗಳನ್ನು ಕಾಲಾವಕಾಶವಿಲ್ಲದೆ ಅಚ್ಚು ಪಡಿಸಲಾಗಲಿಲ್ಲ. ಅದಕ್ಕಾಗಿ ಅವರ ಕ್ಷಮೆಯನ್ನು ಕೇಳುತ್ತೇನೆ. ಈ ಲೇಖನಗಳೆಲ್ಲಾ ಶರಣ ಸಾಹಿತ್ಯದಲ್ಲಿ ಬೆಳಕು ಕಾಣುತ್ತವೆ. ಸುಮಾರು ಐದು ವರ್ಷಗಳ ಹಿಂದೆ ಪ್ರಾರಂಭವಾದ ಈ ಮಹತ್ಕಾರ್ಯ ಕನ್ನಡ ನಾಡಿನ ಹಲವು ಮಂದಿ ಮಹನೀಯರ ಸಹಕಾರದಿಂದ ಈಗ ಪೂರ್ಣಗೊಂಡುದು ಸಂತೋಷಕರವಾದ ಸಂಗತಿ.

ಈ ಸಂಭಾವನಾಗ್ರಂಥಕ್ಕೆ ವಿದ್ವತ್‌ಪೂರ್ಣವಾದ ತಮ್ಮ ಲೇಖನಗಳನ್ನು ಒದಗಿಸಿ ಕೊಟ್ಟು ಈ ಗ್ರಂಥ ಹೊರಬರುವ ಮೊದಲೇ ಕಣ್ಮರೆಯಾದ ಪ್ರೊ॥ ಕೆ. ಜಿ. ಕುಂದಣಗಾರ್ ಮತ್ತು ಕೆ. ಗೋಪಾಲಕೃಷ್ಣರಾವ್ ಅವರನ್ನು ಈ ಸಮಯದಲ್ಲಿ ಕೃತಜ್ಞತೆಯಿಂದ ಸ್ಮರಿಸಬೇಕಾದುದು ಅತ್ಯಗತ್ಯವಾಗಿದೆ. ಈ ಮಹನೀಯರ ಪವಿತ್ರಾತ್ಮನಿಗೆ ಭಗವಂತನು ಶಾಂತಿಯನ್ನು ಕೊಡಲೆಂದು ಪ್ರಾರ್ಥಿಸುತ್ತೇನೆ. ಈ ಸಂಭಾವನಾ ಗ್ರಂಥದಲ್ಲಿ ಶ್ರೀಮನ್‌ಮಹಾರಾಜರವರ ಪ್ರಸ್ತಾವನೆಯೂ ಮಾನ್ಯರ ಸಂದೇಶಗಳೂ ಈ ಬೃಹತ್ಕೃತಿಯ ಮಹತ್ವವನ್ನು ಬಹಳವಾಗಿ ಹೆಚ್ಚಿಸಿವೆ. ಅಲ್ಲದೆ ಶ್ರೀ ಶಿವಮೂರ್ತಿಶಾಸ್ತ್ರಿಗಳ ಜನ ಪ್ರಿಯತೆಗೆ ನಿರ್ದಶನವಾಗಿದೆ. ಈ ಪ್ರಶಸ್ತಿಗೆ "ದೇವಗಂಗೆ" ಎಂದು ಹೆಸರಿಡಲಾಗಿದೆ. ಮೊದಲನೆಯ ಭಾಗದಲ್ಲಿ ಮಹತ್ವದ ೪೮ ಲೇಖನಗಳಿವೆ. ಎರಡನೆಯ ಭಾಗದಲ್ಲಿ ಶಾಸ್ತ್ರಿಗಳನ್ನು ಕುರಿತು ಹಲವು ಮಂದಿ ಹೇಳಿದ ಅಭಿಪ್ರಾಯಗಳಿವೆ. ಈ ಸಂಭಾವನಾ ಗ್ರಂಥದ ಅಚ್ಚಿನಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ಮಾಡಿಕೊಟ್ಟ ಓರಿಯಂಟ್ ಪವರ್‌ಪ್ರೆಸ್ ಮಾಲೀಕರಾದ ಶ್ರೀ ಜಿ. ಶ್ರೀನಿವಾಸನ್ ಅವರಿಗೆ ಸಮಿತಿಯ ಪರವಾಗಿ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಕೊನೆಯದಾಗಿ ಈ ಮಹತ್ಕಾರ್ಯದಲ್ಲಿ ನೆರವಾದ ಪ್ರತಿಯೊಬ್ಬರಿಗೂ ನಾನು ಆಭಾರಿಯಾಗಿದ್ದೇನೆ.

ತಾ॥ ೨೮-೮-೧೯೬೮
ಬೆಂಗಳೂರು-೧೦

ಎನ್. ಬಸವಾರಾಧ್ಯ
ಅಧ್ಯಕ್ಷರು : ಸಂಪಾದಕ ಸಮಿತಿ.

***The Palace***
Mysore
5th August 1968

॥ ಶುಭಮಸ್ತು ॥

**ಮೈಸೂರು ಶ್ರೀಮನ್ಮಹಾರಾಜರವರಾದ ಶ್ರೀ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಮಹಾಸ್ವಾಮಿಯವರಿಂದ**

# ಪ್ರಸ್ತಾವನೆ

ಸುಮಾರು ನಲವತ್ತೈದು ವರ್ಷಗಳಿಂದ ಕನ್ನಡ ನಾಡು-ನುಡಿಗಳ ಸೇವೆಗಾಗಿ, ಸಮಾಜದಲ್ಲಿ ಭಾವೈಕ್ಯತೆಯನ್ನು ಮೂಡಿಸುವುದಕ್ಕಾಗಿ, ಜನರಲ್ಲಿ ಧರ್ಮ ನೀತಿ ನಿಯಮಗಳ ಸದ್ಗುಣಗಳನ್ನು ಪ್ರಸಾರ ಮಾಡುವುದಕ್ಕಾಗಿ ತಮ್ಮ ಆಯುಷ್ಯವನ್ನು ಮೀಸಲು ಮಾಡಿ, ನಾನಾ ವಿಧವಾಗಿ ದೇಶಕ್ಕೂ ಜನತೆಗೂ ಸೇವೆಯನ್ನು ಸಲ್ಲಿಸುತ್ತಿರುವ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ ೧೯೬೩ರಲ್ಲಿ ನಡೆದ ಷಷ್ಠ್ಯಬ್ದಶಾಂತಿ ಸಮಾರಂಭದ ಸವಿನೆನಪಿಗಾಗಿ ಕರ್ನಾಟಕ ದೇಶದ ಹಲವು ಗಣ್ಯವಿದ್ವಾಂಸರಿಂದ ಬರೆಯಲ್ಪಟ್ಟಿರುವ, ಉಪಯುಕ್ತವಾದ ವಿವಿಧ ವಿಷಯಗಳಿಂದ ಕೂಡಿರುವ ಪ್ರಶಸ್ತಿ ಗ್ರಂಥವೊಂದನ್ನು ಮಾನ್ಯ ಶ್ರೀ ಬಿ. ಡಿ. ಜತ್ತಿಯವರ ನೇತೃತ್ವದಲ್ಲಿ ರಚನೆಯಾಗಿರುವ ಉತ್ಸವ ಸಮಿತಿಯವರು ಶ್ರೀ ಬಿ. ಶಿವಮೂರ್ತಿಶಾಸ್ತ್ರಿಯವರಿಗೆ ಸಮರ್ಪಿಸುವರೆಂಬುದನ್ನು ಕೇಳಿ ನಮಗೆ ತುಂಬಾ ಸಂತೋಷವಾಗಿದೆ.

ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಮೈಸೂರು ಅರಮನೆಯ ಆಸ್ಥಾನ ಪಂಡಿತರಾಗಿದ್ದಾರೆ. ಅವರ ಗುರುಗಳಾಗಿದ್ದ ಕರ್ನಾಟಕ ಭಾಷಾರತ್ನ ಕೈ॥ ಪಿ. ಆರ್. ಕರಿಬಸವ ಶಾಸ್ತ್ರಿಗಳು ಹಾಗೂ ಅವರ ಗುರುಗಳಾಗಿದ್ದ ಅಭಿನವ ಕಾಳಿದಾಸ ಕೈ॥ ಬಸವಪ್ಪ ಶಾಸ್ತ್ರಿಗಳು ಆಸ್ಥಾನ ವಿದ್ವಾಂಸರಾಗಿಯೇ ಪ್ರಖ್ಯಾತರಾಗಿರುತ್ತಾರೆ. ಹೀಗೆ ಸುಮಾರು ಒಂದು ಶತಮಾನ ಕಾಲದ ಅರಮನೆಯ ವಿದ್ವದ್ಬಾಂಧವ್ಯವನ್ನು ಶ್ರೀ ಶಾಸ್ತ್ರಿಗಳು ಪಡೆದುಕೊಂಡಿರುತ್ತಾರೆ. ಶ್ರೀ ಶಾಸ್ತ್ರಿಗಳು ನಿಷ್ಕಾಮಬುದ್ಧಿಯಿಂದ ಸಾಹಿತ್ಯಕ್ಕೂ ಸಮಾಜಕ್ಕೂ ಸಲ್ಲಿಸಿದ ಸೇವೆಯನ್ನು ಮೆಚ್ಚಿದ ಮೈಸೂರು ಸರ್ಕಾರದಿಂದ ಅವರಿಗೆ 'ಪಂಡಿತ ರತ್ನ' ಎಂಬ ಬಿರುದು ಪ್ರಾಪ್ತವಾಗಿದೆ. (೧೯೪೯) ಇತ್ತೀಚೆಗೆ ಭಾರತ ಸರ್ಕಾರದಿಂದ ಅವರಿಗೆ 'ಪದ್ಮಶ್ರೀ' ಎಂಬ ಬಿರುದು ಪ್ರಾಪ್ತವಾಗಿದೆ. (೧೯೬೬) ಪ್ರಖ್ಯಾತವಾದ ಹಲವು ಗುರುಮಠಗಳಿಂದ ಕೂಡ ಅವರು ಮನ್ನಣೆ ಗಳಿಸಿದ್ದಾರೆ. ಕರ್ನಾಟಕದ ಹಲವಾರು ಸಂಘ ಸಂಸ್ಥೆಗಳಿಂದಲೂ ಅವರು ಮಾನಪತ್ರಗಳನ್ನೂ ಸುವರ್ಣಪದಕಗಳನ್ನೂ ಪಡೆದಿದ್ದಾರೆ.

ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಹಲವಾರು ವರ್ಷಗಳಕಾಲ ಕರ್ನಾಟಕವನೆಲ್ಲಾ ಸುತ್ತಿ ತಮ್ಮ ವಿದ್ವತ್ಪೂರ್ಣ ಹಾಗೂ ವಿಚಾರಪೂರ್ಣ ಕೀರ್ತನ-ಭಾಷಣಗಳಿಂದ ಜನಜಾಗೃತಿಯನ್ನುಂಟುಮಾಡಿ ಅಲ್ಲಿನ ಜನರಿಗೆ ಕರ್ನಾಟಕದ ಅಭಿಮಾನವನ್ನು ಉಕ್ಕೇರಿಸಿರುವುದು ಗಮನಾರ್ಹವಾದ ಸಂಗತಿಯಾಗಿದೆ

ಸುಮಾರು ಮೂವತ್ತು ವರ್ಷಗಳಿಂದ 'ಶರಣ ಸಾಹಿತ್ಯ' ಎಂಬ ಪತ್ರಿಕೆಯನ್ನು ನಡೆಸುತ್ತಿದ್ದು, ಕನ್ನಡ ಸಾಹಿತ್ಯಕ್ಕೆ ಶಕ್ತಿಯನ್ನು ಹೆಚ್ಚಿಸಿದ್ದಾರೆ. 'ಸ್ವತಂತ್ರ ಕರ್ನಾಟಕ' ಎಂಬ ವಾರಪತ್ರಿಕೆಯನ್ನು ಕೆಲವುಕಾಲ ನಡೆಸಿ ಪತ್ರಿಕಾಪ್ರಪಂಚಕ್ಕೂ ಅವರು ಸೇವೆಯನ್ನು ಸಲ್ಲಿಸಿದ್ದಾರೆ. ಶರಣ ಸಾಹಿತ್ಯ ಗ್ರಂಥಮಾಲೆಯಲ್ಲಿ ಸುಮಾರು ಮೂವತ್ತಕ್ಕೂ ಹೆಚ್ಚಿನ ಗ್ರಂಥಗಳನ್ನು ಪ್ರಕಟಿಸಿದ್ದಾರೆ. 'ಕರ್ನಾಟಕ ಸಂದರ್ಶನ' 'ವೀರಶೈವ ಸಾಹಿತ್ಯ ಮತ್ತು ಇತಿಹಾಸ' 'ಬಿದನೂರು ಪ್ರಭು ಶಿವಪ್ಪನಾಯಕ, 'ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ' 'ಮಹಾಕವಿ ಷಡಕ್ಷರದೇವ' 'ಹದಿಮೂರನೆಯ ಶತಮಾನದ ಮಹಾಕವಿಗಳು' ವೀರಶೈವ ಮಹಾಪುರುಷರು, ಶ್ರೀ ಮಾದೇಶ್ವರ ಚರಿತ್ರೆ, ಕೆಳದಿ ರಾಣಿ ಚೆನ್ನಮ್ಮಾಜಿ ಮೊದಲಾದ ಅವರ ಕೃತಿಗಳು ವಿದ್ವಾಂಸರ ಮನ್ನಣೆಗೆ ಪಾತ್ರವಾಗಿವೆ. ಶ್ರೀ ಶಾಸ್ತ್ರಿಗಳು ರಚಿಸಿರುವ 'ಮಂಬಿ ಮತ್ತು ನಾದ' ಎಂಬ ಗ್ರಂಥವು ಅವರ ಕವಿತಾ ಸಾಮರ್ಥ್ಯವನ್ನು ಸೂಚಿಸುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಸಾಹಿತ್ಯ-ಸಂಗೀತ ಅಕಾಡೆಮಿಯ ಸದಸ್ಯರಾಗಿ, 'ಕನ್ನಡ ವಿಶ್ವಕೋಶ ಮತ್ತು ಶಬ್ದಕೋಶ ಸಮಿತಿ'ಗಳ ಸದಸ್ಯರಾಗಿ, 'ಬಸವ ಸಮಿತಿ' 'ಆಕಾಶವಾಣಿ' ಮೊದಲಾದವುಗಳ ಸಲಹಾ ಸಂಸ್ಥೆಯ ಸದಸ್ಯರಾಗಿ ಅವರು ನಾಡಿಗೆ ಮಿಗಿಲಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಉತ್ಸಾಹ ಪೂರ್ಣವಾದ ದೇಶ ಸೇವಾಕಾರ್ಯವನ್ನು ನಾವು ಬಹು ಕಾಲದಿಂದಲೂ ವೀಕ್ಷಿಸುತ್ತಿದ್ದೇವೆ. ವಿಶಾಲ ಮೈಸೂರು ರಾಜ್ಯದ ನಿರ್ಮಾಣಕ್ಕಾಗಿ ಸುಮಾರು ನಲವತ್ತು ವರ್ಷಗಳ ಅವಧಿಯಲ್ಲಿ ಅವರು ಮಾಡಿರುವ ಪ್ರಯತ್ನ ನಿಜಕ್ಕೂ ಅನುಪಮವಾದುದು. ಈ ರೀತಿ ಕನ್ನಡ ನಾಡುನುಡಿಗಳ ಜೀವನವನ್ನು ಸವೆಸುತ್ತಿರುವ ಆದರ್ಶ ದೇಶಭಾಷಾಭಿಮಾನಿಗಳಾದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳನ್ನು ಗೌರವಿಸುವ ಕಾರ್ಯವು ನಮಗೆ ಬಹಳ ಸಂತೋಷವನ್ನುಂಟುಮಾಡಿದೆ. ಈ ಪ್ರಶಸ್ತಿ ಗ್ರಂಥದಲ್ಲಿ ಶ್ರೀ ಶಾಸ್ತ್ರಿಗಳನ್ನು ಕುರಿತು ಅಭಿಮಾನಿಗಳು ಆಡಿದ ಮಾತುಗಳೂ, ಪತ್ರಿಕಾಕರ್ತರು ಬರೆದ ಬರೆಹಗಳೂ ಇವೆ. ಅವರ ಸುದೀರ್ಘ ಜೀವನದ ಪ್ರಮುಖ ಘಟನಾವಳಿಗಳನ್ನು ನೆನಪಿಗೆ ತರುವ ಕೆಲವು ಚಿತ್ರಗಳಿವೆ.

ಆಸ್ಥಾನ ವಿದ್ವಾನ್, ಪಂಡಿತರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಇನ್ನೂ ಹಲವುಕಾಲ ಬಾಳಿ ಬದುಕಿ ದೇಶಕ್ಕೂ ಹಾಗೂ ಕನ್ನಡ ಭಾಷೆಗೂ ಸೇವೆ ಮಾಡುವಂತಾಗಲಿ ಎಂದು ನಾವು ಸಚ್ಚಿದಾನಂದ ರೂಪನಾದ ಭಗವಂತನನ್ನು ಕುರಿತು ಪ್ರಾರ್ಥಿಸುತ್ತೇವೆ.

|| ಭದ್ರಂ-ಶುಭಂ-ಮಂಗಲಂ ||

**(ಸಹಿ) ಶ್ರೀ ಜಯಚಾಮರಾಜ ಒಡೆಯರ್**
MAHARAJA OF MYSORE

# ವಿಷಯ ಸೂಚಿಕೆ

## ಮೊದಲನೆಯ ಭಾಗ

# ಎರಡನೆಯ ಭಾಗ

ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಪ್ರಶಸ್ತಿ ಗ್ರಂಥಕ್ಕೆ ದೊರೆತ

# ಉದಾರ ಧನ ಸಹಾಯ

೧. ಚಿನ್ಮೂಲಾದ್ರಿ ಶೂನ್ಯಸಿಂಹಾಸನಾಧಿಪತಿಗಳಾದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮಲ್ಲಿಕಾರ್ಜುನ ಮುರುಘ ರಾಜೇಂದ್ರ ಮಹಾಸ್ವಾಮಿಗಳು, ಬೃಹನ್ಮಠ ಮಹಾಸಂಸ್ಥಾನ, ಚಿತ್ರದುರ್ಗ.
ರೂ. ೩೦೦೦-೦೦

೨. ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಸಿದ್ಧಗಂಗಾವಿರಕ್ತ ಮಠಾಧೀಶ್ವರರಾದ ಡಾ॥ ಶಿವಕುಮಾರಸ್ವಾಮಿಗಳು ರೂ ೧೦೨-೦೦

೩. ಧಾರವಾಡ ಮುರುಘಾಮಠಾಧ್ಯಕ್ಷರಾಗಿರುವ ಶಿವಯೋಗಿ ನಿ. ಪ್ರ. ಸ್ವ. ಮಹಾಂತ ಮಹಾಸ್ವಾಮಿಗಳು. ರೂ. ೧೦೧-೦೦

೪. ನಿಡಸೋಸಿ ಸಿದ್ಧಸಂಸ್ಥಾನದ ಅಧಿಪತಿಗಳಾಗಿರುವ ನಿರಂಜನ ಜಗದ್ಗುರು ಶಿವಲಿಂಗೇಶ್ವರ ಮಹಾಸ್ವಾಮಿಗಳು. ರೂ. ೧೦೧-೦೦

೫. ಬಂಥನಾಳ ಶಿವಯೋಗಿಗಳಾದ ಶ್ರೀ ನಿ. ಪ್ರ. ಸ್ವ. ಸಂಗನ ಬಸವ ಮಹಾಸ್ವಾಮಿಗಳು. ೧೦೧-೦೦

೬. ಬೆಂಗಳೂರು ಬೇಲಿೀ ಮಠಾಧ್ಯಕ್ಷರಾದ ಶ್ರೀಮನ್ನಿರಂಜನ ಚರಮೂರ್ತಿ ಶ್ರೀ ಶಿವರುದ್ರಸ್ವಾಮಿಗಳು,
ರೂ. ೧೦೧-೦೦

೭. ಕನಕಪುರದ ದೇಗುಲ ಮಠಾಧೀಶರಾದ ನಿ.ಪ್ರ.ಸ್ವ. ಶ್ರೀ ಮಹಾಲಿಂಗಸ್ವಾಮಿಗಳು
ರೂ ೧೦೧-೦೦

೮. ಬೆಂಗಳೂರು ಶ್ರೀ ಸರ್ಪಭೂಷಣ ಮಠ ಮತ್ತು ಶಿರಾಳಕೊಪ್ಪ ವಿರಕ್ತಮಠಗಳ ಅಧ್ಯಕ್ಷರಾದ ಶ್ರೀ ನಿ. ಪ್ರ. ಸ್ವ. ಶಿವಕುಮಾರಸ್ವಾಮಿಗಳು.
ರೂ. ೫೧-೦೦

೯. ಹುಣಸಮಾರನಹಳ್ಳಿ ದೇವಸಿಂಹಾಸನಾಧಿಪತಿಗಳಾಗಿರುವ ಶ್ರೀ ಪಟ್ಟದ ಪರ್ವತರಾಜ ಶಿವಾಚಾರ್ಯ ಸ್ವಾಮಿಗಳು. ರೂ. ೧೦೧-೦೦

೧೦. ಮೈಸೂರು ಹೈಕೋರ್ಟಿನ ನ್ಯಾಯಮೂರ್ತಿಗಳಾದ ಮಾನ್ಯ ಶ್ರೀ ಎಂ. ಸದಾಶಿವಯ್ಯನವರು
ರೂ. ೧೦೦-೦೦

೧೧. ಮೈಸೂರು ಹೈಕೋರ್ಟು ನ್ಯಾಯಮೂರ್ತಿಗಳಾದ ಮಾನ್ಯ ಶ್ರೀ ಡಿ. ಎಂ. ಚಂದ್ರಶೇಖರ್ ಅವರು
ರೂ. ೧೦೦-೦೦

೧೨. ಸ್ಟೇಟ್ ಬ್ಯಾಂಕ್ ಆಪ್ ಮೈಸೂರ್ ಡೆಪ್ಯೂಟಿ ಮ್ಯಾನೇಜರ್ ಶ್ರೀ ಜಿ. ಎಂ. ನಟರಾಜನ್ ಅವರು. ರೂ. ೧೦೦-೦೦

೧೪. ಕಾಫಿ ಪ್ಲಾಂಟರ್ ಸಾಹುಕಾರ್, ಚನ್ನಬಸವಯ್ಯನವರು, ಕೋಲಾರ. ರೂ. ೨೫೦-೦೦

೧೫. ಶ್ರೀ ರೇಣುಕಾಚಾರ್ಯ ಲಾ ಕಾಲೇಜು ಪ್ರಿನ್ಸಿಪಾಲರಾದ ಪ್ರೊ॥ ಪಿ. ಶಿವಶಂಕರ್ ಅವರು
ರೂ. ೧೦೧-೦೦

೧೬. ಬೆಂಗಳೂರು ಪ್ರಮುಖ ಅಡ್ವೋಕೇಟ್ ಶ್ರೀ ಬಿ. ಎಸ್. ಪುಟ್ಟಸಿದ್ಧಯ್ಯನವರು, ಬೆಂಗಳೂರು
ರೂ. ೧೦೧-೦೦

೧೬. ಮೈಸೂರು ಹೈಕೋರ್ಟಿನ ಶ್ರೇಷ್ಠ ನ್ಯಾಯಾಧೀಶರಾಗಿದ್ದ ಕೈ॥ ಜಿ. ಪರಮಶಿವಯ್ಯನವರು, ಬೆಂಗಳೂರು-೧ ರೂ. ೧೦೧-೦೦

೧೭. ದಿ॥ ರಾಜಸೇವಾಸಕ್ತ ಡಿ. ಸಿ. ಸುಬ್ಬರಾಯಪ್ಪ ನವರು, ಬೆಂಗಳೂರು. ರೂ. ೧೦೧-೦೦

೧೮. ಬೆಂಗಳೂರಿನ ಮಾಜಿ ಮೇಯರ್ ರವರಾದ ಶ್ರೀ ಕೆ. ಎಂ. ನಂಜಪ್ಪನವರು ರೂ. ೧೦೧-೦೦

೧೯. ದಿ॥ ಧರ್ಮಪ್ರಕಾಶ ಎಸ್. ವಿ. ಶ್ರೀನಿವಾಸ ಶೆಟ್ಟರು, ಬೆಂಗಳೂರು.-೪
ರೂ. ೧೦೧-೦೦

೨೦. ಶ್ರೀಶೈಲ ಸೂರ್ಯ ಸಿಂಹಾಸನಾಧೀಶ್ವರರಾದ ಶ್ರೀ ೧೦೦೮ ಜಗದ್ಗುರು ವಾಗೀಶ್ವರ ಪಂಡಿತಾರಾಧ್ಯ ಶಿವಾಚಾರ್ಯ ಮಹಾ ಸ್ವಾಮಿಗಳು, ರೂ ೧೦೧.೦೦

೨೧. ಆಸ್ಥಾನವಿದ್ವಾನ್, ಆಯುರ್ವೇದಾಚಾರ್ಯ, ವೈದ್ಯಮಾರ್ತಾಂಡ, ಭಿಷಗ್ರತ್ನ, ಸಾಹಿತ್ಯ ವಾರಿಧಿ, ಷ|| ಬ್ರ|| ಶ್ರೀ ಪಂಡಿತ್ ಶಿವಕುಮಾರ ಸ್ವಾಮಿಗಳು. ಅಧ್ಯಕ್ಷರು, ಮುತ್ತಿನಕಂತೆಮಠ, ಬೆಂಗಳೂರು-೨ ರೂ. ೧೦೧-೦೦

೨೨ ದಿ|| ಕೆ. ಎಸ್. ಈಶ್ವರರಾಯರು, ಬೆಂಗಳೂರು. (ಕೆ. ಎಚ್. ಶಾಮರಾವ್ ಅಂಡ್ ಸನ್ಸ್) ರೂ. ೧೦೧.೦೦

೨೩. ನಿವೃತ್ತ ಎಕ್ಸೈಜ್ ಕಮಿಷನರ್ ರವರಾದ ಶ್ರೀ ಎ. ಸಿ. ನಿರ್ವಾಣಗೌಡರು ೧೦೧-೦೦

೨೪. ಸಮಾಜ ಸೇವಾಧುರೀಣ ಶ್ರೀ ವೈ. ಎಚ್. ವೆಂಕಟರಮಣಪ್ಪನವರು, ಬೆಂಗಳೂರು. ರೂ. ೧೦೧-೦೦

೨೫. ಬೆಂಗಳೂರಿನ ಸುಪ್ರಸಿದ್ಧ ವ್ಯಾಪಾರಿಗಳಾದ ಶ್ರೀ ಆರ್. ಗಂಗಪ್ಪನವರು ರೂ. ೧೦೧-೦೦

೨೬. ಜೆ. ರುದ್ರಪ್ಪನವರು, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು-೯. ರೂ. ೫೦-೦೦

೨೭ ಭಕ್ತರತ್ನ ಎಸ್. ನಾರಾಯಣಪ್ಪನವರು ಶ್ರೀ ವೆಂಕಟೇಶ್ವರ ಪವರ್ ರೋಲಿಂಗ್ ಮಿಲ್ಸ್ ಮಾಲೀಕರು, ಬೆಂಗಳೂರು-೨ ರೂ. ೫೧-೦೦

೨೮. ಶ್ರೀಮಾನ್ ಯಜಮಾನ್ ಕೆಂಚಪ್ಪನವರು ಬೆಂಗಳೂರು-೯. ರೂ. ೫೧-೦೦

೨೯. ಶಿವಾನುಭವ ಚರಮೂರ್ತಿಗಳಾದ ಶ್ರೀ. ನಿ·ಪ್ರ.ಸ್ವ. ವಿದ್ವಾನ್ ಶಾಂತವೀರ ಸ್ವಾಮಿಗಳು, ಅಧ್ಯಕ್ಷರು, ಶ್ರೀ ಕೊಳದಮಠ, ಬೆಂಗಳೂರು-೨೭ ರೂ. ೧೦೧-೦೦

೩೦. ಶ್ರೀ ಡಿ. ಬಿ. ಎಸ್. ಗುರುಸಿದ್ದಪ್ಪನವರು ಬೆಂಗಳೂರು-೨ ರೂ. ೫೦-೦೦

೩೧. ಶ್ರೀ ಎಂ. ನಂಜಪ್ಪನವರು, ಬಸವರಾಜ ಮಾರ್ಕೆಟ್, ಬೆಂಗಳೂರು-೨. ರೂ ೫೧-೦೦

೩೨. ಕಂಟ್ರಾಕ್ಟರ್ ಡಿ. ರೇವಣಸಿದ್ದಪ್ಪನವರು, ಬೆಂಗಳೂರು-೧೦ ರೂ. ೫೧-೦೦.

೩೩ ಧರ್ಮಪ್ರಕಾಶ ಎಸ್. ದಾಸಪ್ಪನವರು, ಬೆಂಗಳೂರು-೨ ರೂ. ೫೧-೦೦

೩೪. ಅಡಕೆ ಅಂಗಡಿ ಶ್ರೀ ರುದ್ರಣ್ಣನವರು, ಬೆಂಗಳೂರು-೨ ರೂ. ೫೧-೦೦

೩೫. ಶ್ರೀ ವೀರಭದ್ರಪ್ಪ ಗುಲ್ವೆ ವ್ಯಾಪಾರಿಗಳು, ಬೊಂಬಾಯಿ. ರೂ. ೧೦೧-೦೦

೩೬. ಶ್ರೀ ಎಚ್. ಎಂ. ರುದ್ರಾರಾಧ್ಯರು, ಶಿವಮೊಗ್ಗ. ೨೫-೦೦

೩೭. ವಿದ್ವಾನ್ ಕೆ. ವೆಂಕಟರಾಯಾಚಾರ್ಯರು ಸುರತ್ಕಲ್ಲು. ೧೦-೦೦

೩೮. ಕಾಯಕ ನಿಷ್ಠ ಸುಬ್ಬಣ್ಣನವರು ರಿ|| ಸ್ಕೂಲ್ ಮಾಸ್ಟರ್, ಹಲಗೂರು. ರೂ ೨೫ -೦೦

೩೯ .ಎಸ್. ಶಂಕರಪ್ಪನವರು, ಎಂ.ಎ., ಬಿ.ಟಿ., ಪ್ರಿನ್ಸಿಪಾಲ್, ಗೌ|| ಸಂಸ್ಕೃತ ಕಾಲೇಜ್, ಬೆಂಗಳೂರು. ರೂ. ೨೫-೦೦

ಹುಬ್ಬಳ್ಳಿ ಮೂರುಸಾವಿರ ಮಠಸ್ಥಿತ ಶೂನ್ಯಪೀಠಾಧೀಶರಾದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು

## ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ

## ಶುಭ ಸಂದೇಶ

ನಾಲ್ಕುದಶಕಗಳಿಂದ ಅವ್ಯಾಹತವಾಗಿ ಕನ್ನಡ-ನಾಡು ನುಡಿ--ಸಾಹಿತ್ಯ ಕಲಾಪ್ರಪಂಚಗಳಲ್ಲಿ ಬೌದ್ಧಿಕ ನಾಗಿಯೂ, ಕ್ರಿಯಾತ್ಮಕವಾಗಿಯೂ ಸೇವೆಗೈದ ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರ ಹೆಸರು ನಮ್ಮ ನಾಡಿನ ಎಲ್ಲೆಡೆಯೂ ಸಂಚರಿಸಿದೆ. ಶಾಸ್ತ್ರಿಗಳು ಬಹುಮುಖ ವ್ಯಕ್ತಿತ್ವಪ್ರತಿಭೆಯಿಂದ ಹಲವುವಿಧ ಕಾರ್ಯಕ್ಷೇತ್ರ ಗಳಲ್ಲಿ ಮನೋಜ್ಞವಾದ ಅನುಭವ ಕಾಯಕವನ್ನು ಹಮ್ಮಿಕೊಂಡು ನಿರ್ವಂಚನೆಯಿಂದ ಶ್ರಮಿಸಿದ್ದಾರೆ. ತತ್ಫಲವಾಗಿ ಇಂದಿನ "ಕನ್ನಡ-ಸಾಹಿತ್ಯ ಪರಿಷತ್ತು" ಕೂಡ-ಇನಿತೊಂದು ಗಮನಾರ್ಹವಾದ ಮುನ್ನಡಿಕೆಗೆ ನಿಲುಕಲು ಅರ್ಹವಾಗಿದೆ. ಆ ಪರಿಷತ್ತಿನ ಎಲ್ಲ ಚಟು ವಟಿಕೆಗಳಿಗೂ ಚಾಲನೆಯನ್ನು ಕೊಟ್ಟವರೇ ಇವರು ಎಂದು ಬಹುಕಾಲದವರೆಗೆ ಅದರ ಆಧಾರಸ್ತಂಭ ರಾಗಿ ನಿಂತು ಕಾರ್ಯಗೈದ ಅವರ ಸೇವಾವಧಿ ಯನ್ನೇ ನಿರೀಕ್ಷಿಸಿ ಹೇಳಬಹುದಾಗಿದೆ. ಕನ್ನಡದ ಇತಿಹಾಸ, ಶಿಲಾಶಾಸನ, ತಾಳೋಲೆಗಳ, ಸಶಾಸ್ತ್ರೀ ಯವಾದ ಅಧ್ಯಯನ, ಸಾಹಿತ್ಯದ ಪರಾಮರ್ಶೆ ಇವು ಗಳಲ್ಲಿ ಅವರು ತೋರಿದ ವಿದ್ವತ್ತಿಗೆ ಅವರ ಬೃಹದ್ ಗ್ರಂಥಗಳೂ ಲೇಖನಗಳೂ ಪ್ರಮಾಣಿಕವಾಗಿವೆ. ಇಂತಹ ಶಾಸ್ತ್ರಿಗಳ ಷಷ್ಟ್ಯಬ್ಧಿಯನ್ನು ಆಚರಿಸು ವುದು ಕನ್ನಡಿಗರ ಕರ್ತವ್ಯವೇ ಆಗಿರುತ್ತದೆ. ಈ ಷಷ್ಟ್ಯಬ್ಧಿ ಸಮಾರಂಭದ ಅಂಗವಾದ ಪ್ರಶಸ್ತಿ ಗ್ರಂಥ ಸಮರ್ಪಣದ ಎಲ್ಲ ಬಗೆಯ ಕಾರ್ಯಾಚರಣೆ ಗಳೂ ಯಶಸ್ವಿಯಾಗಿ ಪೂರ್ತಿಗೊಳ್ಳಲಿ ಎಂದು ಹಾರೈಸೋಣವಾಗಿದೆ.

॥ ಸತ್ಯಂ-ಶಿವಂ-ಸುಂದರಂ ॥

ದಿ. ೨೫-೮-೧೯೬೮ ಇತ್ಯಾಶಿಷಃ

## ರಾಜಸೇವಾಸಕ್ತ, ಪದ್ಮಶ್ರೀ ಸಿ. ಕೆ. ವೆಂಕಟರಾಮಯ್ಯನವರ

## ಸಂದೇಶ

ಆಸ್ಥಾನ ವಿದ್ವಾನ್, ಪಂಡಿತರತ್ನಂ, ಪದ್ಮಶ್ರೀ ಶ್ರೀಮಾನ್ ಬಿ. ಶಿವಮೂರ್ತಿಶಾಸ್ತ್ರಿಗಳಿಗೆ ಕರ್ನಾ ಟಕದ ವಿದ್ವಾಂಸರ ಪರವಾಗಿ ಒಂದು ಪ್ರಶಸ್ತಿ ಗ್ರಂಥವನ್ನು ಸಮರ್ಪಿಸುವ ಸಮಾರಂಭವು ೧೯೬೮ ನೇ ಸೆಪ್ಟಂಬರ್ ತಿಂಗಳು ೧೪ನೆಯ ದಿನಾಂಕದಂದು ಬೆಂಗಳೂರಿನ ಪುರಭವನದಲ್ಲಿ ನಡೆಯುವುದೆಂದು ತಿಳಿದು ನನಗೆ ಬಹಳ ಸಂತೋಷವಾಗಿದೆ. ಮಾನ್ಯ ಶಾಸ್ತ್ರಿಗಳು ನಮ್ಮ ನಾಡಿನ ಶ್ರೇಷ್ಠ ವಿದ್ವಾಂ ಸರಲ್ಲೊಬ್ಬರು. ಪ್ರಸಿದ್ಧವಾಗ್ಮಿಗಳಾಗಿ, ಪತ್ರಿಕಾ ಸಂಪಾದಕರಾಗಿ, ಗ್ರಂಥಕರ್ತರಾಗಿ, ಗ್ರಂಥ ಸಂಪಾ ದಕರಾಗಿ ಕನ್ನಡ ನಾಡುನುಡಿಗಳಿಗೆ ಉತ್ತಮ ಸೇವೆ ಸಲ್ಲಿಸಿಯೂ ಸಲ್ಲಿಸುತ್ತಲೂ ಇದ್ದಾರೆ. ಕನ್ನಡ ನಾಡಿನ ಮೇಲೆ ಅವರಿಗಿರುವ ಅಭಿಮಾನ, ಮಿತ್ರ ರಲ್ಲಿ ಅವರಿಗಿರುವ ಪ್ರೀತಿ ಮಮತೆಗಳು, ಅವರು ಗಳಿಸಿರುವ ಜನಪ್ರಿಯತೆ ಮುಂತಾದ ಗುಣಗಳು ಹೆಮ್ಮೆ ಪಡುವಂತಿವೆ. ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿದ ಕರ್ನಾಟಕದ ಪ್ರಮುಖ ಮಹನೀಯ ರಾದವರಲ್ಲಿ ಇವರೂ ಒಬ್ಬರೆಂದು ಹೇಳಲು ನನಗೆ ಅತ್ಯಂತ ಸಂತೋಷವಾಗುತ್ತದೆ. ಇವರು "ಶರಣ ಸಾಹಿತ್ಯ" ಪತ್ರಿಕೆಯ ಸಂಪಾದಕರಾಗಿಯೂ ಕನ್ನಡ ನುಡಿಗೆ ಅಮೂಲ್ಯ ಸೇವೆ ಸಲ್ಲಿಸುತ್ತಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಅವರು ಸಲ್ಲಿಸಿದ ಸೇವೆಯೂ ಗಮನಾರ್ಹವಾಗಿದೆ. ಪ್ರಶಸ್ತಿ ಗ್ರಂಥ ಸಮರ್ಪಣೆಯ ಸಮಾರಂಭವು ಪೂರ್ಣ ಯ ಶಸ್ವಿಯಾಗುವಂತೆಯೂ, ಶ್ರೀಮಾನ್ ಶಾಸ್ತ್ರಿಗಳವರ ನಾಡು-ನುಡಿಗಳ ಸೇವೆಯು ಚಿರಕಾಲ ನಡೆಯು ವಂತೆಯೂ ಪರಮೇಶ್ವರನು ಅವರನ್ನು ಸುದೀರ್ಘ ಕಾಲ ಅನುಗ್ರಹಿಸಲೆಂದು ನಾನು ಹೃತ್ಪೂರ್ವಕ ವಾಗಿ ಹಾರೈಸುತ್ತೇನೆ. ನನ್ನ ಮಿತ್ರರಾದ ಅವರಿಗೆ ಇತೋಪ್ಯಧಿಕವಾಗಿ ಸಮಸ್ತ ಸನ್ಮಂಗಳಗಳೂ ಲಭಿ ಸಲೆಂದು ಕೋರುತ್ತೇನೆ. ಸಿ. ಕೆ. ವೆಂಕಟರಾಮಯ್ಯ

ದಿ. 25-8-1968
ಚನ್ನಪಟ್ಟಣ

॥ ಸಿರಿಗನ್ನಡಂ ಗೆಲ್ಗೆ-ಬಾಳ್ಗೆ ॥

**ಶ್ರೀ ಚಿನ್ಮೂಲಾದ್ರಿ ಶೂನ್ಯಸಿಂಹಾಸನಾಧೀಶ್ವರರಾದ**
**ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಮಲ್ಲಿಕಾರ್ಜುನ ಮುರುಘ ರಾಜೇಂದ್ರ**
**ಮಹಾಸ್ವಾಮಿಗಳವರಿಂದ**

# ಆಶೀರ್ವಚನಗಳು

ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಕನ್ನಡದ ಸಾರಸ್ವತ ಪ್ರಪಂಚದಲ್ಲಿ ಒಂದು ಗಣನೀಯ ವ್ಯಕ್ತಿ, ಮತ್ತು ಶಕ್ತಿ. ಇವರು ಸುಮಾರು ನಲವತ್ತು ವರ್ಷಗಳಿಂದ ಅವಿಶ್ರಾಂತವಾಗಿ, ಬಹುಮುಖವಾಗಿ ಸಲ್ಲಿಸಿದ ಸಾಹಿತ್ಯಸೇವೆಯು ಸಂಸ್ಮರಣೀಯ ಹಾಗೂ ಪ್ರಶಂಸನೀಯ. ಕೀರ್ತನ-ಭಾಷಣ-ಲೇಖನಗಳ ಮೂಲಕ ಇವರು ಕನ್ನಡದ ಜನತೆಯನ್ನು ಎಚ್ಚರಗೊಳಿಸಿದ್ದಾರೆ. ಕನ್ನಡದ ಕೀರ್ತಿಯನ್ನು ಎತ್ತಿ ಹಿಡಿದಿದ್ದಾರೆ. ಇವರು ಬರೆದ ಅನೇಕ ಗ್ರಂಥಗಳು, ಇವರು ಸಂಪಾದಿಸಿ ಪ್ರಕಟಿಸುತ್ತಿರುವ ·ಶರಣ ಸಾಹಿತ್ಯ ಪತ್ರಿಕೆ,-ಇವು, ಇವರ ಅಭ್ಯಾಸ ಮತ್ತು ಅನುಭವಗಳ ವಿವಿಧತೆಗೆ ಹಾಗೂ ವಿಶಾಲತೆಗೆ ಉತ್ತಮ ನಿದರ್ಶನವಾಗಿವೆ. ಕನ್ನಡ ನಾಡುನುಡಿಗಳ ಉನ್ನತಿಗಾಗಿ, ಕರ್ಣಾಟಕ ಏಕೀಕರಣ ಸಾಧನೆಗಾಗಿ, ಸನಾತನ ಧರ್ಮ ಹಾಗೂ ವೀರಶೈವ ಸಂಸ್ಕೃತಿಗಳ ಅಭ್ಯುದಯಕ್ಕಾಗಿ ಶಾಸ್ತ್ರಿಗಳು ಸಲ್ಲಿಸಿದ ಸೇವೆ ಅಪಾರವಾದುದು.

ಸಭಿಕರನ್ನು ಮುಗ್ಧಗೊಳಿಸುವ ವಾಕ್ಪಟುತ್ವ ಇವರಿಗೆ ವರಪ್ರಸಾದವಾಗಿ ಬಂದಿದೆ. ಧಾರ್ಮಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಅಧಿಕಾರವಾಣಿಯಿಂದ, ಆಧಾರಯುತವಾಗಿ, ಅಸ್ಖಲಿತವಾಗಿ ಮಾತನಾಡಬಲ್ಲ ಬಹುಶ್ರುತರೂ ಬಹುದರ್ಶಿಗಳೂ ಆದ ಇವರು ನಿಜಕ್ಕೂ ಅತ್ಯಂತ ಪ್ರತಿಭಾ ಸಂಪನ್ನರು.

ಸುಮಾರು ೪೨ ವರ್ಷಗಳಿಂದ ಶ್ರೀ ಬೃಹನ್ಮಠ ಮಹಾ ಸ್ಥಾನದ ದಿವ್ಯ ಪೀಠವನ್ನು ಅಲಂಕರಿಸಿದ ನಮ್ಮ ಪೂಜ್ಯಗುರುಗಳ ಕೃಪೆಗೂ ಅಭಿಮಾನಕ್ಕೂ ಅರ್ಹರಾಗಿರುವ ಶ್ರೀ ಶಾಸ್ತ್ರಿಗಳು, ಲಿಂಗೈಕ್ಯ ಶ್ರೀ ಜಯದೇವ ಜಗದ್ಗುರುಗಳ ಸನ್ನಿಧಿಯಿಂದ 'ಕೀರ್ತನಾಚಾರ್ಯ' ಎಂಬ ಬಿರುದನ್ನೂ ನಮ್ಮ ಪೀಠಾಧಿಕಾರ ಕಾಲದಲ್ಲಿ 'ವಿದ್ಯಾವಾರಿಧಿ' ಎಂಬ ಬಿರುದನ್ನೂ ಪಡೆದು ಪ್ರಸಿದ್ಧರಾಗಿರುವರು ಎಂಬುದನ್ನು ನಿರೂಪಿಸಲು ನಮಗೆ ಆನಂದವೆನಿಸುತ್ತದೆ

ಇವರ ವ್ಯಾಪಕ ವ್ಯಕ್ತಿತ್ವಕ್ಕೆ ತಕ್ಕ ಪ್ರಶಸ್ತಿ ಸಲ್ಲಬೇಕು ! ಈಗ ಸನ್ಮಾನ ಪೂರ್ವಕವಾಗಿ ಕರ್ಣಾಟಕದ ಮಹಾಜನರು ಇವರಿಗೆ ಸಮರ್ಪಿಸಲಿರುವ 'ಪ್ರಶಸ್ತಿಗ್ರಂಥ'ವು ಸರ್ವಥಾ ನಾಡಿಗೆ ಉಪಯುಕ್ತ ಗ್ರಂಥವಾಗಲೆಂದು ಹಾರೈಸಲಾಗಿದೆ. ಶ್ರೀ ಕರ್ತೃ ಮುರುಘೇಶನು ಬಿ. ಶಿವಮೂರ್ತಿಶಾಸ್ತ್ರಿಗಳಿಗೆ ಇತೋಽಪ್ಯತಿಶಯವಾದ ಶುಭಪರಂಪರೆಗಳನ್ನು ಉಂಟು ಮಾಡಲೆಂದು ಹರಸೋಣವಾಗಿದೆ.

|| ಸತ್ಯಂ-ಶಿವಂ-ಸುಂದರಂ ||

**ಶ್ರೀ ಬೃಹನ್ಮಠ, ಚಿತ್ರದುರ್ಗ**
ದಿ|| ೨-೮-೧೯೬೮

ಇತಿ ಶಿವಮ್

ಸುತ್ತೂರು ವೀರಸಿಂಹಾಸನಾಧೀಶ್ವರರಾದ ಶ್ರೀ ಜಗದ್ಗುರು ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು ಪ್ರಶಸ್ತಿ ಗ್ರಂಥಕ್ಕೆ ಅನುಗ್ರಹಿಸಿರುವ

# ಆಶೀರ್ವಚನಗಳು

ಕೇವಲ ವ್ಯಕ್ತಿಯಾಗಿ ಅಲ್ಲದೆ ನಾಡಿನ, ಒಂದು ಮಹಾ ಶಕ್ತಿಯಾಗಿ ಕಳೆದ ನಾಲ್ಕುದಶಕಗಳಿಂದಲೂ ಕನ್ನಡ ನಾಡು-ನುಡಿ-ಸಂಸ್ಕೃತಿಗಳ ಪವಿತ್ರ ಕೈಂಕರ್ಯ ವನ್ನು ಕೈಗೊಂಡು, ಪ್ರಶಂಸನೀಯವಾದ ಅದ್ಭುತ ಸೇವೆ ಯನ್ನು ಸಲ್ಲಿಸಿ, ಅನೇಕ ಪ್ರಶಸ್ತಿಗಳನ್ನು ಪಡೆದಿರುವ ಪಂಡಿತೋತ್ತಮರೂ, ಶ್ರೀ ಮಠದ ಅಭಿಮಾನಿಗಳೂ ಆದ, ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಷಷ್ಟಿಪೂರ್ತಿ ಶಾಂತಿಸಮಾರಂಭವು, ಶಾಸ್ತ್ರಿಗಳ ಅವಿಶ್ರಾಂತ ಶ್ರಮ ವನ್ನು ಮನಗಂಡು ಸಂತಸಗೊಂಡ ಕನ್ನಡಿಗರ ಸಂತು ಷ್ಟಿಯ ಸೂಕ್ತ ಸಂಕೇತವೆನಿಸಿದೆ. ಈ ಶುಭ ಸಂದರ್ಭದಲ್ಲಿ ಅವರಿಗೆ ಸಂಭಾವನಾಗ್ರಂಥವೊಂದನ್ನು ಸಮರ್ಪಿಸುತ್ತಿರುವುದು ಶ್ಲಾಘನೀಯವಾದುದು. ಶಾಸ್ತ್ರಿ ಗಳ ಸೇವಾಕ್ಷೇತ್ರವು ಸರ್ವತೋಮುಖಿಯಾದುದು, ಚಿರಸ್ಮರಣೀಯವಾದುದು. ಅವರ ಪ್ರತಿಭಾಶಕ್ತಿಯ ಪ್ರತಿಯೊಂದು ಕಾರ್ಯಗಳೂ ಅಪೂರ್ವಸಾಧನೆಯ ಕೀರ್ತಿಪತಾಕೆಗಳೆಂದರೆ ಅತ್ಯುಕ್ತಿಯಲ್ಲ. ಅವೆಲ್ಲವನ್ನೂ ಹೆಸರಿಸುವ ಅಗತ್ಯವಿಲ್ಲ. ಏಕಾಂಗಯೋಧರಾಗಿ ಹಲವು ವರ್ಷಗಳಿಂದಲೂ ನಡೆಸಿಕೊಂಡು ಬರುತ್ತಿರುವ 'ಶರಣ ಸಾಹಿತ್ಯ' ಮಾಸಿಕವೊಂದೇ ಸಾಕು ; ಅವರ ಸಾಹಿತ್ಯ ಸೇವೆ, ನುಡಿಸೇವೆ, ಮತ್ತು ನಾಡಸೇವೆಗಳನ್ನು ಚಿರಕಾರ ಸಾರಲು.

* * * * *

'ಕರ್ನಾಟಕವೆಂದರೆ ಶಾಸ್ತ್ರಿಗಳು ; ಶಾಸ್ತ್ರಿಗಳು ಎಂದರೆ ಕರ್ನಾಟಕ' ಕನ್ನಡ ನಾಡಿನಲ್ಲಿ ಅವರು ನೋಡದ ಸ್ಥಳವಿಲ್ಲ, ಮಾತನಾಡಿಸದ ಕಲ್ಲಿಲ್ಲ, ಕಾಣದ ಗುರುಪೀಠ ವಿಲ್ಲ, ಕೈಮುಗಿಯದ ಗುಡಿಯಿಲ್ಲ, ಓದದ ಗ್ರಂಥವಿಲ್ಲ, ಪರಿಚಯವಿಲ್ಲದ ಜನರಿಲ್ಲ. 'ಅವರು ಒಂದು ಓಡಾ ಡುವ ವಿಶ್ವಕೋಶವಿದ್ದಂತೆ' ಕೀರ್ತನಾಚಾರ್ಯರಾಗಿ, ಕನ್ನಡ ಸಾಹಿತ್ಯ-ಸಂಸ್ಕೃತಿಗಳ ಉಪನ್ಯಾಸಕರಾಗಿ ,ಧರ್ಮ ಪ್ರಸಾರಕರಾಗಿ, ಪತ್ರಿಕಾ ಸಂಪಾದಕರಾಗಿ, ಸಂಶೋಧಕ ರಾಗಿ, ಕವಿಗಳಾಗಿ, 'ಶರಣ ಸಾಹಿತ್ಯ' ಗ್ರಂಥಮಾಲೆಯ ಕೃತಿಕುಸುಮಗಳಿಂದ ತತ್ತ್ವಪರಿಮಳವನ್ನು ನಾಡಿ ನಲ್ಲೆಲ್ಲಾ ಬಿತ್ತರಿಸಿ ಅಗ್ರತಮ ಪಂಡಿತರೆನಿಸಿದ ಅವರು ಕರ್ನಾಟಕದ ಸಾರಸ್ವತಗದ್ದುಗೆಯಾದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆಗಿದ್ದು ಬಹುದಕ್ಷತೆಯಿಂದ ಆ ಬೃಹತ್‌ಸಂಸ್ಥೆಯ ಸರ್ವಾಂಗೀಣ ಪ್ರಗತಿಗೆ ಶ್ರಮಿಸಿ ದುದು ಸರ್ವವಿದಿತನಾಗಿದೆ. ಕರ್ನಾಟಕ ಏಕೀಕರಣ ಹೋರಾಟದ ಪ್ರಮುಖ ಸೂತ್ರಧಾರಿಗಳಾಗಿದ್ದು ಹೋರಾಡಿದುದಲ್ಲದೆ, ನಾಡಗಡಿಯ ರಕ್ಷಣೆಗಾಗಿ ಕಂಕಣ ಕಟ್ಟಿ ೪೦ ವರ್ಷಗಳಿಂದ ನುಡಿಗುಡಿಯ ಪ್ರಸ್ತಾಪ ಬಂದಾಗಲೆಲ್ಲ ಮುಂದಾಗಿನಿಲ್ಲುವ ಧೀಮಂತ ಶಕ್ತಿಯ ಕನ್ನಡಿಗರೆನಿಸಿದ್ದಾರೆ. ಕನ್ನಡ ನಾಡಿಗೆ, ಕನ್ನಡ ನುಡಿಗೆ ಅವರಿಂದ ಸಂದ ಅಮೋಘಸೇವೆಗೆ ರಾಜ್ಯ ಸನ್ಮಾನಗಳಲ್ಲದೆ "ಪದ್ಮಶ್ರೀ" ಎಂಬ ರಾಷ್ಟ್ರಸನ್ಮಾನವು ಲಭಿಸಿದುದು ಪರಮ ಸಂತೋಷದಾಯಕವಾದುದು. ಶ್ರೀಶಾಸ್ತ್ರಿಗಳ ಷಷ್ಟ್ಯಬ್ದಿ ಪೂರ್ತಿ ಶಾಂತಿಸಮಾರಂಭದ ಅಂಗವಾಗಿ ಹೊರತರುವ ಸಂಭಾವನಾಗ್ರಂಥಕ್ಕೆ ಶುಭ ಸಂದೇಶವನ್ನು ನೀಡಲು ಹರ್ಷಿಸುತ್ತಾ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಶತಾಯುಷಿಗಳಾಗಿ ಬಾಳಿ ಬದುಕಿ ನಾಡು ನುಡಿ, ಸಮಾಜ ಸಂಸ್ಕೃತಿಗಳ ಸೇವೆಯನ್ನೆಸಗುವಂತಾಗಲೆಂದು ಆಶಿಸಿ, ಅವರಿಗೆ ಆದಿಗುರು ಶ್ರೀ ಶಿವರಾತ್ರೀಶ್ವರರು ಇತೋಪ್ಯತಿಶಯವಾದ ಸಕಲ ಸನ್ಮಂಗಳವನ್ನೂ ಉಂಟುಮಾಡಲೆಂದು ಹೃದಯಾರ ಹಾರೈಸುತ್ತೇವೆ.

ಇತ್ಯಾಶಿಶಃ

॥ ಶಿವಂ ಭೂಯಾತ್ ॥

ದಿ. ೪-೮-೧೯೬೮,
ಮುಕ್ಕಾಂ-ಮೈಸೂರು.

# Sri Sri Sringeri Jagadguru Mahasamsthhnam,

## Sringeri Math Sharada Peetham

**P. O. SRINGERI-KADUR (Mysore State)**

K. Krishna Bhatta
**Private Secretary**

OFFICE OF THE PRIVATE SECRETARY TO
His Holiness THE JAGADGURU
SRI SHANKARACHARYA OF
Sri SRINGERI MUTT

Rft: No 2059/68

Camp : ಶೃಂಗೇರಿ
Date : 9-8-68...........

ಶ್ರೀಮಾನ್ ಬಿ. ಡಿ. ಜತ್ತಿ, ಚೇರ್‌ಮನ್, ಎಡಿಟೋರಿಯಲ್ ಕಮಿಟಿ, ಇವರ ಸಮಕ್ಷಮಕ್ಕೆ.

ನಮಸ್ಕಾರಗಳು.

"ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಷಷ್ಟ್ಯಬ್ಧಿ ಸಮಾರಂಭದ ಸಂದರ್ಭದಲ್ಲಿ ಹೊರಡಿಸಲಿರುವ ಸಂಚಿಕೆಯ ಸಂದೇಶಕ್ಕಾಗಿ ಬರೆದಿರುವ ತಮ್ಮ ಪತ್ರವನ್ನು ಶ್ರೀ ಶ್ರೀ ಜಗದ್ಗುರು ಮಹಾಸ್ವಾಮಿಗಳವರ ಅವಗಾಹನೆಗೆ ತರಲಾಯಿತು.

ಶ್ರೀ ಶ್ರೀ ಗಳವರು "ಶ್ರೀಮಾನ್ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಕನ್ನಡ ಸಾಹಿತ್ಯ ಸೇವೆಯನ್ನು ಅನೋಘವಾಗಿ ಮಾಡಿದ್ದಾರೆಂದೂ, ಶಿವಪೂಜಾ ಧುರೀಣರಾಗಿದ್ದಾರೆಂದೂ, ಇವರ ಆಯುರಾರೋಗ್ಯಕ್ಕೆ ಭಗವಂತನನ್ನು ಕುರಿತು ಪ್ರಾರ್ಥಿಸುವುದಾಗಿಯೂ ಅಪ್ಪಣೆ ಮಾಡಿರುವ ವಿಚಾರ" ತಿಳಿಯ ಪಡಿಸುತ್ತೇನೆ.

ಇಂತೀ ನಮಸ್ಕಾರಗಳು.

K. KRISHNA BHATTA
Private Secretary

॥ ಶ್ರೀಃ ॥

# ಶ್ರೀ ಕುಂಭಕೋಣಂ ಪೆರಿಯಮಠಂ ಶ್ರೀ ಜಗದ್ಗುರು ಶ್ರೀ ಶಾಂತದೇವ ಸಾರಂಗ ದೇಶಿಕೇಂದ್ರ ಮಹಾಸ್ವಾಮಿಗಳವರ ಸನ್ನಿಧಾನದಿಂದ

ತಾ॥೧೪-೮-೧೯೬೮

ಶ್ರೀಮಾನ್ ಬಿ. ಡಿ. ಜತ್ತಿಯವರಿಗೆ, ಆಶೀರ್ವಾದಗಳು. ತಾವು ಕಳಿಸಿದ ಪತ್ರಿಕೆ ತಲ್ಪಿ ವಿಷಯ ಅರಿಕೆಯಾಗಿದೆ.

ಶ್ರೀಮಾನ್ ಪದ್ಮಶ್ರೀ, ಪಂಡಿತರತ್ನ, ಕೀರ್ತನ ಕೇಸರಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ನಲವತ್ತು ವರುಷದಿಂದಲೂ ಧಾರ್ಮಿಕ, ರಾಜಕೀಯ, ಸಾಹಿತ್ಯ ಸಂಶೋಧನೆ ಇತ್ಯಾದಿ ವಿಷಯಗಳಲ್ಲಿ ಮಹತ್ತಾದ ಕಾರ್ಯ ಮಾಡಿರುತ್ತಾರೆ.

ಕರ್ನಾಟಕ ಏಕೀಕರಣದಲ್ಲಿ ಮಹತ್ತಾದ ಕಾರ್ಯ ಮಾಡಿರುವರಲ್ಲದೆ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದು ಕನ್ನಡ ಭಾಷಾ ಏಳಿಗೆಗೆ ಮಹತ್ತಾದ ಸೇವೆ ಮಾಡಿರುತ್ತಾರೆ.

ಶರಣ ಸಾಹಿತ್ಯಎಂಬ ಪತ್ರಿಕೆಗೆ ಸಂಪಾದಕರಾಗಿ ಮೂವತ್ತು ವರ್ಷ ತಾವು ನಡೆಸಿಕೊಂಡು ಬಂದು ಅದರ ಮಾಲೀಕರಾಗಿ ಕರ್ಣಾಟಕ ಸಾಂಸ್ಕೃತಿಕ ವಿಷಯದಲ್ಲಿ ನಿಜತತ್ತ್ವಗಳನ್ನು ತಿಳಿಸಿ ಜನಗಳಿಗೆ ಮನದಟ್ಟವಾಗುವಂತೆ ಮಾಡಿರುತ್ತಾರೆ. ಅಲ್ಲದೆ ಶ್ರೀ ಶಾಸ್ತ್ರಿಗಳು ತಾವು ಒಬ್ಬರೇ ಧರ್ಮ ಮತ್ತು ರಾಜಕೀಯ ನಿಷ್ಠೆ, ಗ್ರಂಥ ಪರಿಶೋಧನೆ ಮಾಡಿರುವುದು ಅವರ ದೇಶಾಭಿಮಾನ ಧರ್ಮಾಭಿಮಾನಗಳ ನಿದರ್ಶನವಾಗಿದೆ. ಶ್ರೀ ಶಾಸ್ತ್ರಿಗಳವರಿಗೆ ಆಯುರಾರೋಗ್ಯ ಸಕಲ ಸಂಪತ್ತುಗಳನ್ನುಂಟುಮಾಡಿ ಇನ್ನೂ ಹೆಚ್ಚಾದ ಸೇವೆ ಜನರಿಗೆ ಅವರಿಂದ ನಡೆಯುವಂತೆ ಮಾಡಲೆಂದು ಪರಮೇಶ್ವರನನ್ನು ಸ್ಮರಿಸಿ ಆಶೀರ್ವಾದ ಮಾಡಿರುತ್ತೇವೆ.

ಇತ್ಯಾಶಿಶಃ

### ಶ್ರೀಮನ್ನಿರಂಜನ ಜಗದ್ಗುರು

# ಶ್ರೀ ಶಿವಲಿಂಗೇಶ್ವರ ಮಹಾಸ್ವಾಮಿಗಳವರು

### ಸಿದ್ಧ ಸಂಸ್ಥಾನ ಮಠ, ನಿಡಸೋಸಿ ಇವರ ಸನ್ನಿಧಿಯಿಂದ

## ಶುಭ ಸಂದೇಶ

ದಿ ೯-೮-೬೮

ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಕರ್ನಾಟಕದ ಕೀರ್ತಿವಂತ ಪುರುಷರಲ್ಲಿ ಒಬ್ಬರು. ಇವರು ಪಂಡಿತರತ್ನರೂ ವರಕವಿಗಳೂ ಉತ್ತಮ ವಾಗ್ಮಿಗಳೂ ಆಗಿರುವರಲ್ಲದೆ ಪತ್ರಿಕಾಪ್ರಪಂಚದಲ್ಲಿ ಪಳಗಿದವರೂ ವಿಮರ್ಶನ ವಿಭೂಷಣರೂ ಸಮಾಜೋದ್ಧಾರಕರೂ ಎನಿಸಿಕೊಂಡಿದ್ದಾರೆ. ಪ್ರತ್ಯುತ್ಪನ್ನಮತಿಗಳಾದ ಶ್ರೀ ಶಾಸ್ತ್ರಿಗಳು, ತಮ್ಮ ರಸವತ್ತಾದ ಶೈಲಿಯಿಂದ ಕೀರ್ತನ, ವ್ಯಾಖ್ಯಾನ, ಲೇಖನಗಳ ಮೂಲಕ ಭಕ್ತಿ, ಜ್ಞಾನ, ನೀತಿ, ಸದ್ಗುಣಾದಿಗಳ ಹೊನಲನ್ನು ಹಲವು ವರ್ಷಗಳಿಂದ ಕನ್ನಡ ನಾಡಿನಲ್ಲಿ ತುಂಬಿ ಹರಿಸಿ ಸಮಾಜಕ್ಕೆ ಚೇತನವನ್ನಿತ್ತಿದ್ದಾರೆ. ಕರ್ನಾಟಕದ ಸೀಮಾನಿದರ್ಶಕರಲ್ಲಿ ಮುಂದಾಳಾಗಿದ್ದಾರೆ. ಕನ್ನಡವೆಮ್ಮ ಕುಲ, ಕನ್ನಡಂ ಗೆಲ್ಗೆ, ಕನ್ನಡನಾಡಿಗೆ ಜಯವಾಗಲಿ ಎಂಬ ಉಚ್ಚಧ್ಯೇಯವನ್ನಿಟ್ಟುಕೊಂಡು ಅದರಂತೆ ಆಚರಿಸಿ ತೋರಿದ ಇವರನ್ನು ನಾಡಿನ ಜನತೆಯು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರನ್ನಾಗಿ ಆರಿಸಿತು. ಆಸ್ಥಾನದಲ್ಲಿದ್ದಾಗ ಇವರಿಂದ ಅನೇಕ ಮಹತ್ವದ ಕಾರ್ಯಗಳಾಗಿವೆ ಯೆಂಬುದನ್ನು ನಾಡಿಗೆ ನಾಡೇ ಬಲ್ಲುದು.

'ಶರಣ ಸಾಹಿತ್ಯ' ಪತ್ರಿಕಾಮೂಲಕವಾಗಿ ಸ್ವಧರ್ಮದಲ್ಲಿ ಸಾಕಷ್ಟು ಜಾಗೃತಿಯನ್ನುಂಟುಮಾಡಿ ವೀರಶೈವ ಇತಿಹಾಸವೆಂಬ ಮಂದಿರಕ್ಕೆ ಹೊನ್ನ ಕಲಶವನ್ನಿಟ್ಟಿದ್ದಾರೆ. ನಾಡಿನ ನಾನಾ ಮುಖವಾದ ಸೇವೆಯನ್ನು ಇಂಥ ಇಳಿ ವಯಸ್ಸಿನಲ್ಲಿಯೂ ಎಡೆಬಿಡದೆ ಮಾಡುತ್ತಿರುವ ಶ್ರೀ ಶಾಸ್ತ್ರಿಗಳವರ ಯೋಗ್ಯತೆಯು ಬಹುದೊಡ್ಡದು. ಇಂಥವರನ್ನು ಮೇಲಿಂದ ಮೇಲೆ ಸತ್ಕರಿಸುವುದು, ಪ್ರಶಸ್ತಿ ಗೌರವ ನೀಡುವದು ಸಮಾಜಕ್ಕೆ ಭೂಷಣ ಪ್ರಾಯನಾದದ್ದೇ! ಈಗ ನಾಡಿನ ವಿದ್ವಾಂಸರು ಒಂದು ಪ್ರಶಸ್ತಿ ಗ್ರಂಥವನ್ನು ಬರೆದು ಬೆಂಗಳೂರಿನಲ್ಲಿ ಶ್ರೀ ಶಾಸ್ತ್ರಿಗಳವರಿಗೆ ಸಮರ್ಪಿಸುತ್ತಿದ್ದಾರೆ ಎಂಬುದನ್ನು ಕೇಳಿ ನಮಗೆ ಅತೀವ ಆನಂದವೆನಿಸಿದೆ. ಇವರು ಇಂಥ ಪ್ರಶಸ್ತಿಗೆ ಸರ್ವಾತ್ಮನಾ ಯೋಗ್ಯರಾಗಿದ್ದಾರೆ. ಕರ್ತವ್ಯ ನಿಷ್ಠರಾದ ಇವರ ಕೀರ್ತಿಯು ಇತೋಪ್ಯತಿಶಯವಾಗಿ ಬೆಳೆಯಲಿ. ಇವರಿಂದ ಇನ್ನೂ ಅನೇಕ ವಿಧವಾದ ಸೇವೆಯು ಸಮಾಜಕ್ಕೆ ಸಲ್ಲಲಿ ಎಂದು ಈ ಮೂಲಕ ಹಾರೈಸೋಣವಾಗಿದೆ. ಆದಿಗುರು ಶ್ರೀ ದುರದುಂಡೀಶ್ವರನು ಇವರಿಗೆ ಸದಾ ಮಂಗಲವನ್ನುಂಟುಮಾಡಲಿ.

ಇತ್ಯಾಶಿಶಃ

॥ ಶಿವಂ ಭೂಯಾತ್ ॥

# ಮಾನ್ಯರ ಶುಭ ಸಂದೇಶಗಳು

**ಶ್ರೀ ವೀರೇಂದ್ರ ಪಾಟೀಲ್** ಬಿ.ಎ.,ಎಲ್.ಎಲ್.ಬಿ.,
ಮುಖ್ಯಮಂತ್ರಿಗಳು
ವಿಧಾನಸೌಧ, ದಿ. ೧೯-೭-೧೯೬೮
ಬೆಂಗಳೂರು-೧

ಪಂಡಿತರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ನಾಡು ನುಡಿಗಳ ಸೇವೆ ಅತ್ಯಮೋಘವಾದುದು. ಸರಿಸುಮಾರಿನಲ್ಲಿ ಅರ್ಧಶತಮಾನ ಕಾಲ ಅವರು ನಾಡುನುಡಿಗಳ ಸೇವೆಗೈದಿದ್ದಾರೆ. ಉದ್ದಾಮ ಪಂಡಿತರಾಗಿ, ಸುಭಾಷಾಪ್ರವೀಣರಾಗಿ, ಅಸಮಾನ ಕೀರ್ತನಕೇಸರಿಗಳಾಗಿ, ಕನ್ನಡ ನಾಡಿನ ಮೂಲೆಮೂಲೆಗಳಲ್ಲಿಯೂ ತಮ್ಮ ವಿದ್ವತ್ಪ್ರಭೆಯನ್ನು ಚೆಲ್ಲಿದ್ದಾರೆ. ಅವರ ಚಟುವಟಿಕೆ, ಕಾರ್ಯಶ್ರದ್ಧೆ, ಇವನ್ನು ಸಮೀಪದಲ್ಲಿ ನೋಡಿದವರಿಗೆ ಅವರ ವಯೋಪ್ರಮಾಣವೇ ಗೊತ್ತಾಗುವುದಿಲ್ಲ. ಅವರಿಗೆ ೬೦ ವರ್ಷಗಳು ತುಂಬಿವೆಯೆಂಬುದು ಸಂತೋಷದ ಸಂಗತಿ. ಈಗ ಅವರು ೬೫ನ್ನು ದಾಟಿದ್ದಾರೆ. ಆದರೂ ಯುವಕರಂತೆ ಶ್ರಮಿಸುತ್ತಿದ್ದಾರೆ. ಬಹುಜನಪ್ರಿಯರಾಗಿರುವ ಅವರನ್ನು ಈ ಸನ್ನಿವೇಶದಲ್ಲಿ ಅಭಿನಂದಿಸಿ ಅವರಿಗೆ ಯಶಸ್ಸನ್ನು ಕೋರುವುದು ನನಗೆ ಬಹುಸಂತೋಷವನ್ನುಂಟುಮಾಡಿದೆ. ಶರಣ ಸಾಹಿತ್ಯಪತ್ರಿಕೆಯ ಸಂಪಾದಕರಾಗಿ, ಆ ಪತ್ರಿಕೆಯ ಮೂಲಕ ೩೦ ವರ್ಷಗಳಿಂದ ಕನ್ನಡ ನಾಡಿನ ಸಾಹಿತ್ಯ ಮತ್ತು ಚರಿತ್ರೆಯನ್ನು ಪಂಡಿತ-ಪಾಮರ ರಂಜಕವಾಗಿ ಬೆಳಗಿಸಿದ್ದಾರೆ. ಅವರ ಷಷ್ಟಿಪೂರ್ತಿ ಶಾಂತಿ ಸಮಾರಂಭ ಸಮಿತಿಯವರು ಈ ಶುಭ ಮುಹೂರ್ತದಲ್ಲಿ ಅವರಿಗೆ 'ಸಂಭಾವನಾ ಗ್ರಂಥ'ವನ್ನು ಸಮರ್ಪಿಸುವುದು ಉಚಿತವಾಗಿದೆ. ಕರ್ನಾಟಕದ ಹೆಸರಾಂತ ವಿದ್ವಾಂಸರ ಲೇಖನಗಳಿಂದ ಪ್ರಜ್ವಲಿಸುವ ಈ ಗ್ರಂಥವನ್ನು ಅವಲೋಕಿಸಲು ಕಾತುರನಾಗಿದ್ದೇನೆ. ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರಿಗೆ ಭಗವಂತನ ಕರುಣೆ ಸದಾ ಇರಲೆಂಬುದೇ ನನ್ನ ಹಾರ್ದಿಕ ಹಾರೈಕೆ.

(ಸಹಿ) ವೀರೇಂದ್ರ ಪಾಟೀಲ್

**ಡಾ॥ ಕೆ. ಬಿ. ವೈ. ತೋಟಪ್ಪ** ಎಂ.ಎ.ಪಿ.ಎಚ್.ಡಿ.,
ಪ್ರಿನ್ಸಿಪಾಲ್, ಮಹಾರಾಜ ಕಾಲೇಜು, ಮೈಸೂರು.
ದಿ. ೨೧-೭-೧೯೬೮

ಪಂಡಿತರತ್ನಂ, ಪದ್ಮಶ್ರೀ ಬಿ ಶಿವಮೂರ್ತಿ ಶಾಸ್ತ್ರಿಗಳವರ ಷಷ್ಟ್ಯಬ್ದಿಶಾಂತಿ ಸಮಾರಂಭದ ಶುಭಸಂದರ್ಭದಲ್ಲಿ ಶ್ರೀಯುತರಿಗೆ ಒಂದು ಸಂಭಾವನಾ ಗ್ರಂಥವನ್ನು ಸಮರ್ಪಿಸುವ ವಿಚಾರ ತಿಳಿದು ನನಗೆ ತುಂಬಾ ಸಂತೋಷವಾಯಿತು. ಕನ್ನಡ ನಾಡಿನಲ್ಲಿ ಶ್ರೀಮಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳ ಹೆಸರನ್ನು ಕೇಳದ ಕನ್ನಡಿಗರಾರೂ ಇಲ್ಲವೆಂದು ಹೇಳಿದರೆ ಅತಿಶಯೋಕ್ತಿ ಎನ್ನಿಸದು. ಅವರು, ಕವಿ, ಗಮಕಿ, ವಾದಿ, ವಾಗ್ಮಿಗಳೆಂಬ ಚತುರ್ವಿಧ ಪಾಂಡಿತ್ಯವನ್ನು ಪಡೆದಿರುವ ಪ್ರತಿಭಾಸಂಪನ್ನರು. ಅಖಂಡ ಕರ್ನಾಟಕ ನಿರ್ಮಾಣದ ಕಾರ್ಯದಲ್ಲಿ ಶ್ರೀಯುತರು ವಹಿಸಿದ ಪಾತ್ರ ಯಾರೂ ಮರೆಯುವಂತಿಲ್ಲ. 'ಶರಣ ಸಾಹಿತ್ಯ'ದ ಸಂಪಾದಕರಾಗಿಯೂ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿಯೂ, ಅವರು ನಮ್ಮ ಸಾಹಿತ್ಯ ಕ್ಷೇತ್ರಕ್ಕೆ ಅಪಾರವಾದ ಸೇವೆ ಸಲ್ಲಿಸಿರುತ್ತಾರೆ. ನಾಡುನುಡಿಗಳ ಏಳಿಗೆಗಾಗಿ ಹೀಗೆ ನಿರಂತರವಾಗಿ ೪೫ ವರ್ಷಗಳಿಂದ ಶ್ರಮಿಸುತ್ತಿರುವ ಕನ್ನಡ ನಾಡಿನ ಮಹನೀಯರೊಬ್ಬರಿಗೆ ಪ್ರಶಸ್ತಿ ಗ್ರಂಥವೊಂದನ್ನು ಅರ್ಪಿಸಿ ಸನ್ಮಾನಿಸುತ್ತಿರುವುದು ಸೂಕ್ತವಾದುದೇ ಸರಿ. ಪದ್ಮಶ್ರೀ, ಪಂಡಿತರತ್ನಂ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಉತ್ಸಾಹಕ್ಕೆ ಇದರಿಂದ ಮತ್ತಷ್ಟು ಉತ್ತೇಜನ ದೊರೆತು, ಅವರಿಂದ ನಮ್ಮ ನಾಡಿಗೆ ಅಖಂಡವಾದ ಸೇವೆ ಸಲ್ಲುವಂತೆ ಈಶ್ವರನು ಅವರನ್ನು ಅನುಗ್ರಹಿಸಲೆಂದು ನಾನು ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

(ಸಹಿ) ಕೆ. ಬಿ. ವೈ. ತೋಟಪ್ಪ.

**ಕೆ. ಮಹಾಬಲ ಭಂಡಾರಿ. ಬಿ. ಎಲ್. ಬಿ.ಎಲ್.**
**ಕೇರಳ ವಿಧಾನ ಮಂಡಲದ ಸದಸ್ಯರು.**

ದಿ ೨೧-೬-೧೯೬೮
ಕಾಸರಗೋಡು.

ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳಿಗೆ ಸಂಭಾವನಾ ಗ್ರಂಥವನ್ನು ಸಮರ್ಪಿಸಲು ಮುಂದೆ ಬಂದಿರುವ ಶ್ರೀಯುತರ ಷಷ್ಟ್ಯಬ್ಧಿಶಾಂತಿ ಸಮಾರಂಭ ಸಮಿತಿಯನ್ನು ನಾನು ಹಾರ್ದಿಕವಾಗಿ ಅಭಿನಂದಿಸುತ್ತೇನೆ. ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ತಮ್ಮ ಸುದೀರ್ಘ ಕಾಲದ ನಾಡುನುಡಿಗಳ ಸೇವೆಯಿಂದಾಗಿ ಕನ್ನಡ ನಾಡಿನ ಜನಕೋಟಿಗೆ ಎಷ್ಟು ಪ್ರಿಯರೋ ಅಷ್ಟೇ ಹೊರನಾಡಿನ ಕನ್ನಡಿಗರಿಗೂ ಪ್ರಿಯರಾಗಿದ್ದಾರೆ. ರಾಜಕೀಯದ ಕುಟಿಲ ನಾಟಕದ ಫಲವಾಗಿ ಕಾಸರಗೋಡಿನಂತಹ ಅಚ್ಚಕನ್ನಡ ಪ್ರದೇಶಗಳು ರಾಜ್ಯಪುನರ್ರಚನೆಯ ಕಾಲದಲ್ಲಿ ಕೈಬಿಟ್ಟು ಹೋದುವು. ಈ ಕ್ರೂರ ಅನ್ಯಾಯದ ಎದುರು ಹನ್ನೆರಡು ವರ್ಷಗಳಿಂದ ಅವಿಶ್ರಾಂತವಾಗಿ ಕಾಸರಗೋಡಿನ ಕನ್ನಡಿಗರು ಹೋರಾಡುತ್ತಾ ಬಂದರು. ಕಾಸರಗೋಡು ಕನ್ನಡಿಗರ ಈ ಆಪತ್ಕಾಲದಲ್ಲಿ ನಮ್ಮೊಂದಿಗೆ ದೃಢವಾಗಿ ನಿಂತು ನಮ್ಮ ಕಷ್ಟ-ಕಾರ್ಪಣ್ಯಗಳಲ್ಲಿ ಸಹಭಾಗಿಗಳಾಗಿರುವ ಕರ್ನಾಟಕದ ಹಿರಿಯರಲ್ಲಿ ಶ್ರೀ ಶಾಸ್ತ್ರಿಗಳು ಒಬ್ಬರಾಗಿರುತ್ತಾರೆ. ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ, ಗಡಿನಾಡು ಕನ್ನಡಿಗರ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ, ಮತ್ತು ಇತರ ಸಂದರ್ಭಗಳಲ್ಲಿ ಈ ಪ್ರದೇಶವನ್ನು ಸುತ್ತಾಡಿ ಜನಜಾಗೃತಿಯನ್ನೂ, ಕನ್ನಡ ನಾಡು ಮತ್ತು ನುಡಿಯಮೇಲೆ ಜನರಲ್ಲಿ ಅಭಿಮಾನವನ್ನೂ ತುಂಬಿಸಿದ್ದಾರೆ. ಕನ್ನಡ ನಾಡಿನ ಅಮೂಲ್ಯ ಹಿರಿಯ ವ್ಯಕ್ತಿಗಳಾದ ಶ್ರೀ ಶಾಸ್ತ್ರಿಯವರಿಗೆ ದೇವರು ಮಿಗಿಲಾದ ಆಯುರಾರೋಗ್ಯವನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇನೆ. ಸಂಭಾವನಾ ಗ್ರಂಥವು ಅತ್ಯಂತ ಆಕರ್ಷಕವಾಗಿ ಪ್ರಕಟಗೊಂಡು ಕನ್ನಡ ಸಾಹಿತ್ಯ ಭಂಡಾರದಲ್ಲಿ ಅದು ದಿವ್ಯತಮ ಹೊತ್ತಗೆಯಾಗಲಿ ಎಂದು ಹಾರೈಸುತ್ತೇನೆ.

(ಸಹಿ) ಕೆ. ಮಹಾಬಲ ಭಂಡಾರಿ

**ಎಚ್. ಎಂ. ರುದ್ರಾರಾಧ್ಯ**
**(ಆರಾಧ್ಯ ಅಂಡ್ ಕಂಪನಿ)**

ದಿ ೨೨-೬-೧೯೬೮
ಶಿವಮೊಗ್ಗ

ಪದ್ಮಶ್ರೀ. ಬಿ. ಶಿವಮೂರ್ತಿಶಾಸ್ತ್ರಿಗಳು ಬಹುಹಿಂದಿನಿಂದಲೂ 'ಶರಣ ಸಾಹಿತ್ಯ' ಮಾಪತ್ರಿಕೆಯನ್ನು ಹೊರಡಿಸಿ ತನ್ಮೂಲಕ ಕರ್ನಾಟಕದ, ಶಿವಶರಣರ, ಸಾಹಿತಿಗಳ, ಐತಿಹಾಸಿಕರ, ಕಾರಣಪುರುಷರ, ಗತವೈಭವದ ಶಿಲ್ಪಕಲೆಗಳ, ಅಂತಹ ಕಲೆಗಳಿಗೆ ಕಾರಣರಾದ ಚಕ್ರವರ್ತಿಗಳ ಮತ್ತು ಪಾಳೆಯಗಾರರ ಸಾಹಸಗಳ ಶೋಧ ನಡೆಸಿ, ಪ್ರಕಟಿಸಿ ನಾಡಿನ ಜನರೆಲ್ಲರೂ ಕಣ್ತೆರೆದು ನೋಡುವಂತೆ ಮಾಡಿರುತ್ತಾರೆ. ವೀರಶೈವ ಸಾಹಿತ್ಯಕ್ಕಂತೂ ಮಠಾಧಿಪತಿಗಳೂ ಸಹ ಮಾಡದಿರುವ ಹಿರಿಯ ಕಾರ್ಯವನ್ನು ಮಾಡಿ ಅವರು ಸಮಾಜಕ್ಕೆ ತಿಳಿವಳಿಕೆ ನೀಡಿರುತ್ತಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದು ಕನ್ನಡ ನಾಡಿನಲ್ಲೆಲ್ಲಾ ಸಂಚರಿಸಿ ಅನೇಕ ಕಡೆ ಕರ್ನಾಟಕ ಸಂಘಗಳನ್ನು ಸ್ಥಾಪಿಸಿದ್ದಾರೆ. ವಿಶಾಲ ಕರ್ನಾಟಕಕ್ಕಾಗಿ ೪೦ ವರ್ಷಗಳಿಂದ ಟೊಂಕಕಟ್ಟಿ ದುಡಿದಿದ್ದಾರೆ. ಅದಕ್ಕಾಗಿ ತಮ್ಮ ಆಸ್ತಿಪಾಸ್ತಿ ಕಳೆದುಕೊಂಡಿದ್ದಾರೆ. ಇಂತಹ ಮಹನೀಯರಿಗೆ ಸಮಿತಿಯವರು ಪ್ರಶಸ್ತಿಗ್ರಂಥವನ್ನು ಅರ್ಪಿಸುವ ಮಹತ್ಕಾರ್ಯ ಮಾಡುತ್ತಿರುವುದು ತುಂಬ ಅಭಿನಂದನೀಯವಾಗಿದೆ.

ಶ್ರೀ ಜಗದೀಶ್ವರನು ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರಿಗೆ ಇನ್ನೂ ಹೆಚ್ಚು ಹೆಚ್ಚು ಆಯುರಾರೋಗ್ಯ ಐಶ್ವರ್ಯಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

(ಸಹಿ) ಎಚ್. ಎಂ. ರುದ್ರಾರಾಧ್ಯ

**ಅಂದಾನಪ್ಪ ದೊಡ್ಡಮೇಟಿ,**
**ಸಣ್ಣ ನೀರಾವರಿ ರಾಜ್ಯ ಸಚಿವರು**
**ವಿಧಾನಸೌಧ**

ಬೆಂಗಳೂರು-೧
ದಿ. ೨೬-೭-೧೯೬೮

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ, ಶರಣ ಸಾಹಿತ್ಯ ಸಂಪಾದಕರಾಗಿರುವ ಪಂಡಿತ ರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರ ಷಷ್ಟ್ಯಬ್ದಿಶಾಂತಿ ಸಮಾರಂಭದ ಸಂತೋಷಕರ ಶುಭಸಂದರ್ಭದಲ್ಲಿ ಒಂದು 'ಸಂಭಾವನಾ ಗ್ರಂಥ' ವನ್ನು ಅವರಿಗೆ ಸಮರ್ಪಿಸಬೇಕೆಂದು ಸಮಿತಿಯವರು ನಿರ್ಧರಿಸಿರುವುದು ಅತ್ಯಂತ ಸಂತೋಷಕರವಾದ ಸಂಗತಿಯಾಗಿದೆ.

ಕರ್ಣಾಟಕ ಏಕೀಕರಣಕ್ಕಾಗಿ ನಲವತ್ತು ವರ್ಷಗಳಿಗೂ ಹೆಚ್ಚು ಕಾಲದಿಂದ ಅವಿಶ್ರಾಂತವಾಗಿ ಶ್ರಮಿಸುತ್ತಿರುವ ಶಾಸ್ತ್ರಿಗಳು, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಸುಮಾರು ೧೦೦ ತಿಂಗಳುಗಳ ಕಾಲದಲ್ಲಿ ಕನ್ನಡ ನಾಡು-ನುಡಿಗಾಗಿ ಸಲ್ಲಿಸಿದ ಅಮೌಲ್ಯವಾದ ಬಹುಮುಖಸೇವೆಯನ್ನು ಪ್ರತಿಯೊಬ್ಬ ಕನ್ನಡಿಗನೂ ಸ್ಮರಿಸಿಕೊಳ್ಳುವಂತಿದೆ. ಅರುವತ್ತು ವರ್ಷ ತುಂಬು ಜೀವನ ನಡೆಸಿದ ಶ್ರೀಶಾಸ್ತ್ರಿಗಳವರ ಷಷ್ಟ್ಯಬ್ದಿ ಸಮಾರಂಭದ ಮಹೋತ್ಸವವನ್ನು ಜನತೆ ನೆರವೇರಿಸಿರುವುದು ಕನ್ನಡಿಗರೆಲ್ಲರಿಗೆ ಹೆಮ್ಮೆಯ ವಿಷಯ. ಅವರಿಗೆ ನೂರು ವರ್ಷ ಅಖಂಡ ಆಯುರಾರೋಗ್ಯ ಭಾಗ್ಯವನ್ನು ದಯಪಾಲಿಸಿ ಜನಸೇವೆಯನ್ನು ವಿಶೇಷವಾಗಿ-ಕರ್ಣಾಟಕದ ಸೇವೆಯನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ನಡೆಸಲಿ ಎಂದು ಹಾರೈಸಿ ಕರ್ನಾಟಕಾಂಬೆ ಶ್ರೀ ಭುವನೇಶ್ವರಿಯಲ್ಲಿ ಪ್ರಾರ್ಥಿಸುತ್ತೇನೆ.

|| ಭದ್ರಂ-ಶುಭಂ-ಮಂಗಳಂ ||

(ಸಹಿ) ಅಂದಾನಪ್ಪ ದೊಡ್ಡಮೇಟಿ.

* * * * *

**ರಾಮಕೃಷ್ಣ ಹೆಗ್ಗಡೆ, ಬಿ.ಎ. ಬಿ. ಎಲ್.**
**ಹಣಕಾಸಿನ ಮತ್ತು ಯುವಜನ ವ್ಯವಹಾರಗಳ ಮಂತ್ರಿ**

ಬೆಂಗಳೂರು-೨
ದಿ. ೨೦-೭-೧೯೬೮

ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರಿಗೆ ಅವರ ಷಷ್ಟಿಪೂರ್ತಿ ಶಾಂತಿಸಮಾರಂಭ ಸಮಿತಿಯವರು ಸಂಭಾವನಾಗ್ರಂಥವೊಂದನ್ನು ಅರ್ಪಿಸುತ್ತಿರುವುದು ಅತ್ಯಂತ ಹರ್ಷದ ಸಂಗತಿ.

ಕನ್ನಡನಾಡಿನ ನುಡಿಯ ಮತ್ತು ಸಂಸ್ಕೃತಿಗಳ ಪ್ರಗತಿಗಾಗಿ ಸುಮಾರು ನಾಲ್ಕು ದಶಕಗಳಿಂದ ಶ್ರೀ ಶಿವಮೂರ್ತಿಶಾಸ್ತ್ರಿಗಳವರು ಸಲ್ಲಿಸಿರುವ ಸೇವೆ ಸ್ತುತ್ಯರ್ಹವಾಗಿದೆ. ಹಿರಿಯ ಸಾಹಿತಿಗಳಾದ ಶ್ರೀಯುತರಿಗೆ ಬೃಹತ್ತಾದ ಸಾಹಿತ್ಯಕೃತಿಯೊಂದನ್ನು ಸಂಭಾವನಾ ಕಾಣಿಕೆಯಾಗಿ ಅರ್ಪಿಸುವುದು ನಿಜಕ್ಕೂ ಸಮರ್ಪಕವಾದ ಕಾರ್ಯ. ಈ ಸಾರ್ಥಕ ಕಾರ್ಯಕ್ಕೆ ಸಮಿತಿಯವರಿಗೆ ನನ್ನ ಹೃತ್ಪೂರ್ವಕವಾದ ಶುಭಾಶಯಗಳು.

(ಸಹಿ) ರಾಮಕೃಷ್ಣಹೆಗ್ಗಡೆ.

* * * * *

**ಕೆ. ಪಟ್ಟಾಭಿರಾಮನ್**
ಅಡ್ವೊಕೇಟ್

ದಿ. ೧೯-೭-೧೯೬೮
ಕೋಲಾರ

ಆತ್ಮೀಯರೂ, ಸುವಿಖ್ಯಾತರೂ ಆದ ಪಂಡಿತ ರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಷಷ್ಟ್ಯಬ್ದಿ ಸಮಾರಂಭದ ಸವಿನೆನಪಿನಲ್ಲಿ ಸಂಭಾವನಾಗ್ರಂಥವನ್ನು ಪ್ರಕಾಶನಗೊಳಿಸುವುದು ಬಹು ವಿಹಿತವಾಗಿದೆ. ಅವರ ಬಹುಮುಖ ಸೇವೆಯ

ಸ್ಮರಣಗ್ರಂಥವಾಗಿ ಅದು ಇರಬೇಕಾದುದು ಸರಿಯೇ. ಷಷ್ಟ್ಯಬ್ದಿ ಆಚರಣೆಯ ಉದ್ದೇಶವು ವಿಶಿಷ್ಟವಾದುದು. ಮನುಷ್ಯನಿಗಿರುವ ನೂರಿಪ್ಪತ್ತು ವರ್ಷಗಳ ಆಯುಷ್ಯದಲ್ಲಿ ಅವನು ಕಳೆದ ಅರುವತ್ತು ವರ್ಷಗಳಲ್ಲಿ ನಿರ್ವಹಿಸಿದ ಸಾಧನವನ್ನು ಒರೆಗಲ್ಲಿನಮೇಲೆ ಹಚ್ಚುವುದೂ, ದೈವಾನುಗ್ರಹದಿಂದ ಉಳಿದಿರುವ ಮುಂದಿನ ಕಾಲಾವಧಿಯಲ್ಲಿ ಮಾಡಬೇಕಾದುದೇನು ಎಂಬುದರ ಚಿಂತನೆಯ ಸಂಕಲ್ಪ ಮಾಡಿಕೊಳ್ಳುವುದೂ ಸಂದರ್ಭೋಚಿತವೇನೋ. ಈ ದಿಶೆಯಲ್ಲಿ ಶ್ರೀ ಶಾಸ್ತ್ರಿಗಳ ಜೀವನವಿಧಾನವು ಉತ್ತೇಜಕರವಾಗಿಯೇ ಶೋಭಿಸುತ್ತಿದೆ.

*  *  *  *

ಜಗನ್ನಿಯಾಮಕನು ಶ್ರೀ ಶಾಸ್ತ್ರಿಗಳವರಿಗೂ ಇವರ ಕುಟುಂಬವರ್ಗಕ್ಕೂ ಸಕಲ ಸನ್ಮಂಗಳನ್ನೂ ಅನುಗ್ರಹಿಸಲಿ. ಇದೇ ನನ್ನ ಹಾರೈಕೆ.

*  *  *  *  *

ಸಂಪಾದಕ ಮಂಡಲಿಯ ಈ ಸ್ತುತ್ಯಕಾರ್ಯವನ್ನು ನಾನು ಶ್ಲಾಘಿಸುತ್ತೇನೆ.

*  *  *  *  *

(ಸಹಿ) ಕೆ. ಪಟ್ಟಾಭಿರಾಮನ್

Padmasree Dr. T. M. A. PAI

President and Registrar D. 24-7-1968

The Academy of General Education

Manipal, S. Kanara.

Panditarathna, Padmashri B. Shivamurthy Saslti is a dynamic personality of our times. He has played his part with a sense of dedication both in the fields of literature and philosophy and also for Karnataka Unification. He has endeared himself to a large number of people who have always found in him a dependable and a learned guide. I am very happy that a Commemoration Volume is getting ready and I have no doubt it will throw light on the various aspect of Mr. Sastry's life and his activities.

My contact with him has been now from a long time and on each occaion, he has impressed me by his balanced views on life and life's problems.

(Sd) T. M. A. Pai.

**ಪಂಜಾಬದ ರಾಜ್ಯಪಾಲರಾದ 'ಪದ್ಮಭೂಷಣ'**

## ಡಾ॥ ಡಿ. ಸಿ. ಪಾವಟೆಯವರ ಸಂದೇಶ

*Raj Bhavan*
*Chandigarh*

# MESSAGE

I am very happy to know that the 60th birthday of Asthana Vidwan, Panditharathnam, Padmasri B. Shivamurthy Shastry is going to be celebrated this month.

I would like to join the host of his friends and admirers and wish him many more happy years of life. Shivmurthy Shastry's name is a household word throughout the Kannada speaking region and he has rendered yeoman service in the field of Kannada literature. I am happy to know that the birthday celebration committee has decided to present him a Commemoration Volume. I am sure this is a befitting recognition of the great service he has rendered for Kannada language and literature.

I wish all success to the function.

CHANDIGARH,
August 12, 1968.

D. C. PAVATE
GOVERNOR OF PUNJAB

॥ ಶ್ರೀ ಶಿವಯೋಗೀಶ್ವರಾಯ ನಮಃ ॥

ಶ್ರೀ ನಿ. ಪ್ರ. ಸ್ವ.
ಮೃತ್ಯುಂಜಯ ಮಹಾಸ್ವಾಮಿಗಳು
ಶ್ರೀ ಮುರುಘಾಮಠ

'ಮೃತ್ಯುಂಜಯನಗರ'
ಧಾರವಾಡ
ದಿ. ೧೭-೮-೧೯೬೮

**ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು ಶ್ರೀ ಗುರು ಮೃತ್ಯುಂಜಯ ಮಹಾಸ್ವಾಮಿಗಳು ಮುರುಘಾಮಠ, ಧಾರವಾಡ ಇವರಿಂದ**

# ಶುಭ ಸಂದೇಶ

ಪದ್ಮಶ್ರೀ, ಆಸ್ಥಾನ ವಿದ್ವಾನ್, ಪಂಡಿತ ರತ್ನ, ಬಿ. ಶಿವಮೂರ್ತಿ ಶಾಸ್ತ್ರಿಗಳು ತಮ್ಮ ಉಜ್ವಲ ಜೀವನದ ಮಹತ್ವದ ಹಂತವನ್ನು ಯಶಸ್ವಿಯಾಗಿ, ಕೀರ್ತಿಶಾಲಿಗಳಾಗಿ ದಾಟಿದುದೂ, ಅವರ ಅರುವತ್ತು ವರ್ಷದ ಹುಟ್ಟು ಹಬ್ಬದ ಸಮಾರಂಭದ ಮಂಗಲ ಪ್ರಸಂಗ ಒದಗಿದುದೂ ಅದರ ಅಂಗವಾಗಿ ಈಗ 'ಪ್ರಶಸ್ತಿ ಗ್ರಂಥವು' ಅವರಿಗೆ ಸಮರ್ಪಣೆಯಾಗುವುದೂ ನಮಗೆ ತುಂಬಾ ಸಂತೋಷವನ್ನುಂಟುಮಾಡಿದೆ.

ಪಂಡಿತ ರತ್ನ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಕನ್ನಡ ನಾಡಿಗೆ ದೇವದತ್ತ ದೇಣಿಗೆಯಾಗಿದ್ದಾರೆ. ನಾಡು ನುಡಿಗಳ ಸೇವೆಯನ್ನು, ಧರ್ಮ ತತ್ತ್ವಗಳ ಪ್ರಚಾರವನ್ನು ಸಮರ್ಪಕವಾಗಿ ಮಾಡಿದ್ದಾರೆ. ಆದರ್ಶ ಶಿಕ್ಷಕರಾಗಿ, ಕೀರ್ತನಾಚಾರ್ಯರಾಗಿ ಜನಮನವನ್ನು ಬೆಳಗಿದ್ದಾರೆ. ಮಹಾತ್ಮರ ಕೃಪಾಕಟಾಕ್ಷಕ್ಕೊಳಗಾಗಿ, ಅವರ ವಿದ್ವತ್ತೂ, ಪಾಂಡಿತ್ಯವೂ, ಪ್ರತಿಭೆಯೂ ಕಾಲಕಾಲಕ್ಕೆ ಬೆಳೆದುದು ಆನಂದಾಶ್ಚರ್ಯವನ್ನುಂಟುಮಾಡುವಂತಹದಿದೆ. ಸಾಹಿತ್ಯ ಕ್ಷೇತ್ರದಲ್ಲಿ ಅವರ ಪರಿಶ್ರಮ ಅಪಾರವಾದುದು. ಅನೇಕ ಗ್ರಂಥಗಳನ್ನು ರಚಿಸಿ, ಸಂಪಾದಿಸಿ ಪ್ರಕಟಿಸಿರುವುದಲ್ಲದೆ, "ಶರಣ ಸಾಹಿತ್ಯ" ಮಾಸಪತ್ರಿಕೆಯ ಸಂಪಾದಕರಾಗಿ ಜನತೆಯಲ್ಲಿ ನೀತಿ, ತತ್ತ್ವ, ಸಂಸ್ಕೃತಿಗಳ ಬೆಳವಣಿಗೆಗಾಗಿ ಅನುವು ಮಾಡಿದ್ದಾರೆ. ಸತತ ಎಂಟೂಕಾಲು ವರ್ಷಗಳವರೆಗೆ "ಕನ್ನಡ ಸಾಹಿತ್ಯ ಪರಿಷತ್ತು" ಬೆಂಗಳೂರು ಈ ಸಂಸ್ಥೆಯ ಅಧ್ಯಕ್ಷರಾಗಿ ಚಿರಸ್ಮರಣೀಯವಾದ ಕಾರ್ಯ ಮಾಡಿದ್ದಾರೆ. ತೆಲುಗು, ತಮಿಳು ಗ್ರಂಥಗಳನ್ನು ಅಭ್ಯಸಿಸಿ ಉತ್ತಮೋತ್ತಮ ಉಪಯುಕ್ತ ಗ್ರಂಥಗಳನ್ನೂ ರಚಿಸಿದ್ದಾರೆ.

ಕರ್ನಾಟಕ ಏಕೀಕರಣಕ್ಕಾಗಿ ಇವರು ತಮ್ಮ ಪಾಂಡಿತ್ಯ ಪ್ರತಿಭೆಗಳನ್ನು ಬಳಸದೆ ಬಿಟ್ಟಿಲ್ಲ. ಈ ಕ್ಷೇತ್ರದಲ್ಲಿ ಇವರ ಪರಿಶ್ರಮ ಶ್ಲಾಘನೀಯವಾದುದು. ಉಜ್ಜ್ವಲವಾದ ದೇಶಾಭಿಮಾನವೂ ಇವರಲ್ಲಿ ಹಿರಿಯದಾಗಿದೆ.

ಸಾಹಿತ್ಯ, ಸಂಸ್ಕೃತಿ, ತತ್ತ್ವ, ನೀತಿಗಳ ಪ್ರಚಾರಕ್ಕಾಗಿ ಅನೇಕ ಮುಖವಾಗಿ, ಅನೇಕ ರಂಗಗಳಲ್ಲಿ ಅವ್ಯಾಹತವಾಗಿ ೪೦ ವರ್ಷಗಳಕಾಲ ಸೇವೆ ಸಲ್ಲಿಸಿದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಆಯುರಾರೋಗ್ಯ ಭಾಗ್ಯವುಳ್ಳವರಾಗಿ, ಬಹುಕಾಲ ತಮ್ಮ ಪಾಂಡಿತ್ಯವನ್ನು, ಪ್ರತಿಭೆಯನ್ನು ಜನತೆಯಲ್ಲಿ, ನಾಡಿನಲ್ಲಿ ಬೀರುವಂತಾಗಲೆಂದು ಹಾರೈಸುತ್ತೇವೆ. ಇವರ ೬೦ ವರ್ಷದ ಹುಟ್ಟು ಹಬ್ಬದ ಅಂಗವಾದ 'ಪ್ರಶಸ್ತಿಗ್ರಂಥ' ಸಮರ್ಪಣೆಯು ಯಶಸ್ವಿಯಾಗಿ ನೆರವೇರಲಿ. ಶ್ರೀ ಮಹಾಶಿವಯೋಗಿಗಳು ಇವರಿಗೆ ಕೃಪಾಶೀರ್ವಾದನ್ನೀಯಲಿ. ಪದ್ಮಶ್ರೀ ಶಾಸ್ತ್ರಿಗಳಿಗೆ ಮಂಗಲವಾಗಲಿ.

ಇತ್ಯಾಶಿಷಃ

॥ ಶಿವಂ ಭೂಯಾತ್ ॥

# ಶ್ರೀಮದ್ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ
# ಶ್ರೀ ೧೦೦೮ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ
# ಶಿವಾಚಾರ್ಯ ಮಹಾಸ್ವಾಮಿಗಳವರು

### ಶ್ರೀ ಜಗದ್ಗುರು ಸೂರ್ಯಸಿಂಹಾಸನ ಮಠ, ಗುಂತಕಲ್ಲು ಇವರ ಮಹಾ ಸನ್ನಿಧಿಯಿಂದ

## ಆಶೀರ್ವಚನಗಳು

Ref. No 7693

Camp : ಗುಂತಕಲ್ಲು
Date : 17-8-1968

ಆಸ್ಥಾನ ವಿದ್ವಾನ್, ಪಂಡಿತ ರತ್ನ, ಪದ್ಮಶ್ರೀ, ಹುಲುಕುಂಟೆ ಮಠದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರಿಗೆ ಮಾಳ್ಪ ಶುಭಾಶೀರ್ವಾದಗಳು.

ನಿಮಗೂ ೬೦ ವರ್ಷ ತುಂಬಿದ ವಿಚಾರ ಸನ್ನಿಧಿಗೆ ಇಂದೇ ಅರಿಕೆಯಾಯಿತು. ಈಗ ನಿಮಗೆ ೬೧ನೇ ವರ್ಷ ನಡೆದಿದೆ ಯೆಂಬುದೂ ವಿದಿತವಾಯಿತು. ಬಾಲ್ಯದ ೨೫ ನೆಯ ವರ್ಷದಿಂದ ಅಖಂಡವಾಗಿ ಇಲ್ಲಿಯವರೆವಿಗೆ ಸುಮಾರು ೪೦ ವರ್ಷಗಳಿಂದ ನೀವು ಕರ್ನಾಟಕ ಸಾಹಿತ್ಯ ಸೇವೆಗೆ ನಿಮ್ಮ ತ್ರಿಕರಣಗಳನ್ನು ಹುಡಿಹುಡಿಯಾಗಿ ಸವೆಸಿದ್ದೀರಿ. ನಿಮ್ಮ ಜನ್ಮ-ಸಾರ್ಥಕವೂ ಪಾವನವೂ ಆಯಿತು.

ನೀವು ಮಾಡಿದ ಸಾರಸ್ವತ ಸೇವೆಯಿಂದ ಕರ್ನಾಟಕವು ಎಂದೂ ಮರೆಯದಷ್ಟು ಉಪಕಾರವನ್ನು ಹೊಂದಿದೆ. ಈ ಉಪಕಾರಕ್ಕಾಗಿ ನಿಮಗೆ ಯಾವ ಪ್ರತಿಫಲವನ್ನು ಸಲ್ಲಿಸಿದರೂ ಅದು ಅಲ್ಪವೇ ಸರಿ.

ನಿಮ್ಮ ಸೇವೆಗೆ ಕೇಂದ್ರ ಸರ್ಕಾರವೂ ಕರ್ನಾಟಕ ಸರ್ಕಾರವೂ ಮೆಚ್ಚಿ 'ಪದ್ಮಶ್ರೀ' ಹಾಗೂ 'ಪಂಡಿತ ರತ್ನಂ' ಎಂಬ ಬಿರುದುಗಳು ಸಹಿತ ದೊಡ್ಡ ಗೌರವ ಕೊಟ್ಟು ನಿಮ್ಮನ್ನು ಸನ್ಮಾನಿಸಿರುವುದಕ್ಕೆ ಸಾಹಿತ್ಯ ಪ್ರೇಮಿಗಳೆಲ್ಲರಿಗೂ ತುಂಬಾ ಸಂತೋಷವಾಗಿದೆ. ನಿಮ್ಮ ವಿದ್ವತ್ತು ಮತ್ತು ಸಾಮರ್ಥ್ಯಗಳನ್ನು ಗುರುತಿಸಿದ ಮೈಸೂರು ಶ್ರೀಮನ್ಮಹಾರಾಜರು ನಿಮ್ಮನ್ನು ಆಸ್ಥಾನ ವಿದ್ವಾಂಸರನ್ನಾಗಿ ಮಾಡಿ ಗೌರವಿಸಿದ್ದಾರೆ.

ನಿಮ್ಮಿಂದ ಇನ್ನೂ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಬೇಕಾಗಿದೆ. ಈ ಸೇವೆಯ ಸುಖವನ್ನು ನೀವು ಉಣ್ಣಬೇಕಾಗಿದೆ. ಆದಕ್ಕಾಗಿ ದಯಾಮಯನಾದ ಶ್ರೀಶೈಲ ಮಲ್ಲೇಶ್ವರನೂ, ಆತನ ಅರ್ಧಾಂಗಿ ಭ್ರಮರಾಂಬಾದೇವಿಯೂ, ಜಗದ್ಗುರು ಪಂಡಿತಾರಾಧ್ಯರೂ ನಿಮ್ಮನ್ನು ಪೂರ್ಣಾಯುರಾರೋಗ್ಯ ಐಶ್ವರ್ಯಗಳಿಂದ ಕಾಪಾಡಲೆಂದು ಅಂತಃಕರಣ ಪೂರ್ವಕರಾಗಿ ಆಶೀರ್ವದಿಸಿದ್ದೇವೆ.

ನಿಮ್ಮ ಪಾಂಡಿತ್ಯ ಪ್ರತಿಭೆಗಳನ್ನು ಮನಗಂಡು ಶ್ರೀಶೈಲ ಜಗದ್ಗುರು ಪೀಠವು ತಮಗೆ 'ವಿಮರ್ಶನಾಚಾರ್ಯ' ಎಂಬ ಬಿರುದನ್ನು ತಕ್ಕ ಮರ್ಯಾದೆಗಳೊಂದಿಗೆ ಹಲವಾರು ವರ್ಷಗಳ ಹಿಂದೆಯೇ ಅನುಗ್ರಹಿಸಿದೆ. ಪ್ರಾಚೀನತಮವಾದ ಶ್ರೀಶೈಲ ಸೂರ್ಯ ಸಿಂಹಾಸನದ ಬಗೆಗೆ, ಸುಕ್ಷೇತ್ರ ಶ್ರೀಶೈಲದ ಬಗೆಗೆ ನೀವು ತಾಳಿರುವ ಶ್ರದ್ಧಾಸಕ್ತಿಗಳು ನಿಮ್ಮ ಪರಂಪರೆಗೂ ಸಂಸ್ಕೃತಿಗೂ ಅನುಗುಣನಾಗಿವೆಯೆಂದು ನಾವು ಭಾವಿಸಿರುತ್ತೇವೆ.

ಶ್ರೀ ಜಗದ್ಗುರು ಪಂಚಾಚಾರ್ಯ ಪೀಠಗಳಾದ ಶ್ರೀರಂಭಾಪುರಿಯವರಿಂದ 'ಕೀರ್ತನಕೇಸರಿ,' ಕಾಶಿಯವರಿಂದ 'ಕರ್ನಾಟಕ ವಿಭೂಷಣ' ಉಜ್ಜನಿಯವರಿಂದ 'ಶಿವಕೀರ್ತನ ಕವಿರಾಜ' ಎಂಬ ಬಿರುದುಗಳನ್ನು ಪಡೆದಿರುವ ನೀವು ನಿಜಕ್ಕೂ ಭಾಗ್ಯಶಾಲಿಗಳೇ ಸರಿ.

ಇದರೊಂದಿಗೆ ಮಂತ್ರಾಕ್ಷತೆಯನ್ನೂ, ನಿಮಗೆ ನೂತನಾಂಬರಗಳಿಗಾಗಿ ೧೦೮ ರೂಪಾಯಿಗಳನ್ನೂ ಕಳುಹಿಸಿದೆ. ಸಮಾರಂಭವು ಸಾಂಗಮಂಗಲವಾಗಿ ನೆರವೇರಲಿ ಎಂದು ಹಾರೈಸುತ್ತೇವೆ.

॥ ಸತ್ಯಂ-ಶಿವಂ-ಸುಂದರಂ ॥

ಇತ್ಯಾಶಿಷಃ

**ಪದ್ಮಶ್ರೀ ಡಾ|| ವಿ. ಕೃ. ಗೋಕಾಕ್.**
ಬಿ.ಎ., (ಆಕ್ಸನ್)
ಉಪಕುಲಪತಿ, ಬೆಂಗಳೂರು ವಿಶ್ವವಿದ್ಯಾನಿಲಯ

ಬೆಂಗಳೂರು-೧
ದಿ. ೧೦-೭-೧೯೬೮

ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರಿಗೆ ಷಷ್ಟ್ಯಬ್ದಿ ಶಾಂತಿ ಸಮಾರಂಭದ ಉತ್ಸವ ಸಮಿತಿಯವರು ಒಂದು ಸಂಭಾವನಾಗ್ರಂಥವನ್ನು ಸಮರ್ಪಿಸಲಿರುವರೆಂದು ತಿಳಿದು ಸಂತೋಷವಾಯಿತು. ಪಂಡಿತ ರತ್ನ ಶ್ರೀ ಶಾಸ್ತ್ರಿಗಳು ಪಡುವಣದ ವಿದ್ಯೆಯಲ್ಲಿ ಶ್ರಮಿಸದಿದ್ದರೂ ಆಧುನಿಕ ದೃಷ್ಟಿಯುಳ್ಳವರಾಗಿದ್ದಾರೆ. ಪರಂಪರೆಯ ಧರ್ಮವನ್ನು ಶ್ರದ್ಧೆಯಿಂದ ನಿರ್ವಹಿಸಿಕೊಂಡು ಬಂದರೂ ಅವರ ಜೀವನ ದೃಷ್ಟಿ ನೂತನವೂ ವ್ಯಾಪಕವೂ ವಿಶಾಲವೂ ಆಗಿದೆ. ಕನ್ನಡ ನಾಡುನುಡಿಗಳ ಏಳಿಗೆಗೆ ಅವರು ತಮ್ಮ ಜನ್ಮವನ್ನು ಮೀಸಲಿಟ್ಟಿದ್ದಾರೆ. ಇಂಥವರ ಸತ್ಕಾರದಿಂದ ನಾಡಿನ ಪ್ರಗತಿಗೆ ಕಳೆ ಬರುತ್ತದೆ. ತಮ್ಮ ಕಾರ್ಯವನ್ನು ಹೀಗೆಯೇ ಮುಂದುವರಿಸಲು ದೇವರು ಅವರಿಗೆ ಬಹುಕಾಲ ಆಯುರಾರೋಗ್ಯಗಳನ್ನು ಕೊಡಲಿ ಎಂದು ಹಾರೈಸುತ್ತೇನೆ.

(ಸಹಿ.) ವಿ. ಕೃ. ಗೋಕಾಕ್

**ಡಾ|| ರಂ. ಶ್ರೀ. ಮುಗಳಿ, ಎಂ. ಎ., ಡಿ.ಲಿಟ್.,**
**ಕನ್ನಡ ಶಾಖೆಯ ಮುಖ್ಯಾಧಿಕಾರಿಗಳು**
**ಬೆಂಗಳೂರು ವಿಶ್ವವಿದ್ಯಾನಿಲಯ**

ಬೆಂಗಳೂರು-೯
ದಿ. ೨೨-೭-೬೮

ಪದ್ಮಶ್ರೀ, ಪಂಡಿತರತ್ನ ಬಿ. ಶಿವಮೂರ್ತಿ ಶಾಸ್ತ್ರಿಗಳನ್ನು ಗೌರವಿಸಿ ಅವರಿಗೆ ಒಂದು ಸಂಭಾವನಾ ಗ್ರಂಥವನ್ನು ಸಮರ್ಪಿಸಬೇಕೆಂದು ಸತ್ಕಾರ ಸಮಿತಿಯವರು ನಿರ್ಧರಿಸಿರುವುದು ತಿಳಿಯಿತು.

* * * * *

ಮಾನ್ಯ ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಕನ್ನಡ ನಾಡುನುಡಿಗಳಿಗೆ ಬಹು ದೀರ್ಘ ಕಾಲ ಅನೇಕ ಮುಖವಾದ ಸೇವೆಯನ್ನು ಸಲ್ಲಿಸಿದ್ದಾರೆ. ವಿಶೇಷವಾಗಿ, ಚರಿತ್ರೆ, ಸಾಹಿತ್ಯ ಈ ಕ್ಷೇತ್ರಗಳಲ್ಲಿ ಅಮೂಲ್ಯವಾಗಿ ಸಂಶೋಧನೆ ನಡೆಯಿಸಿ ಕೊನೆಬಾಳುವ ಹಲವಾರು ಕೃತಿಗಳನ್ನು ಅವರು ರಚಿಸಿದ್ದಾರೆ. ಅವರಿಗೆ ಸುದೀರ್ಘ ಆಯುಸ್ಸು ಮತ್ತು ಉತ್ತಮ ಆರೋಗ್ಯ ಇವನ್ನು ಪರಮೇಶ್ವರನು ದಯಪಾಲಿಸಲೆಂದು ನಾನು ಪ್ರಾರ್ಥಿಸುತ್ತೇನೆ.

(ಸಹಿ) ರಂ. ಶ್ರೀ. ಮುಗಳಿ



## ಜೈನಶಾಸ್ತ್ರ ವಿಶಾರದ, ಕರ್ನಾಟಕ ಸಾಹಿತ್ಯ ಪ್ರವೀಣ

# ಶ್ರೀ ಕೆ. ಎಸ್. ಧರಣೇಂದ್ರಯ್ಯನವರಿಂದ

# ಶುಭಾಕಾಂಕ್ಷೆಗಳು

ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಪದ್ಮಶ್ರೀ ಶ್ರೀಮಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳವರಿಗೂ ನನಗೂ ಆತ್ಮೀಯತೆಯು ಬಳೆಯಲು ಅನೇಕ ಕಾರಣ ಗಳಿವೆ. ನಾವಿಬ್ಬರೂ ತುಮಕೂರು ಜಿಲ್ಲೆಯಲ್ಲಿ ಹುಟ್ಟಿದವರು ನನ್ನ ಇಬ್ಬರು ಅಣ್ಣಂದಿರು ಕೀರ್ತನ ಕಾರರಾಗಿದ್ದರು. ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳೂ ಪ್ರಪ್ರಥಮ ಕೀರ್ತನಕಾರರು. ನಮ್ಮ ಮನೆತನದ ಧರ್ಮಗುರುಗಳಾಗಿದ್ದ ಪೂಜ್ಯ ಸ್ವಸ್ತಿಶ್ರೀ ನೇಮಿ ಸಾಗರ ಸ್ವಾಮಿಗಳವರು, ಸುಮಾರು ನಲವತ್ತು ವರ್ಷಗಳ ಹಿಂದೆಯೇ ತುಮಕೂರಿನಲ್ಲಿ ಶ್ರೀ ಶಿವಮೂರ್ತಿಗಳವರ ಸ್ಫೂರ್ತಿದಾಯಕವಾದ ಕೀರ್ತನೆಗಳನ್ನು ಕೇಳಿ ಶ್ರೀ ಶಾಸ್ತ್ರಿಗಳವರ ಭವ್ಯಭವಿಷ್ಯಕ್ಕಾಗಿ ಆಶೀರ್ವದಿಸಿದರು. "ಕೀರ್ತನ ವಿಚಕ್ಷಣ" ಎಂಬ ಬಿರುದನ್ನು ಕೊಟ್ಟು ಹರ ಸಿದರು. ನಾನೂ ಶ್ರೀ ಶಾಸ್ತ್ರಿಗಳವರೂ ಈಗ ಸುಮಾರು ನಾಲ್ಕು ದಶಕಗಳಿಂದ, ಕಾವೇರಿಯಿಂದ ಗೋದಾವರಿವರೆ ಗೂಹಬ್ಬಿರುವ ವಿಶಾಲ ಕರ್ನಾಟಕದಲ್ಲಿ ಅನೇಕಸಾರಿ ತೀರ್ಥಯಾತ್ರೆ ಕೈಗೊಂಡು, ಕನ್ನಡ ನಾಡಿನ ಇತಿಹಾಸ, ವೈಭವ, ಸಂಸ್ಕೃತಿ, ಸಾಹಿತ್ಯ, ಕಲೆ, ಧರ್ಮ ಇವುಗಳನ್ನು ಕುರಿತು ಸಾವಿರಾರು ಪ್ರಸಾರ ಭಾಷಣಗಳನ್ನು ಮಾಡಿ ಕರ್ನಾಟಕ ಜನತೆಯ ಭಾವೈಕ್ಯತೆಗೂ ಕರ್ನಾಟಕದ ಏಕೀಕರಣಕ್ಕೂ ಅಪಾರವಾಗಿ ದುಡಿದಿರುತ್ತೇವೆ. ಕನ್ನಡ ನಾಡಿನ ಶ್ರವಣಬೆಳುಗೊಳ, ಹೊಂಬುಜ, ಧರ್ಮಸ್ಥಳ ಮೊದಲಾದ ಜೈನಧರ್ಮ ಪೀಠಗಳು ಶ್ರೀ ಶಾಸ್ತ್ರಿಗಳವರಿಗೆ ಪ್ರಶಸ್ತಿ-ಖಿಲ್ಲತ್ತುಗಳನ್ನು ಕೊಟ್ಟು ಆಶೀರ್ವದಿಸಿವೆ. ಜೈನಧರ್ಮ ಮತ್ತು ಸಾಹಿತ್ಯಗಳಲ್ಲಿ ಶ್ರೀ ಶಾಸ್ತ್ರಿಗಳವರು ಅಗಾಧವಾದ ಪಾಂಡಿತ್ಯವನ್ನು ಪಡೆದಿದ್ದಾರೆ. 'ಶ್ರೀ ಮಹಾವೀರ ಸ್ವಾಮಿಗಳ ಜಯಂತಿ' ಮೊದಲಾದಕಡೆ ಭಾಗವಹಿಸಿದ್ದಾರೆ. 'ಅಹಿಂಸಾಧರ್ಮ' ಪ್ರಸಾರಮಾಡಿ ದ್ದಾರೆ. ವೀರಶೈವಧರ್ಮ ಮತ್ತು ಸಾಹಿತ್ಯ ಕ್ಷೇತ್ರ ಗಳಲ್ಲಿ ನಾನು ಸ್ವಲ್ಪ ಮಟ್ಟಿಗೆ ಕೃಷಿ ಮಾಡಿದ್ದೇನೆ. ಈ ಕಾರಣಗಳಿಂದ 'ನನ್ನನ್ನು ಜೈನರಲ್ಲಿ ವೀರಶೈವನೆಂದೂ ಶಾಸ್ತ್ರಿಗಳವರನ್ನು ವೀರಶೈವರಲ್ಲಿ ಜೈನರೆಂದೂ, ನಮ್ಮ ಗಳ ಹಿತೈಷಿಗಳು ಸಂತೋಷದಿಂದ ಕರೆಯುವುದುಂಟು. ಶ್ರೀ ಧರ್ಮಸ್ಥಳದಲ್ಲಿ ನಡೆಯುತ್ತಿರುವ ಸರ್ವಧರ್ಮ ಮತ್ತು ಕನ್ನಡ ಸಾಹಿತ್ಯ ಸಮ್ಮೇಳನಗಳ ಸಮಾರಂಭ ಗಳಿಗೂ, ಶ್ರೀ ಹೊಂಬುಜ ಕ್ಷೇತ್ರದಲ್ಲಿ ನಡೆಯುತ್ತಿರುವ ಸರ್ವೋದಯ ಸಂಸ್ಕೃತಿ ಸಮ್ಮೇಳನಗಳಿಗೂ ಶ್ರೀ ಶಾಸ್ತ್ರಿ ಗಳವರು ಉದ್ಘಾಟಕರಾಗಿ, ಅಧ್ಯಕ್ಷರಾಗಿ, ಭಾಷಣಕಾರ ರಾಗಿ ಅನೇಕಾವೃತ್ತಿ ಆಗಮಿಸಿ ತಮ್ಮ ವಿದ್ವತ್ ಪೂರಿತ ಭಾಷಣಗಳಿಂದ ಆ ಸಮ್ಮೇಳನಗಳಿಗೆ ನವ ಚೈತನ್ಯವನ್ನುಂಟುಮಾಡಿರುತ್ತಾರೆ. ನಾನೂ ಶಾಸ್ತ್ರಿ ಗಳೂ ಕನ್ನಡಮ್ಮನ ಅವಳಿ ಮಕ್ಕಳಂತೆ, ಆ ತಾಯಿಯ ದಿವ್ಯಸಂದೇಶದ ನಂದಾದೀವಿಗೆಯ ಹೊಂಬೆಳಗನ್ನು ನಾಡಿನ ಎಲ್ಲ ಕಡೆಯಲ್ಲೂ ಹರಿಸಲು ಹಲವು ವರ್ಷ ಗಳಿಂದ ಕಟಿಬದ್ಧರಾಗಿ ನಿಂತಿರುತ್ತೇವೆ. ಅಲ್ಲದೆ ಬೆಂಗ ಳೂರಿನ ಬಸವ ಸಮಿತಿಯ ಕಾರ್ಯಕ್ರಮಗಳಲ್ಲಿಯೂ ನಾವು ಹಲವೆಡೆಗಳಲ್ಲಿ ಜತೆಜತೆಯಲ್ಲಿ ಭಾಗವಹಿಸಿದ್ದೇವೆ.

ಇಡಿಯ ಕರ್ನಾಟಕದಲ್ಲಿ ಏಕೈಕ ಪ್ರತಿನಿಧಿ ಸಂಸ್ಥೆ ಯಾದ ಕನ್ನಡ ಸಾಹಿತ್ಯಪರಿಷತ್ತಿನ ಮಾನ್ಯ ಅಧ್ಯಕ್ಷ ರಾಗಿದ್ದು ಶ್ರೀ ಶಾಸ್ತ್ರಿಗಳವರು ಒಂಭತ್ತು ವರುಷಗಳ ಕಾಲ ನಡೆಸಿದ ಕಾರ್ಯಕಲಾಪಗಳು "ನಭೂತೋ ನ ಭವಿಷ್ಯತಿ"-ಎಂಬ ನುಡಿಗೆ ಸಾರ್ಥಕ್ಯವನ್ನು ತಂದಿವೆ. ಶ್ರೀ ಶಾಸ್ತ್ರಿಗಳವರು ಆ ಸಂಸ್ಥೆಯನ್ನು ಜನಪ್ರಿಯವನ್ನಾಗಿ ಮಾಡಿ ಅದರ ಕೀರ್ತಿಲತೆಯು ಎಲ್ಲೆಲ್ಲಿಯೂ ಹಬ್ಬುವಂತೆ ಅವಿಶ್ರಾಂತನಾಗಿ ದುಡಿದಿದ್ದಾರೆ. ಕನ್ನಡನಾಡಿನ ಸುಮಾರು ಎರಡೂವರೆ ಕೋಟಿ ಜನರ ಪ್ರೀತಿವಿಶ್ವಾಸಗ ಳಿಗೆ ಶ್ರೀ ಶಾಸ್ತ್ರಿಗಳು ಪಾತ್ರರಾಗಿದ್ದಾರೆ. ಕರ್ನಾಟಕದ ಹಲವು ಸಂಸ್ಥೆಗಳಿಂದಲೂ, ಮುಂಬಯಿ, ಮದ್ರಾಸು, ಹೈದರಾಬಾದು, ಹೊಸದಿಲ್ಲಿ, ವಾರಣಾಸಿ ಕರ್ನಾಟಕ ಸಂಘಗಳಿಂದಲೂ ಸನ್ಮಾನಿತರಾಗಿದ್ದಾರೆ. 'ಶರಣ ಸಾಹಿತ್ಯ' ಎಂಬ ಸುಪ್ರೌಢ ಮಾಸಪತ್ರಿಕೆಯ ಸಂಪಾದಕ ರಾಗಿದ್ದು ಸುಮಾರು ಮೂವತ್ತುವರ್ಷಗಳಿಂದ ಶ್ರೀ ಶಾಸ್ತ್ರಿ ಗಳು ನಮ್ಮ ಸಾಹಿತ್ಯದ ಸೇವೆಯನ್ನು ಅಮೋಘವಾಗಿ

ಸಲ್ಲಿಸುತ್ತಿದ್ದಾರೆ. ಅಲ್ಲದೆ ಸ್ವತಂತ್ರ ಕರ್ಣಾಟಕ, ವಾರಪತ್ರಿಕೆಯನ್ನು ಐದು ವರ್ಷಕಾಲ ನಡೆಸಿದ್ದಾರೆ. ಕನ್ನಡ ನುಡಿ ಮತ್ತು ಪರಿಷತ್ ಪತ್ರಿಕೆಗಳಿಗೆ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಈ ರೀತಿ ಕರ್ಣಾಟಕದ ಪತ್ರಿಕೋದ್ಯೋಗದಲ್ಲಿ ಶ್ರೀ ಶಾಸ್ತ್ರಿಗಳವರ ಹೆಸರು ಅಜರಾಮರವಾಗಿ ನಿಲ್ಲುವುದರಲ್ಲಿ ಸಂದೇಹವಿಲ್ಲ. ಶ್ರೀ ಶಾಸ್ತ್ರಿಗಳವರ ಗ್ರಂಥ ಬಾಹುಳ್ಯವು ಅಗಾಧವಾದುದು. ಅವರು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಉತ್ತಮ ಗ್ರಂಥ ರಚನೆ ಮಾಡಿದ್ದಾರೆ. ಇತಿಹಾಸಕಾರರಾಗಿ, ವಿಮರ್ಶಕರಾಗಿ, ಕವಿಗಳಾಗಿ, ಸಿದ್ಧಾಂತಿಗಳಾಗಿ, ಸಂಶೋಧಕರಾಗಿ ಶ್ರೀ ಶಾಸ್ತ್ರಿಗಳವರು ಸಲ್ಲಿಸಿಯೂ, ಸಲ್ಲಿಸುತ್ತಲೂ ಇರುವ ಸೇವೆಯು ಕನ್ನಡ ಸಾಹಿತ್ಯಕ್ಕೆ ವಿಶ್ವವಿಶಾಲವಾದ ಕೀರ್ತಿಯನ್ನು ಒದಗಿಸಿಕೊಟ್ಟಿದೆ. ಭಾಷಣಕಾರರಾಗಿ ಶ್ರೀ ಶಾಸ್ತ್ರಿಯವರು ರಜತಜಿಹ್ವೆಯ ವಾಗ್ಮಿಗಳೆಂದು ಖ್ಯಾತಿ ಪಡೆದಿರುತ್ತಾರೆ. ಮೈಸೂರು ಮತ್ತು ಕರ್ಣಾಟಕ ವಿಶ್ವವಿದ್ಯಾ ನಿಲಯಗಳಲ್ಲಿ ವಿಶೇಷ ಭಾಷಣ ಮಾಡಿ ಮೆಚ್ಚುಗೆಗಳಿಸಿದ್ದಾರೆ. ಜವಾನರಿಂದ ಹಿಡಿದು ದಿವಾನರವರೆಗೆ ಎಲ್ಲರೂ ಶ್ರೀ ಶಾಸ್ತ್ರಿಗಳವರ ಸ್ನೇಹಿತರಾಗಿದ್ದಾರೆ. ಕನ್ನಡ ನಾಡಿನ ಅರಮನೆ-ಗುರುಮನೆಗಳ ಪ್ರೀತಿ ಪಾತ್ರರಾಗಿ, ಪಂಡಿತರತ್ನಂ, ವಿಧ್ಯಾವಾರಿಧಿ, ಶಿವಕೀರ್ತನ ಕವಿರಾಜ, ಕೀರ್ತನಕೇಸರಿ, ಕೀರ್ತನಾಚಾರ್ಯ, ಕರ್ಣಾಟಕ ವಿಭೂಷಣ, ಸಮಾಜ ಭಾಸ್ಕರ, ವಿಮರ್ಶನಾಚಾರ್ಯ ಮೊದಲಾದ ಪ್ರಶಸ್ತಿಗಳನ್ನೂ' ಭಾರತದ ರಾಷ್ಟ್ರಾಧ್ಯಕ್ಷರಿಂದ 'ಪದ್ಮಶ್ರೀ' ಎಂಬ ಘನತಮ ಪ್ರಶಸ್ತಿಯನ್ನೂ ಪಡೆದು ಶ್ರೀ ಶಾಸ್ತ್ರಿಗಳು ಕನ್ನಡ ನಾಡಿನ ಸುವರ್ಣ ಕೀರ್ತಿಕಲಶದಂತಿದ್ದಾರೆ.

ಪದ್ಮಶ್ರೀ ಶಾಸ್ತ್ರಿಗಳು ಜಗತ್ತಿನ ಮಾತಾಪಿತೃಗಳಾದ ಪಾರ್ವತೀ ಪರಮೇಶ್ವರರ ಕೃಪಾಕಟಾಕ್ಷದಿಂದಲೂ ಭಾರತದ ಪಾರಮಾರ್ಥ ಸಾಮ್ರಾಜ್ಯದ ಸಮ್ರಾಟರಾದ ಭಗವಾನ್ ಶ್ರೀ ಗೊಮ್ಮಟೇಶ್ವರಸ್ವಾಮಿಯವರ ದಯೆಯಿಂದಲೂ ಶ್ರೀ ಹೊಂಬುಜಕ್ಷೇತ್ರದ ಜಗನ್ಮಾತೆ ಶ್ರೀ ಪದ್ಮಾವತೀದೇವಿಯರ ಕರುಣೆಯಿಂದಲೂ ಶತಮಾನಕಾಲ ಬಾಳಿ ಕನ್ನಡನಾಡಿನ ಸರ್ವತೋಮುಖವಾದ ಸೇವೆಯನ್ನು ಇತೋಪ್ಯತಿಶಯವಾಗಿ ಮುಂದುವರಿಸುವಂತಾಗಲೆಂದೂ ಶ್ರೀ ಶಾಸ್ತ್ರಿಗಳವರಿಗೆ ಆ ದೇವರ್ಕಳು ಆಯುರಾರೋಗ್ಯ, ಸುಖ ಸಂಪತ್ ವೈಭವಗಳನ್ನಿತ್ತು ಸದಾ ಕಾಪಾಡಲೆಂದೂ ಅನನ್ಯ ಭಕ್ತಿಯಿಂದ ಪ್ರಾ ಸುತ್ತೇನೆ.

॥ ಸಿರಿಗನ್ನಡಂ-ಗೆಲ್ಗೆ-ಬಾಳ್ಗೆ ॥

(ಸಹಿ) ಕಾ. ಸ. **ಧರಣೇಂದ್ರಯ್ಯ,**

ದಿ. ೧೦-೮-೧೯೬೮ 'ಕುಂದಕುಂದ ಮಂದಿರ'

ಬೆಂಗಳೂರು-೧೯

# ಪ್ರೊ॥ ಡಿ. ಕೆ. ಭೀಮಸೇನರಾಯರ

# ಸಂದೇಶ

ಆಸ್ಥಾನ ವಿದ್ವಾನ್, 'ಪಂಡಿತ ರತ್ನಂ' ಇತ್ಯಾದಿ ಅನೇಕ ಬಿರುದಾಂಕಿತರಾದ ಶ್ರೀ ಬಿ. ಶಿವ ಮೂರ್ತಿ ಶಾಸ್ತ್ರಿಗಳವರು ಪರಿಚಯವಾದ ಆ ಶುಭ ಮುಹೂರ್ತವನ್ನು ನನ್ನ ಜೀವನದಲ್ಲಿ ಅಮೃತ ಘಳಿಗೆಯೆಂದೂ, ಆ ದಿನ ನನ್ನ ಭಾಗ್ಯೋದಯದ ಶುಭದಿನವೆಂದೂ ನಾನು ಭಾವಿಸಿದ್ದೇನೆ. ಪರ ಮಾತ್ಮನು ಸಜ್ಜನರ ಸಹವಾಸವನ್ನು ದೊರೆಕಿಸಿ ಕೊಡುವುದು ಅವರವರ ಸುಕೃತ ವಿಶೇಷದಿಂದ. ಅಂದಿ ನಿಂದ ಇಂದಿನವರೆಗೆ ನಮ್ಮಿಬ್ಬರನ್ನೂ ಸ್ನೇಹ ಸೂತ್ರ ಗಾಢವಾಗಿ ಬಂಧಿಸಿದೆ. ಇದಕ್ಕೆ ಮುಖ್ಯ ಕಾರಣ ನಮ್ಮಿಬ್ಬರಲ್ಲಿರುವ ಸಮಾನ ಗುಣಧರ್ಮ. ಕನ್ನಡ ನುಡಿ, ನಾಡು ಸರ್ವತೋಮುಖವಾಗಿ ಬಳೆಯಬೇಕು, ಪ್ರಾಂತಭೇದ ವರ್ಣಭೇದ ತೊಲಗಿ ಕನ್ನಡಿಗರೆಲ್ಲರೂ ಒಂದೇ ಎಂಬ ಭಾವನೆ ದೃಢಮೂಲವಾಗಬೇಕು ಎಂಬ ಹಂಬಲವುಳ್ಳವರೆಲ್ಲರನ್ನೂ ಅವರು ಪ್ರೀತಿಸು ತ್ತಾರೆ. ತನ್ನವರನ್ನಾಗಿ ಮಾಡಿಕೊಳ್ಳುತ್ತಾರೆ. ಶಾಸ್ತ್ರಿ ಗಳವರು ಎಲ್ಲಿಯೋ ಹೈದರಾಬಾದಿನಂಥ ಕನ್ನಡ ದಿಂದ ಸಿಡಿದು ದೂರಬಿದ್ದ ನಗರದಲ್ಲಿ ಕನ್ನಡದ ಚಟುವಟಿಕೆಯನ್ನು ಕಂಡು ಮೆಚ್ಚಿಕೊಂಡಾಡಿದರು. ಶ್ರೀ ಶಾಸ್ತ್ರಿಗಳು ಉಸ್ಮಾನಿಯಾ ವಿಶ್ವವಿದ್ಯಾಲಯದ ಕನ್ನಡ ಸಂಘಕ್ಕೆ ಭೇಟಿಕೊಟ್ಟು ವಿದ್ಯಾರ್ಥಿಗಳನ್ನು ಉದ್ದೇಶಿಸಿ ಭಾಷಣ ಮಾಡಿದಾಗ ರಾಜಶೇಖರ ವಿಳಾ ಸದ ಪದ್ಯವೊಂದನ್ನು ಉದ್ಧರಿಸಿ ಶ್ರೀ ಶಾಸ್ತ್ರಿಗಳ ವರು "ಕನ್ನಡ ಭಾಷೆ ಸತ್ತವರನ್ನು ಎಬ್ಬಿಸುವ ಭಾಷೆ. ಅದಕ್ಕೆ ಸಾವೇ ಇಲ್ಲ. ಕನ್ನಡ ನಾಡಿನಿಂದ ನೀವು ಇಷ್ಟುದೂರ ವಿದ್ದರೂ ಕನ್ನಡವನ್ನು ಇಷ್ಟು ಸಮೃದ್ಧವಾಗಿ ರೂಢಿಸಿಕೊಂಡು ಬಂದಿರುವುದೇ ಇದಕ್ಕೆ ಸಾಕ್ಷಿ" ಎಂಬ ವೀರಸಂದೇಶವನ್ನಿತ್ತು ಕನ್ನಡದ ವಿದ್ಯಾರ್ಥಿಗಳಲ್ಲಿ ನವಚೈತನ್ಯವನ್ನು ತುಂಬಿದ ಕನ್ನಡದ ವೀರ ಪುರುಷರು ಶಾಸ್ತ್ರಿಗಳು ಇವರು ತುಂಬ ಗುಣಗ್ರಾಹಿಗಳು. ಗಡಿಪ್ರದೇಶಗಳಲ್ಲಿ ಕನ್ನಡವು ಸುಭದ್ರವಾಗಿದ್ದರೆ ಕನ್ನಡಕ್ಕೆ ಚ್ಯುತಿಯಿಲ್ಲ ವೆಂಬುದು ಶಾಸ್ತ್ರಿಗಳವರ ಬಲವಾದ ನಂಬಿಕೆ.

ಆಡುಮುಟ್ಟದ ಗಿಡವಿಲ್ಲ, ಶಾಸ್ತ್ರಿಗಳು ಕೈ ಹಾಕದ ವಿಷಯವಿಲ್ಲ. ಸಾಹಿತ್ಯ ಕ್ಷೇತ್ರದಲ್ಲಿ ಜೀವನ ಚರಿತೆ, ಸಾಹಿತ್ಯ ಚರಿತೆ, ಕವಿತೆ, ವಿಮರ್ಶೆ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ-ಶಾಸ್ತ್ರಿಗಳ ವರದು ಸಿದ್ಧ ಹಸ್ತ. ಅನೇಕ ಪ್ರಶಸ್ತಿ ಬಹುಮಾನ ಗಳನ್ನು ಗಳಿಸಿದರು. ಶಾಸ್ತ್ರಿಗಳವರ ಕೀರ್ತನೆಯನ್ನು ಕಲೆಯ ಪ್ರೀತಿಗಾಗಿ ಉಪಾಸಿಸಲಿಲ್ಲ. ಆದರಿಂದ ಕನ್ನ ಡದ ಏಳಿಗೆಯಾಗಿ ಭಗವತ್ ಪ್ರೀತಿಯಾಯಿತೆಂದು ಭಾವಿಸಿ ಅದನ್ನು ಆರಾಧಿಸಿದರು, ಮತ್ತು ಸಾಧಿಸಿ ದರು.

ಕನ್ನಡದ ಸ್ಥಾನಮಾನಕ್ಕೆ ಚ್ಯುತಿಯುಂಟಾ ಗುವ ಸಂದರ್ಭದಲ್ಲಿ ತಾವು ವೀರಭದ್ರನ ಉಪಾಸಕ ರೆಂದು ಸಾರುತ್ತಾರೆ. ಶಾಸ್ತ್ರಿಗಳು ದಕ್ಷ ಬ್ರಹ್ಮಾಂಡ ಯಜ್ಞವನ್ನು ಜ್ಞಾಪಿಸಿಕೊಡುತ್ತಾರೆ. ನ್ಯಾಯವಾಗಿ ತನಗೆ ಸೇರಬೇಕಾದ ಕನ್ನಡ ನೆಲದ ಒಂದು ಅಂಗು ಲವೂ ಪರಾಧೀನವಾಗಬಾದದು, ಹಾಗೇನಾದರೂ ಆಗುವ ಪ್ರಮೇಯ ಒದಗಿದಲ್ಲಿ ನಾವು ಹೋರಾಟ್ಟನಡೆ ಸಲೂ ಸಿದ್ಧರೆಂಬುರನ್ನು ತೋರಿಸಿಕೊಟ್ಟದ್ದಾರೆ. ಅದ ಕ್ಕಾಗಿ ಜನರನ್ನು ಸಂಘಟನೆ ಮಾಡುತ್ತಾರೆ, ತಾವೇ ಸ್ವಯಂಸೊಂಟ ಕಟ್ಟುತ್ತಾರೆ-ಕನ್ನಡನಾಡು ಒಂದಾಗ

ಬೇಕೆಂಬುದು ಅವರ ಉನ್ನತಧ್ಯೇಯ. ಈ ಧ್ಯೇಯ ಸಾಧನೆಗಾಗಿ ಆ ಹಿಂದಿನ ಕಾಲದಲ್ಲಿಯೇ 'ಸ್ವತಂತ್ರ ಕರ್ಣಾಟಕ' ಪತ್ರಿಕೆಯನ್ನು ಆರಂಭಿಸಿದರು. ಎಷ್ಟು ಕಷ್ಟನಷ್ಟಗಳು ಬಂದರೂ ಧೈರ್ಯದಿಂದ ಇದಿರಿಸಿದರು. ಧ್ಯೇಯಸಾಧನೆಯಲ್ಲಿ ಉತ್ತೀರ್ಣರಾಗಿ ಪತ್ರಿಕಾ ಪ್ರಪಂಚದಲ್ಲಿ ಉನ್ನತಸ್ಥಾನ ಪಡೆದರು. ತಮ್ಮದೇ ಆದ 'ಶರಣ ಸಾಹಿತ್ಯ ಪತ್ರಿಕೆಯ ದ್ವಾರ ಜನರಲ್ಲಿ ೩೦ ವರ್ಷಗಳಿಂದ ಕನ್ನಡ ಸಾಹಿತ್ಯದ ಅಭಿರುಚಿಯನ್ನು ಹುಟ್ಟಿಸುತ್ತಿರುವುದನ್ನು ಪ್ರತಿಯೊಬ್ಬ ಕನ್ನಡಿಗರೂ ಚೆನ್ನಾಗಿ ಬಲ್ಲರು.

* * * * *

ಶ್ರೀಕಂಠನು ಶಾಸ್ತ್ರಿಗಳವರಿಗೆ ಪ್ರಶಸ್ತವಾದ ಕಂಠಶ್ರೀಯನ್ನು ಪ್ರದಾನ ಮಾಡಿದ್ದಾನೆ. ಭಾಷಣ ವೇದಿಕೆಯ ಮೇಲೆ ಶಾಸ್ತ್ರಿಗಳು ನಿಂತೊಡನೆಯೇ ವಾಗ್ದೇವಿಯು ಶಾಸ್ತ್ರಿಗಳವರ ನಾಲಗೆಯನ್ನು ರಂಗಸ್ಥಳವನ್ನಾಗಿ ಮಾಡಿಕೊಂಡು ತಾಂಡವವಾಡುತ್ತಾಳೆ. ಪೂರ್ವಸಿದ್ಧತೆಯಿಲ್ಲದೆ ವಾಕ್ಪ್ರವಾಹ ನಿರರ್ಗಳವಾಗಿ ಜಾಹ್ನವಿಯಂತೆ ಪ್ರವಹಿಸುತ್ತದೆ. ತಮ್ಮ ವಾಕ್ಚಾತುರ್ಯದಿಂದ ಸಹಸ್ರಾರು ಜನರನ್ನು ಮಂತ್ರಮುಗ್ಧರನ್ನು ಮಾಡುತ್ತಾರೆ. ಶಬ್ದಗಳಿಗಾಗಿ ಶಾಸ್ತ್ರಿಗಳವರು ತಡಕಾಡುವುದಿಲ್ಲ. ಶಬ್ದಗಳೇ ಅಹಮಹಮಿಕೆಯಿಂದ ಅವರನ್ನು ಹುಡುಕಿಕೊಂಡು ಧಾವಿಸಿ ಬರುತ್ತವೆ. ಅಸಂಬದ್ಧ ಪ್ರಳಾಪವಾಗಲಿ, ಅಪ್ರಸ್ತುತ ಪ್ರಸಂಗ ನಿರೂಪಣೆಯಾಗಲಿ ತಲೆಹಾಕದು. ಇದು ಶಾರದೆಯ ಪೂರ್ಣಪ್ರಸಾದವಲ್ಲದೆ ಮತ್ತೇನು? ಅರಮನೆಯಿಂದಲೂ ಗುರುಮನೆಯಿಂದಲೂ ಸಮಾನವಾಗಿ ಗೌರವವನ್ನು ಪಡೆದವರು ತುಂಬ ವಿರಳ. ಅಂಥ ಗೌರವಕ್ಕೆ ಶಾಸ್ತ್ರಿಗಳವರು ಪಾತ್ರರಾಗಿರುವುದು ಕನ್ನಡಿಗರಿಗೆ ಹೆಮ್ಮೆಯ ವಿಷಯ. ಭಾರತ ಪ್ರಭುತ್ವದಿಂದಲೂ ರಾಜ್ಯಪ್ರಭುತ್ವದಿಂದಲೂ ಸಾಹಿತ್ಯ ಅಕ್ಯಾಡಮಿಯಿಂದಲೂ ಬಿರುದು ಬಾವಲಿಗಳನ್ನು ಪಡೆದು ಶಾಸ್ತ್ರಿಗಳು ಕನ್ನಡ ತಾಯಿಯ ಹಿರಿಮೆಯನ್ನು ಎಲ್ಲೆಲ್ಲಿಯೂ ಬೆಳಸಿದ್ದಾರೆ, ಬೆಳಗಿಸಿದ್ದಾರೆ.

* * * * *

ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ತುಂಬ ರಸಿಕರು. ಅವರೊಡನೆ ಮಾತಾಡುವುದೇ ಒಂದು ರಸದೌತಣ. ಸ್ನೇಹಿತರನ್ನು ಮನೆಗೆ ಬರಮಾಡಿಕೊಂಡು ಸುಭೋಜ್ಯದಿಂದ ತೃಪ್ತಿಪಡಿಸುತ್ತಾರೆ. ತಾವು ಗಣಪತಿಯ ಒಕ್ಕಲೆಂದು ಸಾರುತ್ತಾರೆ. ಪರಮೇಶ್ವರನ ಪಂಚಮುಖಗಳಂತೆ ಶ್ರೀ ಶಾಸ್ತ್ರಿಗಳವರು ಕನ್ನಡ ನಾಡಿಗೆ ಶ್ರೇಯಸ್ಸನ್ನು ಒದಗಿಸುತ್ತ ಚಿರಕಾಲ ಬಾಳಲಿ ಎಂಬುದು ನನ್ನ ಹೃತ್ಪೂರ್ವಕವಾದ ಪ್ರಾರ್ಥನೆ.

* * * * *

**ಡಿ. ಕೆ. ಭೀಮಸೇನರಾಯರು**
ಲಿಂಗಂಪಲ್ಲಿ- ಹೈದರಾಬಾದ್
ದಿ. ೨೮-೮-೧೯೬೮.

### ಸುಧಾರಣಾ ಆಯೋಗದ ಅಧ್ಯಕ್ಷರೂ ಲೋಕಸಭಾಸದಸ್ಯರೂ ಆದ

## ಮಾನ್ಯಶ್ರೀ ಕೆ. ಹನುಮಂತಯ್ಯನವರ

# ಸಂದೇಶ

ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಕರ್ಣಾಟಕದ ಸೇವಾತತ್ಪರರೆಂದು ಎಲ್ಲರಿಂದಲೂ ಮೆಚ್ಚಿಗೆಯನ್ನು ಪಡೆದಿದ್ದಾರೆ. ಕರ್ಣಾಟಕದೇಶ, ಕನ್ನಡಜನ, ಕನ್ನಡ ಸಾಹಿತ್ಯ ಇವರ ಸವಿಸೇವೆಯನ್ನು ಸ್ವೀಕರಿಸಿ, ಬಹುಕಾಲ ಅಚ್ಚಳಿಯದೆ ಉಳಿಯುವ ಪ್ರಖ್ಯಾತಿಯನ್ನು ಇವರಿಗೆ ವರವನ್ನಾಗಿ ಇತ್ತಿದೆ.

ಬಿ. ಶಿವಮೂರ್ತಿ ಶಾಸ್ತ್ರಿಯವರು, ಕೀರ್ತನಕೇಸರಿಯಾಗಿ ಸಾರ್ವಜನಿಕರಂಗದಲ್ಲಿ ಪ್ರಾದುರ್ಭವಿಸಿ, ಈಗ 'ಕೀರ್ತಿಕೇಸರಿ' ಯಾಗಿ ಬೆಳಗುತ್ತಿದ್ದಾರೆ.

ಇವರ ಪಾಂಡಿತ್ಯವಿಶಾಲವಾದುದು, ವಿಚಾರಾತ್ಮಕವಾದುದು; ಇವರ ಭಾಷಣ ಪ್ರತಿಭಾಪೂರ್ಣವಾದುದು; ಇವರ ಬರೆವಣಿಗೆಯು ಗದ್ಯ ಪದ್ಯರಂಗಗಳನ್ನು ಆವರಿಸಿ ಮಹತ್ವದ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟು, "ಶರಣ ಸಾಹಿತ್ಯ" ಎಂಬ ತಿಳಿತೊರೆಯಾಗಿ ಹರಿಯುತ್ತಿದೆ.

ಪದ್ಮಶ್ರೀ ಶಿವಮೂರ್ತಿಶಾಸ್ತ್ರಿಗಳವರು, ಆಕಾರದಲ್ಲಿ ಅಭಿನಂದನೆಗೆ ಅರ್ಹವಾದ ವ್ಯಕ್ತಿ. ಸ್ವಭಾವದಲ್ಲಿ ಮಧುರ, ಉದಾರ, ಸರಳಗುಣ ಸಂಪನ್ನರು. ಕಾರ್ಯಪಟುತ್ವದಲ್ಲಿ ಕರ್ಮಯೋಗಿಯಂತಿದ್ದಾರೆ

ಇವರ ಷಷ್ಟ್ಯಬ್ದಶಾಂತಿಯು ಕನ್ನಡಕ್ಕೊಂದು ಬೃಹತ್ ಪ್ರಶಸ್ತಿಗ್ರಂಥವನ್ನು ಸಲ್ಲಿಸುತ್ತಿದೆ. ಹೆಜ್ಜೆ ಹೆಜ್ಜೆಗೂ ಮಾತು ಮಾತಿಗೂ, ಕನ್ನಡನಾಡಿಗೆ ಮೇಲ್ಮೆಯನ್ನುಂಟುಮಾಡುತ್ತಿರುವ ಶ್ರೀ ಶಾಸ್ತ್ರಿಗಳವರ ಶತಮಾನ ಸಮಾರಂಭವನ್ನು ಆಚರಿಸುವ ಆವಕಾಶವನ್ನು-ಸೊಬಗನ್ನು ಆ ಸದಾಶಿವನು ಕನ್ನಡಿಗರಿಗೆ ಕರುಣಿಸಲೆಂದು ನಾನು ಮನಸಾರ ಪ್ರಾರ್ಥಿಸುತ್ತೇನೆ

ಕೆ. ಹನುಮಂತಯ್ಯ
'ಕೆಂಗಲ್ ಕೃಪ'

॥ ಜಯ ಕರ್ಣಾಟಕ ॥

ದಿ. ೨೯-೮-೧೯೬೮.
ಬೆಂಗಳೂರು-೬

**ಮೈಸೂರು ಮಾನಸ ಗಂಗೋತ್ರಿಯ ಕನ್ನಡ ಪ್ರಾಧ್ಯಾಪಕರಾದ**

# ಪ್ರೊ|| ಡಿ. ಜವರೇಗೌಡರವರ

## ಸಂದೇಶ

ವೃತ್ತಿ ಪದ ಕೋಶ ಸಿದ್ಧತೆಯ ಸಂದರ್ಭದಲ್ಲಿ ಕನ್ನಡನಾಡಿನ ಹಲವಾರು ಪ್ರಮುಖ ಸ್ಥಾನಗಳನ್ನು ನೋಡುವ ಸದವಕಾಶ ೧೯೬೭ರ ಪ್ರಾರಂಭದಲ್ಲಿ ನನಗೆ ಲಭಿಸಿತ್ತು. ನಾನೂ ಡಾ|| ಹಾ. ಮಾ. ನಾಯಕರೂ ಸೊನ್ನಲಿಗೆಯಿಂದ ಬಸವಕಲ್ಯಾಣಕ್ಕೆ ಬಂದು, ಅಲ್ಲಿ ಉದ್ದಿಷ್ಟ ಕಾರ್ಯವನ್ನು ಮುಗಿಸಿ ರಾತ್ರಿ ಒಂಭತ್ತು ಗಂಟೆಯ ವೇಳೆಗೆ ಹುಮನಾಬಾದಿಗೆ ಹೋದೆವು. ಅದು ನಮಗೆ ತೀರ ಅಪರಿಚಯದ ಊರು. ಗುರುತಿನವರಾಗಿ ನರ ಪಿಳ್ಳೆಯೂ ಅಲ್ಲಿರಲಿಲ್ಲ. ವಸತಿ ಸೌಕರ್ಯಗಳಿಗಾಗಿ ನಾವು ಮೊದಲೇ ಯಾರಿಗೂ ಪತ್ರ ಬರೆದಿರಲಿಲ್ಲ. ಆ ಊರಿನ ಸ್ಥಿತಿಗತಿಗಳ ಮತ್ತು ಭೌಗೋಲಿಕ ರೂಪ ರೇಷೆಗಳ ವಿಷಯದಲ್ಲಿ ನಾವು ನಿರಾಸಕ್ತರಾಗಿದ್ದೆವು. ನಮ್ಮ ಹುದ್ದೆಯ ಸ್ಥಾನಮಾನಗಳು ಅಲ್ಲಿ ಪ್ರಯೋಜನಕ್ಕೆ ಬರುವಂತಿರಲಿಲ್ಲ. ರಾತ್ರಿ ನಿಲ್ದಾಣದಲ್ಲಿ ಬಸ್ಸಿಳಿದಾಗ ಕಣ್ಣಿದ್ದು ಕುರುಡರಾದೆವು. 'ನಿಲ್ದಾಣದ ಬಳಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಮನೆಇದೆ, ಅಲ್ಲಿ ಹೋಗಿ ಆ ಅಧಿಕಾರಿಗಳನ್ನು ಕಂಡು ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಹೆಸರು ಹೇಳಿದರೆ ನಿಮಗೆ ಎಲ್ಲ ಅನುಕೂಲವಾಗುತ್ತದೆ' ಎಂದು ಯಾರೋ ಕಲ್ಯಾಣದಲ್ಲಿ ಹೇಳಿದ್ದ ಮಾತು ನೆನಪಿಗೆ ಬಂದು ತುಸು ಸಮಾಧಾನವಾಯಿತು. ದಾರಿಯಲ್ಲಿ ಸಿಕ್ಕಿದ ಜನರನ್ನು ಕೇಳಿಕೊಂಡು ಸಾಹೇಬರ ಮನೆ ಪತ್ತೆ ಹಚ್ಚಿದೆವು. ಅವರು ಕ್ಲಬ್ಬಿನಲ್ಲಿದ್ದಾರೆಂದು ತಿಳಿದು ಅಲ್ಲಿಗೆ ಹೋದೆವು. ಹೊರಗೆ ನಿಂತುಕೊಂಡೇ ಅವರಿಗೆ ಹೇಳಿ ಕಳುಹಿಸಿದೆವು. ಆಟದ ಮಧ್ಯದಲ್ಲಿದ್ದುದರಿಂದಲೋ ಏನೋ ಅವರು ನಮ್ಮನ್ನೇ ಒಳಗೆ ಕರೆಸಿಕೊಂಡು ದೂರದಲ್ಲಿದ್ದ ಆಸನಗಳನ್ನು ತೋರಿಸಿದರು. ತುಸು ಹೊತ್ತಾದನಂತರ ಅವರು ನಮ್ಮ ಬಳಿಗೆದ್ದು ಬಂದರು. ನಾವು ನಮ್ಮ ಪ್ರವರಗಳನ್ನು ಬಿಚ್ಚಿ ಹೇಳಿದೆವು. ಅವರು ನಮ್ಮ ಮಾತಿಗೆ ಹೂಗುಡುತ್ತಿದ್ದರೇ ವಿನಾ ತುಟಿ ಪಿಟಕ್ಕೆನ್ನಲಿಲ್ಲ. ಆಗ ಬಿ. ಶಿವಮೂರ್ತಿ ಶಾಸ್ತ್ರಿಗಳ ನಾಮಸ್ಮರಣೆಯಾಯಿತು; ಅವರೇ ನಮ್ಮನ್ನವರ ಬಳಿಗೆ ಕಳಿಸಿದವರೆಂದು ತಿಳಿಸಿದೆವು. "ಸರಿ, ಸರಿ, ನನ್ನಿಂದೀಗ ಏನಾಗಬೇಕ್ರಿ" ಎಂದರು. ವಸತಿ ಸಿಕ್ಕಿದರೆ ಸಾಕೆಂದೆವು. ಪ್ರವಾಸಿ ಮಂದಿರದ ಮಾಲಿಗೆ ತಮ್ಮ ಹೆಸರು ಹೇಳಿದರೆ ಸಾಕೆಂದು ಕಳಿಸಿಕೊಟ್ಟರು. ಹೇಗೋ ಅಲ್ಲೊಂದು ಕೋಣೆಯನ್ನು ಸಂಪಾದಿಸಿಕೊಂಡೆವು. ಬೆಳಗಾಗುವುದರೊಳಗೆ ಆ ಅಧಿಕಾರಿಗಳ ಮನೆಯ ಜವಾನ ಬಂದು "ಸಾಹೇಬರು ನಿಮ್ಮನ್ನೆಲ್ಲ ಟಿಫಿನ್‌ಗೆ ಅಲ್ಲಿಗೇ ಬರಹೇಳಿದ್ದಾರೆ; ಟಿಫಿನ್ ಆದ ಅನಂತರ ನಿಮಗಾಗಿ ಅವರ ಜೀಪು ಸಿದ್ಧವಾಗಿರುತ್ತದೆ" ಎಂದು ಹೇಳಿದನು. ಆಗ ನಮಗಾದ ಆನಂದಕ್ಕೆ ಪಾರವೇ ಇರಲಿಲ್ಲ. ನಾಮದ ಮಹಿಮೆಯನ್ನು ಮಾತಾಡಿಕೊಳ್ಳುತ್ತಾ ನಾವು ಸಾಹೇಬರ ಮನೆಯ ಕಡೆಗೆ ಕಾಲು ಹರಿಸಿದೆವು. ಶಾಸ್ತ್ರಿಗಳು ಅವರಿಗೆ ಸರಕಾರಿ ಕೆಲಸದ ವಿಷಯದಲ್ಲಿ ತುಂಬಾ ಉಪಕಾರಮಾಡಿದ್ದರೆಂದು ಆಮೇಲೆ ನಮಗೆ ತಿಳಿಯಿತು.

ಇದು ಶಾಸ್ತ್ರಿಗಳ ವ್ಯಕ್ತಿತ್ವ !

ಎಂಥ ದೊಡ್ಡ ಗುಂಪಿನಲ್ಲಾದರೂ ಶಾಸ್ತ್ರಿಯವರು ಎದ್ದಾಳು. ಕಂಬಿಸೇಟದ, ಕೊರಳು ಸುತ್ತಿದ ಶಲ್ಯದ, ನೀಳಂಗಿಯ, ಕೈಬೆತ್ತದ ಆಜಾನುಬಾಹುವಿನ ಸ್ಥೂಲಕಾಯದ ಆ ವ್ಯಕ್ತಿ ಎಷ್ಟು ಜನರ ನಡುವಿದ್ದರೂ ಗುರುತಿಸಬಹುದು. ದೈಹಿಕ ಸ್ಥೂಲತೆ ಅವರ ಕಾರ್ಯಕಲಾಪಗಳಿಗೆ ಭಂಗತಂದಿಲ್ಲ. ಅವರ ಕಾರ್ಯಕ್ಷೇತ್ರದ ವೈಶಾಲ್ಯವನ್ನು ಗಮನಿಸಿ

ದಾಗ, ಅವರ ಪರ್ಯಟನಯಾತ್ರೆಯನ್ನು ಲಕ್ಷಿಸಿದಾಗ, ಅವರು ಭಾಗವಹಿಸುವ ಸಭೆಗಳನ್ನು ಲೆಕ್ಕಹಾಕಿದಾಗ, ಅವರ ಸ್ಥೂಲತೆ ಮರೆತುಹೋಗಿ ಅವರ ಚಟುವಟಿಕೆಯ ಬಗೆಗೆ ಅಚ್ಚರಿಗೊಳ್ಳುವಂತಾಗುತ್ತದೆ. ಸ್ಥೂಲಕಾಯವು ಅಪಾಯಕಾರಿಯಲ್ಲ ಅನಿಸುತ್ತದೆ.

ಕಾಲೇಜು ಮೆಟ್ಟಲು ಹತ್ತದೆ ಕೇವಲ ಸ್ವಪ್ರೇರಣೆ, ಸ್ವಶಕ್ತಿ, ಸ್ವಪ್ರಯತ್ನಗಳಿಂದ ಅಗಾಧ ಪಾಂಡಿತ್ಯವನ್ನು ಸಂಪಾದಿಸಿ, ನಿರರ್ಗಳವಾದ ಲೇಖನ ಸಾಮರ್ಥ್ಯವನ್ನು ಗಳಿಸಿ, ವ್ಯವಹಾರ ಲೋಕದ ಹಲವು ಕ್ಷೇತ್ರಗಳಲ್ಲಿ ದಕ್ಷತೆಯಿಂದ ಕಾರ್ಯ ನಿರ್ವಹಿಸಿ ಕೀರ್ತಿಭಾಜನರಾಗಿರುವ ಭೀಷ್ಮವ್ಯಕ್ತಿಗಳ ವಿರಳ ಶ್ರೇಣಿಯಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಅಗ್ರಗಣ್ಯರು. ಶಾಲಾಮಾಸ್ತರಾಗಿ ಬದುಕು ಪ್ರಾರಂಭಿಸಿ, ಸ್ವಂತ ವ್ಯವಸಾಯದಿಂದ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯಗಳಲ್ಲಿ ಪರಿಣತಿಯನ್ನು ಸಾಧಿಸಿ, ತಮ್ಮ ವಿಕ್ರಮದ ವಿಸ್ತಾರಕ್ಕೆ ಅದು ಸಾಲದೆಂಬಂತೆ ಕೀರ್ತನಕಲೆಯನ್ನು ವರಿಸಿ ವಶಪಡಿಸಿಕೊಂಡು ಕರ್ಣಾಟಕದ ಮೂಲೆಮೂಲೆಗಳಲ್ಲೆಲ್ಲ ಕಲಾಸುಧೆಯಿಂದ ಜನಮನವನ್ನು ತಣಿಸುವುದರ ಜತೆಗೆ ಕರ್ಣಾಟಕ ಏಕೀಕರಣ ಪ್ರಜ್ಞೆಯನ್ನು ಜನರಲ್ಲಿ ಜಾಗ್ರತಗೊಳಿಸಿ 'ಕೀರ್ತನ ಕೇಸರಿ' ಎಂಬ ಬಿರುದನ್ನು ಸಾರ್ಥಕಪಡಿಸಿಕೊಂಡು, ಸಾಹಸ ಪ್ರಿಯರಾಗಿ, ವ್ಯವಹಾರ ಚತುರರಾಗಿ, ಸ್ವಯಂ ಪತ್ರಿಕೋದ್ಯಮಿಯಾಗಿ, ಶ್ರೇಷ್ಠ ವಾಗ್ಮಿಗಳಾಗಿ, ವಾಕ್ಕೋವಿದರಾಗಿ, ಸಂಶೋಧಕರಾಗಿ, ಕನ್ನಡ ನಾಡುನುಡಿಗಳ ಉತ್ಥಾನಕ್ಕಾಗಿ ನಿರಂತರ ಕ್ರಿಯಾಶೀಲರಾಗಿ ದುಡಿದ ಸತ್ವಾನುಭವದ ವಿದ್ವಾಂಸರು ಬಿ. ಶಿವಮೂರ್ತಿ ಶಾಸ್ತ್ರಿಗಳು.

ಶಾಸ್ತ್ರಾಧ್ಯಯನ, ಸಜ್ಜನಸಹವಾಸ, ಗುರುಬೋಧೆ, ಪ್ರಯೋಗ ದರ್ಶನ, ವೀಕ್ಷಣೆ, ಪರ್ಯಟನ ಮತ್ತು ಸುಜ್ಞಾನಗಳು ಜ್ಞಾನಸಾಧನೆಯ ಸಪ್ತ ಸಾಧನಗಳು. ಶಾಸ್ತ್ರಿಗಳು ಈ ಮಾರ್ಗಗಳಲ್ಲಿ ಜ್ಞಾನಾರ್ಜನೆ ಮಾಡಿದ್ದಾರೆ, ಅನುಭವ ಶ್ರೀಮಂತರಾಗಿದ್ದಾರೆ. ಅವರು ಮೂಲೆಕೊಂಪೆಗಳನ್ನು ಸಹ ಬಿಡದೆ ಕನ್ನಡನಾಡನ್ನೆಲ್ಲ ಅನೇಕ ಸಾರಿ ಸುತ್ತಿದ್ದಾರೆ ; ತರಹೇವಾರಿ ಜನರ ಸ್ನೇಹ ಪರಿಚಯಗಳನ್ನು ಸಂಪಾದಿಸಿದ್ದಾರೆ ; ಅವರ ನಡೆನುಡಿಗಳನ್ನು, ವ್ಯವಹಾರ ಸಂಪ್ರದಾಯಗಳನ್ನು, ಕುಲಗೋತ್ರಗಳನ್ನು, ರೀತಿನೀತಿಗಳನ್ನು, ಆಹಾರ ವಿಹಾರಗಳನ್ನು ಗಂಟೆಗಟ್ಟಲೆ ವಿವರಿಸುತ್ತಾರೆ. ಪರ್ಯಟನದಿಂದ ಜ್ಞಾನಲಾಭವಾಗುತ್ತದೆ ಎನ್ನುವ ಗುಟ್ಟನ್ನು ಅವರು ಪ್ರಯೋಗಪೂರ್ವಕವಾಗಿ ಅರಿತಿದ್ದಾರೆ. ಕನ್ನಡ ನಾಡಿನಲ್ಲಿ ಅವರು ನೋಡದ ಊರಿಲ್ಲ, ಕಾಣದ ಕ್ಷೇತ್ರವಿಲ್ಲ, ಸಂಧಿಸದ ಪ್ರಮುಖರಿಲ್ಲ. ನಾಡುನುಡಿಗಳ ಅಭಿಮಾನ ಅವರನ್ನು ಗಡಿಪ್ರದೇಶಗಳಿಗೆಲ್ಲ ಕೊಂಡೊಯ್ದಿದೆ. ಅಲ್ಲಿನ ಕಷ್ಟನಷ್ಟಗಳನೆಲ್ಲ ಸ್ವಸಂತೋಷದಿಂದ ಅನುಭವಿಸುವಂತೆ ಮಾಡಿದೆ.

ಕನ್ನಡನಾಡಿನ ಏಕೀಕರಣಕ್ಕಾಗಿ ಅವರಂತೆ ತಲೆಕೆಡಿಸಿಕೊಂಡವರು ವಿರಳ. ಹರಿದು ಹಂಚಿಹೋಗಿದ್ದ ಕನ್ನಡನಾಡು ಒಂದಾಗದೆ ಕನ್ನಡ ಜನಕ್ಕೆ ಗತ್ಯಂತರವಿಲ್ಲವೆಂದು ಅವರು ಭಾವಿಸಿದರು. ಅನ್ಯಭಾಷಾ ಪ್ರದೇಶಗಳಲ್ಲಿ ದಾಸೀಪುತ್ರರಂತೆ ಪರಿತಪಿಸುತ್ತಿದ್ದ ಕನ್ನಡಿಗರ ಗೋಳನ್ನವರು ಕಣ್ಣಾರೆ ಕಂಡಿದ್ದರು. ನೆರೆಹೊರೆಯ ಜನರ ಮಲತಾಯಿ ಧೋರಣೆಯಿಂದ ಕನ್ನಡಭಾಷೆ ನುಗ್ಗಾಗುತ್ತಿದ್ದುದನ್ನವರು ಕಂಡು ಕ್ರುದ್ಧರಾಗಿದ್ದರು ; ಕನ್ನಡ ಪ್ರದೇಶದಲ್ಲಿ ತಮ್ಮ ಭಾಷೆಯ ಜನರನ್ನು ನಾಟಿಹಾಕಿ, ಕಾಲಕ್ರಮೇಣ ಕನ್ನಡ ಭೂಮಿಯನ್ನು ಒತ್ತರಿಸಿಕೊಂಡು ಅನ್ಯಾಯವೆಸಗುತ್ತಿದ್ದ ಅಕ್ಕಪಕ್ಕದ ಜನರನ್ನು ಕಂಡು ಕೆರಳುತ್ತಿದ್ದರು. ಒಡೆದು ಆಳುವ ಇಕಮತ್ತನ್ನು ಕೊಂಡುಕೊಂಡಿದ್ದ ಆಂಗ್ಲರು ಭಾಷಾ ಪ್ರದೇಶಗಳನ್ನು ಛಿದ್ರವಿಚ್ಛಿದ್ರಗೊಳಿಸಿ, ವಿವಿಧ ಭಾಷೆಗಳ ಜನರನ್ನು ಬಲಾತ್ಕಾರವಾಗಿ ಒಟ್ಟು

ಗೂಡಿಸಿ, ಅವರಲ್ಲಿ ಐಕ್ಯವು ಮೂಡದಂತೆ, ಸಾಮರಸ್ಯ ಕುದುರದಂತೆ, ಅಸಹಜವಾದ ರಾಜಕೀಯ ವಿಭಾಗಗಳನ್ನು ಸೃಷ್ಟಿಸಿಕೊಂಡಿದ್ದರು, ದೇಶಾಭಿಮಾನಕ್ಕೆ ಮೊದಲು ಭಾಷಾಭಿಮಾನವೆಂಬುದನ್ನೂ, ಮತ ಮತ್ತು ಭಾಷೆ ಜನತೆಯ ಹೃದಯವನ್ನೊಂದು ಮಾಡುವ ಶಕ್ತಿವಿಶೇಷಗಳೆಂಬುದನ್ನೂ ಆ ಜನ ಸ್ಪಷ್ಟವಾಗಿ ಅರಿತಿದ್ದರು. ಮತೀಯ ಹೋರಾಟ ಜೀವಂತವಾಗಿರುವತನಕ, ಏಕಭಾಷಾಜನ ಒಂದಾಮವ ತನಕ ತಮ್ಮ ಕ್ಷೇಮ ಸುಭದ್ರವೆಂದು ಅವರು ತಿಳಿದಿದ್ದರು. ಒಂದು ಭಾಷೆಯನ್ನು ಮಾತಾಡುವ ಜನ ಒಟ್ಟುಗೂಡಿದರೆ ಆಡಳಿತ ಸುಗಮವಾಗುತ್ತದೆ, ಆಡಳಿತದ ವೆಚ್ಚ ಕಡಿಮೆಯಾಗುತ್ತದೆ,' ಜನರ ಹೃದಯ ಒಂದಾಗುತ್ತದೆ ಎಂಬ ಸರಳತತ್ತ್ವವು ಸಾಮಾನ್ಯ ಮತಿಗೂ ಸ್ಪಷ್ಟಗೋಚರ. ಇದನ್ನರಿತ ಬಿ. ಶಿವಮೂರ್ತಿ ಶಾಸ್ತ್ರಿಗಳು ತ್ರಿಕರಣಪೂರ್ವಕವಾಗಿ ಏಕೀಕರಣ ಚಳುವಳಿಯಲ್ಲಿ ಧುಮುಕಿ, ನಾನಾ ರೀತಿಯಲ್ಲಿ ೪೦ ವರ್ಷಗಳಿಂದ ಶ್ರಮಿಸಿದರು: ಕನ್ನಡನಾಡಿನಲ್ಲಿ ಸೇರ್ಪಡೆಯಾಗದೆ ಹೊರಗುಳಿದಿರುವ ಪ್ರದೇಶಗಳ ಜನರಿಗಾಗಿ ಅವರು ತುಂಬ ಪೇಚಾಡುತ್ತಾರೆ ಈಗಲೂ ಆಗಾಗ್ಗೆ ಗದ್ದಲ ಮಾಡುತ್ತಿರುತ್ತಾರೆ. ಗಡಿನಾಡಿಗೆ ಹೋಗಿ ಬರುತ್ತಾರೆ. ಅಲ್ಲಿನ ಕನ್ನಡಿಗರನು. ಎಚ್ಚರಿಸುತ್ತಾರೆ. ಕರ್ಣಾಟಕವು ಸರ್ವಾಂಗಸುಂದರವಾಗಿರಬೇಕೆಂಬುದು ಅವರ ಜೀವನದ ಹೆಗ್ಗುರಿ.

ಐದು ಕಡೆಯಿಂದ ಐದು ಭಾಗಗಳು ಬಂದು ಸೇರಿ ಕನ್ನಡನಾಡು ಬಾಹ್ಯದಲ್ಲಿ ಒಂದಾಯಿತು; ಆದರೆ ಆಂತರಂಗಿಕವಾಗಿ ಅವು ಬಹುದಿನಗಳ ತನಕ ಬೇರೆಬೇರೆಯಾಗಿಯೇ ಉಳಿದಿದ್ದುವು. ಜನರಲ್ಲಿ ದ್ವೇಷ ಮಾತ್ಸರ್ಯಗಳು ಹೊಗೆಯಾಡುತ್ತಿದ್ದುವು; ಸಂಶಯ ಪಿಶಾಚಿ ಅವರ ಮನಸ್ಸಿನ ತೂಕವನ್ನು ಹದಗೆಡಿಸಿತ್ತು. ಶಾಸ್ತ್ರಿಗಳೂ ಅವರಂಥ ಕೆಲವೇ ಕೆಲವು ಜನರೂ ಎಲ್ಲ ಕಡೆಯುವರಿಗೂ ಬೇಕಾದವರಾಗಿ, ಎಲ್ಲರಿಗೂ ರಾಯಭಾರಿಗಳಾಗಿ, ಎಲ್ಲರ ಹೃದಯಗಳನ್ನೂ ಬೆಸೆಯಲು ಪ್ರಯತ್ನಿಸಿ ಸಾಮರಸ್ಯ ರೂಢಿಸುವುದರಲ್ಲಿ ಯಶಸ್ವಿಯಾದರು. ಅವರಿಗೆ ಇವರು ಹಳೆಯ ಮೈಸೂರಿನ ಜನ, ಅವರು ಧಾರವಾಡದ ಮಂದಿ ಎಂಬ ಭೇದಭಾವವಿಲ್ಲ; ಅವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು, ಶ್ರೇಷ್ಠರು, ವಿಶ್ವಾಸ ಭಾಜನರು, ಕನ್ನಡ ತಾಯಿಯ ಮಕ್ಕಳು. ಶಾಸ್ತ್ರಿಗಳು ಹುಟ್ಟಿನಿಂದ ವೀರಶೈವರು; ನಡೆವಳಿಯಲ್ಲಿ ಆಚಾರವಂತರು; ಆದರೂ ಅವರ ಹೃದಯ ವಿಶಾಲವಾದುದು. ಅವರು ಎಲ್ಲ ಜಾತಿಯವರನ್ನೂ ಔದಾರ್ಯದಿಂದ ಕಾಣುತ್ತಾರೆ; ಕೈಲಾದರೆ ಎಲ್ಲರಿಗೂ ಉಪಕಾರ ಮಾಡುತ್ತಾರೆ. ಆದ್ದರಿಂದ ಎಲ್ಲ ಜಾತಿಯ ಜನರೂ ಅವರನ್ನು ಗೌರವಿಸುತ್ತಿದ್ದಾರೆ. ಎಲ್ಲ ಪಂಥಗಳಲ್ಲಿಯೂ ಅವರಿಗೆ ಆಪ್ತೇಷ್ಟರಿದ್ದಾರೆ. ಅಮುಚ್ಚುಮರೆ ಅವರ ಜಾಯಮಾನಕ್ಕೆ ಹೇಳಿಸಿದ್ದಲ್ಲ ಅರಬ ಮನಸ್ಸಿನಲ್ಲಿ ಗುಟ್ಟಿಗೆ ಸ್ಥಾನರಲ್ಲ. ಮನಸ್ಸಿಗೆ. ವಂದದ್ದನ್ನು ಕೂಡಲೇ ಓಕರಿಸಿ ಬಿಡುವುದೇ ಅವರ ಸಹಜಗುಣ. ಎಲ್ಲ ಮತ ಪಂಥ ಅನ್ಯಜಾತಿಯವರೂ ಅವರ ಬಳಿಗೆ ಶಿಫಾರಸ್ಸಿಗೆ ಹೋಗುತ್ತಾರೆ. ಆ ಅಭ್ಯರ್ಥಿಗೆದುರಾಗಿ ಯಾರಾದರೂ ಲಿಂಗಾಯತರಿದ್ದರೆ ಅವರು ಹೇಳಿಬಿಡುತ್ತಾರೆ. 'ನೋಡ್ರಿ, ನಿಮಗೆ ಕೆಲ್ಸ ಆಗ್ಬೇಕು. ಆದರೆ ನನಗೆ ಸಂತೋಷ. ಅಲ್ಲೊಬ್ಬ ಲಿಂಗಾಯಿತ ಸೇರ್ಕ್ಕೊಂಡನ್ನೆ. ನಾನು ನಿಮಗೆ ಶಿಫಾರಸ್ಸು ಮಾಡಿದರೆ ಅವನು ನನ್ನನ್ನು ಬಯ್ತಾನೆ. ಅದರೂ ಒಂದ್ಮಾತು ಹೇಳಿ ನೋಡ್ತೀನಿ. ಜಾತಿಗಿಂತ ನೀತಿ ಮುಖ್ಯ, ನಿಮ್ಮ ದೈವ, ಒನ್ಮೊನ್ಮೆ ಹೀಗೆ ಹೇಳಿದರೂ ವೀರಶೈವೇತರರಿಗೆ ಹಲವು ಬಾರಿ ಉದಾರವಾಗಿ ಸಹಾಯ ಮಾಡಿದ್ದಾರೆ.

ಅವರ ಯಶಸ್ಸಿಗೆ ಕಾರಣ ಹಿಂದೆ ಕೀರ್ತನ ಕಲೆಯಾದರೆ ಈಗ ಭಾಷಣ ಕಲೆಯಾಗಿದೆ. ಅವರ ಕೀರ್ತನೆ-ಹರಿಕಥೆಗಳನ್ನು ಹಿಂದೆ ಕೇಳಿದ್ದ ಜನರು ಇಂದಿಗೂ ಗೌರವದಿಂದ ಅವರನ್ನು ನೆನಸಿಕೊಳ್ಳುತ್ತಾರೆ; ಅವರು ಅವುಗಳನ್ನು ಬಿಟ್ಟದ್ದರಿಂದ ಕನ್ನಡ ಭಾಷೆಗೆ ಭಾರಿ ನಷ್ಟವಾಯಿತೆಂದು ಸಂಕಟದಿಂದ

ಹೇಳುತ್ತಾರೆ. ಕೀರ್ತನೆಯ ಸ್ಥಳವನ್ನೀಗ ಭಾಷಣ ಆಕ್ರಮಿಸಿಕೊಂಡಿದೆ. ಅವರು ವಾಕ್ಕೋವಿದರು; ವೇದಿಕೆಯ ಮೇಲೆ ನಿಂತರೆಂದರೆ ಅವರ ಬಾಯಿಂದ ವಾಗ್ಧಾರೆ ನಿರರ್ಗಳವಾಗಿ ತಡೆಬಡೆಯಿಲ್ಲದೆ ಹರಿಯುತ್ತದೆ. ದನಿಯ ಏರಿಳಿತಗಳಿಂದ ಕಥೋಪಕಥೆಗಳಿಂದ ಚಾಟೂಕ್ತಿ ಹಾಸ್ಯೋಕ್ತಿಗಳಿಂದ ಸಭೆಯನ್ನು ವಶಪಡಿಸಿಕೊಳ್ಳುತ್ತಾರೆ. ಕನ್ನಡ ಭಾಷೆಯ ಸಂಪತ್ತಿಗೆ ಅವರ ವಾಗ್ಮಿತೆ ಅತ್ಯುತ್ತಮ ನಿದರ್ಶನವೆಂದು ಹೇಳಬಹುದು. ಎಂಟೊಂಭತ್ತು ವರ್ಷಗಳಕಾಲ ಶಾಸ್ತ್ರಿಗಳು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದುಕೊಂಡು ತಮ್ಮ ಕರ್ತೃತ್ವ ಶಕ್ತಿಯನ್ನು ಮೆರೆದಿದ್ದಾರೆ. ರಿಕ್ತತೆಯ ಸಂಕಟದಿಂದ ನರಳುತ್ತಿದ್ದ ಕನ್ನಡ ಕೋಶಕ್ಕೆ ಆರ್ಥಿಕ ಚೈತನ್ಯವನ್ನು ನೀಡಿ, ಅದಕ್ಕೊಂದು ರೂಪ ಕೊಟ್ಟರು. ಸರ್ಕಾರದೊಡನೆ ಹೋರಾಡಿ, ಸಾಕಷ್ಟು ಹಣಪಡೆದು ಕೋಶದ ಕೆಲಸ ಸಲೀಸಾಗಿ ಮುಂದುವರಿಯುವಂತೆ ವ್ಯವಸ್ಥೆ ಮಾಡಿದ ಕೀರ್ತಿ ಶ್ರೀ ಶಾಸ್ತ್ರಿಯವರಿಗೆ ಸಲ್ಲಬೇಕು. ಅವರು ತಮ್ಮ ಅಧಿಕಾರಾವಧಿಯಲ್ಲಿ ಕೋಶದ ವ್ಯವಹಾರಗಳಲ್ಲಿ ಎಂದೂ ತಲೆಹಾಕಿದವರಲ್ಲ. ಸಮಸ್ಯೆಗಳಿದ್ದರೆ ಪ್ರಧಾನ ಸಂಪಾದಕರೊಡನೆ ಕಲೆತು ಸೌಹಾರ್ದದಿಂದ ಅವುಗಳನ್ನು ಬಗೆಹರಿಸುತ್ತಿದ್ದರು. ಅವರಲ್ಲೆಂದೂ ಜಾತೀಯತೆಯ ಸಣ್ಣತನವಾಗಲಿ, ಹೃದಯದ ಕುಬ್ಜತನವಾಗಲಿ ಸುಳಿಯುತ್ತಿರಲಿಲ್ಲ. ಅವರ ಸಂಘಟನಾ ಸಾಮರ್ಥ್ಯಕ್ಕೆ ಅವರು ವರ್ಷಂಪ್ರತಿ ತಪ್ಪದೆ ನಡೆಸುತ್ತಿದ್ದ ಸಾಹಿತ್ಯ ಸಮ್ಮೇಲನಗಳೇ ಸ್ಪಷ್ಟಸಾಕ್ಷಿ: ಪರಿಷತ್ತಿನಲ್ಲಿ ನಡೆಯುತ್ತಿದ್ದ ಚಟುವಟಿಕೆಗಳೇ ಸಾಕ್ಷಿಯಾಗಿವೆ.

ಪತ್ರಿಕೋದ್ಯಮ ಅವರ ಸಾಹಸದ ಪ್ರತೀಕವಾಗಿದೆ. ಏಕಾಂಗವೀರರಾಗಿ ಒಂದಲ್ಲ, ಎರಡು ಪತ್ರಿಕೆಗಳನ್ನು ನಡೆಸಿದರು ಈಗ ಒಂದು ನಿಂತು ಹೋಗಿ, ಉಳಿದಿರುವ ಮಾಸಿಕ ಬೆಳ್ಳಿಯ ಹಬ್ಬವನ್ನು ಆಚರಿಸಿ ಚಿನ್ನದ ಹಬ್ಬದ ಕಡೆಗೆ ಮುಖಮಾಡಿದೆ. ಕನ್ನಡ ನಾಡಿನಲ್ಲಿ ಇಪ್ಪತ್ತೈದು ವರ್ಷಗಳಿಗೆ ಮಿಗಿಲಾಗಿ ಒಂದು ಪತ್ರಿಕೆಯನ್ನು ಯಶಸ್ವಿಯಾಗಿ ನಡೆಸಿದ ಯಾವ ವ್ಯಕ್ತಿಯೇ ಆಗಲಿ ಶ್ಲಾಘನಾರ್ಹ. ಏಕಾಕಿಯಾಗಿ ಲೇಖನಗಳನ್ನು ಸಂಗ್ರಹಿಸಿ, ಕರಡು ತಿದ್ದಿ, ಅಚ್ಚು ಮಾಡಿಸಿ, ಪ್ರಸಾರ ಮಾಡುವುದು ಕಷ್ಟಕರವೇ ಸೈ. ವೀರಶೈವ ಮತ ಸಾಹಿತ್ಯ ಸಂಸ್ಕೃತಿಗಳಿಗೆ ಸಂಬಂಧಿಸಿದ ಹಾಗೂ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಅನೇಕ ಉಪಯುಕ್ತ ಲೇಖನಗಳು "ಶರಣ ಸಾಹಿತ್ಯ" ದಲ್ಲಿ ಬೆಳಕು ಕಂಡವು. ಮಹತ್ವದ ಸಂಶೋಧನೆಗಳು ಹೊರಗೆ ಬಂದುವು. ಅದೊಂದು ಸುಪ್ರೌಢ ಮಾಸಿಕವೆನಿಸಿ ವಿದ್ವಾಂಸರಿಗೆ ರಸದೌತಣವೆನಿಸಿದೆ.

ವೀರಶೈವ ಸಾಹಿತ್ಯಕ್ಕೆ ಸಂಬಂಧಿಸಿದ ಶಾಸ್ತ್ರಿಯವರ ಪಾಂಡಿತ್ಯ ಸ್ತುತ್ಯರ್ಹವಾದದ್ದು. ವೀರಶೈವ ಕವಿ, ಯಾವ ಕಾಲ ದೇಶದವನೇ ಆಗಿರಲಿ, ಅವನ ಕುಲ, ಗೋತ್ರ, ಕಾಲ, ಕಾವ್ಯ, ದೇಶಾದಿ ವಿಚಾರಗಳನ್ನು ವಿವರ ವಿವರವಾಗಿ ಒಂದೇ ಉಸಿರಿಗೆ ಹೇಳಿಬಿಡುತ್ತಾರೆ. ಅನೇಕ ಕವಿಗಳ ಪದ್ಯಗಳನ್ನು ಕಂಠಪಾಠಮಾಡಿರುವ ಅವರ ಸ್ಮರಣಶಕ್ತಿಗೆ ಬೆರಗಾಗುತ್ತೇವೆ. ಅನೇಕ ಕವಿಗಳ ಜನ್ಮಸ್ಥಳ, ಸಮಾಧಿಸ್ಥಳಗಳಿಗೆ ಅತ್ಯಂತ ಶ್ರದ್ಧೆಯಿಂದ ಹೋಗಿ ನೋಡಿಕೊಂಡು ಬಂದಿದ್ದಾರೆ. ಅವುಗಳ ಚಿತ್ರಗಳನ್ನು ತೆಗೆಸಿ ಪಡಿಯಚ್ಚುಗಳನ್ನು ಮಾಡಿಸಿ ಪ್ರಕಟಿಸಿದ್ದಾರೆ. ರಾಘವಾಂಕ ಕವಿ, ಪಾಲ್ಕುರಿಕೆ ಸೋಮನಾಥ, ಷಡಕ್ಷರದೇವ ಮೊದಲಾದವರ ಸಮಾಧಿಗಳನ್ನು ಪತ್ತೆಹಚ್ಚಿದುದು ಇಲ್ಲಿ ಸ್ಮರಣಾರ್ಹ. ವೀರಶೈವಧರ್ಮಕ್ಕೆ ಸಂಬಂಧಿಸಿದ ಶಾಸ್ತ್ರವಿಷಯಗಳಲ್ಲಿ ಶಾಸ್ತ್ರಿಗಳಿಗೆ ಸಾಕಷ್ಟು ಪರಿಣತಿ ಇದೆ. ವೀರೇಶ ಚರಿತೆ, ಪುರಾತನರ ತ್ರಿವಿಧಿ, ಮನೋವಿಜಯಂ, ಗಣಸಹಸ್ರನಾಮ, ಷಡಕ್ಷರ ಮಂತ್ರಮಹಿಮೆ ಮೊದಲಾದ ಹಲವಾರು ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ; ಸರ್ವಜ್ಞ ಕವಿ, ಷಡಕ್ಷರದೇವ, ಮೊಗ್ಗೆಯ ಮಾಯಿದೇವ, ಬಸವೇಶ್ವರ, ತೋಂಟದ ಸಿದ್ಧಲಿಂಗಯತಿ ಮೊದಲಾದವರನ್ನು ಕುರಿತು ವಿಮರ್ಶಾತ್ಮಕ ಗ್ರಂಥಗಳನ್ನು ರಚಿಸಿದ್ದಾರೆ; ಕರ್ಣಾಟಕ ಸಂದರ್ಶನ, ವೀರಶೈವ

ಸಾಹಿತ್ಯ ಮತ್ತು ಇತಿಹಾಸ, ವೀರಶೈವ ಮಹಾಪುರುಷರು, ಬಿದನೂರು ಶಿವಪ್ಪನಾಯಕ, ಮಾದೇಶ್ವರ ಚರಿತೆ, ಮಹಾಕವಿ ಷಡಕ್ಷರದೇವ, ದುಂಬಿ-ನಾದ ಮೊದಲಾದ ಸ್ವತಂತ್ರ ಗ್ರಂಥಗಳು ಅವರ ಪಾಂಡಿತ್ಯಕ್ಕೆ ನಿದರ್ಶನವಾಗಿವೆ; ಅವರ ಮನೋಧರ್ಮ ಸಂಪ್ರದಾಯಪರವಾದದ್ದಾದರೂ, ಆಧುನಿಕ ರೀತಿಯಲ್ಲಿ ಕವನಗಳನ್ನು ಕಟ್ಟಿದ್ದಾರೆ. ಕೊನೆ ಮೊದಲಿಲ್ಲದ ಲೌಕಿಕ ವ್ಯವಹಾರಗಳನ್ನು ಕಟ್ಟಿಕೊಂಡಿದ್ದರೂ ಇಷ್ಟು ಮೊತ್ತದ ಸಾಹಿತ್ಯ ಸೃಷ್ಟಿಯಿಂದ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಸರ್ಕಾರದ ಪ್ರಕಟನೆಗಳಾದ ಜೈಮಿನಿ ಭಾರತ, ಹರಿಭಕ್ತಿಸಾರ, ಕನಕದಾಸರ ಕೀರ್ತನೆಗಳು ಮೊದಲಾದ ಗ್ರಂಥಗಳನ್ನು ಸಂಪಾದಿಸಿ ವಿದ್ವತ್ಪೂರ್ಣ ಪ್ರಸ್ತಾವನೆಯೊಡನೆ ಪ್ರಕಟಿಸಿದ್ದಾರೆಂಬುದು ಇಲ್ಲಿ ಸ್ಮರಣಾರ್ಹವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕನ್ನಡ ನಿಘಂಟು ಸಂಪಾದಕ ಮಂಡಲಿ ಸದಸ್ಯರಾಗಿದ್ದಾರೆ. ಕರ್ಣಾಟಕ ಕವಿಚರಿತೆ (ಭಾಗ-೧) ಪ್ರಕಟಿಸಿದ್ದಾರೆ. ಸೋಮೇಶ್ವರ ಶತಕ, ಗಮಕಕಾವ್ಯಮಂಜರಿ ಸಂಪಾದಿಸಿ ಪ್ರಕಟಿಸಿದ್ದಾರೆ. ಕನ್ನಡನುಡಿ-ಸಾಹಿತ್ಯ ಪರಿಷತ್ಪತ್ರಿಕೆಗಳ ಸಂಪಾದಕರಾಗಿ ಕೆಲಕಾಲ ಚೆನ್ನಾಗಿ ನಡೆಸಿದ್ದಾರೆ.

ಗ್ರಂಥಸಂಗ್ರಹಾಕಾಂಕ್ಷೆಯು ಪಾಂಡಿತ್ಯ ಸಾಧನೆಯ ಮೊದಲ ಮೆಟ್ಟಿಲು. ಹೋದೆಡೆಯಲ್ಲೆಲ್ಲಾ ಪುಸ್ತಕಗಳನ್ನು ಸಂಗ್ರಹಿಸುವ ಚಟ ಅವರ ಸ್ವಭಾವದ ಭಾಗವಾಗಿ ಹೋಗಿದೆ. ಪ್ರಾಚೀನ ಗ್ರಂಥಗಳ ಅನೇಕ ಮುದ್ರಣಗಳು ಅವರಲ್ಲಿ ದೊರೆಯುತ್ತವೆ. ಪದ್ಯವಾಗಲಿ, ಗದ್ಯವಾಗಲಿ, ಕಥೆಯಾಗಲಿ, ಕಾದಂಬರಿಯಾಗಲಿ, ಪ್ರಬಂಧವಾಗಲಿ, ನಾಟಕವಾಗಲಿ, ವಿಮರ್ಶೆಯಾಗಲಿ, ವಿಜ್ಞಾನವಾಗಲಿ, ಎಲ್ಲ ಗ್ರಂಥಗಳೂ ಅವರ ಭಂಡಾರಕ್ಕೆ ಬಂದು ಬೀಳಬೇಕು. ಅವರ ಗೀಳು ಓಲೆಯ ಪ್ರತಿಗಳ ಕಡೆಗೂ ಹರಿದಿದೆ. ಕನ್ನಡದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಸಾಕಾಗುವಷ್ಟು ಗ್ರಂಥಭಂಡಾರ ಅವರಲ್ಲಿದೆ. ತಾವು ಸಂಗ್ರಹಿಸಿದ ಪುಸ್ತಕಗಳನ್ನು ಮೊದಲಿಂದ ಕೊನೆಯವರೆಗೆ ತಿರುವಿಹಾಕುತ್ತಾರೆ; ಅವುಗಳ ಸಾರಸಂಗ್ರಹವನ್ನು ಶರಣ ಸಾಹಿತ್ಯದಲ್ಲಿ ಅಚ್ಚುಮಾಡಿಸುತ್ತಾರೆ. ಅವರು ಕೇವಲ ಅಲಂಕಾರಕ್ಕಾಗಿ ಗ್ರಂಥಸಂಗ್ರಹ ಮಾಡುವುದಿಲ್ಲವೆಂಬ ವಿಷಯ ಇದರಿಂದ ಸ್ಪಷ್ಟವಾಗುತ್ತದೆ. ಅವರ ಗ್ರಂಥಭಂಡಾರದಲ್ಲಿ ಕನ್ನಡವಲ್ಲದೆ, ಸಂಸ್ಕೃತ, ಹಿಂದಿ, ಮರಾಠಿ, ತೆಲುಗು, ತಮಿಳು ಗ್ರಂಥಗಳು ಬಹಳವಾಗಿವೆ. ಪ್ರಮಾಣಾರ್ಹವಾದ ಇಂಗ್ಲಿಷ್ ಗ್ರಂಥಗಳು, ಶಾಸನಗಳು, ನಿಘಂಟುಗಳು ಅವರಲ್ಲಿವೆ. ಇದು ಅವರ ಜ್ಞಾನಲಾಲಸೆಯ ನಿದರ್ಶನವಾಗಿದೆ.

ಶಾಸ್ತ್ರಿಗಳು ಸದಸ್ಯರಾಗಿರುವ ಸಂಘ ಸಂಸ್ಥೆ ಸಮಿತಿಗಳಿಗೆ ಲೆಕ್ಕವಿಲ್ಲ, ಹೊಸಹೊಸ ಸಮಿತಿಗಳನ್ನು ಪ್ರವೇಶಿಸಿದಂತೆಲ್ಲ ಅವರಿಗೆ ಹೊಸ ಹುರುಪು ಬರುತ್ತದೆ. ಹರೆಯ ಉಕ್ಕುತ್ತದೆ. ಹೆಚ್ಚು ಹೆಚ್ಚು ಸಮಿತಿಗಳಲ್ಲಿ ಕೆಲಸಮಾಡುವುದರ ಮೂಲಕ ಕನ್ನಡ ನಾಡು ನುಡಿಗಳಿಗೆ ಸೇವೆ ಸಲ್ಲಿಸಲು ಸದಾ ಹಾತೊರೆಯುತ್ತಾರೆ. ಈ ಎಲ್ಲ ಸದಸ್ಯತ್ವದ, ಪಾಂಡಿತ್ಯದ, ಸಾಹಿತ್ಯ ಸೃಷ್ಟಿಯ ಪ್ರೇರಕಶಕ್ತಿಯಾದ 'ಮಹತ್ವಾಕಾಂಕ್ಷೆ' ಅವರ ಬಿಡುವಿಲ್ಲದ ದುಡಿಮೆಗೆ ಕಾರಣವಾಗಿದೆ. ನವೋನವವಾಗುತ್ತಿರುವ ಚೈತನ್ಯೋತ್ಸಾಹಗಳಿಗೆ ಪೋಷಕಶಕ್ತಿಯಾಗಿದೆ; ಆದ್ದರಿಂದಲೇ ಅವರು ನೂರುವರ್ಷ ಬಾಳುವಂತಾಗಿ, ಆ ಬಾಳು ಕನ್ನಡ ನಾಡುನುಡಿಗಳಿಗೆ ಮುಡಿಪಾಗುವಂತಾಗಲಿ! ಇಂತಹ ಸಮರ್ಥಶಾಲಿಗಳಾದ ಪಂಡಿತರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ ನಾಡಿನ ಜನರು 'ದೇವಗಂಗೆ' ಎಂಬ ಹೆಸರಿನ ಒಂದು ಪ್ರಶಸ್ತಿ ಗ್ರಂಥವನ್ನು ಸಮರ್ಪಿಸುವ ಪ್ರಸಂಗವು ನಿಜಕ್ಕೂ ಸಂತೋಷದಾಯಕವಾದುದು.

ದೇ.ಜ.ಗೌ.

ದಿ. ೨೭-೮-೧೯೬೮, ಮೈಸೂರು-೬

## ಬೆಂಗಳೂರು ಮಹಾರಾಣಿ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಶ್ರೀ ಸಿ. ಮಹಾದೇವಪ್ಪ ಎಂ. ಎ. ಅವರ

# ಸವಿನುಡಿಗಳು

ಕನ್ನಡ ನಾಡು ಒಂದಾಗಲೆಂದು, ಕನ್ನಡ ನುಡಿಯು ಕನ್ನಡಿಗರ ಉಸಿರಾಗಲೆಂದು ತಮ್ಮ ಇಡೀ ಬಾಳನ್ನೇ ಮುಡುಪಾಗಿಟ್ಟು ಸೇವೆಸಲ್ಲಿಸುತ್ತಿರುವ ಪೂಜ್ಯ ಬಿ. ಶಿವಮೂರ್ತಿಶಾಸ್ತ್ರಿಗಳವರು ಅರುವತ್ತರ ಗಡಿ ದಾಟ ಅಡಿಯಿಟ್ಟುದರ ಕುರುಹಾಗಿ ಅವರಿಗೆ ನಾಡಿನ ಹಲವರು ಗಣ್ಯಲೇಖಕರು ತಮ್ಮ ಅಮೂಲ್ಯ ಲೇಖನಗಳನ್ನುಳ್ಳ 'ದೇವಗಂಗೆ' ಎಂಬ ಪ್ರಶಸ್ತಿಗ್ರಂಥವನ್ನು ಕಾಣಿಕೆಯಾಗಿ ನೀಡಿ ಗೌರವವನ್ನು ಅರ್ಪಿಸುತ್ತಿರುವುದು ಸ್ತುತ್ಯವಾಗಿದೆ. ಕನ್ನಡ ನಾಡು ಹೆಮ್ಮೆಪಡಬಹುದಾದ ವ್ಯಕ್ತಿಗಳ ಪಂಕ್ತಿಯಲ್ಲಿ ವಿಶಿಷ್ಟಸ್ಥಾನವನ್ನು ಗಳಿಸಿಕೊಂಡಿರುವ ಶ್ರೀ ಶಾಸ್ತ್ರಿಗಳವರ ವ್ಯಕ್ತಿತ್ವವು ಬಹುಮುಖ ಕರ್ತೃತ್ವ ಶಕ್ತಿಯ ಆದರ್ಶವಾಗಿದೆ.

ಸುಮಾರು ನಲವತ್ತು ವರ್ಷಗಳಿಗಿಂತಲೂ ಹೆಚ್ಚುಕಾಲ ಅಖಂಡ ಕರ್ನಾಟಕವನ್ನು ಸ್ವಯಂ ಸ್ಫೂರ್ತಿಯಿಂದ ಸಂಚರಿಸಿ ನಿರಪೇಕ್ಷಭಾವದಿಂದ ಜನಸಾಮಾನ್ಯರಲ್ಲಿ ಜ್ಞಾನಪ್ರಸಾರವನ್ನೂ ಜನರಲ್ಲಿ ದೈವಭಕ್ತಿ, ದೇಶಪ್ರೇಮ, ಭಾಷಾಭಿಮಾನ ಮೊದಲಾದ ಸದ್ಗುಣಗಳನ್ನೂ ನೆಲೆಗೊಳಿಸಲು ಸತತವಾಗಿ ಮಾಡಿದ ಪೂಜ್ಯ ಶ್ರೀ ಶಾಸ್ತ್ರಿಗಳವರ ಪ್ರಯತ್ನವು ಎಲ್ಲರ ಮೆಚ್ಚುಗೆಗೂ ಅರ್ಹವಾದುದು.

ಕೀರ್ತನಾಚಾರ್ಯರಾದ ಶ್ರೀಶಾಸ್ತ್ರಿಗಳು ಕನ್ನಡ ಸಾಹಿತ್ಯ ಸಂಸ್ಕೃತಿಯ ಪತಾಕೆಯನ್ನು ತಮ್ಮ 'ಶರಣ ಸಾಹಿತ್ಯ'ದಲ್ಲಿ ಮೂವತ್ತುವರ್ಷಗಳಿಂತಲೂ ಹಿಂದಿನಿಂದ ಎತ್ತಿ ಹಿಡಿದುಕೊಂಡು ಬಂದಿರುವುದೊಂದು ಮಹಾಸಾಹಸವೇ ಸರಿ. ಆಸ್ಥಾನ ಕವಿ, ಅಭಿನವ ಕಾಳಿದಾಸ ಕೈ|| ಬಸವಪ್ಪ ಶಾಸ್ತ್ರಿಗಳವರು ಹಾಗೂ ಆಸ್ಥಾನ ಪಂಡಿತ, ಕರ್ಣಾಟಕ ಭಾಷಾರತ್ನಂ ಕೈ|| ಕರಿಬಸವ ಶಾಸ್ತ್ರಿಗಳು ಇವರ ವಿದ್ವತ್ ಪರಂಪರೆಯ ಪ್ರಭಾವದಿಂದ ವಿದ್ವತ್ಸಭೆಯನ್ನು ಒಲಿಸಿ ನಲಿಸಬಲ್ಲ ಅವರ ವ್ಯಾಪಕವಾದ ಪಾಂಡಿತ್ಯ ಪರಿಸ್ಫುಟವಾದ ವಿಚಾರಸರಣಿ ಮತ್ತು ನಯವಾದ ಮಾತುಗಾರಿಕೆ ನಿಜಕ್ಕೂ ಅಸಾಧಾರಣವಾದುವು. ಕರ್ಣಾಟಕದ ವಿಶ್ವವಿದ್ಯಾಲಯಗಳಲ್ಲಿ ಕೆಲವು ಪ್ರಾಚೀನ ಕವಿಕಾವ್ಯಗಳನ್ನು ಕುರಿತು ತಮ್ಮ ಅಮೂಲ್ಯವಾದ ಅನುಭವಪೂರ್ಣವಾದ ಜ್ಞಾನವನ್ನು ಭಾಷಣಗಳ ಮೂಲಕ ಪ್ರಸಾರ ಮಾಡಿದ್ದಾರೆ. ತಮ್ಮ 'ಶರಣ ಸಾಹಿತ್ಯ ಗ್ರಂಥಮಾಲೆ'ಯಲ್ಲಿ ವೀರೇಶ ಚರಿತೆ, ಮನೋವಿಜಯ, ಘನಲಿಂಗದೇವರ ವಚನಗಳು, ಷಡಕ್ಷರ ಮಂತ್ರ ಮಹಿಮೆ ಮೊದಲಾದ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ವೀರಶೈವ ಸಾಹಿತ್ಯ ಮತ್ತು ಇತಿಹಾಸ, ಕರ್ಣಾಟಕ ಸುದರ್ಶನ, ವೀರಶೈವ ಮಹಾಪುರುಷರು, ಮಹಾಕವಿ ಷಡಕ್ಷರದೇವ ಮೊದಲಾದ ಗ್ರಂಥಗಳನ್ನು ರಚಿಸಿ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ನಾಡಿನ ಸರಸ್ವತಿಯ ಪೀಠವೆನಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಒಂಬತ್ತು ವರ್ಷಗಳ ಕಾಲ ಅವರು ಸಲ್ಲಿಸಿದ ಸೇವೆ ಎಂದೆಂದಿಗೂ ಕನ್ನಡಿಗರ ಹೆಮ್ಮೆಯ ನೆನಪಾಗಿ ಉಳಿಯುವುದು ಎಂದು ನಾವು ಹೇಳಬಹುದು.

'ಪಂಡಿತರತ್ನಂ' ಮತ್ತು 'ಪದ್ಮಶ್ರೀ' ಪ್ರಶಸ್ತಿಗಳಿಗೆ ಪಾತ್ರರಾದ ಶ್ರೀಯುತರು ಕನ್ನಡ ಸಾಹಿತ್ಯ ಸಂಶೋಧನೆಗೆ ಸಲ್ಲಿಸಿರುವ ಕಾಣಿಕೆಯನ್ನು ಲಕ್ಷಿಸಿ ಕರ್ಣಾಟಕದ ವಿಶ್ವವಿದ್ಯಾನಿಲಯಗಳು ಅವರಿಗೆ ಗೌರವ ಪದವಿಯನ್ನಿತ್ತು ಸನ್ಮಾನಿಸಿತೆಂದರೆ ನಾಡುನುಡಿಗಳಿಗಾಗಿ ಸಲ್ಲಿಸಿದ ಅವರ ಸೇವೆಗೆ ತಕ್ಕ ಭೂಷಣವಾಗುತ್ತದೆ ಎಂಬುದು ವಿಚಾರವಂತರಾದ ಹಲವರ ಹಾರೈಕೆಯಾಗಿದೆ. ಕೃಪಾನಿಧಿಯಾದ ಪರಮೇಶ್ವರನು ಶ್ರೀ ಶಾಸ್ತ್ರಿಗಳಿಗೆ ದೀರ್ಘಾಯುರಾರೋಗ್ಯಗಳನ್ನು ಕರುಣಿಸಲೆಂದು ನಾನು ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

ತಾ||೨-೯-೧೯೬೮

ಬೆಂಗಳೂರು ೧

ಸಿ. ಮಹಾದೇವಪ್ಪ

ಸಮ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಪ್ರಶಸ್ತಿ ಗ್ರಂಥ :



ಆಸ್ಥಾನವಿದ್ವಾನ್, ಪಂಡಿತರತ್ನಂ, ಸಮ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು
ಸಂಪಾದಕರು— ಶರಣಸಾಹಿತ್ಯ, ಬೆಂಗಳೂರು-೩.



ರಾಷ್ಟ್ರಪತಿ ಭಾರತ ರತ್ನ ಡಾ॥ ಎಸ್. ರಾಧಾಕೃಷ್ಣನ್ ಅವರಿಂದ ರಾಷ್ಟ್ರಪತಿ ಭವನದ ಒಡ್ಡೋಲಗದಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು 'ಪದ್ಮಶ್ರೀ' ಪ್ರಶಸ್ತಿಯನ್ನು ಪಡೆಯುತ್ತಿರುವುದು. (೧೯೬೬)



ಬೆಂಗಳೂರು ಜೇಲೀಮಠದ ನೂತನ ವಿರಕ್ತಾಶ್ರಮ ಸ್ವೀಕಾರದ ಸಭೆಯು ಶ್ರೀ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ನಡೆದುದು. ಇವರಲ್ಲಿ ಶ್ರೀ ಮಠಾಧ್ಯಕ್ಷರಾದ ನಿ. ಪ್ರ. ಸ್ವ. ಶಿವರುದ್ರಸ್ವಾಮಿಗಳನ್ನೂ ಇತರರನ್ನೂ ಕಾಣಬಹುದು. (೧೯೬೦)



ಕೊಡಗಿನ ಕವಿ-ಪಂಡಿತ ಡಾ|| ಐ. ಎಂ. ಮುತ್ತಣ್ಣನವರ ಸನ್ಮಾನವು ಬೆಂಗಳೂರಿನಲ್ಲಿ ಶ್ರೀ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಂದರ್ಭದಲ್ಲಿ ತೆಗೆದ ಚಿತ್ರ (೧೯೬೪)



ಕ ಸಾ. ಪರಿಷತ್ತಿನಲ್ಲಿ ನಡೆದ ಒಂದು ಸಾರ್ವಜನಿಕ ಸಭೆ. ಇದರಲ್ಲಿ ಶ್ರೀ ಶಾಸ್ತ್ರಿಗಳ ಜತೆಯಲ್ಲಿ ಶ್ರೀ ಜಿ ವಿ. ಹಳ್ಳಿಕೇರಿ ಶ್ರೀ ಬಿ. ಡಿ. ಜತ್ತಿ, ಡಾ|| ಮಾಸ್ತಿ ಮೊದಲಾದವರನ್ನೂ ಕಾಣಬಹುದು. (೧೯೫೮)



ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಮಾನ್ಯ ಕೆ. ಹನುಮಂತಯ್ಯನವರ ಅಧ್ಯಕ್ಷತೆಯಲ್ಲಿ ನಡೆದ ವಸಂತ ಸಾಹಿತ್ಯೋತ್ಸವದ ಚಿತ್ರ. ಇದರಲ್ಲಿ ಮಾನ್ಯ ಕೆ. ಹನುಮಂತಯ್ಯ, ಶ್ರೀ ಎಸ್. ನಿಜಲಿಂಗಪ್ಪ, ಡಾ|| ಆರ್. ಆರ್. ದಿವಾಕರ್ ಶ್ರೀ ಕೆ. ಎಸ್. ಪಾಟೀಲ್ ಇವರನ್ನು ಕಾಣಬಹುದು. (೧೯೫೯)



ಕನ್ನಡ ಸಾಹಿತ್ಯ ಪರಿಷತ್ತಿಗೆ ಧಾರವಾಡ ಮುರುಘಾಮಠದ ಪರಮ ಪೂಜ್ಯ ಲಿಂಗೈಕ್ಯ ಮೃತ್ಯುಂಜಯ ಮಹಾಸ್ವಾಮಿಗಳು ಸಂದರ್ಶನವಿತ್ತಾಗ ತೆಗೆದ ಚಿತ್ರ. ಇದರಲ್ಲಿ ಪೂಜ್ಯ ಮೃತ್ಯುಂಜಯ ಸ್ವಾಮಿಗಳು, ಶ್ರೀಮಹಾಂತ ಸ್ವಾಮಿಗಳು, ಶ್ರೀ ನಿಜಗುಣಸ್ವಾಮಿಗಳು, ಶ್ರೀ ಎಚ್. ಎಸ್ ಸೀತಾರಾಂ, ಶ್ರೀ ಕೆ. ಗೋಪಾಲಕೃಷ್ಣರಾಯರು ಇವರನ್ನು ಕಾಣಬಹುದು.



೧೯೨೬ ರಿಂದ ೧೯೩೬ವರೆಗೆ ಅಖಂಡ ಕರ್ನಾಟಕವನ್ನು ಸುತ್ತಿ ಶ್ರೀ ಶಾಸ್ತ್ರಿಗಳು, ಕೀರ್ತನ ಕೇಸರಿ; ಕೀರ್ತನಾಚಾರ್ಯ ಪದವಿಗಳನ್ನು ಪಡೆದರು. ಆಗ ಇವರು ಸಾರ್ವಜನಿಕರಿಂದ ಪಡೆದ ಸುವರ್ಣ ಪದಕಗಳ ಹಾರವನ್ನು ಅವರ ಕಂಠದಲ್ಲಿ ಕಾಣಬಹುದು. ಆ ಕಾಲದಲ್ಲಿ ಅವರು ತುಮಕೂರಿನಲ್ಲಿ ವಾಸಿಸುತ್ತಿದ್ದರು. ಈ ಕಾಲದಲ್ಲಿ ಅವರು ಕರ್ನಾಟಕಾದಲ್ಲಿ 'ಕೀರ್ತನ ಕೇಸರಿ' ಎಂದು ಪ್ರಖ್ಯಾತರಾದರು.



'ಶರಣ ಸಾಹಿತ್ಯ' ಸಂಪಾದಕರಾದ ಕರ್ನಾಟಕ ವಿಭೂಷಣ, ವಿದ್ಯಾವಾರಿಧಿ, ಸಮಾಜ ಭಾಸ್ಕರ, ವಿಮರ್ಶನಾಚಾರ್ಯ, ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು.
ಶರಣಸಾಹಿತಕ್ಕೆ ಈಗ ೩೧ನೆಯ ವರ್ಷನಡೆಯುತ್ತಿದೆ. ಅದು ಅಖಂಡಕರ್ನಾಟಕದಲ್ಲಿ ಪ್ರೌಢವರ್ಗದ ಮಾಸಿಕವೆಂದು ಹೆಸರಾಗಿದೆ.



ಭಾರತದ ಮಹಾಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರನ್ನು ಹೊಸದಿಲ್ಲಿಯ ಅವರ ಭವನದಲ್ಲಿ ಶ್ರೀ ಶಾಸ್ತ್ರಿಗಳು ಸಂಧಿಸಿ ಮಾತನಾಡುತ್ತಿರುವುದು. ಪಕ್ಕದಲ್ಲಿ ಪ್ರಶಸ್ತಿ ವಿಜೇತ ಶ್ರೀ ಅರ್ಜುನ ಸಿಂಗ್ ಅವರನ್ನು ಕಾಣಬಹುದು. (೧೯೬೬)



ಬೆಂಗಳೂರಿನಲ್ಲಿ ಜನರಲ್ ತಿಮ್ಮಯ್ಯನವರನ್ನು ಸಂಧಿಸಿ ಚಿನ್ನ [illegible] ಗಣಿಯ [illegible]ವನ್ನು ಕುರಿತು ಶ್ರೀ ಶಾಸ್ತ್ರಿಗಳು ಪ್ರಸ್ತಾಪಿಸು ತ್ತಿರುವುದು.



ಬೆಂಗಳೂರಿನಲ್ಲಿ ನಡೆದ ಶ್ರೀ ಶಾಸ್ತ್ರಿಗಳ ಷಷ್ಟಿಶಾಂತಿ ಸಮಾರಂಭದ ಒಂದುದೃಶ್ಯ (೧೯೬೩). ಇದರಲ್ಲಿ ಅವರ ಧರ್ಮಪತ್ನಿ ಶ್ರೀಮತಿ ಎಚ್. ಎಸ್. ಮುದ್ದುವೀರಮ್ಮನವರನ್ನೂ ಹಿಂಬದಿಯಲ್ಲಿ ಶಾಸ್ತ್ರಿಗಳ, ತಾಯಿಯವರಾದ ಶ್ರೀಮತಿ ನೀಲಮ್ಮನವರನ್ನೂ. ಪುರೋಹಿತರು ಮೊದಲಾದವರನ್ನೂ ಕಾಣಬಹುದು.



ರಾಷ್ಟ್ರಪತಿ ಡಾ|| ಎಸ್. ರಾಧಾಕೃಷ್ಣನ್ ಅವರು ಕನ್ನಡ ಸಾಹಿತ್ಯ ಪರಿಷತ್ತಿಗೆ ಬಂದಿದ್ದಾಗ ಅವರಿಗೆ ಮಾನಪತ್ರವನ್ನು ಅರ್ಪಿಸುತ್ತಿರುವುದು. ಇದರಲ್ಲಿ ಶ್ರೀ ಶಾಸ್ತ್ರಿಗಳನ್ನೂ, ಅವರ ಹಿರಿಯ ಮಗ ಶ್ರೀ ಎಚ್. ಎಸ್. ರೇಣುಕ ಪ್ರಸಾದರನ್ನೂ ಕಾಣಬಹುದು. (೧೯೬೩)



ಶ್ರೀಶೈಲ ಜಗದ್ಗುರುಗಳು ಶರಣ ಸಾಹಿತ್ಯ ಕಾರ್ಯಾಲಯಕ್ಕೆ ಸಂದರ್ಶನವಿತ್ತಾಗ ತೆಗೆದ ಚಿತ್ರ. ಇದರಲ್ಲಿ ಶ್ರೀ ಶಾಸ್ತ್ರಿಗಳ ಪತ್ನಿ, ಪುತ್ರ, ಸೊಸೆ, ಮೊಮ್ಮಕ್ಕಳು, ಇತ್ಯಾದಿ ಬಂಧು ಮಿತ್ರರನ್ನು ಕಾಣಬಹುದು.



ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕರ್ನಾಟಕ ರಾಜ್ಯೋತ್ಸವ ನಡೆದ ಚಿತ್ರ. ಇದರಲ್ಲಿ ಡಾ|| ದಿವಾಕರ್ ಪೂಜ್ಯ ಕೈ|| ಆಲೂರು ವೆಂಕಟರಾಯರು, ಹಾಗೂ ಲಿಂ|| ಮಹಾದೇವಸ್ವಾಮಿಗಳು ಮೊದಲಾದವರನ್ನು ಕಾಣ ಬಹುದು. (೧೯೫೭)



ರಾಷ್ಟ್ರಪತಿ ಭಾರತರತ್ನ ಡಾ|| ರಾಜೇಂದ್ರ ಪ್ರಸಾದ್ ಅವರು ಕನ್ನಡ ಸಾಹಿತ್ಯ ಪರಿಷತ್ತಿಗೆ ಆಗಮಿಸಿದಾಗ ಪರಿಷತ್ತಿನ ಪರವಾಗಿ ಅವರಿಗೆ ಸ್ವಾಗತವನ್ನು ಕೋರುತ್ತಿರುವುದು. (೧೯೫೮)



ಬೆಂಗಳೂರು ನಗರ ಭವನದಲ್ಲಿ ಕರ್ನಾಟಕ ರಾಜ್ಯೋತ್ಸವ ಸಮಯದಲ್ಲಿ ನಾಗರಿಕರ ಪರವಾಗಿ ಶ್ರೀ ಶಾಸ್ತ್ರಿಗಳಿಗೆ ಸನ್ಮಾನ ನಡೆದ ದೃಶ್ಯ. ಇದರಲ್ಲಿ ಅಧ್ಯಕ್ಷತೆ ವಹಿಸಿದ್ದ ಮಾನ್ಯ ಬಿ. ಡಿ. ಜತ್ತಿಯವರನ್ನೂ, ವ್ಯವಸ್ಥಾಪಕ ಆರ್. ಗಂಗಪ್ಪನವರನ್ನೂ ಕಾಣಬಹುದು. (೧೯೫೯)



ಬೆಂಗಳೂರಿನಲ್ಲಿ ಕರ್ನಾಟಕ ರಾಜ್ಯೋತ್ಸವವನ್ನು ನಡೆಸಿದ ಒಂದು ದೃಶ್ಯ. ಇದರಲ್ಲಿ ಶ್ರೀ ಶಾಸ್ತ್ರಿಗಳನ್ನೂ, ಕರ್ನಾಟಕದ ಮುಖಂಡರಾದ ಶ್ರೀ ಜಿ. ವಿ. ಹಳ್ಳಿಕೇರಿ, ಶ್ರೀ ಎಸ್ ನಿಜಲಿಂಗಪ್ಪ ಇವರನ್ನೂ ಕಾಣಬಹುದು. (೧೯೫೬)



ಬೆಂಗಳೂರು ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠದಲ್ಲಿ ಶಾಸ್ತ್ರಿಗಳು ಪುರಾಣಶ್ರವಣದಲ್ಲಿ ನಿರತರಾಗಿರುವುದು. ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀ ಚಿತ್ರದುರ್ಗದ ಜಗದ್ಗುರು ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳನ್ನೂ, ಮಠಾಧ್ಯಕ್ಷರಾದ ಶ್ರೀ ನಿ. ಪ್ರ. ಶಿವಕುಮಾರ ಸ್ವಾಮಿಗಳನ್ನೂ, ಸೋಮಪುರದ ಶ್ರೀ ನಿ. ಪ್ರ. ಸಿದ್ಧಲಿಂಗಸ್ವಾಮಿಗಳನ್ನೂ ಈ ಚಿತ್ರದಲ್ಲಿ ಕಾಣಬಹುದು. (೧೯೬೭)



ರಾಷ್ಟ್ರಪತಿ ಡಾ|| ರಾಜೇಂದ್ರ ಪ್ರಸಾದ್ ಅವರು ಕನ್ನಡ ಸಾಹಿತ್ಯ ಪರಿಷತ್ತಿಗೆ ಸಂದರ್ಶನ ವಿತ್ತಾಗ, ಪರಿಷತ್ತಿನ ಪರವಾಗಿ ಪೂಜ್ಯ ರಾಷ್ಟ್ರಪತಿಯವರಿಗೆ ಶ್ರೀ ಶಾಸ್ತ್ರಿಗಳು ಮಾನಪತ್ರವನ್ನು ಸಮರ್ಪಿಸುತ್ತಿರುವ ದೃಶ್ಯ. (೧೯೫೮)



ಮಧ್ಯಪ್ರದೇಶದ ರಾಜ್ಯಪಾಲರಾಗಿದ್ದ ಮಾನ್ಯ ಶ್ರೀ ಕೆ. ಸಿ. ರೆಡ್ಡಿಯವರು ಶರಣ ಸಾಹಿತ್ಯ ಕಾರ್ಯಾಲಯಕ್ಕೆ ಸಂದರ್ಶನ ವಿತ್ತ ಸಂದರ್ಭದ ಚಿತ್ರ. ಇದರಲ್ಲಿ ಶಾಸ್ತ್ರಿಗಳ ಮಕ್ಕಳು ಮೊಮ್ಮಕ್ಕಳು ಮತ್ತು ಬಂಧು ಮಿತ್ರರನ್ನು ಕಾಣಬಹುದು.



ಕೇಂದ್ರದ ಆರೋಗ್ಯ ಸಚಿವರಾಗಿದ್ದ ಮಾನ್ಯ ಡಿ. ಪಿ. ಕರಮರಕರ್ ಅಧ್ಯಕ್ಷತೆಯಲ್ಲಿ ನಡೆದ ಶರಣ ಸಾಹಿತ್ಯ ವಾರ್ಷಿಕೋತ್ಸವದ ಚಿತ್ರ. (೧೯೫೫) ಇದರಲ್ಲಿ ಗಾನವಿಶಾರದ, ಸಂಗೀತ ವಿದ್ವಾನ್ ಶ್ರೀ ಬಿ. ದೇವೇಂದ್ರಪ್ಪನವರನ್ನು ಕಾಣಬಹುದು.



ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರಿಗೆ ಮೈಸೂರು ಸಾಹಿತ್ಯ ಅಕಾಡೆಮಿಯಲ್ಲಿ ರಾಜ್ಯ ಪ್ರಶಸ್ತಿ ದೊರೆತ ಸಂದರ್ಭದ ಚಿತ್ರ. ಇದರಲ್ಲಿ ಆಗಿನ ವಿದ್ಯಾಮಂತ್ರಿಗಳಾದ ಮಾನ್ಯ ಎಸ್. ಆರ್. ಕಂಠಿ ಅವರನ್ನು ಕಾಣಬಹುದು.



ಮಾನ್ಯ ಬಿ. ಡಿ. ಜತ್ತಿಯವರ ಅಧ್ಯಕ್ಷತೆಯಲ್ಲಿ ಶರಣ ಸಾಹಿತ್ಯದ ವಾರ್ಷಿಕೋತ್ಸವವನ್ನು ನಡೆಸಿದ ದೃಶ್ಯ. ಇದರಲ್ಲಿ ಬೆಂಗಳೂರು ವಿ. ವಿ. ದ ಉಪಕುಲಪತಿ ಡಾ॥ ವಿ. ಕೃ. ಗೋಕಾಕ್ ಮೊದಲಾದವರನ್ನು ಕಾಣಬಹುದು.

(೧೯೬೬)



ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಬಳ್ಳಾರಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಒಂದು ದೃಶ್ಯ. ಇದರಲ್ಲಿ ಉದ್‌ಘಾಟಕರಾಗಿದ್ದ ಶ್ರೀಮನ್ಮಹಾರಾಜರನ್ನೂ, ಅಧ್ಯಕ್ಷರಾಗಿದ್ದ ಪದ್ಮಶ್ರೀ ಡಾ|| ವಿ. ಕೆ. ಗೋಕಾಕರನ್ನೂ ಕಾಣಬಹುದು.
(೧೯೫೮)



ಮೈಸೂರಿನಲ್ಲಿ ಶ್ರೀ ಜಗದ್ಗುರು ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳ ಸನ್ನಿಧಿಯಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ ಸನ್ಮಾನ ನಡೆಯುವ ದೃಶ್ಯ. ಶ್ರೀ ಜಗದ್ಗುರು ಸುತ್ತೂರು ಮಹಾ ಸ್ವಾಮಿಗಳನ್ನೂ, ಮಾನ್ಯ



ಶ್ರೀರಾಮ ಲಲಿತಕಲಾ ಮಂಡಲಿಯ ವಾರ್ಷಿಕೋತ್ಸವವು ಬೆಂಗಳೂರಿನಲ್ಲಿ ಶ್ರೀ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ನಡೆದಾಗ ತೆಗೆದ ಚಿತ್ರ. ಇದರಲ್ಲಿ ಅಂದಿನ ರಾಜ್ಯಪಾಲ, ಇಂದಿನ ಉಪರಾಷ್ಟ್ರಪತಿ ಮಾನ್ಯ ವಿ. ವಿ. ಗಿರಿ, ಶ್ರೀಮತಿ ಗಿರಿ, ಕಲಾಮಂಡಲದ ಸದಸ್ಯರು ಇವರನ್ನು ಕಾಣಬಹುದು. (೧೯೬೩)



ಬೆಂಗಳೂರಿನಲ್ಲಿ ದಿ|| ೨೪-೨-೧೯೬೩ ರಂದು ವಿಧ್ಯುಕ್ತವಾಗಿ ನಡೆದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಷಷ್ಟಿಶಾಂತಿ ಸಮಾರಂಭದ ದೃಶ್ಯ. ಇದರಲ್ಲಿ ಶ್ರೀ ಶಾಸ್ತ್ರಿಗಳನ್ನೂ ಅವರ ಧರ್ಮಪತ್ನಿ ಹಾಗೂ ಬಂಧು ಬಳಗದವರನ್ನೂ ಕಾಣಬಹುದು.



ರಾಷ್ಟ್ರಪತಿ ಭವನದಲ್ಲಿ ಭಾರತರತ್ನ ಡಾ|| ಎಸ್. ರಾಧಾಕೃಷ್ಣನ್ ಅವರನ್ನು ಕಂಡು ಶ್ರೀ ಶಾಸ್ತ್ರಿಗಳು ಅವರಿಗೆ ತಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತಿರುವುದು. (೧೯೬೬)



ಶಿವಮೊಗ್ಗ ಕರ್ನಾಟಕ ಸಂಘದಲ್ಲಿ ಕವಿವರ್ಯ ದ. ರಾ. ಬೇಂದ್ರೆಯವರ ಅಧ್ಯಕ್ಷತೆಯಲ್ಲಿ ಶಾಸ್ತ್ರಿಗಳಿಗೆ ಸನ್ಮಾನ ನಡೆದ ಒಂದು ದೃಶ್ಯ. ಇದರಲ್ಲಿ ಕರ್ನಾಟಕ ಸಂಘದ ಪ್ರಮುಖರಾದ ಶ್ರೀ ದತ್ತಾತ್ರೇಯ ಶಾಸ್ತ್ರಿಗಳು, ಶ್ರೀ ನರಸಿಂಹ ಮೂರ್ತಿಗಳು ಇವರನ್ನು ಕಾಣಬಹುದು. (೧೯೬೭)



ಹಿರಿಯ ಸಾಹಿತಿ ಕವಿಯಿತ್ರಿ ಶ್ರೀಮತಿ ಶಿಖರಂ ಕಮಲಾಂಬಾ ಅವರಿಗೆ ಬೆಂಗಳೂರಿನ ಕನ್ನಡಸಾಹಿತಿಗಳ ಪರಾವಾಗಿ ಗೌರವಾರ್ಪಣವಾದ ದೃಶ್ಯ. ಈ ಉತ್ಸವವು ಶ್ರೀ ಶಾಸ್ತ್ರಿಗಳ ನೇತೃತ್ವದಲ್ಲಿ ನಡೆಯಿತು,(೧೯೬೪)



ಶರಣ ಸಾಹಿತ್ಯದ ವಾರ್ಷಿಕೋತ್ಸವದಲ್ಲಿ ಮಾನ್ಯ ಮಂತ್ರಿ ಶ್ರೀ ಡಿ. ಪಿ.
[illegible]



ಬೆಂಗಳೂರಿನ ಒಂದು ಸಾರ್ವಜನಿಕ ಸಭೆಯಲ್ಲಿ
ಶ್ರೀ ಶಾಸ್ತ್ರಿಗಳು ಭಾಷಣ ಮಾಡುತ್ತಿರುವುದು.



ಬೆಂಗಳೂರು ಮುರುಘರಾಜೇಂದ್ರ ವಿದ್ಯಾಲಯ ಇದರಲ್ಲಿ ಪರಮಪೂಜ್ಯ
ಚಿತ್ರದುರ್ಗ ಜಗದ್ಗುರು ಮಹಾಸ್ವಾಮಿಗಳನ್ನೂ, ವಿದ್ಯಾಧಿಕಾರಿ ಶ್ರೀ
ಎಸ್. ವಿ. ಜೇವೂರರನ್ನೂ ಕಾಣಬಹುದು.



ಮಧ್ಯಪ್ರದೇಶದ ರಾಜ್ಯಪಾಲರಾದ ಮಾನ್ಯ ಕೆ. ಸಿ. ರೆಡ್ಡಿಯವರು 'ಶರಣ ಸಾಹಿತ್ಯ' ಕಾರ್ಯಾಲಯಕ್ಕೆ ಸಂದರ್ಶನವಿತ್ತಾಗ ತೆಗೆದ ಚಿತ್ರ. ಮಾನ್ಯ ರೆಡ್ಡಿಯವರು ಶಾಸ್ತ್ರಿಗಳಿಂದ 'ಶರಣ ಸಾಹಿತ್ಯ'ವನ್ನು ಸ್ವೀಕರಿಸುತ್ತಿರುವುದು. ಇವರಲ್ಲಿ ಪ್ರಸಿದ್ಧ ಸಾಹಿತಿ ಬಿ. ಪುಟ್ಟಸ್ವಾಮಯ್ಯನವರನ್ನು ಕಾಣಬಹುದು. (೧೯೬೫)



ಕನ್ನಡ ಸಾಹಿತ್ಯ ಪರಿಷತ್ತಿಗೆ ಶ್ರೀಮನ್ಮಹಾರಾಜರು ಸಂದರ್ಶನವಿತ್ತ ದೃಶ್ಯ. ಇವರಲ್ಲಿ ಪರಿಷತ್ತಿನ ಕಾರ್ಯದರ್ಶಿಗಳಾಗಿದ್ದ ಶ್ರೀ ಜಿ. ಶ್ರೀನಿವಾಸನ್ ರವರನ್ನು ಕಾಣಬಹುದು. (೧೯೫೭)

# ಪಂಪನ ದೃಷ್ಟಿಯಲ್ಲಿ ಕೃಷ್ಣ

ಮಹಾಭಾರತದ ಅಷ್ಟದಿಗ್ಗಜಗಳಂತಿರುವ ಎಂಟು ಜನರನ್ನು ಅವರಲ್ಲಿ ಕಾಣಬರುವ ಪ್ರಮುಖ ಗುಣವಿಶೇಷಣಗಳಿಂದ ಕೊಂಡಾಡುವ ಈ ಕೆಳಗಿನ ಪದ್ಯ ಎಷ್ಟು ಸುಪ್ರಸಿದ್ಧವಾಗಿದೆಯೋ ಅಷ್ಟೇ ವಿದ್ವಾಂಸರ ಜಿಜ್ಞಾಸೆಗೂ ಪಾತ್ರವಾಗಿದೆ–

ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ
　　　　　ಗಂಡಿನೊಳ್ ಭೀಮಸೇನಂ
ಬಲದೊಳ್ ಮದ್ರೇಶನತ್ಯುನ್ನತಿಯೊಳಮರ
　　　　　ಸಿಂಧೂದ್ಭವಂ ಚಾಪವಿದ್ಯಾ
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆ
　　　　　ಯೊಳ್ ಫಲ್ಗುಣಂ ಧರ್ಮದೊಳ್ನಿ
ರ್ಮಲ ಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿಸೀ
　　　　　ಭಾರತಂ ಲೋಕ ಪೂಜ್ಯಂ [೧೪—೬೪]

ಸಾಮಾನ್ಯ ದೃಷ್ಟಿಯಿಂದ ಈ ಪದ್ಯವನ್ನು ಸಮೀಕ್ಷಿಸುವ ಆತುರಪ್ರಿಯ ವಿಮರ್ಶಕರಿಗೆ ಈ ಪದ್ಯದಲ್ಲಿ ಒಂದೆರಡು ಕೊರತೆಗಳು ಎದ್ದು ಕಾಣಿಸುತ್ತವೆ. ಒಡನೆಯೇ ಅವರು ದುಡುಕಿನಿಂದ ನುಡಿಯುತ್ತಾರೆ: ಏನಿದು? ಕೃಷ್ಣನಿಲ್ಲದೆ ಮಹಾಭಾರತವೇ? ದ್ರೌಪದಿಯಿಲ್ಲದೆ ಮಹಾಭಾರತ ಯುದ್ಧವೇ? ಶಲ್ಯನನ್ನು ಈ ಎಂಟು ಜನರ ಮಹಾಪಟ್ಟಿಯಲ್ಲಿ ಸೇರಿಸಿದ ಮಹಾಕವಿ ಪಂಪ ದ್ರೌಪದಿಯನ್ನು, ಕೊನೆಗೆ ಕೃಷ್ಣನನ್ನೂ ಕೈಬಿಡುವುದೇ? ಈ ಬಗೆಯ ಹಲವಾರು ಪ್ರಶ್ನೆಗಳು ಪುಂಖಾನುಪುಂಖವಾಗಿ ಅವರ ಬಾಯಿಂದ ಹೊರಹೊಮ್ಮುತ್ತವೆ. ಆದರೆ, ಪಂಪಭಾರತವನ್ನು ವ್ಯಾಸಭಾರತವನ್ನಲ್ಲ—ಮೊದಲಿನಿಂದ ಹಿಡಿದು ತುದಿಯವರೆಗೂ ಕವಿಯ ಮನೋಧರ್ಮವನ್ನರಿತು ಓದುವವರಿಗೆ ಈ ಪದ್ಯದ ಮರ್ಮ ತಿಳಿಯುತ್ತದೆ.

ಪಂಪ ಭಾರತದಲ್ಲಿ ಕೃಷ್ಣನ ಹೆಸರನ್ನು ಹೇಳುವಾಗ ಎಲ್ಲ ಕಡೆಯಲ್ಲೂ ಒಂದೇ ಬಗೆಯ ಹೆಸರನ್ನು ಹೇಳದೆ ಹಲವು ಬಗೆಯಲ್ಲಿ ತಿಳಿಸಿದ್ದಾನೆ. ಉದಾಹರಣೆಗೆ ಈ ಕೆಲವು ವಿಶೇಷ ರೂಪದ ಪದಗಳನ್ನು ಗಮನಿಸಬಹುದು. ಅಸುರಾಂತಕ, ಮುಕುಂದ, ಗೀರ್ವಾಣಾರಿ, ದನುಜಾಂತಕ (೬-೪೯), ಮಧುಕೈಟಭಾರಾತಿ, ತ್ರೈಲೋಕ್ಯಗುರು (೯-೬೦ವ), ನಾರಾಯಣ, ಚಕ್ರಿ, ಹರಿ (೯-೨೫ ವ, ೯-೬೯ ವ), ಈ ಬಗೆಯ ಹೆಸರುಗಳು ವಿಕ್ರಮಾರ್ಜುನ ವಿಜಯದಲ್ಲಿ ಒಂದಲ್ಲ, ಹತ್ತಲ್ಲ, ನೂರಾರು ಬಾರಿ ಪ್ರಯೋಗವಾಗಿವೆ. ಕೃಷ್ಣನಲ್ಲಿ ಅಭಿಮಾನ, ಗೌರವಗಳು ಇಲ್ಲದ ಕವಿ ಇಂಥ ಹೆಸರುಗಳನ್ನು ಬಳಸುವುದು ಅಸಂಭವವಲ್ಲವೇ? ಇಷ್ಟೇ ಅಲ್ಲದೆ, ತೀರ್ಥಂಕರರ ಹೆಸರುಗಳಾದ 'ಅಜಿತ, ಅನಂತ' ಎನ್ನುವ ಹೆಸರುಗಳಿಂದ ಶ್ರೀ ಕೃಷ್ಣನನ್ನು ಕರೆದಿರುವುದರ ಮೂಲಕ, ಆತನಿಗೆ ತೀರ್ಥಂಕರನ ಪಟ್ಟವನ್ನು ಕವಿ ಕಟ್ಟಿದ್ದಾನೆ. ಮತ್ತು ಕೃಷ್ಣ, ಜೈನ ಪುರಾಣಗಳ ಪ್ರಕಾರ ಭವಿಷ್ಯತ್ಕಾಲದ ತೀರ್ಥಂಕರನಾಗುತ್ತಾನೆ. ಪಂಪಭಾರತದ ಆರನೆಯ ಆಶ್ವಾಸದಲ್ಲಿ ಕೃಷ್ಣನ ಮಹಿಮೆ ಮತ್ತು ದೈವತ್ವಗಳಿಗೆ ಎಳ್ಳನಿತೂ ಲೋಪ ಉಂಟಾಗಿಲ್ಲ. ಧರ್ಮಪುತ್ರನು ತುಂಬಿದ ರಾಜಸಭೆಯಲ್ಲಿ ಎದ್ದು ನಿಂತು, ಅಗ್ರಪೂಜೆಗೆ ಯೋಗ್ಯರು ಯಾರೆಂದು ಭೀಷ್ಮರನ್ನು ಕೇಳಿದ್ದಕ್ಕೆ ಅವರು:—

ಬಲಿಯಂ ಕಟ್ಟಿದನಾವನೀ ಧರಣಿಯಂ ವಿಕ್ರಾಂತ
　　　　　ದಿಂದಂ ರಸಾ
ತಲದಿಂದೆತ್ತಿದನಾವನಂದು ನರಸಿಂಹಾಕಾರದಿಂ
　　　　　ದೈತ್ಯನಂ
ಛಲದಿಂ ಸೀಳ್ದವನಾವನಬ್ಧಿಮಥನ ಪ್ರಾರಂಭದೊಳ್
　　　　　ಮಂದರಾ
ಚಲಮಂ ತಂದವನಾವನಾತನೆ ನಲಂ ತಕ್ಕಂ ಪೆಜಿರ್
　　　　　ತಕ್ಕರೇ [೬.೪೧]

ಎಂಬುದಾಗಿ ಉತ್ತರಿಸುವರು. ಗಾಂಗೇಯರ ಈ ಮಾತುಗಳಲ್ಲಿ ಮುಕುಂದನ ಮಹಿಮೆ ಮೂರ್ತಗೊಂಡಿಲ್ಲವೆ? ಭೀಷ್ಮರ ಮಾತಿನಂತೆ ಧರ್ಮರಾಯ ಪುರುಷೋತ್ತಮಂಗೆ ಅಗ್ರಪೂಜೆಯನ್ನು ಕೊಡುವನು. ಇದಾದಮೇಲೆ ದಿತಿಜಕುಳದವದಹನನಾದ ಕೃಷ್ಣನು ತನ್ನನ್ನು ಬಾಯಿಗೆ ಬಂದಂತೆ ಒಂದೇ ಸಮನೆ ನೂರುಬಾರಿಗೂ ಮೀರಿ ನಿಂದಿಸಿದ ಶಿಶುಪಾಲನ ತಲೆಯನ್ನು ಅರ್ಘ್ಯವೆತ್ತಿದ ತಳಿಗೆಯಿಂದ ಕತ್ತರಿಸಿದನು. ಶಿಶುಪಾಲನ ನೆಂಟರು ಪ್ರತಿಭಟಿಸಲು ಮುರಾಂತಕನು—

ತಿರಿಪಿ ಕರಚಕ್ರಮಂ ದನು
ಜರ ತಲೆಗಳನಸುರವೈರಿ ಮುಳಿದಿಡೆ ಪಱಿದಂ
ಬರತಳಮನೆಯ್ದಿ ಮೇಘದ
ಪೊರೆವರೆಯೊಳ್ ತೊಡರ್ದು ನೆಲಕೆ ಬೀೞವೆ
ತಲೆಗಳ್ [೬-೬೫]

ಹೀಗೆ ಈ ಶಿಶುಪಾಲವಧೆಯ ಪ್ರಕರಣದಲ್ಲಿ ಪಂಪ ಕೃಷ್ಣನ ದೈವತ್ವವನ್ನು ಸ್ಫುಟವಾಗಿ ಚಿತ್ರಿಸಿದ್ದಾನೆ.

ಕೃಷ್ಣಪಾತ್ರಚಿತ್ರಣದ ಉದಾತ್ತತೆಯನ್ನು ಮತ್ತೆ ಒಂಬತ್ತನೆಯ ಆಶ್ವಾಸದಲ್ಲಿ ಕಾಣಬಹುದು. ಪಾಂಡವರ ಪರವಾಗಿ ಸಂಧಾನಕ್ಕೆಂದು ಕೌರವನ ಆಸ್ಥಾನದ ಹೊರಬಾಗಿಲಲ್ಲಿ ಬಂದು ನಿಂತ ಕೃಷ್ಣನನ್ನು—

ಬರವೇೞ್ಕುಂಬುದುಮಂಜನಾಚಲದವೋಲ್ ಕಣ್ಗೊಪ್ಪಿ
ಬರ್ಪಂಬುಜೋ
ದರನಂ ಮೆಲ್ಲನೆ ನೋಡಿ ಮುಯ್ಯಲಸಿದಂತೆಂತಾನು
ಮೆೞ್ದಿರ್ದು ಕೇ
ಸರಿಪೀಠಾಗ್ರದಿನಪ್ಪಿಕೊಂಡು ಪೊಡೆವಟ್ಟುಚ್ಚಾಸನಾ
ಸೀನನಾ
ಗಿರವೇೞ್ದರ್ಘ್ಯಮನಿತ್ತನಂತರಮೆ ತಾಂ ಕುಳ್ಳಿರ್ದು
ದುರ್ಯೋಧನಂ [೯-೩೮]

ಮಧುಕೈಟಭಾರಾತಿಯ ಮೊಗಮಂ ನೋಡಿ—

ಸಂಸಾರದೊಳೆನ್ನನ್ನವೊ
ಲೇಂ ಸೈಪಂ ಪಡೆದರೊಳರೆ ನೀಂ ಬರೆ ಪೆಜಱೇಂ
ಕಂಸಾರೀ ಯುಷ್ಮತ್ಪದ
ಪಾಂಸುಗಳಿಂದಾಂ ಪವಿತ್ರಗಾತ್ರನೆನಾದೆಂ [೯-೩೨]

ಎಂಬುದಾಗಿ ವಿನಯಪೂರ್ವಕವಾಗಿ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಾ ಕೃಷ್ಣನನ್ನು ಬಂದ ಕಾರಣವೇನೆಂದು ಕೇಳುವನು. ಆಗ ಶ್ರೀಕೃಷ್ಣನು ಎದ್ದು ನಿಂತು—

ಆ ಸಭೆಯೊಳ್ ಹರಿ ಕರವಿ
ನ್ಯಾಸಂಗಳ್ ನುಡಿಯನಡಕುವಂತಿರೆ ನುಡಿದಂ
ಪಾಸುಂ ಪೊಕ್ಕುಂ ಪರೆದು ಸ
ಭಾಸದನಂ ತೊಳಗಿ ಬೆಳಗೆ ದಂತಪ್ರಭೆಗಳ್ [೯-೩೫]

ಎಂಬುದಾಗಿ ನುಡಿದಾಗ ಅವನ ಹಲ್ಲಿನ ಹೊಗರು ಹೊರಹೊಮ್ಮಿತು; ರಾಜಸಭೆ ಬೆಳಗಿನಂತೆ ಹೊಳೆಯಿತು. ಕೃಷ್ಣ ಹೇಳಿದ ನೀತಿಯ ಸಂಧಾನದ ಮಾತುಗಳಿಗೆ ಕೌರವೇಂದ್ರ ಕಿನಿಸಿ ಕಿಂಕಿರಿಹೋಗಿ ಖಡ್ಗವನ್ನಿರಿದು ಕೃಷ್ಣನಮೇಲೆ ಬಿದ್ದಾಗ—

ಮೂಱಡಿ ಮಾಡಿದಂದು ನೆಲನೆಲ್ಲಮನಾ ಬಲಿಗಾದ
ರೂಪಮಂ
ತೋಱಿದನೀ ಜಗತ್ತ್ರಯಮನೊರ್ಮೆಯೆ ನುಂಗುವ
ಕಾಲ ರೂಪಮಂ
ತೋಱಿದನಂತೆ ರೌದ್ರತರ ರೂಪಮನೊರ್ಮೆಯೆ ವಿಶ್ವ
ರೂಪಮಂ
ತೋಱಿದನಿರ್ದರಂ ನೆಱೆಯೆ ಮೋಹಿಸಿ ವೈಷ್ಣವದಿಂ
ಮುರಾಂತಕಂ [೯-೬೦]

ಇಂತು ತನ್ನ ವಿಶ್ವರೂಪವನ್ನು ತೋರಿದಾಗ, ದುರ್ಯೋಧನನ ತಂದೆ ಧೃತರಾಷ್ಟ್ರ ಬಂದು ಮುಕುಂದನನ್ನು ಶತಸಹಸ್ರ ಸ್ತೋತ್ರಗಳಿಂದ ಬಾಯ್ತುಂಬ ಸ್ತುತಿಸುವನು. ಆ ಸಮಯದಲ್ಲಿ ಕೃಷ್ಣನು ಧೃತರಾಷ್ಟ್ರನಿಗೆ ವರದನಾಗಿ ದಿವ್ಯದೃಷ್ಟಿಯಂ ದಯೆಗೈದು ಕರುಣಿಸಿದನು.

ಒಂಬತ್ತನೆಯ ಆಶ್ವಾಸದ ಅರ್ಧಭಾಗ ಕೃಷ್ಣನ ದೈವತ್ವವನ್ನು ಪ್ರಕಾಶಿಸುತ್ತದೆ. ಮೂಲ ವ್ಯಾಸಭಾರತದಲ್ಲಿ ದುಷ್ಟಗುಣಗಳ ಗಣಿಯೆಂದು ವಿವರಣೆಗೊಂಡು, ಅವಜ್ಞೆ—ಅನಾದರಗಳಿಗೆ ಒಳಗಾದ ದುರ್ಯೋಧನ ಕರ್ಣರ ಪಾತ್ರಗಳನ್ನೇ ಉತ್ತಮಗೊಳಿಸಿ ಮಾನವೀಯ ಸಹೃದಯತೆಯಿಂದ ಸಮೀಕ್ಷಿಸಿದ ಜೈನದೃಷ್ಟಿಯುಳ್ಳ ಪಂಪನ ಕವಿಚೇತನ ಕೃಷ್ಣಪಾತ್ರವನ್ನು ಕೀಳುಗೈದೀತೆ?

ಯುದ್ಧಭೂಮಿಯಲ್ಲಿ ಅರ್ಜುನನ ಮನಸ್ಸಿನಲ್ಲಿ ಉಂಟಾದ ವ್ಯಾಮೋಹವನ್ನು ಕಳೆಯಲೆಂದು ಮುಕುಂದಂ ದಿವ್ಯಸ್ವರೂಪಮಂ ತೋರಿ—

ಆದಿರದಿದಿರ್ಚಿ ತಳ್ತಿರಿಯಲೀ ಮಲೆದೊಡ್ಡಿದ
ಚಾತುರಂಗಮಂ
ಬುದು ನಿನಗೊಡ್ಡಿ ನಿಂದುದಿದನೋವದೆ ಕೊಲ್ವೊಡೆ
ನೀನುಮೆನ್ನ ಕ
ಜ್ಜದೊಳೆಸಗೆಂದು ಸೈತಜಿತನಾದಿಯ ವೇದ
ರಹಸ್ಯದೊಳ್ ನಿರಂ
ತದ ಪರಿಚರ್ಯೆಯಿಂ ನೆಱೆಯೆ ಯೋಜಿಸಿದಂ
ಕದನ ತ್ರಿಣೇತ್ರನಂ [೧೦-೬೪]

ಅರ್ಜುನ ಸಂಪ್ರೀತನಾಗಿ "ಪುರಾಣ ಪುರುಷನಪ್ಪ ಪುರುಷೋತ್ತಮಂಗೆಱಗಿ ಪೊಡಮಟ್ಟು" ಯುದ್ಧ ಮಾಡಲು ಒಡಂಬಡುವನು.

ಪಂಪ ಭಾರತದ ಇನ್ನೂ ಹಲವು ಭಾಗಗಳಲ್ಲಿ ಕೃಷ್ಣನ ಮಹಿಮೆ ವ್ಯಕ್ತವಾಗಿದೆ. ಕೃಷ್ಣ ಧರ್ಮರಾಯನಿಗೆ ದೇವರು ಅರ್ಜುನನಿಗೆ ಗುರು, ಗೆಳೆಯ, ಪಾಂಡವರಿಗೆ ಮಾರ್ಗದರ್ಶಕ. ಯುದ್ಧ ಸಿದ್ಧತೆಗೆ ಮೊದಲೂ ಅನಂತರವೂ ಸಲಹೆಗಾರ. ಪಾಂಡವರ ಕಡೆಯಲ್ಲಿ ವೀರಪಟ್ಟ ಕಟ್ಟುವ ವಿಷಯದಲ್ಲಿ ಕೃಷ್ಣನದೇ ಅಂತಿಮ ತೀರ್ಮಾನ ಕೃಷ್ಣನ ನಿರ್ಧಾರವನ್ನು ಯಾರೂ ವಿರೋಧಿಸರು ಬದಲಿಸರು. ಪಾಂಡವರ ಪರವಾಗಿ ಸಂಧಾನ ನಡೆಸುವ ರಾಯಭಾರಿಯಾಗಿ ಸಂವಿಧಾನ ರೂಪಿಸುವ ಮುತ್ಸದ್ದಿಯಾಗಿ ಪಂಪ ಭಾರತದ ತುಂಬ ಕೃಷ್ಣ ಕಂಗೊಳಿಸುವನು. ಪಾಂಡವರಿಗೆ, ಸತ್ಯವಂತರಿಗೆ, ದಾರಿತೋರಿದವನೂ ಗುರಿಮುಟ್ಟಿಸಿದವನೂ ಅವನೇ ಆಗಿದ್ದಾನೆ—ಪಂಪನ ದೃಷ್ಟಿಯಲ್ಲಿ. ಈ ರೀತಿಯಲ್ಲಿ ಪುಣ್ಯಪುರುಷನಾದ ಪರಮಾತ್ಮನ ಪ್ರತಿರೂಪಾದ ಕೃಷ್ಣನನ್ನು "ಚಲದೊಳ್ ದುರ್ಯೋಧನಂ............" ಎಂಬ ಕೇವಲ ಮಾನವರನ್ನು ಮಾತ್ರ ಕೊಂಡಾಡುವ ಪದ್ಯದಲ್ಲಿ ಸೇರಿಸದೆ ಇರುವುದು ಉಚಿತವಾಗಿದೆ, ಪ್ರಶಂಸನೀಯವಾಗಿದೆ, ಪಂಪನ ಔಚಿತ್ಯ ಪ್ರಜ್ಞೆಗೆ ಸಾಕ್ಷಿಯಾಗಿದೆ. ಇದರಿಂದ ಕವಿಪ್ರಜ್ಞೆ ಹೇಗೆ ಸದಾ ಎಚ್ಚರದಿಂದ ಇರುತ್ತದೆಂಬುದು ವ್ಯಕ್ತವಾಗುತ್ತದೆ.

ಕೃಷ್ಣನನ್ನು ಪಂಪ ಕಡೆಗಣಿಸಲಿಲ್ಲ. ತದ್ವಿರುದ್ಧವಾಗಿ ಕೃಷ್ಣನನ್ನು ಮಡೆಯಲ್ಲೇ ಮೆರೆಸಿದ್ದಾನಲ್ಲದೆ, ಕಾಣದಂತೆಯೂ ಕಾಣುವಂತೆಯೂ ಕೊಂಡಾಡಿದ್ದಾನೆ. ಕಣ್ಣಿದ್ದೂ ಕುರುಡರಾದರೆ, ಕೃಷ್ಣನ ಕೊಂಡಾಟ ಕಾಣುವುದಿಲ್ಲ. ಕಿವಿಯಿದ್ದೂ ಕಿವುಡರಾದರೆ ಕೇಳುವುದಿಲ್ಲ! ಕೃಷ್ಣನ ಪಾತ್ರವನ್ನು ಚಿತ್ರಿಸುವಾಗ, ಮತದೃಷ್ಟಿ ಪಂಪನ ಕಣ್ಣಿಗೆ ಮಂಜಿನ ಮುಸುಕನ್ನು ಎಸೆದಿಲ್ಲ. ಅದರ ಬದಲು ಕವಿಸಹಜ ನಿರ್ಮಲದೃಷ್ಟಿ ಕೃಷ್ಣನ ಪಾತ್ರದ ಕಾಂತಿಯನ್ನು ಮಸೆದು ತೊಳಗಿ ಬೆಳಗುವಂತೆ ಮಾಡಿದೆ. ಹೀಗಾಗಿ ಪಂಪ ಭಾರತದಲ್ಲಿ ಕೃಷ್ಣ ವ್ಯಾಸ ಭಾರತದಂತೆ, ಗದುಗಿನ ಭಾರತದಂತೆ, ಕೇವಲ ಪವಾಡ ಪುರುಷನಂತೆ ಕಾಣಿಸದೆ, ಸಹೃದಯರ ರಸದೃಷ್ಟಿಗೆ ಸಹಜ ಸಂಭವನೀಯ ಉದಾತ್ತಮಾನವನಾಗಿ, ದೈವಾಂಶವನ್ನು ಹೊತ್ತ ವೇದಮೂರ್ತಿಯಾಗಿ ಶೋಭಿಸಿದ್ದಾನೆ. ಪಂಪನ ಕೃಷ್ಣ ವ್ಯವಹಾರ ನಿಪುಣನೂ, ಅಲೌಕಿಕ ಶಕ್ತಿ ಹೊತ್ತಿರುವ ಮಹಾಮಹಿಮನೂ ಆಗಿ ರಾರಾಜಿಸಿದ್ದಾನೆ.

—ಕಮಲಾ ಹಂಪನಾ

# ಉದಯನ—ಯೌಗಂಧರಾಯಣರ ಕಥೆ

ಉದಯನನ ಚರಿತ್ರೆಯನ್ನು ಆಧರಿಸಿ ಕನ್ನಡದಲ್ಲಿ ಕಾವ್ಯ ನಾಟಕ ಕಾದಂಬರಿಗಳನ್ನು ಯಾವ ಕವಿಯೂ ಬರೆದಿರಲಿಲ್ಲ. ಇಷ್ಟೇ ಅಲ್ಲ, ಮರಾಠಿಯಲ್ಲಿಯೂ ಯಾವ ಕವಿಯೂ ಇವನನ್ನು ಕುರಿತು ಬರೆದಿರಲಿಲ್ಲ, ಇಷ್ಟೇ ಏಕೆ, ಆತನನ್ನು ಕುರಿತು ಸಂಸ್ಕೃತದಲ್ಲಿ ಭಾಸನು ಬರೆದಿದ್ದ ನಾಟಕಗಳು ದೊರೆತಿರಲಿಲ್ಲ. "ಭಾಸೋ ಹಾಸಃ ಕವಿಕುಲ ಗುರುಃ ಕಾಲಿದಾಸೋವಿಲಾಸಃ"ಎಂಬ ವಾಕ್ಯದಿಂದ ಭಾಸನು ಕವಿಯೆಂದು ತಿಳಿದುಬರುತ್ತಿದ್ದರೂ, ಆತನ 'ವಾಸವದತ್ತಾ' ಎಂಬ ನಾಟಕವು ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಪ್ರಕಟವಾಗುವವರೆಗೆ ಆ ನಾಟಕವ ಹೆಸರೂ ಸಹ ತಿಳಿದುಬರುತ್ತಿರಲಿಲ್ಲ. ಈ ನಾಟಕದ ನಾಯಕನು ಉದಯನನು. ಅವನ ಮಂತ್ರಿಯು ಮಂತ್ರಜ್ಞನಾದ ಯೌಗಂಧರಾಯಣನು; ಸೇನಾಪತಿ ರುಮಣ್ವಂತನು. ಆದರೆ ಆ ಸ್ವಪ್ನವಾಸವದತ್ತಾ ನಾಟಕವು ಕನ್ನಡಕ್ಕೆ ಪರಿವರ್ತಿತವಾಗುವವರೆಗೆ ಕನ್ನಡವ ರಸಿಕ ಪಂಡಿತರ ಗಮನವು ಅದರ ಕಡೆಗೆ ಎಳೆಯಲಾಗಲಿಲ್ಲ. ಅದು ಕನ್ನಡಕ್ಕೆ ಪರಿವರ್ತಿತವಾದ ಮೇಲೆಯೂ ಉದಯನನ ಕಥೆಯ ಮೂಲವೆಲ್ಲಿ ? ಎಂದು ಯಾರೂ ವಿಚಾರಿಸಲಿಲ್ಲ. ಅದನ್ನು ವಿಚಾರಿಸುವ ಕಾರ್ಯಭಾರ ನನ್ನ ಮೇಲೆ ಬಿದ್ದಿದೆ. ಉದಯನನ ಕಥೆ ಸ್ಕಾಂದ ಪುರಾಣದೊಳಗಿನ ಬ್ರಹ್ಮಖಂಡದ ೧ ನೆಯ ಭಾಗದ ೫ ನೆಯ ಅಧ್ಯಾಯದಲ್ಲಿ ಹೀಗಿದೆ :—

ಒಂದಾನೊಂದು ಸಮಯದಲ್ಲಿ ಸತ್ಯಲೋಕದಲ್ಲಿ ಬ್ರಹ್ಮನು, ಸಾವಿತ್ರಿ ಸರಸ್ವತಿ, ಸನಕಾದಿ ಮುನೀಶ್ವರರು, ಇಂದ್ರಾದಿ ದೇವತೆಗಳು, ಆದಿತ್ಯಾದಿ ನವಗ್ರಹಗಳು, ಸಿದ್ಧರು,ಕಿನ್ನರರು,ಕಿಂಪುರುಷರು, ವಸುಗಳು, ಗಂಧರ್ವರು ಮುಂತಾದ ಪಾರಿಷದರನ್ನು ಕೂಡಿಕೊಂಡು ಸಭೆಗೊಟ್ಟು ಊರ್ವಸಿ, ರಂಭೆ,ಮೇನಕೆ, ತಿಲೋತ್ತಮೆ,ಮುಂತಾದ ಅಪ್ಸರೆಯರ ನೃತ್ಯವನ್ನು ನೋಡುತ್ತ ಓಲಗದಲ್ಲಿದ್ದನು. ಆಗ ಅಪ್ಸರೆಯರು ಒಬ್ಬರಾದ ಮೇಲೊಬ್ಬರು ನೃತ್ಯವಾಡುತ್ತ ಎಲ್ಲರೂ ಬಳಲಿದವರಾಗಲು, ಬೆಡಗುಗಾತಿಯೂ ಪ್ರಾಯದವಳೂ ಆದ ಅಲಂಬುಸೆಯೆಂಬ ಅಪ್ಸರೆಯು ಆ ಸಭಿಕರೆಲ್ಲರನ್ನೂ ಮೋಹಗೊಳಿಸುತ್ತ ನರ್ತನಮಾಡತೊಡಗಿದಳು. ಆಗ ಅವಳ ರಸಿಕತೆ, ಕಲಾನೈಪುಣ್ಯ, ಹಾವ, ಭಾವ, ವಿಲಾಸ, ವಿಭ್ರಮ ಮುಂತಾದ ಅಂಗಚೇಷ್ಟೆಗಳನ್ನು ಎಲ್ಲರೂ ನೋಡಲಾರದೆ ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡಿರಲು, ವಿಧೂಮನೆಂಬ ವಸುವು ಕಾಮಮೋಹಿತನಾಗಿ ಕಣ್ಣುಗಳನ್ನರಳಿಸಿಕೊಂಡು ಅವಳನ್ನೇ ನಿಂತುಕೊಂಡು ನೋಡುತ್ತಿದ್ದನು. ಬ್ರಹ್ಮದೇವನು ಅವನ ಸ್ಥಿತಿಯನ್ನು ಕಂಡು, ಕುಪಿತನಾಗಿ ಅವನ ಅವಿನಯಕ್ಕೆ "ನೀನು ನರಲೋಕದಲ್ಲಿ ರಾಜಪುತ್ರನಾಗಿ ಜನ್ಮತಾಳು; ಈ ಅಲಂಬುಸೆಯೂ ನರಲೋಕದಲ್ಲಿ ರಾಜಪುತ್ರಿಯಾಗಿ ಜನಿಸಿ,ನಿನ್ನ ಪತ್ನಿಯಾಗಿ, ನೀವಿಬ್ಬರೂ ಸುಖವನ್ನು ಅನುಭವಿಸಿರಿ" ಎಂದು ಶಪಿಸಿದನು. ಅದನ್ನು ಕೇಳಿ ವಿಧೂಮನು ದುಃಖದಿಂದ ಗದ ಗದ ನಡುಗಿ ಪಶ್ಚಾತ್ತಾಪಪಡುತ್ತ ಉಶ್ಶಾಪವನ್ನು ಕೇಳಿಕೊಂಡನು. ಅವನ ಪಶ್ಚಾತ್ತಾಪಕ್ಕೆ ಮನಕರಗಿದವನಾಗಿ ಅವನನ್ನು ಸಂತೈಸಿ ಹೇಳಿದನು : "ಎಲೈ ವಿಧೂಮನೇ, ನನ್ನ ಆ ವಚನವು ಅಸತ್ಯವಾಗಲಾರದು. ಆದರೆ, ಈ ಶಾಪಕ್ಕೆ ಒಂದು ಅವಧಿಯನ್ನಿಡುವೆನು. ನೀನು ಭೂಲೋಕದಲ್ಲಿ ಒಬ್ಬ ಮಹಾರಾಜನಾಗಿ ಈ ಅಲಂಬುಸೆಯೊಡನೆ ಬಹುಕಾಲ ರಾಜ್ಯವಾಳು. ಈಕೆಯಲ್ಲಿ ಅಸಾಧಾರಣನಾದ ಮಗನೊಬ್ಬನನ್ನು ಪಡೆದು, ಸಮರ್ಥನಾದ ಅವನಿಗೆ ಪಟ್ಟಗಟ್ಟು. ಈ ಶಾಪವಿಮುಕ್ತಿಗಾಗಿ ದಕ್ಷಿಣಸಮುದ್ರದ ದಡದಲ್ಲಿ ಫುಲ್ಲಗ್ರಾಮದ ಬಳಿಯಲ್ಲಿರುವ ಶ್ರೇಷ್ಠವಾದ ಚಕ್ರತೀರ್ಥದಲ್ಲಿ ಇವಳೊಡನೆ ಸ್ನಾನಮಾಡು. ಆಗ ನೀನು ಸರ್ಪವು ಪೊರೆ

ಬಿಡುವಂತೆ ಮನುಷ್ಯತ್ವವನ್ನು ನೀಗಿ, ನಿನ್ನ ಪತ್ನಿಯೊಡನೆಯೇ ನಿನ್ನ ಲೋಕವನ್ನು ಮತ್ತೆ ಪಡೆಯುವೆ.” ಈ ಉಶ್ಶಾಪದಿಂದ ವಿಧೂಮನು ಸಮಾಧಾನಗೊಳ್ಳದೆ, ಚತುರಾನನನನ್ನು ವಂದಿಸಿ ತನ್ನ ಮನೆಗೆ ಹೋದನು; ಮತ್ತು “ಕೌಶಂಬೀ ನಗರದಲ್ಲಿ ಶತಾನೀಕನೆಂಬ ಪರಾಕ್ರಮಿಯಾದ ಅರಸನಿರುವನು. ನಾರಾಯಣನಿಗೆ ಲಕ್ಷ್ಮಿಯಂತೆ ಪ್ರಿಯ ಪತಿವ್ರತೆಯಾದ ವಿಷ್ಣುಮತಿ ಎಂಬ ಅರಸಿ ಆತನಿಗಿರುವಳು. ನಾನು ಅವರನ್ನೇ ತಂದೆ ತಾಯಿಯರನ್ನು ಮಾಡಿಕೊಂಡು, ನನ್ನ ಕರ್ಮವಶದಿಂದ ಭೂಲೋಕದಲ್ಲಿ ಹುಟ್ಟುವೆನು” ಎಂದು ನಿಶ್ಚಯಿಸಿದನು.

ಬಳಿಕ ಆತನು ಮಾಲ್ಯವಂತ, ಪುಷ್ಪದಂತ, ಬಲೋತ್ಕಟರೆಂಬ ತನ್ನ ಮೂವರು ಸೇವಕರನ್ನು ಕರೆದು, ಈ ಸಮಾಚಾರವನ್ನು ಅವರಿಗೆ ತಿಳಿಸಿದನು. ಅದನ್ನು ಕೇಳಿ ಆ ಭೃತ್ಯರು ಕಣ್ಣೀರಿಟ್ಟು ಹೇಳಿದರು: “ನಾವು ನಿನ್ನನ್ನಗಲಿರಲಾರೆವು. ನಿನ್ನ ಕೂಡ ನಾವೂ ಮನುಷ್ಯರಾಗಿ ಹುಟ್ಟುವೆವು. ಶತಾನೀಕ ರಾಜರ್ಷಿಗೆ ಯುಗಂಧರನೆಂಬ ಮಂತ್ರಿಯೂ, ವಿಪ್ರತೀಕನೆಂಬ ಸೇನಾಪತಿಯೂ, ಹಾಸ್ಯಪ್ರಿಯನಾದ ವಲ್ಲಭನೆಂಬ ಬ್ರಾಹ್ಮಣನೂ ಭೃತ್ಯರಾಗಿರುವರು. ನಾವು ಮೂವರೂ ಕ್ರಮವಾಗಿ ಅವರ ಮಕ್ಕಳಾಗಿ ಹುಟ್ಟುವೆವು. ಅಲ್ಲಿ ನಾವು ನಿನಗೆ ಆ ಆ ಕೆಲಸಗಳಿಂದ ಸೇವೆ ಸಲ್ಲಿಸಿಕೊಂಡಿರುವೆವು. ನೀವು ನಮ್ಮನ್ನು ಕಾಪಾಡಬೇಕೆಂದು ಪದೇ ಪದೇ ಬೇಡಿಕೊಂಡರು. ಕಡೆಗೆ ವಿಧೂಮನು ಆ ಮೂವರೊಡನೆ ಕೌಶಾಂಬಿಗೆ ತೆರಳುವುದನ್ನು ನಿಶ್ಚಯಿಸಿದನು. ಇದೇ ಸಮಯದಲ್ಲಿ ಚಂದ್ರವಂಶದ ಜನಮೇಜಯರಾಜನ ಮಗನಾದ ಶತಾನೀಕನು ಪ್ರಜಾಪಾಲನ ಸಮರ್ಥನಾಗಿ ಕೌಶಾಂಬಿಯಲ್ಲಿ ರಾಜ್ಯವಾಳುತ್ತಿದ್ದನು. ಬಹಳ ದಿನಗಳವರೆಗೆ ಆತನ ಧರ್ಮಪತ್ನಿಯಲ್ಲಿ ಮಕ್ಕಳಾಗಲಿಲ್ಲೆಂಬ ಚಿಂತೆ ಆತನನ್ನು ಕಾಡಹತ್ತಿತು. ಈ ಸಂಗತಿಯನ್ನು ಆತನು ಯುಗಂಧರನಿಗೆ ತಿಳಿಸಲು, ಆತನು ಅರಸನನ್ನು ಕರೆದುಕೊಂಡು ಶಾಂಡಿಲ್ಯ ಋಷಿಯ ಬಳಿಗೆ ಹೋಗಿ, ಅರಸನ ಚಿಂತೆಯ ಕಾರಣವನ್ನು ನಿವೇದಿಸಿದನು. ಶಾಂಡಿಲ್ಯನು ಪುತ್ರೋತ್ಪತ್ತಿಯ ಉಪಾಯವನ್ನು ನಿವೇದಿಸಿ, ಅವನಿಂದ ಪುತ್ರಕಾಮೇಷ್ಟಿಯೆಂಬ ಯಜ್ಞವನ್ನು ಮಾಡಿಸಿದನು. ಅದರ ಫಲವಾಗಿ ಆತನಿಗೆ ಸಹಸ್ರಾನೀಕನೆಂಬ ಪುತ್ರನುದಯಿಸಿದನು. ಇವನೇ ಬ್ರಹ್ಮಶಾಪಕ್ಕೊಳಗಾದ ವಿಧೂಮ ವಸುವು. ಇದೇ ಸಮಯದಲ್ಲಿ ಯುಗಂಧರನಿಗೆ ಯೌಗಂಧರಾಯಣ, ವಿಪ್ರತೀಕನಿಗೆ ರುಮಣ್ವಂತ ಮತ್ತು ವಲ್ಲಭ ಬ್ರಾಹ್ಮಣನಿಗೆ ವಸಂತನೆಂಬ ಮಕ್ಕಳಾದರು. ಇವರೇ ವಿಧೂಮವಸುವಿನ ಭೃತ್ಯರಾದ ಮಾಲ್ಯವಂತ, ಪುಷ್ಪದಂತ, ಬಲೋತ್ಕಟರು. ಆಲಂಬುಸೆಯೂ ಅಯೋಧ್ಯೆಯ ಅರಸನಾದ ಕೃತವರ್ಮನ ಮಗಳಾಗಿ ಹುಟ್ಟಿ, ಮೃಗಾವತಿ ಎಂಬ ಹೆಸರಿನಿಂದ ಬೆಳೆಯುತ್ತಿದ್ದಳು.

ಹೀಗೆ ಈ ಐವರೂ ಬೆಳೆಯುತ್ತಿರಲು, ಅಹಿದಂಷ್ಟ್ರನೆಂಬ ದುಷ್ಟ ರಾಕ್ಷಸನು ಅಮರಾವತಿಯನ್ನು ಮುತ್ತಿ, ದೇವತೆಗಳನ್ನೆಲ್ಲ ಪೀಡಿಸಹತ್ತಿದನು. ಆಗ ದೇವೇಂದ್ರನು ಶತಾನೀಕನನ್ನು ತನ್ನ ಸಹಾಯಕ್ಕೆ ಕರೆಯಿಸಿಕೊಂಡನು. ಆತನು ಅಹಿದಂಷ್ಟ್ರನ ಕೂಡ ಯುದ್ಧಮಾಡಿ, ಅವನನ್ನು ಕೊಂದು ತಾನೂ ಸತ್ತನು. ತರುವಾಯ ಮಂತ್ರಿಗಳು ಸಹಸ್ರಾನೀಕನಿಗೆ ಪಟ್ಟಗಟ್ಟಿದರು. ಯುಗಂಧರ ಮುಂತಾದ ಮಂತ್ರಿಗಳು ತೀರಿಹೋಗಲು, ಯೌಗಂಧರಾಯಣ ಮುಂತಾದ ಮೂವರು ಮಂತ್ರಿಪುತ್ರರು ಸಹಸ್ರಾನೀಕನಿಗೆ ಆಯಾ ಕೆಲಸಗಳಲ್ಲಿ ನಿಯುಕ್ತರಾದರು. ಕೆಲವು ಕಾಲದ ತರುವಾಯ ಇಂದ್ರನು ಸಹಸ್ರಾನೀಕನನ್ನು ನಂದನೋತ್ಸವಕ್ಕೆ ಕರೆಯಿಸಿಕೊಂಡು ಆತನು ವಿಧೂಮವಸುವೆಂದೂ, ಆಲಂಬುಸೆಯ ವಿಷಯದಲ್ಲಿ ಆತನ ಅವಿನಯಕ್ಕಾಗಿ ಬ್ರಹ್ಮನು ಅವನಿಗೆ ಶಾಪವಿತ್ತಕಾರಣ, ಅವನು ಸಹಸ್ರಾನೀಕನಾಗಿ ಜನ್ಮತಾಳಿರುವನೆಂದೂ,

ಅವಳು ಅಯೋಧ್ಯೆಯಲ್ಲಿ ಮೃಗಾವತಿಯಾಗಿ ಜನ್ಮ ತಾಳಿರುವಳೆಂದೂ, ಅವನು ಅವಳನ್ನು ಮದುವೆ ಯಾಗಿ ಮನ್ಮಥನಂತಹ ಮಗನನ್ನು ಹೆತ್ತು, ಪುಲ್ಲ ಗ್ರಾಮದ ಬಳಿ ಚಕ್ರತೀರ್ಥದಲ್ಲಿ ಮಿಂದು ಶಾಪ ವಿಮುಕ್ತನಾಗುವನೆಂದೂ ತಿಳಿಸಿದನು. ಆ ಶಾಪ ವನ್ನೇ ನೆನೆಯುತ್ತ ಆತನು ತಿರುಗಿ ಬರುವಾಗ, ದಾರಿಯಲ್ಲಿ ತಿಲೋತ್ತಮೆಯು ಆತನನ್ನು ಕಂಡು ಮಾತನಾಡಿಸಿದರೂ ಮೃಗಾವತಿಯಲ್ಲಿ ಲುಬ್ಧ ನಾದ ಆತನು ಅವಳನ್ನು ಗಮನಿಸಲಿಲ್ಲ. ಅದ ರಿಂದ ಅವಳು ಕ್ರುದ್ಧಳಾಗಿ "ಹದಿನಾಲ್ಕು ವರುಷ ಗಳವರೆಗೆ ನೀನು ಮೃಗಾವತಿಯ ವಿರಹವನ್ನನು ಭವಿಸು" ಎಂದು ಶಪಿಸಿದಳು. ಆ ಅವಧಿಯ ತರುವಾಯ ಅವಳನ್ನೇ ಮದುವೆಯಾಗಿ ಆನಂದ ದಿಂದಿರುತ್ತಿದ್ದನು. ಕಾಲಾಂತರದಲ್ಲಿ ಅವಳು ಗರ್ಭಿಣಿಯಾದಳು. ಸಹಸ್ರಾನೀಕನು ಅವಳ ಬಯಕೆಗಳು ಎಷ್ಟೇ ಕಷ್ಟತರವಾಗಿದ್ದರೂ, ಅವು ಗಳನ್ನು ಅಕ್ಕರೆಯಿಂದ ಪೂರೈಸಹತ್ತಿದ್ದನು. ಒಮ್ಮೆ ಅವಳಿಗೆ ರಕ್ತದ ಸರೋವರದಲ್ಲಿ ಜಲಕೇಳಿಯಾಡ ಬೇಕೆಂದು ಬಯಕೆಯಾಯಿತು. ಅದಕ್ಕಾಗಿ ಅರ ಸನು ಕುಂಕುಮಕೇಸರಿಯ ನೀರಿನ ಸರೋವರ ವನ್ನು ಸಿದ್ಧಪಡಿಸಿದನು. ಅದರಲ್ಲಿ ಅವಳು ಜಲ ಕೇಳಿಯಾಡುತ್ತಿರುವಾಗ, ಅರಳಿದ ಮುತ್ತುಗದ ಹೂವಿನಂತೆ ಅವಳು ಕಾಣುತ್ತಿದ್ದಳು. ಆಗ ಗರು ಡನ ವಂಶದಲ್ಲಿ ಹುಟ್ಟಿದ ಭಯಂಕರನಾದ ಒಂದು ಗರುಡಪಕ್ಷಿಯು ಮಾಂಸಖಂಡವೆಂದು ತಿಳಿದು, ಅವಳನ್ನು ಎತ್ತಿಕೊಂಡು ಹೋಗಿ, ಬಹಳ ದೂರ ವಿರುವ ಉದಯಾಚಲದ ತಪ್ಪಲಿನಲ್ಲಿ ಅವಳನ್ನು ಕೆಡವಿತು. ಅವಳು ವಿರಹದಿಂದ ಗೋಳಾಡುತ್ತ ಕಷ್ಟಪಡುತ್ತಿರಲು, ಅವಳನ್ನು ಕಂಡ ಮುನಿಕುಮಾ ರನೊಬ್ಬನು ಅವಳನ್ನು ಆಶ್ರಮಕ್ಕೆ ಕರೆದೊಯ್ದು ತನ್ನ ಗುರುವಾದ ಜಮದಗ್ನಿಗೆ ಒಪ್ಪಿಸಿದನು. ಆತನ ಸಂರಕ್ಷಣೆಯಲ್ಲಿದ್ದ ಅವಳು ಒಂಭತ್ತು ತಿಂಗ ಳು ತುಂಬಿದ ಮೇಲೆ ಸುಂದರ ಪುತ್ರನನ್ನು ಪಡೆ ದಳು. ದೊರೆಯ ಮಗನಾದ ಆತನು ಉದಯ ಪರ್ವತದಲ್ಲಿ ಜನಿಸಿದುದರಿಂದ, ಆ ಸಮಯದಲ್ಲಿ ಆಕಾಶವಾಣಿಯು ಆತನನ್ನು ಉದಯನನೆಂದು ಕರೆಯಿತು. ಜಮದಗ್ನಿ ಮಹರ್ಷಿಯು ಆತನಿಗೆ ಚೌಲೋಪನಯನಗಳನ್ನು ಮಾಡಿ, ಸಕಲ ವಿದ್ಯೆ ಗಳನ್ನೂ ಕಲಿಸಿದನು.

ಉದಯನನು ಪ್ರಾಯದವನಾಗಿ ಬೆಳೆದ ಬಳಿಕ ಒಮ್ಮೆ ಬೇಟೆಗೆ ಹೋದಾಗ, ಹಾವಾಡಿಗನ ಕೈಯಲ್ಲಿ ಸಿಕ್ಕು ಕಷ್ಟಪಡುತ್ತಿರುವ ನಾಗಸರ್ಪ ವನ್ನು ಕಂಡನು. ಅದನ್ನು ಬಿಡಿಸಬೇಕೆಂದು ಹಾವಾಡಿಗನನ್ನು ಕೇಳಿಕೊಂಡರೂ ಅವನು ಒಪ್ಪದೆ, ಅದನ್ನಾಡಿಸಿ ಜನರಿಂದ ಧನಧಾನ್ಯಗಳನ್ನು ಪಡೆದು ಹೊಟ್ಟೆ ಹೊರೆಯಲು ಅದು ಸಾಧನವಾಗುವು ದೆಂದು, ಅದನ್ನು ಬುಟ್ಟಿಯಲ್ಲಿ ಹಾಕಿ ಮುಚ್ಚಿಟ್ಟನು. ಆ ರಾಜಕುಮಾರನು ಹಣವಾಸೆಯುಳ್ಳ ಹಾವಾಡಿ ಗನಿಗೆ ತನ್ನ ತಾಯಿಯು ತನಗೆ ಕೊಟ್ಟ ಕೈಗಡಗ ವನ್ನು ಕೊಟ್ಟು ಅದನ್ನು ಬಿಡಿಸಿದನು. ಬಿಡುಗಡೆ ಹೊಂದಿದ ಆ ಸರ್ಪವು ಮನುಷ್ಯನಾಗಿ ನಿಂತು, ಕೈಮುಗಿದು ಸ್ನೇಹಮಾಡಿಕೊಂಡು ಆತನನ್ನು ಪಾತಾಳಕ್ಕೆ ಕರೆದುಕೊಂಡು ಹೋದನು. ಸರ್ಪ ರಾಜ ಪುತ್ರನ ಹೆಸರು ಕಿನ್ನರ. ಅವನಿಗೆ ಲಲಿತೆ ಯೆಂಬ ಸೋದರಿ ಇದ್ದಳು. ಉದಯನನು ಅವ ಳನ್ನು ಮದುವೆಯಾಗಿ ಅಲ್ಲಿಯೇ ಇದ್ದನು. ಕೆಲವು ದಿವಸಗಳ ತರುವಾಯ ಅವಳು ಒಬ್ಬ ಮಗನನ್ನು ಹೆತ್ತಳು. ಆ ಮಗನ ಮುಖವನ್ನು ನೋಡಿದಾ ಕ್ಷಣವೇ ಅವಳು ಉದಯನನನ್ನು ತನ್ನ ಹತ್ತಿರ ಕರೆದು "ನಾನು ಸುಕರ್ಣೆಯೆಂಬ ವಿದ್ಯಾಧರಿ ಯೆಂದೂ, ಶಾಪಮೂಲಕವಾಗಿ ಸರ್ಪವಾಗಿದ್ದೇ ನೆಂದೂ, ಈಗ ನಿನ್ನಿಂದ ಮಗನನ್ನು ಪಡೆದೆನೆಂದೂ, ನನ್ನ ಶಾಪವು ವಿಮೋಚನವಾಯಿತೆಂದೂ, ಈ ಮಗ ನನ್ನೂ, ಎಂದೂ ಬಾಡದ ತಾಂಬೂಲ ಮಾಲೆ ಯನ್ನೂ, ಘೋಷವತಿಯೆಂಬ ಈ ವೀಣೆಯನ್ನೂ ಸ್ವೀಕರಿಸು" ಎಂದು ಅವುಗಳನ್ನು ಅರ್ಪಿಸಿದಳು.

ಮತ್ತು ಎಲ್ಲರೂ ನೋಡುವಂತೆ ಆಕಾಶಕ್ಕೆ ಹಾರಿ ಹೋದಳು. ತರುವಾಯ ಉದಯನನು ಮಾವನೇ ಮುಂತಾದ ನೆಂಟರಿಷ್ಟರನ್ನು ಬೀಳ್ಕೊಂಡು, ಆ ವೀಣೆಯನ್ನೂ, ತಾಂಬೂಲಮಾಲೆಯನ್ನೂ ತೆಗೆದು ಕೊಂಡು ಮಗನೊಡಗೂಡಿ, ದುಃಖಸಂತಪ್ತಳಾದ ತನ್ನ ತಾಯಿಯನ್ನು ಸಂತೈಸುವುದರಲ್ಲಾತುರನಾಗಿ, ಜಮದಗ್ನಿಯ ಆಶ್ರಮಕ್ಕೆ ಹಿಂದಿರುಗಿದನು. ಅಲ್ಲಿ ತಾಯಿಗೆ ತನ್ನ ಎಲ್ಲ ವೃತ್ತಾಂತವನ್ನೂ ಅರುಹಿ ದನು. ಅದನ್ನು ಕೇಳಿ ಮೃಗಾವತಿಯು ಮೊಮ್ಮ ಗನನ್ನು ಅಪ್ಪಿಕೊಂಡು ಹರುಷಿತಳಾದಳು.

ಇತ್ತ ಆ ಹಾವಾಡಿಗನು ಕೌಶಾಂಬಿಗೆ ಹೋಗಿ ಅಲ್ಲಿ ಒಬ್ಬ ವೈಶ್ಯನ ಕಡೆಗೆ ಕಂಕಣವನ್ನು ಮಾರಲು ಹೋದನು. ಆ ವೈಶ್ಯನು ಅದರ ಮೇಲಿರುವ ಅರಸನ ಹೆಸರನ್ನು ಕಂಡು, ಅದನ್ನು ತೆಗೆದುಕೊಂಡು, ಆತನೊಡನೆ ರಾಜನ ಬಳಿಗೆ ಹೋಗಿ, ಆ ಸಮಾಚಾರವನ್ನು ಅರಿಕೆ ಮಾಡಿ ದನು. ಮೃಗಾವತಿಯು ವಿರಹದಿಂದ ಬಳಲಿದ ಅರಸನು ಹಾವಾಡಿಗನಿಂದ ಎಲ್ಲ ವೃತ್ತಾಂತವನ್ನೂ ತಿಳಿದು, ಮಡದಿಯನ್ನು ಕಾಣಬೇಕೆಂದು ಮಂತ್ರಿ ಗಳನ್ನು ಕೂಡಿಕೊಂಡು ಉದಯಪರ್ವತಕ್ಕೆ ಹೊರಟನು. ಬಹಳ ದಿವಸಗಳವರೆಗೆ ದಾರಿ ಯನ್ನು ಕ್ರಮಿಸಿ, ಆಶ್ರಮವನ್ನು ತಲುಪಿ ಋಷಿ ಯನ್ನು ವಂದಿಸಿದನು. ಜಮದಗ್ನಿಯು ಆತ ನನ್ನು ಬರಮಾಡಿಕೊಂಡು ಸತ್ಕರಿಸಿ, ಆತನ ಪತ್ನಿ, ಪುತ್ರ, ಉದಯನ ಪುತ್ರರನ್ನು ಆತನಿಗೆ ಒಪ್ಪಿಸಿ ದನು. ಅರಸನು ಸಂತುಷ್ಟನಾಗಿ ಅವರನ್ನು ಸ್ವೀಕರಿಸಿ ಕೌಶಾಂಬಿಗೆ ಹೊರಟನು. ರಾಜಧಾ ನಿಗೆ ಬಂದ ಬಳಿಕ, ಇಂದ್ರನ ಮಾತುಗಳನ್ನು ನೆನ ಪಿಗೆ ತಂದುಕೊಂಡು, ಉದಯನನಿಗೆ ರಾಜ್ಯವನ್ನು ಒಪ್ಪಿಸಿ, ಮೃಗಾವತಿ ಸಮೇತನಾಗಿ ಪುಲ್ಲಗ್ರಾಮದ ಬಳಿಯಲ್ಲಿ ಚಕ್ರತೀರ್ಥಕ್ಕೆ ಬಂದನು. ಅಲ್ಲಿ ಸ್ನಾನ ಮಾಡಿದ ಕೂಡಲೆ ಶಾಪವಿಮುಕ್ತನಾಗಿ ಸ್ವರ್ಗ ಲೋಕಕ್ಕೆ ತೆರಳಿದನು.

ಈ ಕಥೆಯಲ್ಲಿ ವಾಸವದತ್ತೆಯ ಹೆಸರೇ ಬಂದಿಲ್ಲ. ಘೋಷವತಿ ಎಂಬ ಹೆಸರಿನ ವೀಣೆಯ ಉಲ್ಲೇಖವಿದೆ. ಆದರೆ, ಅದನ್ನು ಬಾರಿಸುತ್ತ ಉದಯನನು ಆನೆಗಳನ್ನು ಪಳಗಿಸುತ್ತಿದ್ದ ಸಂಗ ತಿಯು ಹೇಳಲಾಗಿಲ್ಲ. ಆತನ ಈ ಆಟದಲ್ಲಿ ಕೃತಕ ಆನೆಯ ಕಾರಣವಾಗಿ ವೈರಿಗಳ ಸೆರೆಯಾಳಾದ ಕಥೆಯೂ ಇಲ್ಲ. ಆಮೇಲೆ ಯೌಗಂಧರಾಯ ಣನು ಅವನನ್ನು ತಂತ್ರದಿಂದ ಬಿಡಿಸಿಕೊಂಡು ಬಂದ ವೃತ್ತಾಂತವೂ ಇಲ್ಲ. ಭಾಸನು ಈ ವೃತ್ತಾಂ ತವನ್ನು ಉದಯನನಿಗೆ ಅಂಟಿಸಿ ಅದನ್ನು ಸ್ವಾರಸ್ಯ ಮಯವಾಗಿ ಮಾಡಿದ್ದಾನೆ. ಹರ್ಷನು ಈ ಕತೆ ಯನ್ನು ರತ್ನಾವಳಿಯಲ್ಲಿ ಉಪಯೋಗಿಸಿಕೊಂಡಿ ದ್ದಾನೆ. ಅದನ್ನೇ ಸಿಂಗರಾರ್ಯರು ಮಿತ್ರವಿಂದಾ ಗೋವಿಂದ ನಾಟಕದಲ್ಲಿ ಉಪಯೋಗಿಸಿಕೊಂಡಿ ದ್ದಾರೆ.

—ಕೆ. ಜಿ. ಕುಂದಣಗಾರ

# ಧೋಂಡೋ ನರಸಿಂಹ ಮುಳಬಾಗಲ

ಶ್ರೀ ಧೋಂಡೋ ನರಸಿಂಹ ಮುಳಬಾಗಲರು ಧಾರವಾಡ ಗೌರ್ನಮೆಂಟ್ ಹೈಸ್ಕೂಲಿನಲ್ಲಿ ಶಿಕ್ಷಕರಾಗಿದ್ದರು. ೧೮೯೮ ನೇ ಇಸ್ವಿಯಲ್ಲಿ ನರೇಂದ್ರ ಗ್ರಾಮದಲ್ಲಿ ಪ್ಲೇಗಿನಿಂದ ತೀರಿಕೊಂಡರೆಂದೂ, ಸಾಯುವ ಕಾಲಕ್ಕೆ ಅವರಿಗೆ ೫೩ ವರುಷಗಳಾಗಿದ್ದುವೆಂದೂ ಅವರ ಚಿರಂಜೀವರಾದ ಶ್ರೀ ನರಸಿಂಹ ಧೋಂಡೋ ಮುಳಬಾಗಲ ಅವರಿಂದ ತಿಳಿದು ಬಂದಿದೆ.

ಹತ್ತೊಂಬತ್ತನೆಯ ಶತಮಾನದ ಕೊನೆಯ ಎರಡು ದಶಕಗಳು ಶ್ರೀ ಮುಳಬಾಗಲರ ಸಾಹಿತ್ಯ ನಿರ್ಮಿತಿಯ ಕಾಲ. ಟೀಪು ಸುಲ್ತಾನನು ಕಾಲವಾಗಿ ಸರಿಯಾಗಿ ಎಂಭತ್ತು ವರ್ಷಗಳಾಗಿದ್ದುವು. ಮುಮ್ಮಡಿ ಕೃಷ್ಣರಾಜರ ಆಳಿಕೆ ಮುಗಿದು ಹನ್ನೊಂದು ವರ್ಷಗಳಾಗಿದ್ದುವು. ೧೮೫೭ ರಿಂದ ೧೮೯೯ರ ಕೊನೆಯ ವರೆಗೆ ಮೂರೇ ವರುಷಗಳಲ್ಲಿ ಬ್ರಿಟಿಷ್ ಆಧಿಪತ್ಯದ ಭಾರತವನ್ನು ನಡುಗಿಸಿದ ಬಂಡಾಯದ ಕಾಲದ ಝಳ ಆರಿತ್ತು. ಪೇಶ್ವೆಯವರ ಆಧಿಪತ್ಯಕ್ಕೊಳಗಾಗಿದ್ದ ಉತ್ತರ ಕರ್ನಾಟಕವು ಉದಯವಾಗುವ ಉಷಃಕಾಲ ಮೂಡಿತ್ತು. ಹುಬ್ಬಳ್ಳಿ, ಧಾರವಾಡಗಳಂತಹ 'ಅಸ್ಸಲ' ಕನ್ನಡ ಪಟ್ಟಣಗಳಲ್ಲಿಯೂ ವ್ಯಾಪಿಸಿದ್ದ ಮರಾಠಿಯ ಮಂಜು ಕರಗಿ, ಕನ್ನಡಿಗರ ಕಣ್ಣು ನಿಚ್ಚಳವಾಗತೊಡಗಿದ್ದವು. ಧಾರವಾಡ ಜಿಲ್ಲೆಯಲ್ಲಿ ಪ್ರಾಥಮಿಕ ಪ್ರಾದೇಶಿಕ ಶಾಲೆಗಳು ಆರಂಭವಾದರೂ, ಅಲ್ಲಿ ಕನ್ನಡವನ್ನು ಕಲಿಸಬೇಕೆಂಬುದನ್ನು ತಿಳಿಯದ ಶಿಕ್ಷಕರು, ಈಗ ತಿಳಿದೆದ್ದು ಹತ್ತು ಹನ್ನೆರಡು ವರುಷಗಳಾಗಿದ್ದುವು. ರಸೆಲ್ ಸಾಹೇಬರು, ಡೆಪ್ಯೂಟಿ ಚನ್ನಬಸಪ್ಪನವರ ಪ್ರಯತ್ನಗಳ ಫಲವಾಗಿ ಕನ್ನಡ ಕನ್ನಡಿಗರ ನಾಲಗೆಯ ಮೇಲೆ ಮನೆ ಮಾಡತೊಡಗಿತು. ಕನ್ನಡ ಬಾಲಕರು ಕನ್ನಡ ಕಲಿಯತೊಡಗಿದರು. ಮೈಸೂರು, ಮಂಗಳೂರು, ಬಳ್ಳಾರಿಯ ಕ್ರಿಶ್ಚನ್ ಮಿಷನರಿಗಳ ಪ್ರಚಾರದಿಂದಾಗಿ ಮುದ್ರಣ ಸಾಧನವು ಕ್ರಮೇಣ ಬೆಳೆಯ ತೊಡಗಿತ್ತು.

ಮುಳಬಾಗಲರ ಮುಂಚೆ ಸುಮಾರು ೨೦ ವರ್ಷಗಳ ಅವಧಿಯಲ್ಲಿ ಕೆಲವಾರು ಕವಿಗಳೂ, ಗದ್ಯಕಾರರೂ, ನಾಟಕಕಾರರೂ,ಲಾವಣಿ, ಮೂಡಲಪಾಯಗಳ ಜಾನಪದ ಕವಿಗಳೂ ಆಗಿಹೋಗಿದ್ದರು. ಹುಬ್ಬಳ್ಳಿಯ ಮಾನ್ವಿ ವೀರಪ್ಪನವರು ಕಥಾಸಾಗರವನ್ನೂ, ಧಾರವಾಡದ ಗಂಗಾಧರ ಮಡಿವಾಳೇಶ್ವರ ತುರಮುರಿಯವರು ಬಾಣಕಾದಂಬರಿಯನ್ನೂ ಕನ್ನಡಿಗರಿಗೆ ಒದಗಿಸಿ ಕೊಟ್ಟಿದ್ದರು. ೧೮೫೫ ರಿಂದ ೭೫ರ ವರೆಗೆ ಕನ್ನಡದ ಪತ್ರ ಪುಸ್ತಕಗಳೂ, ಭಾಷೆ ವ್ಯಾಕರಣ ಗ್ರಂಥಗಳೂ ನಿರ್ಮಾಣವಾಗಿ ಕನ್ನಡ ಶಿಕ್ಷಣದ ಮೂಲಸ್ತಂಭವನ್ನು ನಿಲ್ಲಿಸಿದ್ದವು. ವೆಂಕಟರಂಗೋ ಕಟ್ಟಿಯವರು ಕನ್ನಡ ಕ್ರಮಿಕ ಪುಸ್ತಕಗಳನ್ನೂ, ಲಘು ವ್ಯಾಕರಣಗಳನ್ನೂ ಬರೆದು, ಕನ್ನಡ ಸರಸ್ವತಿ ಮಂದಿರದ ಕಟ್ಟೆ ಕಟ್ಟಿದರು. ನುಡಿಗಟ್ಟು, ಛಂದಸ್ಸಾರ ಕೈಪಿಡಿಯ ಪೂರ್ವಾರ್ಧ ಉತ್ತರಾರ್ಧಗಳನ್ನು ಬರೆದು ಮುಳಬಾಗಲವರು ಗೋಡೆ ಕಟ್ಟಿದವರು ಎಂದು ಆಗ ಹಲವರು ಎನ್ನುತ್ತಿದ್ದರಂತೆ. ಮುಳಬಾಗಲರು ಮುಂದೆ ಸಂಸ್ಕೃತ ನಾಟಕಗಳನ್ನು ಕನ್ನಡಿಸಿ ಸರಸ್ವತೀ ಮಂದಿರವನ್ನು ಪೂರ್ಣಗೊಳಿಸಿದರು. ಮುಳಬಾಗಲರ ಸಮಕಾಲೀನರಾಗಿಯೇ ಶಾಂತಕವಿಗಳೂ ಶೇಷಗಿರಿರಾವ ಚುರಮುರಿಯವರೂ ಬಿ.ಮಲ್ಲಪ್ಪನವರೂ ಬಸವಪ್ಪಶಾಸ್ತ್ರಿಗಳೂ ಮುದ್ದಣ್ಣ ಕವಿಯೂ ಕನ್ನಡ ಸಾಹಿತ್ಯಕ್ಕೆ

ಚಿರಕಾಣಿಕೆಯನ್ನು ಸಲ್ಲಿಸಿದರು. ಪಿ. ಆರ್. ಕರಿಬಸವ ಶಾಸ್ತ್ರಿಗಳೂ, ಗಳಗನಾಥರೂ, ಕೆರೂರ ವಾಸುದೇವಾಚಾರ್ಯರೂ ಮುಂದಿನ ಹೆಜ್ಜೆಗಳನ್ನಿಟ್ಟರು. ಧಾರವಾಡ ಭಾಗದ ಮಟ್ಟಿಗೆ ಹೇಳುವುದಾದರೆ, ಕೃಷ್ಣಾಜಿ ಬಾಪೂರಾವ್, ಗುಂಡೋಕೃಷ್ಣ ಚುರಮುರಿ, ಶೇಷೋಜನಾರ್ದನ ಕೊಣ್ಣೂರ, ಚೆನ್ನಬಸಪ್ಪ ಬಸವಲಿಂಗಪ್ಪ, ಪಾಂಡುರಂಗ ಸೇಚಕರ, ಗುರುಲಿಂಗಸ್ವಾಮಿ ಮೊದಲಾದವರು, ಇಂಗ್ಲಿಷ್, ಸಂಸ್ಕೃತ ನಾಟಕಾನುವಾದ ಶಬ್ದೋತ್ಪತ್ತಿ-ಮತೋತ್ಪತ್ತಿ ಗ್ರಂಥಗಳನ್ನೂ ರಚಿಸಿದ ಅಲ್ಪಜ್ಞಾತ ಸಾಹಿತಿಗಳೂ ಮುಳಬಾಗಲರ ಸುಮಸುಮಾರು ಸಮಕಾಲೀನರೇ ಆಗಿದ್ದರು. ಇದೇ ಕಾಲಕ್ಕೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಶಾಂತಿಬಾಯಿಯೆಂಬ ಹಾಡುಗಾರ್ತಿಯಾಗಿ ಹೋದುದನ್ನು ನೆನೆಯಬಹುದು.

ಮುಳಬಾಗಲರ ಕಾಲಕ್ಕೆ ಮಮ್ಮದಾಪೂರ ಗುರುರಾಯರ 'ಲೋಕಬಂಧು' ಹಾಗೂ ಕರ್ನಾಟಕ ವಿದ್ಯಾವರ್ಧಕ ಸಂಘದ 'ವಾಗ್ಭೂಷಣ' ಎಂಬ ಪತ್ರಿಕೆಗಳು ಪ್ರಚಲಿತವಾಗಿದ್ದುವೆಂದು ತಿಳಿಯುತ್ತದೆ. ಮುಳಬಾಗಲರು ಈ ಎರಡೂ ಪತ್ರಿಕೆಗಳನ್ನು ತಪ್ಪದೆ ಓದುತ್ತಿದ್ದರಂತೆ. ಅವರ ಸಾಹಿತ್ಯ ನಿರ್ಮಿತಿಗೆ ಉತ್ತೇಜನ ಕೊಟ್ಟ ವ್ಯಕ್ತಿಯೆಂದರೆ ಕರ್ನಾಟಕ ಚರಿತಕಾರ ರಾ.ಹ. ದೇಶಪಾಂಡೆ; ಸಂಸ್ಥೆಯೆಂದರೆ ವಿದ್ಯಾವರ್ಧಕ ಸಂಸ್ಥೆ; ಶಿಕ್ಷಣಾಧಿಕಾರಿಗಳೆಂದರೆ, ದೊಡ್ಡ ಶ್ರೀನಿವಾಸರಾಯರು, ಸಹಸ್ರಬುದ್ಧೆ ಅವರು; ವಿಮರ್ಶಕ ವಿದ್ವನ್ಮಣಿಗಳೆಂದರೆ ಜಾನ್ ಜಾರಿಡಿನ್ ಸಾಹೇಬರು. ವೆಂಕಟರಂಗೋ ಕಟ್ಟಿ ಅವರೂ, ಶಂಕರಶಾಸ್ತ್ರಿ, ಸೋಡಿ ಅಣ್ಣಾರಾವ್ ಇವರೆಲ್ಲಾ ಮುಳಬಾಗಲರ ನಿಕಟವರ್ತಿಗಳಾಗಿದ್ದರು. ಹೀಗಿತ್ತು ಮುಳಬಾಗಿಲರ ಪರಿಸರ, ಪರಿವಾರ. ೧೮೮೦-೧೯೦೦ರ ಧಾರವಾಡದ ಶೈಕ್ಷಣಿಕ, ಸಾಹಿತ್ಯಿಕ ಜೀವನದಲ್ಲಿ ಶ್ರೀ ಮುಳಬಾಗಲರ ವ್ಯಕ್ತಿತ್ವ ಸ್ಥಾನಮಾನದಿಂದ ಸ್ಫುಟವಾಗಿ ಮೂಡಿ ನಿಂತಿತ್ತು.

೧೯ ನೆಯ ಶತಮಾನದ ಕನ್ನಡ ಸಾಹಿತ್ಯಕ್ಕೆ ಸಲ್ಲಿಸಲ್ಪಟ್ಟ ಅಮೋಘ ಕಾಣಿಕೆ ಕನ್ನಡ ಶಿಕ್ಷಕರಿಂದ ಎಂಬ ಮಾತು ಮಹತ್ವದ್ದಾಗಿದೆ. ಕನ್ನಡ ಸಾಹಿತ್ಯಕ್ಕೆ ಮುದ್ದಣ-ಮನೋರಮೆಯರಂತಹ ಸರಸ ಪಾತ್ರಗಳನ್ನು ನೀಡಿದ ನಂದಳಿಕೆ ಲಕ್ಷ್ಮೀನಾರಣಪ್ಪನವರು ದಕ್ಷಿಣ ಕನ್ನಡ ಉಡಿಪಿಯಲ್ಲಿ ಇದೇ ಕಾಲಕ್ಕೆ ಶಿಕ್ಷಕರಾಗಿದ್ದರು. ಮೈಸೂರಿನಲ್ಲಿ ಪ್ರಸಿದ್ಧರಾದ ಬಿ. ಮಲ್ಲಪ್ಪ, ಬಸವಪ್ಪ ಶಾಸ್ತ್ರಿ, ಕರಿಬಸಪ್ಪ ಶಾಸ್ತ್ರಿಗಳೂ ಶಿಕ್ಷಕರಾಗಿದ್ದರು. ಧಾರವಾಡ ಭಾಗದಲ್ಲಿಯಂತೂ ಹತ್ತೊಂಭತ್ತನೆಯ ಶತಮಾನದ ಸಾಹಿತಿಗಳು ಶಿಕ್ಷಕರು ಇಲ್ಲವೆ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದವರೇ ಹೆಚ್ಚಾಗಿದ್ದಾರೆ. ಮರಾಠಿಯ ಮಬ್ಬಿನಿಂದ ಕನ್ನಡವನ್ನು ತಿಳಿದಾಗಿಸಿದವರು ಕನ್ನಡ ಶಿಕ್ಷಕರೆ. ಕನ್ನಡ, ಕನ್ನಡ ಎಂದು ಕನಕರಿಸಿದ ಕವಿ, ನಾಟಕಕಾರ, ಪ್ರಬಂಧಕಾರ, ಕತೆಗಾರ ಶಿಕ್ಷಕರಲ್ಲಿ ವೆಂಕಟರಂಗೋ ಕಟ್ಟಿ, ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿ, ಸಕ್ರಿ ಬಾಳಾಚಾರ್ಯರು, 'ಶಾಂತಕವಿ' ಇಲ್ಲವೆ ಧೋಂಡೋ ನರಸಿಂಹ ಮುಳಬಾಗಲರು, ವೇ. ತಿ. ಕುಲಕರ್ಣಿ ಇಲ್ಲವೆ 'ಗಳಗನಾಥ' ಇವರು ಪ್ರಮುಖರು.

ಶ್ರೀ ಮುಳಬಾಗಲರು 'ಉತ್ತರ ರಾಮಚರಿತ' ನಾಟಕವನ್ನು ಪ್ರಥಮ ಕೃತಿಯಾಗಿಯೂ, 'ಮಾಲವಿಕಾಗ್ನಿಮಿತ್ರ'ವನ್ನು ಕೊನೆಯ ಕೃತಿಯಾಗಿಯೂ ರಚಿಸಿರಬೇಕೆಂದು ತೋರುತ್ತದೆ. ಉತ್ತರ ರಾಮಚರಿತವು ೧೮೭೭ ನೆಯ ಇಸ್ವಿಯ ಸಪ್ಟಂಬರ ತಿಂಗಳಲ್ಲಿ ಮುಗಿದು, ಅಚ್ಚಾಗಾಗಿ ಅಂಡಲೆದು, ೨೪ ನೆಯ ಜನೇವರಿ ೧೮೯೩ ರಲ್ಲಿ ಧಾರವಾಡ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ಪ್ರಕಟಗೊಂಡಿತು. ಕಾಳಿದಾಸನ 'ಮಾಲವಿಕಾಗ್ನಿಮಿತ್ರ'ದ ಅನುವಾದ ೮ ನೆಯ ಅಗಸ್ಟ ೧೮೯೭ ರಂದು ಪ್ರಕಟವಾಯಿತು. ಅದೂ ವಿದ್ಯಾ

ವರ್ಧಕ ಸಂಘದಿಂದಲೆ. ವಿ. ವ. ಸಂಘದ ಆಗಿನ ಸನ್ಮಾನ್ಯ ಕಾರ್ಯದರ್ಶಿಗಳಾಗಿದ್ದ ಕರಗುದರಿ ನಾರಾಯಣರಾಯರು ಕಾಳಿದಾಸ ಕವಿಯ ಬಗ್ಗೆ ಅವನ ಕೃತಿಗಳ ಬಗ್ಗೆ ಒಂದು ವಿಸ್ತೃತ ಮುನ್ನುಡಿಯನ್ನು ಬರೆದಿದ್ದಾರೆ. 'ಮೃಚ್ಛಕಟಕವು' ೧೮೮೬ ರಲ್ಲಿ ಹಾಗೂ 'ವೇಣೀಸಂಹಾರ'ವು ೧ನೆಯ ಜುಲೈ ೧೮೮೩ ರಂದು (ಮೊದಲನೆಯ ಆವೃತ್ತಿಗಳು) ಪ್ರಕಟವಾಗಿವೆ.

ಉತ್ತರ ರಾಮಚರಿತದ ಮೂಲನಾಟಕಕಾರನಾದ ಭವಭೂತಿ ಕವಿಯೂ ಪ್ರಸಿದ್ಧಿ, ಮನ್ನಣೆಗಳಿಗಾಗಿ ಬಹಳ ತೊಳಲಾಡಿರಬೇಕು. ಅಂತೆಯೇ 'ಮಾಲತೀ ಮಾಧವ'ದಲ್ಲಿ, 'ಉತ್ಪತ್ಸ್ಯತೇಽಸ್ತಿ ಮಮ ಕೋಽಪಿ ಸಮಾನಧರ್ಮಾ, ಕಾಲೋ ಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ,' ಎಂದು ಹೇಳಿದ. ಭವಭೂತಿಯ ಕನ್ನಡ ಅವತಾರವಾದ ಮುಳಬಾಗಲರ ಉತ್ತರ ರಾಮಚರಿತಕ್ಕೂ ಅದೇ ಅವಸ್ಥೆ ಬಂತು. ಅದು ಬೆಳಕು ಕಾಣಲಿಕ್ಕೆ ರಾಮನ ಅಶ್ವಮೇಧ ಕುದುರೆಯಂತೆ ಸುತ್ತುಮುತ್ತಲೂ ಸುತ್ತಾಡಿ ಬರಬೇಕಾಯಿತು. ಸ್ವಂತ ಪ್ರಕಟಿಸುವಷ್ಟು ಹಣವಿಲ್ಲ, ಪ್ರಕಟಿಸಬೇಕೆಂಬ ಹಂಬಲ ಬಿಡುವಂತಿಲ್ಲ. ಅವರ ಈ ನಾಟಕದ ಮುನ್ನುಡಿ ಓದಿದರೆ 'ಏಕೋ ರಸಃ ಕರುಣ ಏವ' ಎಂಬ ಮಾತು ಅವರಿಗೂ ಅನ್ವಯಿಸುತ್ತದೆ. ಸೀತೆಯ ಅನಾಥಾವಸ್ಥೆ ಅವರ ಗ್ರಂಥಕ್ಕೂ ಒದಗಿತು ಎಂದು ಅವರೇ ಹೇಳುತ್ತಾರೆ.

"...ನಮ್ಮ ಕನ್ನಡ ನುಡಿಯಲ್ಲಿ ಒಂದಾದರೂ ಇಂಥ ನಾಟಕವಿಲ್ಲದ್ದು ಕನ್ನಡಿಗರಿಗೆ ನಾಚಿಕೆಯೇ ಸರಿ ಎಂದು ಎಣಿಸಿ, ಮೊದಲು ಉತ್ತರ ರಾಮಚರಿತವನ್ನು ಕನ್ನಡಿಸುವ ಕೆಲಸದಲ್ಲಿ ತೊಡಗಿದೆನು."

ಸರಿ ; ನಾಟಕಾನುವಾದ ಮುಗಿಯಿತು. ಮುಂದೆ? ಅವರ ಮಿತ್ರರು ಹೇಳಿದಂತೆ— 'ಯಾಕೆ ವ್ಯರ್ಥ ಕಷ್ಟಪಡುತ್ತೀರಿ. ಇದರಿಂದ ಏನೂ ಲಾಭವಿಲ್ಲ' ಎಂದು. 'ಇದೇ ಮಾತು ನಿಜವಿರಬಹುದೆಂಬ ಭ್ರಮೆಯು ಎಷ್ಟೋ ದಿವಸ ನನ್ನ ಮನಸಿನೊಳಗಿಂದ ಹೋಗಲಿಲ್ಲ' ಎಂದು ಬರೆಯುತ್ತಾರೆ. ಆದರೂ ಧೈರ್ಯಮಾಡಿ ಮೆಹರ್ಬಾನ್ ಚಾಟ್‌ಫೀಲ್ಡ ಸಾಹೇಬ ಬಹದ್ದೂರ ಡೈರೆಕ್ಟರ, ಮುಂಬಯಿ ಇವರ ಸನ್ನಿಧಿಗೆ ಸಹಾಯಕ್ಕಾಗಿ ಅರ್ಜಿಮಾಡಿಕೊಂಡರು. ಡೈರೆಕ್ಟರವರು ಕನ್ನಡದ ದುರ್ದೈವದ ಮೂಲಕವಾಗಿ "ತಮ್ಮ ಗ್ರಂಥಕ್ಕೆ ಏನೂ ದೊರೆಯಲಾರದು" ಎಂದು ಅಪ್ಪಣೆಯನ್ನು ದಯಪಾಲಿಸಿದರಂತೆ! ಆದರೂ ಅವರು ಪ್ರಯತ್ನ ಬಿಡಲಿಲ್ಲ. ಹೇಗಾದರೂ ಗ್ರಂಥ ಪ್ರಸಿದ್ಧವಾದರೆ ಸಾಕೆಂದು ಶಾಲಾಪತ್ರಿಕೆಯಲ್ಲಿ ಧಾರಾವಾಹಿಯಾಗಿ ಸ್ವಲ್ಪಭಾಗ ಪ್ರಸಿದ್ಧವಾಗುವಂತೆ ಧೃಡಪಡಿಸಿದರು. ಪ್ರಕಟನೆಗೆ ಕೃತಕೃತ್ಯತೆ ಪಡೆದರು. ಮುಂದೆ ರೊದ್ದ ಸಾಹೇಬರು ಇವರಲ್ಲಿ ಸಾನುಭೂತಿ ತೋರಿದರೂ, ಪ್ರಕಾಶವನ್ನು ಮಾತ್ರ ಕಾಣಲಿಲ್ಲ ಪುಸ್ತಕ. ಮುಂದೆ ವಿದ್ಯಾವರ್ಧಕ ಸಂಘದಿಂದ ಅದು ಅಚ್ಚಾಗುವವರೆಗೂ ಈ ಕರುಣಕಥೆಯನ್ನು ತಮ್ಮ ಮುನ್ನುಡಿಯಲ್ಲಿ ಸ್ವಾರಸ್ಯವಾಗಿ ಬಣ್ಣಿಸಿದ್ದಾರೆ. ಇದು ಆಗಿನ ಕನ್ನಡ ಸಾಹಿತ್ಯದ ಅವಸ್ಥೆ. ಅದೇನೇ ಇದ್ದರೂ ಕವಿಯ ಜೀವನಕಾಲದಲ್ಲೇ ಗ್ರಂಥವು ಮುದ್ರಣ ಕಂಡುದು ನಾಟಕಕಾರನಿಗೆ ಅಭಿಮಾನದ ಮಾತೆನಿಸಿರಬೇಕು. ಮುಂದೆ ೩೨ ವರುಷಗಳ ಮೇಲೆ, ಎಂದರೆ ಕವಿ ತೀರಿದ ೨೬ ವರುಷಗಳ ಅನಂತರ, ಉತ್ತರ ರಾಮಚರಿತವು ಅದೇ ಸಂಘದಿಂದ ಎರಡನೆಯ ಆವೃತ್ತಿಯನ್ನು ಪಡೆಯಿತು. ಇದು ಬಹಳ ಸಂತೋಷಪಡಬೇಕಾದ ಮಾತೇ. ಈ ಎರಡನೆಯ ಆವೃತ್ತಿ ಈಗ ಮತ್ತೆ ೩೨ ವರುಷಗಳಾದ ಮೇಲೆಯೂ ಇನ್ನೂ ದೊರಕುತ್ತಿದೆ. ಆವೃತ್ತಿ ತೀರಿಲ್ಲ. ತೀರುವ ದಾರಿಯೂ ತೋರಿಲ್ಲ. ಅದೇ ೩೨ ವರುಷಗಳ ಹಿಂದಿನ ಹನ್ನೆರಡಾಣೆ ಬೆಲೆಯಿದೆ. ಧಾರವಾಡ ವಿದ್ಯಾವರ್ಧಕ ಸಂಘದಲ್ಲಿ ಇನ್ನೂ ದೊರಕುತ್ತದಂತೆ. ಹೆಚ್ಚಿನ ಸಮಾಧಾನವೆಂದರೆ, ಈ ಗ್ರಂಥದ ವ್ಯಾಪಾರಿಗಳಿಗೆ

ಶೇಕಡಾ ೫೦ ಕಮಿಷನ್ ! ದ್ವಿತೀಯ ಆವೃತ್ತಿಯ ಮುನ್ನುಡಿಯಲ್ಲಿ ೧೯೨೪ ನೆಯ ಸಾಲಿನ ಗೌರವ ಕಾರ್ಯದರ್ಶಿಗಳಾದ ಜಿ. ಜಿ. ಹಳಕಟ್ಟಿ ಹಾಗೂ ಕೆ. ವಿ. ಕುಲಕರ್ಣಿ ಅವರು ಹೀಗೆ ಹಾರೈಸುತ್ತಾರೆ! "ಕೊನೆಗೆ ಶ್ರೀಹರಿಯ ಪ್ರೇರಣೆಯಿಂದ ತುಸು ದಿವಸಗಳಲ್ಲಿಯೇ ಇದರ ನೂರನೆಯ ಮುದ್ರಣ ವನ್ನು ಪ್ರಕಟಿಸುವ ಸಕಲ ಜನಾನಂದಕರವಾದ ಸುಯೋಗವು ಒದಗಿಬರಲೆಂದು ಪ್ರಾರ್ಥಿಸಿ ಇಲ್ಲಿಗೆ ವಿರಮಿಸುವೆವು." ಅವರು ವಿರಮಿಸಿ ೪೦ ವರ್ಷ ಗಳ ಮೇಲಾದುವು. ಆ ಸಕಲ ಜನಾನಂದಕರ ಸುಯೋಗ ಒದಗಲಿಲ್ಲ. ಶ್ರೀ ಹರಿಯ ಪ್ರೇರಣೆ ಆಗಲಿಲ್ಲ.

ವೇಣೀಸಂಹಾರ ನಾಟಕದ ಮುನ್ನುಡಿಯಲ್ಲಿ ಶ್ರೀ ಮುಳಬಾಗಲರು ಬರೆಯುತ್ತಾರೆ, ಸುಮಾರು ೭೫ ವರ್ಷಗಳ ಹಿಂದೆ: 'ಕನ್ನಡಭಾಷೆಯ ಈಗಿನ ಸ್ಥಿತಿಯನ್ನು ನೋಡಿದರೆ, ಈ ಭಾಷೆಯಲ್ಲಿ ಎಲ್ಲಾ ವಿಷಯಗಳ ಗದ್ಯಾತ್ಮಕ ಗ್ರಂಥಗಳು ತೀರ ಕಡಿಮೆಯಾಗಿವೆ ; ಒಂದು ಪಕ್ಷದಲ್ಲಿ ಇಲ್ಲೆಂದರೂ ಚಿಂತೆಯಿಲ್ಲ....ಸಾಧಾರಣ ಜನರ ಮನೋರಂಜ ನಾರ್ಥವಾಗಿ ಏನಾದರೂ ಓದಬೇಕೆಂದರೆ ಯೋಗ್ಯ ವಾದ ಪುಸ್ತಕಗಳು ಇರುವುದಿಲ್ಲ.' ಹೀಗಿತ್ತು ಆಗಿನ ಸ್ಥಿತಿ ಗತಿ. ವಿದ್ಯಾರ್ಥಿಗಳ ಕ್ರಮಿಕ ಪುಸ್ತಕ ಗಳೇನೊ 'ಕನ್ನಡ ಟ್ರಾನ್ಸಲೇಟರ'ರಿಂದ ಬರೆಯ ಲ್ಪಡುತ್ತಿದ್ದುವು. ಸರಸಸಾಹಿತ್ಯ ಏನೂ ಇರ ಲಿಲ್ಲ. ಇದರ ಜತೆಗೆ ಆಗಿನ ಕನ್ನಡಬಲ್ಲ ವಿದ್ವಾಂಸ ರಿಗೆ ಇಂಗ್ಲಿಷ್ ವ್ಯಾಮೋಹ. ಈ ಇಂಗ್ಲಿಷ ಭಾಷೆಯು 'ಎಲ್ಲಾ ರೀತಿಯಿಂದ ಪರಿಪೂರ್ಣ ವಾಗಿರುವುದರಿಂದ, ನಮ್ಮ ಬಡ ಕನ್ನಡ ನುಡಿ ಯನ್ನು ನೋಡಬೇಕೆಂಬ ಪ್ರಸಂಗವೇ ಅವರಿಗೆ ಬರು ವುದಿಲ್ಲ. ಸರ್ವಾಲಂಕಾರ ಭೂಷಿತೆಯಾದ ಸುಂದ ರಿಯು ಬೇಕಾದದ್ದನ್ನೆಲ್ಲಾ ಕೊಟ್ಟು, ಸವಿ ಮಾತು ಗಳನ್ನಾಡುತ್ತ ಸಮೀಪದಲ್ಲಿರುವಾಗ, ೯೯ ವರುಷದ ಮುಪ್ಪಿನ ತಾಯಿಯ ಕಡೆಗೆ ಯಾರು ನೋಡು ತ್ತಾರೆ?' ಎಂದಿದ್ದಾರೆ ಮುಳಬಾಗಲರು. ಸರಿ ; ಹಾಗಾದರೆ ಮುಪ್ಪಿನ ಕನ್ನಡ ತಾಯನ್ನು ಯಾರು ಮಾತಾಡಿಸಬೇಕು? 'ಇನ್ನು ನಮ್ಮ ದೇಶಭಾಷೆ ಯನ್ನು ಮಾತ್ರ ಕಲಿತ ವಿದ್ವಜ್ಜನರಾದರೂ ಈ ಕೊರತೆಯನ್ನು ವಿಚಾರಿಸಬೇಕೆಂದರೆ ಅವರೆಲ್ಲ ಬಹುಶಃ ಬಡವರು ; ಹಗಲಿರುಳು ಸರಕಾರದ ಸೇವೆಯಲ್ಲಿ ಅಥವಾ ಗೃಹಕೃತ್ಯದ ತೊಂದರೆಗಳಲ್ಲಿ ಮುಳುಗಿರುತ್ತಾರೆ. ಅಂತಹರಿಂದ ಈ ಕೆಲಸವು ಹೇಗಾದೀತು? ಇತ್ಯಾದಿ ಸಹಸ್ರಾವಧಿ ವಿಘ್ನ ಗಳುಂಟಾಗಿ ನಮ್ಮ ದೇಶಭಾಷೆಯ ಸ್ಥಿತಿಯು ತಿದ್ದ ಲ್ಪಡಲೊಲ್ಲದು !' ಮುಳಬಾಗಲರ ಮಾತಿನಲ್ಲೇ ಉದ್ಧರಿಸಲ್ಪಟ್ಟ ವೇಣೀಸಂಹಾರದ ಈ ಮುನ್ನುಡಿ ೭೫ ವರುಷಗಳ ಹಿಂದಣ ಕನ್ನಡ ಪರಿಸ್ಥಿತಿಗೆ ನಿಚ್ಚಳವಾದ ಕನ್ನಡಿಯಾಗಿದೆ.

ಈ ಕಾಲಕ್ಕೆ ಕೈಬಿಡುವಂತಾಗಿದ್ದ ಕನ್ನಡ ವನ್ನು ಬದುಕಿಸುವ ಒಬ್ಬ ವೈದ್ಯನಾಗಿ ಮುಳಬಾಗ ಲರು ಕನ್ನಡ ಸಾಹಿತ್ಯ ಸೇವೆ ಮಾಡಿದ್ದಾರೆ. ಅಷ್ಟೇ ಅಲ್ಲ ; ಸ್ವತಂತ್ರ ಕನ್ನಡ ಸಾಹಿತ್ಯ ಯಾವ ಹಾದಿ ಯಲ್ಲಿ ಮುನ್ನಡೆಯಬೇಕೆಂಬ ಮಾರ್ಗದರ್ಶನ ವನ್ನೂ ಮಾಡಿದ್ದಾರೆ. ನಾಟಕ ಕ್ಷೇತ್ರದಲ್ಲಿ ತೀರ ವಿರಲವಾಗಿರುವ ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ದಿಂದ ಅನುವಾದಿಸಿಯಾದರೂ ಉತ್ತಮ ರೀತಿ ಯಲ್ಲಿ ಉಪಕಾರ ಮಾಡಿದ್ದಾರೆ.

ಅನುವಾದಿಸುವಲ್ಲಿ ಮುಳಬಾಗಲರು ಸ್ವತಂತ್ರ ಸಾಹಿತಿಯ ರಚನಾತ್ಮಕ ರೀತಿಯನ್ನೇ ಅನುಸರಿಸಿದ್ದಾರೆ. ಹೀಗೆಂದರೆ ಮೂಲದಿಂದ ಎತ್ತೋ ಸಾಗಿದ್ದಾರೆಂದಲ್ಲ. ಇವರ ಅನುವಾದ ಗಳನ್ನು ಓದಿದರೆ, ಬಹುಭಾಗದಲ್ಲಿ ಸ್ವತಂತ್ರ

ನಾಟಕಗಳನ್ನೆ ಓದಿದಂತೆ ಸ್ವಾರಸ್ಯವೆನಿಸುತ್ತದೆ. ಒಮ್ಮೊಮ್ಮೆ ಬಳಕೆಯ ಸರಳ ಶೈಲಿಯಿಂದ, ಪಡೆ ನುಡಿಗಳ ಪದಸರಣಿಯಿಂದ ಪ್ರಸಾದ ಗುಣವನ್ನು ಹೆಚ್ಚಿಸುತ್ತಾರೆ.

ವ್ಯತಿಷಜತಿ ಪದಾರ್ಥಾನಾಂತರಃ ಕೋಪಿ ಹೇತುಃ |
ನಖಲು ಬಹಿರುಪಾಧೀ್ ಪ್ರೀತಯಃ ಸಂಶ್ರಯಂತೆ ||
"ಒಳಗಿರ್ಪೊಂದು ನೆವಂ ಪದಾರ್ಥಗಳ ತಾಂ
ಕಟ್ಟಳ್ಕರಿಂ ಕಟ್ಟುಗುಂ |
ತಿಳಮಾತ್ರಂ ಬಹಿರಂಗಕಾರಣಗಳಂ
ಪ್ರೇಮಂಗಳಾಶ್ರಯಿಸವು ||"

ಎಂಬ ಅನುವಾದವು ಈ ಪ್ರಸಾದ ಗುಣಕ್ಕೆ ಉದಾಹರಣೆಯಾಗಿದೆ. ನ ಖಲು ಎಂಬುದಕ್ಕೆ 'ತಿಳಮಾತ್ರಂ' ಎಂಬ ಅನುವಾದ, ಬಹಿರುಪಾಧೀನ ಪ್ರೀತಯಃ ಸಂಶ್ರಯಂತೆ ಎಂಬುದಕ್ಕೆ 'ಬಹಿರಂಗ ಕಾರಣಗಳಂ ಪ್ರೇಮಂಗಳಾಶ್ರಯಿಸವು ಎಂಬ ಅನುವಾದವೂ ಹಿತವಾಗಿವೆ.

ಮೂಲದ ಆರ್ಯಾ, ಇಂದ್ರವಜ್ರ, ವಸಂತ ತಿಲಕ, ಮಾಲಿನೀವೃತ್ತ, ಮತ್ತೇಭವಿಕ್ರೀಡಿತ, ಶಾರ್ದೂಲವಿಕ್ರೀಡಿತಗಳನ್ನೂ ಕನ್ನಡ ಅನುವಾದಕ್ಕೆ ಬಳಕೆ ಮಾಡಿರುವುದು ಒಂದು ವಿಶೇಷ. ಇದರೊಂದಿಗೆ 'ಸಾಕೀ' 'ದಿಂಡೀ' ಯೋಗಿನ ಸ್ವಂತದ ಸಾಕೀ ಪ್ರಯೋಗವೂ ಸುಖವಾಗಿಬಂದಿದೆ. ಆದರೆ ತೀರ ಸರಳವಾದ ಬಳಕೆಯ ಶಬ್ದಗಳಲ್ಲಿ ಈ ಸಂಸ್ಕೃತ ವೃತ್ತಗಳು ಸ್ವಲ್ಪ ಶಿಥಿಲ ಗೊಂಡಂತೆ ಎನಿಸಬಹುದಾಗಿದೆ. ಪದಪ್ರಯೋಗ ದಲ್ಲಿ ವಿಶೇಷ ತೂಕಮಾಡದೆ ಶಬ್ದಗಳನ್ನು ಸುಮ್ಮನೆ ತೂರಿದಂತೆ ಕಂಡುಬರಬಹುದು.

ಪಶ್ಚಾತ್ ಪುಚ್ಛಂ ವಹತಿ ವಿಪುಲಂ ತಚ್ಚ
ಧೂನೋತ್ಯಜಸ್ರಂ |
ದೀರ್ಘಗ್ರೀವಃ ಸಭವತಿ ಖುರಾಸ್ತಸ್ಯ ಚತ್ವಾರ ಏವ |
ಶಷ್ಪಾಣ್ಯತ್ತಿ ಪ್ರಕಿರತಿ ಶಕೃತ್ ಪಿಂಡಕಾನಾಮ್ರ
ಮಾತ್ರಾ....ಇತ್ಯಾದಿ.

ಈ ಶ್ಲೋಕದ ಅನುವಾದ ಹೀಗಿದೆ:—

"ಅದಕುಂಟೈ ಪೃಥುರಮ್ಯ ಪುಚ್ಛವದನಾಗಳ್
ಜಾಡಿಸುತ್ತಾಡುತಿ
ರ್ಪುದು ತತ್ಕಂಧರ ಮುಂತು ದೀರ್ಘಜಟಿಲಂ
ನಾಲ್ಕೇ ಖುರಂಗಳ್ ಲವಾ
ಅದು ಪುಲ್ ಮೇವುದು ಲದ್ದಿಯಂ ಪರಪುಗುಂ
ಚೂತಪ್ರಮಾಣಂಗಳಂ ||

ಆದರೆ—ಹಾ ಹಾ ದೇವಿ ಸ್ಫುರತಿ ಹೃದಯಂ ಧ್ವಂ ಸತೇ ದೇಹಬಂಧಃ ಎಂಬುವನ್ನು—'ಹಾ ಹಾ ದೇವೀ ಒಡೆದುದೆದೆ ಬಿಚ್ಚುತ್ತಿವೀ ಮೈಯ ಕೀಲ್ಗಳ್' ಎಂದು ಅನುವಾದಿಸುವಲ್ಲಿ, ಧ್ವಂಸತೇ ದೇಹಬಂಧಃ ಎಂಬ ಪದಾನುವಾದ ಪರಿಣಾಮಕಾರಿಯಾಗಿ ಬಂದಿದೆ—'ಬಿಚ್ಚುತ್ತಿವೀ ಮೈಯ ಕೀಲ್ಗಳ್' ಎಂಬಲ್ಲಿ ಒಮ್ಮೊಮ್ಮೆ ಮಾತ್ರ ವಾಕ್ಯರಚನೆಗಳೂ, ಸಮಸ್ತಪದಗಳೂ ಕನ್ನಡ ರಚನೆಗಳಿಗೆ ರೂಢ ವಲ್ಲದ ರೀತಿಯಲ್ಲಿ ಅನುವಾದಿಸಲ್ಪಟ್ಟವೆ: 'ಅವಿರಲಿತ ಕಪೋಲಂ' ಎಂಬ ಅನ್ವಯೀ ಭಾವವು—'ಲಗ್ನಕಪೋಲರ್' ಎಂಬ ಬಹು ವ್ರೀಹಿಯಾಗಿ ಅಸಹಜವೆನಿಸುತ್ತದೆ. ಆದರಂತೆಯೇ 'ಅಶಿಥಿಲ ಪರಿರಂಭೈಃ' ಎಂಬುದು 'ಸಾನಂದರ್ ಬಿಗಿದಪ್ಪಿದಾಗ' ಎಂದಾಗಿದೆ. ಇದೂ ಅಸಹಜವೆ. ಇಂತಹ ಕೃತ್ರಿಮ ಪದಪ್ರಯೋಗಗಳನ್ನು ಭೂಯಿಷ್ಠವಾಗಿ ಕಾಣಬಹುದಾಗಿದೆ. 'ಇದು ನೋಡಿಲ್ಲಿ ದಶಾಸ್ಯನುಕ್ಕಿನ ರಥಂ' ಎಂದು ಆರಂಭ ವಾಗುವ ಶ್ಲೋಕಾನುವಾದದಲ್ಲಿ 'ಇದಸಿಚ್ಛಿನ್ನ ಜಟಾಯುಪಕ್ಷ' ಎಂಬ ಪದದಲ್ಲಿ'ಇದು+ಅಸಿಚ್ಛಿನ್ನ' ಎಂಬ ಸಂಧಿಯುಕ್ತ ಸಂದಿಗ್ಧ ಪದವು ಶ್ರುತಿಗೆ ಅಸುಖವಾದ ಅರಿಸಮಾಸವಾಗಿದೆ. 'ಕಣ್ಣೈ ದಿಲಂ ಮುಚ್ಚಿಕೊಂಡು' ಎಂಬಲ್ಲಿ 'ಕಮಲನಯ ನ'ಕ್ಕೆ 'ಕಣ್ಣೈದಿಲೆಂ'ಬ ಅಚ್ಚಗನ್ನಡ ಸಮಾಸ ಒಪ್ಪಿದರೂ 'ಕಣ್ಣೈದಿಲ'ದೊಂದಿಗೆ 'ಕಣ್ಣೈದಿಲವು'

ತಪ್ಪು ತಿಳಿಕೆಗೆ ಅವಕಾಶಕೊಡುತ್ತದೆ. ಗದ್ಯಸಂಭಾಷಣೆಗಳು ಈ ನಾಟಕದಲ್ಲಿ ಸಹಜವಾಗಿ ಬಂದಿವೆಯನ್ನಬಹುದಾದರೂ 'ಭಗವತಿ ತಮಸೇ' ಎಂಬ ಪದಕ್ಕೆ 'ಅವ್ವಾ ತಮಸಕ್ಕಾ" ಎಂದೂ, 'ಭಗವತಿ ಭಾಗೀರಥಿ ಭುಕ್ತಮೇತತ್ ಸರ್ವಂ' ಎಂಬುದಕ್ಕೆ 'ಗಂಗಕ್ಕಾ ನೀನು ಯಥಾರ್ಥವಾಗಿ ಮಾತಾಡುತ್ತೀ' ಎಂದೂ, 'ಕಿಮುಕ್ತಂ ಭವತಿ' ಎಂದು ವಾಲ್ಮೀಕಿಯ ಶಿಷ್ಯ ತನ್ನ ಮಿತ್ರನಿಗೆ ಕೇಳುವಾಗ 'ಏನು ಮಾತಾಡಿದೆಯೋ ಟೊಣ್ಯಾ' ಎಂದೂ ಅನುವಾದಿಸಿದ ರೀತಿ ಇದು ಪೌರಾಣಿಕ ನಾಟಕವೆಂದು ನಂಬದಷ್ಟು ಸಹಜ ಬಳಕೆಯ ಶೈಲಿಯಲ್ಲಿ ಬಂದಿವೆ.

'ಆಃ ಕಸ್ತವ ಆರ್ಯಪುತ್ರಃ' ಎಂಬುದನ್ನು ಪೃಥ್ವೀದೇವಿಯ ಬಾಯಲ್ಲಿ ಸೀತೆಯನ್ನುದ್ದೇಶಿಸಿ 'ಆ ಏನೇ ಗಯ್ಯಾಳಿ ಇನ್ನೆಲ್ಲಿಯ ನಿನ್ನ ಪ್ರಾಣನಾಥರೆ?' ಎಂದು ಹೇಳಿಸಿದುದು ನಯ ನಾಜೂಕು ಮೀರಿದ ಉಕ್ತಿಯೆನಿಸುತ್ತದೆ.

ಹೀಗೆಂದರೂ ಹೃದ್ಯವಾದ ಶ್ಲೋಕಾನುವಾದಗಳಿಗೆ ಕೊರತೆಯಿಲ್ಲ ಎಂಬ ಮಾತನ್ನು ಮರೆಯಲಾಗದು. 'ಸಾಕೀ'ಯಲ್ಲಿ ರಚಿತವಾದ "ಬಿಳುಪೇರಿವೆ ಬಾಡಿಹವು ಕಪೋಲಂಗಳು ಸುಳಿ ಮುಂಗುರುಳಲ್ಲಿ ಸುಳಿದಾಡುತ್ತಿವೆ; ಸುಂದರಮುಖಿ ಜಾನಕಿ ಬರುವಳು ವನದಲ್ಲಿ",

"ಕರುಣಾರಸದಾಕೃತಿ ಈ ಸತಿಯೈ ಮಿಥಿಲೇಂದ್ರಾತ್ಮಜಾತೆ ವಿರಹವ್ಯಥೆಯೆ ಪ್ರತ್ಯಕ್ಷಮೆನಲ್ ತೋರುವಳೀ ಬಹ ಸೀತೆ"

ಎಂಬ ಗೀತಗಳು ಮಧುರವಾಗಿವೆ. ಮೂಲದ—

ವಿಲುಲಿತಮತಿ ಪೂರೈರ್ಬಾಷ್ಪಮಾನಂದಶೋಕ
ಪ್ರಭವಮವಸೃಜಂತೀ ಪಕ್ಷ್ಮಲೋತ್ತಾನದೀರ್ಘಾಃ
ಸ್ನಪಯತಿ ಹೃದಯೇಶಂ ಸ್ನೇಹನಿಷ್ಯಂದಿನೀ ತೇ
ಧವಲ ಮಧುರ ಮುಗ್ಧಾ ದುಗ್ಧ ಕುಲ್ಯೇವ ದೃಷ್ಟಿಃ"

ಎಂಬುದರ ಸೊಗಸು—

"ಸುಖದುಃಖೋದಿತಮಾಗಿ ತುಂಬಿ ತುಳುಕುತ್ತಿರ್ಪ ಶ್ರುವಂ ಚೆಲ್ವುದು| ಪ್ರಕಟ ಸ್ನೇಹರಸಂ ಕ್ರಿಯೇಕ್ಷಣ ಸಮುತ್ಕಂಠಾತಿ ವಿಸ್ತಾರಿತಂ| ಅಕಲಂಕಂ ಧವಳಂ ಪ್ರಸನ್ನಮಧುರಂ ತ್ವದ್ವೀಕ್ಷಣಂ ಪಾಲ್ಹೊನಲ್| ಸುಕರಂ ತಾನೆನೆ ಮಜ್ಜನಂಗೊಳಿಪುದೇಂ ತನ್ನಲ್ಲಿ ಪ್ರಾಣೇಶನಂ" ಎಂಬಲ್ಲಿ ಸರಿಯಾಗಿ ಬಂದಿದೆ

"ದಲತಿ ಹೃದಯಂ ಗಾಢೋದ್ವೇಗಂ ದ್ವಿಧಾ ತು ನಭಿದ್ಯತೆ
ವಹತಿ ವಿಕಲಃ ಕಾಯೇ ಮೋಹಂ
ನ ಮುಂಚತಿ ಚೇತಸಾಂ" —

ಎಂದು ಮೊದಲಾಗುವ ಶ್ಲೋಕವು—

"ಎದೆ ಸೀಳ್ವಿಬ್ಬಗೆಯಾಗದೇನೆನತಿ ಶೋಕಂ
ನೋಯಿಕುಂ ಮೂರ್ಛೆದಾ
ಳ್ವುದು ಚೈತನ್ಯವ ನೀಗದೆನ್ನಯ ಶರೀರಂ
ವಿಹ್ವಲಂ ಮಾಡಲೇಂ"—

ಎಂದೂ ಸಾರವತ್ತಾಗಿ ಬಂದಿದೆ.

'ಏಕೋ ರಸಃ ಕರುಣ ಏವ' ಎಂಬ ಪ್ರಸಿದ್ಧ ಪದ್ಯವು—

"ಒಂದೇ ರಸಂ ಕರುಣವೆಂಬುದು ಬೇರೆ ಬೇರೆಂ|
ಬಂದಂಗಳಿಂದಿಹುದು ಕಾರಣಭೇದದಿಂದ" ಎಂದು

ಅರ್ಥ ಸ್ಫುಟವಾಗಿ ಬಂದಿದೆ.

ಅರ್ಥ ಸ್ಫುಟತೆಗೆ ಮೂಲದಲ್ಲಿ ಜನಕನ ಬಾಯಿಂದ ಬರುವ ಶೋಕಪೂರ್ಣವಾದ ಈ ಮತ್ತೊಂದು ಶ್ಲೋಕವನ್ನು ಅನುವಾದದೊಂದಿಗೆ ನೋಡಬಹುದು :—

'ಅಪತ್ಯೇಯತ್ ತಾದೃಗ್ದುರಿತ ಮಭವತ್ತೇನ
ಮಹತಾ|
ವಿಷಕ್ತಸ್ತೀವ್ರೇಣ ಪ್ರಣಿತ ಹೃದಯೇನ ವ್ಯಥಯತಾ|
ಪಟುರ್ಧಾರಾವಾಹೀ ನವ ಇವ ಚಿರೇಣಾಪಿ ಹಿ ನ ಮೇ|
ನಿಕೃಂತನ್ ಮರ್ಮಾಣಿ ಕ್ರಕಚ ಇವ
ಮನ್ಯುರ್ವಿರಮತಿ ||

ಹೀಗೆ ಪದ್ಯಗಳೆಲ್ಲವೂ ಸಾಧಾರಣವಾಗಿ ಅಚ್ಚಳಿಯದೆ ಅಂದವಾಗಿ ಬಂದಿವೆಯೆನ್ನಬೇಕು. ಭವಭೂತಿಯ ಕರುಣಕಾವ್ಯವನ್ನು ತಮ್ಮ ಅಂತಃ ಕರಣದಲ್ಲಿ ಅರಗಿಸಿಕೊಂಡು ಕವಿಹೃದಯದ ಮುಳ ಬಾಗಲರು ಕನ್ನಡಿಸಿದ್ದಾರೆ ಎಂಬ ಅಭಿಪ್ರಾಯ ವನ್ನುಂಟುಮಾಡುತ್ತಿವೆ ಈ ಅನುವಾದವಾದ ಶ್ಲೋಕಗಳು.

ಆದರೆ ಉಳಿದ ನಾಟಕಗಳಲ್ಲಿ ಮಾತ್ರ ನಾಂದಿ ಹಾಗೂ ಪೀಠಕಾ ಪದ್ಯಗಳ ಹೊರತಾಗಿ ನಾಟಕದ ಇತರ ಗೀತಗಳನ್ನೆಲ್ಲ ಗದ್ಯದಲ್ಲಿಯೇ ಅನುವಾದಿಸಿದ್ದಾರೆ. ಅವುಗಳಲ್ಲೂ ರಸಹೀನವಾದ ಶಬ್ದಶಃ ಅನುವಾದಗಳೇ ಹೆಚ್ಚು. ಉತ್ತರ ರಾಮ ಚರಿತದಲ್ಲಿ ಉಚ್ಚ ಶೈಲಿಯನ್ನು ಸಾಧಿಸಿದ ಮುಳ ಬಾಗಲರು ಉಳಿದ ನಾಟಕಗಳಲ್ಲಿ ಆ ಮಟ್ಟ ವನ್ನು ಮುಟ್ಟಲು ಹವಣಿಸಿಲ್ಲವೆಂದೇ ಹೇಳ ಬಹುದು.

'ಮೃಚ್ಛಕಟಿಕ'ದಲ್ಲಿ ಅನುವಾದಕರು ಸಾದ್ಯಂತವಾಗಿ ಗದ್ಯದಲ್ಲಿಯೇ ಸಂಭಾಷಣೆಗಳನ್ನು ಹೆಣೆದಿದ್ದಾರೆ. ಚಾರುದತ್ತನ ಉದಾತ್ತತೆ, ಶಕಾರನ ಹಾಸ್ಯಾಸ್ಪದ, ಮೈತ್ರೇಯನ ವಿನೋದಗಳೆಲ್ಲಾ ಸಮರ್ಪಕವಾಗಿ ಕನ್ನಡದಲ್ಲಿ ಒಡಮೂಡಿವೆ. ಶಕಾರನ ಬುದ್ಧಿವಂತಿಕೆಯ ಹುಚ್ಚುತನ ಈ ವಾಕ್ಯ ಗಳಲ್ಲಿ ಹಾಸ್ಯಪೂರಿತವಾಗಿ ಬಂದಿದೆ:

'ನಿದ್ದೆ ಕಣ್ಣೊಳಗೇ ಇದ್ದರೂ ಕಾಣಿಸುವುದಿ ಲ್ಲವಲ್ಲ!'

'ಮೂಗಿನೊಳಗೆ ಕಗ್ಗತ್ತಲೆ ತುಂಬಿಕೊಂಡದ್ದ ರಿಂದ ಅಲಂಕಾರಗಳ ಸಪ್ಪಳವು ನೆಟ್ಟಗೆ ಕಾಣಿ ಸುವುದಿಲ್ಲ?'

'ಉದ್ದಿನ ರಾಶಿಯಲ್ಲಿ ಕಾಡಿಗೆಯ ಗುಳಿಗೆ ಯಂತೆ ಈ ಕಗ್ಗತ್ತಲೆಯಲ್ಲಿ ವಸಂತಸೇನೆ ನೋಡ ನೋಡುತ್ತಿರಲಿಕ್ಕೆ ಮಾಯವಾದಳು!'

ಶಕಾರನ ಕೈಗೆ ವಸಂತಸೇನೆ ಒಮ್ಮೆ 'ರಾವ ಣನ ಕೈಗೆ ಕುಂತೀ ಸಿಕ್ಕಂತೆ' ಸಿಕ್ಕರೆ ಮತ್ತೊಮ್ಮೆ ದ್ರೋಣಾಚಾರ್ಯರ ಕೈಗೆ ದ್ರೌಪದಿ ಸಿಕ್ಕಂತೆಯೋ ಚಾಣಕ್ಯನ ಕೈಗೆ ಸೀತೆ ಸಿಕ್ಕಂತೆಯೋ ಸಿಗುತ್ತಾಳೆ. ವಸಂತಸೇನೆಯ ಮನೆಯಲ್ಲಿ ಸ್ಥೂಲಾಕಾರವಾಗಿ ಮಲಗಿದ್ದ ಆಕೆಯ ತಾಯಿಯನ್ನು ನೋಡಿ ಮೈತ್ರೇ ಯನು—'ಈ ರಾಕ್ಷಸಿಯ ಹೊಟ್ಟೆಯ ವಿಸ್ತಾರ ವಾದರೂ ಎಷ್ಟಿದೆ? ಇವಳನ್ನು ಮುಂಚೆಯೇ ಈ ಮನೆಯಲ್ಲಿ ಕುಳ್ಳಿರಿಸಿ, ಆ ಮೇಲೆ ಬಾಗಿಲವನ್ನು ಹಚ್ಚಿದರೋ ಏನು?' ಎಂದು ಕೇಳುತ್ತಾನೆ. ಕಳ್ಳ ಶರ್ವಿಲಕನು ತನ್ನ ಮನೆಗೆ ಕನ್ನಹಾಕಿದ್ದನ್ನು ನೋಡಿ ಚಾರುದತ್ತನು 'ಎಂತಹ ಮನೋಹರ ವಾದ ಕನ್ನವಿದು' ಎಂದು ವಿಮರ್ಶೆಮಾಡುತ್ತಾ ಅಯೋಗ್ಯ ಜನರ ಸಂಪರ್ಕಕ್ಕೆ ಹೆದರಿ ಮಹಾ ಗೃಹದ ಎದೆ ಒಡೆಯಿತೇನೋ ಎಂಬಂತೆ ಕನ್ನವು ತೋರುತ್ತದೆ' ಎಂದು ಉತ್ಪ್ರೇಕ್ಷೆ ಮಾಡುತ್ತಾನೆ. ಅಸಹಾಯಕರ ಸಾತ್ವಿಕರ, ನಿರ್ಬಲರ ಒಡ ವೆಗಳನ್ನು ತಾನು ಅಪಹರಿಸುವುದಿಲ್ಲ. ಕೇವಲ ಸೊಕ್ಕಿದ ಧನಿಕರನ್ನು ಸೆಳೆಯುತ್ತೇನೆಂಬ ಶರ್ವಿಲ ಕನ ಸಮಾಜವಾದೀ ಮಾತುಗಳು ಶೂದ್ರಕ ಕವಿಯ ಪ್ರತಿಭೆಯೊಂದಿಗೆ ಅನುವಾದಕರ ಜಾಣ್ಮೆಯನ್ನೂ ವ್ಯಕ್ತಪಡಿಸುತ್ತವೆ. ವಸಂತಸೇನೆ ಮಳೆಯಲ್ಲಿ ತೊಯ್ಯಿಸಿಕೊಂಡು ಬಂದು ಹೊರಗೆ ಚಾರುದತ್ತ ನಡು ದರ್ಶನಾಕಾಂಕ್ಷಿಯಾಗಿ ಪೈಜಣಗಳಲ್ಲಿ ಹತ್ತಿಕೊಂಡ ಕೆಸರಿನ ಕಾಲನ್ನು ಹರಿಯುವ ನೀರಿ ನಲ್ಲಿ ತೊಳೆದುಕೊಳ್ಳುತ್ತ ಬಾಗಿಲಲ್ಲಿ ನಿಂತಿದ್ದಾಳೆ ಎಂಬ ವರ್ಣನೆ ಮೂಲಶ್ಲೋಕದ—

ತ್ವದ್ದರ್ಶನಾಕಾಂಕ್ಷಿಣೀ। ಪಾದೌ
ನೂಪುರ ಲಗ್ನಕರ್ದಮ ಧತಾ ಪ್ರಕ್ಷಾಲಯತೀ ಸ್ಥಿತಾ'।

ಎಂಬುದರ ಸುಂದರ ಗದ್ಯಾನುವಾದವಾಗಿದ್ದರೆ— 'ಯಾವಾತನ ಬೆನ್ನಿಗೆ ದಡ್ಡುಗಳು ಬಿದ್ದಿಲ್ಲವೊ,

ಮೀನುಗಂಡುಗಳನ್ನು ಪ್ರತಿದಿನದಲ್ಲಿ ನಾಯಿಗಳು ಹರಿದು ತಿಂದಿಲ್ಲವೊ ಅಂಥ ಸುಕುಮಾರ ದೀರ್ಘ ದೇಹದ ಮನುಷ್ಯನಿಗೆ ಹಗಲೆಲ್ಲ ಜೂಜಾಡುವುದರಿಂದ ಫಲವೇನು ?' ಎಂಬ ಗದ್ಯಾನುವಾದವು ಕೃತಕವೆನಿಸುತ್ತದೆ.

ಕೆಲವು ಮೂಲ ಸಂಸ್ಕೃತ ಪದಪ್ರಯೋಗಗಳ ಜೀವಾಳವನ್ನರಿತುಕೊಂಡು ಬಳಕೆಯ ಕನ್ನಡದಲ್ಲಿ ಅನುವಾದಿಸುವಲ್ಲಿ ಮಾತ್ರ ವಿಶೇಷ ಜಾಣ್ಮೆಯನ್ನು ತೋರಿದ್ದಾರೆ ಅನುವಾದಕರು :

ರದನಿಕೆ 'ಹಾ ಧಿಕ್' ಎಂಬ ಉದ್ಗಾರಕ್ಕೆ 'ಅವ್ವಯ್ಯಾ' ಎಂದೂ, 'ಹತಾಶ' ಎಂಬ ಬೈಗುಳನ್ನು 'ಬಿಕನಾಸಿ' ಎಂದೂ, 'ಭವತುಗಮಿಷ್ಯಾಮಿ' 'ಒಳ್ಳೇದು ಹೋಗೋಣ' ಎಂದೂ 'ವಣಿಕ್' ಶಬ್ದವನ್ನು 'ಬಣಜಿಗ'ನೆಂದೂ, 'ಸ್ನಾನಶಾಟಿ' ಎಂಬುದಕ್ಕೆ 'ನೀರಪಂಚೆ' ಎಂದೂ ಸೊಗಸಾಗಿ ಅನುವಾದಿಸಿದ್ದಾರೆ. 'ಆಃ ದಾಶ್ಯಾಃ ಪುತ್ರಿಕೆ' ಎಂಬುದಕ್ಕೆ 'ಛೀರಂಡೇ ಮಗಳೆ' ಎಂಬ ಕನ್ನಡದ ರೂಪವು ಬಹಳ ಸಮರ್ಪಕವಾಗಿದ್ದರೆ, 'ಯಾತಂಗಾವೌ ಯಾತಂ' ಎಂಬ ಬಂಡಿಯವನ ಬಾಯಲ್ಲಿ 'ಚಾ, ಚಾ, ಬಶಾ ಬಶಾ' ಎಂಬುದು ಅಚ್ಚಹಳ್ಳಿಯ ಭಾಷೆ ಆಡಿಸಿದ್ದಾರೆ. ಧೂರ್ತಃ ಎಂಬ ಪದಕ್ಕೆ 'ಅಗಡದತ್ತ' ಎಂಬುದು ಸಮರ್ಪಕವೆನಿಸುವುದಿಲ್ಲ. ಎಲ್ಲ ನಾಟಕಗಳ ವಿವರ ವಿಮರ್ಶೆಗೆ ಇಲ್ಲಿ ಸ್ಥಳವಿಲ್ಲ. ಮಾದರಿಗಾಗಿ ಕೆಲವೊಂದನ್ನು ಮಾತ್ರ ಉದಾಹರಿಸಲು ಸಾಧ್ಯ.

ಮುಳಬಾಗಲರಿಗೆ ಸಂಸ್ಕೃತ ಕಾವ್ಯಗಳು ಕರತಲಾಮಲಕವಾಗಿದ್ದುವೆಂಬುದಕ್ಕೆ ಅವರ ಚಿರಂಜೀವರೊಡನೆ ಮಾತುಕತೆ ಮಾಡುತ್ತಿದ್ದಾಗ ಹಿಂದಿನ ಒಂದು ಸಂದರ್ಭವನ್ನವರು ನಿರೂಪಿಸಿದರು....ಮುಳಬಾಗಲರು ಕವಿಯೆಂದು ಟ್ರೇನಿಂಗ ಕಾಲೇಜಿನಲ್ಲಿ ಪ್ರತೀತಿಯಾಗಿತ್ತು. ಒಮ್ಮೆ ಮೇಲಿನ ಸಾಹೇಬರು 'ತಪಾಸಣೆ'ಗೆ ಬರುವವರಿದ್ದರು. ಪ್ರಿನ್ಸಿಪಾಲರು ಮೇಲಿನ ಸಾಹೇಬರ ಹೆಸರು ಬರುವಂತೆ ಒಂದು ಸ್ವಾಗತಗೀತ ಮಾಡಲು ಹೇಳಿದರು. ಮುಳಬಾಗಲರು ಸ್ವಾಗತ ಗೀತದ ಮಟ್ಟಕ್ಕೆ ತಮ್ಮ ಕಾವ್ಯವನ್ನು ಇಳಿಸಲು ಸಿದ್ಧರಾಗಲಿಲ್ಲ. ಪ್ರಿನ್ಸಿಪಾಲರು ಕ್ರುದ್ಧರಾದರು. ಇವರ ಬಗ್ಗೆ ಸಮಯಾನುಸಾರವಾಗಿ ಶರಾ ಬರೆದರು— ಇವರಿಗೆ ನೆಟ್ಟಗೆ ಕಣ್ಣು ಕಾಣಿಸುವುದಿಲ್ಲ, ಕಲಿಸಲಿಕ್ಕೆ ಅಡ್ಡಿಯಾಗುತ್ತದೆ, ನಿವೃತ್ತಗೊಳಿಸಬೇಕೆಂದು. ಇನ್ಸಪೆಕ್ಟರರ ಕಡೆಗೆ ಈ ವರದಿ ಹೋಯಿತು. ಇನ್ಸಪೆಕ್ಟರರು ಮುಳಬಾಗಲರನ್ನು ಕರೆಯಿಸಿದರು. ವಿಚಾರ ಮಾಡಿದರು. ತಮ್ಮ ಸಮರ್ಥನೆ ಕೊಡುತ್ತ ಮುಳಬಾಗಲರು ಕಲಿಸುವುದಕ್ಕೆ ಕೆಲವು ಗ್ರಂಥ ತೆಗೆದು ಓದುವುದೇ ಕಾರಣ ಬೀಳುವುದಿಲ್ಲ. ತಮಗೆ ಸಂಸ್ಕೃತ-ಕನ್ನಡ ಕಾವ್ಯಗಳು ನಾಲಗೆಯ ಮೇಲೆಯೇ ಇವೆ ಎಂದರು. ಇನ್ಸಪೆಕ್ಟರರು ಕಾಳಿದಾಸನ ಶಾಕುಂತಲದ ಕೆಲವು ಪದ್ಯ ಹೇಳಿ ವಿವರಣೆ ಕೊಡಹೇಳಿದರು. ಮುಳಬಾಗಲರು ಸಿದ್ಧಹಸ್ತರಾಗಿ ಶಾಕುಂತಲದ ಪದ್ಯಗಳನ್ನು ಹೇಳಿ ವ್ಯಾಖ್ಯಾನ ಮಾಡಿದರು. ಅವರ ನೌಕರಿಯ ನೌಕೆ ಮುಂದೆ ಸಾಗಿತು.

ಮುಳಬಾಗಲರು ಶೀಘ್ರಕವಿಗಳಾಗಿದ್ದರಂತೆ. ಏನಾದರೂ ಬರೆದರೆ ಒಡನೆಯೇ ತಮ್ಮ ಮುಪ್ಪಿನ ತಾಯಿಗೆ ಓದಿ ತೋರಿಸುವರಂತೆ. ಮುಳಬಾಗಲರು ಧರ್ಮಶ್ರದ್ಧರು. ಸೌಜನ್ಯಶಾಲಿಗಳು. ಎಲ್ಲರನ್ನೂ ಮಮತೆಯಿಂದ ಕಾಣುವವರು. ಒಂದು ಮನೆತನದ ಸಂದರ್ಭವನ್ನು ಅವರ ಪುತ್ರ ನರಸಿಂಗರಾಯರು ಹೇಳಿದುದು. ಅವರ ಮನೆಯಲ್ಲಿ ಪ್ರತಿವಾರವೂ ಒಂದು ರೂಪಾಯಿಗೆ ಹದಿಮೂರು ಸೇರು ಬೆಣ್ಣೆಯನ್ನು ಕಾಸಿ ಒಂದು ಕಂಚಿನ ಪಾತ್ರೆಗೆ ತೆಗೆದಿಟ್ಟಿರುತ್ತಿದ್ದರಂತೆ. ಈ ಚಿರಂಜೀವ ಒಮ್ಮೆ ಬೊಗಸೆಯಿಂದ ಗಬರಿಕೊಂಡು ತಾನೇ ತುಪ್ಪ ಬಡಿಸಿಕೊಂಡಾಗ, ಅಜ್ಜಿ 'ಅಪ್ಪಾ ಅಷ್ಟೊಂದು ಹಾಕಿಕೋಬೇಡೋ. ದೃಷ್ಟಿಯಾದೀತು' ಎಂದರಂತೆ. ಅದಕ್ಕೆ ಧೊಂಡೋಪಂತರು 'ನನ್ನ ನಿನ್ನ ಮುಂದೆ ಹುಡುಗನಿಗೆ ದೃಷ್ಟಿ ಆಗಲಿಕ್ಕಿಲ್ಲ. ಆದರೆ ತಡಿಯುತ್ತದೊ ಇಲ್ಲವೊ ನೋಡಿ ಹಾಕು' ಎಂದರಂತೆ. ಅವರ ಮಾತು ಇಷ್ಟು ಹಿತ–ಮಿತ.

ಶ್ರೀ ಧೊಂಡೋ ನರಸಿಂಹ ಮುಳಬಾಗಲರು ೨೪-೯-೧೯೫೪ ರಂದು ನರೇಂದ್ರದಲ್ಲಿ ಸ್ವರ್ಗಸ್ಥರಾದರು. ಆ ಸಂದರ್ಭದಲ್ಲಿ ಧಾರವಾಡ ಪ್ರಾಕ್ಟಿಸಿಂಗ ಶಾಲೆಯಲ್ಲಿ ದುಃಖಸೂಚಕ ಸಭೆ ಜರುಗಿತು. ಅಲ್ಲಿ ಹೇಳಲ್ಪಟ್ಟ ಒಂದೆರಡು ಸಂಗತಿ

ಗಳು ಹೀಗೆ ಉಲ್ಲೇಖಿಸಲ್ಪಟ್ಟಿವೆ. (ಇದನ್ನು 'ಮೃಚ್ಛಕಟಿಕ'ದ ಹೊಸ ಆವೃತ್ತಿಯ ಮುನ್ನುಡಿಯಿಂದ ಉದ್ಧರಿಸಲಾಗಿದೆ) "ನಮ್ಮ ಗುರುಗಳು ನಮ್ಮಂತೆ ಟ್ರೇನಿಂಗ ಕಾಲೇಜಿನಲ್ಲಿಯೇ ಕಲಿತವರಾದರೂ ಅವರಲ್ಲಿರುವ ವಿಶಾಲಬುದ್ಧಿಯ ಮೂಲಕ ಶಾಲಾ ಶಿಕ್ಷಕರಾಗಿ ಕೆಲಸ ಮಾಡುತ್ತಿರುವಾಗ್ಗೆ ಸಂಸ್ಕೃತ—ಕನ್ನಡ ಭಾಷೆಗಳ ಹಲಕೆಲವು ಗ್ರಂಥಗಳನ್ನೋದಿ ಭಾಷಾವಿಶಾರದತ್ವವನ್ನು ಪಡೆದರು. ಉತ್ತರರಾಮಚರಿತ್ರ, ವೇಣೀಸಂಹಾರ, ಮೃಚ್ಛಕಟಿಕ, ಮಾಲವಿಕಾಗ್ನಿಮಿತ್ರ ಎಂಬ ನಾಟಕಗಳನ್ನೂ ನುಡಿಗಟ್ಟು, ಕನ್ನಡ ಕೈಪಿಡಿಗಳೆಂಬ ವ್ಯಾಕರಣ ಗ್ರಂಥಗಳನ್ನೂ ಬರೆದು, ಕನ್ನಡ ಭಾಷಾಭಿವೃದ್ಧಿಗೆ ತಕ್ಕಷ್ಟು ಸಹಾಯ ಮಾಡಿದರು.

"ಮುಳಬಾಗಲರು ಶುದ್ಧ ಸಾತ್ವಿಕರಿದ್ದರೆಂಬುದು ಅವರ ಮೂರ್ತಿದರ್ಶನದಿಂದಲೆ ವ್ಯಕ್ತವಾಗುತ್ತಿತ್ತು. ಅವರಿಗೆ ಯಾವ ದುರ್ವ್ಯಸನವೂ ಇದ್ದಿಲ್ಲ; ಆದರೆ ಕನ್ನಡ ಭಾಷಾ ಸೇವೆಯನ್ನು ಮಾಡಬೇಕೆಂಬ ಸದ್ವ್ಯಸನವು ಮಾತ್ರ ಇತ್ತು. ಅವರು ಹಾದಿಹಿಡಿದು ಹೋಗುವಾಗಲೂ ಬರುವಾಗಲೂ ಮನಸ್ಸಿನೊಳಗೆ ಕವಿತೆಯನ್ನು ರಚಿಸುತ್ತ, ಬಾಯೊಳಗೆ ಮೆಲ್ಲನೆ ಅನ್ನುತ್ತ ಇರುವರು.

"ಈ ಮುಂಬಯಿ ಕರ್ನಾಟಕವು ವಸ್ತುತಃ ಕನ್ನಡಿಗರ ಪ್ರದೇಶವೆ. ಆದರೂ ಪೇಶ್ವೆಯವರ ಆಳಿಕೆಯಲ್ಲಿ ಇದಕ್ಕೆ" "ದಕ್ಷಿಣ ಮಹಾರಾಷ್ಟ್ರವೆಂಬ ಹೆಸರು ಬಂದದ್ದಲ್ಲದೆ ಆ ಹೆಸರಿಗೊಪ್ಪುವಂತೆ ವಿಕೃತ ಮರಾಠಿಯೇ ನಿವಾಸಿಗಳ ಹಾಗೂ ದರ್ಬಾರದ ಭಾಷೆಯಾದ್ದರಿಂದ ಕನ್ನಡವು ನಿರ್ನಾಮವಾಗುವ ಪ್ರಸಂಗ ಬಂದಿತ್ತು. ಆದರೆ ಮುಂದೆ ಬ್ರಿಟಿಸ್ ಆಡಳಿತದಲ್ಲಿ ದರ್ಬಾರದ ಪತ್ರವ್ಯವಹಾರವು ಕನ್ನಡದಲ್ಲಿ ನಡೆಯಬೇಕೆಂದು ಗೊತ್ತಿದ್ದರಿಂದಲೂ, ಸಾಲೆಗಳಲ್ಲಿ ಕನ್ನಡ ಕಲಿಸಲ್ಪಡಲಾರಂಭಿಸಿದ್ದರಿಂದಲೂ ಕನ್ನಡದ ಪುನರುಜ್ಜೀವನವಾಯಿತು. ಕೈ.ವಾ.ರಾ.ಸಾ. ಡೆಪ್ಯೂಟಿ ಚೆನ್ನಬಸಪ್ಪನವರು ಬೆಳಗಾವ, ಧಾರವಾಡ ಜಿಲ್ಲೆಗಳ ಶಾಲಾಧಿಕಾರಿಗಳಾದ ಸಮಯಕ್ಕೆ ಕನ್ನಡವು ಅಲ್ಪ ಸ್ವಲ್ಪ ಬೆಳವಣಿಗೆ ಹೊಂದಿತು. ರಾ. ಸಾ. ವೆಂಕಟರಂಗೋಕಟ್ಟಿ ಮುಂತಾದವರು ಅಚ್ಚಗನ್ನಡ ಪದ್ಧತಿಯಿಂದ ಕ್ರಮಿಕಪುಸ್ತಕಗಳನ್ನು ಬರೆದು ಕನ್ನಡದ ಬೆಳವಣಿಗೆಗೆ ಸಹಾಯಮಾಡಿದರು. ಆದರೆ ಶಾಲೋಪಯೋಗಿ ಪುಸ್ತಕಗಳ ಹೊರತು ನಾಟಕಾದಿಗಳನ್ನು ನಿಜಗನ್ನಡದಲ್ಲಿ ಬರೆಯುವ ಪರಿಪಾಠವು ನಮ್ಮ ಗುರುಗಳಾದ ಮುಳಬಾಗಲರಿಂದಲೇ ಆರಂಭವಾಯಿತೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ...."

ಮುಳಬಾಗಲರು ಇನ್ನೂ ಅನೇಕ ಕಾವ್ಯ, ನಾಟಕ ಕಾದಂಬರಿ ಗ್ರಂಥಗಳನ್ನು ಬರೆಯುವುದಕ್ಕೆ ತೊಡಗಿದ್ದರಂತೆ. ಅವರು ಹಿತೋಪದೇಶದ ಕೆಲಭಾಗವನ್ನು ಕಾವ್ಯರೂಪದಲ್ಲಿ ಅನುವಾದಿಸಿದ್ದರೆಂದು ತಿಳಿಯುತ್ತದೆ. ಇನ್ನೂ ಎಷ್ಟೋ ಅಪ್ರಕಟಿತ ಸಾಹಿತ್ಯ ಅವರ ಅಳಿಯಂದಿರಾದ ರಂಗೋಬಾಳಾಜಿ ಮುಳಹಳ್ಳಿ ಅವರ ಬಳಿ ದೊರಕಬಹುದೆಂದೂ ತೋರುತ್ತದೆ. ಸದ್ಯಃ ಅವರ ಚಿರಂಜೀವರು ಧಾರವಾಡದಲ್ಲಿಯೇ ಇದ್ದಾರೆ. ಸಾದುಗಪ್ಪಿನ ತುಂಬುದೇಹದ ಸಾಧಾರಣ ನಿಲುವಿನ ಆಳು. ಮುಳಬಾಗಲರ ಭಕ್ತನೊಬ್ಬ ಬಳೆಗಾರ ರಾಜಾಸಾಹೇಬನೆಂಬವನು ಮುಳಬಾಗಲರು ತೀರಿದ ಎಷ್ಟೋ ವರುಷಗಳ ತರುವಾಯ ಅವರ ಮಗನನ್ನು ಕಂಡಾಗ ಮಗ ದೊಡ್ಡವನಾಗಿ ಕಂಡ. 'ನಮ್ಮ ಅಪ್ಪಾವರ್‍ನ ನೋಡಿಧಾಂಗ ಆಗತೈತಿ ನೋಡ್ರಿ ನಿಮ್ಮನ್ನ ನೋಡಿದರ'—ಎಂದು ಉದ್ಗಾರ ತೆಗೆದನಂತೆ. ಮುಳಬಾಗಲರ ವ್ಯಕ್ತಿತ್ವದ ಕಲ್ಪನೆ, ಅವರ ಚಾರಿತ್ರಿಕ ಸಂಗತಿ ಅವರ ಇನ್ನುಳಿದ ಹಸ್ತಪ್ರತಿಗಳ ಬಗ್ಗೆ ವಿಚಾರ ವಿನಿಮಯ ಬೇಕಿದ್ದರೆ ಅವರ ಚಿರಂಜೀವರನ್ನು ಕಾಣಬಹುದು. ಕತ್ತಲೆಯಲ್ಲಿ ಅಡಗಿದ ಸಾಹಿತ್ಯ ಅಡಗಿದ್ದ ಸಾಹಿತಿಗಳನ್ನು ಬೆಳಕಿಗೆ ತರುವ ಕಾರ್ಯದಲ್ಲಿ ನಮ್ಮ ಜನರು ಪ್ರತ್ಯಕ್ಷ ಕಾರ್ಯವನ್ನು ಅಂಗೀಕರಿಸಬಹುದೆ?

**—ಎನ್. ಕೆ. ಕುಲಕರ್ಣಿ**

---

# ಹರಿಹರನ 'ಪುಷ್ಪರಗಳೆ'—ಅದರ ವೈಶಿಷ್ಟ್ಯ

ಕನ್ನಡ ಸಾಹಿತ್ಯದಲ್ಲಿ ಹರಿಹರ ಒಬ್ಬ ಕ್ರಾಂತಿಕಾರ ಕವಿ– ಅನೇಕ ಅರ್ಥಗಳಲ್ಲಿ, ಅವನು 'ರಗಳೆಯ ಕವಿ' ಎಂಬ ಕಾರಣದಿಂದ ಮಾತ್ರವೇ ದೊಡ್ಡವನಾಗಿಲ್ಲ. ಆ ಮಾತಿನಲ್ಲಿರಬಹುದಾದ ಅಪಹಾಸ್ಯದ ಛಾಯೆಯನ್ನು ನಿವಾರಿಸಿ ನೋಡಿದಾಗ, ಹರಿಹರನ ಕ್ರಾಂತಿಯ ಒಂದು ಮುಖವನ್ನದು ಸೂಚಿಸುವುದೇನೋ ನಿಜ. ಆದರೆ ಹರಿಹರನ ಹಿರಿಮೆ ಅಷ್ಟೇ ಅಲ್ಲ. ಛಂದಸ್ಸಿನಲ್ಲಿ ಮಾತ್ರವಲ್ಲದೆ ವಸ್ತು, ಭಾಷೆ, ಶೈಲಿಗಳಲ್ಲಿ ಅವನು ತೆರೆದ ಹಾದಿ ಕನ್ನಡದಲ್ಲಿ ಹೊಸದು. ಅವನು ಬರೆದ 'ಶಿವಶರಣರ ರಗಳೆ'ಗಳು ಈ ಹೊಸಹಾದಿಯ ಹಲವು ಮೈಲಿಗಲ್ಲುಗಳು.

ಒಂದು ದೃಷ್ಟಿಯಿಂದ ಹರಿಹರನನ್ನು ನಡುಗನ್ನಡದ—ಅರ್ಥಾತ್ ಹೊಸಗನ್ನಡದ—ಆದಿಪುರುಷನೆಂದು ಕರೆದರೂ ತಪ್ಪಲ್ಲ. ವಾಸ್ತವವಾಗಿ ಈ ಕೀರ್ತಿ ಸಲ್ಲಬೇಕಾದುದು ಬಸವೇಶ್ವರ ಮುಂತಾದ ವಚನಕಾರರಿಗೆ. ಆದರೆ ವಚನಕಾರರು ಗುಡಿಯ ಮೂಲವಿಗ್ರಹವಿದ್ದಂತೆ, ಹರಿಹರನಾದರೋ ಉತ್ಸವಮೂರ್ತಿ. ಅಲ್ಲದೆ, ವಚನಕಾರರ ಕ್ಷೇತ್ರ ಸಾಹಿತ್ಯವಲ್ಲ; ಹರಿಹರನಾದರೆ ಪ್ರಧಾನವಾಗಿ ಕವಿ. ಈ ದೃಷ್ಟಿಯಿಂದ ನೋಡಿದಾಗ ಹರಿಹರನ ಪ್ರಾಮುಖ್ಯವನ್ನು ಗುರುತಿಸುವುದು ಸುಲಭವೆಂದು ಕಾಣುತ್ತದೆ. ಅವನು ಕವಿಯೆಂತೋ ಅಂತೆಯೇ ಭಕ್ತನೂ ಹೌದು. ಭಗವದ್ಭಕ್ತರ ಜೀವನಕಥೆಗಳನ್ನು ವಿರಚಿಸಲು ಅಷ್ಟೇ ಭಕ್ತಿಯುಳ್ಳ ಕವಿಯೊಬ್ಬ ದೊರೆತದ್ದು ಸಾಹಿತ್ಯಲೋಕದಲ್ಲಿ ಅಪರೂಪದ ಸಂಗತಿ. ಇದರಿಂದ ಕವಿಗೂ ಕಾವ್ಯಕ್ಕೂ ಅಭೇದವೇರ್ಪಟ್ಟಿದೆ ಎನ್ನಬಹುದು; ಶಿವಶರಣರನ್ನು ಹರಿಹರ ಎಷ್ಟರಮಟ್ಟಿಗೆ ಚಿತ್ರಿಸಿದ್ದಾನೊ? ಅಷ್ಟರಮಟ್ಟಿಗೆ ತನ್ನನ್ನೇ ಚಿತ್ರಿಸಿಕೊಂಡಿದ್ದಾನೆ ಎಂದರೆ ತಪ್ಪಾಗಲಾರದು.

ಇದು ಶಿವಶರಣರ ರಗಳೆಗಳ ಮಹತ್ವವನ್ನು ಕುರಿತು ಮಾತಾಯಿತು. ಇವುಗಳಲ್ಲದೆ ಹರಿಹರ ಉತ್ತಮವಾದ ಒಂದು ಚಂಪೂಕಾವ್ಯ ಬರೆದಿದ್ದಾನೆ; ಆತ್ಮವೃತ್ತ ಪ್ರಧಾನವಾದ ಎರಡು ವಿಶಿಷ್ಟ ಶತಕಗಳನ್ನು ಬರೆದಿದ್ದಾನೆ; ಅವನು ರಚಿಸಿರುವ ವಿಭೂತಿ ರುದ್ರಾಕ್ಷಿಮುಂತಾದ ಅಷ್ಟಾವರಣ ಸಂಬಂಧವಾದ ರಗಳೆಗಳೂ ಗಮನಾರ್ಹವಾಗಿವೆ. ಈ ಸಾಲಿನಲ್ಲಿ ಬರುತ್ತದೆ ಅವನ 'ಪುಷ್ಪರಗಳೆ'. ಭಕ್ತಿಯನ್ನು ಮಾತ್ರವಲ್ಲ, ಅದರ ಸಾಧನ ಪರಿಕರಗಳನ್ನು ಕೂಡ ಹರಿಹರ ಚಿತ್ರಿಸಿರುವುದು ಲಕ್ಷಿಸಬೇಕಾದ ವಿಷಯ. ವಿಭೂತಿಯ ರಗಳೆ, ರುದ್ರಾಕ್ಷಿಯ ರಗಳೆ ಮುಂತಾದುವುಗಳ ವರ್ಗಕ್ಕೇ 'ಪುಷ್ಪರಗಳೆ' ಸೇರುವಂತೆ ತೋರಿದರೂ, ತಿರುಳಿನಲ್ಲಿ ಅವುಗಳಿಗಿಂತ ಇದು ತೀರ ಭಿನ್ನವಾದುದು. ಏಕೆಂದರೆ, ಆ ರಗಳೆಗಳಲ್ಲಿರುವ ಶುದ್ಧ ಧಾರ್ಮಿಕ ಅಥವಾ ಆಧ್ಯಾತ್ಮಿಕ ಆವರಣ 'ಪುಷ್ಪರಗಳೆ' ಯಲ್ಲಿಲ್ಲ; ಇದು ಬಹುಮಟ್ಟಿಗೆ ಲೌಕಿಕವಾದ (Secular) ಕಾವ್ಯಕೃತಿ. ಶುದ್ಧವಾದ ಭಾವಗೀತೆ ಎಂಬ ಒಂದು ಮಾತಿನಲ್ಲಿ 'ಪುಷ್ಪರಗಳೆ' ಯನ್ನು ಸಮರ್ಪಕವಾಗಿ ವರ್ಣಿಸಬಹುದು.

ಭಾವಗೀತೆ (Lyric) ಎಂದು ನಾವು ಕರೆಯುವ ಕಾವ್ಯಪ್ರಕಾರದ ಎಲ್ಲ ಲಕ್ಷಣಗಳೂ ಪುಷ್ಪರಗಳೆಯಲ್ಲಿ ಗೋಚರಿಸುತ್ತಿವೆ. ಅದನ್ನು ಸೂಚಿಸುವುದೇ ಪ್ರಕೃತ ಲೇಖನದ ಆಶಯ. ಭಾವ

ಗೀತೆಯಾಗಿರುವುದಷ್ಟೇ ಅಲ್ಲದೆ, ಉನ್ನತವಾದ ದರ್ಶನವೊಂದನ್ನು ಈ ರಗಳೆ ಗರ್ಭೀಕರಿಸಿಕೊಂಡಿದೆ. ಈ ಕಾರಣಗಳಿಂದ 'ಪುಷ್ಪರಗಳೆ, ಕನ್ನಡ ವಾಙ್ಮಯದಲ್ಲಿ ಒಂದು ಅಪೂರ್ವಕೃತಿ ಎನ್ನಲಡ್ಡಿಯಿಲ್ಲ. ಇದು ಹೊಸಬಗೆಯ ಒಂದು ಕೃತಿ ಎಂಬ ಪ್ರಜ್ಞೆ ಕವಿಗೇ ಇದ್ದಂತೆ ಕಾಣುತ್ತದೆ; ಆದ್ದರಿಂದಲೇ ಅವನು ಇದನ್ನು 'ಪೊಸ ಪೂಮಾಲೆ" ಎಂದು ಕರೆದಿದ್ದಾನೆ, ರಗಳೆಯ ಪ್ರಾರಂಭದಲ್ಲಿ ಬರುವ ಈ ಕಂದ ಪದ್ಯದಲ್ಲಿ :

ಲೀಲೆಯೊಳೋಲ್ಬೆಪೆಂ ಮಧು ರಾಲಾಪದೆ<br>
ಪುಷ್ಪರಗಳೆಯೆಂಬೀ ಪೊಸ ಪೂ |<br>
ಮಾಲೆಯ-ನವಧರಿಸಗಜಾ<br>
ಲೋಲ ಮಹಾಶೀಲ ಹಂಪೆಯ ವಿರೂಪಾಕ್ಷ ||

ಇಲ್ಲಿ ಒಂದು ಸ್ಪಷ್ಟೀಕರಣ ನೀಡುವುದು ಅನುಚಿತವಾಗಲಾರದು. ಏಕೆಂದರೆ, ಭಾವಗೀತೆ ಎಂಬ ಪ್ರಕಾರ ಇತ್ತೀಚೆಗೆ ಪಾಶ್ಚಾತ್ಯ ಸಾಹಿತ್ಯದ ಸಂಪರ್ಕದಿಂದ ಬಂದುದಲ್ಲವೆ ? ನಮ್ಮ ಹಿಂದಿನ ಸಾಹಿತ್ಯದಲ್ಲಿ ಇದು ಎಲ್ಲಿತ್ತು ? ಎಂಬ ಸಂದೇಹ ಹುಟ್ಟಬಹುದು.

ಭಾವಗೀತೆ, ಕಾದಂಬರಿ, ಸಣ್ಣಕತೆ ಮೊದಲಾದ ಪ್ರಕಾರಗಳು ಇಂಗ್ಲಿಷಿನಿಂದ ಬಂದುವು ಎಂದು ನಾವು ಸಾಮಾನ್ಯವಾಗಿ ಹೇಳುವಾಗ, ಆ ಹೇಳಿಕೆಗೆ ಕೆಲವು ಪರಿಮಿತಿಗಳಿರಬೇಕೆಂದು ಕಾಣುತ್ತದೆ. ಏಕೆಂದರೆ, ಈ ಯಾವುದೊಂದು ಪ್ರಕಾರವೂ ನಮಗೆ ಸಂಪೂರ್ಣ ಹೊಸದಲ್ಲ. ಇವು ಭಾರತೀಯ ಸಾಹಿತ್ಯಗಳಲ್ಲಿ ಹಿಂದಿನಿಂದಲೂ ಅಸ್ಫುಟವಾಗಿದ್ದುವು ; ಆದಕೆ ಇದಕ್ಕೆ ನಿಶ್ಚಿತವಾದ ರೂಪುರೇಖೆಗಳುಂಟಾದುದು ಇಂಗ್ಲಿಷಿನ ಪ್ರಭಾವದಿಂದ. ಎಂದರೆ, ಉಸಿರು ನಮ್ಮಲ್ಲೇ ಇತ್ತು, ಹೆಸರು ಮಾತ್ರ ಹೊರಗಿನಿಂದ ಬಂತು ಎಂದು ಹೇಳಿದರೆ ಸರಿಯಾದೀತು. ಕಾದಂಬರಿ ನಮ್ಮಲ್ಲಿ ಹಿಂದೆ ಇರಲಿಲ್ಲವೆ ? ಇತ್ತೆನ್ನುವುದನ್ನು ಆ ಹೆಸರೇ ಸೂಚಿಸುತ್ತದೆ, ಬಾಣಭಟ್ಟನ 'ಕಾದಂಬರಿ'ಯನ್ನು ನೆನಪು ಮಾಡುವುದರಿಂದ. ಕಥೆಗಳಿಗಂತೂ ಭಾರತೀಯ ಸಾಹಿತ್ಯ ತವರುಮನೆ. ಭಾವಗೀತೆಯ ವರ್ಗಕ್ಕೆ ಸೇರುವ ಭಾಗಗಳು ನಮ್ಮ ಮಹಾಕಾವ್ಯ, ಖಂಡಕಾವ್ಯಗಳಲ್ಲಿ ಯಥೇಷ್ಟವಾಗಿ ಸಿಗುತ್ತವೆ. ಕಾವ್ಯಗಳಲ್ಲಿ ಅಂತರ್ಗತವಾದ ಭಾವಗೀತಾತ್ಮಕ ಭಾಗಗಳು ಹಾಗಿರಲಿ, ತನಿಯಾದ ಭಾವಗೀತೆಗಳೇ ಪ್ರತ್ಯೇಕವಾಗಿ ರಚಿತವಾಗಿರುವುದೂ ಉಂಟು—ವಿರಳ ಎನ್ನಬಹುದಾದರೂ ಸದ್ಯಕ್ಕೆ ಒಂದೊಂದೇ ನಿದರ್ಶನ ಕೊಡುವುದಾದರೆ: ಸಂಸ್ಕೃತದಲ್ಲಿ ಕಾಳಿದಾಸನ 'ಋತುಸಂಹಾರ' ಸೊಗಸಾದ ಭಾವಗೀತೆಗಳ ಗೊಂಚಲು ; ಕನ್ನಡದಲ್ಲಿ ಹರಿಹರನ 'ಪುಷ್ಪರಗಳೆ' ಒಂದು ಸುಂದರ ಭಾವಗೀತೆ.

ಇದಕ್ಕೆ ತಾತ್ಪರ್ಯವಿಷ್ಟು : ಈ ಸಾಹಿತ್ಯ ಪ್ರಕಾರಗಳು ಮಾನವ ಹೃದಯದ ವಿವಿಧ ಆವಿಷ್ಕಾರಗಳು ; ಅವು ಯಾವುದೇ ಸಾಹಿತ್ಯದಲ್ಲಿ ಸಹಜ, ಸ್ವಾಭಾವಿಕ. ಏಕೆಂದರೆ, ಕಲೆಯ ಸತ್ಯ ತನ್ನದೇ ಆದ ರೂಪವನ್ನು ನಿರ್ಮಿಸಿಕೊಳ್ಳುತ್ತದೆ. ಅದರ ಮೂಲ ಅಂತಃಸ್ಫೂರ್ತಿಯೇ ಹೊರತು ಅನುಕರಣವಲ್ಲ. ಆತ್ಮ ನಮ್ಮದಾಗಿ ಮೈ ಹೊರಗಿನಿಂದ ಬರುವುದು ಶಕ್ಯವಲ್ಲ. ಆದ್ದರಿಂದ, ಭಾವಗೀತೆ ಇತ್ಯಾದಿ ಪ್ರಕಾರಗಳು ನಮ್ಮಲ್ಲಿ ಮೊದಲು ಇರಲೇ ಇಲ್ಲ, ಇವು ಪಡುವಣ ಕಡಲು ಕಳುಹಿಸಿದ ತರಂಗಗಳು-ಎಂದು ಪ್ರತಿಪಾದಿಸುವುದು ಅಸಮಂಜಸವಾಗುತ್ತದೆ.

ಇನ್ನು, ಭಾವಗೀತೆ ಎಂದರೇನು ? ಕವಿಯ ವೈಯಕ್ತಿಕ ಭಾವದ ನೇರ ಅಭಿವ್ಯಕ್ತಿ ; ಕಥೆಯ ಹಂಗಿಗೆ ಒಳಗಾಗದ ಸ್ವತಂತ್ರ ವ್ಯಕ್ತಿನಿಷ್ಠ ರಚನೆ. ಒಂದು ಚಣದ ಭಾವ, ಅನುಭವ, ಸಂವೇದನೆ

ಅದರಲ್ಲಿ ಮೂರ್ತಗೊಂಡಿರುತ್ತದೆ. ಆದ್ದರಿಂದಲೇ ಭಾವಗೀತೆ "ಒಂದು ಕ್ಷಣದ ಸ್ಮಾರಕ" (**A moments monument**). ಭಾವತೀವ್ರತೆ, ಸಂಕ್ಷಿಪ್ತತೆ ಮತ್ತು ಗೇಯತೆ ಇವು ಅದರ ಮೂರು ಪ್ರಮುಖ ಗುಣಗಳೆಂದು ಒತ್ತಿ ಹೇಳಿದ್ದಾರೆ.

ಈ ಹಿನ್ನೆಲೆಯಲ್ಲಿ ವಿವೇಚಿಸಿದಾಗ, ಹರೀಶ್ವರನ 'ಪುಷ್ಪರಗಳೆ' ಭಾವಗೀತೆಯ ಒಂದು ಉಜ್ವಲ ನಿದರ್ಶನವಾಗಿ ತೋರದಿರದು.

— ೩ —

ಭಕ್ತ ಕವಿ ಹರಿಹರನ ದಿನಚರಿಯ ಒಂದು ಪುಟ 'ಪುಷ್ಪರಗಳೆ'ಯಲ್ಲಿ ಪ್ರಕಟವಾಗಿದೆ. ಒಂದು ಪ್ರಾತಃಕಾಲದಲ್ಲಿ ಶಿವಪೂಜೆಗೆ ಹೂವು ತರಲು ತೋಟಕ್ಕೆ ನಡೆದಾಗ, ಅಲ್ಲಿ ತನಗುಂಟಾದ ಭಾವಗಳನ್ನು ಕವಿ ಮೂಡಿಸಿದ್ದಾನೆ. ಹರಿಹರನ ಭಕ್ತಿಯ ಉತ್ಸಾಹ, ಪುಷ್ಪಗಳನ್ನು ಕಂಡು ಅವನಿಗಾದ ಅಮಿತಾನಂದ, ಆ ಹೂಗಳ ಬಗ್ಗೆ ಅವನ ಆತ್ಮೀಯ ಮನೋಭಾವ—ಇವು ಮೂರೂ ಅವಿರೋಧವಾಗಿ ಸೇರಿ ಹರಿಹರನಲ್ಲಿ ಒಂದು ಅನುಭವವನ್ನು ಪ್ರಚೋದಿಸಿರುವ ಪರಿಯನ್ನಿಲ್ಲಿ ಕಾಣುತ್ತೇವೆ. ಈ ಅನುಭವ 'ಪುಷ್ಪರಗಳೆ'ಯಲ್ಲಿ ನೇರವಾಗಿ, ಒಂದಿನಿತೂ ವಿಚಲಿತವಾಗಿದೆ ವ್ಯಕ್ತವಾಗಿದೆ.

ಕುಸುಮಗಳ ವರ್ಣನೆಯಲ್ಲಂತೂ ಹರಿಹರನ ಸೌಂದರ್ಯದೃಷ್ಟಿ ಅನುಪಮವಾಗಿ ಎದ್ದುಕಾಣುತ್ತದೆ. ಈ ರಗಳೆಯ ಒಂದು ತೆರನಾದ ಪುಷ್ಪ ವಿಮರ್ಶೆ ಎನ್ನಬಹುದು. ತೋಟದಲ್ಲಿ ಬಗೆಬಗೆಯ ಹೂಗಳಿರುತ್ತವೆ; ಒಂದರಂತೆ ಮತ್ತೊಂದಿರುವುದಿಲ್ಲ; ಒಂದರಸೌರಭ ಮತ್ತೊಂದರದಲ್ಲ. ಹರಿಹರನು ಒಂದೊಂದು ಹೂವಿನ ವೈಶಿಷ್ಟ್ಯವನ್ನೂ ಸೂಚಿಸಿ, ಅದರ ಪರಿಮಳದ ಪರಿಯನ್ನೂ ಚಿತ್ರಿಸಿದ್ದಾನೆ. ವಸ್ತುಸ್ವರೂಪದ ಬಗೆಗೆ ಅವನಿಗಿರುವ ಸೂಕ್ಷ್ಮ ಪರಿಜ್ಞಾನ ಇಲ್ಲಿ ಕಂಡುಬರುತ್ತದೆ.

ಹರಿಹರನ ಒಂದೊಂದು ಹೂಗಿಡದ ಬಳಿಗೂ ತೆರಳಿ, ಶಿವನ ಮುಡಿಗೆ ಹೂಗಳನ್ನು ಕರುಣಿಸುವಂತೆ ಬೇಡುತ್ತ ನಡೆಯುವ ದೃಶ್ಯ ಪುಳಕಗೊಳಿಸುವಂಥದು. ದೇವರ ಪೂಜೆಯನ್ನು ತನ್ಮಯತೆಯಿಂದ ಎಷ್ಟೋ ಕವಿಗಳು ವರ್ಣಿಸಿದ್ದಾರೆ; ಆದರೆ ಅದಕ್ಕೆ ಪೂರ್ವಭಾವಿಯಾಗಿ ಪುಷ್ಪಸಂಚಯದ ಪೂಜೆಯನ್ನು—ಹರಿಹರನ ಪಾಲಿಗೆ ಅದು ಪೂಜೆಯಲ್ಲದೆ ಬೇರೆಯಲ್ಲ—ವರ್ಣಿಸಿದ ಕವಿಗಳು ಇನ್ನಿಲ್ಲವೆಂದರೆ ಉತ್ಪ್ರೇಕ್ಷೆಯಲ್ಲ.

ಹರಿಹರ ಬೆಳಗಿನ ಜಾವದಲ್ಲೇ ಎದ್ದು ವಿಭೂತಿ ಧರಿಸಿಕೊಳ್ಳುತ್ತಾನೆ; ಪರಿಮಳ ಸೋರಿ ಹೋಗದಂತೆ ಬಿಗಿಯಾಗಿ ಹೆಣೆದ ಕರಡಿಗೆಯೊಂದನ್ನು ಹಿಡಿದು ಭಕ್ತಿಗೀತೆಗಳನ್ನು ಹಾಡುತ್ತ ಹೊರಟು:

> ಪರಿಮಳದ ಸುಗ್ಗಿ ಸೌರಭದ ಸಂದಣಿಯೆನಿಪ
> ಸುರುಚಿರಾಮೋದದ ರಸಾಂಭೋಧಿಯೆಂದೆನಿಪ

ಹೂದೋಟವನ್ನು ದೂರದಿಂದಲೇ ಕಂಡು ಹರ್ಷಿಸುತ್ತಾನೆ; ಉತ್ಸಾಹದ ಭರದಲ್ಲಿ 'ನಟನಂತೆ ಕುಣಿಕುಣಿದು' ಕೂಗುತ್ತಾನೆ; ಬೆಲ್ಲವತ್ತ, ಕಕ್ಕೆ ಮುಂತಾದ ಪತ್ರಾಳಿಗಳನ್ನು ಕಂಡು 'ಶರಣು', 'ನಮೋ' ಎನ್ನುತ್ತ ಮುನ್ನಡೆಯುತ್ತಾನೆ. ಬರಬರುತ್ತ ಹೂದೋಟದ ಕಂಪು ತೀಡುತ್ತದೆ.

> ಮನದಿಂದೆ ಕೈಕೊಳ್ವಮುನ್ನಮೀ ಗಂಧಮಂ
> ನಿನಗೆ ಬಳಕೀವೆನುತ್ತಮ ಕುಸುಮವೃಂದಮಂ

ಎಂದು ಭಗವದರ್ಪಣ ಮಾಡುತ್ತ ತೋಟವನ್ನು ಹೊಕ್ಕು ರೋಮಾಂಚನಗೊಳ್ಳುತ್ತಾನೆ; ತೂಗಾ

ಡುತ್ತ ತೊನೆದಾಡುತ್ತ 'ಆಹಾ ವಿರೂಪಾಕ್ಷ!' ಎಂದು ಮತ್ತೆ ಉಗ್ಗಡಿಸುತ್ತ ಹಿಗ್ಗುತ್ತಾನೆ. ಭಕ್ತಿಯ ಉದ್ರೇಕದಲ್ಲಿ ಮಾತು ಸೋತು 'ಆಹಾ! ಓಹೋ!' ಮುಂತಾದ ಆಶ್ಚರ್ಯೋದ್ಗಾರಗಳನ್ನು ಸೂಸುವುದು ಅಥವಾ 'ನಟನಂತೆ' ಕುಣಿದು ಕುಪ್ಪಳಿಸುವುದು ಹರಿಹರನಲ್ಲಿ ಸಾಮಾನ್ಯ.

ಹೀಗೆ ಬರುತ್ತಿರಲು, "ಅಳಿಯೆಱಗದನಿಲ ನಲುಗದ ರವಿಕರಂ ಪುಗದ,*ಬೆಳೆಬೆಳೆದು ನಳನಳಿಸಿ ಮಘಮಘಿಸಿ ಕವಲಿಡಿದ" ಇರವಂತಿಗೆ ಕಾಣಿಸುತ್ತದೆ. ಹರಿಹರ 'ಪರಶಿವಂಗೋಲೈಪ ಪೂವ ನೀಡೌ' ಎಂದು ಬೇಡಿ ಆ ಹೂವುಗಳನ್ನು ತೆಗೆದುಕೊಳ್ಳುತ್ತಾನೆ. ಮುಂದೆ ತೋರುವುದು ಸಂಪಗೆ. ಅದನ್ನು ಹರಿಹರ ಯಾಚಿಸುವುದೇ ಒಂದು ಚಂದ:

ಏನವ್ವ ಸಂಪಿಗೆಯೆ ಶಿವನ ಸಿರಿಮುಡಿಗಿಂದು
ನೀನೀವ ಪೊಸ ಕುಸುಮಮಂ ನೀಡು ನೀಡೆಂದು

ಕೇಳಿಕೊಳ್ಳುತ್ತಾನೆ. ಅನಂತರ "ಕುಂಕುಮದ ತಾರಗೆ" ಯಂತಿರುವ ಸೇವಂತಿಗೆಯಲ್ಲಿಗೆ ಬಂದು:

ಎಲೆಲೆ ಪರಿಮಳದ ತಣ್ಪಂಗರೆಯ ಬಾರವ್ವ
ಕುಲಪತಿಯಜಡೆಗೆಳ್ಗೆ ಪೂಗಳಂ ತಾರವ್ವ

ಎಂದು ಕೈಯೊಡ್ಡಿ ಹೂ ಕೊಳ್ಳುತ್ತಾನೆ.

ಇನ್ನು ಮಲ್ಲಿಗೆಯ ಸರದಿ. ಅದನ್ನು ಕವಿ 'ಕಂಪಿನ ನಿಧಿ' ಎಂಬ ಒಂದೇ ಮಾತಿನಲ್ಲಿ ಸಮುಚಿತವಾಗಿ ಬಣ್ಣಿಸಿದ್ದಾನೆ. ಅದರ ಹೂಗಳನ್ನು ಮನವಾರೆ ಕೊಂಡುಕೊಂಡಾಡುತ್ತ ಜಾತಿ(ಜಿ)ಯ ಬಳಿಗೈದುತ್ತಾನೆ:

ಜಾತಿ ನೀನೆ ಸಕಲ ಪುಷ್ಪಜಾತಿಗೆ ಜಾತಿ
ಭೂತೇಶ್ವರನ ಜಡೆಯ ಮುಡಿಗೇಱಜಾತಿದೊಡೆ

ಎಂದು ಹೊಗಳುತ್ತ ಅದರ ಕುಸುಮಗಳನ್ನು ಕೈಕೊಳ್ಳುತ್ತಾನೆ.

ಆ ಮೇಲೆ ಕಾಣಿಸುವುದು ಕೇದಗೆ. ಇದು ಸೌರಭಸಾಂದ್ರವಾದ ಹೂವು; ಬೇರೆ ಹೂಗಳಿಂದ ಭಿನ್ನವಾದುದು. ಆದ್ದರಿಂದ ಕವಿ ಅದನ್ನು:

ಆಹ ದೆಸೆದೆಸೆಗೆ ಬೀಱುವ ಸುಗಂಧದ ಸೂಱೆ
ಆಹ ಕೇತಕಿ ನಿನ್ನ ಪರಿಮಳದ ಪರಿ ಬೇಱೆ
ಪರಿಮಳಂ ಸುಳಿಗೊಂಡು ಬೆಳೆದು
ಕವಲಿಱಿಯಿತ್ತೊ
ಉರವಣಿಸಿ ಬೆಳೆವ ಪರಿಮಳಕೆ ಗಱಿ
ಮೂಡಿತ್ತೊ

ಎಂದು ರಮ್ಯವಾಗಿ ವರ್ಣಿಸುತ್ತಾನೆ. ಕೇದಗೆ ಹೂವಿಗೆ ಹೊರಗೆ ಮುಳ್ಳಿರುತ್ತದೆ, ಒಳಗೆ ಪರಿಮಳವಿರುತ್ತದೆ. ಆದ್ದರಿಂದ ಅದನ್ನು ಈಶ್ವರನ ಗುಪ್ತಭಕ್ತನಿಗೆ ಹೋಲಿಸುತ್ತಾನೆ ಕವಿ.

ಮುಂದೆ 'ತಾರೆಗಳ ಮೊಳೆ'ಯಂತಿರುವ ಕಣಿಗಲೆ ಸಿಗುತ್ತದೆ; ಮೊಲ್ಲೆ, ಮರುಗ, ಮಡಿವಾಳ—ಇವೆಲ್ಲ ಕಾಣುತ್ತವೆ. ಅವನ್ನು ಕೊಂಡ ಹರಿಹರ ಪರಿಪರಿಯ ಕಂಪಿನಲ್ಲಿ ಮುಳುಗುತ್ತ ಮೂಡುತ್ತ ಬರುವಾಗ ದವನ ಕಂಗೊಳಿಸುತ್ತದೆ;

ದವನವೇ ಶಿವನ ಪರಿಮಳದ ಹಬ್ಬವೆ ಬಾರ
ಭುವನದೊಳ್ನಿನಗೆ ಸರಿಯಿಲ್ಲ ಸೌರಭಸಾರ

ಎಂದು ಅದನ್ನು ಕವಿ ಕೈವಾರಿಸುತ್ತಾನೆ. ದವನದ ಅನನ್ಯ ಸೌರಭವನ್ನು ಉಂಡವರಿಗೆ ಈ ಮೆಚ್ಚುಗೆಯಲ್ಲಿರುವ ಸತ್ಯ ಮನಮುಟ್ಟದಿರದು. ಅನಂತರ ಹೊನ್ನೆಯನ್ನು ಕವಿ "ಏನೆನ್ನ ಹೊನ್ನೆ ಸುರಹೊನ್ನೆ ಪರಿಮಳದರಸಿ" ಎಂದು ಶ್ಲೇಷೆ

* ಇಂತಹ ಅನಾಘ್ರಾತ: ವಿಾಸಲುಪುಷ್ಪ ಹರಿಹರನಿಗೆ ಬಹುಪ್ರಿಯವೆಂದು ಕಾಣುತ್ತದೆ; 'ಬಸವರಾಜ ದೇವರ ರಗಳೆಯಲ್ಲೂ (ಮೂರನೆಯ ಸ್ಥಲ) ಅಳಿಯೆಱಗದನಿಲನಲುಗದ ರವಿಕರಂ ಪುಗದ' ಎಂಬುದು ಬರುತ್ತದೆ. ಆ ಭಾಗ 'ಪುಷ್ಪರಗಳೆ'ಯನ್ನೇ ಹೋಲುವಂತಿದೆ.

ಯಿಂದ ಪ್ರಶಂಸಿಸುತ್ತಾನೆ. ಕಮಲ, ನೈದಿಲೆ, ಚೆಂಗಣಿಗಿಲೆಯ ಪುಷ್ಪಗಳನ್ನೂ ಅಂತೆಯೇ ಸಂಗ್ರಹಿಸುತ್ತಾನೆ.

ಇಷ್ಟಾದ ಮೇಲೆ ಒಂದು ನಿರ್ಮಳ ಸ್ಥಾನವನ್ನು ನೋಡಿ, ಎಳೆಯ ಮಾವಿನ ಮರದಡಿಯ ಒಂದು ಶಿಲಾತಲದಲ್ಲಿ ಕಮಲಪತ್ರಗಳನ್ನು*ಹಾಸಿ ಹೂಗಳನ್ನು ಮೆಲ್ಲಮೆಲ್ಲನೆ ಸುರಿಯುತ್ತಾನೆ. ಅವುಗಳನ್ನು ಕೈಯಲ್ಲಿ ಮುಟ್ಟದೆ ಮನಸ್ಸಿನಲ್ಲಿ ಮುಟ್ಟುತ್ತ ಪೋಣಿಸುತ್ತಾನೆ; ಕೈ ತಪ್ಪಿ ಒಂದು ಹೂ ಕೆಳಗೆ ಬಿದ್ದರೆ 'ಸತ್ತು ಹುಟ್ಟು'ತ್ತಾನೆ; ನೋಡಿದರೆ ಹೂ ಬಾಡುವುದೆಂದು ಕಣ್ಮುಚ್ಚುತ್ತಾನೆ. ಹೀಗೆ ಭಕ್ತಿ ಪರವಶನಾಗಿ ಹೂಗಳನ್ನು ಕಟ್ಟಿ ಶಿವನ ಅರಮನೆಗೆ ಬೇಗ ಸಾಗಿ ಬರುತ್ತಾನೆ. ಅನಂತರ ಶಿವನ ಪುಷ್ಪಾಲಂಕಾರ, ಪೂಜಾ ವೈಭವ ಮೊದಲಾಗುತ್ತವೆ.

ಸೇವಂತಿಗೆ ಹೂವಿನ ಪನ್ನೀರಿನಿಂದ ಕವಿ ಶಿವನಿಗೆ ಮುಖ ಮಜ್ಜನ ಮಾಡಿಸುತ್ತಾನೆ; ಪರಾಗದ ವಿಭೂತಿಯಿಂದ ತಿಲಕವಿಕ್ಕುತ್ತಾನೆ; ದೇವನ ಸಿರಿಮುಡಿಯನ್ನು ಸಡಿಲಿಸಿ ನಯದಿಂದ ಬಿಡಿಸಿ ಕೆಂಜೆಡೆಗಳನ್ನು ಅಲಂಕರಿಸುತ್ತಾನೆ. ಹೊಸ ಪಡ್ಡಳೀಯ ಪರಿಮಳದಿಂದ ಕತ್ತುರಿಯಿಕ್ಕಿ, ಇರವಂತಿಯನ್ನು ಮುಡಿಗೆ ಸೂಡುತ್ತಾನೆ. ಮಲ್ಲಿಗೆಯ ಸುಗಂಧವೇ ಚಂದನ, ಮೊಲ್ಲೆಯ ಹೂಗಳೇ ನಾಗಕುಂಡಲ, ಜಾಜಿಯ ಸೌರಭವೇ ಮೃಗಮದ, ಮರುಗವೇ ಗಜಚರ್ಮ, ಸಂಪಿಗೆಗಳೇ ಪುಲಿದೊವಲು, ಸುರಹೊನ್ನೆಗಳೇ ಉರಗ ಕಂಕಣ— ಹೀಗೆ ವಿವಿಧ ಪುಷ್ಪಗಳೇ ಶಿವನಿಗೆ ಉಡುಗೆ ತೊಡುಗೆಗಳಾಗುತ್ತವೆ. ದವನ ಸೀಗುರಿಯಾಗುತ್ತದೆ, ಕಂಪಿನ ಮಡಿವಾಳವೇ ಚಾಮರವಾಗುತ್ತದೆ.

ಅನಂತರ ಆರತಿಯೆತ್ತಿ ಆರೋಗಣೆಯಿತ್ತು ಪ್ರಸಾದವನ್ನು ಕೊಂಡು ಕವಿ ಶಿವನನ್ನು ಹಾಡಿ ಹೊಗಳತೊಡಗುತ್ತಾನೆ. ಇಲ್ಲಿ ಹರಿಹರನ ಭಕ್ತಿಯ ಆಧಿಕ್ಯ ತೀವ್ರವಾಗಿ ಪ್ರಕಾಶನಗೊಂಡಿದೆ:

ದೇವ ಸುಕುಮಾರ ಶಶಿಶೇಖರ ವಿರೂಪಾಕ್ಷ
ದೇವ ಪರಿಮಳವೃಂದಸೇವಿತ ವಿರೂಪಾಕ್ಷ

ಇತ್ಯಾದಿಯಾಗಿ ಹಾಡುತ್ತ, ನಲಿದಾಡುತ್ತ, ಮುದ್ದಿಸುತ್ತ, ಪುಳಕಿಸುತ್ತ ಭಕ್ತಿಪರವಶನಾಗುತ್ತಾನೆ.

ಭಕ್ತಿ ಸುಖದಿಂದಿತರ ಸುಖವದೆಲ್ಲಿಯದೆನಿಸಿ
ಮುಕ್ತಿ ಸುಖದಿಂದಧಿಕಮಿದಕೆ ಪಡಿಯಿಲ್ಲೆನಿಸಿ
ಉರವಣಿಸಿ ಪರಮಭಕುತಿಯ ಸುಖದ ಸೊಕ್ಕೇಱ
ಪರಮ ಪದದಾನಂದ ಸುಖದ ಸುಧೆ ತಲೆಗೇಱ

ಅವನು ಮೈ ಮರೆಯುತ್ತಾನೆ; ಆ ತಲ್ಲೀನತೆಯಲ್ಲಿ "ವಿವಿ ರೂರೂಪಾಕ್ಷಕ್ಷ" ಎಂದು ನುಡಿ ತೊದಲುತ್ತದೆ; ಅವನ ಸರ್ವಾಂಗವೂ ಶಿವಮಯವಾಗುತ್ತದೆ.

ಎನಗೆ ಹೊನ್ನುಂ ನೀನೆ ಎನಗೆ ಬೆನ್ನುಂ ನೀನೆ
ಎನಗೆ ಕೆಲವುಂ ನೀನೆ ಎನಗೆ ಬಲವುಂ ನೀನೆ
ಎನಗೆ ಸರ್ವಂ ನೀನೆ ಎನಗೆ ಗರ್ವಂ ನೀನೆ
ಎನಗೆ ಮಾತೆಯು ನೀನೆ ಎನಗೆ ಪಿತನುಂ ನೀನೆ
ರಕ್ಷಿಸು ವಿರೂಪಾಕ್ಷ ವೀಕ್ಷಿಸು ವಿರೂಪಾಕ್ಷ
ಕರುಣಿಸು ವಿರೂಪಾಕ್ಷ ಪರಿಕಿಸು ವಿರೂಪಾಕ್ಷ *

ಎಂದು ಹರಿಹರನು ದೇವನಿಗೆ ಸಂಪೂರ್ಣ ಶರಣಾಗತನಾಗಿ ವಿರಮಿಸುತ್ತಾನೆ.

"ಪುಷ್ಪರಗಳೆ" ಹೀಗೆ ಒಂದೇ ನಿಟ್ಟಿನಲ್ಲಿ ಸಾಗಿ ಮುಗಿದಿದೆಯೆಂಬುದು ಈ ಪರಿಚಯದಿಂದ ವೇದ್ಯವಾಗುತ್ತದೆ. ಅದರಲ್ಲಿ ಯಾವುದೂ ಅತಿಯಾಗಿಲ್ಲ; ಔಚಿತ್ಯದ ಸೀಮೆಯನ್ನು ದಾಟಿಲ್ಲ. ಎಷ್ಟು ಬೇಕೋ ಅಷ್ಟೇ ಮಾತು; "ಅರ್ಥ ಮುಕ್ತ, ಭಾವ ದೀಪ್ತ, ಧ್ವನಿಪ್ರಚುರ" ಎನ್ನಬಹುದಾದ ರೀತಿ. ಇದು ಭಾವಗೀತೆಯ ಗುಣವಿಶೇಷ.

* ಇಲ್ಲಿ ಆ ಪತ್ರಗಳನ್ನು "ಪರಿಮಳದ ಭಾಜನ"ಗಳೆಂದು ಕರೆದಿದ್ದಾನೆ; ಈ ರೂಪಕ ಸೊಗಸಾಗಿದೆ, ನಿಜ. ಆದರೆ ಕುಸುಮಗಳನ್ನೇ ಪರಿಮಳದ ಭಾಜನಗಳೆಂದು ವರ್ಣಿಸಿದ್ದರೆ, ಅದು ನಿಶ್ಚಯವಾಗಿಯೂ (Stroke of a genius) ಆಗುತ್ತಿತ್ತು; ಈ ಕಲ್ಪನೆ ಹರಿಹರನಿಗೆ ಹೊಳೆಯಬಾರದಿತ್ತೆ ಎನಿಸುತ್ತದೆ.

* ಕಡೆಯಲ್ಲಿ ಬರುವ ಈ "ಪರಿಕಿಸು ವಿರೂಪಾಕ್ಷ" ಎಂಬ ಮಾತು ವಿಶೇಷ ಗಮನಾರ್ಹವಾಗಿದೆ. ಕೃಪಾಯಾಚನೆಯನ್ನಷ್ಟೆ ಹರಿಹರ ಮಾಡಿಲ್ಲ; ಬೇಕಾದರೆ ನನ್ನನ್ನು ಪರೀಕ್ಷಿಸು—ಎಂದು ದೇವರಿಗೆ ಸವಾಲು ಹಾಕಿದ್ದಾನೆ. ಈ ನೈತಿಕ ಧೈರ್ಯ ಸಾಮಾನ್ಯರಿಗೆ ಅಳಿಮನದ ಭಕ್ತರಿಗೆ ಸಾಧ್ಯವಲ್ಲ. ಮೊದಲು ಆತ್ಮ ಪರೀಕ್ಷೆ ಮಾಡಿಕೊಂಡು ಶುದ್ಧವಾಗಿ ಪರಿಣಮಿಸಿದ ಚೇತನ ಮಾತ್ರ ಕೆಚ್ಚಿನಿಂದ ಇಂತಹ ಮಾತುಗಳನ್ನಾಡಬಲ್ಲುದು. ಬಸವಣ್ಣನವರು ಅಂಥ ಒಂದು ಮಹಿಮಾನಿತ ಚೇತನ. ಅವರ ವಚನಗಳು ಆತ್ಮ ಪರೀಕ್ಷೆಯ ಒಂದು ಪರಂಪರೆ. ನಾವು ಬಸವಣ್ಣ ಹರಿಹರ ಮುಂತಾದವರನ್ನು ಭಕ್ತರೆಂದು ತಲೆಯ ಮೇಲಿಟ್ಟುಕೊಂಡು ಕೊಂಡಾಡುತ್ತೇವೆ; ಅವರು ನಮ್ಮವರೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ. ಎಲ್ಲ ಸರಿ, ಆದರೆ ಆ ಮಹಾಪುರುಷರು ಕೈಕೊಂಡ ಆತ್ಮ ಪರೀಕ್ಷೆಯಲ್ಲಿ ಒಂದು ಅಂಶವನ್ನಾದರೂ ಕೈಕೊಳ್ಳುವವರು ಎಷ್ಟು ಜನ? ಆತ್ಮ ಪರೀಕ್ಷೆಮಾಡಿಕೊಂಡಾಗ ನಾವೂ ಉದ್ಧಾರವಾಗಬಹುದು; "ಪರಿಕಿಸು ವಿರೂಪಾಕ್ಷ" ಎಂದು ಧೈರ್ಯದಿಂದ ಎದೆ ತೆರೆದು ನಿಲ್ಲಬಹುದು.

ಪುಷ್ಪ ಸಂಚಯವಾದ ಮೇಲೆ ಬರುವ ಶಿವಪೂಜೆಯ ಭಾಗ ಪ್ರತ್ಯೇಕವಾಗಬಹುದಿತ್ತು. ಹಾಗಾಗದಂತೆ ಕವಿ ನೋಡಿಕೊಂಡಿದ್ದಾನೆ. ಶಿವನ ಎಲ್ಲ ಶೃಂಗಾರವೂ ಪುಷ್ಪಗಳಿಂದಲೇ ನಡೆಯುತ್ತದೆ; ಕಸ್ತೂರಿ, ಚಂದನ, ವಿಭೂತಿ ಎಲ್ಲವೂ ಹೂಗಳಿಂದಲೇ, ಶಿವ 'ಪರಿಮಳ ವೃಂದಸೇವಿತ ನಾಗಿದ್ದಾನೆ. ಹೀಗಾಗಿ 'ಪುಷ್ಪರಗಳೆ' ಎಂಬ ಹೆಸರು ಸಾರ್ಥಕವಾಗಿದೆ; ಉದ್ದಕ್ಕೂ ಒಂದೇ ಸೂತ್ರ ಉಳಿದು ಬಂದಿದೆ.

ಇನ್ನು ಹರಿಹರ ಈ ರಗಳೆಯಲ್ಲಿ ಕಂಡು ವ್ಯಕ್ತಗೊಳಿಸಿರುವ ದರ್ಶನ ಯಾವುದು? ಈ ಪ್ರಶ್ನೆಗೆ ಒಂದಕ್ಕಿಂತ ಹೆಚ್ಚು ಉತ್ತರಗಳು ಸಿಕ್ಕುತ್ತವೆ.

ಪೂಜೆ ಎಷ್ಟು ಮುಖ್ಯವೋ ಪೂಜಾಸಾಮಗ್ರಿಯೂ ಅಷ್ಟೇ ಮುಖ್ಯ; ಗುರಿ ಪೂಜ್ಯವಾದಂತೆ ದಾರಿಯೂ ಪೂಜ್ಯ—ಎಂಬ ಕಾಣ್ಕೆ ಹರಿಹರನ ಈ ರಗಳೆಯಲ್ಲಿ ವ್ಯವೇತ್ತಿದೆ. ಹೂವುಗಳ ಬಗ್ಗೆ ಅವನು ಅದೆಷ್ಟು ಮೃದುವಾಗಿ ವರ್ತಿಸುತ್ತಾನೆ! ಅದೆಂತಹ ಆತ್ಮೀಯತೆ! ಬಾರವ್ವ, ನೀಡವ್ವ ಮುಂತಾದ ಮಾತುಗಳಲ್ಲಿ ಹುದುಗಿರುವ ಪ್ರೀತಿ, ಅನುಕಂಪಗಳು ವಿಸ್ಮಯ ಹುಟ್ಟಿಸುತ್ತವೆ. ಹೂವು ನೆಲಕ್ಕೆ ಬಿದ್ದೀತೆಂದು ಅವನು ವಹಿಸುವ ಎಚ್ಚರ, ಅವರ ಬಗ್ಗೆ ಅವನಿಗಿರುವ ಗೌರವಭಾವನೆಗೆ ಪ್ರತೀಕ. ಎಷ್ಟು ಜನರಲ್ಲಿ ಇದು ಕಂಡು ಬರುತ್ತದೆ? ಹೂಗಳನ್ನು ಯಾಂತ್ರಿಕವಾಗಿ ತರಿದು ತರುವವರೇ ಬಹುಮಂದಿ; ಈ ತರಿಯುವ ಪ್ರವೃತ್ತಿಗೂ ಹರಿಹರನ ತಿರಿಯುವ ಪ್ರವೃತ್ತಿಗೂ ಎಷ್ಟೊಂದು ಅಂತರ!

ಹೂವು ಒಂದು ನಿರ್ಜೀವ ವಸ್ತು ಎಂಬ ಭಾವನೆ ಕವಿಗಿದ್ದಿದ್ದರೆ ಈ ಪ್ರೀತಿಗೌರವಗಳು ಉಕ್ಕುತ್ತಿರಲಿಲ್ಲ; ಹೂವಿಗೂ ತನ್ನಂತೆ ಜೀವವುಂಟು ಆದರಲ್ಲೂ ಶಿವನಿದ್ದಾನೆ— ಎಂಬುದು ಕವಿಯ ನಂಬಿಕೆ. ಆದ್ದರಿಂದಲೇ ಅವನು ಪ್ರತಿಯೊಂದು ಹೂಬಳ್ಳಿಯನ್ನೂ ಮಾತಾಡಿಸಿ ಬೇಡುವುದು. ಸಸ್ಯಗಳಿಗೂ ಪ್ರಾಣವಿದೆಯೆನ್ನುವುದು ಇತ್ತೀಚಿನ ವೈಜ್ಞಾನಿಕ ಸಿದ್ಧಾಂತ. ಆದರೆ ಅದು ಕವಿ ಹೃದಯಕ್ಕೆ ಎಂದೊ ಅರಿವಾಗಿದ್ದ ಸತ್ಯ. ಎಂತಲೇ ಹರಿಹರ ಹೂವಿಗೆ ನೋವಾಗದಂತೆ ನಡೆದುಕೊಳ್ಳುತ್ತಾನೆ; ಸಕಲ ಜೀವರಾಶಿಗೂ ಲೇಸನ್ನೆ ಬಯಸುವ ಮನೋಧರ್ಮವನ್ನು ತೋರುತ್ತಾನೆ; 'ಸರ್ವಭೂತಹಿತೇರತಃ" ಎಂಬ ಗೀತಾವಾಕ್ಯಕ್ಕೆ ವ್ಯಾಖ್ಯಾನವಾಗುತ್ತಾನೆ (ಅಥವಾ ಇನ್ನೂ ಒಂದು ಹೆಜ್ಜೆ ಮುಂದೆ ಹೋಗುತ್ತಾನೆ) ಈ ಪ್ರವೃತ್ತಿಯನ್ನು 'ಅಹಿಂಸೆ' ಎಂಬ ಒಂದು ನೀತಿನಲ್ಲಿ, ಅದರ ವ್ಯಾಪಕಾರ್ಥದಲ್ಲಿ ಸಂಗ್ರಹಿಸಬಹುದು.

ಹರಿಹರನು ಹೂಕೊಯ್ಯುವುದು ತನ್ನ ಸ್ವಾರ್ಥಕ್ಕಲ್ಲ, ಶಿವನ ಆರಾಧನೆಗಾಗಿ. ಇದನ್ನವನು ಪದೇ ಪದೇ ನೆನಪು ಮಾಡುತ್ತಾನೆ; ಒಂದೊಂದು ಹೂಗಿಡದ ಹತ್ತಿರಹೋದಾಗಲೂ ಈಸಂಗತಿಯನ್ನು ತಿಳಿಸುತ್ತಾನೆ. ನನಗಲ್ಲ, ಶಿವನಿಗೆ— ಎಂಬುದೇ ಅವನ ಪಲ್ಲವಿ. ಭಾವದಲ್ಲಿ ನಾವು ಮಾಡುವ ಕರ್ಮಗಳನ್ನೆಲ್ಲ ಶಿವನಿಗೆ ಸಮರ್ಪಿಸಬೇಕು, ನಾವು ನಿಮಿತ್ತಮಾತ್ರರಾಗಬೇಕು ಎನ್ನುವ ದೊಡ್ಡ ತತ್ತ್ವವನ್ನು ಕವಿ ಈಮೂಲಕ ಶ್ರುತಪಡಿಸಿದ್ದಾನೆ ಎನ್ನಬಹುದೆ?

ಹೂವುಗಳನ್ನು ಕೊಳ್ಳುವುದು ದೇವರಿಗಾಗಿಯೇ ಆದರೂ, ಗಿಡದ ಅನುಮತಿಯಿಲ್ಲದೆ ಕೀಳುವುದು ಸೌಜನ್ಯವಲ್ಲ; ಹಾಗೆ ಮಾಡುವುದು ದೌಷ್ಟ್ಯ, ಅಪರಾಧ. ಇದನ್ನು ಬಲ್ಲ ಕವಿ ಒಡೆಯನ ಒಪ್ಪಿಗೆ ಪಡೆದೇ ವಸ್ತುವನ್ನು ತೆಗೆದುಕೊಳ್ಳುವ ಉದಾತ್ತ ಸಂಸ್ಕೃತಿಯನ್ನು ತೋರ್ಪಡಿಸಿದ್ದಾನೆ. ಹಾಗೆ ಮಾಡಿದುದರಿಂದ ಅವನ ಕುಸುಮ ಸಂಗ್ರಹ ದಾನಸ್ವೀಕಾರವಾಯಿತೇ ವಿನಾ ಅಪಹಾರವಾಗಲಿಲ್ಲ.

ಹೀಗೆ 'ಪುಷ್ಪರಗಳೆ' ಒಳ್ಳೆಯ ಕವಿತೆಯೂ ಆಗಿದೆ, ಕಾಣ್ಕೆಯೂ ಆಗಿದೆ; ಸತ್ಯ ಶಿವ ಸೌಂದರ್ಯದ ಅಂಶಗಳು ಅದರಲ್ಲಿ ಮುಪ್ಪುರಿಗೊಂಡಿವೆ; ಸೌಂದರ್ಯ ಶಿವಕ್ಕೆ ಸಮರ್ಪಿತವಾಗಿದೆ. ಯೋಚಿಸಿದಷ್ಟೂ ಆಳವಾಗುವ ಅರ್ಥದ ಪದರಗಳನ್ನುಳ್ಳದ್ದು ಈ ಕೃತಿ. ಇದು ಕನ್ನಡ ವಾಗ್ದೇವಿಯ ಅನರ್ಘ್ಯರತ್ನಾಭರಣವಲ್ಲದಿರಬಹುದು; ಆದರೆ ಅವಳ 'ಪೊಸಪೂಮಾಲೆ;ಯಂತೂ ಅಹುದು ಅಷ್ಟುಸಾಕು. ಹೂಮುಡಿಯದೆ ಸುಮಂಗಲಿ ಶೋಭಿಸುವುದುಂಟೆ?

—ಸಿ. ಪಿ. ಕೃಷ್ಣಕುಮಾರ್

# ಕನ್ನಡ ಕಾದಂಬರಿಗಳು

(ಒಂದು ವಿಶೇಷ ಚರ್ಚೆ)

ಇಂದು ಕನ್ನಡ ಕಾದಂಬರಿಯು ಹರಹು ವಿಸ್ತಾರಗಳನ್ನು ಪಡೆದುಕೊಂಡು ಅತ್ಯಂತ ಜನ ಪ್ರಿಯವಾದ ಸಾಹಿತ್ಯ ಪ್ರಭೇದವಾಗಿದೆ. ಕನ್ನಡ ಜನತೆ—ಪಂಡಿತರು ಪಾಮರರು-ಇದನ್ನು ಆದರ ದಿಂದ ಬರಮಾಡಿಕೊಳ್ಳತೊಡಗಿದ್ದಾರೆ.

ಕಾದಂಬರೀಕ್ಷೇತ್ರ ಜನಪ್ರಿಯವಾಗಿದೆ. ಕನ್ನಡ ಶಾರದೆ ಕಾದಂಬರಿ ಕಿರೀಟವನ್ನು ಧರಿಸಿ ವಿಜೃಂಭಿಸತೊಡಗಿದ್ದಾಳೆ.

ಚಿರಸ್ಮರಣೀಯರಾದ ಬಿ. ವೆಂಕಟಾಚಾರ್ಯರೂ, ಗಳಗನಾಥರೂ, ಎಂ. ಎಸ್. ಪುಟ್ಟಣ್ಣನವರೂ, ಕೆರೂರ ವಾಸುದೇವಾಚಾರ್ಯರೂ ಹಾಗೂ ಶ್ರೀಮತಿ ತಿರುಮಲಾಂಬಾ ಅವರೂ ಕನ್ನಡ ಕಾದಂಬರಿ ಸರಸ್ವತಿಯ ವಜ್ರಕಿರೀಟ ದಲ್ಲಿ ತಮ್ಮ ರತ್ನಗಳನ್ನು ಹೊಂದಿಸಿ ಹೆಚ್ಚಿನ ಪ್ರಭೆಯನ್ನೂ ಬೆಳಕನ್ನೂ ನೀಡಿದರು.

ಈ ಕಾಲದಲ್ಲಿ ಕಾದಂಬರಿ ಪ್ರಪಂಚ ಕ್ಕೊಂದು ಚಿರನೂತನವಾದ ಸ್ಥಾನವನ್ನು ಅವಿರತ ಶ್ರಮದಿಂದ ಒದಗಿಸಿ ಕೊಟ್ಟ ಹಿರಿಯರು ನಾಲ್ವತ್ತೆರಡನೆಯ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾದ ಶ್ರೀ ಅ. ನ. ಕೃಷ್ಣರಾಯರು, ಶಿವರಾಮ ಕಾರಂತರು, ಡಾ॥ ಕೆ. ವಿ ಪುಟ್ಟಪ್ಪನವರು.

ಕನ್ನಡ ಕಾದಂಬರೀ ಪ್ರಪಂಚಕ್ಕೆ ಈ ಮಹನೀಯರು ಮಾರ್ಗದರ್ಶಕರು. ಕನ್ನಡ ಜನತೆ 'ಮರಳಿ ಮಣ್ಣಿಗೆ', 'ಸಂಧ್ಯಾರಾಗ', 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಈ ಕಾದಂಬರಿಗಳನ್ನು ಮರೆಯಲಾರರು.

ಈ ಕೃತಿಗಳೆಲ್ಲ ಸಮಾಜ ಜೀವನಕ್ಕೆ ಸಂಬಂಧಿಸಿದವುಗಳು. ಕಾದಂಬರೀ ಪ್ರಪಂಚದಲ್ಲಿ ಬೇಕಾದಷ್ಟು ವಸ್ತು ವೈವಿಧ್ಯತೆಯು ಕಂಡುಬರುತ್ತಿದ್ದರೂ ಸಾಮಾಜಿಕ ಕಾದಂಬರಿಯೇ ಇಂದಿನ ಪಟ್ಟದ ರಾಣಿ. ಈ ಕಾದಂಬರಿಗಳು ತಂತ್ರದೃಷ್ಟಿಯಿಂದ ನವೀನವಾಗಿವೆ, ವಿವಿಧವಾಗಿವೆ, ಹೆಚ್ಚು ಶುದ್ಧವಾಗಿವೆ. ಸಾಮಾನ್ಯವಾಗಿ ಹೇಳುವದಾದರೆ ಮುಖ್ಯವಸ್ತು, ಪ್ರಮುಖ ವ್ಯಕ್ತಿಗಳು ಇವುಗಳ ಮೇಲೆ ಬೆಳಕನ್ನು ಕೇಂದ್ರೀಕರಿಸಿ, ಉಳಿದೆಲ್ಲವನ್ನೂ ಅವುಗಳಿಗೆ ಅಧೀನಗೊಳಿಸುವ ಪ್ರಮಾಣ ಜ್ಞಾನ, ಕಲಾವಂತಿಕೆ ಇಂದಿನ ತಂತ್ರದಲ್ಲಿ ಪ್ರಮುಖ ಗುಣವಾಗಿದೆ. ಅನಾವಶ್ಯಕ ಸಂಗತಿ, ಪಾತ್ರಗಳು, ಅಧಿಕ ಪ್ರಸಂಗದ ವರ್ಣನೆ, ಶೈಲಿಯ ಆಡಂಬರ ಇವು ಇಂದಿಗೆ ತ್ಯಾಜ್ಯ. ಪ್ರತಿಭೆಯ ಓಟಕ್ಕೆ, ನಿಗ್ರಹದ, ವಿವೇಕದ, ಕಡಿವಾಣ ಹಾಕುವದೇ ಇಂದಿನ ಕಾದಂಬರಿಯ ಗೊತ್ತುಗುರಿ. ನೂರಾರು ಅಪೂರ್ಣ ವ್ಯಕ್ತಿಗಳ ಸಂತೆ ನೆರೆಸುವುದಕ್ಕಿಂತ ಕೆಲವು ವ್ಯಕ್ತಿಗಳ ಸಂಪೂರ್ಣ ಪೃಥಕ್ಕರಣಕ್ಕೇ ಹೊಸ ಕಾದಂಬರಿಕಾರರು ಹಾತೊರೆಯುತ್ತಾರೆ. ಆದುದರಿಂದ ಕಾದಂಬರೀ ಪ್ರಪಂಚದಲ್ಲಿ ಸೂಕ್ಷ್ಮ ಮನೋವಿಜ್ಞಾನಕ್ಕೆ ಬಹಳ ಬೆಲೆ ಬಂದಿದೆ. ಸಂವಿಧಾನೈಕ್ಯ,ಸಮಬಂಧ, ಪಾತ್ರ ಸುಸಂಗತಿ, ಪೃಥಕ್ಕರಣ ಇವುಗಳಿಂದ ಕೂಡಿದ ಬುದ್ಧಿಗ್ರಾಹ್ಯವಾದ ಕಲೆಯೇ ಹೊಸ ತಂತ್ರದ ಸಾರ.

ಇಂದಿನ ಕಾದಂಬರಿಗಳಲ್ಲಿ ಇದ್ದ ಸಮಾಜ ವನ್ನು ಕಂಡ ರೀತಿ, ಹೊಸ ಸಮಾಜ ಹೇಗಿರ ಬೇಕೆಂಬ ನೀತಿ ಇವು ಒಂದು ಆಳವಾದ ವ್ಯಕ್ತಿ ತ್ವದ ತೇಜದಿಂದ, ಕಲೆಯ ಕಾಂತಿಯಿಂದ ಬಣ್ಣ ಗೊಂಡು ತೋರತೊಡಗಿವೆ.

ಜೀವನವೊಂದು ಹೋರಾಟಗಳ ಮಾಲೆ. ಈ ಹೋರಾಟ ಚಿತ್ರಣವು ಕಾದಂಬರಿಗೆ ವಸ್ತು ಸಾಮಗ್ರಿಯನ್ನು ಒದಗಿಸಿ ಕೊಡುತ್ತಿರುವದು ಸ್ವಾಭಾವಿಕವಾಗಿದೆ. ಯಾಕಂದರೆ ಆಧುನಿಕ ಕಾದಂಬರಿ ಮುಗಿಲ ಮಲ್ಲಿಗೆಯಲ್ಲ. ಅದರ ಬೇರು ನೆಲದಲ್ಲಿ ಆಳವಾಗಿ ಬೇರೂರಿವೆ. ಜೀವನವೇ ಒಂದು ಮಹಾ ಕಾದಂಬರಿಯಾಗಿರುವಾಗ ಹೋರಾಟವೂ ಚಿತ್ರಿತವಾಗಬೇಡವೆ? ಈ ಹೋರಾಟದಲ್ಲಿ ನಿಸರ್ಗ ಮಾಡುವ ಕೆಲಸವೂ ಇದೆ. ಮಾನವ ಜೀವನವು ನಿಸರ್ಗದೊಡನೆ ಹಾಸು ಹೊಕ್ಕಾಗಿದೆ. ನಿಸರ್ಗ ಚಿತ್ರಣದಿಂದ ಕಾದಂಬರೀ ಪ್ರಪಂಚಕ್ಕೆ ಉಪಕಾರವಾಗಿದೆ. ಗೌಣವಾದ ಅಭಿವ್ಯಕ್ತಿಯಿಂದ ಅಪಕಾರವೂ ಆಗಿದೆ. ಒಟ್ಟಾರೆ ಈ ವಿಷಯ ವಿವೇಚನೆಯನ್ನು ಈ ಪ್ರಶ್ನೆಗಳ ಉತ್ತರದಿಂದ ಸಮಗ್ರವಾಗಿ ಅಲ್ಲ ದಿದ್ದರೂ ಯಥೋಚಿತವಾಗಿ ಮಾಡಬಹುದಾಗಿದೆ.

(೧) ಮನುಷ್ಯನ ಹೋರಾಟಕ್ಕೆ ಹಿನ್ನೆಲೆ ಯಲ್ಲಿರುವ ನಿಸರ್ಗದ ಚಿತ್ರಣವನ್ನು ನಮ್ಮ ಕಾದಂ ಬರಿಕಾರರು ಹೇಗೆ ನಿರೂಪಿಸಿದ್ದಾರೆ? (೨) ಕನ್ನಡ ಕಾದಂಬರಿಗಳಲ್ಲಿ ನಿಸರ್ಗ ವರ್ಣನೆಯ ಉಪ ಯೋಗ ಎಷ್ಟರ ಮಟ್ಟಿಗೆ ಆಗಿದೆ? (೩) ನಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ಸ್ಥಾನೀಯ ಹಿನ್ನೆ ಲೆಯ ಚಿತ್ರಣ ಎಷ್ಟು ಸಮರ್ಪಕವಾಗಿ ಬಂದಿದೆ?

ಈ ಮೂರೂ ಪ್ರಶ್ನೆಗಳ ವಿವೇಚನೆಯನ್ನು ಬಿಡಿಬಿಡಿಯಾಗಿ ವಿವೇಚಿಸದೆ ಇಡಿಯಾಗಿಯೇ ಚರ್ಚಿಸುತ್ತೇನೆ.

ಈ ಪ್ರಶ್ನೆಗಳನ್ನು ಕುರಿತು ವಿವೇಚಿಸುವಾಗ ಕಾದಂಬರಿಗೆ ಕಥೆಯೇ ಜೀವಾಳವೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ನಿಸರ್ಗದ ಹಿನ್ನೆಲೆ ಯಾಗಲಿ, ನಿಸರ್ಗದ ಬಣ್ಣನೆಯಾಗಲಿ ಕಥೆಗೆ ಪೋಷಕವಾಗಿರಬೇಕೇ ವಿನಾ ಕಥೆಯ ಓಟಕ್ಕೆ ಬೇಸರ ತರುವಂತಾಗಬಾರದು. ಕಥೆಗೆ ನಿಸರ್ಗವು ಸ್ಫೂರ್ತಿಯ ಸೆಲೆಯಾಗಬೇಕು. ಕಥೆಯನ್ನೇ ಅದು ಕಬಳಿಸಬಾರದು. ಈ ಮಾತು ಸ್ಥಾನೀಯ ಹಿನ್ನೆಲೆಗೂ ಅನ್ವಯಿಸುವದು.

ಇವು ಮುಖ್ಯ ಮಾತುಗಳ ತಕ್ಕಡಿಯಲ್ಲಿ ತೂಗಿದಾಗ ಕನ್ನಡ ಕಾದಂಬರಿಗಳಲ್ಲಿ ನಿಸರ್ಗ ವರ್ಣನೆಯ ಸದುಪಯೋಗ ಸಾಕಷ್ಟಾಗಿದೆ ಎಂದು ಹೇಳಬಹುದಾಗಿದೆ. ಕಾರಂತರ ಕಾದಂಬರಿಗಳಲ್ಲಿ ಇದು ರಮಣೀಯವಾಗಿ ಗೋಚರವಾಗಿದೆ. ನಿಸರ್ಗದ ಅನುಗ್ರಹದಲ್ಲಿ ಬೆಳೆದ ಕಾರಂತರಿಗೆ ನಿಸರ್ಗವೇ ಮುಗ್ಧವಾಗಿವೆ. 'ಕಾನೂರು ಸುಬ್ಬಮ್ಮ ಹೆಗ್ಗಡಿತಿಯನ್ನು ಸೃಷ್ಟಿಸಿರುವ ಶ್ರೀ ಪುಟ್ಟಪ್ಪನವರ ಮಲೆನಾಡು ತನ್ನ ಉತ್ತುಂಗ ಗಿರಿಗಳಿಂದಲೂ ಕಾಡುಗಳ ಕಾನಣಗಳಿಂದಲೂ ಹೊಳೆಗಳ ಹೊಳ ಪಿನಿಂದಲೂ ಕಥೆಗೆ ಹಿನ್ನೆಲೆಯನ್ನು ಒದಗಿಸಿ ಅಲ್ಲಿನ ಜನರ ಬಾಳ್ವೆಯಲ್ಲಿ ಮಿಳಿತವಾಗಿ ರಂಜಿಸುತ್ತದೆ. 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಪ್ರಾದೇಶಿಕ ಕಾದಂಬರಿ. ಗಾತ್ರದಲ್ಲಿ, ವಸ್ತು ವಿಸ್ತರದಲ್ಲಿ ಹೊಸ ಗನ್ನಡಕ್ಕೆ ಮೊದಲು ಲಭಿಸಿದೆ. ಮಲೆನಾಡಿನ ಚರಾಚರ ಸೃಷ್ಟಿಯ ಸಾರವನ್ನಲ್ಲಿ ಸೆರೆಹಿಡಿಯಲು ಪುಟ್ಟಪ್ಪನವರು ಮಾಡಿದ ಸಾಹಸವು ಅದ್ಭುತವು ರಮ್ಯವು ಆಗಿದೆ.

ಪ್ರಾದೇಶಿಕ ಕಾದಂಬರಿಗಳಲ್ಲಿ ಮೊದಲು ಬಂದ ಮಹಾಕಾದಂಬರಿ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ'ಯಾದರೂ 'ಮರಳಿ ಮಣ್ಣಿಗೆ'ಗೆ ಅಗ್ರ

ಪಟ್ಟ. 'ಆದ್ಯಪಟ್ಟ ಸಲ್ಲಬೇಕು. ಈ ಕಾದಂಬರಿಗೆ ಸ್ಥಾನೀಯ ಹಿನ್ನೆಲೆ ಇದೆ. ಕಾರಂತರ ಕಾದಂಬರಿಗಳಲ್ಲಿ ಇದು ಯಥೋಚಿತವಾಗಿ ಬಂದೇ ಬರುತ್ತದೆ. ಆದರೆ ಅದು ಒಂದು ಕುಟುಂಬದ ಕಲೆಯಾಗಿ ಕಂಡರೂ ಒಂದು ಕುಟುಂಬದ ಕತೆಯಲ್ಲ. ಇಂಥ ಲಕ್ಷಾವಧಿ ಕುಟುಂಬಗಳ ಮೊತ್ತವಾದ ಭಾರತೀಯ ಜನಾಂಗವು ಹೊಸ ನಾಗರಿಕತೆಯ ಕೂಡ ಹೂಡಿದ ಹೋರಾಟವನ್ನು ಸೂಚ್ಯವಾಗಿ ಚಿತ್ರಿಸುತ್ತದೆ. ಆದುದರಿಂದ ಇದು ಪ್ರಾದೇಶಿಕವಾದರೂ ವಿಶ್ವವ್ಯಾಪಕತೆಯಿಂದ ಕೂಡಿದೆ. ಸ್ಥಾನೀಯ ಹಿನ್ನೆಲೆಯಿಂದ ಕತೆಯುಕುಗ್ಗಿ ರಸಭಂಗವಾಗುತ್ತಿದ್ದರೆ ಅದು ಗೌಣ. ರಸಪುಷ್ಟಿಒದಗುತ್ತಿದ್ದರೆ ಅದು ಅಮೋಘ, ಇಲ್ಲಿ ನಿಸರ್ಗ ವರ್ಣನೆ, ಮನುಷ್ಯ ಜೀವನದೊಡನೆ ನಿಸರ್ಗದ ಸಂಬಂಧ ನಿರೂಪಣೆ ಇವುಗಳಲ್ಲಿ ಕಾರಂತರ ಕವಿದೃಷ್ಟಿ ಫಲಿಸಿದೆ. 'ಬೆಟ್ಟದ ಜೀವ' ಪರಿಸರ ನಿಷ್ಠವಾದ ಕಾದಂಬರಿ. ಬೆಟ್ಟದ ಜೀವನದ ಹಿನ್ನೆಲೆಯಲ್ಲ. ಬೆಟ್ಟದ ಜೀವವೊಂದೆರಡು ಸಾಮಾನ್ಯವಾದರೂ ಆದರ್ಶ ಮಾನವರನ್ನು ಸೂಚಿಸುವಂತೆ ಚಿತ್ರಿಸಲಾಗಿದೆ. ಹೊಸಗನ್ನಡಕ್ಕೆ 'ಬೆಟ್ಟದ ಜೀವ' ಚಿರಸ್ಥಾಯಿಯಾದ ಕಾಣಿಕೆಯಾಗಿದೆ.

ಮಾನವ ಜೀವನಕ್ಕೆ ನಿಸರ್ಗವು ನೆಮ್ಮದಿಯನ್ನು ಕೊಡುತ್ತದೆ. ಆದರಲ್ಲಿಯೂ ಇಂದಿನ ಯಂತ್ರಯುಗದಲ್ಲಿ ನಿಸರ್ಗ ಕೊಡುವ ಆನಂದ ಅಮಿತವಾಗಿದೆ. ಕಾರಂತರ ಕಾದಂಬರಿಗಳಲ್ಲಿ ಈ ಆನಂದವನ್ನು ತುಂಬಿಕೊಂಡಾಗ ಬಾಳು ಧನ್ಯವೆನಿಸುತ್ತದೆ. ಅಂತರಂಗದ ಆವೇಶಗಳನ್ನು ಶಕ್ತಿಯುತವಾಗಿ ಬಣ್ಣಿಸಬಲ್ಲ ಶಕ್ತಿವಂತರಾದ ಲೇಖಕರು ಹೊರಗೆ ಕಾಣುವ ಪ್ರಕೃತಿ ಚಿತ್ರಗಳನ್ನು ಬಣ್ಣಿಸುವಲ್ಲಿ ಕೃತಕೃತ್ಯರಾಗಿದ್ದಾರೆ. ಇಲ್ಲಿ ವರ್ಣನೆ ಕತೆಗೆ ಪೋಷಕವಾಗಿಯೇ ಬರುತ್ತದೆ. ಬೇಸರದ ಪ್ರಶ್ನೆಯೇ ಇಲ್ಲ. ದಣಿದ ದಾರಿಕಾರನು ತಂಗಾಳಿಗೆ ಮೈ ಒಡ್ಡಿದಾಗ ಆಗುವ ಆನಂದಕ್ಕೆ ಮಿಗಿಲಾದ ಆನಂದವು ಈ ಬಣ್ಣನೆಗಳನ್ನು ಓದುವಾಗ ಆಗುತ್ತದೆ.

ಪಡು ಕರಾವಳಿಯ ಆ ಕಡಲು, ಆ ನೊರೆ, ಅಲೆ, ಕುದೀತ, ಮೊರೆತಗಳು, ಆ ಶಾಂತಿ ಸುಪ್ತಿಗಳು, ಅದರಂಚಿನಲ್ಲಿ ಮೆಲ್ಲನೆ ಮುಳುಗುವ ಆ ನೇಸರು, ಮೂಡುವ ಮರಿದಿಂಗಳು, ಆ ಬಿರುಗಾಳಿ, ಮೋಡ, ಸಿಡಿಲು, ಮಿಂಚುಗಳು, ಆ ಮಳೆ, ಹೆಡೆಯಲುಗಿ ತೂಗಾಡುವ ಆ ಹನೆಮರಗಳು, ಆ ಹಾಯಿ ಮಂಜಿಗಳು, ಆ ಮೀನಿನ ಹೊಲಸು ನಾತಗಳು, ಆ ಕಡಲ ಕಿನಾರೆ, ಆ ಅಳುವೆ, ಆ ಆ ನಂದನದಂತಿರುವ ತೆಂಗಿನ ಸಂತೆ-ಎಲ್ಲವೂ ನೂರು ವಿಧದಲ್ಲಿ ಅನಂತ ಮುಖಗಳನ್ನು ತೋರುವ ಅಮಿತಾನಂದದ ಬುಗ್ಗೆಗಳಾಗಿವೆ. ಇಲ್ಲಿ ನಿಸರ್ಗ ವರ್ಣನೆ ಜೀವಂತವಾಗಿದೆ. ಕತೆಗೆ ಆವಶ್ಯಕವಾಗುವಂತೆ ರಮ್ಯಮಣೀಯವಾಗಿದೆ. ಕಾರಂತರ ಈ ನಿಸರ್ಗ ವರ್ಣನಾಶೈಲಿ ಸೂಚೀಯಾನ ಕಲೆಯಲ್ಲಿ ಪರಿಣಿತವಾಗಿ ಕಾದಂಬರಿಗಳ ವಿತಾನದಲ್ಲಿ ಚಿತ್ರಗಳ ಚಲುವನ್ನು ಸೃಷ್ಟಿಸಿದೆ. ಕಾರಂತರ ಚಿತ್ರಕಲಾ ನೈಪುಣ್ಯವು ರಸಾಯನವಾಗಿ ಅವರ ಕಾದಂಬರಿಗಳಲ್ಲಿ ಹರಿದಿದೆ.

ಈ ಕಥೆಯಲ್ಲಿ ಒಂದು ಹಳ್ಳಿಯ ಬದುಕಿನ ಸಮಗ್ರ ಚಿತ್ರಣವಿದೆ. ಪಡು ಕರಾವಳಿಯ ಹಳ್ಳಿಯ ಜನರ ಬದುಕಿನ ವೃತ್ತಿಗಳ ನಾನಾ ಅಂಶದ ವಿವರಣೆಗಳು ಇಲ್ಲಿ ಕೊಟ್ಟಿರುವಷ್ಟೆಲ್ಲ ಕಾದಂಬರಿಗೆ ಬೇಕೇ? ಮೇಲಿಂದ ಮೇಲೆ ಉಳುವ, ನೆಡುವ, ನೀರು ಹಾಯಿಸುವ, ಕೆತ್ತುವ ಹೆಣೆಯುವ ನಾನಾ ಕಸುಬಿನ ವಿವರಗಳು ಬರಬೇಕೆ? ಮುಂದೆ ಬರುವ ಕಥೆಯನ್ನು ಸವಿಯಲು

ಉತ್ಸುಕವಾಗಿರುವ ಮನಸ್ಸಿಗೆ ಇವೆಲ್ಲ ಬೇಸರ ಗೊಳಿಸುತ್ತವೆ—ಎಂದು ಕೇಳುವ ವಿವರ್ಶಕ ಮಿತ್ರರಿಗೆ ಕೊಡುವ ಉತ್ತರವಿಷ್ಟೆ. ಪ್ರಾದೇಶಿಕ ಪ್ರಜ್ಞೆಯುಳ್ಳ ಲೇಖಕನಿಗೆ ತನ್ನ ಜನಜೀವನದ ಪ್ರೀತಿ ಹೇಗೆ ವ್ಯಕ್ತವಾಗುತ್ತದೆಂಬುದೇ ಇಲ್ಲಿ ತಿಳಿದುಕೊಳ್ಳಬೇಕೆಂಬ ಅಂಶ. ತಾಯಿ ತನ್ನ ಮಗುವನ್ನು ಆಗಾಗ ಅದೇ ಹೆಸರಿನಿಂದ ಸಾವಿರ ಸಾರೆ ಕರೆಯುತ್ತಾಳೆ, ಹೆರವರ ಮುಂದೆ ತನ್ನ ಮಗುವಿನ ಬಗ್ಗೆ ಹೇಳಿದ್ದನ್ನೇ ಹೇಳುತ್ತಾಳೆ. ಈ ತೃಪ್ತಿ ಕಾರಂತರದು. ಇಂಥ ತೃಪ್ತಿಯ ತಲ್ಲೀನತೆಯಲ್ಲಿ ಓದುಗನೂ ತಲ್ಲೀನನಾಗುತ್ತಾನೆ. ಆ ಪಾತ್ರ ಪರಿವಾರದೊಡನೆ ಒಂದಾಗುತ್ತಾನೆ.

ನಿಸರ್ಗದ ಮಗುವಾದ ಕಾರಂತರು ನಿಸರ್ಗದ ತಾಯಿಯೂ ಆಗಿದ್ದಾರೆ.

ಈ ಬಗ್ಗೆ ಇನ್ನೂ ಒಂದಿಷ್ಟು ಹೇಳಬೇಕು. ಕಾರಂತರ ಕಾದಂಬರಿಗಳನ್ನು ಓದುವವರಿಗೆ ಉಡುಪಿ ಕುಂದಾಪುರಗಳೂ, ವಿಟ್ಲ ಮಂಗಳೂರುಗಳೂ, ಪಡುಮಲೆಯ ನೂರಾರು ಗುಡ್ಡ ಗುಡಿಸಲುಗಳೂ, ಜಾರುವ ದಾರಿಗಳೂ, ಚಿಗುರುವ ಕನಸುಗಳೂ, ಔದಾರ್ಯದ ಉರುಳುಗಳೂ ಅನುಭವದ ವಸ್ತುಗಳಾಗುತ್ತವೆ. 'ಲಚ್ಚ'ನ ದುಷ್ಟ ಸ್ವಭಾವ,ಸರಸೋತಿ ಪಾರೋತಿಯರ ಸೌಹಾರ್ದ, ನಾಗವೇಣಿಯ ಸಾಹಸ, ಪ್ರಭುದೇವನ ಔದಾರ್ಯ,ಸತ್ಯಳ ಆತ್ಮತ್ಯಾಗ,ಅಚ್ಯುತನ ಮುಗಿದ ಯುದ್ಧ, ಕೆಂಪಿಗೆ ಧಾರ್ಷ್ಟ್ಯ, ಕರಿಯನ ಸಾಹಸ, ಕರಾವಳಿಯ ಕಷ್ಟಜೀವನ, ಗಿರಿ ವನ ನದಿಗಳ ರಮ್ಯ ಭಯಂಕರತೆ, ಬೆಳ್ಳಿಯ ಬಾಳು, ಚೋಮನ ದುಡಿ ಇವೆಲ್ಲ ಇಂದು ಕನ್ನಡದ ಸ್ವತ್ತಾಗಿರುವದು ಕಾರಂತರಿಂದ, 'ಥಾಮಸ್ ಹಾರ್ಡಿ'ಯ ಕಾದಂಬರಿಗಳಿಂದ ಪಶ್ಚಿಮ ಘಟ್ಟಗಳ ಚಿತ್ರ ನಮ್ಮ ಹಸ್ತಗತವಾಗಿದೆ.

ನಿಸರ್ಗ ಸೌಂದರ್ಯ ವರ್ಣನೆಗೆ ಜೀವ ಕಳೆಯನ್ನು ಕೊಡುವ ಶಕ್ತಿ ಕಾದಂಬರಿಕಾರನಲ್ಲಿರ ಬೇಕಾದ ಮುಖ್ಯವಾದ ಗುಣ. ನಿಸರ್ಗ ತಟ್ಟನೆ ನಮ್ಮ ಮುಂದೆ ನಿಂತು ಕೈಬೀಸಿದಂತೆ ಕಾಣಬೇಕು. ಬಯಲು ಸೀಮೆಯವನಾದ ನಾನು ಈ ಕಾದಂಬರಿಗಳ ನಿಸರ್ಗರಮಣೀಯತೆಯನ್ನು ಆಸ್ವಾದಿಸಿದಾಗ ನಾಡಿ ಸ್ಪಂದನವಾಗಿದೆ. ಈ ಕಿರಿಹಿರಿ ಮಲೆಯ ಪರಿಚಯ ಮಾಡಿಕೊಳ್ಳುತ್ತೀರಾ? ದಂಡೆಗೆ ಮೂತಿ ಚಾಚಿ ಮಲಗಿಕೊಂಡ ಅವಳಿಜವಳಿ ಮೊಸಳೆಗಳಂತೆ ಸಹ್ಯಾದ್ರಿಯ ಉನ್ನತ ಶ್ರೇಣಿಯಿಂದ ಕವಲೊಡೆದು ಸಿಡಿದು ಚಾಚಿ ನಿಂತವು ಹಿರಿ-ಕಿರಿ ಮಲೆಗಳು. ಎಂತಹ ಸೊಗಸಾದ ವರ್ಣನೆ ಇದು! ಅಲ್ಲಿಯ ಅಬ್ಬಿ, ವೃಕ್ಷರಾಜಿ, ಹುಲ್ಲುಗಾವಲು, ಕಾಳ್ಗಿಚ್ಚು ನಿಮಗೆ ಪ್ರತ್ಯಕ್ಷವಾಗುತ್ತದೆ. ಮಳೆಗಾಲ, ಸೆಕೆಗಾಲಗಳು ಬೀಸಿಬಂದು ಮೈ ತಾಗಿದಂತಾಗುತ್ತದೆ. ಕಾಡಿನ ಒಳಗೆ ನುಗ್ಗಿ, ಮರಗಳನ್ನು ಸವರಿ, ಬಂಡೆಯೇರಿ, ಕಣಿವೆಯಿಳಿದು, ತೊರೆಯ ದಡ ಸೇರಿ, ನೀರಿನಲ್ಲಿ ಕಾಲಾಡಿಸುತ್ತ ಕುಳಿತು 'ಕೆಂಪಿ' ಗಳಾಗಿ ಬಿಡುತ್ತೇವೆ.

ಮಳೆಗಾಲ ಕಳೆದ ಮೇಲೆ ಪರ್ವತಗಳ ಸಾಲು 'ಶಾಪಗ್ರಸ್ತವಾಗಿ ಚಲನ ಶಕ್ತಿಯನ್ನು ಕಳೆದುಕೊಂಡ ಸಮುದ್ರದ ತೆರೆಗಳಂತೆ ಕಾಣುತ್ತವೆ' ಎಂದು ಹೇಳುವ ಕಾರಂತರು ಅಲ್ಲಿನ ತೊರೆಯ ಚಲುವನ್ನು ಬಣ್ಣಿಸುತ್ತಾರೆ. "ಕೆಲವೊಮ್ಮೆ ಪೊದೆಗಳೆಡೆಯಲ್ಲಿ ಹೊಕ್ಕು ಹೊರಡುವ ಹೆಬ್ಬಾವಿನ ಮೈಯಂತೆ ತೊರೆಯ ಮೈ ಥಳಥಳಿಸುತ್ತದೆ. ತೊರೆ ಅಲ್ಲಲ್ಲಿ ವಿರಮಿಸಿ, ಬಂಡೆಗಳನ್ನು

ಅಪ್ಪಳಿಸಿ, ತನ್ನ ಉಕ್ಕನ್ನು ತೋರಿಸುವಾಗಲಂತೂ ಯಾರೋ ಕಣಿಯಲ್ಲಿ ಕುಳಿತು ಮಲ್ಲಿಗೆಯ ಹೂವನ್ನು ಮೇಲಕ್ಕೆ ಹಾರಿಸುವಂತೆ ಕಾಣುತ್ತದೆ.'' ಧುಮುಕುವ ಅಬ್ಬಿಗಳು ಬಿಳಿ ಬಟ್ಟೆಗಳನ್ನು ಬಿಸಿಲಿಗೆ ಒಣಗಿಸಲು ತೂಗಿಸಿರುವಂತೆ ಕಾಣುತ್ತವೆ. ಬಂಡೆಯೊಂದರಿಂದ ನೀರಿಳಿಯುವಾಗ ಕಿರಿಮಲೆಯ ತೊರೆ ಶಿವನ ಜಡೆಯಿಂದಿಳಿಯುವ ಗಂಗೆಯಂತೆ ಕಾಣುತ್ತಾಳೆ. ಬೆಟ್ಟವು ಹಿರಿಯ ದೇಗುಲದ ಗರ್ಭಗುಡಿಯಂತೆ ಕಾಣಿಸುತ್ತದೆ. ಸಹಸ್ರಾರು ಭಕ್ತರೂ ತಪಸ್ವಿಗಳೂ 'ಓಂ'ಕಾರ ನುಡಿದಂತೆ ಕೇಳಿಸುತ್ತದೆ. ನೈಸರ್ಗಿಕ ದೇಗುಲದ ಹೊರಡುವ ಧ್ವನಿ....'' ಈ ನಿಸರ್ಗ ವರ್ಣನೆಗಳಲ್ಲಿ ಶ್ರೀ ಕಾರಂತರ ಕವಿ ಹೃದಯ ವ್ಯಕ್ತವಾಗುತ್ತದೆ. ಈ ಕಾದಂಬರಿಗಳನ್ನು ಓದುವದೂ ಒಂದೇ, ಘಟ್ಟದ ಮಲೆಯೊಂದರಲ್ಲಿ ವರ್ಷದ ವಿವಿಧ ಕಾಲಗಳಲ್ಲಿ ವಿಹರಿಸುವದೂ ಒಂದೇ,ನಿಸರ್ಗವೇ ಕಾದಂಬರಿಗೆ ಹಿನ್ನೆಲೆಯಾಗಿ ನಿಂತ ಅದ್ಭುತ ಸೃಷ್ಟಿ ಕನ್ನಡದ ವರವಾಗಿ ಕಾರಂತರ ಸೃಷ್ಟಿಯಿಂದ ಮೂಡಿದೆ.

ನಿಸರ್ಗ ಚಿತ್ರದಲ್ಲಿಯೇ ನಿಸರ್ಗದ ಮಡಿಲ ಪ್ರಾಣಿಗಳಾದ ಮಾನವರ ಚಿತ್ರವೂ ಇದೆ. 'ಕುಡಿಯರ ಕೂಸು' ಕಾದಂಬರಿಯಲ್ಲಿಯ ಜನ ನಿಸರ್ಗಕ್ಕೆ ಆಳಾಗಿ ನಡೆದುಕೊಳ್ಳುತ್ತಾರೆ. ಅವರ ಪಾಲಿಗೆ ನಿಸರ್ಗವೇ ದೇವತೆ.

ಕಾರಂತರ ಕಾದಂಬರಿಗಳಲ್ಲಿ ಸಮೀಚೀನವಾಗಿ, ಸಮೃದ್ಧವಾಗಿ, ವೈಭವಪೂರ್ಣವಾಗಿ, ಜೀವಂತಶಕ್ತಿಯಾಗಿ ಮೂಡಿ ಬರುವಂತೆ ನಿಸರ್ಗವು ಇನ್ನುಳಿದ ಕಾದಂಬರಿಗಳಲ್ಲಿ ಅಷ್ಟಾಗಿ ಕಾಣುವುದಿಲ್ಲ.

'ಚೆಂದವಳ್ಳಿ ತೋಟ' 'ಈ ಪರಿಯ ಸೊಬಗು' 'ಕೊನ್ನಾರ ಕಿಂಕಿಣಿ' 'ಮಣ್ಣಿನ ಮಗಳು' 'ಬೆಳ್ಳಿಯ ಮೋಡ' 'ಹೊಸಬಾಳು' 'ಇಜ್ಜೋಡು' ಈ ಮೊದಲಾದ ಕಾದಂಬರಿಗಳಲ್ಲಿ ಸ್ಥಾನೀಯ ಹಿನ್ನೆಲೆ- ಪ್ರಾದೇಶಿಕ ವರ್ಣನೆ, ನಿಸರ್ಗದ ಹಿನ್ನೆಲೆಯಾಗಿ ಬಂದಿವೆ.

ಅತ್ಯಂತ ಸಮೃದ್ಧಿಯಾದ ಸಾಕ್ಷಿಗಳು- ಕಾರಂತರ ಕಾದಂಬರಿಗಳು, ಕಾನೂರು ಸುಬ್ಬಮ್ಮ ಹೆಗ್ಗಡಿತಿ ಎಂದೇ ಹೇಳಬೇಕು.

## ಶ್ರೀ ಕಾರಂತರು ಕನ್ನಡದ ಹಾರ್ಡಿ.

ಒಂದು ಮಾತನ್ನು ಹೇಳಿ ಈ ಪ್ರಶ್ನೆಗಳ ವಿವೇಚನೆಯನ್ನು ಮುಗಿಸುತ್ತೇನೆ. ಕಾದಂಬರಿಯ ವಸ್ತುವಿನ ಆಯ್ಕೆಗೆ ಕಾದಂಬರಿಕಾರನ ವ್ಯಕ್ತಿತ್ವವೇ ಕಾರಣವಾಗಿರುತ್ತದೆ. ಅವನ ಘನತೆ ಕೆಲಸ ಮಾಡುತ್ತದೆ. ಅವನ ಸಂಸ್ಕಾರ, ಸಂಸ್ಕೃತಿ, ರುಚಿ ಶುಚಿಗಳು ಇದನ್ನು ಒದಗಿಸುತ್ತವೆ. ಹೀಗೆ ಬರೆ ಎಂದು ಯಾರೂ ಆಜ್ಞೆ ಮಾಡಲಾರರು. ಕಾದಂಬರಿಕಾರನ ಹೃದಯ ಅವನ ಪರಿಸರ ಅಲ್ಲಿ ಕಾರಣವಾಗುತ್ತದೆ. ಅಚ್ಚೊತ್ತಿ ಮೂಡುತ್ತದೆ. ನಿಸರ್ಗವು ಮಾನವ ಜೀವನಕ್ಕೆ ದೂರವಾಗಿರಲಾರದು. ಇದನ್ನು ತಿಳಿದುಕೊಂಡು ಬರೆದ ಕಾದಂಬರಿಗಳು ಕನ್ನಡದಲ್ಲಿ ಎಷ್ಟು ? ಸಧ್ಯ ವಿರಳವಾಗಿದ್ದರೂ ನಿರಾಶೆಗೆ ಕಾರಣವಿಲ್ಲ.

ಕಾದಂಬರೀ ಸೃಷ್ಟಿಗೆ ಜೀವನವೇ ವಸ್ತು. ಜೀವನದ ಮೇಲು ಕೀಳುಗಳು ಕಾದಂಬರಿಯಲ್ಲಿ ಚಿತ್ರಿತವಾಗುತ್ತವೆ. ಅಮೋಘವಾದ ಜೀವನ ಸ್ಫೂರ್ತಿಯ ಸೆಲೆಯಾಗಿರುತ್ತದೆ. ಈ ಸ್ಫೂರ್ತಿಗೆ ಒಬ್ಬ ಕಾರಣನಾಗುತ್ತಾನೆ. ಅವನ ಬಾಳು ಈ ಭಾವನೆಗೆ ಹುರುಪನ್ನು ಕೊಡುತ್ತದೆ.

ಒಳ್ಳೆಯ ಜೀವನಕ್ಕೆ ಒಳ್ಳೆಯ ವಾತಾವರಣವು ಬೇಕು. ಗುಲಾಮರಾಗಿ ಬಾಳುವ ಜನ ಸ್ವತಂತ್ರ ವಿ ಚಾ ರ ವ ನ್ನು ಮಾಡಿ ಬಾಳ ಶಿಖರ ವನ್ನು ಮುಟ್ಟುವದು ಹೇಗೆ ? ಭಾರತೀಯರಾದ ನಾವು ಮೊನ್ನೆ ಮೊನ್ನೆಯವರೆಗೆ ಅಸ್ವಾತಂತ್ರ ರಾಜ್ಯ ಪದ್ಧತಿಯಲ್ಲಿ ಕುತ್ತುಸಿರು ಬಿಡುತ್ತ ಕಾಲಕಳೆ ಯುತಿದ್ದೆವು. ಇಂಥ ವಾತಾವರಣದಲ್ಲಿ ವ್ಯಕ್ತಿ ವಿಕಾಸವು ಹೇಗೆ ಆಗಬೇಕು ? ಸಮರ್ಥವಾದ ವ್ಯಕ್ತಿತ್ವ, ಆದರ್ಶಜೀವನ, ಹೇಗೆ ದೊರೆಕೊಳ್ಳ ಬೇಕು ? ಇದು ಕನ್ನಡ ನಾಡಿಗೂ ಅನ್ವಯಿಸು ತ್ತದೆ. ಆದುದರಿಂದಲೇ ನಮ್ಮಲ್ಲಿ ಪ್ರತ್ಯಕ್ಷ ಜೀವನ ವನ್ನು ನಿರೂಪಿಸುವ ಕಾದಂಬರಿಗಳು ವಿರಳ ವಾಗಿವೆ, ಇಲ್ಲವೇ ಇಲ್ಲವೆಂದು ಹೇಳಿದರೂ ನಡೆ ದೀತು. ಈ ವಿಚಾರವನ್ನೇ ಪ್ರಶ್ನೆಯ ರೂಪವಾಗಿ ಎತ್ತಿಕೊಂಡು ವಿವರವಾಗಿ ಚರ್ಚಿಸಬಹುದು.

ಕಾಲ್ಪನಿಕವಲ್ಲದ, ಜೀವಂತ ವ್ಯಕ್ತಿಗಳ ಜೀವನವನ್ನು ನಿ ರೂ ಪಿ ಸು ವ ಕಾದಂಬರಿಗಳು (Bio-graphical Novels) ಆಂಗ್ಲ ಮುಂ ತಾದ ಸಾಹಿತ್ಯಗಳಲ್ಲಿ ಹೆಚ್ಚಾಗಿಯೂ ನಮ್ಮಲ್ಲಿ ವಿರಳವಾಗಿಯೂ ಇರಲು ಕಾರಣವೇನು? 'Lust for life', 'Mulin Rouge', ಇಂಥ ಕಾದಂ ಬರಿಗಳು ನಮ್ಮ ಲ್ಲಿ ಸೃಷ್ಟಿಯಾಗಲಾರವೆ ? ಅನು ಕರಣದಿಂದ ಇಂಥವನ್ನು ಸೃಷ್ಟಿಸಬಹುದೆ ?

ವ್ಯಕ್ತಿಯ ಜೀವನದ ವೈವಿಧ್ಯದಲ್ಲಿ, ಅವನ ಹೋರಾಟದಲ್ಲಿ, ಅವನ ಬಾಳನ್ನು ನಡೆಯಿಸಿ ಕೊಂಡು ಹೋಗುವ ರೀತಿಯಲ್ಲಿ ಜೀವನದ ಮಹತಿ ಎದ್ದು ಕಾಣುತ್ತಿರುತ್ತದೆ. ವ್ಯಕ್ತಿ. ವಿಕಾಸದಲ್ಲಿ ಜೀವನ ಸ್ಫೂರ್ತಿ ತೆರೆ ತೆರೆಯಾಗಿ ತೋರಿ ಬರು ತ್ತದೆ. ಕಾದಂಬರೀ ಪ್ರಪಂಚಕ್ಕೆ ಇಂತಹ ವ್ಯಕ್ತಿ ಗಳ. ಸಾಮಗ್ರಿ ಬೇಕು. ನಮ್ಮ ನಾಡಿನಲ್ಲಿ ಈ ವಸ್ತು ಕೊರತೆಯಿದೆ. ಬೇರೆ ದೇಶಗಳಲ್ಲಿ ವ್ಯಕ್ತಿಯ ಸಾಹಸಕ್ಕೆ ಮನ್ನಣೆಯಿದೆ; ಅವನ ಹೋರಾಟಕ್ಕೆ ಬೆಲೆ ಇದೆ. ಆದುದರಿಂದ ಅಲ್ಲಿ ಆ ವ್ಯಕ್ತಿ ಕಥಾ ವಸ್ತುವಾಗುವಂತಹ ಕೆಲಸ ಮಾಡುತ್ತಾನೆ.

ಈ ಭಾಗ್ಯ ನಮ್ಮಲ್ಲಿಲ್ಲ. ನಮ್ಮಲ್ಲಿ ಕ್ರಿಯಾ ಶಕ್ತಿಯನ್ನು ಗುರುತಿಸಲು ಮನಸ್ಸಿಲ್ಲ. ಜಾತಿ ಮತ ಪಂಥಗಳ ಕಾಲ್ತೊಡಕಿನ ಎಳೆದಾಟದಲ್ಲಿ ಮಾನವ ಶಕ್ತಿಯ ಅವಮಾನವೇ ನಡೆಯತೊಡಗಿದೆ. ಸ್ಫೂರ್ತಿ ಕೂಡ ಜಾತಿನಿಷ್ಠವಾಗಿದೆ. ಇಂತಹ ವಾತಾವರಣ ದಲ್ಲಿ ಒಳ್ಳೆಯ ಕೆಲಸ ಮಾಡಿದ ವ್ಯಕ್ತಿಯನ್ನು ದೂರ ಸರಿಸಲಾಗುತ್ತದೆ. ಇದು ನಮ್ಮ ಗುಲಾಮಗಿರಿ ಪರಂಪರೆಯಿಂದ ಬಂದ ಶಾಪ. ಇದು ಕೊನೆಯ ವರೆಗೂ ಉಳಿಯಬೇಕಾಗಿಲ್ಲ. ಸಾರ್ವಜನಿಕ ಪ್ರಜ್ಞೆ ತಿಳಿಯಾಗಿ ಜೀವನ ಯೋಗ್ಯತೆಯಲ್ಲಿ ನಿಷ್ಠೆ ಬಂದಾಗ ಇಂತಹ ಕಾದಂಬರಿಗಳು ಬರಬಹುದು. ಇಂತಹ ವ್ಯಕ್ತಿಗಳಿಲ್ಲದೆ ಎಂಥ ಕಾದಂಬರಿ ಬರ ಬೇಕು; ಪರದೇಶಗಳಲ್ಲಿ ವ್ಯಕ್ತಿ ವಿಕಾಸಕ್ಕೆ ಸಾಕಷ್ಟು ಎಡೆ ಇದೆ. ಮಾನವ ಹೋರಾಟವನ್ನು ಗುರುತಿ ಸುತ್ತಾರೆ. ಅಲ್ಲಿ ಸಾಹಿತ್ಯ-ಕಲೆಗಳಿಗೆ ಸ್ಥಾನ ವಿದೆ. ಸಾಹಿತಿಗಳಿಂದಲೇ ನಾಡಿನ ಉದ್ಧಾರ, ಲಲಿತ ಕಲೆಗಳಿಂದಲೇ ನಾಡಿಗೆ ಬೆಲೆ ಎಂದು ಅವರು ತಿಳಿದಿದ್ದಾರೆ. ಆದುದರಿಂದಲೇ ವ್ಹೇನಗಾನ್ ನಂಥ ಚಿತ್ರಕಾರನ ಜೀವನದ ಅದ್ಭುತ ರಮ್ಯ ಚಿತ್ರಣ ಹಾಲಂಡದ ಹಿನ್ನಲೆಯಲ್ಲಿ ಮೂಡಿ ದಕ್ಷಿಣ ಅಮೇರಿಕೆಯ ವರೆಗೂ ಹೋಗುತ್ತದೆ. ಅವನ ಸೌಂದರ್ಯದೃಷ್ಟಿ ತನ್ನ ದೇಶಕ್ಕೆ ಮೀಸಲಾಗದೆ ವಿಶ್ವಸೌಂದರ್ಯವನ್ನು ಅಪೇಕ್ಷಿಸುತ್ತದೆ. ನಿಸರ್ಗ ಸೌಂದರ್ಯದ ಚಿತ್ರಗಳು ಅವನ ಜೀವನದ ಬೆಲೆ ಯನ್ನು ಹೆಚ್ಚಿಸುತ್ತವೆ. ಇಂತಹ ಅಮೋಘ ವ್ಯಕ್ತಿ ಯ ಚಿತ್ರಕಾರನ ಜೀವನದ ಕೊನೆ, ಅವನು ಬಾಳಿದ ರೀತಿ, ಇವೆಲ್ಲ ಕಾದಂಬರೀ ಸೃಷ್ಟಿಗೆ ಸ್ಫೂರ್ತಿಯಾ ಗಿದೆ 'ಮೊಲ್ಲಾರೂಜ್'ದಲ್ಲಿ ಕಾಲಿಲ್ಲದ ಕಲಾವಿದನು

ಕಲಾನಿಷ್ಠನಾಗಿ ಮಾನವ ಜೀವನವನ್ನು ಬಣ್ಣ ಬಳಿದು ತೋರುತ್ತಾನೆ. ಆ'ಲಾಟ್ರೆಕ್‌ನ ಜೀವನದ ಅದ್ಭುತಕತೆ ಕಾದಂಬರೀ ಕಥೆಗೆ ಸ್ಫೂರ್ತಿಯ ಸೆಲೆ ಯಾಗಿದೆ.

ನಮಗೆ ಇದೀಗ ಸ್ವಾತಂತ್ರ್ಯ ಲಭಿಸಿದೆ. ಅದರ ಸದುಪಯೋಗವನ್ನು ಮಾಡಿಕೊಳ್ಳುವ ಹದವು ನಮಗೆ ಇನ್ನೂ ಸಿಕ್ಕಿಲ್ಲ. ಇಂದಿಲ್ಲ ನಾಳೆಯಾದರೂ ವ್ಯಕ್ತಿಯ ಶಕ್ತಿಯನ್ನು ನಾಡು ಗಮನಿಸ ಬಹುದಾಗಿದೆ.

ಜೀವನದ ಹೋರಾಟದಲ್ಲಿ ಸಿದ್ಧಜೀವಿ ಗಳಾದ ಕಾರಂತರೇ ಇಂಥ ಕಾದಂಬರಿಯ ಕಥಾ ವಸ್ತುವಾಗುವ ಕಾಲ ಬಂದೇ ಬರುವದು. ತನ್ನ ಅಮೋಘ ಬರವಣಿಗೆಯ ನಿಷ್ಠೆಯ ಹೋರಾಟದಲ್ಲಿ ಸಾವಿರ ಮಾತುಗಳಲ್ಲಿ ತನ್ನ ದನಿಯನ್ನು ಎಬ್ಬಿಸಿದ ಅ.ನ.ಕೃ. ಕಥಾವಸ್ತುವಾಗಬಲ್ಲ ಸಮಯವು ಬರಲಿದೆ.

ಈನಾಡು ರಾಜಕಾರಣಿಗಳ ಕರ್ಮಭೂಮಿ ಯಾಗಿರುವಂತೆ, ಸಾಹಿತಿಗಳ, ಕಲಾವಿದರ ಧರ್ಮ ಭೂಮಿಯೂ ಆಗಿದೆ ಎಂಬ ಪ್ರಜ್ಞೆ ಮೂಡಿ ಬರ ಬೇಕು. ಸಾಹಿತ್ಯ ಶಾಶ್ವತ; ರಾಜಕಾರಣ ತಾತ್ಕಾ ಲಿಕ. ಇಂಗ್ಲಂಡದಂಥ ಮಹಾದೇಶವು 'ಶೆಕ್ಸ್‌ಪೀ ಅರ್' ನನ್ನು ನೆನೆವಂತೆ ಒಂದು ಹಿಂಡಾಗಿ ಆಗಿ ಹೋದ ರಾಜಕಾರಣಿಗಳನ್ನು ಯಾವಾಗಲೂ ನೆನೆ ಯುವುದಿಲ್ಲ. ಈ ಸಾಹಿತ್ಯ ಪ್ರಜ್ಞೆಯೇ ಲೋಕ ವನ್ನು ಉಳಿಸಬಲ್ಲುದು.

ಇಂಥ ಕಾದಂಬರಿಗಳನ್ನು ಅನುಕರಣದಿಂದ ಸೃಷ್ಟಿಸಲು ಸಾಧ್ಯವಿಲ್ಲ. ಯಾಕಂದರೆ, ಅನುಕರಣವು ಅನುಭವದ ವಿರುದ್ಧ. ಕಾದಂಬರಿಯು ಅನುಭವ ಸಾರ. ಜೀವನಾನುಭವದ ಪ್ರದರ್ಶನವೇ ಬರೆಹ. ಅನುಕರಣದಿಂದ ನಾವು ಒಂದು ಸಪ್ಪೆಯಾದ ಚಿತ್ರ ವನ್ನು ಬರೆಯಬಹುದು. ಆದರೆ ನಾವು 'ಲಾಟ್ರೆಕ' ನನ್ನಾಗಲಿ 'ವಾನ್‌ಗಾನ್' ನನ್ನಾಗಲಿ, ಇಲ್ಲವೇ ಅಂಥವರನ್ನಾಗಲಿ ಸೃಷ್ಟಿಸಲಾರೆವು.

ಸಾಹಿತ್ಯ ಸೃಷ್ಟಿಗೆ ಬೇಕಾದದ್ದು ಅನುಕಂಪ; ಅನುಕರಣವಲ್ಲ. ಸ್ಫೂರ್ತಿಗೆ ನಿತ್ಯ ಜೀವನದ ಸತ್ಯಚಿತ್ರವೇ ಬೇಕು. ಸತ್ಯದಂತಹ ಚಿತ್ರವಿಲ್ಲ. ಸತ್ಯವನ್ನು ಅನುಕರಣ ಮಾಡುವುದು ಸಾಧ್ಯವೆ? ಅದನ್ನು ಬಾಳಬೇಕು. ಅಷ್ಟೆ.

ಇಂಥ ಕಾದಂಬರೀ ಪ್ರಪಂಚ ಬಡವಾಗ ಲಾರದು. ವಸು ವೈವಿಧ್ಯದಲ್ಲಿಯೂ ಚಿತ್ರಣ ಮತ್ತು ತಂತ್ರ ವೈವಿಧ್ಯದಲ್ಲಿಯೂ ನಮ್ಮ ಕಾದಂ ಬರೀಕಾರರ ಸಾಮರ್ಥ್ಯ ಅಪಾರವಾಗಿ ಹೊರ ಬಿದ್ದಿದೆ. ಈ ಮಾತನ್ನೇ ಒಂದು ಪ್ರಶ್ನೆ ಹಾಕಿ ಕೊಂಡು ಚರ್ಚಿಸಬಹುದು.

ಕನ್ನಡ ಕಾದಂಬರಿಗಳು ವಸ್ತುವೈವಿಧ್ಯ ದಲ್ಲಿಯೂ ಚಿತ್ರಣ ಮತ್ತು ತಂತ್ರ ವೈವಿಧ್ಯದಲ್ಲಿಯೂ ಇತರ ಭಾರತೀಯ ಮತ್ತು ಪಾಶ್ಚಾತ್ಯ ಕಾದಂಬರಿ ಗಳೊಡನೆ ಹೋಲಿಸಿದರೆ ಹೇಗೆ?

ಭಾರತೀಯ ಕಾದಂಬರಿಗಳೊಡನೆ ಹೋಲಿ ಸಿದಾಗ ಕನ್ನಡ ಕಾದಂಬರಿಗಳು ಪ್ರಭಾವಶಾಲಿ ಯಾಗಿಯೇ ಇವೆ. ಕಾದಂಬರಿ ವಸ್ತುವೈವಿಧ್ಯದಲ್ಲಿ ರೀತಿ ಒಂದೇ ಆಗಿದೆ. ಇಂದಿನ ರಾಜಕೀಯ ವಾತಾವರಣದ ಬಿಸಿ ಈ ವಸ್ತು ವೈವಿಧ್ಯದಲ್ಲಿ ಬರುವ ಒಂದು ಅಂಶವಾಗಿದೆ. ಇದು ಎಲ್ಲ ಪ್ರಾಂತೀಯ ಕಾದಂಬರಿಗಳಲ್ಲಿ ಒಂದೇ ಆಗಿದೆ. ರಾಜಕೀಯದ ಬಣ್ಣ ಬಳಿದುಕೊಂಡು ವ್ಯಕ್ತಿಗಳ ಚಿತ್ರಣವು, ಅವರ ಚಟುವಟಿಕೆಗಳ ಚಿತ್ರಣವು ಸದ್ಯದ ಸ್ಥಿತಿಯಲ್ಲಿ ಸಮಾನವಾಗಿಯೇ ಇದೆ. ಕನ್ನಡ ಕಾದಂಬರೀಕಾರರಾದ ಶ್ರೀ ಅ. ನ. ಕೃ. ಶ್ರೀ ತ. ರಾ. ಸು.,ಶ್ರೀ ಕಟ್ಟೀಮನಿ, ಶ್ರೀ ಪುರಾಣಿಕ, ಶ್ರೀ ಕಾರಂತ ಇವರಲ್ಲಿರುವ ರಾಜಕೀಯ ಸ್ಥಿತಿಯ ಪ್ರಜ್ಞೆ ಅಮೋಘವಾಗಿ ವಿವಿಧರೂಪಗಳಲ್ಲಿ ಹರಿದಿದೆ. ಬಂಗಾಲಿ, ಮರಾಠಿ, ತಮಿಳು ಸಾಹಿತ್ಯದೊಡನೆ ಈ ಸಾಹಿತ್ಯವನ್ನು ಹೋಲಿಸಿದಾಗ ನಮ್ಮ ಕಾದಂ

ಬರಿಗಳಲ್ಲಿ ಈ ಚಿತ್ರಣ ಹೆಚ್ಚು ಸ್ಫುಟವಾಗಿ, ನಿರ್ಭಯದಿಂದ ಮೂಡಿ ಬಂದಿದೆ ಎಂದು ಹೇಳಬಹುದು.

ಸಾಮಾಜಿಕ ಜೀವನದ ಪರಿಸರದಲ್ಲಿ ಈ ವೈವಿಧ್ಯವು ಮನನೀಯವಾಗಿ ಮೂಡಿ ಬಂದಿದೆ. ಶ್ರೀಮತಿ ತ್ರಿವೇಣಿ, ಶ್ರೀ ಬಲಾಳ ಇವರು ಮೇಲೆ ಹೇಳಿದ ಮಹನೀಯರ ಜೊತೆಗೆ ಸಮನಾಗಿ ನಿಲ್ಲುತಾರೆ. ಮಾನಸಶಾಸ್ತ್ರದ ಹಿನ್ನೆಲೆಯಲ್ಲಿ ಬರೆದ ಶ್ರೀಮತಿ ತ್ರಿವೇಣಿ ಅವರ ಕಾದಂಬರಿಗಳು ಹೊಸ ತಂತ್ರ ಪ್ರಯೋಗದ ಯಶಸ್ವೀ ಕೃತಿಗಳಾಗಿವೆ.

ಇದೆಲ್ಲವನ್ನೂ ಹೇಳಿದ ಮೇಲೆ ನಮ್ಮ ಕಾದಂದರಿಗಳಲ್ಲಿ ಅನುಭವ ವಿಸ್ತಾರವು ಕಡಿಮೆಯೆಂದು ಒಪ್ಪಿಕೊಳ್ಳಬೇಕು. ಇದು ಕನ್ನಡಕ್ಕೆ ಮಾತ್ರಅನ್ವಯಿಸದೆ ಭಾರತದ ಕಾದಂಬರೀ ಪ್ರಪಂಚಕ್ಕೂ ಅನ್ವಯಿಸಬಹುದಾಗಿದೆ.

ಅನುಭವ ವಿಸ್ತಾರಕ್ಕೆ ವಿವಿಧಜೀವನಗಳನ್ನು ನೋಡುವ ಅವಕಾಶ ಸಿಕ್ಕಬೇಕು. ದೇಶ ವಿದೇಶ ಸಂಚಾರವಾಗಬೇಕು, ಕೂಪ ಮಂಡೂಕ ವೃತ್ತಿಯ ಮಂಗಲಾಚರಣೆಯಾಗಿ ಅಲ್ಲಿ ಹೃದಯದ ವಿಶಾಲ ಮಾರ್ಗವು ತೆರೆಯಬೇಕಾದರೆ ಜೀವನಾನುಭವದಲ್ಲಿ ವೈವಿಧ್ಯ ಬರಬೇಕು. ಕನ್ನಡ ಕಾದಂಬರಿಕಾರರ ಹೃದಯ ಸಂಪತ್ತು ದೊಡ್ಡದು, ಆದರೆ ದಾರಿದ್ರ್ಯ ಸಂಪತ್ತು ಅದಕ್ಕೂ ದೊಡ್ಡದು. ಪಾಶ್ಚಾತ್ಯ ದೇಶದ ಒಬ್ಬ ಲೇಖಕನು ಒಂದು ಕಾದಂಬರಿಯನ್ನು ಬರೆದರೆ ವಿಶ್ವಪರ್ಯಟನ ಮಾಡಿಬರಬಹುದಾದಷ್ಟು ಆರ್ಥಿಕ ಅನುಕೂಲತೆಯನ್ನುಪಡೆಯಬಹುದಾಗಿದೆ. ಇಲ್ಲಿ ಇದು ಕನಸೇ ಆಗಿದೆ. ಲೇಖಕರಿಗೆ ಈ ಅನುಕೂಲ ಸಿಗದಿರುವ ಪ್ರಶ್ನೆ ಗಂಭೀರವಾಗಿದೆ. ಕಾರಣ ಪಾಶ್ಚಾತ್ಯ ಕಾದಂಬರಿಗಳನ್ನೂ ನಮ್ಮ ಕಾದಂಬರಿಗಳನ್ನೂ ಹೋಲಿಸುವದು ಉಚಿತವಾಗಲಾರದು.

ಜೀವನ ಸತ್ವವನ್ನುಚಿತ್ರಿಸುವ ಕೆಲಸದಲ್ಲಿ ನಮ್ಮ ಕಾದಂಬರೀಕಾರರು ಪಾಶ್ಚಾತ್ಯ ಕಾದಂಬರಿಕಾರರಿಗೆ ಮುಖ ತಗ್ಗಿಸಬೇಕಾಗಿಲ್ಲ. ಅ. ನ. ಕೃ. ಕಾರಂತ, ತ. ರಾ ಸು. ಕೃಷ್ಣಮೂರ್ತಿ ಇವರ ಕೃತಿಗಳಲ್ಲಿ ಕಂಡು ಬರುವ ವಸ್ತು ವೈವಿಧ್ಯವು ಜೀವನದ ಸೂಕ್ಷ್ಮದರ್ಶನಕ್ಕೆ ಸಾಕ್ಷಿಯಾಗಿ ಬಹು ಎತ್ತರದಲ್ಲಿ ನಿಂತಿದೆ. ಸಮಗ್ರ ಜೀವನದೃಷ್ಟಿ, ನಿತ್ಯ ಜೀವನದ ಸೃಷ್ಟಿ, ಸತ್ಯ- ಸಮತೆಯ ಪುಷ್ಟಿಯಲ್ಲಿ ಪರಿಪುಷ್ಟವಾಗಿ ನಮ್ಮ ಕಾದಂಬರಿಗಳಲ್ಲಿ ಜೀವನ ಸ್ವತವನ್ನು ಪಡೆದುಕೊಂಡಿದೆ.

ನಮ್ಮ ಸಾಮಾಜಿಕ ಕಾದಂಬರಿಗಳಲ್ಲಿ ಆದ ಪ್ರಗತಿ ಅದ್ಭುತವಾಗಿದೆ. ಕನ್ನಡ ಕಾದಂಬರೀ ಪ್ರಪಂಚವು ಕೇವಲ ಸಾಮಾಜಿಕ ಕಾದಂಬರಿಗಳಿಗೆ ಮಾತ್ರ ಮೀಸಲವಾಗಿವೆ. ಈಗ ಒಂದು ಒಳ್ಳೆಯ ಐತಿಹಾಸಿಕ ಕಾದಂಬರಿಯಲ್ಲಿ ಕಂಡು ಬರಬೇಕಾದ ಗುಣಲಕ್ಷಣಗಳೇನು? ಕನ್ನಡದ ಐತಿಹಾಸಿಕ ಕಾದಂಬರಿಗಳನ್ನು ಈ ದೃಷ್ಟಿಯಿಂದ ಪರಿಶೀಲಿಸಿದರೆ ಅವುಗಳಲ್ಲಿ, ಯಾವುವು, ಎಷ್ಟು ಮಟ್ಟಿಗೆ, ಯಶಸ್ವಿ ಎನಿಸಬಹುದು? ಎಂಬುದನ್ನು ಸಮಗ್ರವಾಗಿ ಅಲ್ಲದಿದ್ದರೂ ಸಂಕ್ಷೇಪವಾಗಿ ವಿವೇಚಿಸಬಹುದಾಗಿದೆ.

ಐತಿಹಾಸಿಕ ಕಾದಂಬರಿಯಲ್ಲಿ ಇತಿಹಾಸದ ಪ್ರಜ್ಞೆ ಇರಬೇಕೆಂಬುದು ಮೊದಲ ಮಾತು. ಇತಿಹಾಸದ ಘಟನೆಗಳಿಂದ ಅದು ಭಿನ್ನವಾಗಿರಕೂಡದು. ಸತ್ಯವು—ಸತ್ಯನಿರೂಪಣೆಯು ಈ ಕಾದಂಬರಿಗಳ ಜೀವಾಳವಾಗಿದೆ. ಇತಿಹಾಸದ ಆಳವಾದ ಅಭ್ಯಾಸದಿಂದ ಮೂಡಿಬಂದ ಅಭಿವ್ಯಕ್ತಿ ಈ ಕಾದಂಬರಿಯ ಹರಹನ್ನು ನಿಲ್ಲಿಸಬೇಕು. ಇಲ್ಲಿ ಒಂದು ವ್ಯಕ್ತಿಯಬಗ್ಗೆ ಸ್ವಕಪೋಲಕಲ್ಪಿತ ಅಭಿಪ್ರಾಯಗಳಿಗೆ ಅನಕಾಶವಿರುವುದಿಲ್ಲ. ಆ ವ್ಯಕ್ತಿಯ ಚಾರಿತ್ರ್ಯ ಚಿತ್ರಣವು ಸ್ಫುಟವಾಗುವಂತೆ ಕಾದಂಬರಿಕಾರನು ಕುಶಲ ಕಲಾವಿದನಾಗಬೇಕು. ಇಲ್ಲಿ ಒಂದು ಪಂಗಡದ ಅಭಿಮಾನವಿರಕೂಡದು. ಇತಿಹಾಸವು ಆಗಿಹೋದ ಸಂಗತಿಗಳ ಸತ್ಯಚಿತ್ರ

ವೇ ಆಗಿರುವಾಗ ಐತಿಹಾಸಿಕ ಕಾದಂಬರಿಯು ಕಲಾಪೂರ್ಣವಾದ ಇತಿಹಾಸವೇ ಆಗಿರುತ್ತದೆ. ಆದರೆ ಇಲ್ಲಿ ಇತಿಹಾಸದ ನೀರಸತೆಗೆ ಎಡೆ ಇಲ್ಲ. ಕಲೆ ಇಲ್ಲಿ ಮೇಲುಗೈಯಾಗುತ್ತದೆ. ಅದು ಇತಿಹಾಸಕ್ಕೆ ಬಣ್ಣಕೊಡುತ್ತದೆ. ಸತ್ಯದ ವಿಜಯ ಧ್ವಜವನ್ನು ಹಾರಿಸುತ್ತದೆ. ಯೋಗ್ಯ ಸನ್ನಿವೇಶ ನಿರ್ಮಾಣದಲ್ಲಿ, ಸಂಭಾಷಣಾ ಚಾತುರ್ಯದಲ್ಲಿ ಈ ಪ್ರತಿಭೆ ವ್ಯಕ್ತವಾಗುತ್ತದೆ. ಇತಿಹಾಸಕಾರನು ಒಮ್ಮೊಮ್ಮೆ ವರದಿಗಾರನಾಗುತ್ತಾನೆ. ಆದರೆ ಕಾದಂಬರಿಕಾರನು ಸಂಗತಿಗಳ ಹಿನ್ನೆಲೆಯನ್ನು ತನ್ನ ತಂತ್ರಕೌಶಲ್ಯದಿಂದ ಅದಕ್ಕೊಂದು ರುಚಿಯನ್ನು ತರುತ್ತಾನೆ.

ಮಹಾರಾಷ್ಟ್ರದ ಇತಿಹಾಸವನ್ನು ಶ್ರೀ ಹರಿ ನಾರಾಯಣ ಆಪಟೆಯವರು ಅತ್ಯಂತ ಪ್ರಭಾವ, ಕಲಾಪೂರ್ಣವಾಗಿ ಕಾದಂಬರೀ ಸೃಷ್ಟಿಯಲ್ಲಿ ಮೆರೆಸಿದ್ದಾರೆ. ಶ್ರೀ ಗಳಗನಾಥರಿಗೆ ಇವರೇ ಸ್ಫೂರ್ತಿ. ಅವರ "ಮಾಧವ ಕರುಣಾ ವಿಕಾಸ"ವು ಕನ್ನಡ ಇತಿಹಾಸವನ್ನು ರಸವತ್ತಾಗಿ ಚಿತ್ರಿಸುತ್ತದೆ. ಕೆರೂರ ವಾಸುದೇವಾಚಾರ್ಯರ ಐತಿಹಾಸಿಕ ಕಾದಂಬರಿಗಳು ಸತ್ವಪೂರ್ಣವಾಗಿ ಬಂದಿಲ್ಲ. ಶ್ರೀಆಲೂರ ವೆಂಕಟರಾಯರು ಬರೆದ 'ಕರ್ನಾಟಕ ಗತ ವೈಭವವು' ಕಾದಂಬರಿಯಾಗದಿದ್ದರೂ ಕನ್ನಡ ಕಾದಂಬರಿಕಾರರಿಗೆ ಸ್ಫೂರ್ತಿಯನ್ನು ಕೊಡುವ ಪಾತ್ರಗದ್ಯವಾಗಿದೆ. ಶ್ರೀ ಬೆಟಗೇರಿ ಕೃಷ್ಣ ಶರ್ಮರ ಐತಿಹಾಸಿಕ ಕಾದಂಬರಿಗಳು ಸತ್ವಗುಣ ಪೂರಿತವಾಗಿವೆ. ಮಯೂರ ಕಾದಂಬರಿಯಲ್ಲಿ ಐತಿಹಾಸಿಕ ಸಂಗತಿಗಳ ಸುಂದರ ಸನ್ನಿವೇಶಗಳು ರಸವತ್ತಾಗಿ ಬಂದಿವೆ. ಈ ಕಾದಂಬರಿಗಳು ಕನ್ನಡ ಕಣಜವನ್ನು ತುಂಬಿವೆ.

ಐತಿಹಾಸಿಕ ಕಾದಂಬರಿಗಳನ್ನು ಕಲಾಪೂರ್ಣವಾಗಿ, ರಸವತ್ತಾಗಿ, ಕುತೂಹಲ ಕೆರಳುವಂತಹ ತಂತ್ರವನ್ನು ಬಳಸಿ ಬರೆದವರಲ್ಲಿ ಅ. ನ. ಕೃ. ತ. ರಾ. ಸು. ಕೆ. ವಿ. ಅಯರ್ ಅಗ್ರಗಣ್ಯರು. ವೀರಕೇಸರಿ ಸೀತಾರಾಮ ಶಾಸ್ತ್ರಿಗಳ ಐತಿಹಾಸಿಕ ಕಾದಂಬರಿಗಳು ಮಾಲೆ ಮಾಲೆಯಾಗಿ ಬರುತಿವೆ.

ವಿಜಯ ನಗರದ ಇತಿಹಾಸವೂ ಚಿತ್ರದುರ್ಗದ ಇತಿಹಾಸವೂ ಅ. ನ. ಕೃ. ತ. ರಾ. ಸು. ಅವರ ಕೈಯಲ್ಲಿ ರಸಪೂರ್ಣವಾಗಿ ರಸದುಂದುಭಿಗಳಂತೆ ಝೇಂಕಾರ ಮಾಡುತ್ತವೆ. ಶ್ರೀಅಯ್ಯರರ 'ಶಾಂತಲಾ' ಐತಿಹಾಸಿಕ ಕಾದಂಬರಿಗಳಲ್ಲಿ ಒಂದು ಒಳ್ಳೆಯ ಕೃತಿ. ಶ್ರೀನಿವಾಸ ಕೊರಟಿ, ಬಿಂದು ಮಾಧವ ಕುಲಕರ್ಣಿ ಅವರು ಬರೆದ ಐತಿಹಾಸಿಕ ಕಾದಂಬರಿಗಳು ಪ್ರಶಂಸನಾರ್ಹವಾಗಿವೆ.

ಈ ಕಾದಂಬರಿಗಳ ತಂತ್ರದಲ್ಲಿ ಇನ್ನೂ ಹೆಚ್ಚಿನ ಕೌಶಲ್ಯ ಬೇಕೆಂದು ತೋರುತ್ತದೆ. ಅಲ್ಲದೆ ವಸ್ತು ಪರಿಸರವು ಸಾಕಷ್ಟು ಬೇಕೆನ್ನಿಸುತ್ತದೆ. ನಮ್ಮಲ್ಲಿ ಐತಿಹಾಸಿಕ ಸಾಮಗ್ರಿಗೆ ಕೊರತೆ ಇಲ್ಲ. ಕದಂಬ, ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳ, ಯಾದವ, ವಿಜಯ ನಗರ, ಪಾಳೆಯಗಾರರು, ಬಹಮನಿ, ಕೊಡಗು, ಕೆಳದಿ ಮೈಸೂರು ರಾಜ್ಯಗಳಲ್ಲಿ ಪ್ರಮುಖ ರಾಜಕೀಯ ಆಂದೋಲನಗಳು ಸಾಕಷ್ಟು ಸಾಮಗ್ರಿಗಳನ್ನು ಪೂರೈಸುತ್ತವೆ ಕರ್ನಾಟಕ ವೀರ ಮಹಿಳೆಯರಾದ ಸೋಮಲಾದೇವಿ, ಬೆಳವಡಿ ಮಲ್ಲವ್ವ, ಕೆಳದಿ ಚನ್ನಮ್ಮ, ಕಿತ್ತೂರು ಚನ್ನವ್ವ ಇವರ ಐತಿಹಾಸಿಕ ಮಹತ್ವದ ಮಹತ್ವಪೂರ್ಣವಾದ ಕಾದಂಬರಿಗಳು ಇನ್ನೂ ಬರಬೇಕಾಗಿವೆ.

ಇತಿಹಾಸ ಪ್ರಜ್ಞೆಯುಳ್ಳ ಲೇಖಕರು ಸತ್ಯದಿಂದ ದೂರವಾಗುಳಿಯದೆ, ಯಾವ ಕೋಮುವಾರು ಭಾವನೆಯನ್ನೂ ತಳೆಯದೆ, ಶುದ್ಧಮನಸ್ಸಿನಿಂದ ಬರೆದ ಐತಿಹಾಸಿಕ ಕಾದಂಬರಿಗಳನ್ನು

ಸಾರ್ವಜನಿಕರು ಈಗ ಎದಿರು ನೋಡತೊಡಗಿದ್ದಾರೆ.

ಇತಿಹಾಸ ಸತ್ವವುಳ್ಳ ಕಾದಂಬರಿಯು ಕಲ್ಪನೆಯ ಕೂಪವಲ್ಲವೆಂಬುದನ್ನು ಮಾತ್ರ ಹೇಳಿದರೆ ಸಧ್ಯ ಬೆಳಕಿಗೆ ಬರುತ್ತಿರುವ ಅನೇಕ ಕಾದಂಬರಿಗಳ ಮುಂದೆ ಬೆಳಕನ್ನು ಹಿಡಿದಂತಾಗುವುದು.

ನಾನು ಕಾಂದಂಬರಿಗಳನ್ನು ಬರೆಯುವವ,
ಕಾದಂಬರಿಗಳ ಬಗ್ಗೆ ಚರ್ಚಿಸುವವನಲ್ಲ,

ಎಂಬ ಸಮಾಧಾನದ ತಂಗಾಳಿಯಲ್ಲಿ ಈ ಲೇಖನವನ್ನು ಮುಗಿಸುತ್ತೇನೆ.

**ಕೃಷ್ಣಮೂರ್ತಿ ಪುರಾಣಿಕ**

[ಈ ಲೇಖನವನ್ನು ಬರೆಯುವಾಗ ಶ್ರೀರಂ.ಶ್ರೀ. ಮುಗಳಿ, ಶ್ರೀ ಡಿ.ಎಲ್.ಎನ್,. ಶ್ರೀ ಜಿ. ವೆಂಕಟಸುಬ್ಬಯ್ಯ ಇವರ ಬರಹಗಳ ಉಪಯೋಗವನ್ನು ಪಡೆದುಕೊಂಡಿದ್ದೇನೆ. —ಲೇಖಕ. ]

# ಶರಣ--ದಾಸ ಸಾಹಿತ್ಯ

ಕನ್ನಡ ಸಾಹಿತ್ಯವಾಹಿನಿಯಲ್ಲಿ ಶರಣ ಸಾಹಿತ್ಯ ಮತ್ತು ದಾಸಸಾಹಿತ್ಯಗಳೆರಡೂ ವಿಶಿಷ್ಟವಾದ ಸ್ಥಾನವನ್ನು ಅಲಂಕರಿಸಿವೆ. ಎರಡೂ ಸಾಮಾನ್ಯ ಜನತೆಗೆ ಇಹ-ಪರಗಳ ಸಾಧನೆಗೆ ಸೋಪಾನಗಳನ್ನು ಕಾಣಿಸಿದುವು. ಪ್ರೌಢ ಸಂಸ್ಕೃತದಲ್ಲಿದ್ದ ಸಿದ್ಧಾಂತದ ಸಾರವನ್ನು, ಜನತೆಯ ಜೀವನ ಹಸನಾಗುವ ಮಾರ್ಗವನ್ನು ಆಡುನುಡಿಯಲ್ಲಿ ಹೇಳಿ, ಹಾಡಿ, ಜನತೆಯ ಹೃದಯವನ್ನು ಅಮೃತದಿಂದ ತೋಯಿಸಿ, ಮೃದುಮಾಡಿ, ನಡತೆಯನ್ನುತಿದ್ದಿ, ಇಹದಲ್ಲೂ ಪರದಲ್ಲೂ ಜೀವರು ಸುಖ ಸಾಧನೆ ಮಾಡಿಕೊಳ್ಳುವಂತೆ ಪ್ರಚೋದಿಸಿದುವು.

ಕಾಲಾನುಕ್ರಮದಲ್ಲಿ ಶರಣಸಾಹಿತ್ಯ ಮೊದಲು ಬಂದು, ಅನಂತರ ದಾಸಸಾಹಿತ್ಯದ ಉಗಮವಾಯಿತು. ಮೊದಲನೆಯದು ಶಿವಭಕ್ತ ಬಂಧುಗಳಿಂದ ಸೃಷ್ಟಿಯಾದರೆ, ಎರಡನೆಯದು ಹರಿಶರಣ ಧೀಮಂತರಿಂದ ಅಭಿವ್ಯಕ್ತವಾಯಿತು. ಈ ಎರಡು ಸಾಹಿತ್ಯಗಳಲ್ಲಿ ಬಹುಮಂದಿ ಶಿವಶರಣರು, ಹರಿದಾಸರು ತಮ್ಮತಮ್ಮ ಶೈವ—ವೈಷ್ಣವ ಭಕ್ತಿಯನ್ನು ಬೆಳಗಿದ್ದಾರೆ; ತಾವು ನಂಬಿದ್ದ ಸಿದ್ಧಾಂತಗಳನ್ನು ಪ್ರಚಾರ ಮಾಡಿದ್ದಾರೆ. ಎರಡೂ ಜೀವಂತ ಹೊಳೆಗಳಾಗಿ, ಬತ್ತದ ತೊರೆಗಳಾಗಿ, ಆಳ ಅಗಲಗಳಿಂದ ಕೂಡಿಕೊಂಡು ವಿಸ್ತಾರವಾಗಿ ತುಂಬಿ ಹರಿಯುತ್ತಿವೆ; ಕನ್ನಡ ಸಾಹಿತ್ಯವಾಹಿನಿಯಲ್ಲಿ ಸೇರಿ ಅದನ್ನು ಪುಣ್ಯಪ್ರದವಾಗಿ, ಪವಿತ್ರ ಮಯವಾಗಿ ಮಾಡಿ, ಸಾಮಾನ್ಯ ಜನತಾ ಲೋಕವನ್ನು ಉದ್ಧರಿಸಿವೆ; ಕನ್ನಡದ ನುಡಿ ಭಂಡಾರವನ್ನು ಹಿಗ್ಗಿಸಿವೆ. ಈ ಎರಡೂ ಸಂತ ಸಾಹಿತ್ಯದಿಂದ ಕನ್ನಡ ವಾಙ್ಮಯವೂ ಶ್ರೀಮಂತವಾಗಿದೆ; ಕನ್ನಡಿಗರ ಆಮಯಗಳು, ಇವುಗಳಲ್ಲಿ ಪ್ರತಿಪಾದಿತವಾಗಿರುವ ಭಕ್ತಿ-ಜ್ಞಾನ ಚಿಕಿತ್ಸೆಯಿಂದ ದೂರವಾಗಿವೆ.

ಶರಣ— ದಾಸ ಸಾಹಿತ್ಯದಲ್ಲಿ ನೂರಾರು ಸಂತರು—ಸತ್ಪುರುಷರು ಸಾಹಿತ್ಯವನ್ನು ಸೃಷ್ಟಿಸಿದ್ದಾರೆ. ಅವರಲ್ಲಿ ಜಗತ್ಪ್ರಸಿದ್ಧರು ಕೆಲವರು. ಉಳಿದವರಿಗೆ ನಾಯಕರಾಗಿ ಮಾರ್ಗದರ್ಶಕರಾಗಿ ಎಲ್ಲ ಕಾಲಕ್ಕೂ ಅವರ ಹೆಸರೂ ನಿಲ್ಲುವುದಾಗಿದೆ.

ಶರಣವೃಂದದಲ್ಲಿ ಈ ಹಿರಿ ಹೆಸರ ಅರ್ಹತೆಗೆ ಪಾತ್ರರಾದವರು, ಶ್ರೀ ಅಲ್ಲಮ ಪ್ರಭು, ಬಸವೇಶ್ವರ, ಚೆನ್ನಬಸವಣ್ಣ, ಸಿದ್ಧರಾಮಯ್ಯ ಮತ್ತು ಅಕ್ಕಮಹಾದೇವಿ. ಹಾಗೆಯೇ ಹರಿದಾಸ ವೃಂದದಲ್ಲಿ ಹೆಸರಾದವರು ಶ್ರೀ ಪುರಂದರದಾಸರು, ಕನಕದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು. ಈ ಒಂದೊಂದು ಗುಂಪಿನಲ್ಲೂ ಇತರ ನೂರಾರು ಮಂದಿ ಕೃತಿಕಾರರಿದ್ದಾರೆ. ಕೇವಲ ಪ್ರಮುಖರನ್ನು ಮಾತ್ರ ಇಲ್ಲಿ ಹೆಸರಿಸಲಾಗಿದೆಯಷ್ಟೆ.

ಇವರಲ್ಲಿ ಒಬ್ಬೊಬ್ಬರೂ ತಮ್ಮದೇ ಆದ ವಿಶಿಷ್ಟರೀತಿಯಲ್ಲಿ ನಾಡುನುಡಿಗಳಿಗೆ ಸ್ಮರಣೀಯವಾದ, ಚಿರಂತರವಾದ ಸೇವೆಯನ್ನು ಸಲ್ಲಿಸಿ ಸದಾ ಜನತೆಯ ಹೃದಯ ಮಂದಿರದಲ್ಲಿ, ಸ್ಮೃತಿಪಟಲದಲ್ಲಿ ಸ್ಥಿರವಾಗಿ ನಿಲ್ಲಬಲ್ಲವರಾಗಿದ್ದಾರೆ. ಅವರನ್ನು ಎಷ್ಟರ ಮಟ್ಟಿಗೆ ಹಾಗೆ ನಿಲ್ಲಿಸಿಕೊಂಡಿದ್ದೇವೆ, ಅವರಿಂದ ಪ್ರಯೋಜನವನ್ನು ಪಡೆದಿದ್ದೇವೆ ಎಂಬುದು ಮಾತ್ರ ಬೇರೆಮಾತು! ಆದರೂ ಮಾಡಿಕೊಂಡವರುಂಟು. ಆ ಪ್ರಯೋಜನವನ್ನು ಪಡೆದವರು, ಅವರ ವಾಣಿಯನ್ನು ಅರಿತು ನಡೆದುಕೊಂಡವರು ಮಾತ್ರ ಉಧೃತರೆಂಬುದರಲ್ಲಿ ಸಂ

ದೇಹವೇಇಲ್ಲ.

ಈ ಸಂತ ಸಾಹಿತ್ಯದಲ್ಲಿ ಕಾವ್ಯದ ಹಿತವಾದ, ಕಾವು, ಚೆಲುವು, ತಂಪು, ಇಂಪು, ಕಂಪು ಕೂಡ ಉಂಟು. ಶ್ರವಣಕ್ಕೆ ಮನನಕ್ಕೆ ಅರ್ಹವಾಗಿ, ಅಂದ ವಾಗಿ, ನಿಧಿಧ್ಯಾಸನಕ್ಕೆ ಆಹಾರವಾಗುವಂತಹ ಅತುಳ ಸಾಮುಗ್ರಿ ಅವರ ನುಡಿಗಡಣದಲ್ಲಿ ಅಡಗಿದೆ. ಅವುಗಳ ಸ್ಮರಣೆ ಮಾಡಿದವರನ್ನು ಪುನೀತ ಗೊಳಿ ಸುವ ಚೈತನ್ಯ ಅವುಗಳಲ್ಲಿ ಹುದುಗಿದೆ. ಒಮ್ಮೆ ಕೇಳಿದರೆ ಓದಬೇಕೆಂದು, ಓದಿದರೆ ಮತ್ತೆ ಮತ್ತೆ ಅವಲೋಕನ ಮಾಡಬೇಕೆಂದು, ಚಿಂತಿಸಿ ದಷ್ಟೂ ಹೆಚ್ಚು ಹೆಚ್ಚು ಅರ್ಥ, ಹಿಗ್ಗಿಸಿದಷ್ಟೂ ಹಿಗ್ಗುವ ಅರ್ಥ ಶಕ್ತಿ, ವಲಯುಗಳನ್ನು ಹೊಂದಿ ಶಕ್ತಿ ಪುಂಜವಾಗಿವೆ. ಅವರ ಇನಿಮಾತು ನೆನಪಿನಲ್ಲಿಟ್ಟು ಕೊಳ್ಳಲು ಯಾರಿಗೆತಾನೇ ಆಸೆಯಾಗದು? ಅಪೇಕ್ಷಿ ಸಿದ ಎಲ್ಲವನ್ನೂ ಹಾಗೆ ಸ್ಮರಣೆಯಲ್ಲಿಟ್ಟುಕೊಳ್ಳುವ ಶಕ್ತಿ ಮಾತ್ರ ಎಲ್ಲರಿಗೂ ಇರುವುದಿಲ್ಲ. ನೆನಪಿಗೆ ಬಂದ ಕೆಲವು ನುಡಿಗಳನ್ನಾದರೂ ಮೆಲಕು ಹಾಕಿ ದರೂ ಲಾಭ ಸಾರ್ಥಕ ಉಂಟು.

"ದೇವನೊಬ್ಬನಾಮಹಲವು ಪರಮ ಪತಿವ್ರತೆಗೆ
ಗಂಡನೊಬ್ಬ"
—ಬಸವಣ್ಣನವರು.

ಒಬ್ಬದೇವರನ್ನು ತಾನೆ ನಂಬಿ ಪೂಜಿಸಿ ತನ್ನೆಲ್ಲವನ್ನೂ ಸಮರ್ಪಿಸಬೇಕು ಭಕ್ತನಾದವನು. ಆ ಸಾಮರ್ಥ್ಯ ಅವನಿಗಿಲ್ಲದಿದ್ದರೆ ಅದೆಂತಹ ಭಕ್ತಿ, ಅವನೆಂತಹ ಭಕ್ತ?

"ನಂಬಿ ಕರೆದಡೆ ಓ ಎಂಬನು ಶಿವನು. ನಂಬದೆ ಕರೆದಡೆ ಓ ಎಂಬನೇ ಶಿವನು ? ನಂಬಲರಿಯರು ನಚ್ಚ ಲರಿಯರು ಡಂಭಿನಭಕ್ತರು, ನಂಬದೆ ನಚ್ಚದೆ ಬರಿದೆ ಕರೆದಡೆ ಶಂಭು ಮೌನದಲಿಪ್ಪ ಕೂಡಲಸಂಗಮದೇವ"

ನಂಬಿ ಕರೆದ ಪ್ರಹ್ಲಾದನಿಗೆ ಕಂಭದಿಂದ ಒಡೆದು ಬಂದು ಸಂತೈಸಿದ ಅನಂತಮೂರುತಿ ಹರಿಯೆಂ ದರೆ, ಆದರಲ್ಲಿ ನಂಬಿಕೆಯೂ ಇಲ್ಲದ ಪ್ರಪಂಚಿಗರು ನಾವು !

"ಹುತ್ತವ ಬಡಿದಡೆ ಹಾವು ಸಾಯಬಲ್ಲುದೆ ಅಯ್ಯಾ ? "

ಭಕ್ತನಾಗಬೇಕಾದರೆ, ಕೇವಲ ದೇಹದಂಡನೆ ಮಾಡಿ ದರೆ ಸಾಲದು.

"ಕಳಬೇಡ, ಕೊಲಬೇಡ, ಹುಸಿಯಬೇಡ, ಮು ನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿ ಸ ಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ' ಇದೇ ನಮ್ಮ ಕೂಡಲ ಸಂಗಮ ದೇವರನೊಲಿಸುವ ಪರಿ."

ಇಷ್ಟನ್ನು ನೆನಪಿನಲ್ಲಿಟ್ಟುಕೊಂಡು ಸದಾ ಜಾಗ್ರ ತರಾಗಿದ್ದು, ಬಾಳನ್ನು ನಡೆಸುವವರಿಗೆ ಯಾತರ ಭಯ.

ಪರನಿಂದೆ, ಪರವಿತ್ತಾಪಹಾರ, ಘೋರ ವ್ಯಭಿ ಚಾರಗಳೇ ದಾರಿದ್ರ್ಯಕ್ಕೆ ಕಾರಣ ಎಂಬ ಮಾತು ನಮ್ಮ ನೆನಪಿನಲ್ಲಿರಬೇಕು.

"ಎನಗಿಂತ ಕಿರಿಯರಿಲ್ಲ (ಶಿವ) ಭಕ್ತರಿಗಿಂತ ಹಿರಿಯರಿಲ್ಲ ." ಎಂಬ ದಾರ್ಢ್ಯ ಬಂದವರಿಗೆ, ಆರೀತಿ ನಡೆದು ಕೊಂಡವರಿಗೆ ಉದ್ಧಾರ ಕರತಲಾಮಲಕ.

ಭಕ್ತ ಹೇಗಿರಬೇಕು ?

" ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಪು ತುಂಬಿ, ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ, ಕೂಡಲ ಸಂಗಮದೇವಾ, ನಿಮ್ಮ ಚರಣಕಮಲ ದೊಳಗಾನು ತುಂಬಿ"

ಮಾಯೆ ಅದೆಷ್ಟು ಬಗೆಯಲ್ಲಿ ನಮ್ಮನ್ನು ಕಾಡಿಸುತ್ತದೆ. ಆದರೆ ಅದನ್ನು ಗೆಲ್ಲುವ ಯೋಗ್ಯತೆ ಯನ್ನು ನಾವು ಸಂಪಾದಿಸಬೇಕು. ಮನಸ್ಸನ್ನು ಬಿಗಿಹಿಡಿಯಬೇಕು. ಅಜನಲೋಕವನ್ನು ಮು ಟ್ಟುವ ಆಸೆ ಆಮಿಷಗಳನ್ನು ದೂರವಿರಿಸಬೇಕು. ಅದು ಸಾಧ್ಯವಾಗುವುದು ಭಗವಂತನಲ್ಲಿ ನಾವಿ ಡುವ ಗಾಢವಾದ ಭಕ್ತಿ ಮತ್ತು ಜ್ಞಾನಗಳಿಂದ.

"ಕಾಯಕ್ಕೆ ನೆಳಲಾಗಿ; ಪ್ರಾಣಕ್ಕೆ ಮನವಾಗಿ; ಮನಕ್ಕೆ ನೆನಹಾಗಿ; ನೆನಹಿಂಗೆ ಅರಿವಾಗಿ; ಜಗದ ಜಂ ಗುಳಿಗಳಿಗೆ ಬೆಂಗೋಲನೆತ್ತಿಕಾಡಿತ್ತು ಮಾಯೆ."

"ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿ ಮಾನವಾಗಿ ಕಾಡಿತ್ತು ನೋಡಾ. ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿತ್ತು ನೋಡಾ, ಲೋಕವೆಂಬ ಮಾಯೆಗೆ ಶರಣರಚಾರಿತ್ರ

ಮರುಳಾಗಿ ತೋರುವುದು ನೋಡಾ. ಚೆನ್ನಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆ ಯಿಲ್ಲ, ಮರಹಿಲ್ಲ, ಅಭಿಮಾನವೂ ಇಲ್ಲ.

"ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ. ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ. ಮಣ್ಣು ಮಾಯೆಯೆಂಬುದು, ಹೆಣ್ಣು ಮಾಯೆಯಲ್ಲ. ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರ".

ಮನಸ್ಸನ್ನು ಸ್ಥಿರವಾಗಿಟ್ಟುಕೊಂಡರೆಯಾವ ಮಾಯೆಯೂ ಏನೂ ಮಾಡಲಾರದು ಎಂಬ ತತ್ತ್ವವನ್ನು ಅಲ್ಲಮನ ಈ ವಚನ ಸ್ಥಿರಪಡಿಸುತ್ತದೆ.

"ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯ ? ಸಮುದ್ರದ ತಡಿಯಲೊಂದು ಮನೆಯಮಾಡಿ ನೆರೆತೆರೆಗಳಿಗಂಜಿದಡೆಂತಯ್ಯ ? ಸಂತೆಯೊಳಗೊಂದು ಮನೆಯಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ ? ಚೆನ್ನಮಲ್ಲಿಕಾರ್ಜುನಯ್ಯ ಕೇಳಯ್ಯ ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು".

ಭಗವಂತನ ವಿಚಾರದಲ್ಲಿ ಸದಾ ವಿಹರಿಸುವುದೇ ಭಕ್ತನ ಮನಸ್ಸಿನ ಪ್ರಧಾನ ಲಕ್ಷಣ;

"ಗಿರಿಯಲ್ಲದೆ ಹುಲ್ಲುಮೊರಡಿಯಲಾಡುವುದೇ ನವಿಲು ? ಕೊಳವಲ್ಲದೆ ಕಿರುಹಳ್ಳಕ್ಕೆಳಸುವುದೇ ಹಂಸ? ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ ? ಪರಿಮಳವಿಲ್ಲದ ಪುಷ್ಪಕ್ಕೆಳಸುವುದೇ ಭ್ರಮರ ?

ಭಕ್ತನ ನಂಬಿಕೆ ದೃಢ. ಅದು ಯಾವುದರಿಂದಲೂ ಅಲುಗಾಡದು ; ಎಡರುತೊಡರುಗಳಿಗೆ ಅಂಜದು—ಅಳುಕದು. ಅಷ್ಟೇ ಅಲ್ಲ. ಅದು ಅವುಗಳಿಂದ ಇನ್ನೂ ದೃಢವಾಗುವುದು.

"ಚಂದನವ ಕಡಿದು ಕೊರೆದು ತೇದೊಡೆ ನೊಂದೆನೆಂದು ಕಂಪ ಬಿಟ್ಟಿತ್ತೆ ? ತಂದು ಸುವರ್ಣವ ಕಡಿದೊರೆದಡೆ ಬೆಂದುಕಳಂಕ ಹಿಡಿದಿತ್ತೆ ? ಸಂದುಸಂದು ಕಡಿದ ಕಬ್ಬನ್ನು ಗಾಣದಲ್ಲಿಕ್ಕಿ ಬೆಂದು ಕಾಕಾಗುಳ ಸಕ್ಕರೆಯಾಗಿ ನೊಂದೆನೆಂದು ಸವಿಯ ಬಿಟ್ಟಿತ್ತೆ ? .... ಎನ್ನ ತಂದೆ ಚೆನ್ನಮಲ್ಲಿಕಾರ್ಜುನ ದೇವಯ್ಯ ಕೊಂದಡೆ ಶರಣೆಂಬುದ ಮಾಣೆ".

ಭಕ್ತನ ದಾರ್ಢ್ಯ ಪ್ರಸನ್ನ ವೆಂಕಟದಾಸರ ಈ ಮಾತುಗಳಲ್ಲಿ ಇನ್ನೂ ಸ್ಪಷ್ಟವಾಗಿ ಬಂದಿದೆ.

"ರಂಗ, ನಿನ್ನೆಂಜಲೆನ್ನಂಗೈಯೊಳುಂಡು ರಾ | ಜಂಗಳನುಡುಗುವ ಬಡವ ನಾನದೆ ಮತ್ತವ ನಾನ ........ಲ್ಲೊ ತಂದೆ ನೀ ಮಾರಿದ ರೊಂದೊಪ್ಪು ಕೊಂದ ರೊಪ್ಪೆಂದಿಗೆ ನಾ ಮತ್ತವನಲ್ಲೊ | ತಂದೆ ನಿನ್ನಯ ಮನೆ ಹಿಂದಂಗಣದೊಳೊಯ್ದು ಬಂಧಿಸು ನಾ ಮತ್ತವನಲ್ಲೊ| ತಂದೆ ನಿನ್ನಾಯುಧ ಸಂದುಸಂದಿಗೆ ಕಾಸಿ ಕಂಡಿಸು ನಾಮತ್ತವನಲ್ಲೊ| ತಂದೆ ಪ್ರಸನ್ನೆಂಟಂದಿರೇಶಿನ್ನಾರ ಹೊಂದದ ಸೊಕ್ಕೊಂದೆ ಉಳ್ಳವನಲ್ಲದೆ ||

ಮತ್ತವ ನಾನಲ್ಲೊ ಮುರಾರಿ ನಿನಗೆ ನಾ |
ಮತ್ತವನಲ್ಲೊ ಮುರಾರಿ ||

ಭಕ್ತರ ದುಃಖ, ಆತಂಕ, ವೇದನೆ ಭಕ್ತರಿಗೆ ಮಾತ್ರ ತಿಳಿಯುವಂತಹುದು. ಅನ್ಯರು ಅದನ್ನು ಅರಿಯುವುದು ಅಸಾಧ್ಯ

ಬಂಜೆ ಬೇನೆಯನರಿಯಳು. ಬಲತಾಯಿ ಮುದ್ದು ಬಲ್ಲಳೆ?
ನೊಂದ ನೋವ ನೋಯದವರೆತ್ತ ಬಲ್ಲರು?

ಶರಣರ ಲಕ್ಷಣ ಅಲ್ಲಮ ಪ್ರಭುವಿನ ಬಾಯಲ್ಲಿ ಹೀಗೆ ಬಂದಿದೆ.

"ತನ್ನ ತಾನರಿದವರಿಗೆ ಅರಿವೆ ಗುರು"
"ಮಾತೆಂಬುದು ಜ್ಯೋತಿರ್ಲಿಂಗ"

"ನಾನು ಘನ ತಾನು ಘನವೆಂಬ ಹಿರಿಯರುಂಟೆ ? ಜಗದೊಳಗೆ ಹಿರಿಯರ ಹಿರಿತನದಿಂದೇನಾಯ್ತು ? ಹಿರಿದು ಕಿರಿದೆಂಬ ಶಬ್ದವಡಗಿದರೆ ಆತನೇ ಶರಣ ಗುಹೇಶ್ವರ."

"ಬಿರುಗಾಳಿ ಬೀಸಿ ಮರ ಮುರಿಯುವಂತೆ ಸುಳುವು ಸುಳಿಯದೆ, ತಂಗಾಳಿ ಪರಿಮಳ ದೊಡಗೂಡಿ ಸುಳಿವಂತೆ ಸುಳಿಯಬೇಕು, ಸುಳಿದಡೆ ನೆಟ್ಟನೆ ಜಂಗಮನಾಗಿ ಸುಳಿಯಬೇಕು, ಸುಳಿದಡೆ ನೆಟ್ಟನೆ ಭಕ್ತನಾಗಿ ನಿಲ್ಲಬೇಕು. ದೇಹದೊಳಗೆ ದೇವಾಲಯವಿದ್ದು ಮತ್ತೆ ಬೇರೆ ದೇವಾಲಯವೇತಕೆ ? ಎರಡಕ್ಕೆ ಹೇಳಿಲ್ಲವಯ್ಯ ಗುಹೇಶ್ವರಾ. ನೀನು ಕಲ್ಲಾದರೆ ನಾನೇನಪ್ಪೆನು ?"

"ಭಕ್ತಿ ಯೆಂಬುದು ತೋರಿ ಉಂಬ ಲಾಭ"
"ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ."
"ಹೊಟ್ಟೆಯಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದ ರೇನು ? ಭಕ್ತನಾಗ ಬಲ್ಲನೆ ?"
ಅಲ್ಲಮ ಪ್ರಭು ಹೇಳಿರುವ ಕಾಲಕಾಲಕ್ಕೆ ಗುರು ಶಿಷ್ಯ ಸಂಬಂಧ ಹೇಗೆ ಬದಲಾಯಿಸಿದೆ ಎಂಬುದು ತುಂಬ ಗಮನಾರ್ಹವಾಗಿದೆ.

ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದಡೆ ಆಗಲಿ, ಮಹಾ ಪ್ರಸಾದ ಎಂದೆನೆಯ್ಯಾ !

ತ್ರೇತಾಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದಡೆ, ಆಗಲಿ ಮಹಾಪ್ರಸಾದ ಎಂದೆನಯ್ಯ!

ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯಕಲಿಸಿದರೆ, ಆಗಲಿ, ಮಹಾಪ್ರಸಾದ ವೆಂದೆನಯ್ಯ!

ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ, ಆಗಲಿ, ಮಹಾಪ್ರಸಾದ ವೆಂದೆನೆಯ್ಯ!

ಗುಹೇಶ್ವರಾ, ನಿಮ್ಮಕಾಲದ ಕಟ್ಟಳೆಯ ಕಲಿತನಕ್ಕೆ ನಾ ಬೆರಗಾದೆನು."
ವಚನಕಾರರ ವಚನಗಳ ಪ್ರಾಮುಖ್ಯವು ಚೆನ್ನಬಸವೇಶ್ವರನ ಮಾತಿನಲ್ಲಿ ಹೀಗೆ ಬಂದಿದೆ.

ಆದ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ. ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ. ಕೂಡಲ ಚೆನ್ನ ಸಂಗಯ್ಯನಲ್ಲಿ, ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣ ಸಿದ್ಧರಾಮಯ್ಯ. ಸಿದ್ಧರಾಮಯ್ಯ ಹೇಳಿರುವ

''ಭಕ್ತನಾದರೆ ಬಸವಣ್ಣನಾಗಬೇಕು, ಜಂಗಮನಾದರೆ ಪ್ರಭುವಿನಂತಾಗ ಬೇಕು. ಭೋಗಿಯಾದರೆ ನಮ್ಮ ಗುರು ಚೆನ್ನಬಸವಣ್ಣನಂತಾಗಬೇಕು. ಯೋಗಿಯಾದರೆ ನನ್ನಂತಾಗ ಬೇಕು"

ಎಂಬುದರ ಜೊತೆಗೆ ವಿರಕ್ತನಾದರೆ ಅಕ್ಕಮಹಾದೇವಿಯಂತಾಗಬೇಕು ಎಂಬುದನ್ನು ಸೇರಿಸಬಹುದು.

ಈ ಬಗೆಯ ಶರಣರ ವಚನ ಸಾಹಿತ್ಯ ಸೂಕ್ಷ್ಮ ಸ್ವಚ್ಛಂದ ಲಯದ ಗದ್ಯ ಕವನದಲ್ಲಿ ಭಾವಗೀತೆಯ ಮೂಲಪ್ರೇರಣೆಯಿಂದ, ಆದರೆ ಅಷ್ಟಾಗಿ ತಾಳಲಯಗಳ ಯೋಜನೆಯಿಲ್ಲದೆ ಹೊರಬಿದ್ದು ಅಪಾರ ವಚನರಾಶಿಯ ತರುವಾಯ,ತಾಳ ಲಯ,ರಾಗ ಪ್ರಾಸ ಛಂದೋ ಬದ್ಧವಾಗಿ ಗಂಗೆಯ ಅನುಕೂಲ ತರಂಗಿಣಿಯಂತೆ ಓತಪ್ರೋತವಾಗಿ ಶುದ ಸಲಿಲ ಸ್ರೋತೋವಾಹಿನಿಯಾಗಿ ಹರಿದು ಬಂದಿತು ಹರಿದಾಸ ವಾಙ್ಮಯ.

"ಈಸಬೇಕು ಇದ್ದು ಜೈಸಬೇಕು." ಈ ಸಂಸಾರ ಸಮುದ್ರವನ್ನು: "ಮಾನವ ಜನ್ಮದೊಡ್ಡದು ಇದ ಹಾನಿಮಾಡಲಿಬೇಡಿ ಹುಚ್ಚಪ್ಪಗಳಿರ"
ಎಂಬುದು ಹರಿದಾಸರ ಸಂದೇಶಸಾರ. ಈಜುವುದರಲ್ಲಿ ಗುರಿ ಜಗದೀಶ ಪುರಂದರವಿಠಲನನ್ನುಮೆಚ್ಚಿಸುವುದಾಗಿರಬೇಕು; ಪದ್ಮಪತ್ರದ ಜಲಬಿಂದುವಿನಂತೆ ಎಷ್ಟು ಬೇಕೊ ಅಷ್ಟುಮಾತ್ರ ಪ್ರಪಂಚದಲ್ಲಿ ಪ್ರೇಮವಿಟ್ಟು ಬದುಕಬೇಕು ಇಹದ ಸುಖದಲ್ಲಿ ಅತೀವ ಮಮತೆ, ದುಃಖದಲ್ಲಿ ತುಂಬ ನೋವು ಪಡದಂತೆ ಜಾಗ್ರತರಾಗಿರಬೇಕು.

"ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ
ಬಿಲ್ಲಾಗಿ ಇರಬೇಕು ತಮ್ಮವರೊಳಗೆ
ಬೆಲ್ಲವಾಗಿರಬೇಕು ಬಲ್ಲವರೊಳಗೆ"

ಈ ಲೋಕಕ್ಕೆ ಸಾಧನೆಗಾಗಿ ಜೀವವನ್ನು ಕಳುಹಿಸಿರುವ ಪರಮಾತ್ಮನು ನಮ್ಮನ್ನು ಸಲಹುವ ಭಾರವನ್ನು ಹೊತ್ತಿದ್ದಾನೆ, ಆ ಹೊಣೆ ಅವನದು ಎಂದು ನಂಬಬೇಕು

ತಲ್ಲಣಿಸದಿರು ಕಂಡ್ಯ ತಾಳು ಮನವೆ,
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ?
ಎಂದು ಹೇಳುತ್ತ ಕನಕದಾಸರು, ಮುಂದೆ ಇದಕೆ ಕೊಟ್ಟಿರುವ ದೃಷ್ಟಾಂತಗಳು ಕಾವ್ಯಮಯವಾಗಿವೆ.

ಬೆಟ್ಟದಾ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ ! ಅಡವಿಯೊಳಾ

ಡುವ ಮೃಗ ಪಕ್ಷಿಗಳಿಗೆ ಅಡಿಗಡಿಗೆ ಆಹಾರವಿತ್ತವರು ಯಾರೊ? ಕಲ್ಲೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ ಅಲ್ಲಲ್ಲಿಗಾಹಾರವಿತ್ತರು ಯಾರೋ? ಬಲ್ಲಿದವನು ಕಾಗಿನೆಲೆಯಾದಿ ಕೇಶವರಾಯ! ಎಲ್ಲರನು ಸಲಹುವ ನ. ಇದಕೆ ಸಂಶಯವಿಲ್ಲ.

ಅಷ್ಟೇ ಅಲ್ಲ "ಅವನು ಬಲ್ಲವರಿಗತಿ ಬಲ್ಲಿದನು ಅಪ್ರತಿನು ಜಗಕೆಲ್ಲ,"
ಇಂತಹವನು ಹೊಣೆ ಹೊತ್ತಿರುವಾಗ ಆತಂಕ ಹೊಂದಿ ಅಯೋಗ್ಯರನ್ನು ಆಶ್ರಯಿಸುವುದೇಕೆ? ಅದರಿಂದ ಆವ ಪ್ರಯೋಜನವುಂಟು? ಎಂದು ದಾಸರು ಕೇಳಿದ್ದಾರೆ.

"ಅಶನ ವಸನಗಳೀವ ವಸುದೇವ ಸುತನಿರಲು
ಹುಸಿಯಾಗಿ ಬದುಕೊ ನರರಿಗೆ-ಕೈಚಾಚಿದರೆ ಹಸಿವೆ
ಅಡಗುವುದೆ ಎಲೆ ಜೀವ?"

— ಶ್ರೀ ಜಗನ್ನಾಥ ದಾಸರು.

ಎಂದು ಹರಿದಾಸರು ಸ್ವತಂತ್ರ ಮನೋಭಾವನನ್ನು ಪರಮಾತ್ಮನಲ್ಲಿ ತಳೆಯ ಬೇಕೆಂದು ತಿಳಿಸಿದ್ದಾರೆ.

ಬಹು ಬೆಲೆಯುಳ್ಳ ಮಾನವ ಜನ್ಮ ಬಂದಿರುವಾಗ, ಅದನ್ನು ವ್ಯರ್ಥಮಾಡಿಕೊಳ್ಳದೆ, ಪಾರಲೌಕಿಕ ಸಾಧನೆ ಎಷ್ಟು ಬೇಕೋ ಅಷ್ಟನ್ನು ಎಚ್ಚರಿಕೆಯಿಂದ ಮಾಡಿಕೊಳ್ಳಬೇಕು. ಅದೂ ಪರಮಾತ್ಮನ ಅಧೀನವೆಂಬುದು ನಿಜವಾದರೂ, ನಮ್ಮ ಪ್ರಯತ್ನ ಆ ದಿಶೆಯುಲ್ಲಿದ್ದೂ ಅವನಲ್ಲಿ ಪ್ರಾರ್ಥನೆ ಅದಾಗಿರಬೇಕು ಎಂದರು ಹರಿದಾಸರು. ಮಂದಮತಿಗಳನ್ನುಕಂಡು ಮೂಗರಾಗಿದ್ದು ದುಷ್ಟರನ್ನು ಕಂಡು, ರೇಗಿ ಶಿಷ್ಟರನ್ನು ವಿಧೇಯತೆಯಿಂದ ಅನುಸರಿಸಿ ಮಾಯಾಪಾಶವೆಂಬ ಅಂಗಿಯನ್ನು ಕಿತ್ತುಆಚೆಗೆಸೆದು ದ್ವೇಷವೆಂಬ ಗೋಡೆಯನ್ನು ಕರೆದು ಹಾಕಿ, ಕೃಷ್ಣನ ಕರಕಮಲಗಳಿಗೆ ಎರಗಿ ಎರಗಿ ಬಿದ್ದು ಹಾಡಿ ಕುಣಿಯುವಂತಹ "ಹುಚ್ಚು" ಅದು ಎಂದು ಪುರಂದರದಾಸರು ವರ್ಣಿಸಿದ್ದಾರೆ.

ಸರಳವೂ ಸುಂದರವೂ ಆದ ಕನ್ನಡ ನುಡಿಯನ್ನು ಎಳೆದಂತೆ ಸುಖವಾಗಿ ಬರುವ ಹೋಳಿಗೆಯ ಕಣಕ್‌ದಂತೆ ಹಾಡಿ ತೋರಿದರು ಹರಿದಾಸರು. ನೀತಿ, ಲೋಕ ಸ್ವಭಾವ, ಹರಿಮಹಿಮೆ, ಹರಿಕರುಣೆ, ಹರಿಶರಣತೆ, ಲೋಕ ವಿಡಂಬನೆ, ಹಾಸ್ಯ, ಒಗಟು, ಚಮತ್ಕಾರನುಡಿ, ಅನುಭವ ಮಾತು, ಎಲ್ಲ ಉಂಟು ಈ ಹರಿದಾಸ ವಾಙ್ಮಯದಲ್ಲಿ. ಸಂಗೀತದ ತಳಹದಿಯಮೇಲೆ ಹುಟ್ಟಿದ ಈ ಸಾಹಿತ್ಯ ಕರ್ಣಾಟಕ ಸಂಗೀತ ಪಾಠವನ್ನು ಪುನರ್ವಿಮರ್ಶಿಸಿ, ಒಂದು ಹೆದ್ದಾರಿಯನ್ನು ಹಾಕಿತು; ಬತ್ತಿ ಹೋಗದ ಚಿರಚಿಲುಮೆಯಾಯಿತು. ಭಕ್ತಿ ಜ್ಞಾನ ಸದಾಚಾರಗಳ ಆದರ್ಶ, ಸಮರಸದ ಸಮ್ಮಿಳನವನ್ನು ಇಲ್ಲಿ ನಾವು ಕಾಣಬಹುದು.

ಭಗವಂತ ಅತಿ ಸುಲಭ, ನಮಗೆ ಶ್ರದ್ಧೆ, ದೃಢನಂಬಿಕೆ ಮಾತ್ರಇರಬೇಕುಎಂದರು ದಾಸರು.

" ಹೂವ ತರುವರನುನೆಗೆ ಹುಲ್ಲು ತರುವ ಅವ್ವ ಲಕುಮಿಾ ರಮಣ ಇವಗಿಲ್ಲಗರುವ! "

— ಶ್ರೀ ಪುರಂದರದಾಸರು

ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ, ಕುಳಿತು ಪಾಡಲುನಿಲುವ,ನಿಂತರೆನಲಿವ, ನಲಿದರೆ ಒಲಿವ ನಿಮಗೆಂಬ,ಅತಿ ಸುಲಭನೋ ಹರಿ ತನ್ನವರನರ ಘಳಿಗೆ ಬಿಟ್ಟಗಲನೊ ರಮಾಧವ ನೊಲಿಸರಲಿಯದೆ ಪಾಮರರು ಬಳಲುವರು ಭವದೊಳಗೆ "

—ಶ್ರೀ ಜಗನ್ನಾಥರು.

ಎಂದು ಪರಮಾತ್ಮನ ಪ್ರಮುಖಗುಣವಾದ ಕರುಣೆಯನ್ನು ಹರಿದಾಸರು ಕೊಂಡಾಡಿದ್ದಾರೆ.

ಪಾತ್ರರಿಗೆ ದಾನಮಾಡುವುದು ಮಾನವರ ಹಿರಿಯ ಕರ್ತವ್ಯ. ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ; ಕೊಟ್ಟವನಗುಂಟು, ಕೊಡದವರಿಗಿಲ್ಲ, ಮಾಡಿದ್ದುಣ್ಣೊ ಮಾಹಾರಾಯಎಂಬುದನ್ನು ಸ್ಪಷ್ಟವಾಗಿ ಹರಿದಾಸರು ಹೇಳಿದ್ದಾರೆ.

ಅನ್ನದಾನ ಮಾಡಿದವಗೆ ದಿವ್ಯ
ಅನ್ನ ಉಂಬುವುದೆ ಸಾಕ್ಷಿ!
ಹೊನ್ನು ದಾನವ ಮಾಡದವಗೆ ಪರರಿಗೆ
ದೈನ್ಯ ಪಡುವುದೆ ಸಾಕ್ಷಿ!
ನ್ಯಾ ದಾನವ ಮಾಡದವಗೆ

ಹೆಣ್ಣಿನ ಹೋರಾಟವೆ ಸಾಕ್ಷಿ !
ಕಂಡ ಪುರುಷಗೆ ಕಣ್ಣಿಕ್ಕುವಳಿಗೆ
ಗಂಡನ ಕಳೆವುದೇ ಸಾಕ್ಷಿ !
ಭಂಡತನದಿ ಪರಸ್ತ್ರೀಯ ಮೆಚ್ಚುವಗೆ
ಹೆಂಡಿರ ಕಳೆವುದೇ ಸಾಕ್ಷಿ !
ಭಕ್ತಿಯಿಲ್ಲದ ಅಧಮರಿಗೊಂದು
ಕತ್ತಲೆ ಮನೆಯೇ ಸಾಕ್ಷಿ !
ಮುಕ್ತಿ ಪಡೆವುದಕ್ಕೆ ಶ್ರೀ ಪುರಂದರ ವಿಠಲನ
ಭಕ್ತನಾಗಿ ಇರುವುದೇ ಸಾಕ್ಷಿ !

"ದಾನವಿಲ್ಲದ ಮನೆಯು ದೊಡ್ಡದಾದರೇನು ? ಹೀನಗುಣವುಳ್ಳವಗೆ ಹಿರಿಯತನ ಬಂದರೇನು ?"

ಪರಲೋಕ ಸಿದ್ಧತೆ ಎಂದರೆ ಧರ್ಮದೃಷ್ಟಿಯುಳ್ಳ
ಜೀವನ ಎಂದರ್ಥ.

ಬುತ್ತಿಯ ಕಟ್ಟೋ ಮನುಜ ಬುತ್ತಿಯ ಕಟ್ಟೋ,
ಬುತ್ತಿಯ ಕಟ್ಟಿದರೆ ಎತ್ತಲಾದರು ಉಣಬಹುದು
ಧರ್ಮವೆಂಬ ಘಡಕೆಯಲ್ಲಿ ನಿರ್ಮಲಮನ ಗಂಗೆ
ತುಂಬಿ ಸುಮ್ಮನ ದುರಿಯಹಚ್ಚಿ ಒಮ್ಮನಕನ್ನವ
ಮಾಡಿ ಅರಿವು ಎಂಬ ಅರಿವೆ ಹಾಸಿ ಹರವಿ ಹಾಲ
ಮೊಸರ ಕಳಿದು, ಪರಮ ವೈರಾಗ್ಯದಿಂದೆ ಶ್ರೀ
ಹರಿಗೆ ಅರ್ಪಿತವೆಂದು
ಕರ್ತೃ ಪುರಂದರವಿಠಲನ ತತ್ತ್ವವೆಂಬ ಬುತ್ತಿ
ಯನ್ನು ಹತ್ತಿರ ತಂದಿಟ್ಟುಕೊಂಡು, ನಿತ್ಯಉಂಡು
ತೃಪ್ತಿ ಪಡಕೊ.

ಕಲಿಪ್ರಭಾವದಿಂದ ಜನ ಮಾಡುವ ದೌರ್ಜನ್ಯ ಕಾರ್ಯವನ್ನು ಸ್ವಾರಸ್ಯ ವಾಗಿ ವರ್ಣಿಸಿದ್ದಾರೆ.

ಪಟ್ಟದರಸಿಯ ಬಿಟ್ಟು ಪರಸತಿಯ ಬಯಸುವರು
ಕೊಟ್ಟಸಾಲವ ನುಂಗಿಕೊಳಲೆಣಿಸಿಪರು, ಮುಟ್ಟಿ
ಭಾಷೆಯ ಕೊಟ್ಟು ಮೋಸವನೆ ಮಾಡುವರು,
ಕಂಡುದನೆ ಹೇಳರು ಕಾಣದನೆ ಹೇಳುವರು ಉಂ
ಡಮನೆಗೆರಡನ್ನೆ ಬಗೆಯುತಿಹರು ಕೊಂಡಾಡಿ
ಬೇಡಿದರೆ ಕೊಡರೊಂದು ರುವ್ವಿಯನು ದಂಡಿಸಿ
ಕೇಳುವರಿಗೆ ಧನವ ಕೊಡುತಿಹರು ಮಾಡಿದು
ಪಕಾರವನು ಮರೆತು ಬಿಡುವರು ಮತ್ತೆ ಕೂಡಲೇ
ಕಾಡುವರು ಕಪಟದಿಂದ, ರೂಢಿಯೊಳಗೆ ನಮ್ಮ
ಪುರಂದರವಿಠಲನ್ನ ಪಾಡಿಪೊಗಳದೆ ನಾಡ ವಾರ್ತೆ
ಯಾಡುವರು, ಕಲಿಯುಗದ ಮಹಿಮೆಯು ಕಾಣ
ಬಂಕೀಗ !

ಶುದ್ಧಮನಸ್ಸಿನಿಂದ ಭಗವಂತನನ್ನು ಬೇಡಲು, ಪ್ರಾರ್ಥಿಸಲು ನಮಗೆ ಅರ್ಹತೆಯುಂಟೆ? ಅಂದಿರುವ ಕೊಳೆ ಅದೆಷ್ಟು? ಅದರ ಬಗೆ ಎಷ್ಟು ?

ಶಿಶುಮೋಹ, ಸತಿಮೋಹ,ಜನನಿಜನಕರಮೋಹ
ರಸಿಕ ಭ್ರಾತರ ಮೋಹ ರಾಜಮೋಹ, ಪಶು
ಮೋಹ, ಭೂಮೋಹ, ಬಂಧುವರ್ಗದ ಮೋಹ,
ಅಸುರಾರಿನಿನ್ನಮರೆತೆನೊ ಅಕಟಕಟಾಯೋ ಹರಿ?
ಅನ್ನಮದ ಅಖಿಳ ವೈಭವದ ಮದ ಮುನ್ನ ಪ್ರಾ
ಯದ ಮದ ಧಾತ್ರಿವಶವಾದ ಮದ ಇನ್ನುತನಗೆ
ದುರಿಲ್ಲವೆಂತೆಂಬೊ ಮದದಿಂದ ಬಿನ್ನಹಕೆ ಬಾಯಿ
ಲ್ಲ,ಅನಂತ ಅಪರಾಧ ಎನ್ನಲ್ಲಿ ಇದಲಾಗಿ! ಇಷ್ಟು
ದೊರಕಿದರೆ ಮತ್ತಿಷ್ಟು ಬೇಕೆಂಬಾಸೆ ಅಷ್ಟು
ದೊರಕಿದರೆ ಮತ್ತಷ್ಟು ಆಸೆ, ಕಷ್ಟ ಬೇಡೆಂಬಾಸೆ
ಕಡು ಸುಖದ ಕಾಂಬಾಸೆ !

ಈ ಅಹಂಕಾರ ಆಸೆಗಳ ಜಂಜಾಟದಲ್ಲಿ ಸ್ಥಿರಮನಸ್ಸು, ಭಕ್ತಿ, ಚಿತ್ತೈಕಾಗ್ರತೆ ಬರುವುದು ಸಾಧ್ಯವೆ ? ಕವಲಿಲ್ಲದ ಮನವಿದ್ದರೆ ತಾನೆ ದೈವ ಕೃಪೆ? ಮನದ ಕವಲನ್ನು—ಕತ್ತಲನ್ನು....ಕೊಳೆಯನ್ನು ಕಳೆಯುವ ಪ್ರಯತ್ನ ಮಾಡುವುದು ವಿವೇಕಿಗಳ ಕರ್ತವ್ಯವಲ್ಲವೆ ?

ಆಧ್ಯಾತ್ಮಿಕವಾಗಿಯೂ, ಪ್ರಾಪಂಚಿಕವಾಗಿಯೂ, ಚಿರಸತ್ಯವಾಗಿಯೂ ಆದ, ಮಾನವರನ್ನು ಎಚ್ಚರಿಸುವ, ನಡತೆಗೆ ದಿಕ್ಸೂಚಿಯಾಗಿರುವ ನುಡಿಗಳು ಇಲ್ಲಿವೆ.

ಆರೋಗ್ಯ ಆಯುಷ್ಯ ಐಶ್ವರ್ಯವೆಂಬುದು ಮೂ
ರು ವಿಧವಸ್ತುಗಳು ನಾರಾಯಣನ ಭಜಕರಾದ
ವರ ಸಾಧನಕೆ ಪೂರಣವಾಗಿಪ್ಪವೊ; ಘೋರವ್ಯ
ಭಿಚಾರ ಪರನಿಂದೆ ಪರವಿತ್ತಾಪಹಾರ ಮಾಡಿದ
ದೋಷದಿ ದಾರಿದ್ರರಾಗುವರು ಈ ಮೂರು
ವಿಧದಿಂದಲಿ !

ಎಂದು ಶ್ರೀ ಗೋಪಾಲದಾಸರು ಸ್ಪಷ್ಟವಾಗಿ ನುಡಿದಿದ್ದಾರೆ.

ಲೋಕದಲ್ಲಿ ಎಷ್ಟು ಹತ್ತಿರದವರೂ ಆಪತ್ತಿಗಾಗದವರು ಎಂಬುದು ಸಾಮಾನ್ಯವಾಗಿ ಎಲ್ಲ

ರಿಗೂ ಅನುಭವದ ಮಾತು. ಜೀವನಿಗೆ ಏನು ಬೇಕು ಎಂಬುದನ್ನು ಬಲ್ಲವನು ಭಗವಂತನೊಬ್ಬನೇ. ಅವನ ಕೃಪೆಯನ್ನು ಮಾತ್ರ ನಾವು ಸಂಪಾದಿಸಬೇಕು. ಪೆಚ್ಚು ಪೆಚ್ಚಾಗಿ ಏನೇನೋ ಬೇಡಲು ಹೋಗಬಾರದು ಎಂಬ ತತ್ತ್ವವನ್ನು ಶ್ರೀ ಗೋಪಾಲ ದಾಸರು ದೃಷ್ಟಾಂತ ಪೂರ್ವಕವಾಗಿ ಸಚಿತ್ರವಾಗಿ ಬಣ್ಣಿಸಿದ್ದಾರೆ.

ಏನು ಬೇಡಲೊ ನಿನ್ನ ಬಳಿಗೆ ಬಂದು,
ನೀನಿತ್ತ ಸೌಭಾಗ್ಯ ನಿಬಿಡವಾಗಿದೆ ಎನಗೆ;
ಜನನಿಯನು ಕೊಡು ಎಂದು ಜಗದೀಶ ಬೇಡುವೆನೆ
ಜನನಿಯೇ ನಿತ್ತಳಾ ಧೃವರಾಯಗೆ?
ಜನಕನ ಕೊಡು ಎಂದು ಜಯವಂತ ಬೇಡುವೆನೆ
ಜನಕನೇನಿತ್ತ ನಾ ಪ್ರಹ್ಲಾದಗೆ?
ಅನುಜನಾ ಕೊಡು ಎಂದು ಅತಿಶಯಾದಿ ಬೇಡುವೆನೆ
ಅನುಜ ನೇನಿತ್ತನಾ ನಾ ಕಲಿವಾಲಿಗೆ?
ಧನವನೇ ಕೊಡು ಎಂದು ದೈನ್ಯದಲಿ ಬೇಡುವನೆ
ಧನಗಳಿಸಿದ ಸುಯೋಧನನೇನಾದ ಕೊನೆಗೆ?
ಸತಿಯಳ ಕೊಡು ಎಂದು ಮತಿವಂತ ಬೇಡುವೆನೆ
ಸತಿಯಿಂದ ದ್ಯು[2] ನಾಮ ವಸುಶಿನ ಕಂಡ್ಯ?
ಸುತರನೇ ಕೊಡು ಎಂದು ಸುಖದಿನಾ ಬೇಡುವೆನೆ
ಸುತರಿಂದ ಧೃತರಾಷ್ಟ್ರ ಗತಿಯೇನು ಕಂಡ್ಯ
ಬಂಧುಗಳ ಕೊಡು ಎಂದು ಚೆಂದದಲಿ ಬೇಡುವೆನೆ
ಬಂಧುಗಳೇ ನಿತ್ತರಾ ಗಜರಾಜಗೆ?
ಅಂದಣವ ಏರುವ ಭಾಗ್ಯವನು ಬೇಡುವೆನೆ
ಅಂದಣವನೇರಿದ ನಹುಷ ನೇನಾದ ಕೊನೆಗೆ?
ಬೇಡುವನೆ ನಾನೊಂದು ಬೇಡತಕ್ಕುದ ದೇವ
ನೀಡೆನೆಂದು ನಿನ್ನ ಮನದೊಳಿತ್ತೆ ಮೂಡಲಾ
ದ್ರೀಶ ಗೋಪಾಲವಿಠ್ಠಲರಾಯ
ಬೇಡದಂದದಿ ಪಾರು ಮಾಡಯ್ಯ ದೊರೆಯೆ.

ನಿಷ್ಕಾಮ ಭಕ್ತಿಯಿಂದ ಭಗವಂತನನ್ನು ಅರ್ಚಿಸಿ ಎಲ್ಲವನ್ನೂ ಅವನಿಗೆ ಬಿಡುವುದು ಉತ್ಕೃಷ್ಟರೀತಿ ಎಂಬ ತಾತ್ಪರ್ಯವುಳ್ಳ ಈ ಕೃತಿ ಬಹು ಅರ್ಥಗರ್ಭಿತವಾದುದು. "ಕರ್ಮವನ್ನು ತ್ರಿಕರಣ ಶುದ್ಧಿಯಿಂದ ಮಾಡಿ ಫಲದ ವಿಚಾರವನ್ನು ನನಗೆ ಬಿಡು" (ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ.) ಎಂದಲ್ಲವೆ ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೇಳುತ್ತಿರುವುದು?

ಲೋಕವಲ್ಲಿ ಜನ ಅನೇಕ ಹಬ್ಬಗಳನ್ನು ಆಚರಿಸುತ್ತಾರೆ. ಅದರ ಪರಿ ಎಲ್ಲರಿಗೂ ಅನುಭವದ ವಿಷಯವಾದರೆ, ಹರಿದಾಸರು ವರ್ಣಿಸಿರುವ ಹಬ್ಬದ ವೈಖರಿಯೇ ಬೇರೆ.

ಕಾಮ ಕ್ರೋಧ ಬಿಡುವುದೇ ಹಬ್ಬ,
ಕಾಮನ ಉಪಹತಿಗೆ ಅಂಜುವುದೇ ಹಬ್ಬ,
ಭೂಮಿಯೊಳಗೆ ಜ್ಞಾನಿಯಾಗುವುದೆ ಹಬ್ಬ,
ಬಂದ ಅತಿಥಿಗಳ ಪೂಜಿಸಲಾವುದೇ ಹಬ್ಬ
ನಿಂದಕ ಜನರಲ್ಲಿ ಬೆರೆಯದಿಪ್ಪುದೆ ಹಬ್ಬ
ಅಂದರೆ ನಗುತ ಸಂತೋಷಪಡುವುದೆ ಹಬ್ಬ,
ಇಂದು ನಾಳೆಗೆಂಬ ಚಿಂತೆ ಬಿಡುವುದೆ ಹಬ್ಬ,
ಋಣರೂಪವಾಗದ ಸಂಸಾರವೇ ಹಬ್ಬ,
ಮನೆ ನೆರೆಹೊರೆ ನೋಡಿ ಬಳಲದಿಪ್ಪುದೆ ಹಬ್ಬ,
ಚಿನುಮಯ ಮೂರುತಿ ವಿಠಲ ವಿಠಲನ
ಮನಸಿನೊಳು ಈಕ್ಷಿಸುವುದೆ ಹಬ್ಬ,
ಹಾಳು ಹರಟೆ ಬಿಟ್ಟು ಹೊತ್ತು ಕಳೆಯುವುದೆ ಹಬ್ಬ,
ಫಾಲಲಿಪಿಗೆ ಮನ ನೋಯದಿಪ್ಪುದೆ ಹಬ್ಬ,
ಬೀಳುನುಡಿಗಳ ಬಿಟ್ಟುಕೊಡುವುದೇ ಹಬ್ಬ,
ದಂಪತಿಗಳು ಏಕವಾಗಿಪ್ಪುದೆ ಹಬ್ಬ,
ಶಂಪದಂತೆ ವಿಜಯ ವಿಠಲ ಪೊಳೆವುದೇ ಹಬ್ಬ

Give respect and take respect ಎಂಬುವಂತೆ ಇತರರನ್ನು ನಾವು ಗೌರವದಿಂದ ಕಂಡರೆ ನಮಗೂ ಗೌರವ ದೊರೆಯುವುದರಲ್ಲಿ ಸಂದೇಹವಿಲ್ಲ.

"ನಿಂದಿಸುವರೆಲ್ಲ ನಿಂದ್ಯರಾಗುವರು, ಅಭಿವಂದಿವ ಜನರು ಜಗದೊಳು ಜನರಿಂದ ವಂದ್ಯರಾಗುವರು

---

2. 'ದ್ಯು' ಎಂಬ ಅಷ್ಟವಸುಗಳಲ್ಲಿ ಒಬ್ಬನು, ಹೆಂಡತಿಯನ್ನು ತೃಪ್ತಿಗೊಳಿಸುವ ಸಲುವಾಗಿ, ಕಾಮಧೇನುವನ್ನು ಬಲಾತ್ಕಾರವಾಗಿ ಎಳೆದು ಸೋದರರೊಡನೆ ಶಾಪಕ್ಕೆ ಗುರಿಯಾಗಿ ಭೀಷ್ಮಾಚಾರ್ಯನಾಗಿ ಭೂಮಿಯಲ್ಲಿ ಅವತರಿಸಿದನು.

"ತಿಳಿಯುವುದೆ ಪುಣ್ಯ, ತಿಳಿಯದುದೆ ಪಾಪ"
" Knowledge is virtue, Ignorance) is vice "
ಎಂದು ಶ್ರೀ ಜಗನ್ನಾಥದಾಸರು ಹೇಳಿದಂತೆ ಜ್ಞಾನಿಗಳಾಗಿ, ಸದಾಚಾರ ಸದ್ಧರ್ಮ ನಿರತರಾಗಿ, ಇಹಪರಗಳೆರಡನ್ನೂ ಸಾಧಿಸುವ ಕತೆಯನ್ನು ಈ ಸಂತಸಾಹಿತ್ಯ ಕನ್ನಡಿಗರಿಗೆ ಕಲಿಸುವ ಕಾಮಧೇನುವಾಗಿ ನಿಂತಿದೆ.

ಇಂತಹ ಉದ್ಧಾರಕ ಸಾಹಿತ್ಯದ ಪರಿಚಯವನ್ನು ಪಡೆಸು ಅರಿವಿನ ಅಮೃತವನ್ನು ಅಸ್ವಾದಿಸಿ, ಆಮಯಗಳನ್ನು ಮಾಯೆಗೊಳಿಸಿ ಹೃದಯಕಮಲವನ್ನು ಅರಳಿಸಿಕೊಂಡು ಬದುಕನ್ನು ಬಂಗಾರ ಮಾಡಿ ಕೊಳ್ಳುವ ಬುದ್ಧಿಯನ್ನು ಹರಿಹರರು ನಮಗೆಲ್ಲ ಕರುಣಿಸಲಿ.

**—ಡಾ|| ಕೆ. ಎಂ. ಕೃಷ್ಣರಾವ್**

---

'ಶಂಪದಂತ್ತೆ — ಮಿಂಚಿನಂತೆ ಹೊಳೆದು ಪರಮಾತ್ಮನ ಅಪರೋಕ್ಷ ಜ್ಞಾನವನ್ನು ಪಡೆಯುವುದೇ ಹಬ್ಬ.

# ಕನ್ನಡದಲ್ಲಿ ಪ್ರಥಮಾ ವಿಭಕ್ತಿ

ವಿಭಕ್ತಿ ಪರಿಜ್ಞಾನವು ಭಾಷಾಮನೀಷೆಗೆ ಮುಖ್ಯವಾದ ತಳಹದಿ. ಭಾಷೆಯನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡುವಲ್ಲಿ ಬರುವ ಪ್ರಮುಖ ವಿವರಣದ ವಿಷಯವದು. ಆದುದರಿಂದ ಭಾಷೆಯ ಶುದ್ಧಾಶುದ್ಧತೆಯನ್ನು ನಿರ್ಣಯಿಸುವ ವ್ಯಾಕರಣದಲ್ಲಿಯೂ ಸ್ವರೂಪ ನಿಷ್ಪತ್ತಿಯನ್ನು ಸಾಹಜಿಕವಾಗಿ ವಿವೇಚಿಸುವ ಭಾಷಾಶಾಸ್ತ್ರದಲ್ಲಿಯೂ ವಿಭಕ್ತಿಗಳ ವಿವರಣ ಬಂದೇಬರುತ್ತದೆ.

ಪದದ ಅರ್ಥವನ್ನು ವಿಭಾಗಿಸಿ ವಾಕ್ಯದಲ್ಲಿ ಅವುಗಳ ಪರಸ್ಪರ ಸಂಬಂಧವನ್ನು ತೋರಿಸಿ ಕೊಡುವ ಪ್ರತ್ಯಯವು 'ವಿಭಕ್ತಿ' ಎನಿಸುವುದು. ಆದುದರಿಂದ ಅದು ಪದಗಳ ನಂಟು. ಸ್ಪಷ್ಟವಾಗಿಯಾಗಲೀ ಅಧ್ಯಾಹಾರವಾಗಿಯಾಗಲೀ ವಿಭಕ್ತಿಯಿಲ್ಲದ ಶಬ್ದಗಳಿಂದ ವಾಕ್ಯವಾಗದು; ಯಾವೊಂದು ಪೂರ್ವಾಭಿಪ್ರಾಯವೂ ವ್ಯಕ್ತವಾಗದು. ವಿಭಕ್ತಿರಹಿತ ಶಬ್ದಕೂಟವು ಪರಸ್ಪರವಾಗಿ ಕಂಡರಿಯದ, ಕೇಳಿ ತಿಳಿಯದ ಮಾತರಿಯದ ಅಪರಿಚಿತ ವ್ಯಕ್ತಿಗಳ ಸೇರಿಕೆಯಂತೆ ನಿರರ್ಥಕ. ಆದುದರಿಂದಲೇ ಭಾಷೆಯಲ್ಲಿ ವಿಭಕ್ತಿಗಳ ಸ್ಥಾನ ಹಿರಿದು. ಇವುಗಳಲ್ಲಿ ನಾಮವಿಭಕ್ತಿರೂಪಗಳು, ಅವುಗಳ ಸಂಖ್ಯೆಯ ವಿಷಯಗಳಲ್ಲಿ ವಿದ್ವಾಂಸರ ವಾದಗಳು ನಡೆಯುತ್ತ ಬಂದಿವೆ. ಅವುಗಳಲ್ಲಿ ಪ್ರಥಮಾವಿಭಕ್ತಿಯನ್ನು ಕುರಿತ ಒಂದು ಚಿಕ್ಕ ವಿವೇಚನೆಯೇ ಪ್ರಕೃತ ಲೇಖನದ ಗುರಿ.

ಕನ್ನಡದಲ್ಲಿ ಪೂರ್ವವೈಯಾಕರಣರಾದ ನಾಗವರ್ಮ, ಕೇಶಿರಾಜ, ಭಟ್ಟಾಕಲಂಕರು ಕನ್ನಡದಲ್ಲಿ ನಾಮವಿಭಕ್ತಿಗಳು ಏಳೆಂದು ತಿಳಿಸುತ್ತ, ಪ್ರಥಮಾ ವಿಭಕ್ತಿ ಪ್ರತ್ಯಯವು "ಮ್" ಎಂಬುದೆಂದು ತಿಳಿಸಿದ್ದಾರೆ. ಈ ಪ್ರಥಮಾವಿಭಕ್ತಿ ಲಿಂಗ-ಅರ್ಥ-ವಚನ ಸಂಬೋಧನಗಳಲ್ಲಿ ವರ್ತಿಸುವುದೆಂದು ಶಬ್ದಮಣಿದರ್ಪಣದಲ್ಲಿ ತಿಳಿಸಿದೆ. ಈ "ಮ್" ಎಂಬುದು ವ್ಯಂಜನವಲ್ಲ; ಇದು ಅನುಸ್ವಾರದ ಉಚ್ಚಾರಣೆ. (ಮೋಽನುಸ್ವಾರಃ). ಇದನ್ನು ಕೆಳಗಿನ ಸೂತ್ರವು ಸ್ಪಷ್ಟೀಕರಿಸಿದೆ—

> ಬಿಂದುವದಂತಕ್ಕುಟುದೆಡೆ
> ಗೆಂದುಂ ಪ್ರಥಮೈಕವಚನದೊಳ್ ಲೋಪವಮುದಂ
> ತಂ ದೊರೆವಡೆದಿದಿರೊಳ್ ಸ್ವರ
> ಮೊಂದಿರೆ ಪುಲ್ಲಿಂಗದಲ್ಲಿ ನಾಗಮುಮಕ್ಕುಂ
>
> (ಶ.ದ.ಸೂ.105)

ಅಕಾರಾಂತಶಬ್ದಗಳ ಪ್ರಥಮಾ ವಿಭಕ್ತಿಯ ಅನುಸ್ವಾರಕ್ಕೆ ಸ್ವರ ಪರವಾದಾಗ ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ "ನ್" ಎಂಬುದೂ, ನಪುಂಸಕದಲ್ಲಿ "ಮ್" "ನ್" ಎಂಬಿವೆರಡೂ, ಸಂಸ್ಕೃತಶಬ್ದವಾಗಿದ್ದರೆ ನಪುಂಸಕಲಿಂಗದಲ್ಲಿ "ಮ್" ಎಂಬುದೂ ಬರುವುದು. ರಾಮಂ, ಜಲಂ, ಕೊಳಂ—ಎಂಬ ಪ್ರಥಮಾವಿಭಕ್ತಿ ಪದಗಳಿಗೆ ಪ್ರತ್ಯಯ ಸ್ವರಗಳು ಪರವಾಗಿ ರಾಮನಂ, ಜಲಮಂ, ಕೊಳಮಂ, (ಕೊಳನಂ) – ಎಂಬ ರೂಪಗಳಾಗುತ್ತವೆ. ಈ ವಿಭಕ್ತಿಯ ಅನುಸ್ವಾರಕ್ಕೆ ಬಂದ ಮಕಾರಕ್ಕೆ ಸ್ವರ ಪರವಾದಾಗ ಆ "ಮ" ಕಾರಕ್ಕೆ "ವ" ಕಾರಾದೇಶವಿದೆ. ಉದಾ:—ಕಾಣ್ಬಂದವೆಂತು; ಶೌಚವಣ್ಮು. ಹೊಸಗನ್ನಡದಲ್ಲಿ ಈ ವ್ಯಂಜನಾಂಶವನ್ನು ಸ್ವರಾಂಶಗೊಳಿಸುವ ಪರಿಪಾಠವಿರುವುದರಿಂದ ಮರಂ+ಉ= ಮರವು; ಕೊಳಂ+ಉ=ಕೊಳವು ಇಂತಹ ರೂಪಗಳಾಗಿವೆ. ಹೊಸಗನ್ನಡದಲ್ಲಿ ಮರವು; ಮರ

ವನ್ನು—ಎಂಬಿವನ್ನು ಸಂಧಿ ವಿಂಗಡಿಸುವಾಗ ಕೆಲವರು ಮರ+ಉ, ಮರ+ಅನ್ನು ಹೀಗೆ ತಪ್ಪಾಗಿ ವಿಂಗಡಿಸಿ, ಈ ಸಂಧಿಕಾರ್ಯಗಳನ್ನು "ವಕಾರಾಗಮ" ಎನ್ನುವುದುಂಟು; ಇದು ಸರಿಯಲ್ಲ. ಮರಂ+ಉ, ಮರಂ+ಅನ್ನು-ಎಂಬಿವೇ ಸರಿ. ಹೀಗೆ ಸಂಧಿಯಾದಾಗ ಬಂದಿರುವ ಮ ಕಾರಕ್ಕೆ ವ ಕಾರವು ಆದೇಶವಾಗಿದೆ— ಎಂಬುದೇ ಸಂಧಿಕಾರ್ಯದ ಶುದ್ಧವಿವರಣೆ. ಇದನ್ನೇ ಕಾಲ್ಡ್‌ವೆಲ್ಲರು ಹೀಗೆಂದಿದ್ದಾರೆ :—

Modern Canarese appears to make no use of am (ಅಂ) whatever, either in the singular or the plural, but it is evident that the final vu (ವು) of many canarese nouns is a soffened form of m (ಮ್)

ಪ್ರಥಮಾ ವಿಭಕ್ತಿಯ ಅನುಸ್ವಾರದ ಮಕಾರವನ್ನು ವಕಾರವಾಗಿ ಪರಿವರ್ತಿಸಿದುದಕ್ಕೆ ಕಾವ್ಯಗಳಲ್ಲಿ ಉದಾಹರಣೆಗಳಿವೆ:—

ಪದಪಿಂ ಪೇಟ್ವೊಪಡದತ್ಯನೂನ
ಪದವತ್ಯಾಶ್ಚರ್ಯವತ್ಯುಜ್ವಲ
ಪ್ರದವತ್ಯೂರ್ಜಿತವತ್ಯಸಾಧ್ಯಗುಣವ
ತ್ಯಾನಂದವತ್ಯುನ್ನತಂ ||

[ಗಿರಿಜಾ ಕಲ್ಯಾಣ ೪—೧೨]

ಹಳಗನ್ನಡದಲ್ಲಿ ಅಕಾರಾಂತ ಪುಲ್ಲಿಂಗದ ಪ್ರಥಮಾ ವಿಭಕ್ತಿಯ ಅನುಸ್ವಾರವನ್ನು "ನ್" ಎಂದೇ ಹಲವರು ನಿರ್ಣಯಿಸಿದ್ದಾರೆ. ಆ ಪ್ರಥಮಾ ವಿಭಕ್ತಿಯ ಅನುಸ್ವಾರಕ್ಕೆ ಸ್ವರ ಪರವಾದಾಗ ನಕಾರವಾಗುವುದೂ ಹೊಸಗನ್ನಡದಲ್ಲಿ ರಾಮನು, ಈಶ್ವರನು—ಎಂಬುದಾಗಿ ನಕಾರಾಂತವಾಗಿಯೇ ಉಚ್ಚರಿಸುವುದೂ ಈ ನಿರ್ಣಯಕ್ಕೆ ಪ್ರಮಾಣಗಳನ್ನೊದಗಿಸುತ್ತವೆ. ಇವಲ್ಲದೆ ಪ್ರಾಕ್ಕಿನ ಕಾರಣಗಳೂ ಇವೆ. ತಮಿಳಿನಲ್ಲಿ ರಾಮನ್, ಕೃಷ್ಣನ್ ಎಂದು ಪ್ರಥಮಾ ವಿಭಕ್ತಿಯ ಪ್ರತ್ಯಯವು ನಕಾರವಾಗಿಯೇ ಇದೆ. ಈ ತಮಿಳಿಗೆ ಸಮೀಪವರ್ತಿಯೆನಿಸಿರುವ ಪೂರ್ವದ ಹಳಗನ್ನಡದಲ್ಲಿ ಬರೆದ ಕೆಲವು ಶಾಸನಗಳಲ್ಲಿ ಮುನಿಪ್ರವರನ್, ವಿಪರೀತನ್ — ಇತ್ಯಾದಿಯಾಗಿ 'ನ್' ಎಂಬ ಪ್ರಥಮಾಂತ ಪದಗಳಿವೆ. ಇವನ್ನು ಲೆಕ್ಕಿಸಿದ ಕನ್ನಡ ಭಾಷಾಸಂಶೋಧಕರು ಕೆಲವರು ಅಕಾರಾಂತ ಪುಲ್ಲಿಂಗ—ಸ್ತ್ರೀಲಿಂಗಗಳ ಪ್ರಥಮಾ ವಿಭಕ್ತಿ ಪ್ರತ್ಯಯವನ್ನು "ನ್" ಎಂದು ಎಣಿಸಿದ್ದಾರೆ. ಈ ಎಣಿಕೆಯ ಮುಂದುಹೆಜ್ಜೆಯಾಗಿ "ಶ್ರೀ" ಯಂಥವರು ತಮ್ಮ ಹಳಗನ್ನಡದ ಸಾಹಿತ್ಯ ಸೃಜನದಲ್ಲಿ "ನ್" ಎಂಬುದನ್ನೇ ಪ್ರತ್ಯಯವಾಗಿ ಬಳಸಿಕೊಂಡರು. ಪ್ರಥಮೆಯಲ್ಲಿ ಮಾತ್ರವೇ ಅಲ್ಲ, ದ್ವಿತೀಯೆ—ತೃತೀಯೆಗಳಲ್ಲಿಯೂ ಅನುಸ್ವಾರವನ್ನುಳಿದು ವ್ಯಂಜನದ ನಕಾರವನ್ನೇ ಪ್ರಯೋಗಿಸಿರುವರು—

" ತೂಗಿದನ್ ತಲೆಯನ್
ಚಚ್ಚಿದನ್; ಧೊಪ್ಪೆನುತೆ ಕೆಡೆದನ್
ಆ ಕೆಡೆದ ಪೆಣಬಣಬೆಯೊಳ್
ತಱಿದನ್ ಬಲ್ಪಿಡಿಯುಗುರ್ಗಳಿನ್ ನವಿರ್ಗಳನ್

(ಅಶ್ವತ್ಥಾಮನ್, ಪುಟ ೧೩)

ತಮಿಳಿನ ಅನುಕರಣದಿಂದ ಮೂಡಿದ ಇಂಥಾ ಕೆಲವೇ ಆದ ಪ್ರಯೋಗಗಳನ್ನು ಬಿಟ್ಟರೆ ಕನ್ನಡದ ಪ್ರಾಚೀನ ಕಾವ್ಯಗಳಲ್ಲಿ ಇಂತಹ ವಿಭಕ್ತಿ ಪ್ರಯೋಗವು ಕಾಣುವುದಿಲ್ಲ. ಈ ತೆರದ ಪ್ರಯೋಗವು ಉಚ್ಚಾರಣ ಸೌಲಭ್ಯವೇ ವೈಶಿಷ್ಟ್ಯವಾಗುಳ್ಳ ಕನ್ನಡಕ್ಕೆ ಒಪ್ಪುವುದಿಲ್ಲವೆಂದು ಹಿಂದಿನ ಕನ್ನಡ ಕವಿಗಳು ಪ್ರಥಮಾವಿಭಕ್ತಿ ಪ್ರತ್ಯಯವನ್ನು ತಮಿಳಿನಂತೆ ನಕಾರವಾಗಿಟ್ಟುಕೊಳ್ಳದೆ, ಅನುಸ್ವಾರವನ್ನೆ ಇಟ್ಟುಕೊಂಡರು—ಎಂಬುದು ಕವಿರಾಜಮಾರ್ಗ, ವಡ್ಡಾರಾಧನೆ, ವಿಕ್ರಮಾರ್ಜುನ ವಿಜಯ ಮುಂತಾದ ಗ್ರಂಥ ಪ್ರಯೋಗಗಳಿಂದ ತಿಳಿದುಬರುವುದು ; ವ್ಯಾಕರಣಗ್ರಂಥಗಳಿಂದಲೂ ವೇದ್ಯವಾಗುವುದು. 'ನ್' ಎಂಬ ಪ್ರತ್ಯಯವನ್ನಿಡು

ವುದಕ್ಕಿಂತ ಹೊಸಗನ್ನಡದ ರೂಪದಂತೆ ಪ್ರತ್ಯಯ ಲೋಪ ಮಾಡಿ ರಾಮ ಬಂದ, ಅಕ್ಕ ಬಂದಳು ಎಂಬಂತೆ ಪ್ರಯೋಗಿಸುವುದೇ ಚೆನ್ನೆನಿಸಬಹುದು.

ಹಳಗನ್ನಡದ ಅಕಾರಾಂತ ಪುಲ್ಲಿಂಗದ ಪ್ರಥಮೈಕವಚನದಲ್ಲಿ 'ನ್' ಎಂಬುದನ್ನು ಪ್ರತ್ಯಯ ವಾಗಿ ಒಪ್ಪಿಕೊಂಡ ಆಧುನಿಕರು ಅಕಾರಾಂತ ನಪುಂಸಕಲಿಂಗದ ಏಕವಚನದಲ್ಲಿ (ಮರಂ ಎಂಬಂತೆ) ಅನುಸ್ವಾರವನ್ನೆ ಪ್ರತ್ಯಯವಾಗಿ ಉಪ ಯೋಗಿಸುವರು; "ಮ್" ಎಂಬುದನ್ನೇಕೋ ಉಪಯೋಗಿಸುವುದಿಲ್ಲ.

ಅಕಾರಾಂತ ನಾಮಪ್ರಾತಿಪದಿಕಗಳಿಗೆ ಪ್ರಥಮಾ ವಿಭಕ್ತಿಯಾಗಿ ಅನುಸ್ವಾರವಿದ್ದರೂ ನಡು ಗನ್ನಡ ಕಾಲದಿಂದಲೇ ಇದರ ಉಲ್ಲಂಘನೆ ನಡೆ ದಿದೆ. ಉದಾ :— ಗದುಗು ಭಾರತದಲ್ಲಿ—

ಅರಸುಗಳಿಗಿದು ವೀರ, ದ್ವಿಜರಿಗೆ
ಪರಮವೇದದ ಸಾರ ಯೋಗೀ
ಶ್ವರರ ತತ್ವವಿಚಾರ ಮಂತ್ರಿ ಜನಕ್ಕೆ ಬುದ್ಧಿಗುಣ
(ಆದಿಪರ್ವ. ಸಂ. ೨, ಪದ್ಯ ೧೪)

ಹೀಗೆ ಪ್ರಥಮೆಯಲ್ಲಿ ಪ್ರತ್ಯಯ ಲೋಪ ವಿದ್ದರೂ ದ್ವಿತೀಯೆ ಮುಂತಾದ ಮುಂದಿನ ವಿಭಕ್ತಿ ಗಳು ಬಂದಾಗ ಪ್ರಥಮೆಗೆ ಲೋಪವಿರುವುದಿಲ್ಲ. ಅಕಾರಾಂತ ನಪುಂಸಕದಲ್ಲಿ ಆ ಪ್ರತ್ಯಯವು ದ್ವಿತೀಯೆಯಲ್ಲಿ ಕಾಣಿಸಿ, ಮುಂದೆ ಲೋಪವನ್ನು ಹೊಂದುವುದು. ಉದಾ :—

| ಪುಲ್ಲಿಂಗದಲ್ಲಿ | ಸ್ತ್ರೀಲಿಂಗದಲ್ಲಿ | ನಪುಂಸಕದಲ್ಲಿ |
|---|---|---|
| ರಾಮ | ಅಕ್ಕ | ಮರ (ಪ್ರತ್ಯಯಲೋಪ) |
| ರಾಮನನ್ನು | ಅಕ್ಕನನ್ನು | ಮರವನ್ನು (ಪ್ರ. ವಿಭಕ್ತಿಯಿದೆ.) |
| ರಾಮನಿಂದ | ಅಕ್ಕನಿಂದ | ಮರದಿಂದ |
| ರಾಮನಿಗೆ | ಅಕ್ಕನಿಗೆ | ಮರಕ್ಕೆ |
| ರಾಮನತ್ತಣಿಂದ | ಅಕ್ಕನತ್ತಣಿಂದ | ಮರದತ್ತಣಿಂದ |
| ರಾಮನ | ಅಕ್ಕನ | ಮರದ |
| ರಾಮನಲ್ಲಿ | ಅಕ್ಕನಲ್ಲಿ | ಮರದಲ್ಲಿ |

ಭಾಷಾಶಾಸ್ತ್ರಜ್ಞಾನಿಗಳು ಕನ್ನಡದಲ್ಲಿ ಪ್ರಥಮಾ ವಿಭಕ್ತಿಯಿಲ್ಲವೆನ್ನಲು ಕೊಡುವ ಕಾರಣಗಳನ್ನು ಈ ಕೆಳಗಿನಂತೆ ಸಂಕ್ಷೇಪಿಸಬಹುದು:—

1. 'ಮ್' ಎಂಬುದು ಪ್ರಥಮಾ ವಿಭಕ್ತಿಯ ಪ್ರತ್ಯಯವಾದರೆ, ಅದು ಅಕಾರಾಂತ ವಲ್ಲದ ಶಬ್ದಗಳಿಗೂ ಸೇರಬೇಕಾಗಿತ್ತು.

2. ಅಕಾರಾಂತ ಬಹುವಚನದ ಪ್ರತ್ಯಯಕ್ಕೆ ಮೊದಲಾಗಿ ಈ ಪ್ರಥಮಾ ವಿಭಕ್ತಿ ಪ್ರತ್ಯಯವಿದೆ. ಜನಂಗಳ್, ವೃಕ್ಷಂಗಳ್, ಮಾವಂದಿರ್ ಎಂಬಂತೆ. ಹೀಗೆ ಪ್ರತ್ಯಯವು ಮೊದಲು ಬರಬಾರದಿತ್ತು.

3. ಶಬ್ದಗಳಿಗೆ ಆಯಾ ಲಿಂಗ—ವಚನ ಅಂತ್ಯಾಕ್ಷರಗಳಿಗೆ ಅನುಗುಣವಾಗಿ ಪ್ರತ್ಯಯವು ಸೇರುವುದು ಅಥವಾ ಸೇರದಿರುವುದು ನಿಶ್ಚಿತ ನಿಯಮವೆನಿಸುವುದಿಲ್ಲ.

4. ಈ ಪ್ರತ್ಯಯವು ಕೆಲವಡೆ 'ನ್' ಕೆಲವಡೆ 'ಮ್' ಎಂದಾಗುವುದು. ಹೀಗಾಗುವುದು ನಿರ್ದಿಷ್ಟ ವಿಭಕ್ತಿ ಪ್ರತ್ಯಯವಿಲ್ಲದಿರುವುದರ ಸೂಚಕವಾಗಿದೆ. ಮ್–ನ್ ಎಂಬಿವು ಲಿಂಗಾರ್ಥ ಸೂಚಕಗಳಲ್ಲದೆ ವಿಭಕ್ತಿಪ್ರತ್ಯಯಗಳಲ್ಲ.

ಮೇಲಿನ ಆಕ್ಷೇಪಗಳಿಗೆ ಸಮಾಧಾನವನ್ನು ಹಿಂದಣ ವಿವರಣಗಳೊಡನೆ ಕೆಳಗಿನಂತೆ ಸ್ಪಷ್ಟೀಕರಿಸಬಹುದು :—

1, 4. ಮ್–ನ್ ಎಂಬಿವು ಪ್ರಥಮಾವಿಭಕ್ತಿಗೆ ಆದೇಶವಾಗಿ ಲಿಂಗಾರ್ಥಸೂಚಕವಾಗಿರುವ ರೂಪಗಳಲ್ಲದೆ ಅವೇ ಪ್ರತ್ಯಯಗಳಲ್ಲ. ಪ್ರಥಮಾ ವಿಭಕ್ತಿ ಪ್ರತ್ಯಯವು ಅನುಸ್ವಾರವೇ ಆಗಿದೆ. ಈ ಅನುಸ್ವಾರಕ್ಕೆ ಕೆಲವಡೆ ಲೋಪವಿದೆ—ಎಂದುದಕ್ಕೆ ವಿಭಕ್ತಿಯೇ ಇಲ್ಲವೆಂದು ಅರ್ಥವಾಗದು.

2. ಕನ್ನಡದಲ್ಲಿ ಸಹಜವಾಗಿ ಒಂದು ವಿಭಕ್ತಿಯ ಮುಂದೆ ಇನ್ನೊಂದು ಪ್ರತ್ಯಯವು ಬರುವ ಕ್ರಮವಿದೆ. ರಾಮನನ್ನು, ರಾಮನಿಂದ–ಎಂಬಲ್ಲೆಲ್ಲ ಪ್ರಥಮೆಯನ್ನು ಕಟ್ಟಿಕೊಂಡೇ ದ್ವಿತೀಯೆ, ತೃತೀಯೆ ಮುಂತಾದ ಮುಂದಣ ಪ್ರತ್ಯಯಗಳಿಗೆ ನನ್ನದು, ರಾಮನದು—ಎಂಬಲ್ಲಿ ಷಷ್ಠಿಯನ್ನಿಟ್ಟುಕೊಂಡೇ ಮುಂದಿನ ನಿರ್ದೇಶಕ ಸರ್ವನಾಮವು ಪ್ರಥಮಾವಿಭಕ್ತಿಯಲ್ಲಿ ಬಂದಿದೆ. ಇದರಂತೆ ಪ್ರತ್ಯಯವಿದ್ದು ಅಥವಾ ಇಲ್ಲದೆ—ಹೀಗೆ ಎರಡು ವಿಧದಿಂದಲೂ ಪ್ರಥಮಾ ವಿಭಕ್ತಿಯಾಗಬಲ್ಲ ಕನ್ನಡದಲ್ಲಿ ಬಹುವಚನ ಪ್ರತ್ಯಯವು ಪ್ರಥಮೆಯ ಮುಂದೆ ಬರುವುದು ವಿಚಿತ್ರವೇನೂ ಅಲ್ಲ; ಅಸಹಜವೂ ಅಲ್ಲ.

3. ಕನ್ನಡದಲ್ಲಿ ವಿಭಕ್ತಿ ವಿಷಯದಲ್ಲಿ ಪ್ರತ್ಯಯ ಯುಕ್ತತೆ, ಪ್ರತ್ಯಯ ಲೋಪ, ಪ್ರತ್ಯಯ ಪಲ್ಲಟ ಎಂಬ ಮೂರು ವಿಧಗಳೂ ವ್ಯವಹಾರದಲ್ಲಿವೆ. ಪ್ರಥಮೆ, ದ್ವಿತೀಯೆ, ಚತುರ್ಥಿ, ಷಷ್ಠಿ, ಸಪ್ತಮಿಗಳಲ್ಲಿ ವಿಭಕ್ತಿಲೋಪವಿದೆ :—

ಉಂಗರವಿಟ್ಟನು<br>ಮನೆ ಕಟ್ಟಿಸಿದನು } ಇಲ್ಲಿ ದ್ವಿತೀಯೆಗೆ ಲೋಪ.

ಕೈಬೆರಳಿಗೆ ನೋವಾಯಿತು (ಷಷ್ಠಿಗೆ ಲೋಪ)<br>
ಕಿವಿ ಕೇಳುವುದಿಲ್ಲ (ಚತುರ್ಥಿಗೆ ಅಥವಾ ಸಪ್ತಮಿಗೆ ಲೋಪ)<br>
ಒಂದು ದಿನ ಮನೆಗೆ ಬಂದನು (ಸಪ್ತಮಿಗೆ ಲೋಪ)

ಇವುಗಳಂತೆ ಪ್ರಥಮಾ ವಿಭಕ್ತಿಯ ಪ್ರತ್ಯಯಕ್ಕೆ ಲೋಪವನ್ನು ಹೇಳಿದಾಗ ಆ ವಿಭಕ್ತಿಯೆ ಇಲ್ಲವೆನ್ನಲಾಗುವುದಿಲ್ಲ.

ಅಕಾರಾಂತವಲ್ಲದ ಶಬ್ದಗಳಿಗೆ ಪ್ರತ್ಯಯವು ಪ್ರಥಮಾ ವಿಭಕ್ತಿಯಲ್ಲಿ ಲೋಪವಾಗುವುದಾದರೂ ಹೊಸಗನ್ನಡದಲ್ಲಿ ಅವಕ್ಕೆ ಯಕಾರಾಗಮ—ವಕಾರಾಗಮಗಳೊಡನೆ 'ಉ' ಎಂಬ ಸ್ವರವನ್ನು ಪ್ರತ್ಯಯವಾಗಿ ಸೇರಿಸುವರು. ಅಕಾರಾಂತದ ಅನುಸ್ವಾರದ ಮುಂದೆಯೂ ಇದನ್ನು ಕೆಲವರು ಸೇರಿಸುವರು.

ಉದಾ:—ಗುರುವು, ನದಿಯು, ಸೀತೆಯು, ಕೊಡೆಯು, ಗೋವು, ರಾಮನು, ಅಕ್ಕನು, ಶಂಕರನು.

ಹೆಚ್ಚಿನ ಕಡೆ ಈ 'ಉ' ಪ್ರತ್ಯಯವು ಅನುಚಿತವಾಗಿಯೇ ತೋರುತ್ತದೆ. ಹೊಸಗನ್ನಡದ ಈ "ಉ" ಪ್ರತ್ಯಯವು ರೂಢನಾಮ. ಕೃತ್ತು, ಸಂಖ್ಯೆ, ಸರ್ವನಾಮ, ಗುಣವಚನಗಳಾಗಿರುವ ಉಕಾರಾಂತ ಶಬ್ದಗಳಿಗೆ ಸೇರದು :—

ರೂಢನಾಮ :—ನಾಡು, ಬೀಡು, ಪೊಳಲು, ಆಳು, ಗುಂಪು, ಬಾನು, ಹುಲ್ಲು, ಕಣ್ಣು

ಕೃತ್ತು:—ಬರೆದುದು, ಬರೆವುದು, ಹೇಳಿದುದು (ಹೇಳಿದ್ದು)

ಸಂಖ್ಯೆ :—ಒಂದು, ಎರಡು, ಮೂರು, ನಾಲ್ಕು ಇತ್ಯಾದಿ.

ಸರ್ವನಾಮ:—ಅದು, ಇದು, ಅವು, ಇವು.

ಗುಣವಚನ :—ಒಳ್ಳಿತು, ಒಳ್ಳೆಯದು, ಹೊಸತು, ಹಿರಿದು, ಬಿಳಿದು.

ಕನ್ನಡದಲ್ಲಿ ಪ್ರಥಮಾ ವಿಭಕ್ತಿ ಹೀಗೆ ಕೆಲವೆಡೆ ಪತ್ಯಯಲುಪ್ತವಾದರೂ ಆ ವಿಭಕ್ತ್ಯರ್ಥವು ಪ್ರತೀತವಾಗದೆ ಉಳಿಯುವುದಿಲ್ಲ. ಪ್ರತ್ಯಯ ಲುಪ್ತವಾಗಿರುವ ಪದಗಳು ವಾಕ್ಯದಲ್ಲಿ ಬಂದಾಗ ಆಯಾ ಪದದ ಕೊನೆಯ ಅಕ್ಷರಕ್ಕೆ ಪ್ರತ್ಯಯಾರ್ಥ ದ್ಯೋತಕವಾಗಿ ಒಂದಿಷ್ಟು ಆಘಾತವು (Accent) ಬರುವುದನ್ನು ಸೂಕ್ಷ್ಮನಿರೀಕ್ಷಣೆಯಿಂದ ಅರಿಯಬಹುದು.

| | |
|---|---|
| ರಾಮು ಬಂದ, | ಕೈ ಮುಂದುವರಿಯಿತು |
| ನದಿ ಹರಿಯುತ್ತದೆ. | ಕಣ್ ಕಂಡಿತು |
| ನೀನು ಹೇಳಿದ್ದು ಸರಿ, | ಕಣ್ಣು ಕಂಡಿತು |
| ನಾಡು ಚೇತರಿಸಲಿ, | |

ಇಂತಹ ಕಡೆಗಳಲ್ಲಿ ಪ್ರಥಮಾವಿಭಕ್ತಿಯ ಪದಗಳ ಕೊನೆಯ ಸ್ವರಾಕ್ಷರವನ್ನು ಒಂದಿಷ್ಟು ಆಘಾತದೊಡನೆ ಉಚ್ಚರಿಸುತ್ತೇವೆ. ವ್ಯಂಜನಾಂತ ಪದವಾಗಿದ್ದರೆ ಆ ಆಘಾತವು ವ್ಯಂಜನದ ಪೂರ್ವದ ಸ್ವರಕ್ಕೆ ಬರುತ್ತದೆ. ಈ ಆಘಾತವೇ ಅಲ್ಲಿ ಲುಪ್ತವಾಗಿರುವ ಪ್ರಥಮಾ ವಿಭಕ್ತಿಯನ್ನು ದ್ಯೋತಿಸುವುದೆನ್ನಲು ಅಡ್ಡಿಯಿಲ್ಲ. ಒಂದು ವೇಳೆ ಈ ಆಘಾತವು ಪರಿಶೀಲನೆಗೆ ಅಷ್ಟೊಂದು ಹೊಳೆಯದಿದ್ದರೂ ವಾಕ್ಯದಲ್ಲಿ ಬಂದಿರುವ ಕರ್ಮಪದ—ಕ್ರಿಯಾಪದಗಳಿಂದ ಆ ಪ್ರಥಮಾ ವಿಭಕ್ತಿಯ ಅರ್ಥವು ಪ್ರತ್ಯಯವಿಲ್ಲದಿದ್ದರೂ ದ್ಯೋತಕವಾಗುವುದು.

ಇದರಿಂದ ಕನ್ನಡದಲ್ಲಿ ಪ್ರಥಮಾವಿಭಕ್ತಿ ಪ್ರತ್ಯಯವು ಅನುಸ್ವಾರವೆಂದೇ ನಿರ್ಣಯವಾಗುವುದು. ಈ ಅನುಸ್ವಾರಕ್ಕೆ ಲೋಪವಿರುವುದು ನಿಶ್ಚಯ. ಹಳಗನ್ನಡದಲ್ಲಿ ಕಾಣುವ ರಾಮಂ, ಮರಂ ಎಂಬ ರೂಪಗಳನ್ನು ಹೊಸಗನ್ನಡದಲ್ಲಿ ಸ್ವರಾಂತಗೊಳಿಸುವ ನೀತಿಗನುಗುಣವಾಗಿ 'ಉ' ಕಾರವನ್ನು ಸೇರಿಸಿದಾಗ ರಾಮುನು, ಮರವು-ಎಂಬ ರೂಪಗಳಾಗಿವೆಯೆಂದು ತಿಳಿಯಬೇಕು. ಹೊಸಗನ್ನಡದ ವೈಯಾಕರಣರು ಕೂಡ, ಈ ಅನುಸ್ವಾರವನ್ನೇ ಪ್ರಥಮಾ ವಿಭಕ್ತಿ ಪ್ರತ್ಯಯವಾಗಿ ತಿಳಿಯುವುದು ಲೇಸು ಮತ್ತು ಅಸಂದಿಗ್ಧವೆನಿಸುವುದು. ಅಕಾಂತವಲ್ಲದ ಕಡೆಗಳಲ್ಲಿ—ನದಿಯು, ಮನೆಯು, ಎಂಬೆಡೆಗಳಲ್ಲಿ ಕೆಲವರು ಅನಾವಶ್ಯಕವಾಗಿ 'ಉ' ಪ್ರತ್ಯಯವನ್ನು ಸೇರಿಸುವರಾದರೂ, ಕೆಲವಡೆ ಹಾಗೆ ಸೇರಿಸುವುದರಿಂದ ಅರ್ಥಸ್ಫುಟವಾಗುವುದರಿಂದ ಉಚಿತವೆನಿಸುವುದು. "ಸ್ವಾಮಿ ಆಜ್ಞೆಯಂತೆ ವರ್ತಿಸಿದನು" ಎಂಬಲ್ಲಿ "ಸ್ವಾಮಿಯ" ಎಂದು 'ಉ' ಪ್ರತ್ಯಯವನ್ನು ಸೇರಿಸಿಕೊಳ್ಳದಿದ್ದರೆ ಅಲ್ಲಿ ಷಷ್ಠೀವಿಭಕ್ತಿಯಪ್ರತೀತಿಯೂ ಆಗಬಹುದು. ಇದರಿಂದ 'ಉ' ಪ್ರತ್ಯಯವನ್ನಿಲ್ಲಿ ಅರ್ಥಸ್ಫುಟೀಕರಣಕ್ಕಾಗಿ ಸೇರಿಸುವುದುಚಿತ. ಈ 'ಉ' ಎಂಬ ಪ್ರತ್ಯಯವು ಹೊಸಗನ್ನಡದಲ್ಲಿ ಉಚ್ಚಾರಣೆಯ ಸೊಗಸಿಗಾಗಿಯೂ ಪ್ರಥಮಾವಿಭಕ್ತಿಯಲ್ಲಿ ಬರುವ ಒಂದು ಆನುಷಂಗಿಕ ಪ್ರತ್ಯಯವೆನ್ನಬಹುದು. ಎಲ್ಲಿಯಾದರೂ ವಿಭಕ್ತಿಪ್ರತ್ಯಯವು ಲೋಪವಾಗುವುದೆಂದು ತಿಳಿಸಿದಾಗ ವಿಭಕ್ತಿಯಿಲ್ಲವೆಂದು ತಿಳಿಯಬಾರದು. ಆ ವಿಭಕ್ತಿ ಬೇರೆ ವಿಧವಾಗಿ ಪ್ರಕಟವಾಗುವುದೆಂದು ನಿರ್ಣಯಿಸುವುದೇ ಸೂಕ್ತವೆನಿಸುವುದು.

—ಟಿ. ಕೇಶವ ಭಟ್ಟ, ಎಂ. ಎ.

# ಶ್ರವಣಬೆಳಗೊಳ—ಬೇರೆ ಬೇರೆ ಯುಗಗಳಲ್ಲಿ

ಶ್ರವಣಬೆಳಗೊಳ ಕರ್ಣಾಟಕದ ಅತ್ಯಂತ ಪ್ರಸಿದ್ಧ ಯಾತ್ರಾಕ್ಷೇತ್ರಗಳಲ್ಲೊಂದು. ಜೈನರಿಗೆ-ಅದರಲ್ಲೂ ದಿಗಂಬರ ಸಂಪ್ರದಾಯದ ಜೈನರಿಗೆ—ಪರಮ ಪವಿತ್ರವಾದ ತೀರ್ಥಕ್ಷೇತ್ರ. ಆಸ್ಥಳಕ್ಕೆ ಏನಿಲ್ಲವೆಂದರೂ ಎರಡು ಸಾವಿರ ವರ್ಷಗಳ ಇತಿಹಾಸವಿದೆ. 'ಶ್ರವಣಬೆಳಗೊಳ' ಎಂಬ ಹೆಸರು ಬಹು ಈಚಿನದು. ಆ ಸ್ಥಳಕ್ಕೆ ಬೇರೆ ಬೇರೆ ಶತಮಾನಗಳಲ್ಲಿ ಇದ್ದ ಹೆಸರುಗಳನ್ನು ಚರ್ಚಿಸುವುದು ಈ ಪುಟ್ಟ ಲೇಖನದ ಉದ್ದೇಶ. ಇಲ್ಲಿಯ ಸಾಮಗ್ರಿಗೆ ಮೂಲ ಆಕರ ಶ್ರವಣಬೆಳಗೊಳದ ಶಾಸನಗಳು.

ಆ ಸ್ಥಳಕ್ಕೆ ಪ್ರಾಮುಖ್ಯಬಂದುದು ಬಹುಶಃ ಕ್ರಿಸ್ತಶಕದ ಆರಂಭದಲ್ಲಿ. ಭದ್ರಬಾಹು ಎಂಬ ಜೈನಮುನಿ ಚಂದ್ರಗುಪ್ತನೆಂಬ ರಾಜನೊಡನೆ ಉತ್ತರದಿಂದ ದಕ್ಷಿಣಕ್ಕೆ ಬಂದು, ಈಗ ಚಿಕ್ಕಬೆಟ್ಟವೆಂದು ಕರೆಯಿಸಿಕೊಳ್ಳುವ ಬೆಟ್ಟದಮೇಲೆ ತನ್ನ ಕೊನೆಯ ದಿನಗಳನ್ನು ಕಳೆದಂದಿನಿಂದ ಶ್ರವಣಬೆಳಗೊಳದ ಇತಿಹಾಸ ಆರಂಭವಾದಂತೆ ಊಹಿಸಬಹುದು. ಆ ಕಥೆ ವಡ್ಡಾರಾಧನೆಯ ಪ್ರಕಾರ(ಸು. 920) ಹೀಗಿದೆ :— " ದ್ವಾದಶಾಂಗ ಚತುರ್ದಶ ಪೂರ್ವಧಾರಿಗಳಾದ ಭದ್ರಬಾಹು ಭಟಾರರು ಋಷಿ ಸಮುದಾಯದೊಡನೆ ಉಜ್ಜಯಿನಿಗೆ ಬಂದು, ಅಲ್ಲಿ ಭಿಕ್ಷೆಗಾಗಿ ಒಂದು ಮನೆಯನ್ನು ಹೊಕ್ಕಾಗ, ಅಲ್ಲಿ ತೊಟ್ಟಿಲಲ್ಲಿದ್ದ ಕಿರುಗೂಸು, 'ಬೋಳಹ ಬೋಳಹ ಭಟಾರಾ' ಎಂದಿತು (ಬೋಳಹ = ಹೋಗು). ಅವಧಿಯನ್ನು ಕೇಳಿದಾಗ ಹನ್ನೆರಡು ವರ್ಷ ಎಂದು ಹೇಳಿತು. ಆ ನಾಡಲ್ಲಿ ಇನ್ನು ಹನ್ನೆರಡು ವರ್ಷಗಳು ಅನಾವೃಷ್ಟಿಯಿಂದ ಕ್ಷಾಮ ಬರುತ್ತದೆ ಎಂದರಿತು, ತಮ್ಮ ಜೊತೆಯ ಋಷಿಗಳಿಗೆ ದಕ್ಷಿಣಾಪಥಕ್ಕೆ ಹೋಗಬೇಕೆಂದು ತಿಳಿಸಿದರು. ಆ ನಾಡಿನ ರಾಜ ಸಂಪ್ರತಿ ಚಂದ್ರಗುಪ್ತನಿಗೂ ಹಿಂದಿನ ರಾತ್ರಿ ಉತ್ಪಾತ ಸೂಚಕಗಳಾದ ಹದಿನಾರು ಕನಸುಗಳು ಬಿದ್ದಿದ್ದುವು. ಅವನು ಜಿನದೀಕ್ಷೆಯನ್ನು ಸ್ವೀಕರಿಸಿ, ಭದ್ರಬಾಹುವಿನ ಜೊತೆಯಲ್ಲಿ ಹೊರಟನು. ಒಂದು ಮುನಿಸಮುದಾಯವು ರಾಮಿಲಾಚಾರ್ಯ, ಸ್ಥೂಲಾಚಾರ್ಯ ಮತ್ತು ಸ್ಥೂಲಭದ್ರಾಚಾರ್ಯರ ನೇತೃತ್ವದಲ್ಲಿ ಸಿಂಧುದೇಶಕ್ಕೆ ತೆರಳಿತು; ಮತ್ತೊಂದು ಭದ್ರಬಾಹುವಿನ ಜೊತೆಯಲ್ಲಿ ದಕ್ಷಿಣಾಪಥಕ್ಕೆ ಬಂದಿತು. ಹೀಗೆ ಬಂದ ಋಷಿಸಮುದಾಯವು 'ಕಟ್ಬಪ್ಪುನಾಡ'ನ್ನು ಸಮೀಪಿಸಿದಾಗ ಭದ್ರಬಾಹುವಿಗೆ ತಮ್ಮ ಆಯುರವಸಾನ ತಿಳಿದು, ತಾವು ಅಲ್ಲೇ ಉಳಿದು, ಸನ್ಯಸನವ್ರತವನ್ನು ಸ್ವೀಕರಿಸಿ, ಉಳಿದವರನ್ನು ದ್ರಾವಿಡ ದೇಶಕ್ಕೆ ಕಳಿಸಿಕೊಟ್ಟರು. ಚಂದ್ರಗುಪ್ತನು ಮಾತ್ರ ಎಷ್ಟು ಹೇಳಿದರೂ ಕೇಳದೆ, ಅಲ್ಲಿಯೇ ಭದ್ರಬಾಹುವಿನ ಸೇವೆಗಾಗಿ ಉಳಿದನು. ಚಂದ್ರಗುಪ್ತ ಮುನಿಯ ಸೇವೆಗಾಗಿ ಮೆಚ್ಚಿ, ಅಲ್ಲಿಯ ವನದೇವತೆಗಳು ಭಿಕ್ಷೆಯನ್ನು ನೀಡುತ್ತಿದ್ದುವು. ಭದ್ರಬಾಹು ಮುನಿಗಳು ಸಮಾಧಿ ಮರಣವನ್ನು ಹೊಂದಿದ ಮೇಲೆ, ಚಂದ್ರಗುಪ್ತನು ಅವರ ನಿಸಿದಿಗೆ[1]ಯನ್ನು ಪೂಜಿಸುತ್ತಿರುವಾಗ, ದ್ರಾವಿಡ ದೇಶಕ್ಕೆ ಹೋಗಿದ್ದ ಋಷಿಸಮುದಾಯವು ಹಿಂದಕ್ಕೆ ಬಂದು, ಚಂದ್ರಗುಪ್ತನ ತಪಸ್ಸನ್ನು ಮೆಚ್ಚಿ ಹೊಗಳಿ, ಅವನಿಗೆ ಸನ್ಯಸನವ್ರತವನ್ನು ಕೊಟ್ಟು ತಮ್ಮ ಮಧ್ಯ

---

1. ಸಮಾಧಿ ಮರಣವನ್ನು ಹೊಂದಿದ ಜೈನ ಸಂನ್ಯಾಸಿಗಳ, ಜೈನ ಗೃಹಸ್ಥರ ಸ್ಮಾರಕವಾಗಿ ನಿಲ್ಲಿಸುವ ಕಲ್ಲುಗಳೇ ನಿಸಿದಿಗೆಗಳು.

ದೇಶಕ್ಕೆ ಹಿಂದಿರುಗಿತು. (ಚಂದ್ರಗುಪ್ತನು ಅಲ್ಲೇ ಸಮಾಧಿ ಮರಣವನ್ನು ಹೊಂದಿದನು)[2] .

ಭದ್ರಬಾಹು, ಚಂದ್ರಗುಪ್ತರು ಯಾರು ಎಂಬ ವಿಷಯದಲ್ಲಿಯೂ ಕಟ್ಬಪ್ಪುನಾಡಿಗೆ ಅವರು ವಲಸೆ ಬಂದ ವಿಷಯದಲ್ಲಿಯೂ ಸ್ವಲ್ಪ ಭಿನ್ನಾಭಿಪ್ರಾಯಗಳಿವೆ. ರೈಸ್[3] ಅವರೂ, ಆರ್. ನರಸಿಂಹಾಚಾರ್ಯ[4]ರೂ ಪ್ರಾಚೀನಗ್ರಂಥೋಕ್ತ ವಿಷಯಗಳನ್ನು ಇತಿಹಾಸವೆಂದು ನಂಬಬಹುದೆಂದೂ ಚಂದ್ರಗುಪ್ತನು ಮೌರ್ಯರ ದೊರೆ ಚಂದ್ರಗುಪ್ತನೆಂದೂ ವಾದಿಸಿದ್ದರೆ ಫ್ಲೀಟ್ ಅವರು ಈ ಅಭಿಪ್ರಾಯವನ್ನೊಪ್ಪದೆ, ಬೇರೆ ರೀತಿಯಲ್ಲಿ ಅಭಿಪ್ರಾಯಪಟ್ಟಿದ್ದಾರೆ[5] . (ಇದರ ವಿವರಗಳು ಇಲ್ಲಿ ಅನಾವಶ್ಯಕ) ಭದ್ರಬಾಹು—ಚಂದ್ರಗುಪ್ತರ ಕಥೆಯನ್ನು ಒಮ್ಮೆ ಸಂದೇಹದಿಂದ ನೋಡಿದ್ದ ವಿನ್ಸೆಂಟ್‌ಸ್ಮಿತ್ ಅವರು ಕೊನೆ ಕೊನೆಗೆ "ಈ ಕಥೆಯ ರೂಪರೇಷೆಗಳು ಸ್ಥೂಲವಾಗಿ ನಿಜವೆಂದು ಅನ್ನಿಸುತ್ತದೆ" ಎಂದಿದ್ದಾರೆ [6]. ಭದ್ರಬಾಹು—ಚಂದ್ರಗುಪ್ತರು ದಕ್ಷಿಣಕ್ಕೆ ಬಂದು 'ಕಟ್ಬಪ್ಪು' ವಿನಲ್ಲಿ ನೆಲಸಿದ ವಿಚಾರದ ಐತಿಹಾಸಿಕತೆಯನ್ನು ವಿದ್ವಾಂಸರು ಬಹುಮಟ್ಟಿಗೆ ಒಪ್ಪಿಕೊಂಡಿದ್ದಾರೆ. ಆದರೆ ಈ ಚಂದ್ರಗುಪ್ತನು ಮೌರ್ಯವಂಶದ ಸ್ಥಾಪಕನಲ್ಲ ; ಅಶೋಕನ ಮೊಮ್ಮಗನಾದ ಸಂಪ್ರತಿ ಚಂದ್ರಗುಪ್ತನೆಂಬ ಶ್ರೀ ಎಂ. ಗೋವಿಂದ ಪೈ ಅವರ ಅಭಿಪ್ರಾಯ[6a] ಸರಿಯೆಂದು ಕಾಣುತ್ತದೆ.

ಭದ್ರಬಾಹು—ಚಂದ್ರಗುಪ್ತರು ದಕ್ಷಿಣಕ್ಕೆ ಬಂದಾಗ ಶ್ರವಣಬೆಳಗೊಳದ ಸುತ್ತ ಮುತ್ತಣ ಪ್ರಾಂತವನ್ನು 'ಕಟ್ಬಪ್ಪುನಾಡು' ಎಂದು ಕರೆಯುತ್ತಿದ್ದರೆಂದು ಕಾಣುತ್ತದೆ [7]. ಆ ನಾಡು ಅರಣ್ಯಮಯವಾಗಿದ್ದಿತು. ಆ ಅರಣ್ಯದ ಮಧ್ಯದ ಬೆಟ್ಟದ–ಈಗಿನ ಚಿಕ್ಕಬೆಟ್ಟದ[8]—ಮೇಲಿನ ಒಂದು ಬಂಡೆಯ ಮೇಲೆ ಭದ್ರಬಾಹು ಮುನಿಗಳು ಸನ್ಯಸನವ್ರತವನ್ನು ಸ್ವೀಕರಿಸಿ ಪ್ರಾಣತ್ಯಾಗವನ್ನು ಮಾಡಿದರು. ಅಷ್ಟೇ ಅಲ್ಲ, ಆ ಬೆಟ್ಟದ ಸುತ್ತ ಮುತ್ತ ಹತ್ತಿರದಲ್ಲಿ ಊರಿಲ್ಲ, ಕೇರಿಲ್ಲ, ಜನವಿಹೀನವಾದ ಅರಣ್ಯ ತುಂಬಿದ್ದಿತು. ವಡ್ಡಾರಾಧನೆಯ ನಿರೂಪಣೆ ಇದು.

ಭದ್ರಬಾಹು ಮುನಿಯು ಉತ್ತರದಿಂದ ದಕ್ಷಿಣಕ್ಕೆ ಬಂದು ಚಿಕ್ಕ ಬೆಟ್ಟದ ಮೇಲೆ ತಪಸ್ಸು ಮಾಡಿದ ವಿಷಯವನ್ನು ಹೇಳುವ ಶಾಸನವು[9] ಶ್ರವಣಬೆಳುಗೊಳದ ಶಾಸನಗಳಲ್ಲೆಲ್ಲ ಬಹುಶಃ ಅತ್ಯಂತ ಪ್ರಾಚೀನವಾದುದು. ಆ ಶಾಸನದ ಪ್ರಕಾರ ದಕ್ಷಿಣದೇಶದ ಜನಪದವು "ಅನೇಕ ಗ್ರಾಮಶತ ಸಂಖ್ಯಂ ಮುದಿತ ಜನ ಧನ ಕನಕ ಸಸ್ಯ ಗೋಮಹಿಷಾಜಾವಿಕುಲಸಮಾಕೀರ್ಣ"ವಾಗಿದ್ದಿತು. ಭದ್ರ

---

2. ವಡ್ಡಾರಾಧನೆ (ಸಂ. ಡಿ.ಎಲ್. ನರಸಿಂಹಚಾರ್), 1947. ಪು-80-86.

3. ರೈಸ್ ಅವರು ಸಂಪಾದಿಸಿರುವ ಶ್ರವಣಬೆಳಗೊಳದ ಶಾಸನಗಳ ಸಂಪುಟದ (1889) ಮುನ್ನುಡಿಯನ್ನು ನೋಡಿ.

4. Ec. II, Introduction. P. 36

5. I. A. XXI, P. 156

6. The early history of India (4th Ed), p. 154.

6(a) 'ಕರ್ಣಾಟಕಕ್ಕೆ ಜೈನಧರ್ಮದ ಆಗಮನ' (ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ. xxvi i, & ii)

7. "... ಇತ್ತ ಭಟ್ಟಾರರುಂ ಪಿರಿದು ಋಷಿಸಮುದಾಯಂ ಬೆರಸು ಗ್ರಾಮನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ಕಳೆದು ಪೋಗಿ ಕಳ್ಬಪ್ಪು ನಾಡ ನೆಯ್ದಿಪೋಗುತ್ತಂ "(ವಡ್ಡಾರಾಧನೆ, 1949, ಪು.83).

8. ಶ್ರವಣಬೆಳುಗೊಳದಲ್ಲಿ ಎರಡು ಬೆಟ್ಟಗಳಿವೆ—ಒಂದು ಚಿಕ್ಕ ಬೆಟ್ಟದ (ಅಥವಾ ಚಂದ್ರಗಿರಿ,; ಮತ್ತೊಂದು ದೊಡ್ಡ ಬೆಟ್ಟ (ಅಥವಾ ವಿಂಧ್ಯಗಿರಿ). ದೊಡ್ಡ ಬೆಟ್ಟದ ಮೇಲೆ ಮುಖ್ಯವಾಗಿ ಗೊಮ್ಮಟನ ಭವ್ಯ ಪ್ರತಿಮೆಯಿದೆ. ಚಿಕ್ಕ ಬೆಟ್ಟದ ಮೇಲೆ ಅನೇಕ ಬಸದಿಗಳು ಹಾಗೂ ಗುಹೆಗಳೂ ಇವೆ. ಈ ಎರಡು ಬೆಟ್ಟಗಳ ಮಧ್ಯೆ ಬಹು ಸುಂದರವಾದ ದೊಡ್ಡ ಕೊಳವಿದೆ. ಅದರ ಪಕ್ಕಕ್ಕೆ ಊರು ಇದೆ.

9. E.C. II. I, C. 600 A.D.

ಬಾಹು ಬಂದು ನೆಲಸಿದ "ಕಟವಪ್ರ" ವು ಅನೇಕ ಗುಹೆಗಳಿಂದಲೂ ಬಂಡೆಗಳಿಂದಲೂ ಅನೇಕ ರೀತಿಯ ತರುಗಳಿಂದಲೂ ಆಕೀರ್ಣವಾಗಿದ್ದಿತು.

ಕಟವಪ್ರ, ಕಬ್ಬಪ್ಪುಗಳೆರಡೂ ಚಿಕ್ಕ ಬೆಟ್ಟವನ್ನೇ ಸೂಚಿಸುತ್ತವೆ. ಅವುಗಳಲ್ಲಿ ಒಂದು ಇನ್ನೊಂದರಿಂದ ಬಂದಿರಬೇಕು. ಆದರೆ ಅವುಗಳಲ್ಲಿ ಯಾವುದು ಮೂಲ? 'ಕಟವಪ್ರ' ಎಂಬುದು 'ಕಬ್ಬಪ್ಪು' ಎಂಬುದರ ಸಂಸ್ಕೃತೀಕರಣವೇ? ಅಥವಾ 'ಕಬ್ಬಪ್ಪು' ಎಂಬುದು 'ಕಟವಪ್ರ' ಎಂಬುದರ ತದ್ಭವವೇ? 'ಕಟವಪ್ರ' ಎಂಬಲ್ಲಿ 'ವಪ್ರ' ಎಂಬುದು ಬೆಟ್ಟವನ್ನು ಸೂಚಿಸುತ್ತದೆ. ಆದರೆ 'ಕಟ' ಎಂದರೆ ಏನು? 'ಕಬ್ಬಪ್ಪು' ಎಂಬುದರ ನಿಷ್ಪತ್ತಿ ಇನ್ನೂ ತೊಡಕಿನದು. ಹೀಗೆ ಇವುಗಳ ಮೂಲವಿನ್ನೂ ಪರಿಷ್ಕಾರವಾಗಬೇಕಾಗಿದೆ.

ಕ್ರಿಸ್ತಶಕದ ಆರಂಭದ ಮೊದಲ ಒಂಬತ್ತು ಶತಕಗಳಲ್ಲಿ ಧಾರ್ಮಿಕವಾಗಿ ಪ್ರಾಮುಖ್ಯತೆ ಇದ್ದದು ಚಿಕ್ಕ ಬೆಟ್ಟಕ್ಕೆ ಮಾತ್ರ. ಆ ಬೆಟ್ಟವು ಗಾತ್ರದಲ್ಲಿ ಚಿಕ್ಕದು, ಏರಲು ಇಳಿಯಲು ಅನುಕೂಲವಾದದ್ದು; ಅನೇಕ ದೊಣೆ [10]ಗಳಿದ್ದುದರಿಂದ, ಅಥವಾ ದೊಣೆಗಳನ್ನು ಮಾಡಿಕೊಳ್ಳಲು ಸೌಕರ್ಯವಿದ್ದದ್ದರಿಂದ ನೀರಿನ ವಸತಿಗೆ ಅಲ್ಲಿ ಅನುಕೂಲವಿದ್ದಿತು; ಅನೇಕ ಗುಹೆಗಳು ಇದ್ದದ್ದರಿಂದ ತಪಸ್ಸಿಗೆ ಅನುಕೂಲವಾದ ಪ್ರದೇಶವೂ ಆಗಿದ್ದಿತು. ಆದ್ದರಿಂದ ಶ್ರವಣಬೆಳಗೊಳದ ಪ್ರಾಂತಕ್ಕೆ ಬಂದ ಜೈನಮುನಿಗಳು ತಪಸ್ಸು ಮಾಡಿದ್ದು ಅಲ್ಲಿಯೇ ಸನ್ಯಸನ ವ್ರತವನ್ನು ಸ್ವೀಕರಿಸಿ ಸಮಾಧಿ ಮರಣವನ್ನು ಪಡೆದದ್ದು ಅಲ್ಲಿಯೇ (ಸಮಾಧಿ ಮರಣವನ್ನು ಪಡೆದ ಪ್ರಭಾಚಂದ್ರ, ಉಳ್ಳಿಕ್ಕಲ್, ಗೊರವಡಿ, ಗುಣಸೇನ, ಅರಿಷ್ಟನೇಮಿ, ಮಾಸೇನರ್, ನಂದಿಸೇನ ಮುಂತಾದ ಮುನಿಗಳನ್ನು ಇಲ್ಲಿ ಹೆಸರಿಸಬಹುದು). ಎಲ್ಲಕ್ಕಿಂತ ಹೆಚ್ಚಾಗಿ ಭದ್ರಬಾಹು, ಚಂದ್ರಗುಪ್ತರ ಪಾದಸ್ಪರ್ಶದಿಂದ ಪುನೀತವಾಗಿದ್ದಿತು. ಇದರ ಫಲವಾಗಿ ಆ ಬೆಟ್ಟವು ಜೈನರಿಗೆ 'ತೀರ್ಥ'[11]ವಾಗಿ ಪರಿಣಮಿಸಿತು. ಆ ಸುತ್ತಮುತ್ತಣ ಪ್ರದೇಶಕ್ಕೆ ಆ ಬೆಟ್ಟದ ಹೆಸರೇ ಕೆಲ ಕಾಲ ಪ್ರಚುರವಾಗಿತ್ತೆಂದು ಕಾಣುತ್ತದೆ. ಶ್ರವಣಬೆಳಗೊಳದ ಸುತ್ತ ಮುತ್ತಣ ಪ್ರದೇಶವನ್ನು ವಡ್ಡಾರಾಧನೆಯ(ಸು.920) "ಕಬ್ಬಪ್ಪುನಾಡು" ಎಂದು ಕರೆದರೆ [12] ಅದನ್ನು ಪೋಷಿಸುವಂತೆ ಶಾಸನವೊಂದು "ಕಬ್ಬಪ್ಪುನಾಡು" ಎಂದು ಕರೆಯುತ್ತದೆ. [13]"

ಚಿಕ್ಕ ಬೆಟ್ಟಕ್ಕಿದ್ದ ಈ ಹೆಸರು, ಏಕೋ ಏನೋ, ಕೊನೆಯವರೆಗೆ ಉಳಿದುಕೊಂಡು ಬರಲಿಲ್ಲ. ಆ ಹೆಸರಿನ ಸಂಕ್ಷಿಪ್ತ ಇತಿಹಾಸ ಈ ರೀತಿ ಇದೆ. ಶ್ರವಣಬೆಳಗೊಳದಲ್ಲೇ ಅತಿ ಪ್ರಾಚೀನ

---

10. ದೊಣೆ ಅಥವ ಡೊಣೆ ಎಂಬುದು ಬೆಟ್ಟಗಳ ಮೇಲಿನ ಸಹಜವಾದ ಪುಟ್ಟ ಕೊಳವನ್ನು ಸೂಚಿಸುತ್ತದೆ. ಇದರ ಮೂಲ ಬಹುಶಃ ಸಂಸ್ಕೃತದ 'ದ್ರೋಣ' (=ದೋಣಿಯಂತಹ ಮರದ ವಸ್ತು, ಸರೋವರ). 'ದ್ರೋಣ' ಎಂಬುದು ಒಂದು ಕಡೆ 'ದೋಣಿ' ಎಂದಾಗಿದೆ. (=a boat): ಇನ್ನೊಂದು ಕಡೆ 'ದೊಣೆ' ಆಗಿದೆ. (=a pond). ತೆಲುಗಿನಲ್ಲಿ 'ದೊನ' ಎಂದರೆ ಬೆಟ್ಟದ ಮೇಲಿನ ಕೊಳ ಎಂದರ್ಥ.

11. "ಕಾಳ್ವಪ್ಪುತೀರ್ಥ" (Ec II, 14, c. 800 A. D.) 'ಕಳ್ವಪ್ಪು ತೀರ್ಥ' (Ec. II, 46. c. 1050 A.D). ಚಿಕ್ಕ ಬೆಟ್ಟವನ್ನು ಒಂದು ಶಾಸನವು 'ತೀರ್ಥಗಿರಿ' ಎಂದೇ ಕರೆಯುತ್ತದೆ—".. ಆರಾಧನೆ ನೋನ್ತು ತೀರ್ಥಗಿರಿ ಮೇಲ್ ಸ್ವರ್ಗಾಲಯಕ್ಕೇರಿದಾರ್" (Ec. II, 76. c. 700 A. D.)

12. ವಡ್ಡಾರಾಧನೆ. (1949) ಪು. 83.

13 141, 1139. A. D. (ಇನ್ನು ಮುಂದೆ ಬರುವ ಶಾಸನಗಳೆಲ್ಲವೂ 'ಎಪಿಗ್ರಾಫಿಯ ಕರ್ನಾಟಕದ ಎರಡನೆಯ ಸಂಪುಟದ ಶಾಸನಗಳಾದ್ದರಿಂದ ಶಾಸನದ ಸಂಖ್ಯೆಯನ್ನೂ ವರ್ಷವನ್ನೂ ಮಾತ್ರ ಕೊಡಲಾಗುತ್ತದೆ.)

ವಾದ ಶಾಸನದಲ್ಲಿ 'ಕಟವಪ್ರ' ದ ಉಲ್ಲೇಖ ವಿದೆ.[14] ಈ ಹೆಸರು ಈ ರೂಪದಲ್ಲಿಯೂ ಅಶುದ್ಧ ರೂಪದಲ್ಲಿ ಸ್ವಲ್ಪಬೇರೆಯಾಗಿಯೂ ಮುಂದಿನ ಕಾಲದ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತದೆ—'ಕಟವಪ್ರಶೈಲ'[15] 'ಕಟವಪ್ರ'[16], 'ಕಟಪ್ರ'[17]. ಈ ರೂಪವು ಮುಖ್ಯವಾಗಿ ಸಂಸ್ಕೃತ ಶಾಸನಗಳಲ್ಲಿ ದೊರಕುತ್ತದೆ. (ಕನ್ನಡ ಶಾಸನಗಳಲ್ಲಿ ಕ್ವಚಿತ್ತಾಗಿ 'ಕಟವಪ್ರ' ಬರುವುದುಂಟು). ಕನ್ನಡ ಶಾಸನಗಳಲ್ಲಿ ಸಾಮಾನ್ಯವಾಗಿ ಕಾಣಿಸಿಕೊಳ್ಳುವ ರೂಪವೆಂದರೆ 'ಕಳ್ವಪ್ಪು' ಅಥವಾ 'ಕಳ್ಬಪ್ಪು,' ಈ ರೂಪ ಸು. 700 ರ ಶಾಸನಗಳಲ್ಲಿ ಕಾಣಿಸಿಕೊಳ್ಳಲಾರಂಭವಾಗುತ್ತದೆ. 'ಕಳ್ಬಪ್ಪು'[18], 'ಕಾಳ್ಬಪ್ಪುತೀರ್ಥ'[19], 'ಕಳ್ಬಪ್ಪು ಬೆಟ್ಟ'[20], 'ಕಳ್ಬಪ್ಪಿನಾ ಶೈಲ'[21], 'ಕಳ್ವಪ್ಪು',[22] 'ಕಳ್ವಪ್ಪಿನಾ ಬೆಟ್ಟ',[23] 'ಕಳ್ವಾಪ್ಪರ್ವತ'[24], 'ಕಳ್ವಪ್ಪು ತೀರ್ಥ'[25]— ಈ ಉಲ್ಲೇಖಗಳನ್ನು ಇಲ್ಲಿ ಹೆಸರಿಸಬಹುದು. ಒಂದು ಶಾಸನದಲ್ಲಿ ಬರುವ 'ಕಳ್ವಪ್ಪು', 'ಪೆರ್ಗಳ್ವಪ್ಪು' [26]ಗಳು ಕ್ರಮವಾಗಿ ಚಿಕ್ಕಬೆಟ್ಟ ಮತ್ತು ದೊಡ್ಡಬೆಟ್ಟಗಳನ್ನು ಸೂಚಿಸುತ್ತವೆ. ಕ್ರಿಸ್ತಶಕ ಹತ್ತನೇ ಶತಮಾನದ ಕೊನೆಯಲ್ಲಿ ದೊಡ್ಡ ಬೆಟ್ಟದ ಮೇಲೆ ಗೊಮ್ಮಟನ ಮೂರ್ತಿಯು ನಿರ್ಮಿತವಾದಮೇಲೆ, ಚಿಕ್ಕ ಬೆಟ್ಟಕ್ಕಿದ್ದ ಪ್ರಾಶಸ್ತ್ಯವು, ಸಾಮಾನ್ಯ ಜನರ ದೃಷ್ಟಿಯಲ್ಲಾದರೂ, ಸ್ವಲ್ಪ ಕಡಮೆಯಾಗಿ, ಆ ಪ್ರಾಶಸ್ತ್ಯವು ದೊಡ್ಡ ಬೆಟ್ಟಕ್ಕೆ ಲಭ್ಯವಾದಂತೆ ಊಹಿಸಬಹುದು. 'ಕಳ್ವಪ್ಪು' ಅಥವಾ 'ಕಳ್ಬಪ್ಪು' ಎಂಬುದು 'ಕಬ್ಬಪ್ಪು' ಎಂಬ ರೂಪದಲ್ಲಿ ಕ್ರಿ.ಶ. 1139ರಲ್ಲಿ ಕೊನೆಯ ಬಾರಿ ಕಾಣಿಸಿಕೊಂಡು,[27] ಮುಂದೆ ಮರೆಯಾಗಿಹೋಯ್ತು. ಕ್ರಮೇಣ 'ಚಿಕ್ಕಬೆಟ್ಟ' ಎಂಬ ಹೆಚ್ಚು ಸುಲಭವಾದ ಹೆಸರು ರೂಢಿಗೆ ಬಂದಿತು.[28]

ಚಿಕ್ಕ ಬೆಟ್ಟಕ್ಕೆ 'ಚಂದ್ರಗಿರಿ' ಎಂಬ ಮತ್ತೊಂದು ಹೆಸರಿದೆ. ಚಂದ್ರಗುಪ್ತನು ಆ ಬೆಟ್ಟದ ಮೇಲಿದ್ದು ತಪಸ್ಸು ಮಾಡಿದ್ದರಿಂದ ಅದಕ್ಕೆ ಆ ಹೆಸರು ಬಂತೆಂದು ಪ್ರತೀತಿಯಿದೆ. ಅಲ್ಲಿರುವ ಚಂದ್ರಗುಪ್ತಬಸದಿಯು ಚಂದ್ರಗುಪ್ತನು ಕಟ್ಟಿಸಿದ್ದೆಂದು ಹೇಳುತ್ತಾರೆ. ಆ ಬಸದಿಯೇ ಚಿಕ್ಕಬೆಟ್ಟದ ಮೇಲಿರುವ ಬಸದಿಗಳಲ್ಲೆಲ್ಲ ಪ್ರಾಚೀನವಾದುದು.[29] 'ಚಂದ್ರಗಿರಿ' ಎಂಬ ಉಲ್ಲೇಖ ಯಾವ ಶಾಸನದಲ್ಲೂ ಇಲ್ಲ. ಚಿದಾನಂದ ಕವಿಯ (ಸು. 1680) ಮುನಿವಂಶಾಭ್ಯುದಯದಲ್ಲಿ ಚಂದ್ರಗಿರಿಯ ಹೆಸರಿದೆ.[30] ಶ್ರೀ ಆರ್. ನರಸಿಂಹಾಚಾರ್ಯರ ಪ್ರಕಾರ ಈ ಬಸದಿಯ ಕಾಲ

---

14. 1, c. 600 A. D.; 15. 72. c. 650 A. D; 22 c. 700 A. D.
16. 93 c. 70 A. D.; 98, c. 700; 17. 108, c 700 A. D.,
18. 12, c. 700 A. D; 136, c. 950 A.D.
19. 14, c. 800 A. D.
20. 28, c. 700 A. D.
21. 77, c. 700 A. D.
22. 35, c. 800 A. D.
23. 27, c. 700 A. D.
24. 23, c. 700 A. D.
25. 46, c. 1050 A. D.
26. 35, c. 800 A. D.
27. 141, 1139 A. D.
28. 319, c. 1246 A. D.
29. Introduction P. 36;
30. Introduction P. 65;

ಕ್ರಿಸ್ತ ಶಕ ಎಂಟು ಅಥವಾ ಒಂಬತ್ತನೆಯ ಶತಮಾನ.[31]

ದೊಡ್ಡಬೆಟ್ಟಕ್ಕೆ ಪ್ರಾಮುಖ್ಯ ಬಂದದ್ದು ಗೊಮ್ಮಟನ ಭವ್ಯ ಸುಂದರ ವಿಗ್ರಹದಿಂದ. ಹತ್ತನೆಯ ಶತಮಾನದಲ್ಲಿ ಕನ್ನಡ ನಾಡು ಕಂಡ ಮಹಾವ್ಯಕ್ತಿಗಳಲ್ಲಿ ಚಾವುಂಡರಾಯನೂ ಒಬ್ಬ. ಜೈನ ಧರ್ಮದ ಮೂಲಸ್ತಂಭದಂತಿದ್ದ ಇವನು ಗಂಗರ ದೊರೆ ರಾಚಮಲ್ಲನ ದಂಡನಾಯಕನಾಗಿದ್ದನು. ಅವನು ಶ್ರವಣಬೆಳಗೊಳದಲ್ಲಿ ಗೊಮ್ಮಟನ ವಿಗ್ರಹವನ್ನು ಕಡೆಯಿಸಿದ ಸಂದರ್ಭವನ್ನು ಬೊಪ್ಪಣಕವಿ ತನ್ನ ಗೊಮ್ಮಟಸ್ತುತಿಯಲ್ಲಿ[32] ಹೀಗೆ ವರ್ಣಿಸುತ್ತಾನೆ. ರಾಜ್ಯಕ್ಕಾಗಿ, ಅಧಿಕಾರಕ್ಕಾಗಿ ನಡೆದ ಭರತ ಬಾಹುಬಲಿಯರ ಸ್ಪರ್ಧೆಯಲ್ಲಿ ಬಾಹುಬಲಿಯು ಗೆದ್ದನು. ಭರತನು ಸೋತುಹೋದನು. ಬಳಿಕ ಪಶ್ಚಾತ್ತಾಪಚಿತ್ತನಾದ ಭರತನು ಪೌದನಪುರದಲ್ಲಿ[33] ಐನೂರು ಬಿಲ್ಲೆತ್ತರದ ಬಾಹುಬಲಿಯ ವಿಗ್ರಹವನ್ನು ಪ್ರತಿಷ್ಠಿಸಿದನು. ಬಹುಕಾಲವಾದಮೇಲೆ ಅದರ ಸುತ್ತಮುತ್ತ ಕುಕ್ಕುಟಸರ್ಪಗಳು ಹುಟ್ಟಿ ಪ್ರಾಕೃತರಿಗೆ ಆ ವಿಗ್ರಹವು ಅಗೋಚರವಾಯಿತು. ಪೌದನಪುರಕ್ಕೆ ಹೋಗಿ ತಾನು ಆ ವಿಗ್ರಹವನ್ನು ದರ್ಶಿಸಬೇಕೆಂದು, ಗೊಮ್ಮಟನು[34] (ಎಂದರೆ ಚಾವುಂಡರಾಯನು) ನಿರ್ಧರಿಸಿದಾಗ, ಅದು ಅಸಾಧ್ಯವೆಂದು ಜನ ತಿಳಿಯಹೇಳುತ್ತಾರೆ. ಆಗ ಚಾವುಂಡರಾಯನು ದೊಡ್ಡಬೆಟ್ಟದ ಮೇಲೆ ಬಾಹುಬಲಿಯ ವಿಗ್ರಹವನ್ನು ಪ್ರತಿಷ್ಠಿಸಿದನು.[35]

ಈ ಸಂಗತಿಯು ಮುಂದಿನ ಕವಿಗಳಲ್ಲಿ ಅನೇಕ ಅದ್ಭುತಸಂಗತಿಗಳನ್ನು ಕಲೆಹಾಕಿಕೊಂಡು ಅನೇಕ ರೂಪಾಂತರಗಳನ್ನು ತಾಳುತ್ತದೆ. ದೇವಚಂದ್ರನ ರಾಜಾವಳೀ ಕಥೆ, ಸ್ಥಳ ಪುರಾಣ, ದೊಡ್ಡಯ್ಯನ ಭುಜಬಲಿ ಶತಕ, ಪಂಚಬಾಣನ ಭುಜಬಲಿ ಚರಿತೆಗಳಲ್ಲಿ ಮೇಲಿನ ಕಥೆಯ ಹಲವು ರೂಪಾಂತರಗಳನ್ನು ಕಾಣಬಹುದು. ಈ ಕಥೆಗಳಲ್ಲೆಲ್ಲ ಸಮಾನವಾದ ಸಂಗತಿ ಒಂದಿದೆ— ಅದೇ ಚಾವುಂಡರಾಯನು ಚಿಕ್ಕಬೆಟ್ಟದಮೇಲೆ ಒಂದು ಬಂಡೆಯ ಮೇಲೆ ನಿಂತು, ದೊಡ್ಡಬೆಟ್ಟದ ಬಂಡೆಯೊಂದಕ್ಕೆ ಬಾಣವನ್ನುಬಿಟ್ಟಾಗ, ಗೊಮ್ಮಟ ವಿಗ್ರಹವು ಪ್ರತ್ಯಕ್ಷವಾದುದು. ಇದು ಎಷ್ಟರ ಮಟ್ಟಿಗೆ ಐತಿಹಾಸಿಕವೋ, ಮುಂದೆ ಕಥೆಯಾಗಿ ಕಲ್ಪಿತವಾಯಿತೋ ಹೇಳುವುದು ಕಷ್ಟ. ಇಲ್ಲಿ ಬಹು ಸ್ವಾರಸ್ಯವೂ, ಕುತೂಹಲಜನಕವೂ ಆದ ನಾಲ್ಕು ಪುಟ್ಟ ಶಾಸನಗಳನ್ನು ಉಲ್ಲೇಖಿಸುವುದು ಅಪ್ರಸ್ತುತವಾಗಲಾರದು. ಅವುಗಳಲ್ಲಿ ಎರಡು ದೊಡ್ಡ ಬೆಟ್ಟದ ಮೆಟ್ಟಲುಗಳ ಬಳಿಯೂ (318, 319 ನೇ ಶಾಸನಗಳು), ಮತ್ತೆರಡು ಚಿಕ್ಕಬೆಟ್ಟದ ಮೇಲೂ ಇವೆ (170, 165 ನೇ ಶಾಸನಗಳು). ಸುಮಾರು ಹದಿಮೂರನೇ ಶತಮಾನದಲ್ಲಿ ಮಲೆಯಾಳದಿಂದ ಬಂದಿದ್ದ ಇಬ್ಬರು ಬಿಲ್ಲಾಳರ ಬಿಲ್ವಿದ್ಯೆಯ ಪರೀಕ್ಷೆ ಶ್ರವಣಬೆಳಗೊಳದಲ್ಲಿ ನಡೆದಂತೆ ತೋರುತ್ತದೆ. ಸು. 1217 ರಲ್ಲಿ ಮಲೆಯಾಳದ 'ಕೊದಯುಶಂಕರ' ಎಂಬಾತ ಚಿಕ್ಕಬೆಟ್ಟದಿಂದ ದೊಡ್ಡಬೆಟ್ಟಕ್ಕೆ ಬಾಣಗಳನ್ನು ಬಿಟ್ಟ ವಿಷಯವು ಚಿಕ್ಕಬೆಟ್ಟದ ಮೇಲಿನ ಒಂದು ಶಾಸನದಲ್ಲೂ[36], ಆ ಬಾಣವು ದೊಡ್ಡಬೆಟ್ಟವನ್ನು ಬಹುಶಃ ತಾಗಿದ ಪ್ರದೇಶದಲ್ಲಿರುವ ಇನ್ನೊಂದು

31. Introduction P. 65;
32. 234, c. 1180 A. D.
33
34. ಚಾವುಂಡರಾಯನಿಗೆ ಮೊದಲು 'ಗೊಮ್ಮ' ಎಂಬ ಹೆಸರಿದ್ದು, ಅವನಿಂದ ನಿರ್ಮಿತವಾದ ಬಾಹುಬಲಿಯ ವಿಗ್ರಹಕ್ಕೆ 'ಗೊಮ್ಮಟೇಶ್ವರ' ಎಂಬ ಹೆಸರು ಬಂದಿರಬಹುದೆಂದು ಪ್ರೊ. ತೀ. ನಂ. ಶ್ರೀಕಂಠಯ್ಯನವರು ಊಹಿಸುತ್ತಾರೆ. (ಸಮಾಲೋಕನ, ಪು. 260-2).
35. 234, c. 1180 A. D.,
36. (70, c. 121 A. D.—"ಸ್ವಸ್ತಿಶ್ರೀ ಈಶ್ವರ ಸಂವತ್ಸರದ ಮಲಯಾಳ ಕೊದಯು ಸಂಕರನು ಇಲ್ಲಿರ್ದು

ಶಾಸನದಲ್ಲೂ[37] ಹೇಳಲಾಗಿದೆ. ಸು. 1246ರಲ್ಲಿ 'ಮಲೆಯಾಳ ಅಪ್ಪಾ(ಧ್ಯಾ)ಡಿ ನಾಯಕ ಎಂಬಾತನು ದೊಡ್ಡಬೆಟ್ಟದಿಂದ ಚಿಕ್ಕಬೆಟ್ಟಕ್ಕೆ ಬಾಣ ಬಿಟ್ಟ ವಿಷಯವೂ, ಅದು ಬಹುಶಃ ಮುಟ್ಟಿದ ಚಿಕ್ಕಬೆಟ್ಟದ ಪ್ರದೇಶವೂ ಎರಡು ಶಾಸನಗಳಲ್ಲಿ ನಿರೂಪಿತವಾಗಿದೆ[38]. ಈ ಶಾಸನಗಳಿಂದ ಧ್ವನಿತವಾಗುವ ವಿಷಯವಿಷ್ಟು. ದೊಡ್ಡಬೆಟ್ಟದಿಂದ ಚಿಕ್ಕಬೆಟ್ಟಕ್ಕೆ, ಚಿಕ್ಕಬೆಟ್ಟದಿಂದ ದೊಡ್ಡಬೆಟ್ಟಕ್ಕೆ ಬಾಣಪ್ರಯೋಗ ಮಾಡುವುದು ಬಿಲ್ವಿದ್ಯೆಯ ಪರಿಣತಿಗೆ ಸಾಕ್ಷಿ ಎಂಬ ಭಾವನೆಯಿದ್ದು ಅದನ್ನು ಆ ಇಬ್ಬರು ಮಲೆಯಾಳಿಗಳು ಸಾಧಿಸಿರಬೇಕು. ಚಾವುಂಡರಾಯನು ಬಾಣಗಳನ್ನು ಬಿಟ್ಟಾಗ ದೊಡ್ಡಬೆಟ್ಟದ ಮೇಲೆ ಗೊಮ್ಮಟನ ವಿಗ್ರಹ ಕಾಣಿಸಿಕೊಂಡಿತೆಂಬ ಭಾವನೆಗೆ ಮೇಲಿನ ಸಂಗತಿಗಳು ಎಷ್ಟರ ಮಟ್ಟಿಗೆ ಕಾರಣವಾಗಿವೆಯೋ ಗೊತ್ತಿಲ್ಲ.

ಚಾವುಂಡರಾಯನಿಂದ ಗೊಮ್ಮಟನ ಪ್ರತಿಷ್ಠೆಯಾದದ್ದು ಸು. 983ರಲ್ಲಿ. (ಈ ವಿಷಯದಲ್ಲಿ ವಿದ್ವಾಂಸರಲ್ಲಿ ಒಮ್ಮತವಿಲ್ಲ). ಪ್ರತಿಷ್ಠೆಯ ವಿಷಯವನ್ನು ತಿಳಿಸುವ ಮೂರು ಬರಹಗಳು ಗೊಮ್ಮಟನ ಪಾದಗಳ ಬಳಿ ಇವೆ. ಒಂದು ಕನ್ನಡದಲ್ಲಿ ("ಶ್ರೀ ಚಾಮುಂಡರಾಜಂ ಮಾಡಿಸಿದಂ")[39]; ಇನ್ನೊಂದು ತಮಿಳಿನಲ್ಲಿ ("ಶ್ರೀ ಚಾಮುಂಡರಾಜನ್ ಶೆಯ್ವಿತ್ತಾನ್")[40]; ಇನ್ನೊಂದು ಮರಾಠಿಯಲ್ಲಿ ("ಶ್ರೀ ಚಾವುಂಡರಾಜೇಂ ಕರವಿಯಲೇಂ")[41]. ಗೊಮ್ಮಟನ ಪ್ರತಿಷ್ಠೆಯಿಂದ ದೊಡ್ಡಬೆಟ್ಟವು ನಿಜವಾಗಿಯೂ 'ಹಿರಿಯದೇವರ ಬೆಟ್ಟ'ವಾಯಿತು[42], ಜಗನ್ಮಾನ್ಯವಾಯಿತು. ಆ ಗೊಮ್ಮಟನಿಗೆ ಪ್ರತ್ಯೇಕವಾದ ದೇವಸ್ಥಾನದ ಅವಶ್ಯಕತೆಯಿರಲಿಲ್ಲ; ಬೊಪ್ಪಣ್ಣ ಕವಿಯ ಮಾತಲ್ಲಿ ಹೇಳಬೇಕಾದರೆ ಅವನಿಗೆ ಜಗತ್ತೇ 'ನಿತ್ಯಂ ನಿಲಯಂ' ಆಗಿ ಪರಿಣಮಿಸಿತು. ಹತ್ತನೇ ಶತಮಾನದಿಂದ ಇಂದಿನವರೆಗೆ ಯಾತ್ರಾರ್ಥಿಗಳ ಪ್ರವಾಹವೇ ಅಲ್ಲಿಗೆ ಹರಿದು ಗೊಮ್ಮಟನ ಪಾದಗಳನ್ನು ಭಕ್ತಿಜಲದಿಂದ ತೊಳೆದಿದೆ. ಉತ್ತರದಿಂದ ಬಂದ ನೂರಾರು ಜನ ಭಕ್ತರು ತಮ್ಮ ಯಾತ್ರೆ ಸಫಲವೆಂದು ಹೇಳಿಕೊಂಡಿದ್ದಾರೆ[43]. ಗೊಮ್ಮಟನ ಮುಂದೆ "ಗೇರಸೊಪೆಯ ಅಪನಾಯಕರ ಮಗ ಲಿಂಗಂಣನು ಸಾಷ್ಟಾಂಗ" ವೆರಗಿದಾಗ,[44] ಆ ಭಕ್ತನು ಎಷ್ಟು ಭಾವಪರವಶನಾಗಿದ್ದಿರಬಹುದೆಂದು ಊಹಿಸಿಕೊಳ್ಳಬಹುದು. ಮೈಸೂರಿನ ದೊಡ್ಡಕೃಷ್ಣರಾಜ ಒಡೆಯರು "ಶ್ರೀಮದ್ಬೆಳ್ಗುಳದ ಚಲದಿ ಸೋಮಾರ್ಕರ ಜಠಿನ ದೇವ ಗೋಮಟ ಜಿನಪನ ಶ್ರೀ ಮುಖವನವಲೋಕಿಸಲೊಡನಾವೋದ

---

ಎಚ್ಚಗದ್ದೆಯ ಹಡುವಣ ಹುಣಿಸೆಯ ಮೊರು ಗುಂಡಿಗೆ" ಇದೇ ವಿಷಯವು ಅದೇ ಸ್ಥಳದ ತಮಿಳು ಭಾಷೆಯ ಶಾಸನದಲ್ಲೂ ನಿರೂಪಿತವಾಗಿದೆ. (ಸಂ. 171)

37. 318, c. 1217 A. D.—"ಅರಕೆರೆಯ ವೀರ ವೀರಪಲ್ಲವರಾಯನ ಮಕಂ ಕೆದೆ ಸಂಬರನಾಯಕಂ ಬೆಳ್ಳುಗೊಳಘು ..ಯೆಚ್ಚ ಬೆಳ ಬಡಿಗರ ಜೆಟಕೆ"

38. ".. ಮಳೆಅಳ ಅಪ್ಪಾಡಿನಾಯಕ ಇಲ್ಲಿದು ಚಿಕ್ಕಬೆಟ್ಟ ಕೆಚ್ಚ"(319, c 1246 A. D.); "ಸ್ವಸ್ತಿ ಶ್ರೀ ಪರಾಭವ ಸಂವತ್ಸರದ ಮಾರ್ಗಸಿರ ಬಹುಳ ಅಷ್ಟಮಿ ಸುಕ್ರವಾರದಂದು ಮಲೆಯಾಳ ಅಧ್ಯಾಡಿನಾಯಕ ಹಿರಿಯ ಬೆಟ್ಟದಿ ಚಿಕ್ಕಬೆಟ್ಟ ಕೆಚ್ಚ" (165, c. 1246 A. D.)

39. 175, c. 983 A. D.,

40. 176, c. 983 A. D.,

41. 179, c 983 A. D.

42. 397, c. 1179 A. D.

43. ". ರಾಮಾಸಾಪುತ್ರ ಹೀರಾಸಛಾಪಣಿ ತುಣಬಾಜಾತ್ರಾ ಸಫಳಾ (261, 1730 A D.); ".. ಹೀರಾಸಿಂಹ ಸುತಹಾಸ ಸಾಸುತ ಚಾಗೇಬಾ ಸೋನಾಬಾ ಈ ಗೋಮಾ ಈ ರಾಧಾ ಈ ಮುಂನಾ ಈ ಸಹಿತ ಜಾತ್ರಾ ಸಫಳಕರೀಕಾರ ಜಕರ (263, 1720 A. D.)

44. 204, c. 1600 A. D.

ಹುಟ್ಟಿ ಹರುಷಭಾಜನ"ರಾಗಿ, ಅನೇಕ ದಾನಗಳನ್ನು ಬಿಟ್ಟುಕೊಟ್ಟ ವಿಷಯ ಒಂದೆಡೆ ಇದೆ.[45] ಒಂದು ಶಾಸನದಲ್ಲಂತೂ ಯಾತ್ರಾರ್ಥಿಗಳು "ನಮ್ಮ ಸಂಪತ್ತನ್ನು ನಾವು ತೆಗೆದಿಡುತ್ತೇವೆ, ನಿನ್ನ ಸಂಪತ್ತನ್ನು ನಮಗೆ ಕೊಡು" [46] ಎಂಬರ್ಥ ಬರುವಂತೆ ಗೊಮ್ಮಟನನ್ನು ಕೇಳಿಕೊಂಡಿರುವ ವಿಷಯವನ್ನು ಓದಿದಾಗಲಂತೂ, ಎಂತಹ ಓದುಗನೂ ಭಾವಾವಿಷ್ಟನಾಗುತ್ತಾನೆ. ಗೊಮ್ಮಟನ ಪ್ರತಿಷ್ಠೆಗಿಂತ ಹಿಂದಿನ ಯಾವ ಶಾಸನವೂ ದೊಡ್ಡ ಬೆಟ್ಟದ ಮೇಲೆ ಲಿಖಿತವಾಗಿಲ್ಲದಿರುವುದೂ, ಪ್ರತಿಷ್ಠಾಪನೆಯಾದ ಮೇಲೆ ನೂರಾರು ಶಾಸನಗಳು ಕಂಡುಬರುವುದೂ ಗೊಮ್ಮಟನಿಂದ ದೊಡ್ಡ ಬೆಟ್ಟಕ್ಕೆ, ಶ್ರವಣಬೆಳಗೊಳಕ್ಕೆ ಬಂದ ಪ್ರಾಮುಖ್ಯವನ್ನು ತೋರಿಸುತ್ತವೆ.

ಹೀಗೆ ಗೊಮ್ಮಟನಿಂದ ಪ್ರಸಿದ್ಧವಾದ ಶ್ರವಣಬೆಳಗೊಳವನ್ನು ಕೆಲವು ಶಾಸನಗಳಲ್ಲಿ 'ಗೊಮ್ಮಟಪುರ'ವೆಂದು ಕರೆದಿರುವುದು[47] ಆಶ್ಚರ್ಯವನ್ನು ಹುಟ್ಟಿಸುವುದಿಲ್ಲ; ಅದು ಸಹಜವೇ ಎಂದೂ ಅನ್ನಿಸುತ್ತದೆ. ಜನರು ಶ್ರವಣಬೆಳಗೊಳವನ್ನು ಸ್ವಲ್ಪ ಕಾಲವಾದರೂ 'ಗೊಮ್ಮಟಪುರ'ವೆಂಬ ನಾಮಾಂತರದಿಂದ ಕರೆಯುತ್ತಿದ್ದಿರಬಹುದು. ಗೊಮ್ಮಟನನ್ನು 'ದಕ್ಷಿಣ ಕುಕ್ಕುಟೇಶ್ವರ ಜಿನಾಧಿನಾಥ' ಎಂದು ಕರೆಯುತ್ತಿದ್ದುದರಿಂದ[48] ಶ್ರವಣಬೆಳಗೊಳವು ದಕ್ಷಿಣದ ಪೌದನಪುರವಾಗಿ ಪರಿಣಮಿಸಿತು. ಅದನ್ನು 'ದಕ್ಷಿಣ ಕಾಶಿ'ಯೆಂದೂ[49] ಕರೆದಿರುವುದುಂಟು. ಚಿಕ್ಕ ಬೆಟ್ಟವನ್ನು ಚಂದ್ರಗಿರಿ ಎಂದೂ, ದೊಡ್ಡಬೆಟ್ಟವನ್ನು 'ವಿಂಧ್ಯಗಿರಿ' ಎಂದೂ ಕರೆಯುತ್ತಾರೆ. 'ವಿಂಧ್ಯಗಿರಿ' ಎಂಬ ಹೆಸರು ಎಷ್ಟು ಪ್ರಾಚೀನವೋ ತಿಳಿಯದು. ಅಲ್ಲದೆ 'ವಿಂಧ್ಯಗಿರಿ' ಎಂಬ ಹೆಸರಿನಿಂದ ಅದನ್ನು ಕರೆಯಲು ಕಾರಣಗಳೇನೋ ಅದೂ ತಿಳಿಯದು. ವಿಂಧ್ಯ ಎಂಬುದು ದೊಡ್ಡದಾದ ಬೆಟ್ಟ ಎಂಬರ್ಥದಲ್ಲಿ ಬಳಕೆಯಾಗಿರುವ ಸಾಧ್ಯತೆಯೂ ಇದೆ.

ಶ್ರವಣಬೆಳಗೊಳಕ್ಕೆ ಬಹುಕಾಲ 'ಬೆಳ್ಗೊಳ', 'ಬೆಳುಗೊಳ' ಎಂಬ ಹೆಸರು ರೂಢಿಯಲ್ಲಿದ್ದಿತು. ('ಶ್ರವಣಬೆಳಗೊಳ' ಎಂಬುದು ಸುಮಾರು ನೂರೈವತ್ತು ವರ್ಷಗಳಷ್ಟು ಮಾತ್ರ ಹಳೆಯದು). ಇದು ವೆಳ್ಗೊಳ ಎಂಬ ರೂಪದಲ್ಲಿ ಸು. 650 ರ ಶಾಸನದಲ್ಲಿ ಕಾಣಿಸಿಕೊಳ್ಳುತ್ತದೆ.[50] ನಮಗೆ ತಿಳಿದ ಮಟ್ಟಿಗೆ ಇದೇ ಅತ್ಯಂತ ಪ್ರಾಚೀನ ಉಲ್ಲೇಖ. ಸು 800ರ ಶಾಸನದಲ್ಲೂ ಇದರ ಉಲ್ಲೇಖವಿದೆ.[51] ಚಾಮುಂಡರಾಯನ ಮಗ ಜಿನದೇವಣ್ಣನು 'ಬೆಳ್ಗೊಳ'ದಲ್ಲಿ, ಚಿಕ್ಕಬೆಟ್ಟದ ಮೇಲೆ ಜಿನಗೃಹವನ್ನು ಕಟ್ಟಿಸಿದ ವಿಷಯ ಶಾಸನವೊಂದರಲ್ಲಿದೆ.[52]

---

45. 249, 1723 A. D.
46. 205. c. 1650 A. D.—"ಅಮಾಜೀರಕಮಠ ಉ (ಅಮಾಜೀರಕಮಠೇಉ) ಕುಮಜೀ[ರ] ಕಮಠು ಉ (ತಮಜೀ[ರ] ಕಮಠೇಉ"
47. "ಗೊಮ್ಮಟಪುರ ಭೂಷಣಮಿದು ಗೊಮ್ಮಟಮಾಯ್ತನೆ ." (345, c 1159 A. D.) "ಶ್ರೀ ಗೊಮ್ಮಟಪುರದ ಸಮಸ್ತನಗರಂಗಳ್ಗೆ"; "ಗೊಮ್ಮಟಪುರದ ಮನೆದೆರೆ" (333, c. 1159 A. D.); ಗೊಮ್ಮಟಪುರದ ಪಟ್ಟಣಸ್ವಾಮಿ ಮಲ್ಲಿಸೆಟ್ಟಿಯರು" (397, c. 1179 A. D.)
48. 335, 335, 1195 A. D.; 349, 1159 A. D.; 234, (1180 A. D.)
49. 355, 1857 A. D.
50. 31, c. 650 A. D.
51. 35, c. 800 A. D.—"...ನವಿಲೂರ ನಾಳ್ಕಾಮುಂಡುರುಂ ಬೆಳ್ಗೊಳದ ಗೋವಿಂದಪಾಡಿಯಲು... ಳ್ಕಾಮುಂಡುಂ ಬೆಳ್ಗೊಳ ದಾವಳಿ ಗೋವಿಂದಪಾಡಿಗೆ ಕೊಟ್ಟುದು."
52. 121, c. 995 A. D.;

'ಬೆಳ್ಗೊಳ',ವು 'ಬೆಳ್ಗುಳ'[53] 'ಬೆಳ್ಳುಗೊಳ'[54] 'ಬೆಳುಗುಳ'[55] ಎಂಬ ರೂಪಗಳಲ್ಲಿಯೂ ಸಿಗುತ್ತದೆ. ಅದರ ಸುತ್ತಮುತ್ತಣ ಪ್ರಾಂತವನ್ನು 'ಬೆಳುಗುಳದನಾಡು' ಎಂದು ಹದಿನೈದನೇ ಶತಕದಲ್ಲಿ ಕರೆಯುತ್ತಿದ್ದರು.[56]

'ಬೆಳ್ಗೊಳ' ಎಂಬ ಹೆಸರಿಗೆ ಕಾರಣಗಳನ್ನು ಕೊಡುತ್ತ ಒಂದು ಕಥೆಯೇ ಹುಟ್ಟಿದೆ. ಭುಜಬಲಿ ಚರಿತೆಯ ಪ್ರಕಾರ ಅದು ಹೀಗಿದೆ—ಚಾವುಂಡರಾಯನು ಗೊಮ್ಮಟನನ್ನು ಪ್ರತಿಷ್ಠಿಸಿ ಹಾಲಿನಿಂದ ಮಹಾಭಿಷೇಕವನ್ನು ಮಾಡಿಸಿದಾಗ ಆ ಹಾಲು ತೊಡೆಗಳ ಕೆಳಗೂ ಇಳಿಯಲಿಲ್ಲ. ಆಗ ಒಬ್ಬ ಮುದುಕಿ 'ಗುಳ್ಳಕಾಯಿ'ಯಲ್ಲಿ ಹಾಲನ್ನು ತಂದು ಸುರಿದಾಗ ಅದು ಗೊಮ್ಮಟನ ಮೇಲೆಲ್ಲಾ ಹರಿದು ಅವನನ್ನು ಮಿಾಯಿಸಿತು. ಅವಳೇ 'ಗುಳ್ಳಕಾಯಜ್ಜಿ'. ಚಾವುಂಡರಾಯನು ಬೆಟ್ಟದ ಬುಡದಲ್ಲಿ ಒಂದು ಊರನ್ನು ಕಟ್ಟಿಸಿ ಅದಕ್ಕೆ ಯಾವ ಹೆಸರಿಡಬೇಕೆಂದು ಗುರುಗಳನ್ನು ಕೇಳಿದಾಗ 'ಅಜ್ಜಿ ಬಿಳಿಯಗುಳ್ಳ ಕಾಯಲ್ಲಿ ಹಾಲನ್ನು ತಂದು ಅಭಿಷೇಕ ಮಾಡಿದ್ದರಿಂದ ಬೆಳ್ಗೊಳ ಎಂದು ಹೆಸರಿಡು' ಎಂದು ಹೇಳಿದರು. ಅವರ ಅಪ್ಪಣೆ ಪ್ರಕಾರ ಊರಿಗೆ 'ಬೆಳ್ಗೊಳ' ಎಂದು ಹೆಸರಿಟ್ಟು ಗುಳ್ಳಕಾಯಜ್ಜಿಯ ಶಿಲಾವಿಗ್ರಹವನ್ನು ಮಾಡಿಸಿದನು. 'ಅಭಿನವ ಪೌದನಪುರ' (ಎಂದರೆ ಬೆಳ್ಗೊಳ)ವನ್ನು ಪ್ರತಿಷ್ಠಾಪಿಸಿದ್ದು ಹೀಗೆ.

ಇದು ಭುಜಬಲಿ ಚರಿತೆಯಲ್ಲಿ ಬಂದಿರುವ ಕಥೆ. ಸ್ಥಳಪುರಾಣದ ಪ್ರಕಾರ ಆ ಮುದುಕಿ ಯಾರೂ ಅಲ್ಲ, ಪದ್ಮಾವತಿದೇವಿ; ತನ್ನ ಮಹತ್ಕಾರ್ಯಕ್ಕಾಗಿ ಅಹಂಕಾರ ಪಡುತ್ತಿದ್ದ ಚಾಮುಂಡರಾಯನಿಗೆ ಬುದ್ಧಿ ಕಲಿಸಲು ಮಸ್ತಕಾಭಿಷೇಕದ ಸಮಯದಲ್ಲಿ ಮುದುಕಿಯ ವೇಷದಲ್ಲಿ ಬಂದಿದ್ದಳು. ರಾಜಾವಳೀ ಕಥೆಯ ಪ್ರಕಾರ ಅವಳು ಕೂಷ್ಮಾಂಡಿನೀದೇವಿ; ಅವರ ವಿಗ್ರಹವನ್ನು ಹಿಂದೆ ರಾಮ, ರಾವಣ, ಮಂಡೋದರಿಯರು ಅರ್ಚಿಸಿದ್ದರು.

ಗುಳಕಾಯಜ್ಜಿಯ ಕಥೆ ಬಹುಮಟ್ಟಿಗೆ ಕಾಲ್ಪನಿಕವೆಂದು ಕಾಣುತ್ತದೆ. ಆ ವಿಗ್ರಹವು ಒಬ್ಬ ಯಕ್ಷಿಯದು, ಬಹುಶಃ ಕೂಷ್ಮಾಂಡಿನಿಯದು. ಆ ವಿಗ್ರಹದ ಕೈಯಲ್ಲಿ ಗುಳ್ಳಕಾಯನ್ನು ಹೋಲುವ ವಸ್ತುವಿದೆ. 'ಬೆಳ್ಗೊಳ' ಎಂಬ ಹೆಸರಲ್ಲಿ 'ಗುಳ' ಅಥವಾ 'ಗೊಳ' ಇದೆ. ಬೆಳ್ಗೊಳ ಎಂಬ ಹೆಸರನ್ನು ವಿವರಿಸಬಲ್ಲ ಒಂದು ಕಥೆ ನಿರ್ಮಾಣವಾಗಲು ಬಹುಶಃ ಇದು ಕಾರಣವಾಯಿತು.

'ಬೆಳ್ಗೊಳ' ಎಂಬುದರ ವಿವರಣೆಗೆ ಶಾಸನಗಳೇ ಸಹಾಯವನ್ನು ಒದಗಿಸುತ್ತವೆ. ಅದರ ಸಂಸ್ಕೃತ ರೂಪವೆಂದು "ಧವಳ ಸರಸ ತೀರ್ಥ" ಅಥವಾ 'ಶ್ವೇತ ಸರೋವರ' ಎಂಬ ಪದಗಳನ್ನು ಶಾಸನಗಳು ಬಳಸಿವೆ.[57] 'ಬೆಳ್ಗೊಳ'ವೆಂದರೆ 'ಬಿಳಿಯ ಕೊಳ' ಎಂದರ್ಥ. ಹಾಗಾದರೆ ಯಾವುದೀ ಬಿಳಿಯ ಕೊಳ? ದೊಡ್ಡಬೆಟ್ಟ ಚಿಕ್ಕಬೆಟ್ಟಗಳ ಮಧ್ಯೆ ಒಂದು ಬಹು ದೊಡ್ಡ, ಬಹು ಸುಂದರ ಕೊಳವಿದೆ. ಆ ಕೊಳದ ಉತ್ತರ ದಿಕ್ಕಿನ ಮಂಟಪದಲ್ಲಿನ ಶಾಸನವೊಂದರಲ್ಲಿ ಆ ಕಲ್ಯಾ

53. 249, 1723 A. D.
54. 318, 1217 A. D.
55. 352, 1634 A. D.
56. 395, c. 1500 A. D.
57. 67, 1129 A. D.; "ಧವಲ ಸರೋವರ ನಗರ" (258, 1432 A. D.)

ಣಿಯು ಚಿಕ್ಕದೇವ ರಾಜ ಒಡೆಯರು ಮಾಡಿಸಿದ್ದು ಎಂದರ್ಥ ಬರುವ ಮಾತುಗಳಿವೆ.[58] ಅನಂತ ಕವಿಯ ಗೊಮ್ಮಟೇಶ್ವರ ಚರಿತೆಯಲ್ಲೂ (ಸು. 1780) ಇದೇ ವಿಷಯವಿದೆ. ಶ್ರೀ ಚಿಕ್ಕ ದೇವರಾಜ ಒಡೆಯರು ಅಣ್ಣಯ್ಯ ಎಂಬ ತಮ್ಮ ಕಮ್ಮಟಾಧ್ಯಕ್ಷನ ಬೇಡಿಕೆಯ ಪ್ರಕಾರ ಶ್ರವಣಬೆಳ ಗೊಳದಲ್ಲಿ ಒಂದು ಕಲ್ಯಾಣಿಯನ್ನು ಕಟ್ಟಿಸಲು ಅಪ್ಪಣೆ ಮಾಡಿದರೆಂದೂ ಅದರ ನಿರ್ಮಾಣ ಕಾರ್ಯ ಪೂರ್ಣವಾಗುವುದರೊಳಗೆ ಅವರು ವೈಕುಂಠವಾಸಿ ಗಳಾದರೆಂದೂ, ಮೊದಲನೆಯ ಕೃಷ್ಣರಾಜ ಒಡೆ ಯರ ಕಾಲದಲ್ಲಿ ಅಣ್ಣಯ್ಯನು ಕಲ್ಯಾಣಿಯನ್ನೂ ಅದರ ಗೋಪುರಗಳನ್ನೂ ಮಂಟಪವನ್ನೂ ಮುಗಿ ಸಿದನೆಂದೂ ಅಲ್ಲಿ ಹೇಳಿದೆ[59]. ಈ ಎರಡು ಆಕರಗಳನ್ನು ಗಮನಿಸಿ ಹೇಳುವುದಾದರೆ ಆ ಕಲ್ಯಾ ಣಿಯು ಏಳನೇ ಶತಕದಷ್ಟು ಹಳೆಯದಲ್ಲ, 18ನೇ ಶತಕದಷ್ಟು ಈಚಿನದು, ಚಿಕ್ಕದೇವರಾಜ ಒಡೆ ಯರು ಆ ಕಲ್ಯಾಣಿಯನ್ನು ಹೊಸದಾಗಿ ಕಟ್ಟಿಸಿ ದರೋ ಅಥವಾ ಮೊದಲಿನಿಂದಲೂ ಇದ್ದ ಪುಟ್ಟ ಕೊಳದಂತ್ತಿದ್ದ ಕಲ್ಯಾಣಿಯನ್ನು ವಿಸ್ತರಿಸಿ ಭವ್ಯ ವಾಗಿ ನಿರ್ಮಿಸಿದರೋ ಹೇಳುವುದು ಕಷ್ಟ. ಎರಡ ನೆಯ ಊಹೆ ನಿಜವಾದರೆ ಆ ಕೊಳದಿಂದಲೇ ಆ ಊರಿಗೆ 'ಬೆಳ್ಗೊಳ' ಎಂಬ ಹೆಸರು ಬಂದಿರ ಬೇಕು; ಮೊದಲನೆಯ ಊಹೆ ನಿಜವಾದರೆ ಆ ಕೊಳ ಇನ್ನಾವುದೋ ಬೇರೆ ಆಗಿರಬೇಕು[60].

ಬೆಳ್ಗೊಳ ಎಂಬ ಹೆಸರಿನ ಕೊನೆಯ ಉಲ್ಲೇಖ ಕ್ರಿ. ಶ. 1189 ರ ಶಾಸನದ್ದು[61]. ಹಿಂದೆ ಹೇಳಿದಂತೆ 'ಶ್ರವಣ ಬೆಳಗೊಳ' ಎಂಬ ಹೆಸರು ಬಹು ಈಚಿನದು. ಕ್ರಿ. ಶ. 1810 ರಲ್ಲಿ ಕಾಗದದ ಮೇಲೆ ಬರೆದಿರುವ ದಿವಾನ್ ಪೂರ್ಣ ಯ್ಯನವರ ಸನ್ನದುವಿನಲ್ಲಿ 'ಶ್ರವಣ ಬೆಳಗುಳ' ಎಂಬ ಹೆಸರು ಮೊದಲು ಗೋಚರವಾಗುತ್ತದೆ[62]. ಕ್ರಿ. ಶ. 1830 ರಲ್ಲಿ ಬರೆದಿರುವ ಮುಮ್ಮಡಿ ಕೃಷ್ಣರಾಜ ಒಡೆಯರ ಸನ್ನದುವಿನಲ್ಲಿ[63] 'ಶ್ರವಣ ಬೆಳಗುಳ' ಎಂಬ ಹೆಸರು ಮೂರು ನಾಲ್ಕು ಕಡೆ ಬಂದಿದೆ. (ಬರೀ 'ಬೆಳಗುಳ' ಎಂದೂ ಉಂಟು). ಬೆಳಗೊಳ ಎಂಬ ಹೆಸರಿನ ಇತರ ಊರುಗಳಿಂದ[64] ಪ್ರತ್ಯೇಕಿಸಲು ಅದಕ್ಕೆ 'ಶ್ರವಣ' ಎಂಬ ವಿಶೇಷಣವನ್ನು ಸೇರಿಸಿರಬೇಕು. 'ಶ್ರವಣ' ಎಂದರೆ ಜೈನಸನ್ಯಾಸಿ ಎಂದರ್ಥ. ಶ್ರವಣ ಬೆಳಗೊಳದ ಸಮೀಪದಲ್ಲಿ 'ಹಳೆಯ ಬೆಳ್ಗೊಳ' ಎಂಬ ಊರಿದೆ. ಅದಕ್ಕೆ ಆ ಹೆಸರು ಬರಲು ಕಾರಣವೇನು? ಹಾಗಾದರೆ ಈಚಿನ ಬೆಳ್ಗೊಳ ಯಾವುದು? ಅದು ಈಗಿನ ಶ್ರವಣ ಬೆಳ್ಗೊಳವೇ? ಸಾವಿರ ವರ್ಷಗಳ ಹಿಂದಿನ ಶಾಸನಗಳಲ್ಲಿ ಕಂಡು ಬರುವ 'ಬೆಳ್ಗೊಳ'ವು ಈಗಿನ 'ಹಳೆಯ ಬೆಳ್ಗೊಳ'ದ ಸಮೀಪದಲ್ಲಿದ್ದು ಕ್ರಮೇಣ ಅಲ್ಲಿಂದ ಬಂದ ಜನ ಈಗಿನ ಶ್ರವಣಬೆಳ್ಗೊಳದ ಬಳಿ ಊರು ಕಟ್ಟಿ ಕೊಂಡು ನೆಲೆಸಿದರೇ?—ಇತ್ಯಾದಿ ಪ್ರಶ್ನೆಗಳ ತರಂಗವನ್ನೇಳಿಸುತ್ತದೆ 'ಹಳೆಯ ಬೆಳ್ಗೊಳ' ಎಂಬ ಹೆಸರು.

—ಎಂ. ಚಿದಾನಂದಮೂರ್ತಿ

---

58. 365, c. 1700 A. D.—"ಶ್ರೀ ಚಿಕ್ಕದೇವರಾಜೇಂದ್ರ ಮಹಾಸ್ವಾಮಿಯವರ ಕಲ್ಯಾಣಿ"
59. Introduction. P. 31.
60. ಶ್ರವಣಬೆಳಗೊಳಕ್ಕೆ ಉತ್ತರಕ್ಕೆ ಆರು ಮೈಲಿ ದೂರದಲ್ಲಿ 'ಹಳೆಯ ಬೆಳ್ಗೊಳ' ಎಂಬ ಊರಿದೆ. ಹೆಸರನ್ನು ನೋಡಿದರೆ ಅದೇ ಮೂಲ ಬೆಳ್ಗೊಳ, ಈಗಿನ ಶ್ರವಣಬೆಳಗೊಳ ಇತ್ತೀಚೆಗೆ ನಿರ್ಮಾಣವಾದದ್ದು ಎಂಬ ಭಾವನೆ ಬರುತ್ತದೆ. ಈ ದಿಶೆಯಲ್ಲಿ ಇನ್ನೂ ಹೆಚ್ಚಿನ ಕೆಲಸವಾಗಬೇಕಾಗಿದೆ.
61. 383, 1889 A D.—"...ಶ್ರೀಮದ್ಬೆಳ್ಗುಳನಿವಾಸಿಯಾಗಿದ್ದ..."
62. 353, 1810A. D.
63. 354, 1830 A. D.
64. ಹಳೆಯಬೆಳ್ಗೊಳ, ಕೋಡಿಬೆಳ್ಗೊಳ-ಇವು ಶ್ರವಣಬೆಳಗೊಳದ ಅಕ್ಕಪಕ್ಕದಲ್ಲಿರುವ ಊರುಗಳು. ಮೈಸೂರಿನ ಬಳಿಯ ಒಂದು 'ಬೆಳ್ಗೊಳ' ಎಂಬ ಹೆಸರಿನ ಊರಿದೆ.

# ಯೋಗರಾಜ

ಹೆಸರು ಹೆಚ್ಚು ಅಚ್ಚರಿಯನ್ನುಂಟುಮಾಡ ಬಹುದು. ಆದರೂ ಅಂತಹ ಅಚ್ಚರಿಯೇನಿಲ್ಲ. ಹೆಸರು ಹೊಸತಾದರೂ ಅದರ ಹೆಚ್ಚಳ ಹೊಸ ತಲ್ಲ. ಹೆಂಪು ಹೊಸತಲ್ಲ.

ಯೋಗರಾಜದ ಶಕ್ತಿ ಅಂತಹದು. ಆ ಹೆಸರಿಗದು ತಕ್ಕುದು. ಯೋಗಸಿದ್ಧಿಗದು ಯೋಗ್ಯ. ಯಾಜಕರಿಗದು ಸೌಭಾಗ್ಯ. ಏಕರಸ ಯೋಗಕದುವೆ ರಾಜ; ಶಿವತೇಜ. ಹಠ, ಮಂತ್ರ, ಲಯ, ರಾಜಯೋಗಗಳು ಬರೀ ಯೋಗಗಳು. ಇವು ನಾಲ್ಕು ಪರಿವಿಡಿದು ತನು, ಪ್ರಾಣ, ಚಿತ್ತ, ಜೀವ ರನ್ನು ಶುದ್ಧಿ ಮಾಡಬಲ್ಲವು. ಅದೇ ಶಿವಜೀವೈಕ್ಯ ರೂಪ ಸಾಮರಸ್ಯವನ್ನು ಅಂದರೆ ಲಿಂಗಾಂಗೈಕ್ಯ ವನ್ನುಂಟುಮಾಡುವ ಶಿವಯೋಗವೇ ಯೋಗ ರಾಜ! ಇದು ಆ ನಾಲ್ಕು ಯೋಗಗಳಿಗೆಲ್ಲ ರಾಜ! ಯೋಗರಾಜವೆನಿಸಿದ ಶಿವಯೋಗದಿಂದ ಅಂಗಾಂಗಗಳೂ ಅಂತರಂಗವೂ ಪೂರ್ಣ ಪರಿ ಶುದ್ಧವಾಗಿ ಪರಿಣಾಮುಗೊಳ್ಳುತ್ತವೆ. ಕ್ರಿಯೆ, ಜ್ಞಾನ, ಭಕ್ತಿ, ಧ್ಯಾನ, ವ್ರತ–ಎಲ್ಲವೂ ಶಿವಯೋಗ ದಲ್ಲಿ ಸಮಾವೇಶಗೊಳ್ಳುತ್ತವೆ. ಹಠ, ಮಂತ್ರ, ಲಯ, ರಾಜಯೋಗಗಳೂ ಶಿವಯೋಗದಲ್ಲಿ ಸಮ ನ್ವಯವಾಗುತ್ತವೆ. ಯೋಗರಾಜವು ನವಚಕ್ರ ಗಳಿಗೆ ನವಚೈತನ್ಯವನ್ನುಂಟುಮಾಡುತ್ತದೆ. ನವ ಕಮಲಗಳಲ್ಲಿ ನವನವೀನ ಮಕರಂದವನ್ನು ಸಂದಾಯ ಮಾಡುತ್ತದೆ. ಅದರಿಂದ ನವವಿಧ ಗ್ರಂಥಿಗಳು ಬಿಚ್ಚಿ ಬಟ್ಟಬಯಲಾಗುತ್ತವೆ. ನವ ನಾಡಿಗಳಲ್ಲಿ ನವಶಕ್ತಿ ಸಂಭವಿಸುತ್ತದೆ; ಸಂಚ ರಿಸುತ್ತದೆ.

**ಪಿಂಡಾಂಡ ಪರಿಚಯ**

ಅಂಡ ಎರಡು ಬಗೆ; ಪಿಂಡಾಂಡ— ಬ್ರಹ್ಮಾಂಡವೆಂಬುದಾಗಿ! ಒಂದು ಚಲ, ಇನ್ನೊಂದು ಅಚಲ. ಒಂದು ವ್ಯಷ್ಟಿ, ಇನ್ನೊಂದು ಸಮಷ್ಟಿ. ಒಂದು ಪರಿಮಿತ, ಇನ್ನೊಂದು ಅಪರಿ ಮಿತ. ಇವೆರಡರಲ್ಲಿರುವ ಖಂಡತೆಯ ಕಳೆದು, ಅಖಂಡತೆಯ ಸಂಪಾದಿಸುವುದೆ ಯೋಗರಾಜವೆನಿ ಸಿದ ಶಿವಯೋಗದ ಹೃದಯ.

ಶಿವ ಎಂದರೆ ಬ್ರಹ್ಮ. ಶಿವಯೋಗವೆಂದರೆ ಬ್ರಹ್ಮಯೋಗ. ಬ್ರಹ್ಮಯೋಗವಾದರೆ ಬ್ರಹ್ಮಾಂಡ ಯೋಗವು ತಾನಾಗಿಯೆ ಅಳವಡುತ್ತದೆ. ಬ್ರಹ್ಮಕ್ಕೆ ಭಿನ್ನವಿಲ್ಲ ಬ್ರಹ್ಮಾಂಡ. ಅದನ್ನು ಶಿವಯೋಗ ದಿಂದ ಸಾಧಿಸುವ ಪಿಂಡಾಂಡವು ಗಾತ್ರದಿಂದ ಚಿಕ್ಕದಾದರೂ ಗುಣದಿಂದ ಚಿಕ್ಕದಲ್ಲ. ಪಿಂಡ ಗತನಾಗಿ ಪಿಂಡಾಂಡವೆನಿಸಿದೆ. ಅಂಡ-ಅಂಡ ಗಳು ಒಂದಾದಂತೆ ಪಿಂಡ—ಬ್ರಹ್ಮಗಳು ಒಂದೇ! ಆ ಪರಶಿವರೂಪ ಬ್ರಹ್ಮದ ಸಂಕೋಚರೂಪವೆ ಅಂದರೆ ನ್ಯೂನಭಾವವೇ ಪಿಂಡ. ಸಂಕೋಚ ವಾದ ಪಿಂಡವನ್ನು ವಿಕಾಸಗೊಳಿಸುವುದೇ ಯೋಗ ರಾಜದ ಧ್ಯೇಯ.

ಪಿಂಡವನ್ನು ಅಂಡವು, ಅಂಡವನ್ನು ಪಿಂಡವು ಆಶ್ರಯಿಸಿ ಪಿಂಡಾಂಡವಾಗಿದೆ. ಅಂಡವೆಂದರೆ ಸ್ಥೂಲ ಸೂಕ್ಷ್ಮ ವಸ್ತುಗಳು. ಪಿಂಡವೆಂದರೆ ಕಾರಣ—ಮಹಾಕಾರಣ ವಸ್ತು. ಅಂಡ ಶಕ್ತಿ ಕಾರ್ಯ; ಪಿಂಡ ಶಿವಕಾರ್ಯ. ಪಿಂಡಾಂಡ ಶಿವ ಶಕ್ತಿ ಸಂಪುಟ;—ಶಕ್ತಿ ವಿಶಿಷ್ಟಾದ್ವೈತ.

ಪಿಂಡ—ಅಂಡಗಳೆರಡೂ ಅನ್ಯೋನ್ಯಾಶ್ರಯ; ಬೀಜಾಂಕುರನ್ಯಾಯ. ಪಿಂಡದ ಆಶ್ರಯದಲ್ಲಿ ಅಂಡವಿದೆ. ಅಂಡದ ಆಶ್ರಯದಲ್ಲಿ ಪಿಂಡವಿದೆ. ದೀಪದ ಪ್ರಕಾಶವಿದ್ದಂತೆ ಪಿಂಡ. ದೀಪದ ಉಷ್ಣವಿದ್ದಂತೆ ಅಂಡ. ಸ್ವರೂಪದಿಂದ ಅವೆರಡೂ ಒಂದೇ !

ಪಿಂಡ ಭೋಕ್ತೃ; ಅಂಡ ಭೋಗ್ಯ. ಪಿಂಡ ಅಂಗಿ; ಅಂಡ ಅಂಗ. 'ಶುದ್ಧಾಂತಃಕರಣೋ ದೇಹೀ ಪಿಂಡ ಶಬ್ದೇನ ಗೀಯತೇ' ಎಂದಿದೆ ಶ್ರೀ ರೇಣುಕಭಗವದ್ವಾಣಿ. ಅಂಗವಿಲ್ಲದೆ ಅಂಗಿಯಿಲ್ಲ. ಅಂಗಿಯಿಲ್ಲದೆ ಅಂಗವಿಲ್ಲ. ಇದೇ ಶಿವಾದ್ವೈತ; ಇದೇ ಶಿವಯೋಗ. ಅಂಡರೂಪಾದ ಶಕ್ತಿಯು ಪಿಂಡರೂಪಾದ ಶಿವನಲ್ಲಿ ಸಮರಸಗೊಳ್ಳುವುದೇ ಶ್ರೇಷ್ಠಯೋಗ; ಶಿಷ್ಟಯೋಗ ಅದನ್ನೇ ಯೋಗರಾಜವೆಂದು ಹೇಳುವುದು.

ಇದು ಬೀಜಾಂಕುರ ನ್ಯಾಯ. ಭೂಜ ಬೀಜದಲ್ಲಿ, ಬೀಜ ಭೂಜದಲ್ಲಿ ಬೆರೆದಿರುವಂತೆ ಶಿವ-ಶಕ್ತಿಯಲ್ಲಿ, ಶಕ್ತಿ ಶಿವನಲ್ಲಿ ಬೆರೆಯಬೇಕು. ಈ ನಿಯತಿಗನುಸರಿಸಿ ಶಿವನೊಳಗೆ ಸಮರಸವಾಗಲು ಶಕ್ತಿ ಸಂಚರಿಸುತ್ತದೆ. ಆ ಶಕ್ತಿ ಸಂಚಾರಕ್ಕೆ ನಾಡಿ ಕಾರಣ. ಆ ನಾಡಿಗೆ ಆಧಾರ ಚಕ್ರ. ಆ ಚಕ್ರಕ್ಕೆ ಆಧಾರ ಚೈತನ್ಯ.

> "ಒಂಬತ್ತು ಯೆಜ್ಜದಾ| ತುಂಬಿದ ಕೊಡನೊಳಗೆ|
> ಸಂಭ್ರಮದ ಮುತ್ತು ಇರುತಿಹುದು ಅದರನುವ|
> ನಂಬಿ ಕಂಡವನೆ ಕಡು ಜಾಣ."
>
> —ಯೋಗಾಂಗತ್ರಿವಿಧಿ

ಶರೀರ (ಪಿಂಡಾಂಡ)ದಲ್ಲಿ ಶಕ್ತಿ ಸಂಚರಿಸುವ ನಾಡಿಗಳು ಅನೇಕವಿವೆ. ಅವುಗಳಲ್ಲಿ ಹದಿನಾಲ್ಕು ಮುಖ್ಯವೆಂದು ಯೋಗಾಚಾರ್ಯರು. ಹನ್ನೊಂದು ಮುಖ್ಯವೆಂದು ಇನ್ನು ಕೆಲವರು. ಒಂಬತ್ತು ಮುಖ್ಯವೆಂದು, ಒಂಬತ್ತರಲ್ಲಿ ಇಡಾ, ಪಿಂಗಳ, ಸುಷುಮ್ನ ಈ ಮೂರು ಮುಖ್ಯವೆಂದು, ಇವುಗಳಲ್ಲಿ ಸುಷುಮ್ನೆಯು ಅತಿ ಮುಖ್ಯವೆಂದು ಶಿವಾದ್ವೈತಿಗಳು.

ಈ ಸುಷುಮ್ನಾ ನಾಡಿಯೇ ಆಧಾರದಿಂದ ಶಿಖಾಚಕ್ರದವರೆವಿಗೂ ಹಬ್ಬಿರುವುದು. ಊರ್ಧ್ವಗಾಮಿಯಾಗಿರುವುದು. ಕುಂಡಲಿನೀ ಶಕ್ತಿಯನ್ನು ಕರೆದೊಯ್ದು ಸಹಸ್ರಾರದಲ್ಲಿರುವ ಪರಶಿವನಲ್ಲಿ ಬೆರೆಸುವುದು. ಇದು ಯೋಗರಾಜದ ತಿರುಳು-

ಈ ಕುಂಡಲಿನೀ ಶಕ್ತಿಗೆ ಕ್ರಿಯಾಶಕ್ತಿ ಜ್ಞಾನಶಕ್ತಿ ಇಚ್ಛಾಶಕ್ತಿ ಮುಂತಾಗಿ ನವಶಕ್ತಿಯರಿದ್ದಾರೆ. ಆ ಪರಶಿವನಿಗೆ ಆಚಾರಾದಿ ನವಲಿಂಗಗಳಿದ್ದಾರೆ. ಇವರು ಕ್ರಮವಾಗಿ ಆ ಆ ಚಕ್ರಗಳಲ್ಲಿದ್ದು ಪಿಂಡಾಂಡ ನಿರ್ವಹಣೆಯನ್ನು ನೆರವೇರಿಸುತ್ತಾರೆ. ಈ ನವಚೈತನ್ಯ—ನವಶಕ್ತಿಗಳನ್ನು ಜಾಗ್ರತಗೊಳಿಸುವುದೇ ಯೋಗರಾಜದ ದಿವ್ಯ ಮಾರ್ಗ; ಈ ಯೋಗಮಾರ್ಗವೇ ರಾಜಮಾರ್ಗ.

ಅಧೋಗಾಮಿಯಾದ ಶಕ್ತಿ ಊರ್ಧ್ವಗಾಮಿಯಾಗಿ ಸಂಚರಿಸಬೇಕು. ಉನ್ಮನಿಯಾಗಿ ಸಂಚರಿಸಬೇಕು. ಸುಷುಮ್ನೆಯಲ್ಲಿ ಸಂಚರಿಸಬೇಕು. ಆಗ ಅಲ್ಲಲ್ಲಿ ಸಂಧಿಸುವ ಗ್ರಂಥಿಗಳೇ ಚಕ್ರಗಳು. ಅಲ್ಲಲ್ಲಿರುವ ಚೈತನ್ಯಗಳೇ ಶಿವಲಿಂಗಗಳು. ಅವುಗಳ ನೆರವಿನಿಂದ ಮೇಲುಮೇಲಕ್ಕೇರಬಲ್ಲುದು ಶಕ್ತಿ. ಶಕ್ತಿಯ ಉದ್ಗಮನಕ್ಕೆ ಸುಷುಮ್ನಾನಾಡಿ ಮತ್ತು ಷಟ್‌ಚಕ್ರಗಳು ಸಹಾಯಕಗಳಾಗಿವೆ. ನವ ಚಕ್ರಗಳಲ್ಲಿ ಆರು ಶಕ್ತಿ ಚಕ್ರಗಳೆಂದು, ಮೂರು ಶಿವ ಚಕ್ರಗಳೆಂದು, ಹತ್ತನೆಯ ಚಕ್ರವೇ ಸರ್ವಶೂನ್ಯ ನಿರಾಲಂಬವೆಂದು ಶಿವಾದ್ವೈತ-ಸಿದ್ಧಾಂತ-ಪ್ರತಿಪಾದನೆ. ಶಕ್ತಿ ಚಕ್ರಗಳು ಭೋಗಾಂಗದಲ್ಲಿ, ಶಿವಚಕ್ರಗಳು ಯೋಗಾಂಗದಲ್ಲಿ ಇರುತ್ತವೆ. ಆ ಯೋಗಾಂಗದ ಆರಂಭದಲ್ಲಿ ಇರುವ ಶಿವನ ಯೋಗ ಶಕ್ತಿಗುಂಟಾಗುವುದೇ ಶಿವಯೋಗ! ಅದೇ ಯೋಗ ರಾಜ !

"ನವಪುರದ ಒಳಗೊಂದು। ನವರತ್ನ ಜೆಲೆಯಾಗೆ। ನವನಾರಿಯರದ ಕಂಡು ಕೊಳಲಿಕ್ಕೆ ಭನಸೂತ್ರ ಹರಿದು ಬಯಲಾದೆ"

—ಯೋಗಾಂಗತ್ರಿವಿಧಿ

ಜೀವನಿಗೆ ಅಂಗತ್ವ ಪ್ರಾಪ್ತಿಯಾಗುವಲ್ಲಿಗೆ ಹಠ, ಮಂತ್ರ, ಲಯ, ರಾಜ ಯೋಗಗಳು ಮುಕ್ತಾಯವಾಗುತ್ತವೆ. ಮುಂದೆ ಅಂಗನು ಲಿಂಗವಾಗುವುದೇ ಶಿವಯೋಗ ನಾಮಕ ಯೋಗರಾಜದ ರಹಸ್ಯ! ಅದೇ ಸಾಮರಸ್ಯ!

ಆ ಆ ಜ್ಞಾನೇಂದ್ರಿಯಗಳಲ್ಲಿ ಆ ಆ ಪ್ರಸಾದ ಉತ್ಪತ್ತಿಯಾಗುವುದೇ ಉತ್ಪತ್ತಿಷಟ್‌ಸ್ಥಲಯೋಗ. ಉತ್ಪತ್ತಿಗೊಂಡ ಬಳಿಕ ಅವು ಆಧಾರಾದಿಗಳಲ್ಲಿ ಆ ಆ ಲಿಂಗಮುಖಾಂತರ ಸ್ಥಿತಿಗೊಳ್ಳುವುದೇ ಸ್ಥಿತಿಷಟ್‌ಸ್ಥಲ ಅಂದರೆ ಸ್ಥಿತಿಯೋಗರಾಜ. ಅನಂತರ ಶೇಷಾಂಶಗಳು ಕರ್ಮೇಂದ್ರಿಯಗಳಲ್ಲಿರುವ ಲಿಂಗಗಳಲ್ಲಿ ಲಯವಾಗುವುದೇ ಲಯ ಯೋಗರಾಜ! ಸ್ಥಿತಿ ಯೋಗರಾಜವೇ ವಿಶಾಲವಾದುದಾಗಿ ಅದರ ವಿಚಾರವನ್ನಿಲ್ಲಿ ವಿವರವಾಗಿಸಲಾಗಿದೆ.

ಮೊದಲಿನದು ಆಧಾರಚಕ್ರ. ಸರ್ವಾಂಗಕ್ಕೆಲ್ಲ ಇದೇ ಆಧಾರ. ಇದನ್ನೇ ಕೆಲವರು ಚತುರ್ಮುಖ ಬ್ರಹ್ಮಚಕ್ರವೆಂದು ಕರೆಯುತ್ತಾರೆ. ಇದಕ್ಕೆ 'ಪದ್ಮ'ವೆಂದು ಮತ್ತೊಂದು ಹೆಸರು. ಇದಕ್ಕೆ ನಾಲ್ಕುದಳ. ತ್ರಿಕೋಣಾಕೃತಿ. ಪೃಥ್ವಿ ಪ್ರಕೃತಿ. ಇದನ್ನು ಮೂಲಕಂದವೆಂದು ವಹ್ನಿ ಕುಂಡವೆಂದು ತತ್ತ್ವಕುಂಡಲಿನಿಯೆಂದು ಹೇಳುತ್ತಾರೆ. ಇದು ಕ್ರಿಯಾಶಕ್ತಿಗೆ ನಿಲಯವಾಗಿದೆ. ಇದು ಎಲ್ಲ ನಾಡಿಗಳ ಕೇಂದ್ರ. ಇದರಿಂದಾಗಿಯೂ ಇದು ಆಧಾರ. ಇದರಿಂದಲೇ ಇನ್ನುಳಿದ ಎಲ್ಲ ನಾಡಿಗಳೂ ಹೊರಡುತ್ತವೆ. ಕುಹೂ, ಹಸ್ತಿ, ಜಿಹ್ವಾ, ಯಶಸ್ವಿನೀ, ವಿಶ್ವೋದರಾ, ವಾರಣಾ ನಾಡಿಗಳು ಕರ್ಮೇಂದ್ರಿಯಗಳನ್ನು ಬಳಸಿಕೊಂಡು ಇಲ್ಲಿಂದ ಹೊರಹೊಮ್ಮುತ್ತವೆ. ಇಡಾ, ಪಿಂಗಳ, ಸುಷುಮ್ನಾ, ಗಾಂಧಾರಿ, ಪೂಷಾ, ಸರಸ್ವತಿ, ಯಶೋವತಿ, ಶಂಖಿನೀ, ಪಯಸ್ವಿನೀ ನಾಡಿಗಳು ಜ್ಞಾನೇಂದ್ರಿಯಗಳ ಬಳಸಿಕೊಂಡು ಶಕ್ತಿಯುತವಾಗಿ ಮೇಲಕ್ಕೆ ಹರಿಯುತ್ತವೆ. ಆಧಾರವು ಮಿಗಿಲಾಗಿ ಇಡಾ-ಪಿಂಗಳ ನಾಡಿಗಳೆರಡಕ್ಕೆ ಮೂಲಾಶ್ರಯ. ಘ್ರಾಣದಲ್ಲಿ ಉತ್ಪತ್ತಿಯಾದ ಗಂಧ ಪ್ರಸಾದವು ಇಲ್ಲಿ ಸ್ಥಿತಿಗೊಳ್ಳುತ್ತದ. ಜ್ಯೋತಿಷ್ಮವಾದ ಜೀವರೂಪಾದ ಪ್ರಾಣಾಧಾರವಾದ ಆಚಾರಲಿಂಗವನ್ನಿಲ್ಲಿ ಅರ್ಚಿಸಿ ಧ್ಯಾನಿಸಬೇಕು ಭಕ್ತಾಂಗನು. ಚಿತ್ಕಳಾರೂಪ ಶ್ವಾಸ-ನಿಶ್ವಾಸವೇ ಇಲ್ಲಿ ಆಚಾರ ಲಿಂಗವಾಗಿರುತ್ತದೆ. ಶುದ್ಧವಾದ ಶ್ವಾಸವನ್ನು ತಡೆದು ಅಶುದ್ಧವಾದ ನಿಶ್ವಾಸವನ್ನು ಬಿಡಬೇಕು. ತಡೆದ ಶುದ್ಧಶ್ವಾಸದಿಂದ ಆಚಾರಲಿಂಗಕ್ಕೆ ಅರ್ಪಿತವಾದ ಸುಗಂಧ ಪ್ರಸಾದವು ಅಂಗಪುಷ್ಟಿಯನ್ನು ಕ್ರಿಯಾಶಕ್ತಿಯನ್ನು ವರ್ಧಿಸುತ್ತದೆ. ನಿವೃತ್ತಿಗೆ ಮಾರ್ಗವನ್ನು ಕಲ್ಪಿಸುತ್ತದೆ. ಪಿಂಡಾಂಡದ ಮೂಲವೇ ಇದಾದುದರಿಂದ ಇದು ಮೂಲಾಧಾರ.

ಮುಖ್ಯವಾಗಿ ಘ್ರಾಣತ್ವದಲ್ಲಿ ಉತ್ಪತ್ತಿಯಾದ ಸುಗಂಧ ಪ್ರಸಾದವು ಮೂಲಾಧಾರದಲ್ಲಿ ನೆಲೆನಿಂತು (ಸ್ಥಿತಿಗೊಂಡು) ಶ್ರೇಷ್ಠಾಂಶವೆಲ್ಲ ಅಲ್ಲಿನ ಚೈತನ್ಯಕ್ಕೆ ಸಮರ್ಪಣವಾಗಿ ಶೇಷಕನಿಷ್ಠಾಂಶವು ಗುದಕರ್ಮೇಂದ್ರಿಯದ್ವಾರದಿಂದ ಹೊರ ಹೋಗುತ್ತದೆ. ಇಷ್ಟಾಗುವಾಗ ಈ ಯೋಗರಾಜದೊಡನೆ ಉಳಿದ ನಾಲ್ಕು ಯೋಗಗಳು ಸಹಕರಿಸಿ ಹಿನ್ನೆಲೆಯಾಗಿ ತಂತಮ್ಮ ಕೆಲಸವನ್ನು ಮಾಡಿರುತ್ತವೆ.

"ಭುಜಂಗಾಕಾರ ರೂಪೇಣ
ಮೂಲಾಧಾರಂ ಸಮಾಶ್ರಿತಾ|
ಶಕ್ತಿಃ ಕುಂಡಲಿನೀ ನಾಮ
ಬಿಸತಂತು ನಿಭಾ ಶುಭಾ||"

ಮೂಲಾಧಾರದ ಮಧ್ಯದಲ್ಲಿರುವ ಕ್ರಿಯಾಶಕ್ತಿಗೆ ಕುಂಡಲಿನೀ ಶಕ್ತಿಯೆಂದು ಮತ್ತೊಂದು ಹೆಸರು. ಇದು ಸರ್ಪದಂತೆ ಸುರುಳಿ ಸುತ್ತಿಕೊಂಡಿರುವುದರಿಂದ ಕುಂಡಲಿನೀ ಎಂದು ಹೆಸರು ಬಂದಿದೆ. ತಾವರೆಯ ತಂತುವಿನಂತೆ ಕೋಮಲವೂ ಕಾಂತಿಯುತವೂ ಆಗಿದೆ. ಶುಭವಾಗಿದೆ. ಇದರ ಸಂಚಾರವ್ಯಾಪ್ತಿ ಮೂಲಾಧಾರದಿಂದ ಸಹಸ್ರಾರದ ವರೆಗೆ! ಇದು ಬ್ರಹ್ಮಗ್ರಂಥಿಯಲ್ಲಿ ಸೇರಿಕೊಂಡು ಸುಪ್ತವಾಗಿರುತ್ತದೆ. ಭಕ್ತಾಂಗನು ಆಚಾರ ಲಿಂಗಾನುಸ್ಥಾನದಿಂದ ಶ್ರದ್ಧಾಳುವಾಗಿ ಆ ಬ್ರಹ್ಮಗ್ರಂಥಿಯ ಭೇದಿಸಿ ಸುಪ್ತಶಕ್ತಿಯನ್ನು ಜಾಗ್ರತಗೊಳಿಸಿಕೊಂಡು ಸತ್ಕ್ರಿಯಾನಿರತನಾಗಿ ಸುಗಂಧಪ್ರಸಾದ ಭೋಗಿಯಾಗಿ ಇರುವುದೇ ಮೂಲಾಧಾರದೊಳಗಿನ ಆಚಾರಲಿಂಗೋಪಾಸನೆಯು. ಅದುವೆ ಅಲ್ಲಿನ ಯೋಗರಾಜ! ಆಚಾರ ಶಿವವಾಗುವುದಕ್ಕಿಂತ ಹೆಚ್ಚಿನ ಯೋಗ ಬೇರಿಲ್ಲ. ಅಂಗನು ತನ್ನ ಪೃಥ್ವಿತತ್ತ್ವಾತ್ಮಕ ಭಕ್ತತ್ವವನ್ನು ಇಲ್ಲಿ ಪೂರೈಸುತ್ತಾನೆ.

ಮೂಲಾಧಾರದ ಆಚಾರೋಪಾಸನೆಯಿಂದ ಪ್ರಾಣವು ಪರಿಶುದ್ಧವಾಗಿ ಊರ್ಧ್ವಗಮನವುಳ್ಳದ್ದಾಗಿ ಮಾರ್ಪಡುತ್ತದೆ. ಇದರಿಂದ ಚಿತ್ತ ಸ್ವಸ್ಥವಾಗುತ್ತದೆ. ನಿವೃತ್ತಿಕಲೆಯುಂಟಾಗುತ್ತದೆ. ಅಲ್ಲಿ ಕರ್ಮಸಾದಾಖ್ಯ, ಸದ್ಯೋಜಾತ-ಮುಖಗಳಿರುತ್ತವೆ. ನಕಾರ ಮಂತ್ರಾಕ್ಷರವು ಅಲ್ಲಿ ನೆಲೆಸಿರುತ್ತದೆ. ಆ ನಾಲ್ಕೆಸಳ ನ-ಕಾರ ಪ್ರಣವ ಪೀಠದಲ್ಲಿ ಆಚಾರಲಿಂಗವು ಪರಿಶೋಭಿಸುತ್ತದೆ.

ಆ ಆಧಾರದ ಆಶ್ರಯದ ಮೇಲೆ ಸ್ವಾಧಿಷ್ಠಾನವಿದೆ. ಉಪಸ್ಥೇಂದ್ರಿಯದ ಬಳಿಯಿದೆ. ಜೀವ ಚೈತನ್ಯಕ್ಕೆ ಅಧಿಷ್ಠಾನವಾಗಿರುವ ಕಾರಣ ಸ್ವಾಧಿಷ್ಠಾನವೆಂಬ ಸಾರ್ಥಕ ನಾಮವು ಇದಕ್ಕಿದೆ. ಇಲ್ಲಿ ಸ್ಥಿತಿಗೊಂಡ ರಸವೇ ಜೀವ ಚೈತನ್ಯಕ್ಕೆ ಅಧಿಷ್ಠಾನ.

ಸ್ವಾಧಿಷ್ಠಾನವು ಪಶ್ಚಿಮಾಭಿಮುಖವಾಗಿದೆ. ಪಲ್ಲವದಂತೆ, ಪ್ರವಾಲದಂತೆ, ಪ್ರಕಾಶವಾಗಿದೆ. ಈ ಸ್ವಾಧಿಷ್ಠಾನ ಪದ್ಮವು ಆರು ದಳಗಳಿಂದ ಕೂಡಿದೆ. ಇದರಲ್ಲಿ ಎಲ್ಲಕ್ಕೂ ಹಿರಿದಾದ ಚಿನ್ಮಯವಾದ ಚೈತನ್ಯಮಯವಾದ ಗುರುಲಿಂಗವನ್ನು ನೆನೆದು ಆರಾಧಿಸಬೇಕು — ಮಹೇಶಾಂಗನು, ಚಿದ್ಬಿಂದು ರೂಪಾದ ರಸವೇ ಇಲ್ಲಿ ಗುರುಲಿಂಗವಾಗಿರುತ್ತದೆ. ಇದಕ್ಕೆ ಸಮರ್ಪಿತವಾದ ಸುರಸ ಪ್ರಸಾದವು ಲಿಂಗತೇಜವನ್ನು ಹೆಚ್ಚಿಸುತ್ತದೆ ಜಿಹ್ವೆಯಲ್ಲಿ ಜನಿಸಿದ ಸುರಸಪ್ರಸಾದವು ಸ್ವಾಧಿಷ್ಠಾನದಲ್ಲಿ ಸ್ಥಿತಿಗೊಂಡು ಆ ಪ್ರಸಾದದ ಶ್ರೇಷ್ಠಾಂಶವೆಲ್ಲ ಅಲ್ಲಿ ಸಮರ್ಪಣವಾಗಿ ಶೇಷ ಕನಿಷ್ಠಾಂಶವು ಗುಹ್ಯಕರ್ಮೇಂದ್ರಿಯದ್ವಾರದಿಂದ ಹೊರಟುಹೋಗುತ್ತದೆ. ಓಜಾಂಶವು ಹೊರ ಹೊಮ್ಮುತ್ತದೆ. ಆದರೆ ಇದನ್ನು ತಡೆಯಬೇಕು. ಜ್ಯೋತಿರೂಪಾದ ಜೀವಾಧಾರವಾದ ಇದನ್ನು ಹೊರ ಚಲ್ಲಬಾರದು. ಚೈತನ್ಯದ ಅಧಿಷ್ಠಾನವೇ ಇದಾದುದರಿಂದ ಇದು ಸ್ವಾಧಿಷ್ಠಾನ. ಇಲ್ಲಿ ಜ್ಞಾನಶಕ್ತಿಯು ಗೃಹಿಣಿಯಾಗಿರುತ್ತಾಳೆ. ಜ್ಞಾನಾರ್ಜನೆಯ ಪರಿಶ್ರಮದಿಂದಾಗಿ ಅನ್ನರಸ ಜೀರ್ಣವಾದಲ್ಲಿ ಜ್ಞಾನಶಕ್ತಿಯ ಆವಿಷ್ಕಾರವಾಗುತ್ತದೆ. ಆವಿಷ್ಕಾರಗೊಂಡ ಆ ಜ್ಞಾನಶಕ್ತಿಯಲ್ಲಿ ಗತಿದ್ಯುತಿಗಳು ಗುಂಫಿತವಾಗಿರುತ್ತವೆ. ಮಾಹೇಶಾಂಗನು ಗುರುಲಿಂಗಾನುಸ್ಥಾನದಿಂದ ನಿಷ್ಠಾವಂತನಾಗಿ ವಿಷ್ಣುಗ್ರಂಥಿಯನ್ನು ಬಿಚ್ಚಿ ಅಲ್ಲಿ ಸುಪ್ತವಾದ ಜ್ಞಾನಶಕ್ತಿರೂಪ ಸಂಪತ್ತಿಯನ್ನು

ಜಾಗ್ರತಗೊಳಿಸಿ ಸುಜ್ಞಾನ ನಿರತನಾಗಿ ಸುರಸ ಪ್ರಸಾದ ಭೋಗಿಯಾಗಿ ಇರುತ್ತಾನೆ. ಇದುವೇ ಇಲ್ಲಿನ ಯೋಗರಾಜ! ವಿಚಾರ ಶಿವವಾಗುವುದಕ್ಕಿಂತ ಶ್ರೇಷ್ಠವಾದ ಯೋಗ ಬೇರಿಲ್ಲ. ಇದುವೆ ಶಿವಯೋಗದಲ್ಲಿ 'ಶಿವಜ್ಞಾನ'ವಾಗಿ ಸಮಾವೇಶಗೊಂಡಿದೆ. ಅಂಗನು ತನ್ನ ಜಲತತ್ತ್ವವನ್ನು ಜ್ವಲನಗೊಳಿಸಿ ಮಾಹೇಶತ್ವವನ್ನು ಮೈಗೂಡಿಸಿಕೊಳ್ಳುತ್ತಾನೆ. ಇದರಿಂದ ಚೈತನ್ಯವು ಪ್ರಕಾಶಿತವಾಗಿ ಪರಿಪೂರ್ಣ ವಿಕಾಸವಾಗಿ ಏರ್ಪಡುತ್ತದೆ. ಸ್ಥಿತಪ್ರಜ್ಞತ್ವ ಪ್ರಾಪ್ತಿಯಾಗುತ್ತದೆ. ಪ್ರತಿಷ್ಠಾ ಕಲಾವಂತನಾಗುವ ಭಾಗ್ಯವೊದಗುತ್ತದೆ. ಕರ್ತೃ ಸಾದಾಖ್ಯ—ವಾಮದೇವ ಮುಖ ಇರುತ್ತದೆ. ಮ-ಕಾರ ಮಂತ್ರಾಕ್ಷರದಲ್ಲಿ ಅವು ನೆಲೆಸಿರುತ್ತವೆ. ಆ ಆರೆಸಳ ಮ-ಕಾರಪ್ರಣವ ಪೀಠದಲ್ಲಿ ಗುರುಲಿಂಗವು ಗಂಭೀರ ಮುದ್ರೆಯಿಂದ ಯೋಗನಾಗಿ ಇರುತ್ತದೆ.

ಆಧಾರದಲ್ಲಿ ಪ್ರಾಣಾಪಾನಗಳೆರಡರ ಕುಂಭಕದಿಂದ ಸ್ಥಿರಚಿತ್ತನಾಗಿ ಸ್ವಾಧಿಷ್ಠಾನದಲ್ಲಿ ಚಿದ್ಬಿಂದು ಧಾರಣವಾಗುವುದು. ಮಾಯೆ-ಮೋಹಗಳಾಟ ಮಾಟಗಳಿಲ್ಲದಂತಾಗುವುದು.

ಸ್ವಾಧಿಷ್ಠಾನದಲ್ಲಿ ಕೆಲವರು ಜ್ವಲನ ಅಂದರೆ ಅಗ್ನಿತತ್ತ್ವವನ್ನು ಪ್ರತಿಪಾದಿಸುವರು. ಶಿವಾದ್ವೈತಿಗಳಾದರೂ ಕ್ರಮಪಿಡಿದು ಜಲತತ್ತ್ವವನ್ನೇ ಹೇಳುತ್ತಾರೆ.

ಮೂರನೆಯದೇ ಮಣಿಪೂರಕ. ಇದ್ದು ನಾಭಿಯಲ್ಲಿ ನೆಲಸಿದೆ. ಅಗ್ನಿತತ್ತ್ವಾತ್ಮಕವಾಗಿದ್ದು ಜ್ಯೋತಿರ್ಮಯವಾಗಿದೆ. ಮಣಿಯಂತೆ ತಳತಳಿಸುತ್ತದೆ. ಇಲ್ಲಿ ರೂಪಾತ್ಮಕ ಜಗತ್ತು ಪ್ರತಿಷ್ಠಿತವಾಗಿದೆ. ಪ್ರಕೃತಿ ಶಕ್ತಿ ಅಂದರೆ ಇಚ್ಛಾಶಕ್ತಿ ಇದೆ. ಇಲ್ಲಿ ದರ್ಶನ (ನೋಟ) ಸುಖವುಂಟಾಗುತ್ತದೆ. ಇಲ್ಲಿ ಪ್ರಸಾದಿಯು ಶಿವಲಿಂಗವನ್ನು ಆರಾಧಿಸುತ್ತಾನೆ. ಚಿನ್ನಾದವೇ ಶಿವಲಿಂಗದ ಕಳೆ. ಅದುವೇ ಶಿವಲಿಂಗ. ಅದಕ್ಕೆ ಸುರೂಪ ಪ್ರಸಾದಾರ್ಪಣವಾಗುತ್ತದೆ. ನೇತ್ರದಲ್ಲಿ ಉತ್ಪತ್ತಿಯಾದ ಸುರೂಪ ಪ್ರಸಾದವು ಮಣಿಪೂರದಲ್ಲಿ ಸ್ಥಿತಿಗೊಂಡು ಪಾಕವಾಗಿ ಆ ಸುರೂಪ ಪ್ರಸಾದದ ಶ್ರೇಷ್ಠಾಂಶವೆಲ್ಲ ಅಲ್ಲಿ ಸಮರ್ಪಿತವಾಗಿ ಉಳಿದ ಕನಿಷ್ಠಾಂಶವು ಪಾದಾಂಗುಲಿಗಳ ನಖಮುಖಗಳಿಂದ ಹೊರಟು ಹೋಗುತ್ತದೆ. ಪ್ರಸಾದಿಯು ಶಿವಲಿಂಗಾನುಷ್ಠಾನದಿಂದ ಅವಧಾನಿಯಾಗಿ ಅತ್ಯಂತ ಪ್ರಸನ್ನರೂಪನಾಗಿ ರುದ್ರಗ್ರಂಥಿಯನ್ನು ಅಂದರೆ ಉಗ್ರತೆಯನ್ನು ಹೋಗಲಾಡಿಸಿ ಸದಿಚ್ಛಾಶಕ್ತಿ ಸಂಪನ್ನನಾಗಿ ಸುರೂಪ ಪ್ರಸಾದ ಭೋಗಿಯಾಗಿ ಯೋಗರಾಜ ತೇಜವುಳ್ಳವನಾಗುತ್ತಾನೆ. ಆತನ ರೂಪು ಮತ್ತು ದೃಷ್ಟಿ ಶಿವವಾಗುತ್ತವೆ. ಅಂದರೆ ಮಂಗಳಮಯವಾಗುತ್ತವೆ. ವಿದ್ಯಾಕಲಾನ್ವಿತನಾಗುತ್ತಾನೆ. ಮೂರ್ತ ಸಾದಾಖ್ಯ—ಅಘೋರಮುಖಗಳು ಅಲ್ಲಿರುತ್ತವೆ. ಶಿಕಾರ ಪ್ರಣವವು ದಶದಳ ಪದ್ಮದಿಂದ ದಿವ್ಯವಾಗಿರುತ್ತದೆ. ಅಲ್ಲಿ ಶಿವಲಿಂಗವು ಶೋಭಿಸುತ್ತದೆ. ಇಲ್ಲಿಗೆ ಎಲ್ಲ ಕ್ರಿಯಾ ಸಿದ್ಧಿಗಳು ಸಂಪೂರ್ಣಗೊಳ್ಳುತ್ತವೆ. ದೃಶ್ಯವನ್ನೆಲ್ಲ ಲೀಲಾಜಾಲವಾಗಿ ಪ್ರಸನ್ನಭಾವದಿಂದ ಶಿವಮಯವಾಗಿ ಭಾವಿಸುವ ಶಿವಯೋಗ ಸಿದ್ಧಿ ಸಂಪ್ರಾಪ್ತವಾಗುತ್ತದೆ.

ಹತ್ತುದಳ ಕಮಲದ| ಕರ್ತೃ ಶಿವಲಿಂಗಕ್ಕೆ|  
ಮತ್ತೆ ನೇತ್ರಗಳ ಮುಖಮಾಡಿ ರೂಪಿನ|  
ತುತ್ತುಗಳ ಕೊಡುವನವಧಾನಿ|

**—ಯೋಗಾಂಗತ್ರಿವಿಧಿ**

ದೃಶ್ಯವಿಕಾರವಳಿದು ದೃಶ್ಯವಶೀಕಾರವಾಗುತ್ತದೆ.

ಹೃದಯದಲ್ಲಿ ಅನಾಹತವಿದೆ. ಅದು ನಾಲ್ಕನೆಯದಾಗಿದೆ. ಅಧೋಮುಖವಾಗಿವೆ. ವಾಯುರೂಪಾಗಿದೆ. ಅಲ್ಲಿ ಸ್ಪರ್ಶವು ಸ್ಥಿತಿಗೊಳ್ಳುತ್ತದೆ. ಅಲ್ಲಿ ಸ್ಪರ್ಶವಿಲ್ಲದೆ ಅಂದರೆ ಆಹತವಾಗದೆ

ಆ ಸುಖಸಂಪ್ರಾಪ್ತಿ ಆಗುತ್ತದೆ. ಆದಿಶಕ್ತಿ ಅಧಿದೇವತೆಯಾಗಿದಾಳೆ. ತ್ವಕ್ಕಿನಲ್ಲಿ ಉತ್ಪತ್ತಿಯಾದ ಸುಸ್ಪರ್ಶಪ್ರಸಾದವು ಅನಾಹತದಲ್ಲಿ ಇದ್ದುಕೊಂಡು ಜಂಗಮಲಿಂಗಾರ್ಪಣವಾಗಿ ಸುಸ್ಪರ್ಶ ಪ್ರಸಾದವಾಗಿ ಅದರ ಉತ್ತರಾಂಶವು ಅಲ್ಲಿಯೆ ಉಳಿದು ಉಳಿದ ಕನಿಷ್ಠಾಂಶವು ಹಸ್ತಾಂಗುಲಿಗಳಿಂದ ಹೊರ ಹೋಗುತ್ತದೆ. ರೋಮಕೂಪಗಳಿಂದಲೂ ಹೋಗುವುದುಂಟು. ಪ್ರಾಣಲಿಂಗಿಯು ಜಂಗಮಲಿಂಗಾನುಷ್ಠಾನದಿಂದ ಅನುಭಾವಿಯಾಗಿ ಬಾಳುತ್ತಾನೆ. "ದ್ವಾದಶ ಕಮಲದಾ। ಮೋದವನು ಜಂಗಮಕೆ। ಸಾದರದಿ ತ್ವಕ್ಕು ಮುಖ ಮಾಡಿ ಸ್ಪರ್ಶದಾ। ಸ್ವಾದವನು ಕೊಡುವನನುಭಾವಿ।" ಎಂದು ಅಕ್ಕಗಳು ಹೇಳಿದ್ದಾರೆ. ಸ್ಪರ್ಶತ್ವವೆ ಇಲ್ಲಿ ಜಂಗಮಲಿಂಗಾಗಿ ಪ್ರಾಣವೇ ಅಂಗವಾಗಿ ಪೂಜಕನಾಗಿರುತ್ತಾನೆ. ಸುಸ್ಪರ್ಶ ಪ್ರಸಾದ ಭೋಗಿಯಾಗಿ ಶಿವಯೋಗಿಯಾಗಿರುತ್ತಾನೆ. ಆತನ ಸ್ಪರ್ಶವೆಲ್ಲ ಶಿವಸ್ಪರ್ಶವಾಗಿರುತ್ತದೆ. ಆತನು ಶಾಂತಿ ಕಳೆಯಿಂದ ಶೋಭಿಸುತ್ತಾನೆ. ಅಮೂರ್ತಿ ಸಾದಾಖ್ಯ ತತ್ಪುರುಷ ಮುಖಗಳಿಂದ ಒಡಗೂಡಿರುತ್ತಾನೆ. ದ್ವಾದಶದಳ ಪದ್ಮದಲ್ಲಿ ವಾ–ಕಾರ ಮಂತ್ರವಿರುತ್ತದೆ. ಅಲ್ಲಿ ಜಂಗಮಲಿಂಗವು ದಿವ್ಯ ಸ್ಪರ್ಶರೂಪದಿಂದ ಪರಿಶೋಭಿಸುತ್ತದೆ. ಆಗ ಶಿವಯೋಗಿ ಮುಟ್ಟಿದ್ದು ಪಾವನವಾಗುತ್ತದೆ.

ಇದನ್ನು ಹೃದಯಾಕಾಶವೆಂದು ಹೇಳುತ್ತಾರೆ. ಅನಾಹತವಾಗಿ ಇಲ್ಲಿ ನಾದ ಸ್ಪರ್ಶವುಂಟಾಗುತ್ತದೆ. ಉಪಾಸಕನ ಚೈತನ್ಯವು ಸರ್ವಾಂಗದಲ್ಲಿ ಸಂಚರಿಸುವ ಕಾರಣದಿಂದ ಅದನ್ನು ಜಂಗಮಲಿಂಗವೆಂದು ಹೆಸರಿಸುವರು.

ಅಷ್ಟದಳ ಕಮಲದಾ। ಬಟ್ಟಬಯಲೊಳಗೊಂದು।
ಮುಟ್ಟಬಾರದ ಘನವಿಹುದು ಅದರೊಳಗೆ
ದಿಟ್ಟಯಿಟ್ಟವನೆ ನಿಜನಿಷ್ಠ

ಹೃದಯಕ್ಕೆ ಎಂಟು ದಳದ ತಾವರೆಯೆಂದು ಹೇಳುವುದುಂಟು. ಅದರಲ್ಲಿ ಅಂಗುಷ್ಠದಷ್ಟು ಪುರುಷನಿರುವನು. ಅವನು ಸ್ಪರ್ಶವೇದ್ಯನಲ್ಲ; ಜ್ಞಾನ ದೃಷ್ಟಿವೇದ್ಯ.

"....ಅರಿವು ಹಿಡಿದು ವಚನವಿದೆ; ವಚನವಿಡಿದು
ತೋರುವ ಅರಿವಿದೆ. ಲಿಂಗಾಂಗವೆರಡು
ನಿಮ್ಮಲ್ಲಿ ಐಕ್ಯವಾದ ಪರಿ ಎಂತು ಹೇಳಾ?
ಸ್ವರವಿಡಿದು ಶಬುದ ಸಮರಸವಾದ
ಪರಿಯೆಂತು ಹೇಳಾ?...."

—ಪ್ರಭುದೇವ

ಅಯ್ದನೆಯದಾಗಿ ಕಂಠದಲ್ಲಿ ವಿಶುದ್ಧ ಚಕ್ರವಿದೆ. ಆಕಾಶತತ್ತ್ವಾತ್ಮಕವಾಗಿದೆ. ಪರಾಶಕ್ತಿಯುಕ್ತವಾಗಿದೆ. ಪ್ರಸಾದಲಿಂಗದಿಂದ ಪರಿಶೋಭಿಸುತ್ತದೆ. ಯಕಾರ ಪ್ರಣವವಾಚ್ಯವಾಗಿದೆ. ಶರಣಾಂಗನು ಅರ್ಚಕನಾಗಿರುತ್ತಾನೆ. ಸುಶಬ್ದ ಪ್ರಸಾದವನ್ನು ಅರ್ಪಿಸುತ್ತಾನೆ. ಶ್ರೋತ್ರದಲ್ಲಿ ಉತ್ಪನ್ನವಾದ ಸುಶಬ್ದ ಪ್ರಸಾದವು ವಿಶುದ್ಧದಲ್ಲಿ ಇದ್ದುಕೊಂಡು ಅಲ್ಲಿರುವ ಪ್ರಸಾದಲಿಂಗಾರ್ಪಣವಾಗಿ ಅದರ ಉತ್ತಮಾಂಶವು ಅಲ್ಲಿಯೇ ನಿಂತು ಉಳಿದ ಕನಿಷ್ಠಾಂಶವು ಮುಖದಿಂದ ವಾಗ್ರೂಪದಲ್ಲಿ ಹೊರಟು ಹೋಗುತ್ತದೆ. ಷೋಡಶದಳಯುಕ್ತವಾಗಿ ವಿಶುದ್ಧವಿರುತ್ತದೆ. ಶಿವಸಾದಾಖ್ಯ—ಈಶಾನ್ಯ ಮುಖಗಳಿರುತ್ತವೆ. ಸುಶಬ್ದ ಪ್ರಸಾದ ಪರಿಣಾಮವುಂಟಾಗುತ್ತದೆ. "ಷೋಡಶದಳ ಕಮಲದಿ। ಆಡುವ ಲಿಂಗಕ್ಕೆ। ಗಾಢದಿಂ ಶ್ರೋತ್ರ—ಮುಖ ಮಾಡಿ ಶಬ್ದಗಳ। ನೀಡಿ ಕೊಡುತಿಹನು ಪರಿಣಾಮಿ।" ಎಂದು ಮಹಾದೇವಿಯಕ್ಕನು ಯೋಗಾಂಗ ತ್ರಿವಿಧಿಯಲ್ಲಿ ಹೇಳಿದ್ದಾಳೆ.

ಈ ವಿಶುದ್ಧ ಚಕ್ರದ ಎಡ ಬಲಗಳಲ್ಲಿ ಇಡಾ ಪಿಂಗಳ ನಾಡಿಗಳಿದ್ದು ಮಧ್ಯದಲ್ಲಿ ಸುಷುಮ್ನೆಯು ಇರುತ್ತದೆ. ಇಲ್ಲಿ ನಿರಾಕಾರ ಚೈತನ್ಯವೆ ಅಂದರೆ ಚಿದಾಕಾಶವೆ ಪ್ರಸಾದಲಿಂಗವಾಗಿರುತ್ತದೆ. ಆ

ಚಿದಾಕಾಶದಿಂದ ದಿವ್ಯನಾದೋತ್ಪತ್ತಿಯಾಗುತ್ತದೆ. ಸತ್ಯತೆ ಸಂಪ್ರಾಪ್ತವಾಗುತ್ತದೆ. ಆಗ ಆ ಶಿವಯೋಗಿಯು ನುಡಿದದ್ದು ಹುಸಿಯಾಗದು. ವಾಕ್ ಪರುಷ ಸಿದ್ಧಿಯುಂಟಾಗುತ್ತದೆ.

"ದ್ವಿದಳ ತ್ರಿಕೂಟದಲಿ| ಪುದಿಗಿರ್ಪ ಲಿಂಗಕ್ಕೆ
ಸದಮಲದ ಹೃದಯ ಮುಖಮಾಡಿ ತೃಪ್ತಿಯ
ಒದಗಿ ಕೊಡತಿಹನು ಚದುರೈಕ್ಯ"

—ಯೋಗಾಂಗ ತ್ರಿವಿಧಿ

ಇನ್ನು ಭ್ರೂಮಧ್ಯದಲ್ಲಿ ಆರನೆಯದಾಗಿ ಆಜ್ಞಾಚಕ್ರವಿದೆ ಅದಕ್ಕೆ ತ್ರಿಕೂಟವೆಂಬ ಹೆಸರಿದೆ. ಅದು ಮನಸ್ತತ್ವಾತ್ಮಕವಾಗಿದೆ. ಚಿಚ್ಛಕ್ತಿಯುಕ್ತವಾಗಿದೆ. ಮಹಾಲಿಂಗದಿಂದ ಮುಂಬೆಳಗುತಿದೆ. ದ್ವಿದಳವುಳ್ಳುದಾಗಿದೆ. ಓಂಕಾರದಿಂದ ಅಥವಾ ಹಂ—ಕ್ಷಂಗಳಿಂದ ಶೋಭಿಸುತ್ತದೆ. ಐಕ್ಯಾಂಗನು ಅರ್ಚಕನಾಗಿ ಸುತೃಪ್ತಿ ಪ್ರಸಾದವನು ಅರ್ಪಿಸುತ್ತಾನೆ. ಮನದಲ್ಲಿ ಉತ್ಪನ್ನವಾದ ತೃಪ್ತಿಯು ಆಜ್ಞಾಚಕ್ರದಲ್ಲಿ ಸ್ಥಿತಿಗೊಂಡು ಅಲ್ಲಿರುವ ಮಹಾಲಿಂಗಾರ್ಪಣವಾಗಿ ಸುತೃಪ್ತಿ ಪ್ರಸಾದವಾಗಿ ಅಲ್ಲಿಯೆ ನಿತ್ಯವಾಗಿ ಶೇಷಾಂಶವು ನೇತ್ರಮುಖದಲ್ಲಿ ಹೊರ ಹೊಮ್ಮುತ್ತದೆ. ಆತ್ಮಶುದ್ಧಿಯು ಇಲ್ಲಿ ಸಿದ್ಧಿಸುತ್ತದೆ. ರಾಜಯೋಗವು ಇಲ್ಲಿಗೆ ಪರ್ಯವಸಾನಗೊಳ್ಳುತ್ತದೆ. ಅಮನಸ್ಕತೆ ಅಳವಡುತ್ತದೆ; ಅಂದರೆ ಮನ ಘನವಾಗುತ್ತದೆ. ಮದ ಮತ್ಸರಾದಿಗಳು ಮಾಯವಾಗುತ್ತವೆ.

ಬೆಟ್ಟ ವೇಲಣ ಕಿಚ್ಚು| ಸುಟ್ಟಿತು ಕಾನನವ|
ಅಷ್ಟ ಮೃಗಜಾತಿ ಅಳಿದವು ಅದ ಕಂಡು
ಬಟ್ಟಬಯಲೊಳಗೆ ಮೆರೆದೆನೊ"

ಎಂದು ಅಕ್ಕನು ಹೇಳಿದ್ದಾಳೆ. ಇದೇ ಅಭಿಪ್ರಾಯವನ್ನು ಲಿಂಗಮ್ಮನು ಈ ತನ್ನ ವಚನದಲ್ಲಿ ವಿವರಿಸಿ ಹೇಳಿದ್ದಾಳೆ:

"ತನುವೆಂಬ ಹುತ್ತಿನಲ್ಲಿ ಮನವೆಂಬ ಸರ್ಪ ಹೆಡೆಯನುಡಿಗಿಕೊಂಡಿರಲು ಜ್ಞಾನಶಕ್ತಿ ಬಂದು ಎಬ್ಬಿಸಲು ಉರಿ ಭುಗಿಲೆನುತ್ತ ಹೆಡೆಯನೆತ್ತಿ ಊರ್ಧ್ವಕ್ಕೇರಲು ಅಷ್ಟಮದವೆಲ್ಲ ಹಿಟ್ಟುಗುಟ್ಟಿದವು. ಕರಣಂಗಳೆಲ್ಲ ಉರಿದು ಹೋದವು. ಇದ್ದ ಶಕ್ತಿಯನೆ ಕಂಡು ಮನ ನಿಶ್ಚಯವಾದುದನೆ ಕಂಡು ಪಶ್ಚಿಮದ ಕದವ ತೆಗೆದು ಬಚ್ಚಬರಿಯ ಬೆಳಗಿನೊಳಗೆ ಓಲಾಡಿ ಸುಖಿಯಾದೆನಯ್ಯ ಅಪ್ಪಣ ಪ್ರಿಯ ಚೆನ್ನಬಸವಣ್ಣ !"

ಚಿಚ್ಛಕ್ತಿಯ ಸಾಕ್ಷಾತ್ಕಾರವಾಗುತ್ತದೆ. ಚಿದ್ಬೆಳಗು ಬೆಳ್ಳನೇ ಬೆಳಗುತ್ತದೆ. ಅಂಗಭಾವಕ್ಕೆ ಅವಕಾಶವಿಲ್ಲದಾಗುತ್ತದೆ. ಅಜ್ಞಾನಾವರಣ ಹರಣವಾಗಿ ಹೋಗುತ್ತದೆ.

"ಕುಂಡಲಿಯ ಸರ್ಪನ| ಕಂಡು ಮೇಲಕೆ ತೆಗೆದು
ಮಂಡಲವು ಮೂರು ಬೆಳಗಾಗಿ ನಡುವಣಾ—
ಖಂಡ ಜ್ಯೋತಿಯಲಿ ಬಯಲಾದೆ."

—ಯೋಗಾಂಗ ತ್ರಿವಿಧಿ

"ಆರುಮುಖದ ಮುತ್ತನು| ನೀರೊಳಗೆ ಇರಿಸಲು
ನೀರಳಿದು ಮುತ್ತು ಉಳಿಯಲು ಆ ಮಣಿಯ
ಸೇರಿಸಿದೆನೆನ್ನ ಉರದೊಳು"

—ಯೋಗಾಂಗತ್ರಿವಿಧಿ

ಭ್ರೂಮಧ್ಯದಿಂದಾಚೆ ಸಹಸ್ರಾರ ಚಕ್ರವಿದೆ. ಅದರಲ್ಲಿ ಬ್ರಹ್ಮರಂಧ್ರವಿದೆ. ಅಲ್ಲಿ ಅಮೃತ ಬಿಂದುವಿದೆ. ಅಲ್ಲಿ ಅಂಗ—ಲಿಂಗಸಾಮರಸ್ಯವುಂಟಾಗುತ್ತದೆ. ಸದ್ಯೋಜಾತಾದಿ ಆರು ಮುಖವುಳ್ಳ, ಪೂರ್ವ ಪಶ್ಚಿಮಾದಿ ಆರು ದಿಕ್ಕುಗಳುಳ್ಳ, ಆಚಾರಲಿಂಗಾದಿ ಆರುಲಿಂಗಸ್ವರೂಪವಾಗಿಯುಳ್ಳ ಭಾವಲಿಂಗವನ್ನು ಅಮೃತದಲ್ಲಿ ಅಥವಾ ಘನ ಮನ ರೂಪಜಲದಲ್ಲಿ ಇರಿಸಲು ಮನವೆಲ್ಲ ಮಣಿಯಾಗಿ ಅಂದರೆ ಲಿಂಗವಾಗಿ ಅದು ಉರಕರಗಳಿಗೆ ಚಿತ್ತೈಸುವುದು. ಅಲ್ಲದೆ ಆ ಬ್ರಹ್ಮರಂಧ್ರದಲ್ಲಿ ಆ ಸಹಸ್ರಾರದಲ್ಲಿ ಷಡ್ರೂಪ ಶಕ್ತಿಯೂ ಸಮರಸಗೊಳ್ಳುವಳು.

"ಸಹಸ್ರ ಕಮಲೇ ಶಕ್ತಿಃ ಶಿವೇನ ಸಹ ಮೋದತೇ|
ಸಾ ಚಾವಸ್ಥಾ ಪರಾಜ್ಞೇಯಾ ಸೈವ
ನಿರ್ವೃತಿಕಾರಣಮ್ ||"

ಆ ಸಹಸ್ರಾರ ಕಮಲದಲ್ಲಿ ಕುಂಡಲಿನಿಯು ಆ ಶಿವನ ಸಂಗದಲ್ಲಿ ಮಿಲನ ಹೊಂದಿ ಶಿವನಲ್ಲಿ ಸಮ ರಸಗೊಳ್ಳುವಳು. ಅದು ಶಿವಯೋಗ. ಅದು ಉತ್ತಮಾವಸ್ಥೆ. ಅದು ನಿವೃತಿಗೆ ಕಾರಣ.

''ಬ್ರಹ್ಮರಂಧ್ರದ ನಡುವೆ ಸಹಸ್ರದಳ ಕಮಲವು. ಆ ಕಮಲದ ನಡುವೆ ಶತದಳ ಕಮಲವು. ಅದರ ನಡುವೆ ಪಂಚದಳಂಗಳು. ಅದರ ನಡುವೆ ಬಿಂದು ರೂಪಾದ ತ್ರಿದಳಾಕಾರವಾದ ತ್ರಿಕೋಣ. ಆ ತ್ರಿಕೋಣದಲ್ಲಿ ಅಕಾರ ಉಕಾರ ಮಕಾರ ರೂಪವಾದ ಪ್ರಣವ ಪೀಠವು. ಆ ಪ್ರಣವ ಪೀಠದಲ್ಲಿ ಚಿಚ್ಛಕ್ತಿ ತೇಜೋಮಯ ಮಂಡಲದ ನಡುವೆ ಅತಿಸೂಕ್ಷ್ಮ ದ್ವಾರದಲ್ಲಿ ಸಚ್ಚಿದಾನಂದ ಜಲವು ತುಂಬಿದ ಚಿತ್ಕೂಪವಿಪ್ಪುದು. ಆ ಚಿತ್ಕೂಪವೇ ಶುದ್ಧಪ್ರಸಾದ ಪ್ರಣವ ಪ್ರಾಣವಪ್ಪುದು....'' ಎಂದು ಮುಂತಾಗಿ ಹೇಳಿ ಮುಂದೆ: ''ಚಿತ್ತೇ ಅಂಗವಾಗಿ ಚಿದ್ಘನಲಿಂಗವೇ ಪ್ರಾಣವಾಗಿ ತಾನೇ ತಾನಾಗಿ ಪ್ರಕಾಶಿಸುವುದೇ ಶಿವಯೋಗವು. ಇದು ಅನುಭವಕ್ಕೆ ಅಗಮ್ಯವು, ಪರಮ ರಹಸ್ಯವು. ಈ ಶಿವಯೋಗದಲ್ಲಿಪ್ಪಾತನೇ ಶಿವಯೋಗಿ''— ಎಂದು 'ಶಿವಯೋಗ' ಎಂಬ ಕಿರುಹೊತ್ತಿಗೆಯಲ್ಲಿ ಉಕ್ತವಾಗಿದೆ. ಆ ಸಹಸ್ರಾರದಲ್ಲಿ ಸತ್ಕಳೆಯೇ ಇಷ್ಟವಾಗಿರುತ್ತದೆ. ಇಲ್ಲಿ ಶಿವಯೋಗವು ಅಂಕುರಿತ-ಪ್ರಾಯವಾಗಿರುತ್ತದೆ. ಸದ್ರೂಪಾಗಿ ಶೋಭಿಸುತ್ತದೆ. ಸುಧಾಸಂಪ್ರಾಪ್ತಿಯಾಗುತ್ತದೆ.

"ಅಂಬರದ ಒಳಗಣ, ತುಂಬಿದಾ ಕೊಡನುಕ್ಕಿ।
ಕುಂಭಿಣಿಯ ಮೇಲೆ ಸುರಿಯಲು ಮುನ್ನವರು।
ಸಾಂಬ ಲೋಕಕ್ಕೆ ತೆರಳಿದರು."

ಅದು ಸಚ್ಚಿದಾನಂದ ಜಲದ ನೆಲೆ. ಆಧಾರದ ಕುಂಡಲಿನಿ ಶಕ್ತಿಯು ಸುಷುಮ್ನೆಯ ಮೂಲಕ ಉನ್ಮನವಾಗಿ ಆ ಸಹಸ್ರಾರಕ್ಕೆ ಏರಿ ಅಲ್ಲಿರುವ ಶಿವನ ಸೇರಿ ಅಲ್ಲಿರುವ ತುಂಬಿದ ಕೊಡ ತುಳುಕಿ ಕಾಯಕುಂಭಿಣಿಯ ಮೇಲೆ ಸುರಿಯುವುದು. ಆಗ ಅಂಗರೆಲ್ಲ ಲಿಂಗರೂಪರಾಗುವರು. ಆಚಾರ-ವಿಚಾರಗಳೆರಡರ ಸಾಮರಸ್ಯವೊದಗುವುದು. ಅನುಭವ ಮತ್ತು ಅನುರತೆಗಳು ಉಂಟಾಗುವವು. ಅವುಗಳಿಂದ ಹರುಷಗೊಂಡ ಘನಮನವು ಶಿಖಾ ಚಕ್ರಕ್ಕೆ ಸಾಗುತ್ತದೆ :

"ಉಪ್ಪರದ ಗುಡಿ ಮೇಲೆ, ಸರ್ಪವದು ಹೆಡೆಯೆತ್ತಿ
ಇಪ್ಪತ್ತು ಪುರವನರಿದುಂಡು ದಣಿಯದೆ
ಕಪ್ಪೆಯಾ ಶಿರವ ಮುರಿದಿತ್ತು."

—ಯೋಗಾಂಗತ್ರಿವಿಧಿ

ಅಲ್ಲಿಂದಾಚೆ ಎರಡನೆಯದಾದ ಶಿಖಾ ಚಕ್ರವಿದೆ. ಅಲ್ಲಿಗೆ ಆ ಉಪ್ಪರದ ಗುಡಿಗೆ ಘನ ಮನವು ಹೋಗಿ ತನ್ನ ತಲೆಯೆತ್ತಿ ಜ್ಞಾನೇಂದ್ರಿಯ ಪಂಚಕ, ಪ್ರಾಣಪಂಚಕ, ತನ್ಮಾತ್ರಪಂಚಕ, ಮತ್ತು ಚಿತ್ತ ಬುದ್ಧಿ ಮನ ಅಹಂಕಾರ ಜ್ಞಾನ ಈ ಇಪತ್ತು ಪುರ (ಅಂಗ)ಗಳನ್ನು ನುಂಗಿ ನಿಲ್ಲುತ್ತದೆ. 'ಅಲ್ಲಿ ಸೋಽಹಂಭಾವದ ಚಿತ್ಕಳೆಯ ಪ್ರಾಣ ಲಿಂಗಾರಾಧನೆಯನೆಸಗುತ್ತದೆ. ದಣ್ಣನೇ ದಣಿಯುತ್ತದೆ. ಆಗ ಅದು ಅಲ್ಲಿ ಅಪರೋಕ್ಷಾನುಭೂತಿ ಮಾತ್ರವಾಗಿರುತ್ತದೆ. ಅಲ್ಲಿ ಆ ಆನಂದವು ಧೂಮಾಕಾರವಾಗಿದ್ದು ನೀಲಾಕಾರವಾಗಿ ಹೊಳೆಯುತ್ತದೆ. ಅಲ್ಲಿ ಶಿವಯೋಗವು ಅಭಿವೃದ್ಧಿತವಾಗಿ ಪುಷ್ಪಿತವಾಗಿರುತ್ತದೆ. ಎಲ್ಲ ಕಾಮಾದಿಗಳ ಕಳಚಿರುತ್ತದೆ.

"ಹೇಮ ಕೂಟದ ತುದಿಗೆ, ಆ ಮಹಾ ಗಜವೇರಿ।
ಸೋಮನಾ ಕಳೆಯನರಿದುಂಡು ಮದವೇರಿ
ಕಾಮನನು ಪಿಡಿದು ಬಡಿಯಿತ್ತು."

—ಯೋಗಾಂಗತ್ರಿವಿಧಿ

ಎಲ್ಲ ಲೌಕಿಕ ಆಸೆಗಳ ತೊರೆದು ಮುನ್ನಡೆದರೆ ದೊರೆವುದು ಪಶ್ಚಿಮಚಕ್ರ. ಅದುವೆ ಒಂಬತ್ತನೆಯದು. ಅದು ಆನಂದಾದಿಗಳನ್ನು ಮೀರಿ

ಮತ್ತೇನನ್ನೂ ಅರಿಯದ ಅವಿರಳ ಸ್ಥಿತಿ ; ಅಖಂಡ ಸ್ಥಿತಿ. ಅದು ನಿತ್ಯ, ಅದು ಸತ್ಯ. ಅದೇ ಶಿವ ಯೋಗ; ಅದೇ ಯೋಗರಾಜ. ಅಲ್ಲಿ ಅವಿರಳ ಕಳಾಯುಕ್ತ ಪರಶಿವರೂಪಲಿಂಗವಿರುತ್ತದೆ. ಅದು ಪರಮ ಪರಿಮಳ ಸಂಯುಕ್ತವಾಗಿರುತ್ತದೆ. "ಪಶ್ಚಿಮದ ಕೊಳದಲ್ಲಿ, ಅಚ್ಚ ತಾವರೆ ಅರಳೆ| ನಿಚ್ಚಳದ ಗಂಧವೆಸೆಯಲು ಅದ ಕಂಡು| ಸಚ್ಚಿತ್ತ ಭ್ರಮರವೆಸಗಿತ್ತು" ಎನ್ನುತ್ತಾಳೆ ಅಕ್ಕ ! ಅಲ್ಲದೆ,

> "ಹಿತ್ತಲ ಬಾಗಿಲ ತೆಗೆದು, ಸತ್ತವನ ಎಬ್ಬಿಸಿ
> ಹೆತ್ತಮ್ಮ ಕರವ ಪಿಡಿಯಲು ಅವಳೀಗ
> ಇತ್ತಳೈ ತನ್ನ ಪದಕವನು."

ಹಿಂದಲೆಯೆ ಹಿತ್ತಿಲ ಬಾಗಿಲು. ಅದನ್ನೆ ಪಶ್ಚಿಮಚಕ್ರವೆಂದು ಕರೆವರು. ಅಲ್ಲಿಗೈತಂದು ತನ್ನ ಮರೆದೊರಗಿದಾತನನ್ನು ಎಬ್ಬಿಸಿ, ಎದ್ದ ಆ ಶುದ್ಧಾಂಗನೊಡನೆ ಘನಮನವು ಹೆತ್ತಮ್ಮನ ಅಂದರೆ ಗುರುಮಾತೆಯ ಕೈವಿಡಿಯಲು ತಾ ಕೈವಿಡಿದ ಗುರುಮಾತೆಯು ತನ್ನ ಪ್ರಾಣಸ್ವರೂಪವಾದ ಪದಕ (ಪ್ರಾಣಲಿಂಗ)ವನ್ನು ಕರುಣಿಸುವಳು. ಗುರು ಅಲ್ಲಿಯವರೆವಿಗೂ ಬಂದು ನೆರವಾಗುತ್ತಾನೆ. ಅಲ್ಲಿಯೂ ಗುರುಕರವನ್ನು ಹಿಡಿಯದೆ ವಿಧಿಯಿಲ್ಲ. ಆತನಿಂದ ಅಲ್ಲಿ ಮಹಾಯೋಗವೊದಗುತ್ತದೆ. ಅದುವೇ ಪರಿಪೂರ್ಣ ಫಲಿತ ಯೋಗರಾಜ ! ಅಲ್ಲಿಂದಾಚೆ ಬೆಳಗಿನ ಬೆಳಗು ; ಸರ್ವಶೂನ್ಯ ನಿರಾಲಂಬದಾಗು.

> "ಒಂಬತ್ತು ಚೌಕದಲಿ, ಉಂಬುಡುವ ಮನೆಯನ್ನು
> ನಂಬದಲೆ ಕಡೆಗೆ ತೊಲಗಿಸಿ ಮುಂದಣ
> ಸಂಭ್ರಮದ ಮನೆಗೆ ನಡೆವೆನೋ !"

—ಯೋಗಾಂಗತ್ರಿವಿಧಿ

ಅದನ್ನು ಅಣುಚಕ್ರವೆಂದು ದಶಮಚಕ್ರವೆಂದು ಹೇಳುವರು. ಅದು ಬಯಲಿಗೆ ಬಯಲು, ಆ ಯೋಗರಾಜವೇ ಸಂಭ್ರಮದ ಮನೆ ; ಅದುವೇ ಕೊನೆ.

—ಶ್ರೀ ಜ. ಚ. ನಿ.



# ಸ್ವಾತಂತ್ರ್ಯೋತ್ತರ ಕನ್ನಡ ವಿಮರ್ಶಾಸಾಹಿತ್ಯ

**೧. ಹಿನ್ನೆಲೆ :**

ವಿಮರ್ಶಾಸಾಹಿತ್ಯವು ಕನ್ನಡದಲ್ಲಿ ಅಪೂರ್ವ. ಹಳಗನ್ನಡದಲ್ಲಿಯೂ ಈ ಸಾಹಿತ್ಯ ಕಡಮೆ. ಸಂಸ್ಕೃತದ ಪದ್ಧತಿಯನ್ನು ಅನುಸರಿಸಿ ಕನ್ನಡದಲ್ಲಿ ಕನ್ನಡಿಸಲ್ಪಟ್ಟ, ಇಲ್ಲವೆ ಬರೆಯಲ್ಪಟ್ಟ ಅಲಂಕಾರ ಶಾಸ್ತ್ರಗ್ರಂಥಗಳೇ 'ಕಾವ್ಯಮೀಮಾಂಸೆ' ಯ ಗ್ರಂಥಗಳು. 'ಕವಿರಾಜಮಾರ್ಗವೇ' ಈ ದಿಸೆಯಲ್ಲಿ ಕನ್ನಡದಲ್ಲಿ ವಿರಚಿತವಾದ, ಸಂಸ್ಕೃತ ಮಾದರಿಯ, ಸ್ವತಂತ್ರ ಪಾಂಡಿತ್ಯದ ಕಾವ್ಯಶಾಸ್ತ್ರದ ಗ್ರಂಥ. ಅಲ್ಲಿಂದೀಚೆಗೆ 'ಕಾವ್ಯಾವಲೋಕನ' ಮೊದಲಾದ ಗ್ರಂಥಗಳು ಕನ್ನಡಕ್ಕೆ ಬಂದಿವೆ. ಅವುಗಳಲ್ಲೆಲ್ಲಾ ದಂಡಿ, ಭಾಮಹ, ವಾಹನ, ಮಮ್ಮಟ ಮೊದಲಾದ ಲಕ್ಷಣಕಾರರ ಅಭಿಪ್ರಾಯಗಳೇ ಉಕ್ತವಾಗಿವೆ. ಕನ್ನಡದ ಈ ಗ್ರಂಥಗಳ ದಾರಿಗೂ ಸಂಸ್ಕೃತ ಗ್ರಂಥಗಳೇ ಮೇಲ್ಪಾರಿ. ಈ ಗ್ರಂಥಗಳು ಹಳಗನ್ನಡದಲ್ಲಿ ಕಾವ್ಯದ ಅಲಂಕಾರ, ಸೌಂದರ್ಯ, ರೀತಿ, ರಸ ಕವಿಸಮಯಗಳನ್ನು ಕುರಿತೇ ಹೇಳುತ್ತಿವೆ. ಮೊದಲಿಗೆಲ್ಲಾ ಕಾವ್ಯವೆಂದರೇನು? ಅದರ ಪ್ರಕಾರಗಳೆಷ್ಟು? ಅದರ ಉಪಯೋಗವೇನು? ಇತ್ಯಾದಿ ವಿಷಯಗಳ ಚರ್ಚೆಯಾದನಂತರ, ಕಾವ್ಯದೋಷ, ಕಾವ್ಯದ ಶರೀರ, ಕಾವ್ಯದ ಹೃದಯಗಳ ಚರ್ಚೆ ಬರುತ್ತಿದೆ. ಸಂಸ್ಕೃತಾಲಂಕಾರಿಕರ ಮಾರ್ಗವೇ ಇಲ್ಲಿಮಾರ್ಗ. 'ಕವಿರಾಜಮಾರ್ಗ' ವಾಗಲೀ, 'ಕಾವ್ಯವಲೋಕನ' ವಾಗಲೀ, ಇಲ್ಲವೇ 'ರಸರತ್ನಾಕರ' ವಾಗಲೀ ಒಬ್ಬನ ಇಲ್ಲವೆ ಪ್ರಮುಖ ಕೆಲ ಆಲಂಕಾರಿಕರ ಮತಗಳಲ್ಲಿ ಸರಿಕಂಡ ರೀತಿಗಳನ್ನು ಆ ಗ್ರಂಥಕರ್ತರು ಕನ್ನಡಿಗರಿಗೆ ಎತ್ತಿತೋರಿಸುವ ಗ್ರಂಥಗಳು, ಆದರೆ ಸಂಸ್ಕೃತದ ಸುಪ್ರಸಿದ್ಧ ಆಲಂಕಾರಿಕರ ಎಲ್ಲ ಅಭಿಪ್ರಾಯಗಳನ್ನು ಶಾಸ್ತ್ರೀಯವಾದ ರೀತಿಯಲ್ಲಿ ತಿಳಿಸುವ ಹಳಗನ್ನಡ ಗ್ರಂಥವಿದ್ದಿರಲಿಲ್ಲ. ಅಂತಹ ಗ್ರಂಥದ ಒಂದು ಕೊರತೆಯು ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯದಲ್ಲಿ ಕಡಿಮೆಯಾಗಿದೆಯೆನ್ನಲು ಅಡ್ಡಿಯಿಲ್ಲ. ಈಗ ಸಾಹಿತ್ಯವು ಭರದಿಂದ ಪ್ರಗತಿಪಥದೆಡೆಗೆ ಮುನ್ನಡೆಯಹತ್ತಿದೆ. ಪ್ರಾಚೀನ ಸಂಸ್ಕೃತ ಸಾಹಿತ್ಯದ ಆಲಂಕಾರಿಕರ ಅಭಿಪ್ರಾಯವನ್ನು ಕನ್ನಡಕ್ಕೆ ಕೊಡುವ ಉದ್ದೇಶದಂತೆಯೇ, ಪಾಶ್ಚಾತ್ಯರ ಕಾವ್ಯಮೀಮಾಂಸೆಯ ಪದ್ಧತಿಯೂ ಕನ್ನಡಿಗರಿಗೆ ತಿಳಿಯಹತ್ತಿದೆ. ಆ ದಿಸೆಯಲ್ಲಿ ಇತ್ತೀಚೆಗೆ 'ಅರಿಸ್ಟಾಟಲ' ನ 'ಕಾವ್ಯಮೀಮಾಂಸೆ' ಯು ಕನ್ನಡಕ್ಕೆ ಎನ್. ಬಾಲಸುಬ್ರಹ್ಮಣ್ಯಂ ಅವರಿಂದ ಉತ್ತಮ ರೀತಿಯಲ್ಲಿ ಬಂದಿದೆ. ಆ ಗ್ರಂಥವು ಆಂಗ್ಲಭಾಷೆಯನ್ನು ತಿಳಿದವರಿಗೂ ತಿಳಿಯದವರಿಗೂ (ಆಂಗ್ಲ) ಪಾಶ್ಚಾತ್ಯರ ಕಾವ್ಯಮೀಮಾಂಸೆಯನ್ನು, ಅದರ ನಡೆದುಬಂದ ದಾರಿಯನ್ನೂ ಎತ್ತಿ ತೋರಿಸುತ್ತದೆ. ಕಾವ್ಯಮೀಮಾಂಸೆಯು ಸ್ವಲ್ಪಮಟ್ಟಿಗಾದರೂ ಶಾಸ್ತ್ರೀಯವಾಗಿ ನಡೆದು ಬಂದಿದೆಯಾದರೂ ಇತರ ರೀತಿಯ ವಿಮರ್ಶೆ ಬಹಳ ಕಡಿಮೆಯಾಗಿದೆ. ಒಟ್ಟಿನಲ್ಲಿ ವಿಮರ್ಶಾ ಸಾಹಿತ್ಯವೇ ಕಡಿಮೆಯೆಂದರೂ ಸಲ್ಲುತ್ತದೆ.

**ವಿಮರ್ಶೆಯ ವಿಭಜನೆ :**

i) ಹಳೆಯದು :—ಈ ವಿಮರ್ಶಾಸಾಹಿತ್ಯವನ್ನು ಸ್ಥೂಲವಾಗಿ ಮೂರು ರೀತಿಯಲ್ಲಿ ವಿದ್ವಾಂಸರು ವಿಂಗಡಿಸುತ್ತಾರೆ. i) ಸಂಶೋಧನಾತ್ಮಕ,

ii) ವರ್ಣನಾತ್ಮಕ iii) ದರ್ಶನಾತ್ಮಕ; ಮೊದಲನೆಯ ವಿಮರ್ಶೆಯ ರೀತಿಯಲ್ಲಿ ಕವಿಗಳ ಕಾಲ ದೇಶ ಮತ ಇತ್ಯಾದಿಗಳ ವಿಸ್ತಾರವಾದ ವಿಮರ್ಶೆ; ಎರಡನೆಯದರಲ್ಲಿ ಕವಿಕೃತಿಗಳ ಸ್ವಾರಸ್ಯವನ್ನು ತಿಳಿಸಬಲುದು. ಉದಾಹರಣೆಗೆ ಕೃತಿಗಳ ವಿಸ್ತಾರ ವಿಮರ್ಶೆ; ಮೂರನೆಯದು ಉತ್ತಮ ಸಾಹಿತ್ಯ ವಿಮರ್ಶೆಗೆ ಮಾರ್ಗವೇರ್ಪಟ್ಟಮೇಲೆ ಕಾವ್ಯ ಮತ್ತು ಶಾಸ್ತ್ರಗಳ, ಸಾಹಿತ್ಯದ ವಿಮರ್ಶೆಯ ಮೂಲಸ್ವರೂಪವನ್ನೇ ಕಂಡುಹಿಡಿಯಬಲ್ಲ ತತ್ತ್ವವನ್ನು ಈ ಭಾಗದಲ್ಲಿ ಸೇರಿಸಬಹುದು. ಈ ವಿಭಾಗಗಳು ಅನುಕೂಲಕ್ಕಾಗಿ ಮಾಡಿಕೊಂಡವೆಂದೇ ಹೇಳಬಹುದು. ಸಾಮಾನ್ಯವಾಗಿ ಸಾಹಿತ್ಯ ವಿಮರ್ಶೆಯನ್ನು ಯಾವರೀತಿ ವಿಭಾಗಿಸಬೇಕೆಂದು ಹಿಂದಿನ ಶಾಸ್ತ್ರಕಾರರು ನಿರೂಪಿಸಿದಂತಿಲ್ಲ: 'ಕಾವ್ಯಮೀಮಾಂಸೆ'ಯಲ್ಲಿಯೇ ನಾಟಕಗಳ ಮೀಮಾಂಸೆಯೂ ನಡೆದು, ಅದರಲ್ಲಿಯ ನಿಯಮಗಳನ್ನೇ ಸಾಮಾನ್ಯವಾಗಿ ಕಾವ್ಯಕ್ಕೂ ಅನ್ವಯಿಸಹತ್ತಿದರು.[1] ಈ ದಿಶೆಯಲ್ಲಿ ನಡೆದು ಬಂದ ವಿಮರ್ಶಾ ಪದ್ಧತಿಯಲ್ಲಿಯೇ ನಾವೂ 'ಕಾವ್ಯಮೀಮಾಂಸೆ' ಯೆಂಬ ಹೆಸರಿನಲ್ಲಿಯೇ ಸಾಹಿತ್ಯದ ಯಾವುದೇ ರೂಪವನ್ನೂ ವಿಮರ್ಶಿಸಬಹುದು. ಇಲ್ಲವೇ 'ಕಾವ್ಯಮೀಮಾಂಸೆ' ಮತ್ತು ಇತರ 'ಕೃತಿವಿಮರ್ಶೆ' ಯೆಂಬ ಎರಡು ಗುಂಪಿನಲ್ಲಿ ಸಾಹಿತ್ಯ ವಿಮರ್ಶೆ ಮಾಡಬಹುದು.

ii) ಹೊಸದು:– ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯದಲ್ಲಿ ಬೆಳೆದುಬಂದ ಕಾವ್ಯಮೀಮಾಂಸೆಯನ್ನೇ ಎರಡು ವಿಧವಾಗಿ ವಿಂಗಡಿಸಿ, ಒಂದರಲ್ಲಿ 'ಕವಿ ಮತ್ತು ಕೃತಿಗಳ' ವಿಮರ್ಶೆಯನ್ನೂ ಎರಡನೆಯದರಲ್ಲಿ 'ಕೃತಿಗಳ ರಚನೆಗೆ ಸಹಾಯಕಾರಿಯಾಗಬಲ್ಲ ಶಾಸ್ತ್ರಗಳ, ಮತ್ತು ಕೃತಿಗಳ' ಮತ್ತು ಅವುಗಳ ಬೆಳವಣಿಗೆಯ ವಿವೇಚನೆ' ನಡೆದು ಬಂದ ರೀತಿಯನ್ನೂ ವಿಮರ್ಶಿಸಬಹುದು.

ಸ್ವಾತಂತ್ರ್ಯದ ಪೂರ್ವದಲ್ಲಿಯೂ ದೇಶಭಾಷೆಗಳನ್ನು, ಅವುಗಳ ಪ್ರಾಚೀನತೆ, ಮತ್ತು ಹಿರಿಮೆಗಳನ್ನು ಅರಿತಮೇಲೆ ಅವುಗಳ ಸಂಪತ್ತನ್ನು ತಿಳಿಸಿಕೊಡುವ ಹವ್ಯಾಸವು ಆಯಾಯ ದೇಶಿಯ ಭಾಷೆಗಳ ಪಂಡಿತರಲ್ಲಿತ್ತು. ಅಂತೆಯೇ ಡಾ. ಫ್ಲೀಟ, ಡಾ. ರೆವರೆಂಡ ಕಿಟಲ್, ರೆವರೆಂಡ ಝುಗ್ಲರ್ ಡಾ. ರೈಸ್‌ಸಾಹೇಬರ ಪ್ರಯತ್ನದ ಮೂಲಕವಾಗಿ ಕನ್ನಡದ ಹಿರಿಮೆಯನ್ನು ತಿಳಿಸುವ ಕನ್ನಡ ಪಂಡಿತರ ಸಾಹಸವೂ ನಡೆದಿದೆ. ಅಂತಹ ಸಾಹಸಗಳಲ್ಲಿ ಪ್ರಥಮವೆಂದು ಕರೆಯಬಹುದಾದ ಸಾಹಸವೆಂದರೆ ಕನ್ನಡ ಸಾಹಿತ್ಯ ಬರಡಲ್ಲವೆಂಬುದನ್ನು, ಗಾತ್ರಪಾತ್ರಗಳಲ್ಲಿ ಮತ್ತು ಪ್ರಾಚೀನತೆಯಲ್ಲಿ ಹಿರಿಯದೆಂದು ತೋರಿಸುವ ಮೂರು ಮಹಾನ್ ಗ್ರಂಥಗಳೆಂದರೆ ದಿವಂಗತ ರಾವಬಹಾದ್ದೂರ ಆರ್. ನರಸಿಂಹಾಚಾರ್ಯರ 'ಕವಿಚರಿತೆ'ಯ ಮೂರು ಸಂಪುಟಗಳು. ಆ ಸಂಪುಟಗಳು ಎಂತಹರನ್ನೂ ಬೆರಗುಗೊಳಿಸುತ್ತವೆ! ಕನ್ನಡ ಸಾಹಿತ್ಯ ಚರಿತ್ರೆಯನ್ನು, ಸಾಹಿತ್ಯದ ಸತ್ವ ಮತ್ತು ಪ್ರವಾಹದ ಓಘಗಳನ್ನು ತಿಳಿಯಬಯಸುವವರಿಗೆ ಈ ಮೂರು ಗ್ರಂಥಗಳು ಸಾಗರೋಪಮ. ಆಚಾರ್ಯರ ಹಿರಿಮೆಯೆಂದರೆ ಯಾರೇ ಏನನ್ನಾದರೂ ಪ್ರವೇಶಿಸಿದರೆ (ಬರೆದರೆ) ಅವರಿಗೆ ಸರಿಯಾದ ರೀತಿಯಲ್ಲಿ ಉತ್ತರಕೊಟ್ಟು ವಿರೋಧಾಭಿಪ್ರಾಯದವರ ಅಭಿಪ್ರಾಯಗಳನ್ನೂ ಗಮನಿಸಿ, ಉತ್ತರಿಸುತ್ತಿದ್ದುದು. ಅದು ಸಾಹಿತ್ಯಪ್ರಿಯರ ಮಾರ್ಗ. ಕನ್ನಡಭಾಷೆಯ ಮೇಲೆ ಪಾಂಡಿತ್ಯ ತೋರಿಸುತ್ತ ತಮ್ಮ ಶ್ರಮ ಸಾರ್ಥಕವಾಗಬೇಕಾದರೆ ಆಗಬೇಕಾದ ಕಾರ್ಯವೇನು ಎಂಬುದನ್ನು

1. ಭಾಮಹನ 'ಕಾವ್ಯಾಲಂಕಾರವು' ಕಾವ್ಯ ವಿಮರ್ಶೆಯ ಪ್ರಥಮ ಗ್ರಂಥವೆನ್ನಬಹುದು.

ತೋರಿಸುವವರ ಮಾರ್ಗ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಪ್ರಾರಂಭಮಾಡುವ ಮುಂದಿನ ಜನಾಂಗಕ್ಕೆ ಅದರ ಕೃತಿಗಳು ಆಕರ ಸಾಹಿತ್ಯ. ಪ್ರಾರಂಭದಿಂದ ಅವರು ಬಾಳಿರುವವರೆಗೆ ಕನ್ನಡ ದಲ್ಲಿ ಆದ ಒಟ್ಟು ಶಾಸನಕಾರರು, ಮತ್ತು ಗದ್ಯ ಪದ್ಯ ಲೇಖಕರ ಒಂದು ಪಟ್ಟಿಯನ್ನೇ ಕೊಟ್ಟು, ಅವರ ಮತ, ಕಾಲ, ದೇಶ ಮತ್ತು ಕೃತಿಗಳ ಸಂಕ್ಷಿಪ್ತ ವಿವರಗಳನ್ನು ಕೊಟ್ಟಿರುತ್ತಾರೆ. ಮೂರು ನಾಲ್ಕು ಮಾತಿನಲ್ಲಿ ಕೃತಿ ವಿಮರ್ಶೆ ಮಾಡುವ ರೀತಿ ಅವರದಾದರೂ ಅಷ್ಟರಲ್ಲಿಯೇ ತೃಪ್ತಿಯಾ ಗುವಂತೆ ಬರೆಯುವಂತಹ ರೀತಿಯೂ ಆಚಾರ್ಯ ರದು: ಒಬ್ಬ ಕವಿಯ ಬಗೆಗೆ ಅವರು 'ಈವಿಯ ಬಂಧವುಲಲಿತವೂ, ಗಂಭೀರವೂ, ಮನೋಹರವೂ' ಎಂಬ ನಾಲ್ಕು ಮಾತಿನಲ್ಲಿಯೇ ಅವರು ಕೆಲವೆಡೆ ಒಂದು, ಕೆಲವೆಡೆ ಎರಡು, ಕೆಲವೆಡೆ ಮೂರು, ಇನ್ನು ಕೆಲವೆಡೆ ನಾಲ್ಕು ಪದಗಳನ್ನು ಬಳಸಿ, ಆ ಕವಿಯ ತಾರತಮ್ಯವನ್ನು ತಿಳಿಸುತ್ತಿದ್ದರು. ಇದು ಅಪೂರ್ಣವೆಂದು ಅತೃಪ್ತಿಕರವೆಂದು ನಾವು ಒಪ್ಪಿಕೊಂಡರೂ ಅವರು ಕಂಡುಹಿಡಿದ ಸರಿ ಯಾದ ರೀತಿಯೆಂದು ಕಂಡುಕೊಳ್ಳಬಹುದು. ಈ ಮೂರೂ ಗ್ರಂಥಗಳಲ್ಲಿ ಉಕ್ತರಾದ ಕವಿಗಳ ಹೆಸ ರನ್ನು ವಿಭಾಗಮಾಡುತ್ತ ಮುಂದಿನ ಬರೆಹಗಾರರು ಒಟ್ಟು ಜೈನ ಲಿಂಗಾಯತ ಬ್ರಾಹ್ಮಣ ಕವಿಗಳ ಪ್ರಮುಖ ಪ್ರವಾಹವನ್ನು ಕಂಡುಹಿಡಿದು, ಸಾಹಿತ್ಯ ಚರಿತ್ರೆಯ ವಿಭಾಗವನ್ನು ಈ ಮೂರು ರೀತಿಯಲ್ಲಿ ವಿಭಾಗಿಸಹತ್ತಿದ್ದರು. ಈ ಪದ್ಧ ತಿಯು ಹೆಚ್ಚು ಶಾಸ್ತ್ರೀಯವಲ್ಲದಿದ್ದರೂ ಸಾಹಿತ್ಯ ನಿರ್ಮಾಣದ ಓಘ, ಒಲವು, ವೈಶಿಷ್ಟ್ಯಗಳನ್ನು ಕಂಡುಹಿಡಿಯಲು ಹೆಚ್ಚು ಉಪಯುಕ್ತವೆಂದು ಹೇಳದೆ ಗತ್ಯಂತರವಿಲ್ಲ.

ಕನ್ನಡ ಕಾವ್ಯಗಳನ್ನು ಅದರ ಹಿರಿಮೆಯನ್ನು ಅರಿಯಬೇಕಾದರೆ ಕನ್ನಡಿಗರಿಗೆ ಪ್ರತಿಯೊಬ್ಬ ಕನ್ನಡ ಕವಿಯ ಮೇಲೆ ಕನಿಷ್ಟ ಒಂದೊಂದು ಗ್ರಂಥ ವಾದರೂ ಇರಬೇಕೆಂಬುದನ್ನು ಅರಿತು ವಿದ್ವಾಂ ಸರು ಕೆಲಕವಿಗಳ ಮೇಲೆ ಪ್ರಶಸ್ತಿ ಗ್ರಂಥಗಳನ್ನು ಪ್ರಕಟಿಸಿದರು. ಈ ಭಾವನೆಯನ್ನು ಯಾರೇ ಪ್ರಚೋದಿಸಿರಲಿ, ಬರೆಹಗಾರರು ಏನೇ ಬರೆದಿ ರಲಿ, ಪ್ರಶಸ್ತಿಗ್ರಂಥಗಳು ಆಯಾಕವಿಗಳನ್ನು ಅರಿ ಯಲು ತುಂಬಾ ಸಹಾಯಕಾರಿ ಗ್ರಂಥಗಳು. ಇಂತಹ ಪಶಸ್ತಿಗ್ರಂಥಗಳನ್ನು ಪಡೆಯುವ ಭಾಗ್ಯ ಎಲ್ಲರಿಗೂ ಬರಲಿಲ್ಲ. ಕೇವಲ, ಪಂಪ, ರನ್ನ, ನಾಗಚಂದ್ರ, ಕುಮಾರವ್ಯಾಸ, ಹರಿಹರದೇವ ಮತ್ತು ಮುದ್ದಣ ಮೊದಲಾದವರಿಗೆ ಮುಕ್ತಾಯ ಗೊಂಡಿತ್ತು. ಆದರೆ ಇತ್ತೀಚೆಗೆ 'ಬಾಲಲೀಲಾ ಮಹಂತ ಶಿವಯೋಗಿಗಳು'* 'ದೇವರದಾಸಿಮಯ್ಯ' 'ನಿಜಗುಣಶಿವಯೋಗಿಗಳು' 'ಚಾಮರಸ' ಮೊದಲಾದವರ ಮೇಲೂ ಪ್ರಶಸ್ತಿ ಗ್ರಂಥಗಳು ಬಂದಿವೆ. 'ಗುಬ್ಬಿಯ ಮಲ್ಲಣಾರ್ಯ' ರ ಮೇಲೆ ಅಖಂಡೇಶ್ವರ ವಚನದ ಕರ್ತೃ 'ಷಣ್ಮುಖಸ್ವಾಮಿ' ಯ ಮೇಲೆ ಗ್ರಂಥಗಳು ಬರಲಿವೆ. ಈ ಗ್ರಂಥ ಗಳು ಬರುವುದು ಸ್ವಾಗತಾರ್ಹವೇ ಸರಿ. ಸಂಶೋ ಧನೆಯ ವಿದ್ಯಾರ್ಥಿಗೂ, ಸಾಮಾನ್ಯ ಕನ್ನಡಿಗನಿಗೂ ಒಬ್ಬ ಕವಿಯಮೇಲೆ ಹಲವಾರು ಲೇಖಕರು ಬರೆದ ಲೇಖನಗಳನ್ನು ಸಂಗ್ರಹಿಸಿ, ಹಲವಾರು ದೃಷ್ಟಿಗ ಳನ್ನು ತೋರ್ಪಡಿಸುವುದು ಬಹಳ ಉಪಯುಕ್ತವೇ ಸರಿ. ಈ ಪ್ರಶಸ್ತಿಗ್ರಂಥಗಳು ಕವಿಯ ಬಗೆಗೆ ಪ್ರೀತಿ, ಗೌರವ, ಆದರಾಭಿಮಾನಗಳನ್ನು ಹುಟ್ಟಿ ಸುವದರ ಜೊತೆಗೆ ಅತಿಶಯದ ಹೊಗಳಿಕೆಯನ್ನು ದೂರಿಟ್ಟು, ಇತಿಹಾಸದ ಸಾಮಗ್ರಿಗೆ ಹೆಚ್ಚು ಬೆಲೆ ಕೊಟ್ಟರೆ ಆ ಗ್ರಂಥವು ಸಮಾಜಕ್ಕೆ ಮಹೋಪಕಾರ ಮಾಡಿದಂತೆಯೇ ಸರಿಯೆಂದು ಹೇಳಬಹುದು.

* ಈ ಗ್ರಂಥ ಈಗಾಗಲೇ ಮುರುಘಾಮಠದಿಂದ ಪ್ರಕಟವಾಗಿದೆ; ಅಲ್ಲದೆ ಈ ಲೇಖಕನಿಂದ 'ಚಾಮರಸ' ಕವಿಯ 'ಪ್ರಭುಲಿಂಗಲೀಲೆ'ಯ ಬಗೆಗೂ ಗ್ರಂಥವು ಪ್ರಕಟಿತವಾಗಿದೆ. (ಪಂಪಾ ಸಾಹಿತ್ಯ ಪ್ರಕಟನಾಲಯ, ೧೯೬೦)

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪ್ರೊಫೆಸರರಾದ ಡಾ. ಆರ್. ಸಿ. ಹಿರೇಮಠರವರು ಈ ಗ್ರಂಥಗಳ ಬಗೆಗೆ ಬರೆದ ಮಾತನ್ನು ಇಲ್ಲಿ ಉದ್ಧರಿಸಬಹುದು. "ಆಧುನಿಕ ಕನ್ನಡದಲ್ಲಿ ವಿಮರ್ಶೆಗಿಂತ ಪ್ರಶಸ್ತಿ ಪ್ರಾರಂಭವಾಗಿದೆಯೆಂದು ಹೇಳಬಹುದು. ಆದಿಪಂಪ, ಅಭಿನವಪಂಪ, ಕುಮಾರವ್ಯಾಸ, ಲಕ್ಷ್ಮೀಶ, ಮುದ್ದಣ ಈ ಕವಿಗಳ ವಿಷಯವಾಗಿ ಪ್ರಕಟವಾಗಿರುವ ಗ್ರಂಥಗಳು ಪ್ರಶಸ್ತಿ ಗ್ರಂಥಗಳಂತಿವೆ. ಕನ್ನಡದ ಹಿರಿಯಕವಿಗಳ ಕಾವ್ಯಗಳನ್ನು ಸಹೃದಯರು ಅಭಿಮಾನದಿಂದ ಓದಿ, ಆನಂದಪಟ್ಟು, ಅಭ್ಯಾಸಮಾಡಲೆಂಬ ಗುರಿಯಿಂದ, ಪ್ರಶಸ್ತಿ ಗ್ರಂಥಗಳನ್ನು ಬರೆದು, ಒಂದೆರಡು ಗ್ರಂಥಗಳಿಗೆ 'ಪ್ರಶಸ್ತಿ' ಎಂಬ ಹೆಸರನ್ನೇ ಕೊಟ್ಟದಾಗಿದೆ. ಉದಾಹರಣೆಗೆಂದು 'ರನ್ನಕವಿ ಪ್ರಶಸ್ತಿ' 'ಕುಮಾರವ್ಯಾಸ ಪ್ರಶಸ್ತಿ' ಎಂಬ ಗ್ರಂಥದ ತಲೆಬರೆಹಗಳನ್ನು ನೋಡಬಹುದು. ಈ ಗ್ರಂಥಗಳಲ್ಲಿ ಹಲವಾರು ಉತ್ತಮ ವಿಮರ್ಶಾತ್ಮಕ ಲೇಖನಗಳು ಕವಿಯ ಕೃತಿ, ಶೈಲಿ ಮೊದಲಾದವುಗಳ ಬಗೆಗೆ ದೊರೆಯುವವಾದರೂ ಅಭಿಮಾನದಿಂದ ಅಲ್ಲಲ್ಲಿ ನಮ್ಮ ಕವಿಗಳನ್ನು ಎತ್ತಿಹಿಡಿಯುವ ಪ್ರಯತ್ನ ನಡೆದಂತೆ ಕಂಡುಬರುತ್ತಿದೆ. ಮನೆಯ ದೀಪವೆಂದು ಮುದ್ದುಕೊಡುವುದು ನೈಜ ಪ್ರಪಂಚ, ನೈಜವಿಮರ್ಶೆ ಎರಡು ದೃಷ್ಟಿಯಿಂದಲೂ ಅಹಿತವಾದುದು. ಪ್ರಕೃತಿ ವರ್ಣನೆಯನ್ನು ಮಾಡುವಾಗ ಮುದ್ದಣನು, ಕಾಳಿದಾಸ, ಷೇಕ್ಸಪೀಯರರ ಎಲ್ಲೆಯನ್ನು ಮೀರಬಲ್ಲನೆಂದು ವಿಮರ್ಶೆಯ ಲೆಕ್ಕಣಿಕೆಯು ಬರೆದರೆ ಅದನ್ನು ನಾವು ಒಪ್ಪಬೇಕೇ? ಕುಮಾರವ್ಯಾಸನ ಕೈಯಲ್ಲಿ ಕನ್ನಡದ ಬಾವುಟವನ್ನು ಕೊಟ್ಟು ಜಗತ್ತಿನ ಯಾವ ದೊಡ್ಡ ಕವಿಯನ್ನು ಎದುರಿಸಬಲ್ಲನೆಂಬ ಮಾತನ್ನು ಅದೆಷ್ಟು ಜನ ಒಪ್ಪುವರು? ಒಟ್ಟಿನಲ್ಲಿ ಕನ್ನಡದೊಳಗೆ ಪ್ರಶಸ್ತಿಯ ಕಾರ್ಯ (ಪ್ರಶಸ್ತಿಗ್ರಂಥಗಳ) ಸರಿಯಾಗಿ ಸಾಗಿದೆಯಾದರೂ ನೈಜವಿಮರ್ಶೆ ಸಾಕಷ್ಟುತೃಪ್ತಿ" ಕರವಾಗಿ ಬಳೆದು ಬಂದಂತೆ ತಿಳಿದುಬರುವುದಿಲ್ಲ[1]. ವಿಮರ್ಶೆ ಸಾಹಿತ್ಯದ ಒರೆಗಲ್ಲು, ಬೆಳವಣಿಗೆಯ ಸಾಧನ, ಜೊಳ್ಳುತೂರಿ ಗಟ್ಟಿಗಾಳನ್ನು ಎತ್ತಿಕೊಳ್ಳುವ ಸಾಧನ. ಪ್ರಶಸ್ತಿಯಲ್ಲಿಯೇ ಕೊನೆಗೊಳ್ಳಬಾರದು. ಜಾತಿಮತ ಪಂಥಗಳು ವಿಮರ್ಶಕನಿಗೆ ಕವಿಯ ನಿಜವಾದ ಶಕ್ತಿಯನ್ನೂ ಅಭಿಪ್ರಾಯವನ್ನೂ ಕಂಡುಹಿಡಿಯುವುದಕ್ಕೆ ಅನುಕೂಲ ಸಾಮುಗ್ರಿಯಾದರೋ ಸಾಮಾನ್ಯ ಕವಿಯನ್ನು ಕವೀಂದ್ರನೆಂದೂ ರವೀಂದ್ರನೆಂದೂ, ಕರೆಯುವುದು ಅತ್ಯಭಿಮಾನದ ವಿಷಯವಾಗಬಹುದು. ಆಧುನಿಕ ವಿಮರ್ಶಕರು ಕೃತಿವಿಮರ್ಶೆಮಾಡುವಾಗ ವಿಮರ್ಶಕನು ಕವಿಯ ಜಾತಿ ಮತಪಂಥಗಳಿಗೆ ಅಂಟಿಕೊಂಡಿದ್ದವನಾಗಿದ್ದರೆ ಸರಿಯಾದ ನಿರ್ಣಯಕ್ಕೆ ಬರಬಹುದಾದರೂ ಕವಿಯು ಅರ್ಹನಿರುವದಕ್ಕಿಂತಲೂ ಹೆಚ್ಚು ಪ್ರಶಸ್ತಿಯನ್ನು ಈ ತೆರನಾದ ವಿಮರ್ಶಕನಿಂದ ಪಡೆಯುತ್ತಾನೆಂದು ತಿಳಿಯುತ್ತಾರೆ. ಅನ್ಯಧರ್ಮೀಯನಾದರೆ, ಕವಿಗೆ ದೊರೆಯುವಷ್ಟು ನಿಜವಾದ ಬೆಲೆಯೂ ಸಿಕ್ಕಲಾರದೆಂಬ ಭಯವೂ ಅಂಕುರಿಸುತ್ತದೆ. ಅಂತೂ ಈ ವಿಷಯದಲ್ಲಿ ತರ್ಕವು ಒಪ್ಪಿಕೊಳ್ಳುವಂತೆ ಯಾವುದೇ ನಿರ್ಣಯವನ್ನು ಹೇಳುವದು ಸುಲಭವಲ್ಲದಿದ್ದರೂ, ಕವಿಯ ನಿಜವಾದ ಕೊಡುಗೆಯೇನು? ಸ್ಥಾನಮಾನವೇನು? ಎಂಬುದನ್ನು ತಿಳಿಸುವುದೇ ವಿಮರ್ಶಕನ ಗುರಿಯಾಗಿ, ಕಲುಷಿತ ಕಲ್ಪನೆ, ಪೂರ್ವಗ್ರಹದೂಷಿತ ಇವುಗಳಿಂದ ವಿಮರ್ಶಕನು ದೂರವಿದ್ದು, ಸಹೃದಯನಾಗಿ ಕವಿ ವಿಮರ್ಶೆಮಾಡುವದು ಇಷ್ಟವೆಂದೆನಿಸುತ್ತದೆ. ಅಭಿಪ್ರಾಯಗಳನ್ನು ಮುಚ್ಚಿಡುವದಕ್ಕಿಂತ ನಿಚ್ಚಳವಾಗಿ ನುಡಿದರೆ ನಿಜದೃಷ್ಟಿಯವರು ಕೋಪಿಸಿಕೊಳ್ಳಲಾ

---

1. ಸಾಹಿತ್ಯ ಸಂಸೃಷ್ಟಿ. (೧೯೫೧ ಶೋಭಾ ಗ್ರಂಥಮಾಲೆ, ಬೆಳಗಾವಿ. (ಪುಟ, ೫೦.)

ಗದು. ಜಾತೀಯಕಲಹಕ್ಕೆ ಇಲ್ಲಿ ಸ್ಥಾನವಿಲ್ಲ [1] ನಮ್ಮ ವಿಮರ್ಶಾ ಸಾಹಿತ್ಯದ ಬಹು ಭಾಗ ಈ ಬಗೆಯ ಬಣ್ಣ ಪಡೆದಿರುವದು ಶುಭಸೂಚನೆಯಲ್ಲ. ನಿರ್ಲಿಪ್ತಮನದಿಂದ ವಿಮರ್ಶಿಸಿ ಜಗತ್ತಿಗೆ ನಮ್ಮ ಕವಿಗಳ ಸಾರಸುಂದರ ರೂಪವನ್ನು ತೋರಿಸಿ ಕೊಡಬೇಕಾಗಿದೆ.[2]

ವಿಮರ್ಶಕನೊಬ್ಬ ಕೀಳಾದ ಕವಿಯಲ್ಲ.ಅವನೂ ಒಬ್ಬ ಸೃಷ್ಟಿಕರ್ತ. ಕಾಳಿದಾಸನು ದೊಡ್ಡವನಾದುದು ತನ್ನ ಹಿರಿಮೆಯಿಂದಲಾದರೂ ಯಾವ ಗುಣಗಳಿಗಾಗಿ ಎಂಬುದನ್ನುತೋರಿಸಿದವರು ಸಹೃದಯರಾದ ವಿಮರ್ಶಕರು. ಕವಿಗಳು ಪ್ರದರ್ಶಿಸಿದ ದರ್ಶನವನ್ನು, ಪ್ರದರ್ಶನಗಳ ರೀತಿ ನೀತಿಗಳನ್ನು ಒಪ್ಪುತಪ್ಪುಗಳನ್ನು ಸರಿಯಾಗಿ ಕಂಡುಕೊಳ್ಳಬಲ್ಲವರು, ತೋರಿಸುವವರು ವಿಮರ್ಶಕರು. ರಸಿಕರಿಗೆ ರಸಪ್ರದರ್ಶನದ ಹಂತಗಳನ್ನು ತೋರಿಸಬಲ್ಲವರು. ಕವಿಯಪಾಂಡಿತ್ಯ ಕವಿಯಕೃತಿ ಕಲಾಕೃತಿಯೆಂಬುದರ ಅರಿವು, ಕವಿಯದರ್ಶನ, ತತ್ತ್ವ ಸಿದ್ಧಾಂತಗಳ ನಿರೂಪಣಾ ಪದ್ಧತಿಯನ್ನು ತೋರಿಸಬಲ್ಲ ಮಾರ್ಗದರ್ಶಕರು ಎಂದ ಮೇಲೆ ಇಂತಹ ವಿಮರ್ಶಕರೇ ದಾರಿತಪ್ಪಿದಮೇಲೆ ಮುಂದೇನು? ನಮ್ಮ ವಿಮರ್ಶಕರು ಸರಿಯಾದ ಮಾರ್ಗದಲ್ಲಿ ನಡೆಯುತಿಲ್ಲವೆಂಬುದಕ್ಕೆ ಇನ್ನೊಬ್ಬರು ಆಡಿದ ಮಾತನ್ನೇ ಇಲ್ಲಿ ಉದಾಹರಿಸುತ್ತೇನೆ. ಈ ವಿಮರ್ಶೆಯೂ ಮುದ್ದಣನಮೇಲೆ ಬರೆದುದು. ಕೇವಲ ಅಂಗ ವ್ಯಾಯಾಮ ಶಿಕ್ಷಕನಾಗಿ, ಪಂಡಿತಗುರುಗಳ ಸಾನ್ನಿಧ್ಯದಲ್ಲಿದ್ದು; ಸಂಸ್ಕೃತ ಸಿಹಿಬಿಂದುಗಳನ್ನುಂಡು, ಪಾಂಡಿತ್ಯ ಕವಿತ್ವಗಳನ್ನು ಸಾಹಸದಿಂದ ಆರ್ಜಿಸಿಕೊಂಡ ಸಾಮಾನ್ಯ ಮುದ್ದಣ ಕವಿಯನ್ನು ಕಾಳಿದಾಸ, ಷೆಕ್ಸಪೀಯರ, ರಸ್ಕಿನ್, ಡಿಕ್ವಿನ್ಸಿ ಮೊದಲಾದವರಿಗೆ ಹೋಲಿಸುವುದು,ಅಂಕೆಯಿಲ್ಲದೆ ಹೊಗಳುವದು, ಗುಣಗ್ರಹಣಮಾಡಬೇಕಾದ ಕಾವ್ಯ ಪ್ರದೇಶದಲ್ಲಿ 'ಸೌಮ್ಯತೆಯನ್ನು ಮುಂದಿಟ್ಟುಕೊಂಡು ನಾವು ಹಿಂದೆ ಅಡಿ ಇಟ್ಟರೆ, ಒಟ್ಟಿನಲ್ಲಿ ಕವಿಗೆ ಕುಂದೇನಿಯತ' ಅಭಿಮಾನದ ತಾವು ಇಳಿದು, ನಿಷ್ಪಕ್ಷಪಾತದ ವಿಮರ್ಶಕ ಬುದ್ಧಿ ತಲೆದೋರಿದ ಇಂದಿನ ಕಾಲದಲ್ಲಿ, ಮುದ್ದಣನಬಗೆಗೆ ಪ್ರಬಲವಾದ ಸಂದೇಹಗಳು ಮೂಡಿವೆ; ಇನ್ನೂ ದೊಡ್ಡವನನ್ನಾಗಿ ಹಿಗ್ಗಲಿಸಲು ಯತ್ನಿಸಿದರೆ ಕಪ್ಪೆದೊಡ್ಡದಾಗ ಬಯಸಿ ದೊಡ್ಡಹೊಟ್ಟೆ ಪಡೆಯಬೇಕೆಂಬ ನೆವದಲ್ಲಿ ಹೊಟ್ಟೆ ಒಡೆದುಕೊಂಡಂತಾಗಬಾರದು. ಅದು ಕವಿ ವಿಮರ್ಶಕರೀರ್ವರ ಜೀವಕ್ಕೂ ಅಪಾಯ; ಎಂಬಂತಹ ಅಭಿಪ್ರಾಯವನ್ನು ತಾಳುತ್ತಾ ಪ್ರೊ. ಎಸ್. ವಿ. ರಂಗಣ್ಣನವರು ಉದ್ದಾಮಕವಿಯಲ್ಲಿ ನಿರೀಕ್ಷಿಸಬಹುದಾದ ಮುಖ್ಯಾಂಶಗಳೆಂದರೆ 1) ಪೃಥಿವಿಯ ನಾನಾ ತೀವ್ರ ಅನುಭವಗಳಿಂದ ಕೂಡಿ ತುಂಬಿದ ವಸ್ತು; 2) ಮಹಾಮನುಷ್ಯತ್ವದಮೇಲೆ ಕಾಲೂರಿ ನಿಂತು ದೇವತ್ವದ ಕಡೆಗೆ ಕೈ ಎತ್ತಿರುವ ಎತ್ತರದ ಪಾತ್ರಗಳು; 3) ತಟ್ಟ ತಳದಿಂದ ಎದ್ದು ನಭದವರೆಗೆ ಚಿಮ್ಮಿರುವ ರಾಗಜ್ವಾಲೆಗಳು. 4) ಹೊಸ ಹೊಸದಾಗಿ ಉಕ್ಕಿಬರುವ ಹಿರಿಯರ್ಥವನ್ನು ಕಿರಿಯುದರಲ್ಲಿ ಧ್ವನಿಗೈಯುವ ಗಂಭೀರವಾಣಿ. 5) ಅನಿರ್ವಚನೀಯವಾದ ಸ್ವಾಭಾವಿಕತೆ, 6) ಕಥೆಯೆಂದು ಕಾಣಿಸದಿದ್ದರೂ ಚೇತೋಹಾರಿಯಾದ ಕಲೆ ಎಂದು ಹೇಳಿ, ಈ ವಿಧಿಗಳ ಘನ ಪರೀಕ್ಷೆಗೆ ಮುದ್ದಣನ ಕಾವ್ಯಗಳು ತಡೆಯಬಲ್ಲವೇ? ಎಂದು

---

1. ಶ್ರೀ ಸೂಗವೀರ ಶರ್ಮಾ ರಾಯಚೂರು ಅವರು 'ಕುಮಾರವ್ಯಾಸನ' ಬಗೆಗೆ ಬರೆದ ಸಂಶೋಧನೆಯ ಲೇಖನಗಳ ಬಗೆಗೆ ಕೆಲವರು ಬ್ರಾಹ್ಮಣರು ಆಕ್ಷೇಪವೆತ್ತಿದ್ದಾರೆಂದೂ, ಅವರಿಗೆ ಬೆದರಿಕೆಗಳನ್ನು ಹಾಕುವ ಓಲೆ ಬರೆದಿದ್ದಾರೆಂದು ತಿಳಿದು ಬರುತ್ತದೆ. ಇದು ಸರಿಯಾದ ಮಾರ್ಗವಲ್ಲ.

2. ಸಾಹಿತ್ಯ ಸಂಸ್ಕೃಷ್ಟಿ. (೧೯೫೧ ಶೋಭಾ ಗ್ರಂಥಮಾಲೆ, ಬೆಳಗಾವಿ. (ಪುಟ, ೫೧)

ಪ್ರಶ್ನಿಸಿ ಮುದ್ದಣನಲ್ಲಿ ತಲೆದೋರುತ್ತಿರುವ ಬಹು ನುಡಿಯ ಬೇಸರ, ಪಾತ್ರಗಳ ರಚನೆಯಲ್ಲಿ ತಲೆದೋರಬಹುದಾದ ಅಸಂಭಾವ್ಯತೆ, ಸೀತಾಪಾತ್ರವೊಂದನ್ನುಳಿದು ಪಾತ್ರವಿರಚನೆಯೆಲ್ಲದರಲ್ಲಿಯೂ ಮಧ್ಯಮ ದರ್ಜೆಯ ನೈಪುಣ್ಯತೆ, ಭಾವ ಪ್ರಕರ್ಷಗಳ ಕೊರತೆ, ಹಳಗನ್ನಡ ತದ್ಭವಗಳ ವೈಪರೀತ್ಯತೆ ಮತ್ತು ಕ್ಲಿಷ್ಟತೆ, ಜಡ ಪಾಂಡಿತ್ಯದ ಪ್ರದರ್ಶನ, ಅರ್ಥಸ್ವಾರಸ್ಯವಿಲ್ಲದೆ ಬರುವ ವರ್ಣಾವೃತ್ತಿ (ವರ್ಣದ ಪುನರಾವರ್ತಿ) ಮೊದಲಾದುವು ಅವನ ಕಾವ್ಯದ ದೋಷಗಳೆಂದು ತೋರುತ್ತದೆ. ಮುದ್ದಣನು, ಯಶಸ್ಸು ಹಬ್ಬಿ ಹರಡಿ ನಿಲ್ಲುವದಕ್ಕೆ ಅವನ ಪಾತ್ರ (ರಚನೆ), ಕಥೆ, ವರ್ಣನೆ ಯಾವುದೂ ಊರೆಗೋಲಲ್ಲ; ಅವನ ಗದ್ಯದ ಧಾಟಿ, ಮುದ್ದಣ ಮನೋರಮಾ ಪ್ರಕರಣ ಇವೆರಡೇ ಆ ಪರಾಕ್ರಮ ಪೌರುಷವನ್ನು ಹೊಂದಿದವು[1] ಎಂಬ ಗುಣಗಳ ತೋರುವಿಕೆಯು ಅರ್ಥವತ್ತಾದುದು ಎಂದು ಹೇಳಬಹುದಾಗಿದೆ.

೩. ಕನ್ನಡ ಸಾಹಿತ್ಯ ಚರಿತ್ರೆ :

i) ಕನ್ನಡದ ಪ್ರಧಾನ ಕವಿಗಳ ಕೃತಿ ವಿಮರ್ಶೆ ಮಾಡುತ್ತ ಕನ್ನಡ ಸಾಹಿತ್ಯದ ಘನತೆಯನ್ನು ಎತ್ತಿ ತೋರಿಸುವ ಸದುದ್ದೇಶದಿಂದ, ಕನ್ನಡದ ಕವಿಗಳಾರಾದರೂ ವಿಶ್ವದ ಮಾನ್ಯಕವಿಗಳ ಜೊತೆಯಲ್ಲಿ ಮೆರೆಯಬಲ್ಲವರಾರಾದರೂ ಇದ್ದರೆ ಎತ್ತಿ ತೋರಿಸಬೇಕೆಂಬ ಸದುದ್ದೇಶದಿಂದ, ಮೈಸೂರು ವಿಶ್ವವಿದ್ಯಾನಿಲಯದವರ ಆಶ್ರಯದಲ್ಲಿ, ದಿ. ಪ್ರೊಫೆಸರ ಬಿ. ಎಂ. ಶ್ರೀಯವರು 'ಕನ್ನಡ ಸಾಹಿತ್ಯ ಚರಿತ್ರೆಯನ್ನು[2] ಬರೆಯುವ ಕಾರ್ಯ ಕೈಕೊಂಡು ಅಪೂರ್ಣವಾಗಿ ಬರೆದು ಕೊಟ್ಟರೂ, ಬರೆದ ಕವಿಗಳ ಚರಿತ್ರೆ, ಅಲ್ಲಿ ಮಾಡಿರುವ ವಿಮರ್ಶೆಯ ರೀತಿ-ಕನ್ನಡದ ಅಭಿಮಾನದ ಶೆಲೆಯೂ, ಮೇಲ್ತರಗತಿಯ ವಿಮರ್ಶಕನ ನೆಲೆಯೂ ಆಗಿದೆ. ಅದು ಕನ್ನಡ ಸಾಹಿತ್ಯದ ಆರಂಭದಿಂದ ನಾಗಚಂದ್ರನ ಕಾವ್ಯಗಳಿಗೆ ಮುಕ್ತಾಯಗೊಂಡಿದೆ. ಇಲ್ಲಿ ಜೈನರಲ್ಲಿ ಪ್ರಖ್ಯಾತರಾದ ರತ್ನತ್ರಯರೂ, ಜಿನಸಮಯ ದೀಪಕರೂ ಎಂದು ಪ್ರಖ್ಯಾತಿಗೊಂಡ ಪಂಪ, ಪೊನ್ನ, ರನ್ನರುಗಳಲ್ಲದೆ, ಒಂದನೆಯ ನಾಗವರ್ಮ ಮತ್ತು ನಾಗಚಂದ್ರರ ವಿಮರ್ಶೆಯೂ ಬಂದಿದೆ. ಪಂಪನ ಎರಡು ಕಾವ್ಯಗಳ ವಿಮರ್ಶೆ ಸುಮಾರು 70 ಪುಟಗಳಲ್ಲಿ, ಪೊನ್ನನ ಕಾವ್ಯಗಳ ವಿಮರ್ಶೆ 14 ಪುಟಗಳಲ್ಲಿ, ರನ್ನ ಕವಿಯ ವಿಮರ್ಶೆ 25 ಪುಟಗಳಲ್ಲಿ ಬಂದುದನ್ನು ನೋಡಿದರೆ ಕವಿಯ ಆಳ, ಅಗಲ, ಎತ್ತರಗಳಿಗೆ ತಕ್ಕ ರೀತಿಯಲ್ಲಿಯೇ ಅವರ ವಿಮರ್ಶೆಯೂ ಹರಡಿದೆ ಎಂಬುದು ತಿಳಿಯದಿರಲಾರದು. ಬಿ. ಎಂ. ಶ್ರೀಯವರ ವಿಮರ್ಶೆಯಲ್ಲಿ ಕವಿಗಳ ಮನೋಭಾವನೆಯನ್ನು ತಿಳಿಸುವ ಉದ್ದೇಶವೇ ಪ್ರಧಾನವಾಗಿತ್ತೆಂದು ತಿಳಿದು ಬರುತ್ತದೆ. ನಮ್ಮ ಕವಿಗಳ ಮೇಲೆ ವಿಮರ್ಶೆ ಮಾಡಿದವರ ಬಗೆಗೆ ಬರೆಯುತ್ತಾ ಲಿಂ. ಪ್ರೊ. ಬಸವನಾಳರವರು ಒಂದೆಡೆಗೆ "ಒಬ್ಬನೇ ಕವಿಯು ಬರೆದ ಎರಡು ಗ್ರಂಥಗಳ ವಿಷಯದಲ್ಲಿಯಾದರೂ ಜನಾನುರಾಗವು ಹೆಚ್ಚುಕಡಿಮೆಯಾಗಿರುವುದು ಕಂಡು ಬರುತ್ತದೆ. ಉದಾಹರಣೆಗಾಗಿ, ಕರ್ಣಾಟಕ ಸಾಹಿತ್ಯದಲ್ಲಿ ಆದಿಪಂಪನ'ಆದಿಪುರಾಣ'ಕ್ಕಿಂತಲೂ ಆತನ ಭಾರತ'ಕ್ಕಿರುವ ಗೌರವ, ಅಭಿನವ ಪಂಪನ 'ಮಲ್ಲಿನಾಥ ಪುರಾಣ'ಕ್ಕಿಂತಲೂ ಪಂಪರಾಮಾಯಣಕ್ಕಿರುವ ಪ್ರಶಸ್ತಿ, ರನ್ನರ 'ಅಜಿತನಾಥ

1. 'ಹೊನ್ನಶೂಲ' (೧೯೫೯, ಏಪ್ರಿಲ್ ; ಶಾರದಾಮಂದಿರ, ಮೈಸೂರು.) 'ಸಾಮಾನ್ಯ ಚಿತ್ರಕ್ಕೆ ಸುವರ್ಣ ಚೌಕಟ್ಟು' ಎಂಬ ಪ್ರಬಂಧ.
2. ನೋಡಿರಿ. 'ಕನ್ನಡ ಕೈಪಿಡಿ' ಸಂಪುಟ ೨ ; ೧೯೪೭.

ಪುರಾಣಕ್ಕಿಂತಲೂ ಆತನ 'ಗದಾಯುದ್ಧ'ಕ್ಕಿರುವ ಮೆಚ್ಚುಗೆ, ಷಟ್ಪದಿ ಗ್ರಂಥಗಳಲ್ಲಿಯೇ ಚೆನ್ನಬಸವ ಪುರಾಣಕ್ಕಿಂತಲೂ ಉಳಿದ ಕಾವ್ಯಗಳಿಗಿಂತ ಜೈಮಿನೀ ಭಾರತಕ್ಕೂ, ಕುಮಾರವ್ಯಾಸ ಭಾರತಕ್ಕೂ ಇರುವ ಜನಾನುರಾಗವೆಲ್ಲ ಆ ಕಥೆಗಳ ಜನಾನುರಾಗ, ಮನೋರಂಜಕತೆಯ ಕಾರಣಗಳೇ" ವಿನಾ ಕೇವಲ ಕವಿಯ ಅಗ್ಗಳಿಕೆಯೇ ಕಾರಣವಲ್ಲ ಎಂಬ ಕಾರಣವನ್ನು ತಿಳಿಸಿದ್ದರು. ಬಹುಜನ ವಿಮರ್ಶಕರು ಸಹ ಒಂದೊಂದು ಕಾವ್ಯದ ವಿಮರ್ಶೆ ಮಾಡುವಾಗ ಅದೇ ಕವಿಯ ಇನ್ನೊಂದು ಕಾವ್ಯದ ವಿಮರ್ಶೆ ಮಾಡುವಾಗ ಉಪೇಕ್ಷೆ ಮಾಡುವ ಪ್ರವೃತ್ತಿಯನ್ನೂ ತೋರಿಸುವ ಬಗೆಯನ್ನೂ ಪ್ರೊ. ಬಸವನಾಳರವರು ಸೂಚಿಸಿದ್ದರು[1] ಈ ರೀತಿಯ ಉಪೇಕ್ಷೆಯನ್ನು ಹೋಗಲಾಡಿಸಿ, ಬಿ. ಎಂ. ಶ್ರೀಯವರು ಪಂಪನ ಆದಿಪುರಾಣವೂ ಕನ್ನಡ ಸಾಹಿತ್ಯದ ಉತ್ಕೃಷ್ಟ ಗ್ರಂಥಗಳಲ್ಲೊಂದು, ಪಂಪನು ಈ ಕಾವ್ಯ ರಚಿಸಿ ಕೀರ್ತಿ ಧ್ವಜವನ್ನು ನೆಟ್ಟಿದ್ದನೆಂದೂ, ಇನ್ನೂ ವಿಚಾರಿಸಿದರೆ ಅಭಿನವ ಪಂಪ, ರನ್ನರ ಮಲ್ಲಿನಾಥ ಪುರಾಣ, ಮತ್ತು ಅಜಿತನಾಥ ಪುರಾಣಗಳ ವಿಷಯ ಹೇಗಾದರೂ ಆಗಲಿ, ಪಂಪನ ಆದಿಪುರಾಣವು ಮಾತ್ರ ಭಾರತ ಇಲ್ಲವೆ ವಿಕ್ರಮಾರ್ಜುನ ವಿಜಯಕ್ಕಿಂತ ಒಂದು ತೂಕ ಮೇಲೇ ಎಂಬ ಉಕ್ತಿಯೂ ಅಲ್ಲಿ ಮೂಡಿ ಬಂದಂತಿದೆ.[2] ಈ ಮಾತೇ ಇಂದಿನ ವಿಮರ್ಶೆಗೆ ಅಡಿಗಲ್ಲಾದರೆ ಈ ಕವಿಗಳ ಕೃತಿಗಳ ಹಿರಿಮೆ ಇನ್ನೂ ಹೆಚ್ಚಿ ಕವಿಗಳ ಹಿರಿಮೆಯೂ ಹೆಚ್ಚಬಹುದಲ್ಲವೆ? ಪಂಪ ರನ್ನ ಪೊನ್ನರು 'ಜಿನಸಮಯ ದೀಪಕರು, ರತ್ನತ್ರಯರು, ಪುರಾಣಕರ್ತೃಗಳು', ಎಂದು ಕವಿ ರನ್ನನ ಅಭಿಪ್ರಾಯ. ಆ ಕಾಲದಲ್ಲಿ ಕವಿಗಳಿಗೆ ಧರ್ಮವೇ ಎಲ್ಲಕ್ಕೂ ಮೇಲು; ಧರ್ಮ ಗ್ರಂಥ ಬರೆಯುವುದರಲ್ಲೇ ಕವಿಗಳಕೀರ್ತಿ. ಧರ್ಮಕ್ಕಾಗಿ ಹೋರಾಡಿ ಮಡಿಯುವದೇ ವೀರಸ್ವರ್ಗ ಎಂಬ ಅಭಿಪ್ರಾಯಗಳು ನೆಲೆಗೊಂಡ ಕಾಲ. ಅಂದ ಮೇಲೆ ಜಿನಸಮಯ ದೀಪಕರಾದ ಪಂಪ ಪೊನ್ನ ರನ್ನರು ತಮ್ಮ ಕಾವ್ಯದ ಪುರಾಣಗಳ ನಾಯಕರಾದ ವೃಷಭದೇವ, ಶಾಂತಿನಾಥ ಮತ್ತು ಅಜಿತನಾಥರುಗಳ ಮೇಲೆ ಅತುಲ ಭಕ್ತಿ, ಶ್ರದ್ಧೆ, ನಿಷ್ಠೆ, ಸ್ಫೂರ್ತಿಯನ್ನು ತೋರಿ ಬರೆದಂತೆ ಧಾರ್ಮಿಕ ಮಹಾಪುರುಷರಲ್ಲದವರ ಮೇಲೆ ಬರೆಯಬಹುದೇ? ತಮ್ಮ ಧರ್ಮ ಅದು ತಮ್ಮದೇ! ಎಂದಮೇಲೆ ಅವರ ಧರ್ಮಗ್ರಂಥಗಳು ಇತರ ಗ್ರಂಥಗಳಿಗಿಂತಲೂ ಕಾವ್ಯಶಕ್ತಿಯ ಪ್ರದರ್ಶನದಲ್ಲಿ ಕಡಿಮೆಯಾಗಬಹುದೇ? ಈ ಮಾತನ್ನು ವಿಮರ್ಶಕರು ಪಂಪ ರನ್ನ ಕವಿಗಳ ವಿಷಯದಲ್ಲಿ ಗಮನಿಸಿಲ್ಲವೆಂಬ ಮಾತಿನ ಸೂಚನೆ ದಿ. ಬಿ. ಎಂ. ಶ್ರೀಯವರ ಸಾಹಿತ್ಯ ಚರಿತ್ರೆಯಲ್ಲಿದೆ ಎಂದು ಎನಿಸುತ್ತದೆ. ಸ್ವಾತಂತ್ರ್ಯ ಪಡೆದ ವರ್ಷವೇ ಹೊರ ಹೊಮ್ಮಿದ ಈ ಗ್ರಂಥಕ್ಕೆ ಈ ದೃಷ್ಟಿಯಿಂದಲೂ ಅತಿ ಬೆಲೆ ಇದೆ.

ii) ಪ್ರೊ. ಬಿ. ಎಂ. ಶ್ರೀಯವರು ಹಾಕಿಕೊಂಡ ಮಾರ್ಗದಲ್ಲಿ 'ಕನ್ನಡ ಸಾಹಿತ್ಯ ಚರಿತ್ರೆ'ಯು[3] ಮುನ್ನಡೆದು ದೊರೆಯದಿದ್ದುದು ನಮ್ಮ ದೌರ್ಭಾಗ್ಯವೇ ಸರಿ! ಈ ಮಹಾಕಾರ್ಯಕ್ಕೆ ಪ್ರೊ. ರಂ. ಶ್ರೀ. ಮುಗಳಿಯವರು ಕೈ ಹಾಕಿ ಮಹತ್ವದ ಕೆಲಕವಿಗಳ ಬಗೆಗೆ ವಿಮರ್ಶೆ ಮಾಡಿರುವದು

---

1. ಚನ್ನಬಸವ ಪುರಾಣ. ಭಾಗ ೧; (೧೯೩೪, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯಶಾಖೆ, ಧಾರವಾಡ) ಸಂ; ಪ್ರೊ. ಎಸ್. ಎಸ್. ಬಸವನಾಳರವರು ಎಂ. ಎ., ಪ್ರಸ್ತಾವನೆ ಪುಟ, ೧೫.

2. 'ಕನ್ನಡ ಕೈಪಿಡಿ' ಸಂ. ೨; ಪುಟ ೫೦೦.

3. ಕನ್ನಡ ಸಾಹಿತ್ಯ ಚರಿತ್ರೆ'—ಉಷಾ ಸಾಹಿತ್ಯಮಾಲೆ ಮೈಸೂರು, ೧೯೫೩.

ವಿದ್ಯಾರ್ಥಿಗಳ ದೃಷ್ಟಿಯಿಂದ ಸ್ವಾಗತಾರ್ಹವೇ ಸರಿ. ಅವರ ಪುಸ್ತಕಕ್ಕೆ ದಿವಂಗತ ನರಸಿಂಹಾಚಾರ್ಯರ ಮೂರು ಸಂಪುಟಗಳೂ, ಪ್ರಕಟವಾದ ಅನೇಕ ಗ್ರಂಥಗಳೂ ಸಹಾಯಕ ಸಾಮುಗ್ರಿ. ಇಲ್ಲಿ ಬಿ. ಎಂ. ಶ್ರೀಯವರ ಮೇಲ್ಪಂಕ್ತಿಯ ಮಾರ್ಗಾನುಸರಣೆಯಾಗಲಿ, ಲಿಂ. ಪ್ರೊ. ಬಸವನಾಳರವರ ತೂಕಬದ್ಧವಾದ ವಿವರಣೆಯಾಗಲಿ ಕಾಣದಿರುವದು ಒಂದು ಕೊರತೆಯೆಂದು ಕಾಣದಿರದು. ಡಾ॥ ಮುಗುಳಿಯವರು ಕೈಕೊಂಡ ಕಾರ್ಯ ಗಡುಚುತರ. ಅದು ಒಬ್ಬ ವ್ಯಕ್ತಿಯ ಕಾರ್ಯವಲ್ಲ. ಅದರಲ್ಲಿಯೂ ಒಂದು ಮತದವನ ಕಾರ್ಯವಲ್ಲ. ಹಲವಾರು ಮತದ ಅದರಲ್ಲಿಯೂ ಜೈನ ಲಿಂಗಾಯತ ಬ್ರಾಹ್ಮಣ ವಿದ್ವಾಂಸರು ಒಂದೆಡೆ ಕೂಡಿ ಕೈಕೊಳ್ಳಬೇಕಾದ ಕಾರ್ಯ. ಹಾಗಾದಲ್ಲಿ ಕಾರ್ಯಕ್ಕೆ ಯಶದೊರೆಯುವುದು. ಪುಟ ಪುಟಗಳಲ್ಲಿ ಮುಗಳಿಯವರು ತಮ್ಮ ಮತಪ್ರಸಾರದ ಮಾಯಾಜಾಲವನ್ನು ತಮ್ಮ ಪುಸ್ತಕದಲ್ಲಿ ಬೀಸಿದ್ದಾರೆ. ಈ ಮೊದಲೇ ಮುಗಳಿಯವರು ಪ್ರಕಸಿದ 'ದಿ ಹೆರಿಟೇಜ್ ಆಫ್ ಕರ್ನಾಟಕ' ಎಂಬ ಪುಸ್ತಕವು ಕನ್ನಡ ಸಂಸ್ಕೃತಿ, ಕನ್ನಡ ನಾಗರಿಕತೆಯನ್ನು ಸರಿಯಾಗಿ ಬಿತ್ತರಿಸಿಲ್ಲವೆಂಬ ದೂರು ಪಂಡಿತರಲ್ಲಿ ಕೇಳಿಬರುತ್ತಿತ್ತು. ಕೆಲ ಮಹತ್ವದ ಗ್ರಂಥಗಳ ಹೆಸರುಗಳನ್ನು ಸೂಚಿಸಿರುವುದಾಗಲಿ, ಬಳಸಿರುವುದಾಗಲಿ ಕಂಡುಬಂದಿಲ್ಲವೆಂದು ಪಾಶ್ಚಾತ್ಯರ ಮತ1 ಅವರ ಅಭಿಪ್ರಾಯವನ್ನು ಇಲ್ಲಿ ಉದ್ಧರಿಸುತ್ತೇನೆ. ಈ ಪುಸ್ತಕದ "ಐತಿಹಾಸಿಕ ಭಾಗವು, ರಾಜಕೀಯ, ಸಾಮಾಜಿಕ, ಧಾರ್ಮಿಕ ಬೆಳವಣಿಗೆಯ ಅಂಶವನ್ನು ಆಧಾರಸಹಿತವಾಗಿ ಒಳಗೊಂಡಿದೆ. ಆದರೆ ವಿಚಿತ್ರದ ಸಂಗತಿಯೆಂದರೆ ವಿಜಯನಗರದ ಸಾಮ್ರಾಜ್ಯದ ಬಗೆಗೆ ಬರೆದ 'ಸೀವೆಲ್ಲ'ರ ಅಥವಾ 'ಫಾದರ್ ಹೆರಾಸ'ರ ಹೆಸರನ್ನೇ ಎತ್ತಿಲ್ಲ. ವರ್ಣಾಶ್ರಮ ಧರ್ಮ, ಬ್ರಾಹ್ಮಣ್ಯಕ್ಕೆ ವಿರೋಧಿಯೆಂದು ತಿಳಿದು ಬಸವಣ್ಣನವರ ಬಗೆಗಾಗಲಿ, ಅವರ ಅನುಯಾಯಿಗಳ ಬಗೆಗಾಗಲಿ ಸಾಕಷ್ಟು ಹೇಳಲಾಗಿಲ್ಲ ; ಕಾರಣವೆಂದರೆ ಹೆಚ್ಚಾಗಿ ಹೇಳುವುದರಿಂದ ಎರಡೂ ಸಮಾಜದಲ್ಲಿ ಪ್ರಕ್ಷುಬ್ಧವಾತಾವರಣವು ಹುಟ್ಟಬಹುದೆಂಬ ಭೀತಿಯಿಂದ. ಆದರೆ ಹೊರಗಿನಿಂದ ನೋಡುವವರಿಗೆ ಬಸವಣ್ಣನವರೂ ಅವರ ಅನುಯಾಯಿಗಳೂ ಮಾಡಿದ ಕಾರ್ಯವು, ಜೈನರ ತರುವಾಯ ಕನ್ನಡ ಸಂಸ್ಕೃತಿ ವರ್ಧನೆಗೆ ಬಹಳ ಪ್ರಭಾವಯುತವಾದುದು" ಎಂದು ತಿಳಿಯುತ್ತದೆ. ಈ ಮಾತಿನ ಅರಿವು ಅವರಿಗೆ ಆಗಿಲ್ಲವೆಂದು ನಮ್ಮ ಅಭಿಪ್ರಾಯವಲ್ಲ. ಆದರೆ ಅದರ ನಿರೂಪಣೆ ಇಲ್ಲವೆಂದು ಈ ಮಾತನ್ನು ಮನದಂದು ಮುಗಳಿಯವರ 'ಸಾಹಿತ್ಯ ಚರಿತ್ರೆ'ಯ ವಿಮರ್ಶೆಯನ್ನು ಮಾಡುವದು ಸೂಕ್ತ. ಆ ಗ್ರಂಥದಲ್ಲಿ ಮಹಾ

1. "The historical section contains an adequate summary of Political, social and religious development and is Well documented, although strangely enough there is no mention either of Sewell or Heras as authors who have written on the Vijayanagar Empire. Not very much said about the virashaiva or Lingayat Faith, which is anticaste and therefore anti Brahmin character, probably wisely, for an incaution expression of openion favouring eitherside is apt to raise a storm. But an outsider may venture to express the view that these deciples of Basavappa have in succession to the Jains, had a most important influence upon Kannada civilization."

Alfred Master,
Bulletin of the School of Oriental and African Studies, University of London
Vol. 12, Page 256, 1947—48

ಕವಿ, ಮಹಾ ಕಾವ್ಯಗಳ ನಿರ್ದೇಶನಕ್ಕೆ ಶಾಸ್ತ್ರೀಯ ವಾದ ಸರಿಯಾದ ಕಾರಣಗಳಿಲ್ಲ. ವಿಷಯದ ನಿರೂಪಣೆಯಲ್ಲಿ ಶಾಸ್ತ್ರೀಯತೆ ಇಲ್ಲದಿರುವದು,ಅಂತೆಯೇ ಓದುಗಳಿಗೆ ಪುಸ್ತಕವು ಸಾ ಹಿ ತ್ಯ ದ ಚರಿತ್ರೆಯಾದರೂ ಅದು ಚರಿತ್ರೆ ಅಲ್ಲವೆಂದು ಭಾಸವಾಗುವದು ; ಕವಿಗಳ ವಿಮರ್ಶೆ ಮಾಡುವಾಗ ಕೆಲಕವಿಗಳ ಬಗೆಗೆ ಬರೆಯುವಾಗ ಬಳಸಿದ ಉಕ್ತಿ ಚಮತ್ಕಾರ ಇಲ್ಲವೇ ಪದಪ್ರಯೋಗಗಳ ಜಾಣ್ಮೆಯಾಗಲಿ ಸರಿಯಾದುದಿಲ್ಲ. ಸಣ್ಣ ಆಧಾರದ ಮೇಲೆ ಅದು ಐತಿಹಾಸಿಕವಲ್ಲದ ಆಧಾರದ ಮೇಲೆ ಸಮಸ್ಯೆಗಳನ್ನು ಬಗೆಹರಿಸಲು ಹೊರಟ ರೀತಿಯು ಜಾಣ್ಮೆಯದ್ದಲ್ಲ. ಕೆಲ ಕವಿಗಳ ಕಾಲ ನಿರ್ಣಯವಾಗದಿದ್ದಾಗ ಅವರ ಕೃತಿ ವಿಮರ್ಶೆ ಅಪ್ರಸ್ತುತವೆನ್ನುವ ಅವರ ರೀತಿ ಸರಿಯಾದುದಲ್ಲ. ಯಾವ ಕವಿಯ ಮೇಲೆ ಎಷ್ಟು ಬರೆಯಬೇಕು. ಎಂತಹ ವಾಕ್ಯಗಳಲ್ಲಿ ಬರೆಯಬೇಕೆಂಬುದರ ತಾರತಮ್ಯದ ಅಭಾವವು ಅಲ್ಲಿ ಹೆಚ್ಚಾಗಿದೆ. ಹೀಗೆಯೇ ದೋಷಗಳ ಪಟ್ಟಿಯನ್ನೇ ಮಾಡುತ್ತ ಕುಳಿತರೆ ಅದೊಂದು ಹೆಬ್ಬೊತ್ತಗೆಯೇ ಆಗಬಹುದು ! ಒಟ್ಟಾರೆ ಅವರು ವಿಮರ್ಶಿಸುವ ಕವಿಗಳು ಪ್ರಥಮತಃ ಕನ್ನಡ ಕವಿಗಳು, ಅವರದು ಕನ್ನಡ ಕುಲ ಎಂಬ ಕಲ್ಪನೆಗೆ ಅಲ್ಲಿ ಎಡೆ ಇಲ್ಲವೆಂದೇ ಹೇಳಬೇಕಾಗಿದೆ. ಶಾಸ್ತ್ರೀಯವಾದ ಪದ್ಧತಿ, ಸಹೃದಯರ ವಿಮರ್ಶೆ ಅಲ್ಲಿ ಕಂಡಬರುವ ಪ್ರಮುಖ ಕೊರತೆ. ಪ್ರೊ.ಆರ್.ಸಿ. ಹಿರೇಮಠರವರೀಈ ಪುಸ್ತಕದ ಬಗೆಗೆ ಬರೆಯುತ್ತಾ, ಪ್ರೊ. ಮುಗಳಿಯವರು ಕಲ್ಪಿಸಿದ ಕುಮಾರವ್ಯಾಸ ಯುಗದ ಕಲ್ಪನೆ ಸಮಂಜಸವಲ್ಲವೆಂಬುದನ್ನು ಸಿದ್ಧಪಡಿಸಬೇಕಾಯ್ತು. ಅವರು ಹೇಳುವಂತೆ "ಮುಗಳಿಯವರು ಕುಮಾರವ್ಯಾಸನ ಕಾಲವನ್ನು ನಿರ್ಣಯಿಸಿರುವದು ಸಣ್ಣದೂ ದುರ್ಬಲವೂ ಆದ ಕಾರಣದಿಂದ ಕೂಡಿದೆ. ಕುಮಾರವ್ಯಾಸನು ಕೆಲವೇ ಕವಿಗಳ ಮೇಲೆ ಛಾಯೆಯನ್ನು ಬೀರಿದ್ದರೂ ಆತನೊಬ್ಬ ದೇಶನಿಷ್ಠ ಶೈಲಿಗೆ ಶ್ರೇಷ್ಠಪ್ರತಿನಿಧಿ ಎಂದು ಕರೆದುದು ಸಮಂಜಸವಲ್ಲ. ಕುಮಾರವ್ಯಾಸ ಚಾಮರಸರ ಕಾವ್ಯದ ಮೇಲೆಯೇ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿದ್ದಾಗ ತಮಗೆ ಸರಿಕಂಡವರ ರೀತಿಯನ್ನು ಒಪ್ಪಿಕೊಳ್ಳುವದು, ಅದುವೇ ಕೊನೆಯ ನಿರ್ಣಯವೆಂದು ತಿಳಿಯುವುದಾಗಲೀ ಸಮಂಜಸವಲ್ಲ-ಚಾಮರಸ—ಕುಮಾರವ್ಯಾಸರಲ್ಲಿ ಕುಮಾರವ್ಯಾಸನೇ ದೊಡ್ಡಕವಿಯೆಂದು ಮುಗಳಿಯವರ ಅಭಿಪ್ರಾಯವಿರಬಹುದು. ಆದರೆ ಚಾಮರಸನೇ ದೊಡ್ಡ ಕವಿಯೆಂಬ ಅಭಿಪ್ರಾಯದವರೂ ಉಂಟು. ವಸ್ತುಸ್ಥಿತಿ ಹೀಗಿರುವಾಗ ಈ ಯುಗವನ್ನು ಕುಮಾರವ್ಯಾಸ ಯುಗವೆಂದು ಕರೆದಿರುವದು ಸರ್ವಸಮ್ಮತವಾದುದಲ್ಲ"[1] ಇಷ್ಟೇ ಅಲ್ಲ ಕುಮಾರವ್ಯಾಸನ ಪ್ರಭಾವವು ಚಾಮರಸ, ಮಗ್ಗೆಯ ಮಾಯಿದೇವ, ಕಲ್ಮಠದ ಪ್ರಭುದೇವ, ತೋಂಟದ ಸಿದ್ಧಲಿಂಗಯತಿ, ನಿಜಗುಣಶಿವಯೋಗಿ,ನಂಜುಂಡಕವಿ, ರತ್ನಾಕರವರ್ಣಿ, ಮುತ್ತು ಷಡಕ್ಷರದೇವ ಇವರ ಮೇಲೆ ಕುಮಾರವ್ಯಾಸನ ಪ್ರಭಾವವು ಯಾವ ರೀತಿಯಲ್ಲಿಯೂ ಆಗಿಲ್ಲವೆಂದು ತೋರಿಸಿಕೊಟ್ಟರು. ಇವರೆಲ್ಲ ಮಹಾಮೇಧಾವಿಗಳು ; ಪ್ರ ಭಾ ವ ಶಾ ಲಿ ಗ ಳು ದೇಶಿಯುಗದ ಕಲ್ಪನೆ ಕುಮಾರವ್ಯಾಸನಿಂದ ಆರಂಭವಾಗಲಿಲ್ಲ. ಅವನ ಪ್ರಭಾವವು ಜೈನರ ಮೇಲೂ ಆಗಲಿಲ್ಲ. ಇಷ್ಟೇ ಅಲ್ಲ ಕುಮಾರವ್ಯಾಸನನ್ನು ಬಣ್ಣಿಸಿರುವ ಕವಿಗಳಲ್ಲಿ ಕುಮಾರ ವಾಲ್ಮೀಕಿ, ಲಕ್ಷ್ಮಕವಿ, ಕೋನಯ್ಯ, ಬಬ್ಬೂರು ರಂಗ ಇವರಲ್ಲಿ ಕುಮಾರ ವಾಲ್ಮೀಕಿಯನ್ನು ಬಿಟ್ಟರೆ ಮಿಕ್ಕವರು ತೀರ ಸಾಮಾನ್ಯರೂ ಇತ್ತೀಚಿನವರೂ

---

* 'ಕುಮಾರ ವ್ಯಾಸಯುಗ?' ಪ್ರೊ. ಆರ್. ಸಿ. ಹಿರೇಮಠ (೧೯೫೪, ಪ್ರಕಾಶಕರು: ಶ್ರೀ ಚೆನ್ನಬಸಪ್ಪ ವಕೀಲ ಮತ್ತು ಸಂಗಡಿಗರು, ಬೆಟದೂರ. ಜಿ: ರಾಯಚೂರು)

ಆಗಿರುವರೆಂದೂ ಪ್ರೊ. ಹಿರೇಮಠರವರು ಅಭಿಪಟ್ಟಿದ್ದಾರೆ [1]. ಅಂದ ಮೇಲೆ ಆ ಪುಸ್ತಕವು ಕುಮಾರವ್ಯಾಸನು ಕನ್ನಡದ ಧ್ವಜವನ್ನು ಎಲ್ಲಿ ಬೇಕಾದರೂ ಒಯ್ದು ಮೆರೆಸಬಲ್ಲನೆಂದು ಹೇಳುವ ಅತಿಶಯೋಕ್ತಿಯ ವಾಣಿಯ ವಿಮರ್ಶಕರ ಗುಂಪಿನ ಪುಸ್ತಕವಲ್ಲದೇ, ಸತ್ಯ, ನಿರ್ದಾಕ್ಷಿಣ್ಯತೆ ಸಹೃದಯದ ಕಡೆಗೆ ಲಕ್ಷ್ಯವಿತ್ತ ಗ್ರಂಥವಾಗಿಲ್ಲವೆಂಬ ಮಾತು ಅರಿವಾಗದಿರದು. ಒಟ್ಟಿನ ಮೇಲೆ ಬಿ. ಎಂ. ಶ್ರೀಯವರ ಮತ್ತು ಮುಗಳಿಯವರ ಪುಸ್ತಕಗಳನ್ನು ನೋಡಿದವರು ಹೀಗೆ ಹೇಳಬಹುದು. ಶ್ರೀಯವರ ಪುಸ್ತಕವು ಅಪೂರ್ಣವಾಗಿದ್ದರೂ ಪ್ರತಿಭೆಯಿಂದ ಕೂಡಿದ್ದು ; ಮುಗಳಿಯವರ ಪುಸ್ತಕ ಅಭ್ಯಾಸದಿಂದ ಬರೆಯ ಹೊರಟ ವಾಚ್ಯಚಿತ್ರ ಇಲ್ಲವೆ ಶಬ್ದಚಮತ್ಕಾರಗಳಿಂದ ಕೂಡಿದ, ಪೂರ್ಣವೆಂದೆನಿಸಿದರೂ ಅಪೂರ್ಣವಾದ ಗ್ರಂಥ. ಮುಗಳಿಯವರು ಕನ್ನಡ ಸಾಹಿತ್ಯವು ವಿಶ್ವಸಾಹಿತ್ಯಕ್ಕೆ ಏನಾದರೂ ಕೊಟ್ಟ ಕೊಡಿದೆಯೇ ಎಂದು ಕೇಳುವವರಿಗೆ 'ಹೌದು' ಎಂದು ಉತ್ತರ ಹೇಳುವ ರೀತಿ ಮನಾಕರ್ಷಕ, ಆದರೆ ಚಿತ್ತವೇಧಕ (convincing) ಇಲ್ಲವೆಂದು ಹೇಳಬಹುದು.

iii) ಇತ್ತೀಚೆಗೆ 'ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು' ಎಂಬ ಹೆಸರಿನಲ್ಲಿ ದಿ. ಪ್ರೊ. ಟಿ. ಎಸ್. ವೆಂಕಣ್ಣಯ್ಯನವರ ಚಿಕ್ಕ ಪುಸ್ತಕವೊಂದು ಪ್ರಕಟವಾಗಿದೆ [2]. ಅದರಲ್ಲಿ 'ಸಾಹಿತ್ಯ ಚರಿತ್ರೆ' ಎನ್ನುವ ಶಿರೋನಾಮೆಯಲ್ಲಿ ಮೂರು ಲೇಖನಗಳಿವೆ. (೧) ಕನ್ನಡ ಸಾಹಿತ್ಯ ಚರಿತ್ರೆ (ಪ್ರಾಚೀನ ಕಾಲದ್ದು), (೨) ಹತ್ತನೆಯ ಶತಮಾನದ್ದು. (೩) ಹನ್ನೆರಡು ಹದಿಮೂರನೆಯ ಶತಮಾನದ್ದು. ಇತರ ಲೇಖನಗಳು ಕೃತಿ ವಿಮರ್ಶೆ ಕುರಿತಾದವು. ಇದರಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ಪ್ರಾಚೀನತೆಯನ್ನು ಕುರಿತು ಹೇಳಬಹುದಾದ ಅಂಶಗಳೆಲ್ಲವೂ ದಿ. ನರಸಿಂಹಾಚಾರ್ಯರ, ಇ. ಪಿ. ರೈಸರ, ಇಲ್ಲವೇ ಶ್ರೀಮಾನ್ ಮಂಜೇಶ್ವರದ ಗೋವಿಂದ ಪೈಗಳ ಗ್ರಂಥಗಳಲ್ಲಿ ಮತ್ತು ಇತರತ್ರದೊರೆಯುತ್ತಿವೆ [3]. ಪ್ರೊ. ವೆಂಕಣಯ್ಯನವರು ತಮಗೆ ದೊರೆತ ಆಧಾರಗಳನ್ನು ಪರ್ಯಾಲೋಚಿಸಿ, '೯ನೆಯ ಶತಮಾನಕ್ಕೆ ಬಹುಕಾಲ ಪೂರ್ವದಿಂದಲೂ–ಎಂದರೆ ನಾಲ್ಕೈದು ಶತಮಾನಗಳ ಹಿಂದಿನಿಂದಲಾದರೂ ಕನ್ನಡದಲ್ಲಿ ಗ್ರಂಥರಚನೆಯಾಗುತ್ತಿದ್ದಿರಬೇಕೆಂದು ತೋರಿಬಾರದೆ ಇರದು. ಆ ರೀತಿಯಾಗಿ ಬೆಳೆದ ಸಾಹಿತ್ಯರಾಶಿಯು ಮಹ

---

1. ಅದೇ ಪುಸ್ತಕ. ಪುಟ ೧೦.
2. ಇಲ್ಲಿಯ ಅಭಿಪ್ರಾಯಗಳು 'ಪ್ರಬುದ್ಧ ಕರ್ನಾಟಕದಲ್ಲಿ ಲೇಖನ ರೂಪಗಳಲ್ಲಿ ತೀರಹಿಂದೆಯೇ ಪ್ರಕಟವಾಗಿವೆ.
3. (i) ಕರ್ನಾಟಕ ಕವಿಚರಿತೆ ಭಾಗ ೧.
   (ii) (History of) Kanarese Literature by E. P. Rice, (1921, The Heritage of India Series) Page 25-29.
   (iii) "ಮೂರು ಉಪನ್ಯಾಸಗಳು" — ಗೋವಿಂದಪೈ (೧೯೪೦, ಕನ್ನಡ ರಿಸರ್ಚ ಆಫೀಸ, ಧಾರವಾಡ) ಪುಟ, ೧೦೧-೧೩೪.
   (iv) 'ಕನ್ನಡ ಸಾಹಿತ್ಯ'— ಕೆ. ವೆಂಕಟರಾಮಪ್ಪ (೧೯೫೦, ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ. 3 ನೆಯ ಮುದ್ರಣ ಪುಟ, ೧-೭.
   (v) ಕನ್ನಡ ಸಾಹಿತ್ಯ ಚರಿತ್ರೆ—ರಂ. ಶ್ರೀ. ಮುಗಳಿ.

ತ್ತರವಾಗಿಯೇ ಇದ್ದಿರಬೇಕು'[1] ಎಂದು ಊಹಿಸಿದ್ದಾರೆ. ನರಸಿಂಹಾಚಾರ್ಯರು, ರೈಸರೂ ಕನ್ನಡಕ್ಕೆ ಜೈನರೇ ಆದಿಪುರುಷರು, ಕನ್ನಡ ಸಾಹಿತ್ಯ ಬರೆದು ಬೆಳೆಯಿಸಿದವರು ಎಂದು ಹೇಳುವ ಮಾತನ್ನು ಬದಲಾವಣೆ ಮಾಡುತ್ತ, ವೀರಶೈವವು ೧೧ನೆಯ ಶತಮಾನಕ್ಕೆ ಮೊದಲು ಕನ್ನಡನಾಡಿನಲ್ಲಿ ಹಬ್ಬಿತ್ತೆಂಬುದಕ್ಕೆ ಆಧಾರಗಳಾವುವೂ ಕಂಡು ಬಂದಿಲ್ಲವಾದುದರಿಂದ, ವೈದಿಕ ಮತವು ಪುರಾತನ ಕಾಲದಿಂದಲೂ ಇದ್ದುದರಿಂದ ಕನ್ನಡ ಗ್ರಂಥಗಳು ದೊರೆಯುವ ಕಾಲದಿಂದ ಪ್ರತಿಯೊಂದು ಶತಮಾನದಲ್ಲಿಯೂ ಬ್ರಾಹ್ಮಣ ಕವಿಗಳು ಗ್ರಂಥ ರಚನೆ ಮಾಡಿರುವದರಿಂದ ಪ್ರಾಚೀನಕಾಲದಲ್ಲಿಯೂ ಅವರು ಗ್ರಂಥರಚನೆ ಮಾಡಿರಬೇಕು ಎಂದು ಊಹಿಸುವದು ನ್ಯಾಯವಾಗಿ ಕಾಣುತ್ತದೆ. ಅಂತಹ ಗ್ರಂಥಗಳಲ್ಲಿ ವೈದಿಕ-ಪದ್ಧತಿಯ ಭಾರತ ರಾಮಾಯಣಗಳಿರಬೇಕು. ಕವಿರಾಜಮಾರ್ಗದಲ್ಲಿಯೇ ರಾಮಾಯಣದ ಪದ್ಯಗಳಿವೆ. ಕವಿರಾಜಮಾರ್ಗದಲ್ಲುಕ್ತರಾದ ಕೆಲವರಾದರೂ ವೈದಿಕರಾಗಿರಬೇಕು. ಇದೇ ರೀತಿ ಬೌದ್ಧರೂ ಕನ್ನಡದಲ್ಲಿ ಕಾವ್ಯ ರಚಿಸಿರಬೇಕು. ಯಾಕೆಂದರೆ ಬೌದ್ಧಮತವು ಕನ್ನಡ ನಾಡಿಗೆ ಪ್ರಾಚೀನ ಕಾಲದಲ್ಲಿಯೇ ಅಂದರೆ ಅಶೋಕನ ಕಾಲದಲ್ಲಿಯೇ ಇತ್ತು. ಶಾತವಾಹನರು ಬೌದ್ಧಮತಾವಲಂಬಿಗಳಾಗಿದ್ದರು; ಅಲ್ಲದೆ ಬೌದ್ಧಮತವು ಕನ್ನಡ ನಾಡಿನಲ್ಲಿ ೬-೭ ಶತಮಾನದ ವರೆಗೆ ಪ್ರಾಬಲ್ಯಸ್ಥಿತಿಯಲ್ಲಿತ್ತು. ಉತ್ತರದಿಂದ ಬಂದ ಬೌದ್ಧಮತದವರು ದೇಶಭಾಷಾಪ್ರೇಮಿಗಳಾದುದರಿಂದ ಕನ್ನಡದಲ್ಲಿ ರಚಿಸಬೇಕು. ತಮಿಳು ದೇಶದಲ್ಲಿ ಪ್ರಾಚೀನ ಕಾಲದಲ್ಲೇ ಬೌದ್ಧ ಸಾಹಿತ್ಯವಿದೆ. ಮತದ್ವೇಷದ ಕಾರಣದಿಂದ ಇಲ್ಲಿ ಬೌದ್ಧರ ಸಾಹಿತ್ಯ ನಿರ್ನಾಮವಾಗಿರಬೇಕು. ಕುಮಾರಿಲಭಟ್ಟನಂತೂ ಬೌದ್ಧಮತವಿನಾಶಕ್ಕೆ ಕಾರಣನೆಂಬುದು ವಿದಿತ. ಅವನು ಜೈನಮತಕ್ಕೂ ವಿರೋಧಿ ಎಂದು ತಿಳಿದು ಬರುತ್ತದೆ. 'ನಾಗಾರ್ಜುನ' ಮೊದಲಾದ ಕವಿರಾಜಮಾರ್ಗದಲ್ಲಿ ಉಕ್ತರಾದ ಕೆಲವರಾದರೂ ಬೌದ್ಧರಾಗಿರಬೇಕು. ಅಂದಮೇಲೆ ಬೌದ್ಧರೇ ಕನ್ನಡಭಾಷೆಗೆ ಆದಿ ಪುರುಷರೆಂಬ ಊಹೆ ಸಪ್ರಮಾಣವಲ್ಲದಿದ್ದರೂ, ಪ್ರಬಲವಾದ ಆಧಾರಗಳು ದೊರೆಯುದವರೆಗೆ ವೆಂಕಣ್ಣಯ್ಯನವರ ವಾದವು ಊಹೆಯು ಎಂದು ಮಾತ್ರ ಇರಿಸಿಕೊಂಡರೆ ಒಳ್ಳೆಯದು. ಆದರೆ ಇಲ್ಲಿ ಜೈನರಿಗಿಂತ ಪೂರ್ವದಲ್ಲಿ ವೈದಿಕ ಮತ್ತು ಬೌದ್ಧರ ಸಾಹಿತ್ಯ ಇರಬೇಕೆಂಬ ಊಹೆ ಮೆಚ್ಚತಕ್ಕದೆಂದೇ ಹೇಳಬೇಕು.

ಹತ್ತನೆಯ ಶತಮಾನದ ಕರ್ಣಾಟಕ ಸಾಹಿತ್ಯ ಚರಿತ್ರೆಯ ವಿಷಯವನ್ನು ಕುರಿತು ಬರೆಯುವಾಗ ವೆಂಕಣ್ಣಯ್ಯನವರು ಸಾಹಿತ್ಯದ ಔನ್ನತ್ಯಕ್ಕೆ ರಾಷ್ಟ್ರದ (ನಾಡಿನ) ಔನ್ನತ್ಯವೂ ಅವನತಿಗೆ ಅವನತಿಯೂ, ರಾಜಕೀಯ, ಸಾಮಾಜಿಕ, ಧಾರ್ಮಿಕ ಇತಿಹಾಸವು ಹತ್ತನೆಯ ಶತಮಾನದ ಕನ್ನಡಸಾಹಿತ್ಯದಲ್ಲಿ ನಿರೂಪಿತವಾಗಿದೆಯೆಂದೂ, ಹತ್ತನೆಯ ಶತಮಾನದಲ್ಲಿ ವರ್ಣಾಶ್ರಮದ ಕಟ್ಟಿಗೆ ಸಿಲುಕಿ ಬೇಸತ್ತು ಕೆಲವರು ವೈದಿಕರು ಜೈನರಾದರೆಂದೂ, ಜೈನಧರ್ಮದ ಪ್ರಾಬಲ್ಯವು ಆಕಾಲದಲ್ಲಿದ್ದುದರಿಂದಲೇ ಜೈನರ ಪುರಾಣಗಳು, ಜೈನಕವಿಗಳಿಗೆ, ಜೈನರಿಗೆ ಪರಮತದವರಮೇಲೆ ದ್ವೇಷವಿಲ್ಲವೆಂಬುದನ್ನು ತೋರಿಸುವಂತೆಜೈನಕವಿಗಳು ಲೌಕಿಕಕಾವ್ಯ ಬರೆದ ಪರಂಪರೆಯು ಬೆಳೆದುಬಂದಿತೆಂದೂ ಹೇಳಿದ್ದಾರೆ. ಪಂಪನ 'ವಿಕ್ರಮಾರ್ಜುನವಿಜಯ', ಪೊನ್ನನ 'ಭುವನೈಕರಾಮಾಭ್ಯುದಯ', ರನ್ನನ 'ಸಾಹಸ-ಭೀಮವಿಜಯ"[2] ಗಳು ತಮ್ಮ ದೊರೆಗಳು ವೈರಿಗ

1. ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು. (೧೯೫೮, ತ. ವೆಂ. ಸ್ಮಾರಕ ಗ್ರಂಥಮಾಲೆ ಮೈಸೂರು, (ಪುಟ ೮)
2. 'ಜಗನ್ನಾಥವಿಜಯ' 'ವೃಷಭೇಂದ್ರ ವಿಜಯ'ಗಳು ಪಂಪನ ಕವಿತಾಮಾರ್ಗದವೆನ್ನಬಹುದೇ?

ಳನ್ನು ಗೆಲ್ದು ಹೇಗೆ ಭಟರಾಗಿ ಬಾಳಿ, "ಅಭ್ಯುದಯ
"ವಿಜಯ" ವನ್ನು ಸ್ಥಾಪಿಸಿದರೆಂಬುದನ್ನು, ಕ್ಷಾತ್ರ
ವು ನೆಲೆಗೊಂಡು ಬೇಕಾದಸ್ಥಿತಿಯನ್ನು ತೋರಿಸುವ
ಕಾಲವು ಹತ್ತನೆಯ ಶತಮಾನವೆಂದೂ ತೋರಿ
ಸುತ್ತ ಪೊನ್ನ ರನ್ನರು 'ಕವಿಚಕ್ರವರ್ತಿ' ಬಿರುದು
ಪಡೆದು ಪಂಪನಿಗೆ ಆಭಾಗ್ಯ ದೊರೆಯದಿದ್ದುದು
ಪಂಪನ ದೊರೆ ಚಕ್ರವರ್ತಿಯಾಗಿದ್ದಿಲ್ಲವೆಂಬುದನ್ನು
ಸೂಚಿಸುತ್ತವೆ. ಅದೇ ರನ್ನ ಪೊನ್ನರಿಗೆ ಆಶ್ರಯ
ಕೊಟ್ಟ ದೊರೆಗಳು ಚಕ್ರವರ್ತಿಗಳು. ಅವರ
ಆಶ್ರಯ ಪಡೆದ ಕವಿಗಳೂ ಕವಿಚಕ್ರವರ್ತಿಗಳು.
ಪಂಪನು ಸಹಜವಾಗಿಯೇ ಕವಿಚಕ್ರವರ್ತಿ. ಈ
ಜೈನಕವಿಗಳು ಲೌಕಿಕಕಾವ್ಯವನ್ನು ಬರೆಯುವಲ್ಲಿ
ಆ ಕವಿಗಳ ಪೋಷಕರಾದ ರಾಜರು ವೈದಿಕಮತಾ
ವಲಂಬಿಗಳಾಗಿದ್ದುದೇ ಕಾರಣವೆಂದು ಹೇಳಿದುದೇ
ಸಮಂಜಸವಾದ ಕಾರಣವೆನ್ನಿಸುತ್ತದೆ. ಆದರೆ
ದಿ. ವೆಂಕಣ್ಣಯ್ಯನವರು ಊಹಿಸುವಂತೆ ಆ ಕಾಲ
ದ ಜೈನರು ಪರಮತದ್ವೇಷಿಯಾಗಿರಲಿಲ್ಲವೆಂಬುದಕ್ಕೆ
ಆ ರಾಜರು ವೈದಿಕರಾದುದೇ ಕಾರಣವೆಂದು
ಊಹಿಸಿದರೂ ಅವರು ಬರೆದ ಲೌಕಿಕಕಾವ್ಯಗಳು
ವೈದಿಕರು ಧರ್ಮಗ್ರಂಥಗಳಲ್ಲವೆಂಬುದೂಜೈನಗ್ರಂಥ
ಗಳೆಂಬುದೂ ಲಕ್ಷಿಸತಕ್ಕ ಮಾತು. ಆದರೆ ಪ್ರಸಂಗ
ಸಿಕ್ಕಾಗೆಲ್ಲಾ ಈಕವಿಗಳು ಬ್ರಾಹ್ಮಣರ ನಿಂದೆ
ಯನ್ನು ಮಾಡುತ್ತಿದ್ದುದ್ದಕ್ಕೆ ಉದಾಹರಣೆಗಳೂಇವೆ.
ಪಂಪಕವಿಯು ತನ್ನ ಭಾರತವು 'ಲೋಕಪೂಜ್ಯ'
ವೆಂದೂ, ಆ ಲೋಕಪೂಜ್ಯತೆ ಬಂದುದು
ದುರ್ಯೋಧನಾದಿಗಳಿಂದಲೂ ಎಂದೂ ಹೇಳಿದ
ವನು ಅಲ್ಲಿ ಶ್ರೀಕೃಷ್ಣನ ಪ್ರಸ್ತಾಪವನ್ನೇ ಎತ್ತಿಲ್ಲ.[1]
ಗದಾಯುದ್ಧದಲ್ಲಿಯೂ ಅವನಿಗೆ ಮಹತ್ವದ ಸ್ಥಾನ
ವಿಲ್ಲವೆಂಬುವುದು ಲಕ್ಷಿಸತಕ್ಕಮಾತುಗಳು. ಇಲ್ಲಿ
ದೊರೆಯುವ ಮಾತೆಂದರೆ ಸಾಹಿತ್ಯಚರಿತ್ರೆಯಲ್ಲಿ
ಒಬ್ಬ ಕವಿಯ ಕೃತಿಯನ್ನು ವಿವರಿಸುವಾಗ, ಆ
ಕವಿಯ ಭಾವನೆಯನ್ನು ಅರಿಯವಾಗ ಆಕಾಲದ
ರಾಜಕೀಯ, ಧಾರ್ಮಿಕ, ಸಾಮಾಜಿಕ ಹಿನ್ನೆಲೆ
ಯನ್ನು ಅರಿಯದೇ ಇರುವದು ಅಷ್ಟು ಹಿತಕಾರಿಯ
ಲ್ಲವೆಂದು ಹೇಳಿದಂತಾಗುತ್ತದೆ. ಇದು ಲಕ್ಷಿಸ
ತಕ್ಕ ಮಾತಾಗಿದೆ.

೧೨–೧೩ನೆಯ ಶತಮಾನಗಳ ಕನ್ನಡ
ಸಾಹಿತ್ಯ ಚರಿತ್ರೆಯನ್ನು ಕುರಿತು ಬರೆಯುತ್ತಾ ಈ
ಶತಮಾನಗಳಲ್ಲಿ ಕರ್ನಾಟಕದ ಜನಸಮುದಾಯ
ದ ಸ್ಥಿತಿಯಲ್ಲಿ, ಜನರ ಭಾಷೆಯಲ್ಲಿ ಜನರ ದೃಷ್ಟಿ
ಯಲ್ಲಿ ಎಲ್ಲವಿಧದಿಂದಲೂ ಬದಲಾವಣೆಗಳಾದು
ದಕ್ಕೆ ಸಾಹಿತ್ಯದಲ್ಲಿ ನಿದರ್ಶನಗಳಿವೆ. ೧೨ನೆಯ
ಶತಮಾನದ ಆದಿಭಾಗದಲ್ಲಿ ರಾಮಾನುಜರು,
ಮಧ್ಯಭಾಗದಲ್ಲಿ ಬಸವಣ್ಣನವರು, ಕೊನೆಯ
ಭಾಗದಲ್ಲಿ ಮಧ್ವರು ಅವತರಿಸಿ ಸಮಾಜಸುಧಾ
ರಣೆ, ಧರ್ಮದ ಜಾಗ್ರತಿ ಕೈಕೊಂಡರು. ಮಹ
ಮ್ಮದೀಯರ ದಾಳಿಗಳು ಉತ್ತರದಿಂದ ಪ್ರಾರಂಭ
ವಾದುವು. ರಾಜಕೀಯದಲ್ಲಿ ಕಲ್ಯಾಣದ ಚಾಲು
ಕ್ಯರ ರಾಜ್ಯವು ಕಾಲಚೂರ್ಯರಿಗೆ ಹೋಗಿತ್ತು.
ಗಂಗರು ಪಲ್ಲವರಿಂದ ರಾಜ್ಯ ಕಳೆದುಕೊಂಡಿದ್ದರು.
ಹೊಯ್ಸಳರು ಪ್ರಬಲರಾಗುತ್ತಿದ್ದರು. ವೈದಿಕ
ಧರ್ಮದಲ್ಲಿಯೂ ಆಸಕ್ತಿ ಜನರಿಗೆ ಕಡಿಮೆಯಾ
ಗಿತ್ತು. ಬಸವೇಶ್ವರನು ಕರ್ಮಕಾಂಡವನ್ನು ಕಡೆ

---

1. (i) ಈಯಲಿಱಿಯಲ್ ಶರಣ್ಬುಗೆ
ಕಾಯಲ್ ಕ್ಷತ್ರಿಯರೆ ಬಲ್ಲರಾ ಬ್ರಹ್ಮಣ್ಯರ್
ಭೋಯೆನಲುಂ ಬಲ್ಲರ್ ಕೊಲೆ
ಧೋಯೆನಲುಂ ಬಲ್ಲರಿಱಿಯಲವರೆತ್ತಱಿವರ್ (ಗದಾಯುದ್ಧ ಸಂಗ್ರಹಂ, 3-3 )

(ii) ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ
ಬಲದೊಳ್ ಮದ್ರೇಶನತ್ಯುನ್ನತಿಯೊಳ್ ಅಮರ ಸಿಂಧೂದ್ಭವಂ ಚಾಪವಿದ್ಯಾ
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ
ರ್ಮಲಚಿತ್ತಂ ಧರ್ಮಪುತ್ರ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ. (ವಿ. ವಿ. ೧೪-೬೪.)

ಗೆಣಿಸಿ ಜಾತಿಯಲ್ಲಿ ಹೀನನಾದಮಾತ್ರಕ್ಕೆ ನೀತಿಯಲ್ಲಿ ಹೀನನಾಗಿರಬೇಕೆಂಬ, ಅಥವಾ ಉತ್ತಮನಾದ ದೈವಭಕ್ತನಾಗಬಾರದೆಂಬ ನಿಯಮವಾವುದೂ ಇಲ್ಲವೆಂದು ಬಸವಣ್ಣನವರು ಸಾರಿದರು. ಅದರಿಂದ ರಾಮಾನುಜ ಮತ್ತು ಬಸವಣ್ಣನವರ ಮತಗಳು ಪ್ರಚಾರದಲ್ಲಿ ಬಂದವು. ಸ್ವತಂತ್ರ ವಿಚಾರಕ್ಕೆ ಆಸ್ಪದದೊರೆಯಿತು. ಹಿಂದಿನಂತೆ ಕೆಲವರು ಜೈನಕವಿಗಳು ಪುರಾಣ ರಚಿಸಿ, ಜೈನ ಧರ್ಮಬೋಧಿಸಿದರೆ ನಯಸೇನ, ಬ್ರಹ್ಮಶಿವ ವೃತ್ತವಿಲಾಸ ಆಂಡಯ್ಯಾದಿಗಳು ಶೈವ ವೈಷ್ಣವ ಬ್ರಾಹ್ಮಣರನ್ನು ಖಂಡಿಸುತ್ತ,ವೀರಶೈವರು ಜೈನ ವೈಷ್ಣವ ಮತಗಳನ್ನು ಖಂಡಿಸುತ್ತಾ ಸಾಹಿತ್ಯ ರಚಿಸತೊಡಗಿದರು. ಜೈನಪುರಾಣಗಳಂತೆ ಶೈವ ವೈಷ್ಣವ ಪುರಾಣಗಳೂ ರಚಿತವಾದುವು. ವೀರರಸಕ್ಕಿಂತ ಭಕ್ತಿಶೃಂಗಾರಗಳು ಪ್ರಧಾನವಾದುವು. ಅವುಗಳನ್ನು ಸೂಚಿಸುವಂತೆಯೇ ಲೀಲಾವತಿ, ಕುಸುಮಾವಳಿ, ಶೃಂಗಾರಸಾರ ಎಂಬಕೃತಿಗಳ ಹೆಸರುಗಳೇ ಅದಕ್ಕೆ ಸಾಕ್ಷಿ. ಈ ಮಾತು ೧೩ನೆಯಶತಮಾನದ ಕವಿಗಳಿಗೆ ಮೀಸಲೆನ್ನಬಹುದು. ಜೈನರಲ್ಲಿ ಬ್ರಾಹ್ಮಣಮತ ಖಂಡನೆ ಮಾಡಿದವರಲ್ಲಿ ನಯಸೇನ, ಬ್ರಹ್ಮಶಿವ, ವೃತ್ತವಿಲಾಸ ಮತ್ತು ಆಂಡಯ್ಯ. ಈ ಮೂವರಲ್ಲಿ ಜೈನಮತ ಬೋಧೆ ಒಂದೊಂದು ತೆರನಾಗಿದೆ. ನಯಸೇನನು ಬ್ರಾಹ್ಮಣರ ದುರಾಸೆಯನ್ನು ತೋರಿಸುತ್ತ ಹಾಸ್ಯಮಯ ಶೈಲಿಯಲ್ಲಿ ಕಥೆ ಹೇಳುತ್ತಾ ಜೈನಮುನಿಗಳ ಹಿರಿಮೆ ತೋರಿಸಿದರೆ ಬ್ರಹ್ಮಶಿವನು ಬ್ರಾಹ್ಮಣರ ಶಾಸ್ತ್ರಾಚರಣೆಗಳ ದೋಷವನ್ನು ಎತ್ತಿ ತೋರಿಸುತ್ತ ತನ್ನ ಧರ್ಮದ ಮೇಲ್ಮೆ ತೋರಿಸಿದ್ದಾನೆ. ವೃತ್ತವಿಲಾಸನು ವೈದಿಕಮತಾವಲಂಬಿಗಳು ಪ್ರತ್ಯಕ್ಷ ಪ್ರಮಾಣವನ್ನು ನಂಬದೆ ಆಪ್ತವಾಕ್ಯದಲ್ಲಿಯೇ ನಂಬಿಗೆಯುಳ್ಳವರೆಂದೂ ಕಥೆ ರಚಿಸಿ ತೋರಿಸುತ್ತಾನೆ. ಈ ಕವಿಯಮಾರ್ಗ, ಕಥೆಯ ರೀತಿಗಳು ಸ್ತೋತ್ರಾರ್ಹವೆಂದು ಹೇಳಬಹುದು. ಆಂಡಯ್ಯನು (1235 A. D) ಅನ್ಯಮತ ಅವಹೇಳನ ಮಾಡದಿದ್ದರೂ ಜಾಣ್ಮೆಯಿಂದ ಶಿವನೂ ಕಾಮನಿಗೆ ಅರೆವೆಣ್ಣಾದರೆ ಜೈನ ಸವಣನು ಕಾಮನನ್ನು ದಹಿಸಬಲ್ಲವನೆಂದು ಹೇಳಿ ಜೈನಮುನಿಗಳ ಮಹತಿಯನ್ನು ತೋರಿಸಿದ್ದಾನೆ. ಈ ಕಾಲದಲ್ಲಿ ಜೈನ ವೀರಶೈವ ಕವಿಗಳೂ ಬ್ರಾಹ್ಮಣ ಧರ್ಮದ ಕಡುಟೀಕೆ ಪ್ರಾರಂಭಿಸಿವೆ.[1] ಅದಕ್ಕೆ ವೈದಿಕಧರ್ಮದಲ್ಲಿ ಹೊಸಜನರು ಸೇರದೇ ಇದ್ದುದೇ ಕಾರಣ. ಈ ಶತಮಾನಗಳಲ್ಲಿ ಧರ್ಮಸ್ವಾತಂತ್ರ್ಯ, ವ್ಯಕ್ತಿಸ್ವಾತಂತ್ರ್ಯಗಳಂತೆ ಎಲ್ಲಂದದಿಂದ ಮುಂದುವರಿಯಬೇಕು. ಸಾಂಪ್ರದಾಯ ಜಡರಾಗಬಾರದೆಂಬ ಭಾವನೆ ಪ್ರಚುರಗೊಂಡಿದೆ. ಆ ವಿಚಾರಗಳೆಲ್ಲವೂ ಅಂದಿನ ಸಾಹಿತ್ಯದಲ್ಲಿ ರೂಪಿತಗೊಂಡಿವೆ. ಅದರಿಂದಲೇ ಸಾಹಿತ್ಯವು ಸಮಾಜದ ಕನ್ನಡಿ. ನಯಸೇನನು ಕನ್ನಡದಲ್ಲಿ ಹೊಸತನವಿದ್ದು ಸಂಸ್ಕೃತದ ಪದಗಳ ಅತಿರೇಕ ಬೇಡವೆಂದು ಹೇಳಿ ನವೀನ ವಿಚಾರವನ್ನು ಮುಂದಿಟ್ಟನು ; ಅಲಂಕಾರ ಪ್ರೌಢಿಮೆಯನ್ನು ಮಿತಿಮೀರಿಸುವದು ದುಷ್ಪದ್ಧತಿಯನ್ನು ಜನ್ನನು ಹೀಯಾಳಿಸಿದನು ; ರಳಕುಳಕ್ಷಳಗಳ ಭೇದವು ನಿಷ್ಪ್ರಯೋಜಕವೆಂದೂ (ಸತ್ತವರ, ಮಾನವರ ಮೇಲೆ ಚರಿತ್ರೆ ಬರೆಯುವದು ಯುಕ್ತವಲ್ಲವೆಂದು) ಹರಿಹರ ಕವಿಯು ಸಾರಿದನು. ಆಂಡಯ್ಯನು ಸಂಸ್ಕೃತದ ಗೊಡವೆಗೆ ಹೋಗದೇ ಜನರಾಡುವ ಮಾತಿನಲ್ಲಿಯೇ ಬರೆಯುವೆನೆಂದು ಶಪಥಮಾಡಿದನು ; ಅವನ ಭಾಷಾಭಿಮಾನ ಉಜ್ವಲವಾದುದು. ಅವನು ಸಂಸ್ಕೃತಪದ ಬಳಸದೆಯೇ ಕಿವಿಗಿಂಪಾಗುವಂತೆ ಕಾವ್ಯರಚಿಸಿದನು. ಬಸವೇಶ್ವರಾದಿಗಳು

---

1. ಅವರ ಆ ಕಡುಟೀಕೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಅಂದಿನ ಸಾಮಾಜಿಕ ಸ್ಥಿತಿ, ಅವರ ವಿರೋಧಿಗಳ ಅಭಿಪ್ರಾಯುಗಳನ್ನೂ ತಿಳಿದುಕೊಳ್ಳುವುದು ಅತಿಸೂಕ್ತ.

ನವೀನ ರೂಪವಾದ ವಚನ ಸಾಹಿತ್ಯವೆಂಬ ನವೀನ ರೂಪವನ್ನೇ ಆರಂಭಿಸಿದರು. ರಾಘವಾಂಕ-ಹರಿಹರಾದಿಗಳು ಹೊಸರೀತಿಯ ಕಾವ್ಯಗಳನ್ನೇ ಆರಂಭಮಾಡಿದರು. ಹೀಗೆ ಹಲವಾರಂದಿಂದ ನವೀನತೆಯನ್ನು ಈ ಶತಮಾನಗಳ ಸಾಹಿತ್ಯ ಚರಿತ್ರೆ ತೋರಿಸುತ್ತದೆ ಎಂಬ ಅಭಿಪ್ರಾಯ ಸೂಚಿಸಿದ್ದರು [1].

ಸ್ವಾತಂತ್ರ್ಯ ಪೂರ್ವದಲ್ಲಿಯೇ ಮೈಸೂರು ವಿಶ್ವವಿದ್ಯಾನಿಲಯದವರ 'ಕನ್ನಡ ಸಾಹಿತ್ಯ ಚರಿತ್ರೆ'[2] ಎಂಬ ಪ್ರಚಾರ ಪುಸ್ತಕವೊಂದು ಪ್ರಕಟವಾಗಿದೆ. ಅಲ್ಲಿಯ ಸಾಹಿತ್ಯ ಚರಿತ್ರೆಯು ಆರಂಭಕಾಲವೆಂದೂ, ಪಂಪಯುಗವೆಂದೂ, ಸ್ವತಂತ್ರಯುಗವೆಂದೂ, ಚಿಕ್ಕದೇವರಾಯನ ಕಾಲದ ಸಾಹಿತ್ಯವೆಂದೂ ಸಂಧಿಕಾಲವೆಂದೂ ವಿಭಜನೆಗೊಂಡಿದೆ. ಜೈನ ವೀರಶೈವ ಬ್ರಾಹ್ಮಣ ಯುಗಗಳೆಂಬ ವಿಭಜನೆಯಿಲ್ಲ. ವಿಷಯ ನಿರೂಪಣೆಯಲ್ಲಿ ಹೊಸತನವು ಇನ್ನಾವ ರೀತಿಯಲ್ಲಿಯೂ ಅಲ್ಲಿ ಕಾಣದೇ ಸಂಕ್ಷಿಪ್ತವಾಗಿ ಒಂದೊಂದು ಶತಮಾನದಲ್ಲಿ ಆಗಿಹೋದವರ ಕೃತಿ ವಿಮರ್ಶೆ ಇದೆ. ಅಲ್ಲಲ್ಲಿ ಕವಿಗಳ ಮೇಲೆ ಬಂದ ವಿಮರ್ಶೆಯಲ್ಲಿ ತೂಕ ತಪ್ಪಿದ ರೀತಿಯೂ ಕಂಡುಬರುತ್ತದೆ.ಉದಾಹರಣೆಗೆ ಪಂಪನ ಮೇಲೆ ಏಳುಪುಟವಿದ್ದರೆ ಅದೇ ಹರಿಹರನಿಗೆ ಒಂದು ಪ್ಯಾರಾ ಮಾತ್ರ ಇದೆ. ಇನ್ನೊಂದು ಪುಸ್ತಕ ಸಾಹಿತ್ಯ ಚರಿತ್ರೆಯನ್ನೇ ಕುರಿತಾದುದು ; ಆದರೆ ವಿಸ್ತಾರವಾಗಲ್ಲ ಅದು ಪ್ರೊ. ಮಾಳವಾಡರ 'ಕನ್ನಡ ಸಾಹಿತ್ಯ ಸಂಸ್ಕೃತಿ ದರ್ಶನ'[3]. ಹೆಸರೇ ಸೂಚಿಸುವಂತೆ ಕನ್ನಡ ಸಾಹಿತ್ಯದ ಪ್ರಮುಖ ಒಲವುವೈಶಿಷ್ಟ್ಯಗಳನ್ನು (ಕೆಲವೊಂದು ಶತಮಾನದ) ಎತ್ತಿತೋರಿಸುತ್ತದೆ. ಕವಿಚರಿತೆಗಳೇ ಇದಕ್ಕೂ ಆಧಾರವೆಂದು ಹೇಳಬಹುದು.

ಈ ಪುಸ್ತಕವು ಸಾಮಾನ್ಯವಾಚಕರಿಗೂ ವಿಶೇಷತಃ ಕನ್ನಡ ವ್ಯಾಸಂಗದ ವಿದ್ಯಾರ್ಥಿಗಳಿಗೂ ಉಪಯುಕ್ತವಾಗಿದೆ. ಈ ಗ್ರಂಥವು ವಿಷಯಗಳ ನಿರೂಪಣೆ, ಅಭಿಪ್ರಾಯಗಳ ದೃಷ್ಟಿಯಿಂದ ಇಂದು ಅಷ್ಟೊಂದು ಮಹತ್ವದ್ದೆಂದೆನಿಸದಿದ್ದರೂ ಸುಮಾರು ಇಪ್ಪತ್ತುನಾಲ್ಕು ವರ್ಷಗಳ ಹಿಂದೆ ಬರೆದುದಾದ್ದರಿಂದ ಮಹತ್ವದ್ದೆನಿಸುತ್ತದೆ. ಈ ಗ್ರಂಥದಲ್ಲಿ 'ಕನ್ನಡ ಸಾಹಿತ್ಯ ಚರಿತ್ರೆ'ಯ ಅಂಶಗಳ ಲೇಖನಗಳೇ ಹೆಚ್ಚಾಗಿವೆ. ಕನ್ನಡ ಸಾಹಿತ್ಯಕ್ಕೆ ಜೈನ ವೀರಶೈವ ಕವಿಗಳ ಕೊಡುಗೆ, ಹದಿಮೂರು ಹದಿನೇಳನೆಯ ಶತಮಾನಗಳ ಕನ್ನಡ ಸಾಹಿತ್ಯ ವೈಶಿಷ್ಟ್ಯ, ಅಲ್ಲದೆ, ಜನ್ನ, ಮಹಾದೇವಿಯಕ್ಕ, ರಾಘವಾಂಕರ ಕಾವ್ಯಶಕ್ತಿ ಮತ್ತು ಬಸವರಾಜದೇವರ ರಗಳೆ, ಚಿಕ್ಕದೇವರಾಯ ವಂಶಾವಳಿಯಲ್ಲಿ ಕಂಡುಬರುವ ಚಾರಿತ್ರಾಂಶಗಳು ಎಂಬ ಲೇಖನಗಳು ವಿಶೇಷ ಉಪಯುಕ್ತವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ.

ಈ ಗ್ರಂಥದಲ್ಲಿ ಪ್ರೊ.ಸ.ಸ. ಮಾಳವಾಡರ ತೂಕಬದ್ಧವಾದ ವಿವರಣೆ, ವಿಷಯದ ಯಥಾರ್ಥತೆಯನ್ನು ತಿಳಿಸುವ ವಿಧಾನ, ವಿಷಯದ ಬೆಲೆಯನ್ನಷ್ಟೇ ಎತ್ತಿತೋರಿಸುವ ಕಲೆ, ಅತಿಶಯೋಕ್ತಿಗೆ ಅಡಕವಾಗದ ಶೈಲಿ, ಆಧಾರಯುಕ್ತ ಮಾತುಗಳು ಇರುವುದನ್ನು ಕಾಣುವುದರಿಂದ ಗ್ರಂಥಕ್ಕೆ ಬೆಲೆ ಇನ್ನೂ ಹೆಚ್ಚಾಗುತ್ತದೆ[4]. ವಿಚಾರಗಳು ಹಳೆಯವಾದರೂ ಇಂದಿಗೂ ಸರಿಯೆನಿಸುತ್ತಿವೆ.

---

1. ೧ 'ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು'. ಪುಟ ೧೩೭-೧೫೬.
2. 'ಕನ್ನಡ ಸಾಹಿತ್ಯ'—ಕೆ. ವೆಂಕಟಪ್ಪ, ಎಂ. ಎ., ಮೈಸೂರು ವಿಶ್ವವಿದ್ಯಾನಿಲಯದ. ೧೯೫೦.
3. 'ಕರ್ನಾಟಕ ಸಾಹಿತ್ಯ ಸಂಸ್ಕೃತಿದರ್ಶನ' ಪ್ರೊ. ಸ. ಸ. ಮಾಳವಾಡ, ಎಂ.ಎ. (೧೯೩೯)
4. ದೀರ್ಘ ವಿಮರ್ಶೆಗೆ ಇಲ್ಲಿ ಎಡೆಯಿಲ್ಲ. ಪ್ರಸ್ತುತ ಗ್ರಂಥವು 'ಸ್ವಾತಂತ್ರ್ಯ ಪೂರ್ವ'ದ್ದಾದುದರಿಂದ ವಿಮರ್ಶೆಯನ್ನು ಮೊಟಕುಗೊಳಿಸಲಾಗಿದೆ.

ಈ ದಿಶೆಯಲ್ಲಿ ಬಂದ ಮತ್ತೊಂದು ಗ್ರಂಥವೆಂದರೆ 'ವೀರಶೈವ ಸಾಹಿತ್ಯ ಮತ್ತು ಇತಿಹಾಸ'[1]. ಈ ಗ್ರಂಥದ ಕರ್ತೃಗಳು ಪಂಡಿತ ಬಿ. ಶಿವಮೂರ್ತಿಶಾಸ್ತ್ರಿಗಳು. ಈ ಪುಸ್ತಕದಲ್ಲಿಯ ಹದಿನೆಂಟು ಲೇಖನಗಳು ಎರಡುನೂರಾಅರವತ್ತು ನಾಲ್ಕು ಪುಟಗಳನ್ನಾಕ್ರಮಿಸಿವೆ. ವೀರಶೈವಧರ್ಮ, ಮತ್ತು ಸಾಹಿತ್ಯ ದರ್ಶನಗಳ ವಿಷಯಕ್ಕೆ ಎರಡು, ರಾಘವಾಂಕನ ವಿಷಯದಲ್ಲಿ ಆರು, ಮಹಾಕವಿ ಹರೀಶ್ವರ ಮತ್ತು ಅವನ ಕೃತಿಗಳ ವಿಷಯಕ್ಕೆ ಎರಡು, ಬಸವಣ್ಣನವರ ವಿಷಯದಲ್ಲಿ ಎರಡು, ಚೆನ್ನಬಸವೇಶ್ವರ, ಕೊಂಡುಗುಳಿ ಕೇಶಿರಾಜ, ದಾಸಿಮಯ್ಯ, ನಿಜಗುಣಶಿವಯೋಗಿ, ಪಾಲ್ಕುರಿಕೆ ಸೋಮನಾಥ ಮತ್ತು ಮಲ್ಲಿಕಾರ್ಜುನ ಪಂಡಿತ ಇವರುಗಳ ಬಗೆಗೆ ಒಂದೊಂದು ಲೇಖನಗಳು ಇಲ್ಲಿವೆ. ಗ್ರಂಥದ ಹೆಸರು ಸೂಚಿಸುವಂತೆ ಇದು 'ವೀರಶೈವ ಸಾಹಿತ್ಯ ದರ್ಶನ'ಕ್ಕೆ ಸಂಬಂಧಿಸಿದುದಾದರೂ ಇಲ್ಲಿ ಸಮಗ್ರ ವೀರಶೈವ ಕವಿಗಳ ವಿಚಾರವಿಲ್ಲದುದು ಕೊರತೆಯೆಂದು ಹೇಳಬಹುದು. ಶಾಸ್ತ್ರಿಗಳು ಅಲ್ಲಲ್ಲಿ ಮಾಡಿದ ಭಾಷಣಗಳೂ ಇದರಲ್ಲಿ ಅಡಕವಾಗಿವೆ. ಶಾಸ್ತ್ರಿಗಳ ಸ್ವತಂತ್ರ ವಿಚಾರಗಳು ಈ ಹೊತ್ತಗೆಯಲ್ಲಿ ಕಂಗೊಳಿಸುತ್ತವೆ. ವೀರಶೈವರಲ್ಲಿ ಹಳೆಯ ಬರೆಹಗಾರರನ್ನು ಮಾತ್ರವಲ್ಲದೆ ಇತ್ತೀಚಿನವರ ಹೆಸರುಗಳೂ ಈ ಗ್ರಂಥದಲ್ಲಿ ಕಣ್ಣಿಗೆ ಬೀಳುತ್ತವೆ. ಸಾಕಷ್ಟು ವಿಷಯದ ಸಂಗ್ರಹವನ್ನು ಇಲ್ಲಿ ಕಾಣಬಹುದಾದುದರಿಂದ ಶಾಸ್ತ್ರಿಗಳ ವಿಶಾಲವಾದ ಅಧ್ಯಯನಕ್ಕೂ ಈ ಗ್ರಂಥವು ವಿವರಗಳನ್ನೊದಗಿಸುತ್ತದೆ[2]. ರಾಘವಾಂಕನ ಬಗೆಗೆ ಆರು ಲೇಖನಗಳನ್ನು ಬರೆದುದು ಆ ಕವಿಯ ಬಗೆಗೆ ಮೆಚ್ಚಿಗೆಯನ್ನು ವ್ಯಕ್ತಿಪಡಿಸುತ್ತದೆ. ಮಲ್ಲಿಕಾರ್ಜುನ ಪಂಡಿತಾರಾಧ್ಯ, ಮತ್ತು ಪಾಲ್ಕುರಿಕೆಯ ಸೋಮನಾಥರ ಬಗೆಗೆ ಇನ್ನಿಷ್ಟು ದೀರ್ಘವಾದ ಲೇಖಗಳಿರುವುದು ಉಚಿತವೆಂದೆನಿಸುತ್ತದೆ. ಅಲ್ಲಲ್ಲಿ ಶಾಸ್ತ್ರಿಗಳ ಸಂಶೋಧನಾತ್ಮಕ ವಿಚಾರಗಳನ್ನೂ ಕಾಣುತ್ತೇವೆ[3]. ಒಟ್ಟಿನಲ್ಲಿ ಈ ಗ್ರಂಥವು ಸಾಮಾನ್ಯ ಓದುಗನಿಗೂ, ಅಭ್ಯಾಸಗಳಿಗೂ ವಿಷಯ ಸಂಗ್ರಹಕ್ಕೆ ಯೋಗ್ಯ ಪೊತ್ತಗೆಯಾಗಿದೆ.

'ಸಾಹಿತ್ಯ ಚರಿತ್ರೆಯ' ವಿಷಯಕ್ಕೆ ಸಂಬಂಧಿಸಿದ ಮತ್ತೊಂದು ಗ್ರಂಥವೆಂದರೆ ಶ್ರೀ ಗುರುಸಿದ್ದಪ್ಪ ಬಸವಪ್ಪ ಬಳ್ಳಾರಿ, ಗದಗ ಇವರಿಂದ ವಿರಚಿರತವಾದ "ಲಿಂಗವಂತರ ಅಮರ ಕೃತಿಗಳು ಮತ್ತು ಲಿಂಗವಂತ ಕವಿಗಳು"[4]. ಈ ಗ್ರಂಥವು ಕೃತಿಯನಾಮವೇ ನಿರ್ದೇಶಿಸುವಂತೆ ಲಿಂಗವಂತರ ಕೃತಿಗಳನ್ನೂ ಕವಿಗಳ ವಿಷಯಗಳನ್ನು ಒಳಗೊಂಡಿದೆ. ಕೃತಿಯ ಆರಂಭದಲ್ಲಿಯೇ ಅವರ ಹೆಸರುಗಳ ಸೂಚನಾಪಟ್ಟಿಯೊಂದಿದೆ. ವಚನಕಾರರ ಬೇರೊಂದು ಪಟ್ಟಿಯೂ ಇದೆ. ಕೃತಿಯನ್ನು ಎರಡು ವಿಧವಾಗಿ ವಿಂಗಡಿಸಿ, ಮೊದಲನೆಯದರಲ್ಲಿ ಕನ್ನಡನಾಡು-ನುಡಿ ಸಂಬಂಧ, ಕನ್ನಡ ಭಾಷೆ, ದೇಶ, ಕನ್ನಡ ಸಂಸ್ಕೃತಿಗಳ ಬಗೆಗೆ ಹಿಂದಿನ ಕವಿಗಳಿಂದ ಮೊದಲ್ಗೊಂಡು ಇಂದಿನ ವಿದ್ವಜ್ಜನರ ಅಭಿಪ್ರಾಯ ಸಂಗ್ರಹಗಳಿವೆ. ಪುಟ ೧೧-೧೨ ರಲ್ಲಿ 'ಕರ್ಣಾಟಕ' ಶಬ್ದದ ವ್ಯುತ್ಪತ್ತಿಯ ವಿವರವಿದೆ. ಕನ್ನಡ ಭಾಷೆ ಮತ್ತು ವೀರಶೈವ ಸಂಬಂಧ, ಲಿಂಗವಂತ ಧರ್ಮದ ಬಗೆಗೆ, ಬಸವಣ್ಣನವರ ಬಗೆಗೆ ಕನ್ನಡ ವಿದ್ವಾಂಸರು ಪಾಶ್ಚಾತ್ಯ

1. ಶರಣ ಸಾಹಿತ್ಯ ಗ್ರಂಥಮಾಲೆ ೨೫, ಶರಣಸಾಹಿತ್ಯ ಕಾರ್ಯಾಲಯ ಪ್ರಕಟನೆ. ೧೯೫೯.
2. ಮಹಾಕವಿ ಹರೀಶ್ವರ ಮತ್ತು ರಾಘವಾಂಕನ ಬಗೆಗಿದ್ದ ಲೇಖನಗಳನ್ನು ಅವಲೋಕಿಸಿರಿ.
3. 'ನಿಜಗುಣಶಿವಯೋಗಿ'ಯ ಲೇಖನ—ಕವಿಯ ಮತ ಮತ್ತು ಕಾಲ ವಿಚಾರ. ಪುಟ ೮೭-೯೧,
4. ಗ್ರಂಥಕರ್ತರಿಂದಲೇ ಕ್ರಿ. ಶ. ೧೯೬೦ ರಲ್ಲಿ ಪ್ರಕಟವಾಗಿದೆ.

ವಿದ್ವಾಂಸರು, ಶ್ರೇಷ್ಠದರ್ಜೆಯ ಪತ್ರಿಕೆಗಳ ಅಭಿಪ್ರಾಯಗಳು ಸ್ವಮತ-ಪರಮತೀಯರ ಅಭಿಪ್ರಾಯಗಳನ್ನೊಳಗೊಂಡಿದೆ. ಅದು ಅಲ್ಲದೆ ಸರ್ವಸಮ್ಮತವಾದ ಅಭಿಪ್ರಾಯಗಳು ತಲೆದೋರುವಂತೆ, ವೀರಶೈವ ಕವಿ-ಕಾವ್ಯ ಸಾಹಿತ್ಯ ವೈಶಿಷ್ಟ್ಯ, ವಚನ ಸಾಹಿತ್ಯದ ಹಿರಿಮೆ, ವೈಶಿಷ್ಟ್ಯ, ಕಾಣಿಕೆ, ಬಸವಗೀತೆ-ಭಗವದ್ಗೀತೆಗಳ ಸಾಮ್ಯ ವೈಷಮ್ಯ, ವಚನಕಾರರ ಆಣಿಮುತ್ತುಗಳ ಸಂಗ್ರಹ, ಬಸವ, ಅಕ್ಕರ ಸಾಹಿತ್ಯದ ಬಗೆಗೆ ಕುರಿತಾದ ಅಭಿಪ್ರಾಯ ಸಂಗ್ರಹ, ಅಲ್ಲದೆ ವೀರಶೈವ ಜನಸಂಖ್ಯೆ, ರಾಜರು, ಮಂತ್ರಿಗಳು, ಪತ್ರಿಕೆಗಳು ಮೊದಲಾದ ಅತಿ ಮಹತ್ವದ ವಿಷಯಗಳು ಅಲ್ಲಿ ಸಂಗ್ರಹಿತವಾಗಿವೆ. ಎರಡನೆಯ ಭಾಗದಲ್ಲಿ ಕವಿಚರಿತೆಗಳ ಮಾದರಿಯ ಮೇಲೆ 'ಕವಿಚರಿತೆ', 'ಶಿವಶರಣ ಚರಿತೆ', 'ಶಿವಾನುಭವ', 'ಶರಣಸಾಹಿತ್ಯ' ಮತ್ತು ಇತರ ಮುದ್ರಿತ ಗ್ರಂಥಗಳ ಆಧಾರದಮೇಲೆ ವಿರಚಿತವಾದ ಕವಿಕಾವ್ಯ ನಿರ್ದೇಶನವನ್ನೊಳಗೊಂಡ ಅತಿಸಂಕ್ಷಿಪ್ತ ವೀರಶೈವ 'ಸಾಹಿತ್ಯ ಚರಿತ್ರೆಯು' ಸಂಗ್ರಹವಿದೆ. ಚರಿತ್ರೆಯ ಸಂಗ್ರಹದಲ್ಲಿ ಹೇಳಿಕೊಳ್ಳುವಂತಹ ಹೊಸ ಅಂಶಗಳೇನೂ ತಲೆದೋರದಿದ್ದರೂ ಅಲ್ಲಲ್ಲಿ ಕವಿಚರಿತ್ರೆಕಾರರಿಂದ ಭಿನ್ನ ಅಭಿಪ್ರಾಯಗಳೂ, ಕವಿಚರಿತ್ರೆಯಲ್ಲಿ ಉಕ್ತರಾಗದ ೧೯ನೆಯ ಶತಮಾನದ ಕನ್ನಡ (ವೀರಶೈವ) ಕವಿಗಳ ಉಲ್ಲೇಖವೂ ಅಲ್ಲಿ ಕಂಡುಬರುತ್ತಿದೆ.

ವಿದ್ಯಾರ್ಥಿಗಳಿಗೂ, ಸಾಮಾನ್ಯ ವಾಚಕರಿಗೂ, ಸಂಶೋಧಕರಿಗೂ ಇದು ಅತ್ಯಂತ ಉಪಯುಕ್ತ ಗ್ರಂಥವಾಗಿದೆ. ವಿಷಯವು ಅತ್ಯಂತ. ಅಧಿಕೃತ ಗ್ರಂಥಕಾರರಿಂದಲೂ, ಗ್ರಂಥಗಳಿಂದಲೂ ಸ್ವೀಕೃತವಾಗಿರುವುದರಿಂದ ಪ್ರಮಾಣಾರ್ಹವಾಗಿದೆ. ಗ್ರಂಥಕರ್ತರ ಪರಿಶ್ರಮ, ಅಭ್ಯಾಸವನ್ನು ಈ ಗ್ರಂಥವು ಎತ್ತಿ ತೋರಿಸುತ್ತದೆ. ಅಲ್ಲದೆ ಅನೇಕರಿಗೆ ಉಪಯುಕ್ತ ಸಾಮಗ್ರಿಯನ್ನೂ ಎತ್ತಿ ತೋರಿಸುತ್ತದೆ. ಲೇಖಕರ ಅಭಿಪ್ರಾಯಗಳು ಕಂಡುಬರುವುದು ಇಲ್ಲಿ ತೀರವಿರಳ. ವಿಮರ್ಶೆಯಂತೂ ಕಣ್ಣಿಗೆ ಬೀಳುವುದಿಲ್ಲ. ವಿಷಯವನ್ನು ಸಂಗ್ರಹಿಸುವಾಗ ಒಂದೇ ವಿಷಯಕ್ಕೆ ಸಂಬಂಧಿಸಿದ ಉಕ್ತಿಗಳನ್ನು ಒಂದೆಡೆಗೆ ಸಂಗ್ರಹಿಸಿದ್ದರೆ, ವರ್ಗೀಕರಣವು (ವಿಷಯ) ಶಾಸ್ತ್ರೀಯವಾಗಿದ್ದರೆ, ಪುಸ್ತಕಕ್ಕೆ ಇನ್ನೂ ಕಳೆ ಬರಬಹುದಾಗಿತ್ತು. ಒಂದು ವಿಷಯಕ್ಕೆ ಸಂಬಂಧಿಸಿದ ಉಕ್ತಿಗಳನ್ನು ಒಂದೆಡೆಗೆ ಪೋಣಿಸಿದ್ದರೆ ಒಂದೊಂದು ನಿಬಂಧದಂತೆ ಬರೆಹಗಳು ಕಂಗೊಳಿಸಬಹುದಾಗಿದ್ದವು. ವಿಷಯದ ಪುನರುಚ್ಚಾರವು ಹೆಚ್ಚಾಗಿದ್ದುದು ಕಡಿಮೆಯಾಗಬಹುದಿತ್ತು. ಪ್ರೊ. ಭೂಸನೂರಮಠ ಅವರ ಅಭಿಪ್ರಾಯವು ಒಂದೇ ಶೀರ್ಷಿಕೆಯಲ್ಲಿ ಎರಡುಬಾರಿ ಮುದ್ರಣಗೊಂಡಿದೆ. ಈ ಕೆಲವು ನ್ಯೂನತೆಗಳು ಕಂಡುಬಂದರೂ ಪುಸ್ತಕದ ಬೆಲೆ, ಗ್ರಂಥಕರ್ತನ ಪರಿಶ್ರಮಕ್ಕೆ ಕೊರತೆಇಲ್ಲಾ. 'ಕನ್ನಡ ಸಾಹಿತ್ಯ'ವನ್ನು ವಿದ್ಯಾರ್ಥಿಗಳಿಗೆ ಬೋಧಿಸುವ ದಕ್ಷ ಶಿಕ್ಷಕರು ಅವಲ್ಲದಿದ್ದರೂ ಈ ಕಾರ್ಯ ಕೈಕೊಂಡದು, ಶ್ರೀ ಗುರುಸಿದ್ದಪ್ಪನವರು ಕನ್ನಡ ಸಾಹಿತ್ಯದಮೇಲೆ ಇಟ್ಟುಕೊಂಡ ಪ್ರೀತಿ, ಅಭಿಮಾನಗಳನ್ನು ಎತ್ತಿ ತೋರಿಸುತ್ತದೆ.

ಪ್ರೊ. ಎಂ. ಮರಿಯಪ್ಪಭಟ್ಟರು ನಮಗೆ ಇನ್ನೊಂದು ಗ್ರಂಥವನ್ನು 'ಕನ್ನಡ ಸಾಹಿತ್ಯ ಚರಿತ್ರೆ'ಯ ವಿಷಯಕ್ಕೆ ಒದಗಿಸಿದ್ದಾರೆ[2]. ಕನ್ನಡ ಸಾಹಿತ್ಯ ಚರಿತೆಯು ಇಲ್ಲಿಯವರೆಗೆ ಬಂದುದೇ ಸಂಕ್ಷಿಪ್ತವಾಗಿತ್ತು. ಅಂತಹ ವೇಳೆಯಲ್ಲಿ ನಾವು ಪ್ರೊ. ಭಟ್ಟರಿಂದ ವಿಸ್ತಾರವಾದ ಗ್ರಂಥವನ್ನು

1. ಪುಟ ೩೯, ೪೪.
2. 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ'—ಭಾರತೀ ಪ್ರಕಾಶನ, ಮೈಸೂರು. ೧೯೬೦.

ಬಯಸಬಹುದಾದುದು ಸಮಂಜಸ. ಅವರು ಹಲವಾರು ವರ್ಷಗಳವರೆಗೆ ಮದ್ರಾಸ ವಿಶ್ವವಿದ್ಯಾಲಯದಲ್ಲಿ ಎಂ. ಎ. ವಿದ್ಯಾರ್ಥಿಗಳಿಗೆ ಕನ್ನಡ ಸಾಹಿತ್ಯ–ಕನ್ನಡ ಭಾಷೆಯನ್ನು ಪಾಠಹೇಳಿರುವುದರಿಂದ ಅವರು ಈ ವಿಷಯಗಳ ಮೇಲೆ ಪಾಂಡಿತ್ಯಪೂರ್ಣವಾಗಿಯೂ ಬರೆಯಲು ಅರ್ಹರಾದವರು. ಅದೇಕೆ 'ಸಂಕ್ಷಿಪ್ತ ಸಾಹಿತ್ಯ ಚರಿತ್ರೆ'ಗೆ ಕೈಹಾಕಿದರೋ ! ಅದು ತಮ್ಮ ಇಚ್ಛೆಯಾಗಿರದೇ 'ದಕ್ಷಿಣ ಭಾಷಾ ಪುಸ್ತಕ' ಸಂಸ್ಥೆಯವರ ಇಚ್ಛೆಯಾಗಿದ್ದಿತೆಂದು ಅವರು ತಿಳಿಸಿದ್ದಾರೆ. (ಮುನ್ನುಡಿ ಪುಟ ೮.)

ಈ ಗ್ರಂಥದಲ್ಲಿ ಇಲ್ಲಿಯವರೆಗೆ ಅನುಸರಿಸುತ್ತ ಬಂದ ಸಾಹಿತ್ಯ ವಿಭಜನೆಯ ಕ್ರಮವನ್ನು ಕಾಣದೆ ಬೇರೊಂದು ಕ್ರಮವನ್ನು ಕಾಣುತ್ತೇವೆ. ಭಾಷೆಯ ಅವಸ್ಥೆ, ಸಾಹಿತ್ಯದ ರೂಪಗಳನ್ನು ಅವಲಂಬಿಸಿ ಕೈಕೊಂಡ ವಿಭಜನೆಯ ಕ್ರಮವು ಇವರದಾಗಿದೆ. ಮೊದಲಿಗೆ ಕನ್ನಡ ಭಾಷೆಯ ಇತಿಹಾಸವನ್ನು ಸಂಕ್ಷಿಪ್ತವಾಗಿ ಅವಲೋಕಿಸಲಾಗಿದೆ. ಕನ್ನಡ ಸಾಹಿತ್ಯ ಪ್ರಾಚೀನತೆಯನ್ನು ಕುರಿತಾದ ವಿವರವು ಕಂಡುಬರುವುದಿಲ್ಲ. ಅವರೇ ಮುನ್ನುಡಿಯಲ್ಲಿ ಹೇಳಿದಂತೆ 'ಸಾಹಿತ್ಯದ ವರ್ಗೀಕರಣ, ಕೃತಿಗಳ ಆಧಾರದಮೇಲೆ ಆ ಕಾಲದ ಸಾಮಾಜಿಕ ರಾಜಕೀಯ ಸ್ಥಿತಿಗತಿ, ಕವಿಗಳ ಕಾಲ, ಮುಖ್ಯ ಕೃತಿಗಳ ಸ್ವಾರಸ್ಯ ಮಹತ್ವಗಳನ್ನು ತಿಳಿಸುವುದೇ ಸಾಹಿತ್ಯ ಚರಿತ್ರೆಯು ಸಾಧಿಸುವ ಕಾರ್ಯವೆಂದುದು' ಎಷ್ಟರಮಟ್ಟಿಗೆ ಅವರ ಕೃತಿಯಲ್ಲಿ ಫಲಿಸಿದೆಯೋ ಹೇಳಲಾಗದು. ಮೂರನೆಯ ಪ್ರಕರಣದಲ್ಲಿ 'ಪೂರ್ವದ ಹಳಗನ್ನಡ–ಹಳಗನ್ನಡ ಗದ್ಯ ಸಾಹಿತ್ಯ'ದ ವಿಮರ್ಶೆಯನ್ನೊದಗಿಸಿದ್ದಾರೆ. ಪೂರ್ವದ ಹಳಗನ್ನಡ ಮಾದರಿಗೆಂದು ಹಲ್ಮಿಡಿಯ ಶಾಸನದ ಗದ್ಯದ ತುಣುಕೊಂದನ್ನು ಉದಾಹರಿಸಿದ್ದಾರೆ ; ಇದು ಸಾಲಬಹುದೇ ? ಸಾಹಿತ್ಯ ಚರಿತ್ರೆಯ ಬೆಳವಣಿಗೆಯಲ್ಲಿ 'ಶಾಸನ ಸಾಹಿತ್ಯ' 'ಲಕ್ಷಣ ಶಾಸ್ತ್ರಗಳ' ನಂತರ ಚಂಪೂ ಸಾಹಿತ್ಯದ ನಿರೂಪಣೆ ಬರುವುದು ಕ್ರಮಯುಕ್ತವೆಂದು ಹೇಳಬಹುದು. ಆದರೆ ಇಲ್ಲಿ ಮೊದಲಿಗೆ ಚಂಪೂ ಕಾವ್ಯಗಳು ನಂತರ ಶಾಸನ ಸಾಹಿತ್ಯದ ವಿಷಯವು ಬಂದಿದೆ. ನಡುಗನ್ನಡ ಮಹಾಕವಿಗಳ ವಿಷಯವನ್ನು ಬರೆಯುವಲ್ಲಿ ಹರಿಹರ ಮಹಾಕವಿಗೆ ಒಂದು ಪುಟ ಮೀಸಲಾದರೆ ಅದೇ ಕುಮಾರವ್ಯಾಸನಿಗೆ ಐದುಪುಟ ಉಪಯೋಗಿಸಿದ್ದಾರೆ. ಈ ತಾರತಮ್ಯ ವಿವೇಕ ಸರಿಯಾಗಿದ್ದಂತೆ ಗೋಚರಿಸುವುದಿಲ್ಲ. ಕೊನೆಯ ಅಧ್ಯಾಯವಾದ 'ಹೊಸಗನ್ನಡ ಸಾಹಿತ್ಯ' ಉಪಯುಕ್ತವಾದುದೆಂದು ಬೇರೆ ಹೇಳಬೇಕಿಲ್ಲ. ಆದರೂ ವಿವರಗಳು ಸಾಲವೆಂದೇ ಹೇಳಬೇಕು. ಒಟ್ಟಿನಲ್ಲಿ ಪುಸ್ತಕದಲ್ಲಿ ಹೊಸ ಹೊಸ ವಿಚಾರಗಳು ಕಂಗೊಳಿಸುವುದರ ಬದಲು ಅಲ್ಲಲ್ಲಿ ಈ ಮೊದಲು ಪ್ರಕಟವಾದ ಅಭಿಪ್ರಾಯಗಳ ಸಂಗ್ರಹವಿದೆ. ಈ ಗ್ರಂಥಕ್ಕೆ ವಿಶೇಷವಾಗಿ ದಿ. ಆರ್. ನರಸಿಂಹಾಚಾರ್ಯರ ಗ್ರಂಥಗಳೇ ಆಧಾರ ಗ್ರಂಥಗಳಾಗಿವೆ.

ಇನ್ನು ಸ್ವಾತಂತ್ರ್ಯ ಪೂರ್ವದಲ್ಲಿ ಪ್ರಕಟವಾದ 'ಸಾಹಿತ್ಯಚರಿತ್ರೆ'ಯ ವಿಷಯಗಳ ಪುಸ್ತಕಗಳೆಂದರೆ ಇ. ಪಿ. ರೈಸರ 'A History of Kanarese Literature' (1921) ಡಾ|| ರೆ. ಕಿಟೆಲ್ಲರ 'An Essay on Canarese Literature' (ನಾಗವರ್ಮನ ಛಂದೋಂಬುಧಿಯ ಮುನ್ನುಡಿ–1875) ಮತ್ತು (ಅ.ನ.ಕೃ. ಅವರ 'ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ'– ೨ನೆಯ ಮುದ್ರಣ ೧೯೪೬) ಎಂದು ಹೇಳಬಹುದು. ಇವುಗಳಲ್ಲಿ ಡಾ|| ಕಿಟೆಲ್ಲರ ಒಂದು ಪ್ರಬಂಧವು ಅತ್ಯಂತ ಪ್ರಾಚೀನವಿದ್ದರೂ, ಅತ್ಯಂತ ಸಂಶೋಧನಾತ್ಮಕವೂ,ವಿಚಾರಪೂರ್ಣವೂ ಆಗಿದೆ. ಇ. ಪಿ. ರೈಸರ ಗ್ರಂಥವು ಕನ್ನಡ ಸಾಹಿತ್ಯ ಚರಿತ್ರೆಯನ್ನು ವಿಸ್ತರಿಸಿ ಗ್ರಂಥರೂಪಕ್ಕೆ ತಂದ ಕೃತಿಯಾಗಿದೆ. ಕನ್ನಡ ಸಾಹಿತ್ಯದ ಮೂರು ಪ್ರವಾಹಗಳನ್ನು ಗುರುತಿಸಿ, ಅವುಗಳ ಒಲವು ವೈಶಿಷ್ಟ್ಯ, ಕೊಡುಗೆಯನ್ನು ತಿಳಿಸುತ್ತ, ಪ್ರಮುಖ ಕವಿ–ಕೃತಿಗಳ ಪರಿಚಯ ಮಾಡಿಕೊಡುವ ಉದಾತ್ತ ಸಾಹ

ಸದ ಕೃತಿಯಾಗಿದೆ. ಆ. ನ. ಕೃ. ಅವರ ಗ್ರಂಥವು ಸಾಹಿತ್ಯ ಚರಿತ್ರೆಯಾಗಿರದೆ ಕೆಲವು ಕೃತಿಗಳ ಮತ್ತು ಕೆಲವು ಕವಿಗಳ ಪರಿಚಯ ಮಾಡುತ್ತ ತಮ್ಮದೇ ಆದ ಕೆಲ ಅಭಿಪ್ರಾಯಗಳನ್ನು ಸೂಚಿಸುವ ಕೃತಿಯಾಗಿದೆ.

ಒಟ್ಟಾರೆ 'ಕನ್ನಡ ಸಾಹಿತ್ಯ ಚರಿತ್ರೆಯು' ದೆಶೆ 'ಸ್ವಾತಂತ್ರ್ಯಪೂರ್ವದ' ಕಾಲದಲ್ಲಿಯೇ ವೈಭವಯುತವೂ, ಉತ್ಸಾಹದಾಯಕವೂ, ವಿಸ್ತಾರವೂ ಆಗಿದೆಯಲ್ಲದೆ ಸ್ವಾತಂತ್ರ್ಯೋತ್ತರದ ಅವಧಿಯಲ್ಲಿ ಹೇಳಿಕೊಳ್ಳುವಂತಹ ದೆಶೆಯನ್ನು ಪಡೆಯಲಿಲ್ಲ. ಪೂರ್ವದ ಕೃತಿಗಳಲ್ಲಿ ಕಂಡುಬರುವ ಅಭಿಮಾನ, ಪಾಂಡಿತ್ಯ, ಸಂಶೋಧನೆ ನಂತರದ ಕೃತಿಗಳಲ್ಲಿ ಕಂಡುಬರುವುದಿಲ್ಲ. 'ಸಾಹಿತ್ಯ ಚರಿತ್ರೆಯೇ' ನಮ್ಮ ಕವಿಗಳ ಸಾರವತ್ತಾದ ಅಂಶಗಳನ್ನೊಳಗೊಂಡ ಕೃತಿಯಾಗಿ ಉತ್ಸಾಹದಾಯಕವೂ ಉದ್ಬೋಧಕವೂ ಆದುದಾದರೆ ಅದುವೇ ಅತ್ಯಂತ ಹರ್ಷದಾಯಕದಿನವೆಂದು ಹೇಳಬಹುದು. ಪ್ರತಿಯೊಬ್ಬ ಕವಿಯ ಬಗೆಗೆ ಸಾಹಿತ್ಯ ಚರಿತ್ರೆಯಲ್ಲಿ ಬಂದ ವಿಮರ್ಶೆ, ಅಂಶಗಳನ್ನು ಓದಿದನಂತರ ಓದುಗನಿಗೆ ಬೇರೊಂದೆಡೆಗೆ ಓಡಬಯಸುವ ಹವ್ಯಾಸವಾಗದಂತಾದರೆ ಅದುವೆ ಉತ್ತಮ 'ಕನ್ನಡ ಸಾಹಿತ್ಯ ಚರಿತ್ರೆ'ಯ ಗ್ರಂಥವೆಂದು ಹೇಳಬಹುದು. ಅದು ವಿದ್ಯಾರ್ಥಿಗಳಿಗೆ ಉತ್ತೇಜನಕರವೂ, ಉತ್ಸಾಹದಾಯಕವೂ ಆಗಬೇಕಲ್ಲದೆ ಸಾಮಾನ್ಯ ವಾಚಕನಿಗೂ ಅಭಿಮಾನಸ್ಪದವಾಗಿರಬೇಕು. ಮೂಲಕೃತಿಗಳನ್ನೋದದೆ ಮಾಡಿದ ವಿಮರ್ಶೆ, ಬರೆದ ಸಾಹಿತ್ಯ ಚರಿತ್ರೆ ಸಾಹಿತ್ಯ ಚರಿತ್ರೆಯಾಗಲಾರದು. ಅಂತಹ ದಿನಕ್ಕಾಗಿ ದಾರಿ ಕಾಯೋಣ*.

ಬಿ. ಸಿ. ಜವಳಿ

* ಈ ಲೇಖನದಲ್ಲಿ ವಿಮರ್ಶಾಸಾಹಿತ್ಯದ ಒಂದು ಭಾಗವಾದ 'ಸಾಹಿತ್ಯ ಚರಿತ್ರೆ'ಯ ವಿಷಯವನ್ನು ಮಾತ್ರ ವಿಮರ್ಶಿಸಲಾಗಿದೆ. ವಿಸ್ತಾರವಾದುದನ್ನು ಸಂಕ್ಷಿಪ್ತತೆಗೆ ತಂದುಕೊಳ್ಳುವ ಉದ್ದೇಶದಿಂದ ಈ ವಿಷಯಕ್ಕೆ ಮಾತ್ರ ಲೇಖನದ ವಿಷಯವನ್ನು ಪರಿಮಿತಗೊಳಿಸಿಕೊಳ್ಳಲಾಗಿದೆ.

# ಶರಣಸಾಹಿತ್ಯದಲ್ಲಿ ಉಪಮೆಯ ಸ್ಥಾನ-ಮಾನ

ವೇದ ಸುಳ್ಳಾದರೂ ಗಾದೆ ಸುಳ್ಳಾಗದೆಂಬುದೊಂದು ನಾಣ್ಣುಡಿ. ಇದೊಂದು ನಿತ್ಯ ಸತ್ಯ ವಾಣಿ. 'ಕಂಡದ್ದನ್ನು ಕಂಡಹಾಗೆ ಹೇಳಿದರೆ ಕೆಂಡದಂಥ ಕೋಪ' ಎಂಬ ಗಾದೆ ಅದೆಷ್ಟು ಸತ್ಯ ವಾಕ್ಯ! ಈ ಗಾದೆಗಳಿಗೆ ಮಲ್ಲಿಗೆಗೆ ಹೊಂದಿ ಬರುವ ಸುಗಂಧದಂತೆ ಉಪಮೆಗಳು ಹೊಂದಿ ಬಂದು ಅವನ್ನು ವೇದಕ್ಕೆ ಸರಿಸಮಾನವೆನ್ನಿಸಿವೆ. ಜನಪದ ಸಾಹಿತ್ಯದಲ್ಲಿಯೂಕೂಡ, ಜನ ಸಾಮಾನ್ಯರ ದೈನಂದಿನ ಜೀವನದಲ್ಲಿ ತಮ್ಮ ಸ್ವಾನುಭವವೇ ಭಾವ ಬಂಧುರವಾಗಿ, ನಾದಮಾಧುರ್ಯ ಹೊಂದಿ ಛಂದೋರೂಪಿಯಾಗಿ ಸರಳಸುಂದರ ಉಪಮೆಗಳ ಬೆಡಗಿನಿಂದ ಎಲ್ಲರಿಗೂ ತಮ್ಮ ಭಾವ ಅರ್ಥವಾಗುವಂತೆ ಮನೋವೇದ್ಯವಾಗುವಂತೆ ರಸರೂಪಿಗಳಾಗಿವೆ. ನಿದರ್ಶನಕ್ಕೆ ಅಳುವ ಕಂದನ ತುಟಿಯು ಹವಳದ ಕುಡಿಯಾಂಗ ಕುಡಿಹುಬ್ಬು ಬೇವಿನ್ಹೆಸಳಾಂಗ ಕಣ್ಣೋಟ ಶಿವನ ಕೈಯಲಗು ಹೊಳೆದಾಂಗ'. ಇದರಿಂದಲೇ 'ಗಾಂಪರ ಪದ'ಗಳು ಮಾತ್ರವಾಗಿದ್ದ ಈ ಕಿರುಕಾವ್ಯಗಳು ಕಾವ್ಯೋದ್ಯಾನದಲ್ಲಿ ಬಿರಿದುನಿಂತ ಚೆಂಗುಲಾಬಿಗಳಾಗಿ ಕಾವ್ಯ ಕನ್ನಿಕೆಯ ಮುಡಿಗೇರುವ ಬಿಡಿ ಮುಕ್ತಕಗಳಾಗಿವೆ.

ಇದೇ ಜಾಡಿನಲ್ಲಿ ಜೀವಗೊಂಡು, ಸಮಾಜದಲ್ಲಿ ಮಹತ್ತರ ಪಾತ್ರವಹಿಸಿ, ಒಂದು ನವಯುಗವನ್ನೇ ಸ್ಥಾಪಿಸಿದ ಮೇಲ್ಮೆ ಶರಣಸಾಹಿತ್ಯಕ್ಕೆ ಸಲ್ಲುತ್ತದೆ. ಹನ್ನೊಂದು ಹನ್ನೆರಡನೆಯ ಶತಮಾನಗಳಲ್ಲಿ ನಡೆದ ಧಾರ್ಮಿಕ ಆಂದೋಳನದ ಫಲವಾಗಿ, ಅಂದಿನ ಸಾಮಾಜಿಕ ರೀತಿ ನೀತಿಗಳಲ್ಲಿ ಅನಾಚಾರ ಮತ್ತು ಅನಾಯಕತ್ವಗಳು ಮನೆಮಾಡಿಕೊಂಡಿದ್ದು ಅವನ್ನು ನಿರ್ಮೂಲಮಾಡಲು, ಶರಣರು ಪ್ರೌಢವಾದ ಪಾಂಡಿತ್ಯದ ಭಾಷೆಯನ್ನು ಬಳಸದೆ, ಲಲಿತವಾದ ದೈನಂದಿನ ಆಡುಮಾತುಗಳಲ್ಲಿ ಸುಂದರ ಉಪಮಾನಗಳನ್ನು ಕೊಡುತ್ತ ತಮ್ಮ ವೀರಶೈವಧರ್ಮದ ವೈಶಿಷ್ಟ್ಯವನ್ನು ಎತ್ತಿ ಹೇಳಿ, ಜನಜಾಗೃತಿಯನ್ನುಂಟುಮಾಡಿ, ದಷ್ಟಪುಷ್ಟವಾದ ಒಂದು ಸಮಾಜ ನಿರ್ಮಾಣ ಮಾಡಿದ್ದರ ಜೊತೆಗೆ, ಶರಣಸಾಹಿತ್ಯವೆಂಬ ವಿಶಿಷ್ಟವೂ ಉತ್ತಮವೂ ಆದ ಸಾಹಿತ್ಯದ ಪಂಥವನ್ನು ಸ್ಥಾಪಿಸಿದರು. ಹೀಗೆ ಜನತೆಗೆ ತಮ್ಮ ಧರ್ಮನೀತಿ ಮತ್ತು ತತ್ತ್ವಗಳನ್ನು ಸಾರುವಾಗ, ಭಗವಂತನಲ್ಲಿ ತಮ್ಮ ಆತ್ಮದ ಅಳಲನ್ನು ತೋಡಿಕೊಳ್ಳುವಾಗ, ಕವಿಹೃದಯ ಹೊಂದಿದ್ದ ಬಹುಮಂದಿ ವಚನಕಾರರ ವಾಣಿಯು ಸಹಜ ಛಂದೋರೂಪಿಯಾಗಿ, ಭಾವದಿಂದ ತುಂಬಿ, ಉಪಮಾಲಂಕಾರಗಳನ್ನು ಹೊಂದಿ ಸುಂದರ ಕಾವ್ಯಧಾರೆಯಾಗಿ ಹೊರಬಂದದ್ದರಿಂದ ಜನತೆ ಆ ಧರ್ಮತತ್ತ್ವಗಳನ್ನು ಅನುಸರಿಸಿದರು ಮಾತ್ರವಲ್ಲ, ಅವರ ಸೂಕ್ತಿಗಳನ್ನು, ವಚನಾಮೃತವನ್ನು ಬರೆದಿಟ್ಟುಕೊಂಡು, ಅಥವಾ ಬಾಯಿಗೆ ಗಟ್ಟಿಮಾಡಿಕೊಂಡು, ಇತರರಿಗೆ ಶಿವಶರಣರ ಉದಾತ್ತ ತತ್ತ್ವಗಳನ್ನು ಪ್ರಸಾರ ಮಾಡಲೂ ಬಳಸಿಕೊಂಡು, ಬೆಳೆಸುತ್ತಾ ಬಂದರು. ಹಾಗೆ ಬೆಳೆದುಬಂದ ಸುಂದರ ಶರಣ ಸಾಹಿತ್ಯ ಇಂದು ಕನ್ನಡ ಸಾಹಿತ್ಯದ ಸ್ವತಂತ್ರನಿಧಿ ಮತ್ತು ಶುದ್ಧಕನ್ನಡದ ಕಾವ್ಯ ಜೇನಾಗಿ ಬಳಕೆಯಲ್ಲಿದೆ.

ವಚನ ವಾಙ್ಮಯವು ಹಿಂದಿನಿಂದಲೇ ಪ್ರಾರಂಭವಾಗಿತ್ತಾದರೂ 11–12 ನೆಯ ಶತ

ಮಾನಗಳಲ್ಲಿ ಉಷಾಕಿರಣದಂತೆ ವಚನ ಸಾಹಿತ್ಯ ದಿಗಂತದಲ್ಲಿ ಮೂಡಿಬಂದು, ಮುಂಬರುವ ಎಲ್ಲ ವಚನಕಾರರಿಗೂ ಅನೇಕ ರೀತಿಯಲ್ಲಿ ಮಾರ್ಗ ದರ್ಶನ ಮಾಡಿದ ದೇವರದಾಸಿಮಯ್ಯನ ವಚನ ಗಳು ಇಂದು ಉಪಲಬ್ಧವಿರುವ ವಚನಗಳು ಇಂದು ಉಪಲಬ್ಧವಿರುವ ವಚನಗಳ ಸಾಲಿನಲ್ಲಿ ಪುರಾತನವಾದವು. ಹಾಗೆಂದ ಮಾತ್ರಕ್ಕೆ ಆತನಿ ಗಿಂತ ಹಿಂದೆ ವಚನಗಳಿರಲಿಲ್ಲವೆಂದು ಅರ್ಥವಲ್ಲ; ಇದ್ದಿರಬಹುದಾದರೂ ಅವು ಉಪಲಬ್ಧವಾಗಿಲ್ಲ ಮತ್ತು ಅಷ್ಟೊಂದು ಪ್ರಾಮುಖ್ಯತೆಯನ್ನೂ ಪಡೆ ದಿಲ್ಲ. ದೇವರದಾಸಿಮಯ್ಯನ ವಚನಗಳಲ್ಲಿ ಬಸ ವಣ್ಣನವರ ವಚನಗಳಲ್ಲಿ ಎದ್ದು ಕಾಣಬರುವಂಥ ಭಾವಾವೇಶವಾಗಲೀ ರಸೋದ್ರೇಕವಾಗಲೀ ಅಥ ವಾ ಪರಮತನಿಂದೆಯ ಬಗೆಗೆ ಉಗ್ರತೆಯಾಗಲೀ ಕಾಣಬರದಿದ್ದರೂ ಆತನದೇ ಆದರಪೂರ್ಣ ಶೈಲಿ ಮತ್ತು ಅಪಾರ ಜೀವನಾನುಭವ ಮತ್ತು ಲೌಕಿಕ ಜ್ಞಾನ ಮತ್ತು ಕವಿತಾಶಕ್ತಿ ಇದ್ದುದರಿಂದ ಆತನು ಕೊಡುವ ಅನೇಕ ಉಪಮಾನಗಳು ತುಂಬ ಹೃದ್ಯವೂ ಮನೋಹರವೂ ಆಗಿವೆ.

> "ಕಡೆಗೀಲು ಬಂಡಿಗಾಧಾರ
> ಕಡುದರ್ಪವೇರಿದ ಒಡಲೆಂಬ ಬಂಡಿಗೆ
> ಮೃಡಶರಣರ ನುಡಿಗಡಣವೇ
> ಕಡೆಗೀಲು ಕಾಣಾ ರಾಮನಾಥಾ"

ಎಂಬ ವಚನದಲ್ಲಿ ದೇಹದ ಬಂಡಿಗೆ ಶಿವಶರಣರ ನುಡಿ ಕಡಾಣಿ ಇಲ್ಲದಿದ್ದರೆ ಅದು ಮುರಿದು ಬೀಳು ತ್ತದೆ ಎಂಬ ತತ್ತ್ವವನ್ನು ದಿನನಿತ್ಯ ಬಳಕೆಯಲ್ಲಿ ರುವ ಗಾಡಿಯ ಕಡೆಗೀಲಿನ ಉಪಮೆಯ ಮೂಲಕ ಮತ್ತೂ ಸ್ಪಷ್ಟಪಡಿಸಿದ್ದಾನೆ. ಭಗವಂತನೇ ಸೂತ್ರಧಾರಿ; ನಾವೆಲ್ಲ ಗೊಂಬೆಗಳೆಂಬ ವಿಶಾಲ ತತ್ತ್ವವನ್ನು ಜನರಿಗೆ ಸುಲಭವಾಗಿ ತಿಳಿಸುವ ಸಲುವಾಗಿ "ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆಯಯ್ಯಾ. ಎಣಿಸುವೊಡೆ ತನು ಭಿನ್ನ ಆತ್ಮ ನ್ನೊಬ್ಬನೆ....'" ಎಂದು ಮಣಿದಾರದ ಉಪಮೆ ಯನ್ನು ಕೊಟ್ಟಿದ್ದಾನೆ. ಅನೇಕ ಪೂಜಾರಿಗಳು ಊರಿನ ಎಲ್ಲರ ಮನೆಗಳಿಗೂ ಹೋಗಿ, ಅವರ ಪರ ವಾಗಿ ತಾವು ಶಿವನನ್ನು ಪೂಜೆಮಾಡಿ, ಇಬ್ಬರಿಗೂ ಮುಕ್ತಿ ಸಿಕ್ಕುತ್ತದೆ ಎಂದು ನಂಬಿಕೊಂಡಿದ್ದರು. ಅಂಥ ಪೂಜಾರಿಗಳ ಕೃತಿಯನ್ನು ಖಂಡಿಸುತ್ತ, "ಊರ ಮೂಡುವನ ಭಕ್ತಿ ದೂರದ ಹೊಲದಂತೆ, ದೂರದಿಂದ ಬಂದುದು ನಿಂದು ಮುಂದೆ ಸಾಗರ ವಾಗಲರಿಯದು ರಾಮನಾಥಾ" ಎಂಬ ಎರಡು ಉಪಮೆಗಳಿಂದ ಸ್ಪಷ್ಟಪಡಿಸುತ್ತಾನೆ. ಊರಿನಿಂದ ಹೊಲ ದೂರದಲ್ಲಿದ್ದರೆ ಬೇಸಾಯದಲ್ಲಿ ಆಸಕ್ತಿ ವಾಸ್ತವವಾಗಿ ಕುಂದುತ್ತದೆ. ಹಾಗೆಯೇ ಬಹುದೂರ ದಿಂದ ಹರಿದು ಬರುವ ಕಿರುತೊರೆ ಅಲ್ಲಿ ಇಲ್ಲಿ ನಿಂತು ನಿಂತು, ಮುಂದೆ ಸಮುದ್ರ ಸೇರಲು ಅಸಾಧ್ಯವಾಗುತ್ತದೆ.ಹಾಗೆಯೇ ದೂರದ ಭಕ್ತಿಯೂ ಕೂಡ. ಇದೇ ಭಾವದಿಂದ ಪ್ರೇರಿತನಾಗಿ ಇನ್ನೂ ಹರಿತವಾದ ವಾಗ್ಬಾಣವನ್ನು ಬಸವಣ್ಣ ಬೇರೆ ಯವರಿಂದ ಪೂಜೆಮಾಡಿಸಿ ತಾವು ಉತ್ತಮ ಫಲಪಡೆದುಕೊಳ್ಳಬೇಕೆನ್ನುವವರ ಮೇಲೆ ಹರಿ ಹಾಯಿಸುತ್ತಾನೆ. "ತನ್ನಾಶ್ರಯದ ರತಿಸುಖ ವನು, ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?'' ಎಂದು ಮುಂತಾಗಿ ಪ್ರಶ್ನಿಸುತ್ತಾನೆ. ಇಂಥ ಪ್ರೇರಣಾತ್ಮಕ ವಚನ ಗಳನ್ನೇ ಅಲ್ಲದೆ ಕಪಟಗಳಾದ ಮಠಾಧಿಪತಿಗಳೆಂಬ ಹೆಮ್ಮೆಯಿಂದ ಅನಾಚಾರಗಳನ್ನೆಷ್ಟೋ ಮಾಡು ತ್ತಿದ್ದ ಶಠರನ್ನು ಕಂಡು ದಾಸಿಮಯ್ಯನು "ಬರು ಶಠಗನ ಭಕ್ತಿ ದಿಟವೆಂದು ನೆಚ್ಚಲುಬೇಡ. ಮಠ ದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂ ತಾಯಿತ್ತು ಕಾಣಾ ರಾಮಾನಾಥಾ" ಎಂದು ಅವರ ಕಾಪಟ್ಯವನ್ನು ಇಲಿ-ಬೆಕ್ಕಿನ ವರ್ತನೆಗೆ ಹೋಲಿಸಿ ದ್ದಾನೆ. ದೃಢಮನದ ಭಕ್ತರಲ್ಲದವರನ್ನು ಭಗ ವಂತ ಮೆಚ್ಚನೆನ್ನುವ ತತ್ತ್ವವನ್ನು ಜನರಿಗೆ ಸುಲಭ ವಾಗಿ ತಿಳಿಯ ಹೇಳಲು ಬಳಸಿರುವ ಈ ಪುಟ್ಟ

ದೃಷ್ಟಾಂತ ಅದೆಷ್ಟು ಮಾರ್ಮಿಕವಾಗಿದೆ, ಆದರೆ ಥಕ್ಕನೆ ಭಾವ ಸ್ಫುರಿಸುತ್ತದೆ; "ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ. ಇರುಳೆಲ್ಲ ನಡೆದನಾ ಸುಂಕಕಂಜಿ. ಕಳವೆಯೆಲ್ಲ ಹೋಗಿ ಬರಿಯ ಗೋಣಿ ಉಳಿಯಿತ್ತು. ಅಳಿಮನದವನ ಭಕ್ತಿ ಇಂತಾಯಿತ್ತು ರಾಮನಾಥಾ".

ವೈರಾಗ್ಯವಾರಿಧಿ ಎಂದು ಪ್ರಸಿದ್ಧನಾಗಿರುವ ಅಲ್ಲಮಪ್ರಭುವಿನ ವಚನಗಳಲ್ಲಿ ತತ್ತ್ವ ಮತ್ತು ಜ್ಞಾನಗಳ ವಿವೇಚನೆ ಮತ್ತು ಪ್ರೌಢಮಾರ್ಗದಲ್ಲಿ ಮಾರ್ಮಿಕವಾದ ನುಡಿದ 'ಬೆಡಗಿನ ವಚನ'ಗಳೇ ಹೆಚ್ಚಾಗಿ ಇರುತ್ತಿರುವುದರಿಂದ ಬಸವಣ್ಣನವರಲ್ಲಿ ಕಾಣಬರುವಂಥ ಆತ್ಮದ ಅಳಲಾಗಲೀ ಕಂಡು ಸಮಾಜದ ಖಂಡನೆಯಾಗಲೀ ಕಂಡು ಬರುವ ಹಂಬಲದ ಅಥವಾ ದೈನ್ಯದ ವಾಣಿ ಇಲ್ಲ. ಅಂದ ಮಾತ್ರಕ್ಕೆ ಕವಿತಾಮಿರುಗೇ ಇಲ್ಲವೆಂದು ಇದರರ್ಥವಲ್ಲ. ಆತನ ವಚನಗಳಲ್ಲೂ ಅಲ್ಲಲ್ಲಿ ಕಾವ್ಯದ ಮಿಂಚು ಹೊಳೆಯುತ್ತದೆ. "....ವ್ಯಾಧನು ಸೂಸಲ ಚೆಲ್ಲಿ ಜಂತ್ರವ ಹಣ್ಣಿ, ಅಡಿಗಲ್ಲನ್ನೊಡ್ಡಿ ಹೋದಬಳಿಕ ಸೂಸಲ ಕಂಪಿಂಗೆ ಹೆಗ್ಗಣ ಬಂದು ಬಿದ್ದಂತೆ ಬಿದ್ದಿರಲ್ಲಾ ಮಾಯದ ಬಲೆಯಲ್ಲಿ; ಕೋಪವೆಂಬ ರಾಡನೊಡ್ಡಿ, ತಾಪವೆಂಬ ಅಡಿಗಲ್ಲ ನಿರಿಸಿ ಹುಸಿ ಎಂಬ ಮಿಾಟುಗಣೆಯ ಜಂತ್ರಿಸಿ ಹೊನ್ನು ಹೆಣ್ಣು ಮಣ್ಣೆಂಬ ಸೂಸಲ ಚೆಲ್ಲಿ ಕೆಡಹಿದ ನಲ್ಲಾ ನಿಃಕರುಣಿ ಮುಕ್ಕಣ್ಣ ವ್ಯಾಧನು...."ಎಂದು ಮಾರ್ಮಿಕವಾಗಿ ನುಡಿದು, ಸಂಸಾರದ ಬೋನಿಗೆ ಸಿಕ್ಕಿ ನರಳಬೇಡಿರೆಂದು ಜ್ಞಾನಬೋಧಿಸುತ್ತಾನೆ. "ಬಿರುಗಾಳಿ ಬೀಸಿ ಮರ ಮುರಿವಂತೆ ಸುಳುಹು ಸುಳಿಯದೆ, ತಂಗಾಳಿ ಪರಿಮಳದೊಡಗೂಡಿ ಸುಳಿವಂತೆ ಸುಳಿಯಬೇಕು.... ಸುಳಿದು ಜಂಗಮವಾಗಲರಿಯದ, ನಿಂದು ಭಕ್ತನಾಗಲರಿಯದ ಉಭಯ ಭ್ರಷ್ಟರನೇನೆಂಬೆ ಗುಹೇಶ್ವರಾ" ಎಂಬುದಾಗಿ ನಿಜಭಕ್ತರ ರೀತಿನೀತಿಗಳನ್ನು ಸೂಚಿಸುತ್ತಾನೆ.

ಕಾಯಕವೇ ಕೈಲಾಸವೆಂದು ನಂಬಿ, ಅದರಂತೆಯೇ ಜನರಿಗೆ, ದನಕರುಗಳಿಗೆ ಅನುಕೂಲವಾಗುವಂತೆ ಕೆರೆಕಟ್ಟೆಗಳನ್ನು ಕಟ್ಟಿಸಿ ಆ ಮುಖಾಂತರವೇ ಶಿವನನ್ನು ಕಾಣಲು ಅರಸುತ್ತಿದ್ದ ಕರ್ಮಯೋಗಿ ಸಿದ್ಧರಾಮನನ್ನು ಜ್ಞಾನದ ಮಾರ್ಗದಲ್ಲಿ ನಡೆಸಿ ಪರೋಪಕಾರ ಮಾಡಿ ಮುಕ್ತಿ ಪಡೆವೆನೆಂಬುದು ಸಲ್ಲ. ಬದಲಾಗಿ "ತನುವೆಂಬ ಊರಿಗೆ ಮನವೆಂಬ ಕಟ್ಟೆ ಆಚಾರವೆಂಬ ಸೋಪಾನ, ಪರಮಾನಂದವೆಂಬ ಜಲವ ತುಂಬಿ ಕೆರೆಯ ಕಟ್ಟ ಬಲ್ಲವರನಾರನೂ ಕಾಣೆ" ಎಂದು ಹೀಯಾಳಿಸಿ ಆತನನ್ನು ಸನ್ಮಾರ್ಗದಲ್ಲಿ ನಡೆಸಿ ಜ್ಞಾನವನ್ನು ಬೀರುತ್ತಾನೆ ಮಹಾಜ್ಞಾನಿ ಅಲ್ಲಮಪ್ರಭು. ಸಿದ್ಧರಾಮನಿಗಾದರೂ ಸಂಸಾರದ ಉರಿ ತಟ್ಟದಿರಲಿಲ್ಲ. ಆತನು "ಸಂಸಾರವೆಂಬ ಸರ್ಪನ ಅಣಲೊಳಗಿಹೆನಯ್ಯಾ. ಆವಾಗ ನುಂಗೀತೆಂದರಿಯೆ; ಆವಾಗ ಉಗುಳೀತೆಂದರಿಯೆನಯ್ಯಾ; ಅದರ ಬಾಯಿಂದೆನ್ನ ತೆಗೆದು ಕಾಯಯ್ಯಾ ಕಪಿಲ ಸಿದ್ಧಮಲ್ಲಿಕಾರ್ಜುನ" ಎಂದು ಮೊರೆಇಟ್ಟಾಗ, "ಕಾಯ ಧರಿಸಿದವ ನವನೀತರೋಮದಂತಿರಬೇಕು ; ಆಷಾಢದಲ್ಲಿಯ ಚಂಡಮಾರುತನಂತಿರಬೇಕು" ಎಂದು ನಿಯಮಿಸುವಾಗ ಆತನ ಕವಿತಾಶಕ್ತಿ ಹೊಳೆಯುವುದು ತೋರಿಬರುತ್ತದೆ.

ಬಸವಣ್ಣನ ಸೋದರಳಿಯನಾದ ಚೆನ್ನಬಸವಣ್ಣನು ಹೆಚ್ಚಾಗಿ ಜ್ಞಾನಕ್ಕೆ ಸಂಬಂಧಿಸಿದಂತೆ, ವೀರಶೈವ ಧರ್ಮಕ್ಕೆ ಸಂಬಂಧಿಸಿದಂತೆ ತತ್ತ್ವ ಸಿದ್ಧಾಂತಗಳ ನಿರೂಪಣೆಗೇ ಹೆಚ್ಚು ಪ್ರಾಮುಖ್ಯತೆ ಕೊಟ್ಟಿರುವುದರಿಂದ ಆತನಲ್ಲಿ ಕವಿತಾಶಕ್ತಿಯ ಪೂರ್ಣರೂಪ ಹೊರಹೊಮ್ಮಲಾಗಿಲ್ಲ. ಆದರೂ ಕೂಡ ಆತನು ಒಮ್ಮೊಮ್ಮೆ ನುಡಿದಿರುವ "ಹೆಗ್ಗಣವನಿಕ್ಕಿ ನೆಲೆಗಟ್ಟು ಕಟ್ಟಿದಂತೆ ಆಯಿತೆನ್ನ ಕಾಯಗುಣ, ಅಹಂಕಾರ ಪ್ರಬೋಧೆಗಳೇಕಯ್ಯಾ.... ಆದಿವ್ಯಾಧಿಗಳೆಲ್ಲವ ಕಳೆದು ನಿರ್ವಾಣನಪ್ಪ ಪದವ

ಕರುಣಿಸಯ್ಯ ಕೂಡಲ ಚೆನ್ನಸಂಗಮದೇವಾ'' ಎಂಬಂಥ ವಚನಗಳಿಂದ ಆತನ ಲೋಕಾನುಭವವೂ ಸುಪ್ರಕಟವಾಗುತ್ತದೆ.

ಅಂಬಿಗರ ಚೌಡಯ್ಯನ ಕೆಲವು ವಚನಗಳಲ್ಲಿ ಉಪಮೆಯು ಉತ್ತಮ ಅರ್ಥವ್ಯಂಜಕವಾಗಿ ಬಂದು, ರಸಾಸ್ವಾದನೆಗೆ ಪೂರಕವಾಗಿದೆ. ಉದಾಹರಣೆಗೆ, ಜ್ಞಾನಿಯಾದ ಗುರುವಿನಿಂದ ಶಿಷ್ಯನು ಉಪದೇಶಪಡೆಯಬೇಕು. ಹಾಗಿಲ್ಲದಿದ್ದರೆ ಅನರ್ಥವೆಂಬ ತತ್ತ್ವವನ್ನು ಸಾರಲು, ''ಅರಿಯದ ಗುರು, ಅರಿಯದ ಶಿಷ್ಯ. ಇವರಿಬ್ಬರಿಗೇನಪ್ಪುದೋ. ಕುರಡ ಕುರಡನ ಕೈಯಪಿಡಿದು ಪಥವ ನಡೆಯಬಲ್ಲರೆ ? ತೊರೆಯಲದ್ದಿಹೋಹವನ ಈಸಲರಿಯದವ ತೆಗೆದಂತಾಯಿತ್ತೆಂದನಂಬಿಗರ ಚೌಡಯ್ಯ'' ಎಂದು ತನ್ನ ಕಸುಬಾದ ಅಂಬಿಗನವೃತ್ತಿ ಜ್ಞಾನವನ್ನು ವಿಶ್ವತತ್ತ್ವದೊಂದಿಗೆ ಹೊಂದಿಸಿ ನುಡಿದಿದ್ದಾನೆ.

16 ನೆಯ ಶತಮಾನದಲ್ಲಿ ಬದುಕಿ ವಚನ ರಚನೆಮಾಡಿದ ಷಣ್ಮುಖಸ್ವಾಮಿಯು ಅಖಂಡೇಶ್ವರನೆಂಬ ಅಂಕಿತದಲ್ಲಿ ಹಲವು ವಚನಗಳನ್ನು ರಚಿಸಿದ್ದಾನೆ. ಶಿವನನ್ನು ನಯವಿನಯಗಳಿಂದ ಒಲಿಸಿಕೊಳ್ಳಬೇಕೆಂದು ಹೇಳುತ್ತ, ''ಬಲ್ಲವರ ಬೆಸಗೊಂಡರೆ ಮೆಲ್ಲನಾರೈದು ಮೆಲ್ಲನೆ ನುಡಿಯಬೇಕು; ಕಲ್ಲು ಕಲ್ಲುತಾಗಿದಂತೆ ಸೊಲ್ಲು ಬಿರಿಯಾದಡೆ ಅಲ್ಲಿ ನಿಲ್ಲನಯ್ಯ ಅಖಂಡೇಶ್ವರ'' ಎಂದು ಹೇಳಿದ್ದಾನೆ. ಈತನ ಮೇಲೆ ಹಿರಿಯ ವಚನಕಾರರ ಪ್ರಭಾವವು ಎದ್ದು ಕಾಣುವಷ್ಟು ಆಗಿರುವುದನ್ನು ಗಮನಿಸಬಹುದು.

ಶರಣಸಾಹಿತ್ಯ ಶಿರೋಮಣಿಗಳಂತಿರುವ ಭಕ್ತಿಭಂಡಾರಿ ಬಸವಣ್ಣ ಮತ್ತು ಮಹಾದೇವಿ ಅಕ್ಕ–ಇವರಲ್ಲಿ ಉಪಮೆಯು ತನ್ನ ನೈಜ ರೂಪದಲ್ಲಿ ನಲಿದಿದೆ. ಇಬ್ಬರಲ್ಲೂ ಆತ್ಮದ ಅಳಲು ಏಕಪ್ರಮಾಣದಾಗಿದ್ದು ಸಂಸಾರದ ಕಷ್ಟದ ಆಲಿಗಲ್ಮಳೆಯಲ್ಲಿ ನೆನೆದು ನೊಂದವರು, ಸಮಾಜದ ಕುಂದು ಕೊರತೆಗಳನ್ನು ಕಣ್ಣಾರೆಕಂಡು, ತಾವೂ ಅನುಭವಿಸಿ, ಅನಂತರ ಜ್ಞಾನಮಾರ್ಗವನ್ನು ಕಂಡುಕೊಂಡು ತಮ್ಮನ್ನೇ ಶಿವನಿಗೆ ನಿವೇದಿಸಿಕೊಂಡು ಅಮರರಾದ ಮಹಾಶರಣರು. ಇವರಿಬ್ಬರಲ್ಲಿಯೂ ಸಹಜ ಕವಿತಾಶಕ್ತಿ ಉಕ್ಕಿ ಹರಿದು, ಕಾವ್ಯ ಕೋಗಿಲೆಯ ನುಣ್ದನಿ ಎಲ್ಲೆಲ್ಲಿಯೂ ಕೇಳಬರುತ್ತದೆ.

ಸತಿಪತಿಭಾವದಲ್ಲಿ ಶಿವನನ್ನು ಒಲಿಸಿಕೊಳ್ಳಲು ಯತ್ನಿಸಿ ಕೊನೆಗೆ ಜಯಶೀಲೆಯಾದ ಮಹಾದೇವಿ ಅಕ್ಕನಿಗೆ ಶಿವನು ಒಡ್ಡುವ ಕಠಿನ ಪರೀಕ್ಷೆಗಳಲ್ಲಿ ಗೆಲ್ಲುವ ಶಕ್ತಿ ತನಗಿಲ್ಲವಾಗಿ, ''ಬಲ್ಲಿದನ ಹಗೆ ತೆಗೆವನ್ನಬರ ಬಡವನ ಹರಣ ಹೋದ ತೆರನಂತಾಯಿತ್ತು ನೀ ಕಾಡಿ ನೋಡುವನ್ನಬರ....'' ಎಂದು ತನ್ನ ಲೋಕಪ್ರಜ್ಞೆಯನ್ನು ಶಿವನಿಗೆ ತೋಡಿಕೊಳ್ಳುತ್ತಾಳೆ. ಸದ್ಭಕ್ತರ ಸಂಗದಿಂದ ಮುಕ್ತಿಸಾಧನೆ ಸುಲಭವೆಂಬುದನ್ನು ತಾನೂ ಪ್ರತಿಪಾದಿಸುತ್ತ, ''ಅರಿಯದವರೊಡನೆ ಸಂಗವ ಮಾಡಿದರೆ ಕಲ್ಲು ಹೊಯ್ದು ಕಿಡಿಯ ತೆಗೆದುಕೊಂಬಂತೆ, ಬಲ್ಲವರೊಡನೆ ಸಂಗವ ಮಾಡಿದರೆ ಹೊಸೆದು ಬೆಣ್ಣೆಯ ತೆಗೆದು ಕೊಂಬಂತೆ, ಚೆನ್ನಮಲ್ಲಿಕಾರ್ಜುನಯ್ಯಾ,ನಿಮ್ಮಶರಣರ ಸಂಗ ಕರ್ಪುರ ಉರಿಕೊಂಬಂತೆ'' ಎಂದು ಅತ್ಯಂತಸುಂದರ ಉಪಮೆಗಳ ಮುಖಾಂತರ ರಸಾನುಭವಕ್ಕು ಶಿವಾನುಭವಕ್ಕು ಅನುವು ಮಾಡಿಕೊಟ್ಟಿದ್ದಾಳೆ. ಲೌಕಿಕ ವ್ಯಾಮೋಹದ ಬಲೆಯಿಂದ ಮುಕ್ತಳಾದ ತರುಣಿ ವಿರಕ್ತೆಗೆ ಪರಪುರುಷರೆಂದರೆ ಇಲ್ಲವೆ ಸೋದರರಂತೆ, ಇಲ್ಲವೆ ''ಎರದ ಮುಳ್ಳಿನಂತೆ ಪರಗಂಡರೆನಗವ್ವ. ಸೋಂಕಲಮ್ಮೆ, ಸುಳಿಯಲಮ್ಮೆ, ನಂಬಿ ನಚ್ಚಿ ಮಾತಾಡಲಮ್ಮೆನವ್ವ'' ಎಂದು ಸ್ಪಷ್ಟವಾಗಿ ಹೇಳಿಬಿಡುತ್ತಾಳೆ. ಹಾಗೆಯೇ ಶರೀರದ

ವಿಕಾರ ಸ್ವರೂಪವನ್ನು ವಿವರಿಸಲು ಅನೇಕ ಹೋಲಿಕೆಗಳನ್ನು ಕೊಟ್ಟು ಕೊನೆಗೆ, ''ತಾಯಿ ರಕ್ಕಸಿಯಾದಂತೆ ಕಾಯವಿಕಾರವು'' ಎಂದು ನುಡಿಯುತ್ತಾಳೆ. ಎಂಥ ಸೊಗಸಾದ ಉಪಮೆ! ಸಾಕಿಸಲಹುವ ತಾಯಿಯೇ ರಾಕ್ಷಸಿಯಾದರೆ ಕಾಯುವವರಿನ್ನಾರು? ಹೀಗೆಯೇ ಆಕೆಯು ''ಊರ ಸೀರೆಗೆ ಅಗಸ ತಡಬಡಗೊಂಡಂತೆ'', ''ಕೋಲತುದಿಯ ಕೋಡಗನಂತೆ, ನೇಣತುದಿಯ ಬೊಂಬೆಯಂತೆ, ಆಡಿದೆನಯ್ಯಾ ನೀನಾಡಿಸಿದಂತೆ", ಎಂದು ಶಿವನ ಸರ್ವ ಪ್ರಭುತ್ವವನ್ನು ಒಪ್ಪುವಾಗ, ಕೆಂಡದ ಶವದಂತೆ, ಸೂತ್ರತಪ್ಪಿದ ಬೊಂಬೆಯಂತೆ, ಜಲವರತ ತಟಾಕದಂತೆ, ಬೆಂದ ನುಲಿಯಂತೆ, ಮತ್ತೆ ಹಿಂದಣ ಹಂಗುಂಟೆ ಅಣ್ಣ ಚೆನ್ನಮಲ್ಲಿಕಾರ್ಜುನನೇ ಆಶ್ರಯವಾದವಳಿಗೆ?" ಎಂದು ಪ್ರಶ್ನಿಸುವಾಗ, ಹಾಗೆಯೇ ಪ್ರೀತಿ ಇಲ್ಲದ ಗಂಡ ಹೆಂಡಿರ, ಲಿಂಗ–ಶಿಷ್ಯರ ಸಂಬಂಧವನ್ನು ಕುರಿತು ಕೊಡುವ ಉಪಮೆಯಂತೂ ಅನುಪಮ ಸುಂದರವಾಗಿದೆ. ಅವರ ಸ್ನೇಹ, ''ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ''. ಹಾಲು ಕುಡಿಸಲು ಇಚ್ಛಿಸದ ಹಸುವು ಒಂದು ಕಡೆ, ಮೊಲೆಯುಣ್ಣ ಬಯಸದ ಕರು ಇನ್ನೊಂದು ಕಡೆ! ಕೊನೆಗೆ ಎಲ್ಲ ಪ್ರಮಥರ ಆಶೀರ್ವಾದ ಪಡೆದು ಹೊರಟು ''ಚೆನ್ನಮಲ್ಲಿಕಾರ್ಜುನನ ಕೈ ಪಿಡಿದು ನಿಮ್ಮ ಮಂಡೆಗೆ ಹುವ್ವ ತಹೆನಲ್ಲದೆ ಹುಲ್ಲ ತಾರೆನು" ಎಂದು ಹೊರಟು ಶ್ರೀಶೈಲದ ಕದಳಿವನದಲ್ಲಿ ಬಯಲಾಗುತ್ತಾಳೆ ಶಿವಶರಣೆ ಅಕ್ಕ.

''ಭಕ್ತಿಭಂಡಾರಿಯೆಂದು,ವಚನಸಾಹಿತ್ಯದ ಧ್ರುವ ನಕ್ಷತ್ರವೆಂದೂ ವೀರಶೈವಮತ ಪ್ರವಾದಿ ಎಂದೂ ಸುಪ್ರಸಿದ್ಧನಾಗಿರುವ ಬಸವಣ್ಣನ ವಚನಗಳಲ್ಲಿ ಉಪಮೆಯ ಸ್ಥಾನಮಾನವೇನೆಂದು ನೋಡೋಣ. ಕುಮಾರವ್ಯಾಸನು ರೂಪಕಗಳಲ್ಲೇ ಮಾತಾಡುವಂತೆಯೇ ಬಸವಣ್ಣನೂ ಉಪಮೆಗಳ ಮೂಲಕವೇ ತನ್ನ ಅನುಭವ ಮತ್ತು ಆತ್ಮದ ಅಳಲನ್ನು, ಸಮಾಜದ ಹುಳುಕನ್ನು ಎತ್ತಿ ಹಿಡಿಯುತ್ತಾನೆ. ''ತುಪ್ಪದ ಸವಿಗೆ ಅಲಗನೆಕ್ಕುವ ಸೊಣಗನಂತೆ ಎನ್ನ ಬಾಳುವೆ'' ಎಂದು ಹೇಳಿದಾಗ, ''ಶೂಲದ ಮೇಲಣ ಭೋಗವೇನಾದರೇನೋ? ನಾನಾ ವರ್ಣದ ಸಂಸಾರ ಹಾವ-ಹಾವಾಡಿಗನ ಸ್ನೇಹದಂತೆ'', ''ಕಪ್ಪೆ ಸರ್ಪದ ನೆರಳಲ್ಲಿ ಇರ್ಪಂತೆ ಎನಗಾಯಿತ್ತಯ್ಯ'' ಎಂದಾಗ, ತನ್ನ ಮನೋಚಂಚಲತೆಯನ್ನು ತೋಡಿಕೊಳ್ಳುತ್ತ, ''ಮರನ ನೇರಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯುತ್ತಲಿದ್ದೇನೆ.'' ತನ್ನ ಚಿತ್ತ ಹತ್ತಿಯ ಹಣ್ಣಿನಂತೆ, ಅಂದಣವನೇರಿದ ಸೊಣಗನಂತೆ, ಕೆಸರಲ್ಲಿ ಬಿದ್ದ ಬಡಪಶುವಿನಂತೆ, ಎಂದು ಉಪಮೆಗಳ ಒಂದು ವಿಶ್ವವನ್ನೇ ಸೃಷ್ಟಿಸಿದಾಗ, "ಎನ್ನವರೊಲಿದು ಹೊನ್ನ ಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ, ಎನ್ನ ಹೊಗಳಿಕೆ ಎನ್ನ ಮೈಗೊಂಡಿತಲ್ಲಾ! ಅಯ್ಯೋ ನಿಮ್ಮ ಮನ್ನಣೆಯೇ ಮಸೆದಲಗಾಗಿ ತಾಗಿತ್ತಲ್ಲಾ..." ಎಂದು ರೂಪಕಗಳಲ್ಲೇ ತನ್ನ ಅಳಲನ್ನು ಬಯಲುಮಾಡುವಾಗ, ''ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣಿರೆ ಎನ್ನ ಮನ'' ಎಂದು ತನ್ನ ಮೌಢ್ಯವನ್ನು ತೋಡಿಕೊಳ್ಳುವಾಗ, ಸತ್‌ಶರಣರ ಸಂಗದ ಮಹತ್ವವನ್ನು ಸಾರುತ್ತ ಅವರ ಸಂಗ ಹುಸಿ ಮಾಡಿದರೆ ಏನುಮಾಡುತ್ತದೆ ಎಂಬುದಕ್ಕೆ ಒಂದು ಉಪಮಾಮಾಲೆಯನ್ನು ದಂಡೆಗಟ್ಟುತ್ತಾನೆ ಒಂದೇ ವಚನದಲ್ಲಿ.

"ಹಾವಿನ ಹೆಡೆಗಳ ಕೊಂಡು ಕೆನ್ನೆಯ<br>ತುರಿಸಿಕೊಂಡಂತೆ<br>ಉರಿವ ಕೊಳ್ಳಿಯ ಕೊಂಡು ಮಂಡೆಯ<br>ಸಿಕ್ಕಬಿಡಿಸುವಂತೆ<br>ಹುಲಿಯ ಮಿಾಸೆಯ ಹಿಡಿದುಕೊಂಡು<br>ಒಲಿದುಯ್ಯಲೆಯಾಡುವಂತೆ<br>ಕೂಡಲಸಂಗನ ಶರಣರೊಡನೆ ಮರೆದು<br>ಸರಸವನಾಡಿದರೆ<br>ಸುಣ್ಣದಕಲ್ಲ ಮಡಿಲಲ್ಲಿ ಕಟ್ಟಿಕೊಂಡು<br>ಮಡುವ ಬಿದ್ದಂತೆ"

ಈ ಕೊನೆಯ ಉಪಮೆಯ ಸಾರ್ಥಕತೆಯು ಗಮನೀಯ: ಸುಣ್ಣದಕಲ್ಲನ್ನು ಮಡಿಲಿನಲ್ಲಿ ಕಟ್ಟಿಕೊಂಡು ನೀರಿನೊಳಕ್ಕೆ ಹಾರಿದರೆ, ಸುಣ್ಣ ತಕಪಕನೆ ಕುದಿದು ಆತನಿಗಾಗುವ ಚಿತ್ರಹಿಂಸೆಯು ಮನೋವೇದ್ಯವಾಗುತ್ತದೆ. ಇಂಥ ನೂರಾರು ಸುಂದರ ಉಪಮೆಗಳ ಮೂಲಕ ತನ್ನ ಅನುಭವವನ್ನಾಗಲೀ ತತ್ತ್ವವನ್ನಾಗಲೀ ಎಲ್ಲರಿಗೂ ನೇರವಾಗಿ ಅರ್ಥವಾಗುವಂತೆ, ಬರೀವಚನಶಾಸ್ತ್ರವೆಂದು ಕರೆಯುವವರಿಗೆ, ಅಲ್ಲ; "ಇದು ವಚನ ಸಾಹಿತ್ಯ, ಇದರಲ್ಲಿ ಆನಂದ ಬರಿಸುವ ಅಂಶಗಳು ಹಲವಿವೆ" ಎಂದು ಎತ್ತಿಹಿಡಿಯಲು ಬಸವಣ್ಣನವರ ಉಪಮಾಲಂಕಾರಗಳೇ ಸಾಕು. ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು ತಮ್ಮ ವಚನಧರ್ಮಸಾರವೆಂಬ ಗ್ರಂಥದಲ್ಲಿ "ಉಪಮಾಕಾಳಿದಾಸಸ್ಯ" ಎಂದು ಸಂಸ್ಕೃತ ಸಾಹಿತ್ಯ ವಿಮರ್ಶಕರು ಹೇಳುವುದುಂಟಷ್ಟೆ. ಈ ಉಪಮಾಲಂಕಾರದ ಪ್ರಯೋಗಕ್ಕೆ ಕನ್ನಡ ಸಾಹಿತ್ಯದಲ್ಲಿ ಬಸವಣ್ಣನವರಿಗೆ ಪ್ರಥಮಸ್ಥಾನ ದೊರೆಯಬೇಕಾಗಿದೆ" ಎಂದಿರುವುದು ತುಂಬ ಯುಕ್ತವೆನ್ನಿಸುತ್ತದೆ. ಹಾಗೆಯೇ ಅವರ "ವಚನಗಳು ನಮ್ಮ ಕನ್ನಡ ಸಾಹಿತ್ಯದ ಉಪನಿಷತ್ತುಗಳು" ಎಂಬ ಹೇಳಿಕೆಯೂ ದಿಟ.

ಇಂಥ ಶರಣ ಸಾಹಿತ್ಯವನ್ನು ಪ್ರಕಾಶಿಸುತ್ತಾ, ಅದನ್ನು ಜನತೆಯಲ್ಲಿ ಪ್ರಚಾರ ಮಾಡುತ್ತ, 'ಶರಣ ಸಾಹಿತ್ಯ'ವೆಂಬ ಕನ್ನಡ ಮಾಸಪತ್ರಿಕೆಯ ಸಂಪಾದಕರಾಗಿಯೂ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿಯೂ ಇನ್ನು ಅನೇಕಾನೇಕ ಕಾರ್ಯ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರ ವಹಿಸಿ ನಡೆದುಬಂದು ತಮ್ಮ ಅರವತ್ತರಲ್ಲಿಯೂ ದೃಢವಾದ ಹೆಜ್ಜೆಗಳನ್ನಿಡುತ್ತ ಸಮಾಜದಲ್ಲಿ ಧರ್ಮ ಮತ್ತು ಸಾಹಿತ್ಯಗಳ ಪ್ರಸಾರಕ್ಕೆ ನಿರಂತರವಾಗಿ ಶ್ರಮಿಸುತ್ತಿರುವ ಕೀರ್ತನ ಕೇಸರಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಶಿವಶರಣಸಾಹಿತ್ಯವನ್ನು ಪ್ರತಿಯೊಬ್ಬ ಕನ್ನಡಿಗನಿಗೂ ತಿಳಿಯುವಂತೆ ಮಾತ್ರವಲ್ಲದೆ, ಭಾರತದ ಎಲ್ಲ ಜನತೆಗೆ, ಕೊನೆಗೆ ಪ್ರಪಂಚದ ಇತರ ಭಾಷೆಗಳನ್ನಾಡುವ ಜನತೆಯೂ ವಚನ ಸಾಹಿತ್ಯದ ಸಾರವನ್ನು ಹೀರಲನುವಾಗುವಂಥ ಪ್ರಚಾರಕ್ರಮವನ್ನು ಕೈಗೊಳ್ಳಲಿ. ಭಗವಂತ ಅವರಿಗೆ ಆಯುರಾರೋಗ್ಯಾದಿಗಳನ್ನು ದಯಪಾಲಿಸಲಿ ಎಂದು ಕಿರಿಯನಾದ ನನ್ನ ನಮ್ರ ಹಾರೈಕೆ.

ನಂ. ತಪಸ್ವಿಕುಮಾರ್



---

# ಕನ್ನಡ ಸಾಹಿತ್ಯದಲ್ಲಿ ಯುವಜನರ ಚೇತನ!
# ರಾಜಕಾರಣವು ಕೂಡಿ ನಡೆಯಲೂ ಸಾಧ್ಯವಿದೆ

"ಸಾಹಿತಿಗಳು ರಾಜಕಾರಣಿಗಳಾಗುವುದು ಸುಲಭ, ಆದರೆ ರಾಜಕಾರಣಿಗಳೆಲ್ಲಾ ಸಾಹಿತಿಗಳಾಗುವುದು ಸಾಧ್ಯವಿಲ್ಲ."

ಸಾಹಿತ್ಯಕ್ಕೂ ರಾಜಕಾರಣಕ್ಕೂ ಇರುವ ವ್ಯತ್ಯಾಸವನ್ನ ಮೇಲಿನ ಮಾತು ಬಹು ಸುಂದರವಾಗಿ ತಿಳಿಸುತ್ತದೆ. ದಿ| ಶ್ರೀ ಮುದವೀಡು ಕೃಷ್ಣರಾಯರು ಬರೆಹಗಾರರಾಗಿದ್ದೂ, ಕನ್ನಡದ ರಾಜಕೀಯದಲ್ಲಿ ದುಡಿದವರು. ಸಾಹಿತ್ಯದಲ್ಲಿ ಕೆಲವು ರಾಜಕಾರಣಿಗಳ ಚಂಚು ಪ್ರವೇಶವನ್ನು ಅವರು ತೀವ್ರವಾಗಿ ಖಂಡಿಸಿದರು.

ಲೇಖನಿಯ ಮೊನೆ ರಾಜ್ಯದ ಸಿಂಹಾಸನವನ್ನು ಚುಚ್ಚಿ ಉರುಳಿಸಿದ ಉದಾಹರಣೆ ಇದೆ. ಆದರೆ ರಾಜನ ಕತ್ತಿ ಸಾಹಿತ್ಯದ ನಾಮಾವಶೇಷ ಮಾಡಲು ಎಂದಿಗೂ ಸಾಧ್ಯವಾಗಿಲ್ಲ.

ಆದರೆ ನಮ್ಮ ಜನ ರಾಜಕಾರಣಿಗೆ ನೀಡುವ ಗೌರವವನ್ನು ಸಾಹಿತಿಗೆ ನೀಡುವುದಿಲ್ಲ. ಸಾಹಿತಿಯಿಂದ ಒಂದು ಚಿರಂಜೀವವಾದ ಕಾರ್ಯ ನಿರ್ವಹಿಸಲ್ಪಡುತ್ತದೆ. ಅವನ ಲೇಖನಿಯ ಪ್ರವಾಹವು ಕಾಲಾಂತರದವರೆಗೆ ಜನತೆಯ ಮನದಲ್ಲಿ ಸುಪ್ತಭಾವವನ್ನ ಕೆರಳಿಸುತ್ತ,ಅವನ ಕಾರ್ಯಕ್ಕೆ ಪ್ರಚೋದನೆ ನೀಡಬಲ್ಲುದು. ರಾಜಕಾರಣಿಯಾದರೋ ಅವನ ದೇಹದಲ್ಲಿ ಜೀವವಿರುವಷ್ಟು ಕಾಲ ಜನಪ್ರಿಯತೆ ಪಡೆಯಬಹುದು. ಅವನ ಮರಣದ ನಂತರವೂ ಕೆಲಕಾಲ ಅವನ ಹೆಸರು ವೀರಗಾಥೆಯಾಗಬಹುದು. ಆದರೆ ಜನಜೀವನದ ದಿಕ್ಕು ದಿನದಿನವೂ ಬದಲಾಗುತ್ತಿರುವ ಸಂದಿಗ್ಧದಲ್ಲಿ ರಾಜಕಾರಣಿಯ ಅಂದಿನ ಧೋರಣೆ ಇಂದು ಮಕ್ಕಳಾಟಿಕೆಯಾಗಿ ತೋರುವುದೂ ಇಲ್ಲದಿಲ್ಲ.

ನಾವು ಕ್ರಿಸ್ತ ಪೂರ್ವದಲ್ಲೂ ಇದ್ದ ಸಾಹಿತ್ಯಗಳ ಬಗ್ಗೆ ತೋರುವ ಆಸಕ್ತಿ, ಅವರ ಬರೆಹಗಳ ಬಗ್ಗೆ ನೀಡುವ ಗೌರವ, ಅವರ ಲೇಖನಿಯ ಹಿಡಿತದ ಬಗ್ಗೆ ಸಂಶೋಧಿಸಲು ತೋರುವ ತವಕವನ್ನೇ ಒಬ್ಬ ರಾಜಕಾರಣಿಯ ಜೀವನದ ವಿಮರ್ಶೆಯಲ್ಲಿ ತೋರುವುದಿಲ್ಲ.

ಸದ್ಯದ ಪರಿಸ್ಥಿತಿಯಲ್ಲಿ ಕನ್ನಡ ಸಾಹಿತ್ಯದ ಪ್ರಗತಿ ಪಥವು ತಡೆದು ನಿಂತಿದೆಯೋ ಎಂದು ಭಾಸವಾಗುತ್ತದೆ. ಉಳಿದ ಭಾರತೀಯ ಭಾಷೆಗಳವರಲ್ಲಿರುವ ಉತ್ಸಾಹ ಕನ್ನಡದಲ್ಲಿ ಹ್ರಸ್ವವಾದಂತಿದೆ. ಕನ್ನಡ ನಾಡಿನಲ್ಲಿ ದಿನ-ದಿನಕ್ಕೆ ಲೇಖಕರ ಸಂಖ್ಯೆ ಹೆಚ್ಚುತ್ತಿದೆ. ಆಧುನಿಕ ವಿಜ್ಞಾನದ ವಿಶಾಲ ಅನುಭವದೊಂದಿಗೆ, ತಜ್ಞ ವಿವೇಚನೆಯೊಂದಿಗೆ ನಮ್ಮ ಎಳೆಯ ತರುಣರು ಸ್ಫೂರ್ತಿಯುತರಾಗಿ ತಮ್ಮ ಸಾಹಿತ್ಯವನ್ನು ರಚಿಸುತ್ತಿರುವುದು ಆಶಾದಾಯಕವಾಗಿದೆ. ನಮ್ಮ ಎಳೆಯ ವರ್ಗದ ಸಾಹಿತ್ಯವು ಚೇತೋಹಾರಿಯಾಗಿದೆ. ಒಂದು ಹೊಸ ವೈಶಿಷ್ಟದ ಜಾಡನ್ನ ತುಳಿದಿದೆ ಎಂಬುದನ್ನು ನಾವು ಒಪ್ಪಲೇಬೇಕು-

ಇಂತಹ ಪರಿಸ್ಥಿತಿ ಈಗ ಐದು-ಹತ್ತು ವರ್ಷಗಳ ಹಿಂದೆ ಇರಲಿಲ್ಲ. ಸಾಹಿತ್ಯವು ಕೇವಲ ಕೆಲವೊಂದು ಮಂದಿಗೆ ದೊರೆತ ವರಪ್ರಧಾನ. ಅದಕ್ಕೆ ವಿಶೇಷ ಜ್ಞಾನಬೇಕು, ಅನುಭವಬೇಕು.

ಸತತ ಅಭ್ಯಾಸವಿರಬೇಕು ಎಂದು ಕೆಲವರು ಅದರ ಬಗ್ಗೆ ಪ್ರಯತ್ನದ ಆಸಕ್ತಿಯನ್ನೇ ತೋರಲಿಲ್ಲ. ಇನ್ನು ಕೆಲವರು ಕಥೆ ಬರೆಯುವುದಕ್ಕಾಗಿಯೇ ಕಥೆ ಬರೆದರು. ಅವರು ಅಭ್ಯಾಸ, ಅನುಭವ ಅಥವಾ ತಿಳುವಳಿಕೆಯ ಗೊಡವೆಗೆ ಹೋಗದೆ ಕೇವಲ 'ಕೀರ್ತಿಯ ಬಿಸಿಲ್ಗುದುರೆ'ಯನ್ನೇರಲೇ ಆಶಿಸಿದರು. ಇದರಿಂದ ಸಾಹಿತ್ಯವೇನೋ ಬೆಳೆಯಿತು. ಸಾಹಿತ್ಯದ ರಾಶಿಯೇ ಬೆಟ್ಟದಷ್ಟೇರಿತು. ಆದರೆ ಆದರೆ ಅದು ರಸವಾಹಿನಿಯಾಗದೆ ನೀರಸ ಕೊಳಚೆಯೇ ಹೆಚ್ಚಾಗಿ ಹರಿಯುವಂತಾಯಿತು.

ಸಾಹಿತ್ಯವೂ ಮನುಷ್ಯನ ಸುಪ್ತಶಕ್ತಿಗೆ ದೇವರು ನೀಡುವ ಒಂದು ವರವೆಂಬುದು ನಿಜವಾದರೂ, ಅದು ಜನ್ಮಾಂತರ ಪ್ರಕೃತಿ ವಿಶೇಷವಾಗಿರದೆ ಸತತ ಅಭ್ಯಾಸ, ಅನುಭವದ ಪ್ರೇರಣೆಯ ಬಗ್ಗೆ ಉತ್ಸಾಹ ಹಾಗೂ ತಿಳುವಳಿಕೆಯ ಆಸಕ್ತಿ ಇದ್ದವರಿಗೆಲ್ಲಾ ಸಾಧಿಸಿಕೊಳ್ಳಲು ಸಾಧ್ಯವಿದೆ ಎಂದು ಹೇಳಬಹುದು. ಐದು ವರ್ಷಗಳ ಬಳಿಕ ಇತ್ತೀಚೆಗೆ ನಮ್ಮ ಸಾಹಿತ್ಯದಲ್ಲಿ ಒಂದು ಹೊಸ ಚೇತನ ಮೂಡಿದಂತೆ ಕಾಣುತ್ತದೆ. ಈ ಚೇತನವು ಪ್ರವಹಿಸಲು ಕಾರಣ ಹಿರಿಯ ಸ್ಥಾಪಕ ಹಿತಾಶಕ್ತಿಯುಳ್ಳ ಲೇಖಕರಾಗಿರದೆ, ಎಳೆಯ ತರುಣ ವರ್ಗದವರೇ ಎಂದು ನಿರ್ವಿವಾದವಾಗಿ ಹೇಳಬಹುದು.

ಈಗ ಸಾಹಿತ್ಯರಂಗದಲ್ಲಿ ತೋರಿಬರುತ್ತಿರುವ ಹೊಸ ಹೆಸರುಗಳಲ್ಲಿ ಹೆಚ್ಚಿನವರು ಕಾಲೇಜಿನ ವಿದ್ಯಾರ್ಥಿಗಳು, ಮಧ್ಯಮ ತರಗತಿಯ ವಿದ್ಯಾವಂತ ನೌಕರರು, ಉಪಾಧ್ಯಾಯರೂ ಆಗಿದ್ದಾರೆ. ಅವರ ವಿಷಯ ಸಂಗ್ರಹದಲ್ಲಿ ನಾವಿನ್ಯತೆಯಿದೆ; ಜೀವನವನ್ನ ವಿಶ್ಲೇಷಿಸುವಲ್ಲಿ ಒಂದು ಹೊಸ ಮಾರ್ಗವಿದೆ. ಹೀಗಾಗಿ ಕೆಲವು ಸಮಯಗಳಿಂದ ಬಡವಾಗಿದ್ದ ಕನ್ನಡ ಸಾಹಿತ್ಯ ರಸಪುಷ್ಟಿಯದಾಗಿದೆ.

ಆದರೆ ಇದು ಅವ್ಯಾಹತವಾಗಿ ಕೇವಲ ಈ ಎಳೆಯರ ಉತ್ಸಾಹವೇ ಕೊನೆಯತನಕ ಮುಂದರಿಯುವಂತಿಲ್ಲ. ಅವರ ಉತ್ಸಾಹಕ್ಕೆ ಹಿರಿಸಾಹಿತಿಗಳು, ಅನುಕೂಲವಂತರ, ಕನ್ನಡ ಅಸಂಖ್ಯಾತ ಓದುಗರ ನೆರವೂ ಅಗತ್ಯ.

ಇಂದು ಎಳೆಯ ಸಾಹಿತಿಗಳ ಉತ್ಸಾಹವನ್ನ ಎರಡು ವಿಧದಲ್ಲಿ ಅದುಮಿ ಹಿಡಿಯುತ್ತಾರೆ.

ಒಬ್ಬ ಉತ್ಸಾಹಿ ಯುವಕ ಸಾಹಿತಿ ಅದಷ್ಟೇ ಒಳ್ಳೆಯ ವೈಚಾರಿಕ ಕಾದಂಬರಿ ಬರೆದರೂ, ಅದನ್ನು 'ಮಾರ್ಕೆಟ್'ನಲ್ಲಿ ಕೇಳುವವರಿಲ್ಲ. ಇಂದು ಕನ್ನಡದ ಹೆಚ್ಚಿನ ಓದುಗರು ಕನ್ನಡದ ಕೆಲವೇ ಅಗ್ರಮಾನ್ಯ ಸಾಹಿತಿಗಳ ಪುಸ್ತಕಕ್ಕೇ ಪ್ರಥಮ ಪ್ರಾಶಸ್ತ್ಯ ಕೊಡುತ್ತಾರೆ. ಒಬ್ಬ ಹೊಸಬ ಎಷ್ಟೇ ಉತ್ತಮವಾಗಿ ಬರೆದರೂ ಅವನಿಗೆ ಬೆಲೆಯಿಲ್ಲ. ಹೀಗಾಗಿ ಪ್ರಕಾಶಕರು ಮತ್ತೂ ಮತ್ತೂ ಈ ಹಳಬರ ಚರ್ವಿತ ಚರ್ವಣ ಕಾದಂಬರಿಗೇ ಜೋತು ಬೀಳುತ್ತಾರೆ. ಇಂದು ಹಿರಿಯ ಸಾಹಿತಿಗಳೆನಿಸಿದ ಹೆಚ್ಚಿನವರ ಲೇಖನಿ ಮೊಂಡಾಗಿದೆ. ಹಣಕ್ಕಾಗಿ ಪ್ರಕಾಶಕರ ಒತ್ತಾಯಕ್ಕಾಗಿ ಕಗ್ಗದ ಕಾದಂಬರಿ ಬರೆಯುವವರೇ ಎಲ್ಲಕಡೆ ನೋಡಬಹುದಾಗಿದೆ. ವೈವಿಧ್ಯತೆ, ವೈಶಿಷ್ಟ್ಯತೆ ಇಲ್ಲದೆ ಜನರ ಕೀಳು ಅಭಿರುಚಿಯ ಲೇಪನದಿಂದ ಹರುಕು ದಂಬೂಕನ್ನ ಜನತೆಗೆ ನೀಡುವ ಅನ್ಯಾಯ ಕೆಲ ಹಿರಿಸಾಹಿತಿಗಳಿಂದ ನಡೆದಿದೆ. ನಮ್ಮ ಜನ ಸಾಹಿತ್ಯದ ಬಗ್ಗೆ ಉತ್ಸಾಹ ತೋರುವಂತೆಯೇ ಹೊಸತಿಗಾಗಿ, ಹೊಸ ಬರೆಹಗಾರರಿಗಾಗಿಯೂ ಸಹಾನುಭೂತಿ ತೋರಬೇಕು.

ಎರಡನೆಯದಾಗಿ, ನಮ್ಮ ಸಾಹಿತ್ಯಕ್ಕೆ ಸರಕಾರದ ಪ್ರೋತ್ಸಾಹವಿಲ್ಲ. ನಮ್ಮ ಭಾರತದ ಇತರ ಭಾಷಾ ಸಾಹಿತ್ಯಗಳ ಬಗ್ಗೆ ಆಯಾ ಸರಕಾರವು ತೋರುವ ಆಸಕ್ತಿಯನ್ನ ನಮ್ಮ ಕನ್ನಡದ ಸರಕಾರ ತೋರದಿರುವುದು ದುರ್ದೈವವಲ್ಲದೆ ಮತ್ತೇನು? ಇಂದು ಕನ್ನಡ ಸಾಹಿತ್ಯದಲ್ಲಿ ವೈವಿಧ್ಯತೆ ಹಾಗೂ ನಾವೀನ್ಯತೆ ಹೆಚ್ಚಬೇಕೆಂದು ಬಯಸುವ ನಾವು ಹಾಗೂ ನಮ್ಮ ಸರಕಾರ ಅಂತಹ ನಿರ್ಮಾಣಕ್ಕೆ ಯಾವ ರೀತಿಯ ಪ್ರಚೋದನೆ ನೀಡಿದ್ದಾರೆ?

ಇಂದು ಕನ್ನಡ ಸಾಹಿತ್ಯದಲ್ಲಿ ಪಾರಿಭಾಷಿಕ ಶಬ್ದಕೋಶವಿಲ್ಲ; ವಿಶ್ವಕೋಶವಿಲ್ಲ: ಕನ್ನಡ ಸಾಹಿತ್ಯದ ಬಗ್ಗೆ ಅಧಿಕೃತ, ವೈಚಾರಿಕ ಗ್ರಂಥಗಳ ನಿರಂತರ ಪ್ರಕಟಣೆಗಳಿಲ್ಲ. ಸರಕಾರವು ಒಳ್ಳೆಯ ಕನ್ನಡ ಸಾಹಿತ್ಯಕ್ಕಾಗಿ ಬಹುಮಾನದ ನಾಟಕಗಳನ್ನೇನೋ ಆಗಾಗ್ಗೆ ಮಾಡುತ್ತಿದ್ದರೂ, ಕನ್ನಡದ ಲೇಖಕನ ನೆಮ್ಮದಿಗಾಗಿ ಒಂದು ವ್ಯಾಪಕ ಮಟ್ಟದ ಕಾರ್ಯವನ್ನ ಕೈಗೊಂಡದ್ದು ಕಾಣುವುದಿಲ್ಲ.

ಸಾಹಿತ್ಯದಲ್ಲಿ ರಾಜಕಾರಣವು ತನ್ನ ಕಾಯಕ ನಡೆಸುವ ಒಂದು ಪ್ರವೃತ್ತಿ ಎಲ್ಲ ಭಾಷೆಗಳಂತೆ ಕನ್ನಡದಲ್ಲೂ ಇದೆ. ಕನ್ನಡದ ಪ್ರಕಾಶನಗಳು ಹೆಚ್ಚಿನವು ಸ್ವತಂತ್ರವಾಗಿದ್ದರೂ ಈ ಪ್ರಕಾಶನಗಳ ಬೆಳವಣಿಗೆಯು ಅಂತಿಮವಾಗಿ ರಾಜಕಾರಣಿಗಳ ಕೃಪಾಶ್ರಯದಲ್ಲೇ ಸೀಮಿತವಾಗಿರುವುದರಿಂದ ಸ್ವತಂತ್ರ ಪ್ರಕಾಶನ ಸಂಸ್ಥೆಗಳಾದರೂ ತಮ್ಮ ಉದ್ಧಾರವನ್ನ ತಮ್ಮಷ್ಟಕ್ಕೆ ನಿರೂಪಿಸಲು ಅಶಕ್ತವಾಗಿವೆ.

ಇಂದು ಕನ್ನಡ ಸಾಹಿತ್ಯ ಪರಿಷತ್ತು ಇದೆ. ಇದು ನಿಜವಾಗಿಯೂ ಕನ್ನಡದ ಅಭಿಮಾನದ ಆಸ್ತಿ. ಈ ಸರಸ್ವತಿಯ ಕೇಂದ್ರವು ಬಿ. ಎಂ. ಶ್ರೀನಾಸ್ತಿಯವರ ಪಾವಿತ್ರ್ಯ ಬೆವರಿನಿಂದ ಬೆಳೆದ ಸಂಸ್ಥೆ. ಇದು ಹುಚ್ಚು ಉತ್ಸಾಹದ, ಅನನುಭವ ಸ್ಫೂರ್ತಿಯ, ಜವಾಬ್ದಾರಿ ಇಲ್ಲದ ಭಾವುಕರ ಕೈಗೆ ಸಿಕ್ಕಿದ್ದೇ ಆಗಿದ್ದರೆ ಇಲ್ಲಿರುವ ಪುಸ್ತಕಗಳು, ಮೇಜು ಕುರ್ಚಿಗಳು ಎಂದೋ ಮಾಯವಾಗಿ ಬಿಡುತ್ತಿತ್ತೋ ಏನೋ? ಆದ್ದರಿಂದಲೇ ಟೀಕೆ ಮಾಡಿ ದೂರ ನಿಂತವರು ನಿಜವಾಗಿಯೂ ಕನ್ನಡ ಸಾಹಿತ್ಯದ ಬಗ್ಗೆ ದುಡಿಯಬಲ್ಲವರಲ್ಲ ಎಂಬುದು ಜನರಿಗೆ ತಿಳಿದುದರಿಂದಲೇ ಸಾಹಿತ್ಯ ಪರಿಷತ್ತು ಈವರೆಗೂ ಉಳಿದಿದೆ. ಸಾಹಿತ್ಯ ಪರಿಷತ್ತಿನ ಉಚ್ಛ್ರಾಯ ಸ್ಥಿತಿಯನ್ನಾಶಿಸುವ ಮಂದಿ ಮೊದಲು ಅದಕ್ಕೆ ಜನರ ನೆರವನ್ನ ಯಾವ ರೀತಿ ಪಡೆಯಲು ಸಾಧ್ಯವಿದೆ ಎಂದು ಯೋಚಿಸಬೇಕು. ನಿರಂತರ ಟೀಕೆಯಿಂದ ಪರಿಶುದ್ಧ ಮಾಡಲು ಯಾರಿಗೂ ಸಾಧ್ಯವಿಲ್ಲ. ಟೀಕೆಯು ವಿಧಾಯಕವಾಗಿರಬೇಕೇ ಹೊರತು ವಿಘಾತುಕವೂ, ವ್ಯಕ್ತಿದ್ವೇಷಪೂರಿತವೂ ಸ್ವಾರ್ಥಸಾಧಕವೂ ಆಗಬಾರದು.

ಇಂದು ರಾಜಕಾರಣವು ಸಾಹಿತ್ಯವನ್ನ ಅಡ್ಡದಾರಿಗೆ ತಿರುಗಿಸುತ್ತಿದೆ ಎಂಬ ಅಪರೋಕ್ಷ ಟೀಕೆ ಕೇಳಿಬರುತ್ತಿದೆ. ರಾಜಕಾರಣದ ಲಾಭವನ್ನ ಪಡಕೊಂಡು ಸಾಹಿತ್ಯವನ್ನ ಪರಿಪೋಷಿಸಿದರೆ ಅದು ಅನ್ಯಾಯವಲ್ಲ. ರಾಜಕಾರಣಿಗಳು ಸಾಹಿತಿಗಳ ಸ್ಥಾನದಲ್ಲಿ ನಿಂತು ನಿರ್ದೇಶಿಸಿದರೆ ಮಾತ್ರ ತಪ್ಪಾಗುತ್ತದೆ. ಇಂದು ಸಾಹಿತ್ಯದ ಬಗ್ಗೆ ಪ್ರೋತ್ಸಾಹದ ಮಾತನಾಡುವ ರಾಜಕಾರಣಿಗಳು ತಮ್ಮ ಪ್ರಭಾವವನ್ನ ಬೆಳೆಸಲು ಯತ್ನಿಸುತ್ತಿದ್ದರೂ, ಕನ್ನಡ ಸಾಹಿತ್ಯ ಪರಿಷತ್ತು ಅಂತಹ ಮನೋಭಾವದ ಪ್ರವಾಹಕ್ಕೆ ಅಡ್ಡಗೋಡೆಯಾಗಿದೆ ಎಂಬುದನ್ನ ಒಪ್ಪಲೇಬೇಕು.

ಆದರೆ ಇಂದು ಸಾಹಿತಿಗಳ ನಿಜವಾದ ಯೋಗ್ಯತೆಯನ್ನ ಜನತೆಗೆ ತಿಳಿಹೇಳಬಲ್ಲ ಪತ್ರಿಕೆಗಳು ಬಂಡವಲಶಾಹಿಗಳ ರಾಜಕಾರಣಿಗಳ ಕೈಗೊಂಬೆಗಳಾಗಿರುವುದರಿಂದ ಅದು ದೊಡ್ಡ ಆತಂಕವಾಗಿದೆ. ಯಾವುದೇ ಲೇಖಕನ ಪ್ರಬುದ್ಧಮಾನ ಪರಿಚಯ ನೀಡುವ ಹಾಗೂ ಪ್ರಸರಿಸುವ ಶಕ್ತಿ ಪತ್ರಿಕೆಗಳಿಗಿವೆ. ಕನ್ನಡದ ಕೆಲವೇ ಪ್ರಖ್ಯಾತ ಪತ್ರಿಕೆಗಳು ಸ್ವತಂತ್ರ ಮನೋಭಾವದವುಗಳಾಗಿರದೆ ಒಂದಲ್ಲ ಒಂದು ಪ್ರಬಲ ಶಕ್ತಿಯ ಹಿನ್ನೆಲೆಯ ಪೋಷಕ ವಾಣಿಗಳಾಗಿವೆ. ಇದು ಸಾಹಿಗಳಿಗೆ ಬಂದಿರುವ ತೊಂದರೆ.

ಆದರೂ ಕನ್ನಡ ಸಾಹಿತ್ಯದ ರಸಪ್ರವಾಹ ಹರಿದಿದೆ. ಕೆಲವೊಂದು ಹಿರಿಯ ಅನುಭವಿಗಳ ಪ್ರೇರಣೆಯಿಂದ ಕನ್ನಡದ ಯುವಜನ ಲೇಖಕರು ಉತ್ಸಾಹಿತರಾಗಿ ಮುಂದರಿಯುತ್ತಿದ್ದಾರೆ. ಈ ಮುನ್ನಡೆಯು ಅವ್ಯಾಹತವಾಗಿ ಸಾಗುವಂತೆ ರಾಜಕಾರಣಿಗಳು ಬೆಂಬಲ ನೀಡಬಹುದಾಗಿದೆ. ರಾಜಕಾರಣಿಗಳು ಸಾಹಿತಿಗಳಿಗೆ ಸೂತ್ರ ಕಟ್ಟಿ ಮುಂದಕ್ಕೆ ಎಳಕೊಂಡು ಹೋಗುವವರಾಗದೆ, ಹಿನ್ನೆಲೆ ನಿಂತು ಅವರ ದಣಿವಿಗೆ ಯೋಗ್ಯ ಪಡಿನೆಳಲನ್ನು ನೀಡುವಂತವರಾಗಬೇಕು.

ಎನ್. ನಾರಾಯಣ ಬಲ್ಲಾಳ

---



# ಪತ್ರಿಕೋದ್ಯಮ

ಇಂದು ಜಗತ್ತಿನ ಉದ್ಯಮಗಳಲ್ಲಿ ಪತ್ರಿಕೋದ್ಯಮ ಒಂದು ಪ್ರಾಮುಖ್ಯ ಸ್ಥಾನವನ್ನು ಗಳಿಸಿದೆ. ಯಾವುದೇ ಒಂದು ಪ್ರಶ್ನೆಯ ಮೇಲೆ ಅದು ರಾಜಕೀಯವಾಗಿರಲಿ, ಧಾರ್ಮಿಕವಾಗಿರಲಿ, ಸಾಮಾಜಿಕವಾಗಿರಲಿ, ಸಾಂಸ್ಕೃತಿಕವಾಗಿರಲಿ ಜನತೆಯ ಬೇಡಿಕೆಗಳನ್ನು ಹಾಗೂ ಅಭಿಪ್ರಾಯಗಳನ್ನು ಪ್ರತಿಬಿಂಬಿಸುವ ಮತ್ತು ಇದೇ ಪ್ರಶ್ನೆಯನ್ನು ಕುರಿತು ಸಂಸ್ಥೆಗಳ ಮತ್ತು ಸರ್ಕಾರಗಳ ಕಾರ್ಯಕ್ರಮಗಳನ್ನು ಹಾಗೂ ನಿರ್ಧಾರಗಳನ್ನು ಜನತೆಗೆ ತಿಳಿಯಪಡಿಸುವ ಮತ್ತು ದಿನಚರಿಯ ಮುಖ್ಯ ಘಟನೆಗಳನ್ನು ಪ್ರಸಿದ್ಧಪಡಿಸುವ ಸಂಸ್ಥೆಯೇ ಪತ್ರಿಕೋದ್ಯಮ. ಈ ಕಾರಣದಿಂದಲೇ ಪತ್ರಿಕೋದ್ಯಮ ಪ್ರಜೆಗಳ ಮೇಲೂ, ಸಂಸ್ಥೆಗಳ ಮೇಲೂ, ಸರಕಾರಗಳ ಮೇಲೂ ವ್ಯಾಪಕವಾದ ಪ್ರಭಾವವನ್ನು ಹೊಂದಿದೆ. ಪತ್ರಿಕೋದ್ಯಮಕ್ಕೆ "ನಾಲ್ಕನೆ ಆಸ್ತಿ" ಎಂಬ ಅಭಿದಾನ ಯುಕ್ತವಾಗಿಯೇ ಸಂದಿದೆ.

ಹಿಂದೆ ಒಮ್ಮೆ ನೆಪೋಲಿಯನ್ ಬೋನೋಪಾರ್ಟನು ತನ್ನನ್ನು ನೋಡಲು ಕೆಲವರು ಪತ್ರಿಕೋದ್ಯಮಿಗಳು ಬಂದಾಗ "ಸಾವಿರ ಈಟಿಗಳನ್ನು ನಾನು ಎದುರಿಸಬಲ್ಲೆ ಆದರೆ ಒಬ್ಬ ಪತ್ರಿಕೋದ್ಯಮಿಯನ್ನು ನಾನು ಎದುರಿಸಲಾರೆ!" ಎಂದು ಉದ್ಗಾರ ತೆಗೆದನಂತೆ!

ಕಳೆದ ಮಹಾಯುದ್ಧದ ಸಮಯದಲ್ಲಿ ಜಗದ್ವಿಖ್ಯಾತ ದಿವಂಗತ ಸರ್ ವಿನ್‌ಸ್ಟನ್ ಚರ್ಚಿಲನು ಅಮೆರಿಕೆಗೆ ಹೋದಾಗ್ಗೆ ಪತ್ರಿಕಾ ಸಮ್ಮೆಳನದಲ್ಲಿ ಪತ್ರಿಕೋದ್ಯಮಿಗಳನ್ನು "ಅಮೆರಿಕಾ ದೇಶದ ತೋಳಗಳು" ಎಂದು ಸರಸವಾಗಿ ಸಂಬೋಧಿಸಿ ಅವರ ಒಲವನ್ನು ಸಂಪಾದಿಸಿಕೊಂಡನಂತೆ!

ಪತ್ರಿಕೋದ್ಯಮದ ಹಿರಿಮೆಯನ್ನು ಕುರಿತು ಜೇಮ್ಸ್ ಮಾಂಟ್ಗೋಮರಿ ಎಂಬ ಕವಿ ಒಂದು ಸುಂದರ ಕವಿತೆಯನ್ನು ಕಟ್ಟಿ ಹೀಗೆ ಹಾಡಿದ್ದಾನೆ "The press !—What is the press ?" I cried; When thus a wondrous voice replied : 'In me all human knowledge dwells; The oracle of oracles, Past, present and future, I reveal, Or in obliviou's silence seal; What I preserve can perish never, What I forego is lost for ever' "—"ಪ್ರೆಸ್ ಪ್ರೆಸ್ ಅಂದರೇನು? ಎಂದು ನಾನು ಪ್ರಶ್ನಿಸಿದೆ. ಆಗ ಅದ್ಭುತ ಧ್ವನಿಯೊಂದು ಹೀಗೆ ಉತ್ತರ ಕೊಟ್ಟಿತು :—"ಮಾನವನ ಎಲ್ಲ ಜ್ಞಾನಕೋಶವು ನನ್ನಲ್ಲಿ ಅಡಗಿದೆ. ನಾನು ಭವಿಷ್ಯವಾಣಿಗಳ ಭವಿಷ್ಯವಾಣಿ. ಹಿಂದೆ ನಡೆದ, ಇಂದು ನಡೆಯುತ್ತಿರುವ, ಮುಂದೆ ನಡೆಯಬಹುದಾದ ಘಟನೆಗಳನ್ನು ಪ್ರಕಟಿಸುತ್ತೇನೆ; ಇಲ್ಲವೇ ಮರವೆಯ ಮೌನದಲ್ಲಿ ಅವುಗಳನ್ನು ಮುಚ್ಚಿಡುತ್ತೇನೆ. ನಾನು ಯಾವದನ್ನು ಪ್ರಕಟಿಸುತ್ತೇನೊ ಅದು ಶಾಶ್ವತ. ನಾನು ಯಾವುದನ್ನು ಪ್ರಕಟಿಸುವುದಿಲ್ಲವೋ ಅದು ಅಶಾಶ್ವತ."

'ನಾಲ್ಕನೆಯ ಆಸ್ತಿ' ಎಂಬ ಬಿರುದನ್ನು ಪಡೆದಿರುವ ಪತ್ರಿಕೋದ್ಯಮದ ಪ್ರಶಂಸೆಯನ್ನು ವಿಲಿಯಂ ಮೇಕ್ ಪೀಸ್ ಥೇಕರೆ ಎಂಬ ಕವಿ ಹೀಗೆ ವರ್ಣಿಸಿದ್ದಾನೆ. 'Of the corporation of the goose quill of the press

of the fourth estate-there she is the great engine-she never sleeps—She has her ambassadors in every quarter of the world—her courtiers upon every road. Her officers march along with armies, and her envoys walk into stalesmen's cabinets. They are ubiquitous."— "ಲೇಖಕರ ಸಂಸ್ಥೆಯಾಗಿ, ನಾಲ್ಕನೆಯ ಆಸ್ತಿಯೆನಿಸಿದ ಪ್ರೆಸ್ಸಿನ ವಿಚಾರ ಹೇಳುವುದಾದರೆ ಅದು ನಿಮ್ಮ ಮುಂದೆಯೇ ಪ್ರತ್ಯಕ್ಷವಾಗಿ ನಿಂತಿದೆ. ಅದೊಂದು ಭಾರಿ ಯಂತ್ರ. ಅದಕ್ಕೆ ವಿಶ್ರಾಂತಿಯೇ ಇಲ್ಲ. ಅದು ತನ್ನ ರಾಯಭಾರಿಗಳನ್ನು ಪ್ರಪಂಚದ ಎಲ್ಲ ಕಡೆಗಳಲ್ಲಿಯೂ ನೇಮಿಸಿದೆ. ತನ್ನ ಪರಿವಾರವನ್ನು ಪ್ರತಿ ರಸ್ತೆಯಲ್ಲಿಯೂ ಹೊಂದಿದೆ. ಅದರ ಅಧಿಕಾರಿಗಳು ಸೈನ್ಯಗಳ ಜೊತೆಯಲ್ಲಿ ಸಂಚರಿಸುತ್ತಾರೆ. ಅದರ ಪ್ರತಿನಿಧಿಗಳು ರಾಜಕಾರಣಿಗಳ ಸಮಾಲೋಚನಾ ಮಂದಿರಗಳನ್ನು ಪ್ರವೇಶಿಸುತ್ತಾರೆ. ಈ ರೀತಿಯಾಗಿ ಅದರ ಸಿಬ್ಬಂದಿಯವರು ಎಲ್ಲೆಲ್ಲಿಯೂ ಪ್ರತ್ಯಕ್ಷರಾಗಿದ್ದಾರೆ."

ಪತ್ರಿಕೋದ್ಯಮದ ಮುಖ್ಯ ವಸ್ತುವಾದ "ವಾರ್ತೆ" (news) ಎಂಥ ಮಾಯಾಜಾಲದ ಪದವಾಗಿದೆಯೆಂಬುದನ್ನು ಥಾಮಸ್ ಡಿಕ್ವಿನ್ಸ್ ಎಂಬ ಸುಪ್ರಸಿದ್ಧ ಸಾಹಿತಿ ಈ ರೀತಿ ಸ್ವಾರಸ್ಯವಾಗಿ ನುಡಿದಿದ್ದಾನೆ:—"Mails from the North—the East—the West—the South—Whence,according to some curious etymologists, comes the magical word NEWS." "ಉತ್ತರ ದಿಕ್ಕಿನಿಂದ, ಪೂರ್ವ ದಿಕ್ಕಿನಿಂದ, ಪಶ್ಚಿಮ ದಿಕ್ಕಿನಿಂದ, ದಕ್ಷಿಣ ದಿಕ್ಕಿನಿಂದ — ಹೀಗೆ ನಾಲ್ಕು ದಿಕ್ಕುಗಳಿಂದಲೂ ಸುದ್ದಿಗಳು ಬರುವುದರಿಂದ ಆ ನಾಲ್ಕು ದಿಕ್ಕುಗಳ ನಾಮವಾದ 'North—East—West—South' ಎಂಬ ನಾಲ್ಕು ಪದಗಳ ಮೊದಲನೆಯ 'N—E—W—S' ಅಕ್ಷರಗಳು ಸೇರಿ 'News' ಎಂಬ ನಾಲ್ಕು ಪದಗಳ ಹುಟ್ಟಿಕೊಂಡಿತೆಂದು ಕೆಲವರು ಕುತೂಹಲಿ ವ್ಯುತ್ಪತ್ತಿಶಾಸ್ತ್ರಜ್ಞರೂ ಹೇಳುತ್ತಾರೆ."

ವೃತ್ತ ಪತ್ರಿಕೆಗಳ ಆವಶ್ಯಕತೆ ಎಷ್ಟೆಂಬುದನ್ನು ಖ್ಯಾತರಾಜಕಾರಿಣಿ ಥಾಮಸ್ ಜೆಫರ್ ಸನ್ ಹೀಗೆ ಮನಮುಟ್ಟುವಂತೆ ನಿರೂಪಿಸಿದ್ದಾನೆ:— "Were it left to me to decide whether we should have a government without newspapers or newspapers without a government, I should not hesitate to prepaer the latter; but I should mean that every man to receive these newspapers be capable of reading them." ನಮಗೆ ವೃತ್ತಪತ್ರಿಕೆಗಳಿಲ್ಲದ ಸರ್ಕಾರ ಬೇಕೆ ಅಥವಾ ಸರ್ಕಾರವಿಲ್ಲದ ವೃತ್ತಪತ್ರಿಕೆಗಳು ಬೇಕೆ ಎಂಬ ಬಗ್ಗೆ ತೀರ್ಮಾನ ಕೈಕೊಳ್ಳುವುದನ್ನು ನನಗೆ ಬಿಡುವುದಾದರೆ ಇವೆರಡರಲ್ಲಿ ಎರಡನೆಯದೇ ಬೇಕೆಂದು ಹೇಳಲು ನಾನು ಹಿಂಜರಿಯುವುದಿಲ್ಲ. ಆದರೆ ನಾನು ಇಲ್ಲಿ ಅರ್ಥೈಸಬೇಕಾದುದೇನೆಂದರೆ, ವೃತ್ತಪತ್ರಿಕೆಗಳನ್ನು ತರಿಸುವ ಪ್ರತಿಯೊಬ್ಬನೂ ಅವುಗಳನ್ನು ಓದುವ ಸಾಮರ್ಥ್ಯವುಳ್ಳವನಾಗಬೇಕು.'

ಪತ್ರಿಕೋದ್ಯಮದ ಮಹತ್ವವನ್ನು ಕುರಿತು ಸುಪ್ರಸಿದ್ಧ ಬರೆಹಗಾರ ಕಾರ್ಲೈಲನು ಹೀಗೆ ನಿರ್ದಿಷ್ಟವಾಗಿ ಹೇಳಿದ್ದಾನೆ:—"Great is journalism. Is not every able Editor a Ruler of the world, being a persuader of it?" "ಪತ್ರಿಕೋದ್ಯಮ ಮಹತ್ವದ್ದು. ಸಮರ್ಥನಾದ ಪ್ರತಿಯೊಬ್ಬ

ಪತ್ರಿಕಾ ಸಂಪಾದಕನೂ ಜಗತ್ತನ್ನು ಪ್ರೇರೇಪಿಸುವ ಕಾರಣ, ಅವನು ಅದರ ಒಡೆಯನಾಗಿರುವನಲ್ಲವೆ !"

ಈ ರೀತಿಯಾಗಿ ಪತ್ರಿಕೋದ್ಯಮ ಮಹತ್ವದ ಪರಿಣಾಮವನ್ನು ಹೊಂದಿರುವ ಕಾರಣ ಅದರಿಂದ ಪ್ರಯೋಜನ ಕಂಡು ಬಂದಾಗ ಅದನ್ನು ಹೊಗಳುವುದೂ, ಅದರಿಂದ ತೊಂದರೆ ಕಂಡು ಬಂದಾಗ ಅದನ್ನು ತೆಗಳುವುದೂ ಸ್ವಾಭಾವಿಕವಾಗಿದೆ.

ಸುಪ್ರಸಿದ್ಧ ಸಾಹಿತಿಯಾದ ಬರ್‌ಟ್ರಾಂಡ್ ರೂಸೆಲ್ಲನು ಒಂದು ಕಡೆ ಹೀಗೆ ಹೇಳಿದ್ದಾನೆ :— "One of the troubles about vanity is that it grows with what it feels on. The more you or talked about, the more you will wish to be talked about....The more famous politicians and literary men become, the more difficult the press cutting agency finds it to satisfy them." "ಪ್ರತಿಷ್ಠೆಯ ಸಂಬಂಧವಾದ ಒಂದು ತೊಂದರೆಯೆಂದರೆ ಯಾವುದರ ಮೇಲೆ ಅದು ಜೀವಿಸುತ್ತ ಹೋಗುತ್ತದೆಯೋ ಅದರಿಂದಲೇ ಅದು ಅಧಿಕವಾಗುತ್ತ ಹೋಗುತ್ತದೆ...ರಾಜಕಾರಣಿಗಳು ಮತ್ತು ಸಾಹಿತಿಗಳು ಎಷ್ಟೆಷ್ಟು ಪ್ರಖ್ಯಾತರಾಗುತ್ತಾರೆಯೋ ಅಷ್ಟಷ್ಟು ಪತ್ರಿಕಾಪ್ರಶಂಸೆಗಳನ್ನು ಒದಗಿಸುವುದು ಪ್ರೆಸ್ ಕಟಿಂಗ್ ಏಜನ್ಸಿಗಳಿಗೆ ಕಷ್ಟವಾಗುತ್ತದೆ."

ಬೆನ್ನೆಟ್ ಸರ್ಫ್ ಎಂಬ ವಿಮರ್ಶಕ ಹೀಗೆ ಬರೆಯುತ್ತಾನೆ :—"A favourite refuge of politicians, when caught in a tight corner, is to claim that they were misquoted in the press, and the chances are the to one that they are. That is, they were misquoted in that the reporter cleaned up their rhetoric, supplied the missing verbs, and made sure their predicates agree in some general way with their subjects. The nastiest thing a reporter could do to a politician would be to quote them absolutely accurately down to every ur, er, well, you see, that is and so on". "ತಮ್ಮ ಹೇಳಿಕೆಗಳ ಮೂಲಕ ತಪ್ಪಿನಲ್ಲಿ ಬಿಗಿಯಾಗಿ ಸಿಕ್ಕಿಕೊಂಡಾಗ ರಾಜಕಾರಣಿಗಳು ಅದರಿಂದ ತಪ್ಪಿಸಿಕೊಳ್ಳುವ ಸರ್ವಸಾಮಾನ್ಯ ಮಾರ್ಗವೆಂದರೆ ಪತ್ರಿಕೆಗಳು ತಮ್ಮ ಮಾತುಗಳನ್ನು ತಪ್ಪಾಗಿ ಪ್ರಕಟಿಸಿವೆಯೆಂದು ಹೇಳುವುದು. ವಿಮರ್ಶೆ ಮಾಡಿ ನೋಡಿದರೆ ಇದು ಹತ್ತುಪಟ್ಟು ವಾಸ್ತವವಾದ ಅಂತವೇ ಆಗಿದೆ. ಏಕೆಂದರೆ ಪತ್ರಿಕಾ ವರದಿಗಾರ ರಾಜಕಾರಣಿಗಳ ಕೃತಕ ಭಾಷೆಯನ್ನು ಶುದ್ಧೀಕರಣ ಮಾಡಿ, ಲೋಪವಾದ ಕ್ರಿಯಾಪದಗಳನ್ನು ತುಂಬಿ, ಆಖ್ಯಾತಪದಗಳು ಕರ್ಮಪದಗಳೊಂದಿಗೆ ಬೆರೆಯುವಂತೆ ಮಾಡಿ, ಅವರ ಹೇಳಿಕೆಗಳನ್ನು ಅಚ್ಚುಕಟ್ಟು ಮಾಡಿರುದೇ ಈ ಅಪವಾದಕ್ಕೆ ಕಾರಣ. ಒಂದು ಪಕ್ಷ ಪತ್ರಿಕಾ ವರದಿಗಾರ ರಾಜಕಾರಣಿಯ ಹೇಳಿಕೆಗಳನ್ನೂ ಖರಾರುವಾಕಾಗಿ ಪ್ರತಿಪಾದಿಸಿ ಅವನು ನುಡಿದ ಆ-ಊ-ಅಲ್ಲ-ಅಲ್ಲ-ನೋಡಿ-ಅಂದರೆ-ಇತ್ಯಾದಿ ಅಸಂಬದ್ಧ ಪದಗಳನ್ನು ಇದ್ದಕ್ಕಿದ್ದಂತೆಯೇ ಪ್ರಕಟಿಸಿದಲ್ಲಿ ಅದು ಪತ್ರಿಕಾ ವರದಿಗಾರನಿಂದ ರಾಜ ಕಾರಣಿಗೆ ಸಲ್ಲಬಹುದಾದ ಅತ್ಯಂತ ಅನಿಷ್ಟ ಸೇವೆಯಾಗುತ್ತದೆ."

ಒಟ್ಟಿನಲ್ಲಿ ಪತ್ರಿಕೋದ್ಯಮ ವಾರ್ತಾವಿನಿಮಯದ ಹಾಗೂ ವಿಚಾರ ಮಥನದ ಮೂಲಕ ಅಭಿ

ಪ್ರಾಯಗಳನ್ನು ಹಾಗೂ ನಿರ್ಧಾರಗಳನ್ನೂ ಬಿಂಬಿಸಬಲ್ಲ ಶಕ್ತಿಪೂರ್ಣ ಸಾಧನವಾಗಿದ್ದು ತನ್ನ ಈ ಕರ್ತವ್ಯದಲ್ಲಿ ಪತ್ರಿಕೋದ್ಯಮಿ ವಿಮುಖತೆಯನ್ನು ಹೊಂದಿದಲ್ಲಿ ಅಥವಾ ತನ್ನ ಪ್ರಭಾವವನ್ನು ದುರುಪಯೋಗಪಡಿಸಿಕೊಂಡಲ್ಲಿ ಅಪಾರ ಅನರ್ಥವಾಗುವುದರಲ್ಲಿ ಸಂದೇಹವಿಲ್ಲ. ಆದಕಾರಣ ಪತ್ರಿಕೋದ್ಯಮ ಹರಿತವಾದಷ್ಟು, ಪತ್ರಿಕೋದ್ಯಮಿ ಪ್ರಾಮಾಣಿಕನಾಗಬೇಕು; ಪತ್ರಿಕೋದ್ಯಮ ಪ್ರಭಾಯುತವಾದಷ್ಟೂ, ಪತ್ರಿಕೋದ್ಯಮಿ ಎಚ್ಚರಗೊಂಡವನಾಗಬೇಕು.

ಪತ್ರಿಕೋದ್ಯಮ ದಕ್ಷತೆಯಿಂದ ಕೆಲಸ ಮಾಡಬೇಕಾದರೆ ಅದರ ಕಛೇರಿ ಪೂರ್ಣತೆಯನ್ನು ಹೊಂದಿರಬೇಕು. ಸ್ಥೂಲವಾಗಿ ಹೇಳುವುದಾದರೆ ಪತ್ರಿಕೋದ್ಯಮದಲ್ಲಿ ಆರು ಶಾಖೆಗಳು ಇದ್ದೇ ತೀರಬೇಕು. ಆ ಶಾಖೆಗಳು ಯಾವುವೆಂದರೆ :— ಸಂಪಾದಕನ ಶಾಖೆ, ಚಿತ್ರಗಾರನ ಶಾಖೆ, ಛಾಯಾಗ್ರಾಹಕನ ಶಾಖೆ, ಮುದ್ರಣಕಾರನ ಶಾಖೆ, ಪಡಿಯಚ್ಚುಗಾರನ ಶಾಖೆ, ಮಾರಾಟಗಾರನ ಶಾಖೆ, ಈ ಒಂದೊಂದು ಶಾಖೆಯೂ ಪತ್ರಿಕೋದ್ಯಮದ ದಕ್ಷತೆಗೆ ಪೂರಕವಾಗಿದೆ. ಪತ್ರಿಕೆಗಳು ಬೋಧಪ್ರದವೂ, ಮನೋರಂಜಕವೂ, ಆಗಬೇಕಾದರೆ— (1) ಸರಳವಾದ ಮತ್ತು ಶುದ್ಧವಾದ ಸಾಹಿತ್ಯ ಬೇಕು; (2) ಆಕರ್ಷಣೀಯವಾದ ಮತ್ತು ವರ್ಣರಂಜಿತವಾದ ನಮೂನೆಗಳೂ ಚಿತ್ರಗಳೂ ಬೇಕು ; (3) ಘಟನೆಗಳನ್ನು ಸ್ಪಷ್ಟೀಕರಿಸುವ ಮತ್ತು ವಸ್ತುಗಳನ್ನು ಪ್ರತ್ಯಕ್ಷೀಕರಿಸುವ ಛಾಯಾಚಿತ್ರಗಳೂ ಬೇಕು; (4) ಕಣ್ಣನ್ನೂ ಮತ್ತು ಮನವನ್ನೂ ಸೆಳೆಯುವ ಅಚ್ಚುಕಟ್ಟಾದ ಮುದ್ರಣ ಬೇಕು ; (5) ಓದಲು ಸುಲಭವಾದ ಮತ್ತು ನೋಡಲು ಸುಂದರವಾದ ಅಕ್ಷರದ ಮೊಳೆಗಳೂ, ಪಡಿಯಚ್ಚುಗಳೂ ಬೇಕು ; (6) ಮುದ್ರಣವಾದ ಪತ್ರಿಕೆಗಳನ್ನು ಹಂಚುವ ಮತ್ತು ಮಾರುವ ಏಜೆನ್ಸಿಗಳೂ, ಮಾರುಕಟ್ಟೆಗಳೂ ಬೇಕು. ಇಷ್ಟೆಲ್ಲ ಆವಶ್ಯಕತೆಗಳು ಪೂರೈಸಿದಾಗ ಮಾತ್ರವೇ ಪತ್ರಿಕೋದ್ಯಮ ಪರಿಣಾಮಕರವೂ, ಲಾಭಕರವೂ, ಸಾರ್ಥಕವೂ ಆಗುತ್ತದೆ.

ದೇಹದ ಅಂಗಗಳಲ್ಲಿ ಶಿರವು ಪ್ರಧಾನವಾಗಿರುವಂತೆ ಪತ್ರಿಕೋದ್ಯಮ ಶಾಖೆಗಳಲ್ಲಿ ಸಂಪಾದಕಶಾಖೆ ಪ್ರಧಾನವಾಗಿದೆ. ಮುಖ್ಯ ಸಂಪಾದಕನೊಡನೆ ಸಹಸಂಪಾದಕರೂ, ಉಪಸಂಪಾದಕರೂ ಇರುತ್ತಾರೆ. ಸಹ ಮತ್ತು ಉಪಸಂಪಾದಕರಿಗೆ ಮುಖ್ಯಸಂಪಾದಕ ಮಾರ್ಗದರ್ಶಕನಾಗಿರುತ್ತಾನೆ.

ಸಂಪಾದಕ ಉತ್ತಮ ಯೋಗ್ಯತೆಯುವನಾಗಬೇಕು. ಉತ್ತಮ ಉಪಯೋಗ್ಯತೆಗೆ ಆರು ಶಕ್ತಿಗಳು ಅವಶ್ಯಕ. ಅವು ಯಾವುವೆಂದರೆ :—

(1) **ಭಾಷಾಪ್ರಭುತ್ವ :—**

ಇದು ಮೊದಲನೆಯ ಶಕ್ತಿ. ಶುದ್ಧವಾದ, ಅರ್ಥ ಪೂರ್ಣವಾದ, ಪರಿಣಾಮಕರವಾದ ಪದ ಜೋಡಣೆ ಬೇಕು. "ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು, ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು, ಲಿಂಗ ಮೆಚ್ಚಿ ಅಹುದಹುದೆನುವಂತಿರಬೇಕು" ಎಂಬ ಬಸವಣ್ಣನವರ ವಚನ ಪತ್ರಿಕೋದ್ಯಮಿಯ ಭಾಷಾ ಪ್ರಭುತ್ವ ಶಕ್ತಿಗೆ ಒರೆಗಲ್ಲಿನಂತಿದೆ.

(2) **ಮೋಹಕ ಶೈಲಿ:—**

ಇದು ಎರಡನೆಯ ಶಕ್ತಿ. ಓದಲು ಒಮ್ಮೆ ಪ್ರಾರಂಭಿಸಿತೆಂದರೆ ಬಿಡದೆ ಕೊನೆಯವರೆಗೂ ಬಿಡಬೇಕೆಂಬ ಇಚ್ಛೆ ಉಂಟಾಗುವಂಥ ಸಾಹಿತ್ಯಶೈಲಿ ಸಂಪಾದಕನಿಗಿರಬೇಕು. ಶೈಲಿ ಹೀಗೆ ಇರಬೇಕೆಂದು

ಅದನ್ನು ಯಾರೂ ವರ್ಣಿಸುವುದಕ್ಕೆ ಬರುವುದಿಲ್ಲ. ಆದರೆ ಪಠನದಿಂದ, ಪ್ರಯೋಗದಿಂದ, ಅನುಭವ ದಿಂದ ಉತ್ತಮ ಶೈಲಿ ಹಸ್ತಗತವಾಗುತ್ತದೆ.

(3) **ವಿಷಯ ಶುದ್ಧಿ :—**

ಇದು ಮೂರನೆಯ ಶಕ್ತಿ. ವಿಷಯ ಸಂಗ್ರ ಹಣವನ್ನು ಬಹಳ ಎಚ್ಚರಿಕೆಯಿಂದ ಮಾಡಬೇಕು. ವಿಷಯಗಳ ಮೂಲ ಅಧಿಕೃತವಾದುದಾಗಿರಬೇಕು.

(4) **ಪಾಠ ಶುದ್ಧಿ :—**

ಇದು ನಾಲ್ಕನೆಯ ಶಕ್ತಿ. ಅಚ್ಚುಓಲೆ ಗಳನ್ನು ಬಹಳ ಜಾಗರೂಕತೆಯಿಂದ ಓದಬೇಕು. ಪಾಠಶುದ್ಧಿಯಿಲ್ಲದೇ ಹೋದರೆ ಅನರ್ಥಕ್ಕೆ ಎಡೆ ಯಾಗುತ್ತದೆ. ಒಮ್ಮೆ "ವ್ಯವಸಾಯದ ವರಮಾನ ತೆರಿಗೆ" ಎಂಬ ವಾಕ್ಯ "ವ್ಯವಸಾಯದವರ ಮಾನ ತೆರಿಗೆ" ಎಂದು ಅಚ್ಚಿನಲ್ಲಿ ವಿಭಜನೆಯಾದಾಗ ಆಭಾಸವಾಗಿ ಮುದ್ರಿಸಿದವರ ಮಾನ ಹೋಗುವ ಪ್ರಸಂಗ ಬಂದಿತು! ಇನ್ನೊಮ್ಮೆ "Open to all classes" ಎಂಬ ಜಾಹಿರಾತು "cl" ಎಂಬ ಎರಡು ಅಕ್ಷರಗಳಿಲ್ಲದೆ ಪ್ರಕಟವಾದಾಗ ಆ ಜಾಹಿರಾತು "Open to all asses" ಎಂದು ಮುದ್ರಣವಾಯಿತು. ಯಾರೂ "asses" ಗಳಾಗಲು ಇಷ್ಟಪಡಲಿಲ್ಲ. ಹೊಣೆ ಗಾರಿಕೆಯನ್ನು ಮುದ್ರಿಸಿದವರೇ ಹೊರಬೇಕಾ ಯಿತು!

(5) **ಸಂದರ್ಶನ ಶ್ರದ್ಧೆ :—**

ಇದು ಐದನೆಯ ಶಕ್ತಿ. ಎಲ್ಲಿ ಯಾರಲ್ಲಿ ಉತ್ತಮ ಹಾಗೂ ಉಪಯುಕ್ತ ಅಭಿಪ್ರಾಯಗಳೂ, ಅನುಭವಗಳೂ ಸಿಕ್ಕುತ್ತವೆಯೋ ಅಲ್ಲಿಗೆ ಅವರಲ್ಲಿಗೆ ಎಷ್ಟೇ ದೂರವಾಗಲಿ, ಎಷ್ಟೇ ಶ್ರಮವಾಗಲಿ ಹೋಗಿ ಅವುಗಳನ್ನು ಗ್ರಹಿಸಿ ಸಂಗ್ರಹಿಸುವ ಶ್ರದ್ಧೆ ಸಂಪಾದಕನಿಗೆ ಇರಬೇಕು. "ನಾನು ಸರ್ವಜ್ಞ" ಎಂಬ "ಅಹಂ" ಸಂಪಾದಕನಿಗೆ ಇರಬಾರದು. "ಸರ್ವಜ್ಞನೆಂಬುವನು ಗರ್ವದಿಂದಾದವನೆ? ಸರ್ವರೊಳು ಒಂದೊಂದು ನುಡಿಗಲಿತು ವಿದ್ಯೆಯು ಪರ್ವತವೇ ಆದ" ಎಂಬ ಸರ್ವಜ್ಞನ ಮಹಾ ವಾಕ್ಯ ಸಂಪಾದಕನ ನೆನಪಿನಲ್ಲಿ ಸದಾ ಇರಬೇಕು.

(6) **ಆಕರ್ಷಕ ವ್ಯಕ್ತಿತ್ವ:—**

ಇದು ಆರನೆಯ ಶಕ್ತಿ. ಈ ಶಕ್ತಿಯನ್ನು ಪಾಶ್ಚಿಮಾತ್ಯ ಮನೋವಿಜ್ಞಾನಿಗಳು "Personal magnetism" ಎಂದು ಕರೆಯುತ್ತಾರೆ. ಸ್ವಾಭಾವಿಕವಾಗಿ ಈ ಶಕ್ತಿ ಕೆಲವರಲ್ಲಿ ಇರುವು ದಾದರೂ ಎಲ್ಲರೂ ಶಾಸ್ತ್ರೀಯವಾದ ಅಭ್ಯಾಸ ದಿಂದ ಈ ಶಕ್ತಿಯನ್ನು ಸಂಪಾದಿಸುವುದು ಒಳ್ಳೆಯದು. ಪತ್ರಿಕಾಸಂಪಾದಕನಿಗಂತೂ ಈ ಶಕ್ತಿ ಅನಿ ವಾರ್ಯ. ಹಸನ್ಮುಖ, ವಿನಮ್ರ ನಡೆ, ಮೃದು ನುಡಿ, ನಿಸ್ಪೃಹ ಪ್ರಶಂಸೆ, ಸರಳ ಪ್ರಶ್ನೆ ಇವೇ ಮೊದಲಾದವು ಸಂಪಾದಕನಿಗೆ ಇರಬೇಕಾದ ಆಕರ್ಷಕ ವ್ಯಕ್ತಿತ್ವದ ಅಂಶಗಳು.

ಕೊನೆಯದಾಗಿ ಪತ್ರಿಕೋದ್ಯಮದ ಗುರಿಯ ವಿಚಾರದಲ್ಲಿ ನಾವು ಮಹಾತ್ಮಗಾಂಧಿಯವರ ಮಹಾವಾಕ್ಯವೊಂದನ್ನು ನೆನಪು ಮಾಡಿಕೊಳ್ಳ ಬೇಕಾಗುತ್ತದೆ. ಆ ವಾಕ್ಯ ಈ ರೀತಿಯಾಗಿದೆ :— "The true function of journalism is to educate the public mind, not to stock the public mind with wanted and unwanted impressions. A journalist has, therefore, to use his discretion as to what to report and when." "ಪತ್ರಿಕೋದ್ಯಮದ ನಿಜವಾದ ಕರ್ತವ್ಯವೆಂದರೆ ಸಾರ್ವಜನಿಕರಿಗೆ

ತಿಳಿವಳಿಕೆ ಕೊಡುವುದು. ಬೇಕಾದ ಮತ್ತು ಬೇಡವಾದ ಅಭಿಪ್ರಾಯಗಳನ್ನು ಜನರ ತಲೆಯಲ್ಲಿ ತುಂಬುವುದಲ್ಲ. ಆದ್ದರಿಂದ ಪತ್ರಿಕೋದ್ಯಮಿ ಯಾವ ವಿಷಯವನ್ನು ಯಾವಾಗ ವರದಿ ಮಾಡಬೇಕೆನ್ನುವ ವಿಚಾರದಲ್ಲಿ ವಿವೇಚನೆಯಿಂದ ವರ್ತಿಸಬೇಕು.'' ಇದೇ ಅಂಶವನ್ನು ನಮ್ಮ ಹಿಂದಿನ ಭಾರತೀಯ ಸೂಕ್ತಿಯೂ ಸಮರ್ಥಿಸುತ್ತದೆ. ಅದೇನೆಂದರೆ :—''ಸತ್ಯಂವದ. ಪ್ರಿಯಂವದ. ಸತ್ಯಮಪಿ ಅಪ್ರಿಯಂನ್ನೈವದ. ಪ್ರಿಯಮಪಿ ಅಸತ್ಯಂ ನ್ನೈವದ.'' ''ಸತ್ಯವಾದುದನ್ನು ಹೇಳು. ಪ್ರಿಯವಾದುದನ್ನು ಹೇಳು. ಸತ್ಯವಾದರೂ ಅಪ್ರಿಯವಾದುದನ್ನು ಹೇಳಬೇಡ. ಪ್ರಿಯವಾದರೂ ಅಸತ್ಯವನ್ನು ಹೇಳಬೇಡ.''

ಇಷ್ಟು ಎಚ್ಚರಿಕೆಗಳಿಂದ ಸುಸಜ್ಜಿತವಾಗಿ ಪತ್ರಿಕೋದ್ಯಮವನ್ನು ಸಾಮರ್ಥ್ಯದಿಂದ ನಡೆಸಿದಲ್ಲಿ ಪತ್ರಿಕೋದ್ಯಮದಿಂದ ದೇಶಕ್ಕೂ ಜನಕ್ಕೂ ಅಪಾರವಾದ ಮಂಗಳ ಲಭಿಸುತ್ತದೆ.

**ಶ್ರೀ ಜೀರಗೆಕಟ್ಟಿ ಬಸವಪ್ಪ ಬಿ. ಎ.**

---

# ಭಾಷೆಯ ಬೆಳವಣಿಗೆ—ಕೆಲವು ವಿಚಾರಗಳು

Language is an expression of human activity, and as human activity is forever changing, language changes with it. Page 20. Mario pie: The Story of Language.

ಜೀವಂತವಾದ ಎಲ್ಲ ವಸ್ತುಗಳಲ್ಲೂ ವ್ಯತ್ಯಾಸಗಳು ಕಾಲ ಕಾಲಕ್ಕೆ ನಡೆಯುತ್ತಲೇ ಇರುತ್ತವೆ. ಭಾಷಾ ಕ್ಷೇತ್ರದಲ್ಲಂತೂ ಈ ಪರಿವರ್ತನೆ ಅನಿವಾರ್ಯ, ಅಗತ್ಯ ಹಾಗೂ ಆರೋಗ್ಯದ ಚಿಹ್ನೆ. ಹಲವು ಸಂದರ್ಭಗಳಲ್ಲಿ ಈ ವ್ಯತ್ಯಾಸ ಸ್ಪಷ್ಟವಾಗಿ ಕಾಣುತ್ತದೆ; ಕೆಲವು ಸಲ ನಮಗೆ ತಿಳಿಯದಂತೆಯೇ ಈ ಮಾರ್ಪಾಟು ಆಗುತ್ತಿರುತ್ತದೆ. ಭಾಷೆಯೂ, ಅದು ಆಡುನುಡಿಯಾಗಿ ಜೀವಂತವಾಗಿ ಇರುವವರೆಗೂ ಈ ಬಗೆಯ ವ್ಯತ್ಯಾಸಕ್ಕೆ ಹೊರತಾಗಲು ಸಾಧ್ಯವಿಲ್ಲ. ಇದು ಭಾಷೆಯಲ್ಲಿ ಪ್ರತಿನಿತ್ಯವೂ ವ್ಯಕ್ತವಾಗಿ-ಅವ್ಯಕ್ತವಾಗಿ ನಡೆಯುತ್ತಲೇ ಇರುತ್ತದೆ. ಹೊಸ ಶಬ್ದಗಳು ಅನ್ಯಭಾಷೆಯಿಂದ ಬಂದು ಸೇರುತ್ತಿರುತ್ತವೆ, ಹಳೆಯ ಪದಗಳು ಹಿನ್ನೆಲೆಗೆ ಸರಿದು ಅತಿಥಿ ಪದಗಳಿಗೆ ಆಶ್ರಯ ಕೊಡುತ್ತವೆ, ಹೊಸ ನೀರು ಬಂದು ಹಳೆಯ ನೀರನ್ನು ಕೊಚ್ಚಿಕೊಂಡು ಹೋದಂತೆ. ಕೆಲವು ಪದಗಳು ಹೊಂದಿಕೊಂಡು ಸಹಬಾಳ್ವೆ ನಡೆಸಿದರೆ, ಹಲವು ಪದಗಳು ವೈರದಿಂದೆಂಬಂತೆ ಮೂಲೆಗೆ ಸೇರುತ್ತವೆ. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಘನನಿಘಂಟಿನ ಮೊದಲ ಮುದ್ರಣದ ಪ್ರತಿಯಲ್ಲಿ, ಇಂದು ಜಗದ್ ವಿಖ್ಯಾತವೂ-ಬಹುಜನ ಮಾನ್ಯವೂ-ನಿತ್ಯ ವ್ಯವಹಾರ ಪ್ರಿಯವೂ ಆದ 'ಸಿನಿಮಾ' (Cinema) ಎಂಬ ಪದವಿಲ್ಲವೆಂದರೆ ಅನೇಕ ಜನ ಅಚ್ಚರಿಯಿಂದ ಮೂಗಿನ ಮೇಲೆ ಬೆರಳು ಇಟ್ಟಾರು! ಆದರೂ ಇದು ನಿಜ.

ಒಂದು ಭಾಷೆಯಲ್ಲಿ ಹೊಸದಾಗಿ ಬಂದು ಸೇರಿದ ಪದಗಳಲ್ಲಿ ಅನೇಕ ಪದಗಳು ಪರಭಾಷೆಯಿಂದಲೇ ಬಂದಿರುತ್ತವೆಯಾದರೂ ಎಲ್ಲ ಪದಗಳೂ ಅನ್ಯದೇಶೀಯ ಪದಗಳಾಗಿರುವುದಿಲ್ಲ. ನಮ್ಮಲ್ಲಿ-ಆಯಾಯಾ ಭಾಷೆಯಲ್ಲಿ ಇರುವ ಪದಗಳನ್ನೇ ಎರಡು ಮೂರು ಪದಗಳು ಸೇರಿಸಿ ಒಂದು ಹೊಸ ಸಮಾಸಪದವನ್ನು ಸೃಷ್ಟಿಸುವುದೂ ಉಂಟು. ಮಾತನಾಡುವ ಮಂದಿ ನಿತ್ಯವೂ ತಾವು ವ್ಯವಹಾರದಲ್ಲಿ ಬಳಸುವ ಶಬ್ದಸಮುದಾಯವನ್ನು ಬೇರೆ ಬೇರೆ ರೀತಿಯಲ್ಲಿ ಜೋಡಿಸುತ್ತಿರುತ್ತಾರೆ. ಈ ಬಗೆಯ ವಾಕ್ ಸೃಷ್ಟಿ, ಪದಗಳ ಜನನವೇ ಭಾಷೆಯ ಬೆಳವಣಿಗೆಗೆ ಬಹುಮಟ್ಟಿನ ಕಾರಣ. ಎಲ್ಲ ಸಂದರ್ಭಗಳಲ್ಲೂ ಭಾಷೆಯಲ್ಲಿ ನಡೆಯುವ ಬದಲಾವಣೆಗಳಿಗೆ ಸಮಂಜಸವಾದ ಉತ್ತರವನ್ನಾಗಲಿ, ಕಾರಣವಾಗಲಿ ಹೇಳುವುದು ಕಷ್ಟವಾಗಿರುತ್ತದೆ. ಈ ವ್ಯತ್ಯಾಸ ಪ್ರಾರಂಭವಾದ ಕಾಲವನ್ನೂ, ಹಿನ್ನಲೆಯನ್ನು ನಿರ್ದುಷ್ಟವಾಗಿ ಹೇಳಲು ಸಾಧ್ಯವಿಲ್ಲವಾದರೂ ಅನೇಕ ವೇಳೆ ಮಾನವನ ಸೌಲಭ್ಯಾಕಾಂಕ್ಷೆಯಿಂದಲೂ, ಅನುಕರುಣೆಯಿಂದಲೂ, ಸಾಮ್ಯ ವಿಧಿನಿಯಮದಿಂದಲೂ, ನಾಗರಿಕತೆಯ ಪರಿಣಾಮದಿಂಧಲೂ ಈ ಪರಿವರ್ತನೆ ಪ್ರಾರಂಭವಾಗುತ್ತದೆಂದು ಹೇಳಬಹುದು. ಧ್ವನಿ ವ್ಯತ್ಯಾಸದ ಮೂಲ ನಿಯಮ ಉಚ್ಚಾರದಲ್ಲಿ ಆದಷ್ಟೂ ಕಡಮೆ ಪ್ರಯಾಸ-ಪ್ರಯತ್ನಗಳ ಅಪೇಕ್ಷೆ; ವರ್ಣೋತ್ಪತ್ತಿ ಸ್ಥಾನ ಸಮೀಪವಾಗಿರುವುದು. ಕಾಲ-ದೇಶ-ಪರಿಸರಗಳ ಪ್ರಭಾವ ಭಾಷೆಗೂ ತಪ್ಪಿದ್ದಲ್ಲ; ಮಾನವ ಮತ್ತು ಅವನ ಭಾಷೆ ಎರಡೂ ಕಾಲಕ್ಕೆ ತಕ್ಕ ಮಾರ್ಪಾಟುಗೊಂಡು ಹೊಂದಿಕೊಂಡು ಹೋಗಬೇಕಾಗುತ್ತದೆ. ನಿತ್ಯ

ಪರಿವರ್ತನ ಶೀಲವಾದ ಜೀವಂತ ಭಾಷೆ ನಿರಂತ ವಾಗಿ ಬೆಳೆಯುತ್ತಿರುತ್ತದೆ. ಮಾನವ ಲೋಕ ದಲ್ಲಿ ನಡೆಯುವ ಹುಟ್ಟು–ಸಾವುಗಳು, ಸಿರಿತನ–ಬಡತನಗಳು ಭಾಷೆಯ ಪ್ರಪಂಚದಲ್ಲೂ ಉಂಟು. ಭಾಷೆಯ ಅವಿಚ್ಛಿನ್ನವಾದ ಬೆಳವಣಿಗೆಯಲ್ಲಿ ಹಲ ವಾರು ಬದಲಾವಣೆಗಳು ಆಗುತ್ತಿರುತ್ತವೆ. ಇವು ಗಳಲ್ಲಿ ಹೊಸದಾದ ಪದಸೃಷ್ಟಿಯೂ ಒಂದು. ಪ್ರತಿಯೊಂದು ಭಾಷೆಗೂ ಪದಗಳು ದೂರದಿಂದ–ಹತ್ತಿರದಿಂದ, ಅಕ್ಕಪಕ್ಕದ ಭಾಷೆಗಳ ಸಂಪರ್ಕ ಪ್ರಭಾವದಿಂದ, ಆಡಳಿತಭಾಷೆ-ಅನ್ಯಭಾಷೆಗಳಿಂದ, ವಾಣಿಜ್ಯ ವ್ಯವಹಾರದ ಮೂಲಕ–ಹೀಗೆ ನಾನಾ ದಾರಿಗಳಿಂದ, ಕಾಲುವೆಗಳಿಂದ ನೂತನ ಪದಗಳು ಪ್ರವಾಹದಂತೆ ಹರಿದು ಬರುತ್ತವೆ. ಇಂಗ್ಲಿಷ್ ಭಾಷೆ ಅನ್ಯಭಾಷೆಗಳಿಂದ ಪದಗಳನ್ನು ಸ್ವೀಕರಿಸಿ ದಂತೆ ಜಗತ್ತಿನ ಮತ್ತಾವ ಭಾಷೆಯೂ ಆ ಸಂಖ್ಯೆ ಯಲ್ಲಿ–ಆ ಪ್ರಮಾಣದಲ್ಲಿ ಸ್ವೀಕರಿಸಿಲ್ಲ; ಹತ್ತಾರು ಭಾಷೆಗಳಿಂದ ಬಹುಕಾಲದಿಂದಲೂ ಇಂಗ್ಲಿಷ್ ಅನ್ಯದೇಶ್ಯ ಶಬ್ದಗಳನ್ನು ಸ್ವೀಕರಿಸುತ್ತಾ ಬಂದಿದೆ. ಪ್ರಾಚೀನ ಲ್ಯಾಟಿನ್, ಪ್ರಾಚೀನ ಅರಾಬಿಕ್, ಪ್ರಾಚೀನ ಚೀನೀ, ಪ್ರಾಚೀನ ಲಿಥುನಿಯನ್, ಸಂಸ್ಕೃತ ಮೊದಲಾದ ಭಾಷೆಗಳಲ್ಲಿ ಅನ್ಯ ಭಾಷೆಯ ಶಬ್ದ ಸಂಪತ್ತು ಕಡಮೆ, ಕ್ಲುಪ್ತ. ಕನ್ನಡ ಭಾಷೆ ವಿಶೇಷವಾಗಿ ಸಂಸ್ಕೃತ (ಇತ್ತೀಚೆಗೆ ಇಂಗ್ಲಿಷ್ ಮತ್ತು ಕಡಮೆ ಪ್ರಮಾಣದಲ್ಲಿ ಅರಾಬಿಕ್; ಪರ್ಷಿಯನ್, ಉರ್ದು, ಪೋರ್ಚುಗೀಸ್, ಪ್ರಾಕೃತ, ಪಾಳಿ–ಭಾಷೆಗಳಿಂದಲೂ ಪದಗಳನ್ನು ಸ್ವೀಕರಿಸಿ ದ್ದರೆ ಇಂಗ್ಲಿಷ್ ಭಾಷೆ ಜಗತ್ತಿನ ಎಲ್ಲ ಭಾಷೆಗಳಿಂ ದಲೂ, ಕೊನೆಗೆ ಕನ್ನಡದಿಂದಲೂ) ನೂರಾರು ಪದಗಳನ್ನುಸ್ವೀಕರಿಸಿದೆ, ಸಮೃದ್ಧವಾಗಿ ಬೆಳೆದಿದೆ.

ಇಂದು ನಾವು ಮಾತನಾಡುವ ಕನ್ನಡ ಭಾಷೆಯ ಎಲ್ಲ ಪದಗಳೂ ಶುದ್ಧಕನ್ನಡ (ಅಚ್ಚ ಗನ್ನಡ) ಪದಗಳಲ್ಲ. ಮೇಲೆ ಹೇಳಿದ ಭಾಷೆ ಗಳಿಂದ ವ್ಯತ್ಯಾಸ ಮಾಡಿ ಅಥವಾ ವ್ಯತ್ಯಾಸವಿಲ್ಲದೆ ನೇರವಾಗಿ ನೂರಾರು ಪದಗಳನ್ನು ಎರವಲು ಪಡೆ ದಿದ್ದೇವೆಂಬುದು ತಿಳಿದ ವಿಷಯ. ಇದಕ್ಕೆ ಐತಿ ಹಾಸಿಕ ಕಾರಣಗಳಿವೆ. ಆರ್ಯರ ಆಕ್ರಮಣಾ ನಂತರ ರಾಜರ–ರಾಜರ ಆಸ್ಥಾನದ, ವಿದ್ವಾಂಸರ, ಪ್ರತಿಷ್ಠಿತರ, ಪ್ರಮುಖರ ಭಾಷೆಯಾದ ಸಂಸ್ಕೃತ ಭಾಷೆ ತನ್ನ ಉನ್ನತ ಸ್ಥಾನಮಾನಗಳಿಂದಾಗಿ ದೇಶೀಯ ಭಾಷೆಗಳ ಮೇಲೆ ತನ್ನ ಕಾಂತಿಯನ್ನು ಸಮೃದ್ಧವಾಗಿ ಚೆಲ್ಲಿತು. ಕಣ್ಣು ಕೋರೈಸುವ ಅದರ ಅನಂತಪ್ರಭೆಯಲ್ಲಿ ಭಾರತೀಯ ಭಾಷೆ ಗಳು ಕಣ್ಣು ಬಿಡುವುದೇ ಕಷ್ಟವಾಗಿರಬೇಕು. ಬಾಯಿಬಿಟ್ಟರೆ, ಲೇಖಣಿ ಹಿಡಿದರೆ ಸಂಸ್ಕೃತ ಪದ ಗಳು ಭೋರ್ಗರೆದು ಧುಮ್ಮಿಕ್ಕುತ್ತಿದ್ದುವು. ಕನ್ನಡ ದಲ್ಲಿ ಕಾವ್ಯ ಬರೆದರೂ ಕನ್ನಡಕ್ಕಿಂತಲೂ ಸಂಸ್ಕೃತ ಪದಗಳೇ ಹೆಚ್ಚು! ಕವಿರಾಜಮಾರ್ಗಕಾರ—

ತಱಸಂದಾ ಸಕ್ಕದಮುಮ
ನಱಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್
ಕುಱತು ಬೆರೆಸಿದೊಡೆ ವಿರಸಂ
ಮುಱುಗುವ ಪಾಲ್ಗಳೆಯ ಪನಿಗಳಂ
ಬೆರಸಿದ ವೋಲ್ ||

ಎಂದು ಎಚ್ಚರಿಸಿದ್ದಾನೆ. ಆದರೂ ಚಕ್ರವರ್ತಿ (?)ಯ ಮಾತು ಜನತೆಯನ್ನು ತಿದ್ದಿರಬಹು ದಾದರೂ ಸ್ವಯಂಶಾಸಕರಾದ ಪಂಡಿತ ಮಂಡಳಿ ಕಿವಿಗೊಡಲಿಲ್ಲವೆಂದು ಕಾಣುತ್ತದೆ. [ಭಾಷಾ ಶಾಸ್ತ್ರ ದೃಷ್ಟಿಯಿಂದ ಸಮೀಕ್ಷಿಸಿದಾಗ ಕವಿರಾಜ ಮಾರ್ಗ ಅತ್ಯಂತ ಉಪಯುಕ್ತವಾದ ವಿಚಾರ ಗಳನ್ನು ಒಳಗೊಂಡಿರುವುದು ಗೋಚರಿಸುತ್ತದೆ. [ಕನ್ನಡದ ವಾಕ್ಯರಚನೆ (Syntax)ಯ ಕ್ರಮ ವನ್ನೂ, ಕನ್ನಡದ ಆಗಿನ ಉಪಭಾಷೆಗಳ ಪರಿ ವೀಕ್ಷಣೆ (Dialect Survey) ಯನ್ನೂ, ಕನ್ನಡ ನುಡಿಯ ಭೌಗೋಲಿಕ ಎಲ್ಲೆಯನ್ನೂ (Geographical Survey) ಕುರಿತು ಒಂಬತ್ತನೆಯ ಶತಮಾನದ ವೇಳೆಗಾಗಲೆ ವಿವೇಚಿಸಿರುವುದು ಗಮನಾರ್ಹವಾಗಿದೆ.] ಅನಂತರ ಈ ಕ್ರಮದ–

ಅಕ್ರಮದ ವಿರುದ್ಧವಾಗಿ ನಯಸೇನನೆಂಬ ಜಾನಪದ ಕವಿ,

> ಸಕ್ಕದಮಂ ಪೇೞಿ್ವಡೆ ನೆಱಿ
> ಸಕ್ಕದಮಂ ಪೇೞ್ಗೆ ಸುದ್ದಗನ್ನಡದೊಳ್ತಂ
> ದಿಕ್ಕುವುದೇ ಸಕ್ಕದಮಂ
> ತಕ್ಕುದೆಬೆರಸಲ್ಕೆ ಘೃತಮುಮಂ ತೈಲಮುಮಂ||

ಎಂದು ಪ್ರಶ್ನಿಸಿದನು. ಕನ್ನಡದ ಕೆಚ್ಚನ್ನೇ ಎದೆಯ ತುಂಬ ತುಂಬಿಕೊಂಡ ಆಂಡಯ್ಯ ಸಂಸ್ಕೃತಕ್ಕೆ 'ಸಲಾಮ್' ಸಲ್ಲಿಸಿ ಕೇವಲ ಕನ್ನಡದಲ್ಲೇ ಕಬ್ಬಿಗರ ಕಾವ ಕಟ್ಟಿದ! ಮಹಾಲಿಂಗರಂಗನಂತೂ,

> ಸುಲಿದ ಬಾಳೆಯ ಹಣ್ಣಿನಂದದಿ
> ಕಳಿದ ಸಿಗುರಿನ ಕಬ್ಬಿನಂದದಿ
> ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ।
> ಲಲಿತವಹ ಕನ್ನಡದ ನುಡಿಯಲಿ
> ತಿಳಿದು ತನ್ನೊಳು ತನ್ನ ಮುಕ್ತಿಯ
> ಗಳಿಸಿಕೊಂಡರೆ ಸಾಲದೇ
> ಸಂಸ್ಕೃದೊಳಿನ್ನೇನು||

ಎಂದು ಸವಾಲು ಹಾಕಿದನು. ಕನ್ನಡ ಭಾಷೆಯ ಮೇಲೆ ಸಂಸ್ಕೃತದ ಪ್ರಭಾವ ಮೊದಲನೆಯ ಘಟ್ಟ. ಇದಾದ ಮೇಲೆ ಎರಡನೆಯ ಮಜಲು ಆರಂಭವಾಗುತ್ತದೆ. ಭಾರತ ದೇಶವನ್ನು ಆಳಿದ ರಾಜಮಹಾರಾಜರುಗಳಲ್ಲಿ ಮುಸಲ್ಮಾನರೂ ಇದ್ದಾರೆ. ಅಲ್ಲಾವುದ್ದೀನ್, ಮಲ್ಲಿಕ್‌ಕಾಫರ್, ಘಸ್ನಿಮಹಮದ್, ಮಹಮದ್‌ಗೋರಿ–ಮೊದಲಾದವರು ಹೊರಗಿನಿಂದ ಹೀಗೆ ಬಂದು ಕೊಳ್ಳೆಹೊಡೆದು–ಲೂಟಮಾಡಿ ಹಾಗೆ ಹೋದ ಮುಸಲ್ಮಾನ ದೊರೆಗಳ ಪ್ರಭಾವಕ್ಕಿಂತಲೂ ಇಲ್ಲಿಯೇ ನೆಲೆನಿಂತು, ಗುಡಾರ ಹೂಡಿ ಬಿಡಾರ ಮಾಡಿ ಆಳರಸರಾಗಿ ರಾಜ್ಯಭಾರ ನಡೆಸಿದ ಮುಸಲ್ಮಾನರ ಪ್ರಭಾವ ದೇಶೀಯ ಭಾಷೆಗಳ ಮೇಲೆ ಗಾಢವಾಗಿ ಬಿದ್ದಿತು. ಅದರಲ್ಲಿಯೂ ಮೊಗಲರ ಕಾಲದಲ್ಲಿ ಎಲ್ಲ ಆಡಳಿತ ಸೂತ್ರವೂ ಅವರ ಕೈಯಲ್ಲೇ ಇದ್ದುದರಿಂದ ಸರ್ಕಾರದ ಆಡಳಿತದಲ್ಲೂ, ನಿತ್ಯದ ವ್ಯವಹಾರದಲ್ಲೂ ಮೊಗಲರ ಮಾತುಗಳು ಮನೆಮನೆಗೂ ಸೇರಿದುವು. ಅಕ್ಬರ್ ದೊರೆಯ ಕಾಲದಲ್ಲಿ ತೋದರಮಲ್ ಜಾರಿಗೆ ತಂದ ಹೊಸ ಪದ್ಧತಿಯ ಹೆಸರುಗಳು ಪರ್ಷಿಯನ್–ಅರಾಬಿಕ್ ಭಾಷೆಯವು. ಷಹಜಹಾನ್ – ಔರಂಗಜೇಬರ ಆಡಳಿತದ ಅವಧಿಯಲ್ಲಿ ಅವರ ನುಡಿ ಹರಡಿತು. ಮೊಗಲ ಚಕ್ರವರ್ತಿಗಳ ಆಸ್ಥಾನ ಭಾಷೆ (Court Laugnage) ಪರ್ಷಿಯನ್. ಮುಸಲ್ಮಾನರನ್ನು ಮಹಮದೀಯರು, ತುರುಕರು,* ಸಾಬರು– ಇತ್ಯಾದಿಯಾಗಿ ಕರೆಯುವುದು ಅವರ ಪ್ರಭಾವವನ್ನೂ ವ್ಯಾಪ್ತಿಯನ್ನೂ ತಿಳಿಸುತ್ತದೆ. ಭಾರತ ದೇಶದಲ್ಲಿ ಒಂದು ಹೊಸಆಡಳಿತ ಪದ್ಧತಿಯನ್ನೂ, ಅನೇಕ ಬದಲಾವಣೆ–ಕಾನೂನುಗಳನ್ನು ತರಲು ಈ ಮೊಗಲ ಬಾದಷಹರು ಪ್ರಯತ್ನಿಸಿದ ಸಮಯದಲ್ಲಿ ಸಹಜವಾಗಿಯೇ ಅವರ ಮಾತೃಭಾಷೆಯ–ಪ್ರಭು ಭಾಷೆಯ ಪ್ರಭಾವ, ಸರ್ವಮಾನ್ಯತೆ ಎಲ್ಲೆಡೆಯಲ್ಲೂ ವ್ಯಕ್ತವಾಯಿತು. ಸ್ಥೂಲವಾಗಿ ಕ್ರಿ. ಶ. ೧೩೪೮ ರಿಂದ ೧೭೦೦ ರ ವರೆಗೆ, ಅಂದರೆ ಹದಿನಾಲ್ಕನೆಯ ಶತಮಾನದಿಂದ ೧೭ ನೆಯ ಶತಮಾನ ಪೂರ್ತಿ ಸುಮಾರು ನಾಲ್ಕು ನೂರು ವರ್ಷಗಳವರೆಗೆ ಈ ಅವಧಿ ಹರಡಿಕೊಂಡಿದೆ. ಮೊಗಲರ ಆಸ್ಥಾನ ಭಾಷೆಯ ಪ್ರಭಾವಕ್ಕೆ ಇತರ ಎಲ್ಲ ಭಾರತೀಯ ಭಾಷೆಗಳಂತೆ ಕನ್ನಡ ನುಡಿಯೂ ಒಳಗಾಯಿತು. ಇದು ಅನಿ

* ಈ ಪದ ಕನಕದಾಸರ ಕಾಲಕ್ಕಾಗಲೆ ಬಳಕೆಗೆ ಬಂದಿತ್ತು ; ಅವರ ಒಂದು ಹಾಡಿನಲ್ಲಿ "...ಅಲ್ಲಾ ಖುದಾ ಆತ್ಮವ ತಿಳಿಯದೆ ಮುಲ್ಲಾ ಶಾಸ್ತ್ರದ ನೆಲೆಯ ಗುರುತರಿಯದೆ ಜೊಳ್ಳ ಕೂಗನು ಕೂಗಿ ಬೊಗುಳೆ ದಾಯಾರುವಂಥ ಕಳ್ಳತುರುಕರಿಗೆಲ್ಲ ವೀರಸ್ವರ್ಗವುಂಟೆ ಕೃಷ?...ಎಂಬ ಕಟುವಾದ ವಿಡಂಬನೆಯ ಮಾತುಗಳಿವೆ.

ವಾರ್ಯ. ಇದರ ಜೊತೆಗೆ ೧೮ ನೆಯ ಶತಮಾನ ದಲ್ಲಿ ಹೈದರ್ ಮತ್ತು ಅವರ ಮಗ ಟೀಪುಸುಲ್ತಾನರ ಪ್ರಾಬಲ್ಯ ಮೈಸೂರು ದೇಶದಲ್ಲಿ ಅಧಿಕವಾಗಿತ್ತು. ಟೀಪುವಂತೂ ನಂದಿ-ಶ್ರೀರಂಗಪಟ್ಟಣ-ಬಳ್ಳಾರಿ ಮೊದಲಾದ ಕಡೆಗಳಲ್ಲೆಲ್ಲಾ ಸುತ್ತಾಡಿ ಅಲ್ಲೆಲ್ಲಾ ತನ್ನ ದೌಲತ್ತಿನ ದರ್ಬಾರಿನ ಜೊತೆಯಲ್ಲಿ ತನ್ನ ಭಾಷೆಯ ವರ್ಚಸ್ಸನ್ನೂ ಜನತೆಯ ಮೇಲೆ ಬೀರಿದನು. ಈ ಮಧ್ಯೆ ಬಿಜಾಪುರದ ಸುತ್ತಮುತ್ತಲಿನ ಭಾಗ (ಇಬ್ರಾಹಿಂ) ಮುಸಲ್ಮಾನ್ ದೊರೆಗಳ–ಸಾಮಂತರ ಆಶ್ರಯದಲ್ಲಿತ್ತು. ಅವರುಗಳು ಮಸೀದಿ (<ಮಸ್ಜಿದ್) ಗಳನ್ನು ಕಟ್ಟಿಸಿದರು ಮತ್ತು ಅದರ ಜೊತೆ ಜೊತೆಗೇ ಅವರ ಭಾಷೆಯ ಬೀಜಗಳನ್ನೂ ಬಿತ್ತಿದರು. ಅನೇಕ ಕೈಫಿಯತ್ತು ಮತ್ತು ಬಖೈರುಗಳ ಆಧಾರದಿಂದ ಹೇಳುವುದಾದರೆ ಕೆಲವು ರಾಜರುಗಳ ನಡುವೆ ಉರ್ದು ಭಾಷೆಯಲ್ಲಿಯೂ ಪತ್ರವ್ಯವಹಾರ ನಡದಿದೆ. ಇತ್ತೀಚೆಗೂ ಹೈದರಾಬಾದಿನ ನಿಜಾಮರ ಆಡಳಿತದ ವ್ಯಾಪ್ತಿಗೆ ಕನ್ನಡದ ಕೆಲವು ಭಾಗಗಳು ಒಳಗಾಗಿವೆ.

೧೭ ನೆಯ ಶತಮಾನದ ತರುವಾಯ ಭಾರತೀಯ ಇತಿಹಾಸದಲ್ಲಿ ರಾಜಕೀಯ ದೃಷ್ಟಿಯಿಂದಲೂ, ಭಾಷಾದೃಷ್ಟಿಯಿಂದಲೂ ಮಹತ್ತರ ಬದಲಾವಣೆಗಳು ನಡೆದುವು. ಇದು ಮೂರನೆಯ ಮಜಲು. ಇಂಗ್ಲಿಷರು ವ್ಯಾಪಾರದ ವ್ಯಾಜದಿಂದ ತಕ್ಕಡಿ ಹಿಡಿದು ವರ್ತಕರಂತೆ ಬಂದವರು ಆ ತಕ್ಕಡಿಯಲ್ಲಿ ಮಾರುವ ವಸ್ತುಗಳನ್ನು ತೂಗದೆ ಭಾರತದ ಚಪ್ಪನ್ನಾರು ಸಂಸ್ಥಾನಗಳನ್ನು ನಿಧಾನವಾಗಿ, ಒಂದೊಂದಾಗಿ ಹದವರಿತು ಸಮಯಸಾಧಿಸಿ ತೂಗಿಕೊಂಡರು, ತುಂಬಿಕೊಂಡರು. ಅವರ ಚಾಣಕ್ಯತನದಿಂದಾಗಿ 'ಈಸ್ಟ್ ಇಂಡಿಯಾ ಕಂಪನಿ' ಕ್ರಮೇಣ ಭಾರತ ಸಾಮ್ರಾಜ್ಯವನ್ನಾಳುವ ಬ್ರಿಟಿಷ್ ಸಾಮ್ರಾಜ್ಯವಾಯಿತು. ೧೮೩೦ ರಲ್ಲಿ, ಈಗ್ಗೆ ಒಂದೂವರೆ ಶತಮಾನದ ಹಿಂದೆ ಮೈಸೂರು ರಾಜ್ಯವನ್ನು ಬ್ರಿಟಿಷರು ವಹಿಸಿಕೊಂಡರು. ನಾಡಿನ ಆಡಳಿತದಲ್ಲೂ ಶಾಲಾ ಕಾಲೇಜುಗಳ ವ್ಯಾಸಂಗದಲ್ಲೂ ಇಂಗ್ಲಿಷಿನ ಮಾಧ್ಯಮವೇ ಏರ್ಪಟ್ಟು ಇಂಗ್ಲಿಷ್ ಭಾಷೆಯ ಪ್ರಾಬಲ್ಯ–ವಿಸ್ತಾರ ಮುಗಿಲು ಮುಟ್ಟಿತು. ಮೆಕಾಲೆಯ ಯೋಜನೆಯಂತೆ ಎಲ್ಲ ಶಿಕ್ಷಣರಂಗದ ಎಲ್ಲ ಘಟ್ಟಗಳಲ್ಲೂ ಇಂಗ್ಲಿಷ್ ಭಾಷೆಯನ್ನು ಖಡ್ಡಾಯವಾಗಿ ಕಲಿಯಬೇಕಾಯಿತು. ಹೀಗಾಗಿ ಆಸೇತುಹಿಮಾಚಲದ ವರೆಗೂ ಬೀಸುವ ಗಾಳಿಯಲ್ಲೂ ಇಂಗ್ಲಿಷಿನ ಗಂಧವೇ ಹೊರಸೂಸಿತು. ಮೆಲ್ಲಮೆಲ್ಲಗೆ ಆ ಕಂಪು ಜನಮನವನ್ನು ಸೂರೆಗೊಂಡಿತು. ಅಂಚೆಯ ವ್ಯವಹಾರ, ತಂತಿ ಕಳುಹಿಸುವ ಭಾಷೆ–ಎಲ್ಲೆಲ್ಲಿಯೂ ಇಂಗ್ಲಿಷ್ ರಾರಾಜಿಸಿತು. ತಮ್ಮ ತಮ್ಮ ಮಾತೃಭಾಷೆಗಳನ್ನೂ ಮರೆತು ಮಂದಿ ಆ ಪರಂಗಿಯವರ ನುಡಿಯನ್ನು ದೇವರ ಪ್ರಸಾದವೆಂದು ಕಣ್ಣಿಗೊತ್ತಿಕೊಂಡು, ನೆತ್ತಿಯ ಮೇಲಿಟ್ಟುಕೊಂಡು ಮೆರವಣಿಗೆ ಮಾಡಿ ಮೆರೆದಾಡಿದರು. ಈ ಆಂಗ್ಲಭಾಷಾ ಮೋಹಕ್ಕೆ ಮರುಳಾದವರ ಬಣ್ಣಕ್ಕೆ ಸೇರಿದ ಇನ್ನೂ ಕೆಲವು ಜನರು ನಮ್ಮಲ್ಲಿ ಇಂದಿಗೂ ಇದ್ದಾರೆ! ವಸ್ತುಸ್ಥಿತಿ ಹೀಗಿದ್ದಾಗ ಇಂಗ್ಲಿಷ್ ಪದಗಳು ಅಧಿಕ ಸಂಖ್ಯೆಯಲ್ಲಿ ಕನ್ನಡ ಭಾಷೆಯಲ್ಲಿ ಸೇರದೆ ಇರಲು ಸಾಧ್ಯವೆ? [ಕಾಲೇಜುಗಳ ಮಟ್ಟದಲ್ಲಿ ದ್ವಿತೀಯ ಭಾಷೆಯಾಗಿ, ಐಚ್ಛಿಕ ವಿಷಯವಾಗಿ, ವಿಶೇಷ ವಿಷಯವಾಗಿ ಕನ್ನಡವನ್ನು ಕನ್ನಡನಾಡಿನಲ್ಲೇ ತರಬೇಕಾದರೆ ಭಗೀರಥ ಪ್ರಯತ್ನ ನಡೆಸಬೇಕಾಯಿತು. ಅದೊಂದು ರೋಮಾಂಚಕಾರಿ ಕತೆ !]

ಇದೇ ಕಾಲದಲ್ಲಿ ವಿಜ್ಞಾನಿಗಳು ಅದ್ಭುತ ಸಂಶೋಧನೆಗಳನ್ನು ನಡೆಸಿ ನವೀನ ಕ್ಷಿತಿಜವನ್ನೇ

ತೆರೆದು ತೋರಿಸಿದರು, ಮಾನವನಿಗೆ ಸೌಲಭ್ಯದ ಸ್ವರ್ಗವನ್ನೇ ದೊರಕಿಸಿ ಕೊಟ್ಟರು. ವಿದ್ಯುತ್ತಿನ ಬಳಕೆ ವಿಶೇಷ ಪ್ರಮಾಣದಲ್ಲಿ ನಿತ್ಯದ ನೆರವಿಗೆ ನೇಹಿಗನಾಗಿ ನಿಂತಿತು. "The introduction of railways, street-cars and motor cars has lessened the frequency of many terms relating to horses, wagons, and increased that of terms relating to machinery" Leonard Bloomfield : Language: Page 399. ಹೊಸದಾಗಿ ಬಂದ ರೈಲ್ವೆ ವಿಭಾಗ ಹಾಗೂ ಇತರ ವಾಹನಗಳು ಹೆಚ್ಚು ಆಧುನಿಕವಾದ ರೀತಿಯಲ್ಲಿ ರೂಪುಗೊಂಡ ಅಂಚೆವಿಭಾಗ, ನೂತನ ಕೈಗಾರಿಕೋದ್ಯಮಗಳ ಪ್ರಾರಂಭ–ಪ್ರಗತಿ, ಚಲನ ಚಿತ್ರಗಳ ಜನಪ್ರಿಯತೆ–ಬೆಳವಣಿಗೆ, ಆಕಾಶ ಮತ್ತು ಜಲವಾಹನಗಳಲ್ಲಿ ನಡೆದ ಬದಾಲಾವಣೆ–ಸಾಧನೆ, ಜೈನ–ಬೌದ್ಧ ಧರ್ಮಗಳ ತರುವಾಯ ಶಂಕರಾಚಾರ್ಯ-ಮಧ್ವಾಚಾರ್ಯ-ರಾಮಾನುಜ-ಬಸವಣ್ಣ ಮೊದಲಾದವರು ಪ್ರಾರಂಭಿಸಿದ ಹೊಸಮತ-ಹೊಸಧರ್ಮದ ತತ್ತ್ವಗಳು ; ವೈಜ್ಞಾನಿಕ ಕ್ರಾಂತಿಯಂತೆ, ರಾಜಕೀಯ ವಿಪ್ಲವ, ಎರಡು ಮಹಾಯುದ್ಧಗಳು, ಸಿಪಾಯಿ ದಂಗೆ,–ಇವೆಲ್ಲಾ ಭಾಷೆಯಲ್ಲಿ ನೂರಾರು ಹೊಸಪದಗಳ ಪ್ರಾದುರ್ಭಾವಕ್ಕೆ ಇಂಬಾದುವು. ಮೈಸೂರು ದೇಶದಲ್ಲೇ ಹೊರ ದೇಶಗಳ-ಪರಭಾಷೆಗಳ, ಬೇರೆ ಬೇರೆ ಸಂಸ್ಕೃತಿ ಆಚಾರ ಮತ್ತು ವ್ಯವಹಾರಗಳ ಜನರಿದ್ದಾರೆ. ಭಾರತದ-(ಎಲ್ಲ ದೇಶಗಳ) ಸಂಸ್ಥಾನಗಳಲ್ಲೂ ಹಿಂದಿನಿಂದ ಇಂದಿನವರೆಗೂ ದೇಶೀಯರ ಜೊತೆಗೆ ಅರದೇಸಿಯರೂ ಪರದೇಸಿಯರೂ ನಾನಾ ದೇಸಿಗಳೂ ಹಲವು ಕಾರಣಗಳಿಂದಾಗಿ ಬಂದು ನೆಲಸಿರುವುದು ಕಂಡುಬರುತ್ತದೆ. ಹೀಗಾಗಿ ಇವರೆಲ್ಲರ ಬಳಕೆಯ ಆವಶ್ಯಕ ಪದಗಳು ಅನಾಮತ್ತಾಗಿ ಇಲ್ಲವೇ ರೂಪಾಂತರ ಪಡೆದು ಇತರೆ ಭಾಷೆಗಳಲ್ಲೂ ಸೇರಿ ಹೋಗುತ್ತವೆ. ಈ ಪದಗಳು ಎಷ್ಟರ ಮಟ್ಟಿಗೆ ಸೇರಿ ಹೋಗುತ್ತವೆಯೆಂದರೆ ಇವುಗಳ ಮೂಲವನ್ನು ಪತ್ತೆ ಹಚ್ಚುವವರೆಗೂ ಈ ಪದಗಳು ಅನ್ಯವೆಂದು ತಿಳಿಯುವುದೇ ಇಲ್ಲ. ಖುಷಿ-ಬದಲು-ಜಲ್ದಿ-ಗಿಲೀಟು ಕಾಗದ ಇತ್ಯಾದಿ ಪದಗಳು ಕನ್ನಡದ ಪದಗಳಲ್ಲ, ಎರವಲು ಪದಗಳು ಎಂದು ಹೇಳಿದರೆ ಅನೇಕರು ನಂಬದಷ್ಟರ ಮಟ್ಟಿಗೆ, ನಮ್ಮ ಸ್ವಂತದ್ದೆಂಬಂತೆ ಕನ್ನಡದ ಜಾಯಮಾನಕ್ಕೆ ಸಹಜವಾಗಿ ಸೇರಿ ಹೋಗಿವೆ.

ಹೊಸ ವಿಚಾರ, ಹೊಸ ಆಚಾರ, ಹೊಸ ಸಂಶೋಧನೆ,ಹೊಸ ಪರಿಸರಣ ಮತ್ತು ಹೊಸ ಅನುಭವಗಳಿಂದ ಹೊಸಪದಗಳು ಭಾಷೆಯಲ್ಲಿ ಕಾಣಿಸಿಕೊಳ್ಳುತ್ತವೆ,ನೂತನಶಬ್ದಗಳು ನಿರ್ಮಾಣಗೊಂಡು ನುಡಿಯೊಳಗೆ ನುಸುಳುತ್ತವೆ. ವ್ಯಕ್ತಿಗಳ ಹೆಸರುಗಳೂ ಊರುಗಳ ಹೆಸರುಗಳೂ ಹಲವು ಕಾರಣಗಳಿಂದಾಗಿ ಪ್ರಚಾರದಲ್ಲಿ ಬರುತ್ತವೆ. ಫೋರ್ಡ್ ಕಂಪೆನಿ–ಫೋರ್ಡ್‌ಗಾಡಿ, ಗಾಂಧಿಟೋಪಿ,ತಾತಾ ಕಂಪನಿ,ತಾತಾ ಎಣ್ಣೆ (–ಸೋಪು),ಬಾಟಾ–ಹವಾಯಿ–ಕರೋನ–ಫ್ಲೆಕ್ಸ್ ಇತ್ಯಾದಿ ಕಂಪನಿಗಳ ಚಪ್ಪಲಿ, ಬೂಡ್ಸ್ ಕಾಶ್ಮೀರದ ಶಾಲು, ಅರಬ್ಬಿ ಕುದುರೆ, ಭದ್ರಾವತಿಕಾಗದ; ಮೈಸೂರು ಪೇಟ(ರುಮಾಲು), ಮಲ್ಲಿಗೆ,ಸೋಪು; ಮದ್ದೂರುವಡೆ, ಮಂಡ್ಯಶಕ್ಕರೆ, ಬೊಂಬಾಯಿ ಬೋಂಡ, ಕೊಡಗಿನ ಕಿತ್ತಳೆ-ಜೇನು, ನಂಜನಗೂಡಿನ ರಸಬಾಳೆ, ಕಾಬೂಲು ದ್ರಾಕ್ಷಿ–ಸೇಬು–ದಾಳಿಂಬೆ–ಇತ್ಯಾದಿ ಹೊಸದಾಗಿ ಹುಟ್ಟಿಕೊಂಡ ನೂತನ ಪದಗಳನ್ನು ಗಮನಿಸಿದರೆ ಈ ವರೆಗಿನ ವಿವರಣೆ ಸ್ಪಷ್ಟವಾಗುತ್ತದೆ. ಸ್ವಾತಂತ್ರ್ಯ ಸಂಗ್ರಾಮದ ಸಮಯದಲ್ಲಿ ಉಪವಾಸ, ಮುಷ್ಕರ, ಹಿಂದೂಸ್ಥಾನ್ ಹಮಾರ ಹೈ, ಚಲೋ ಹಿಂದೂಸ್ಥಾನ್,ಇನ್‌ಕಿಲಾಬ್ ಜಿಂದಾಬಾದ್,ಕಾಂಗ್ರೆಸ್, ಕ್ವಿಟ್ ಇಂಡಿಯಾ, ಖಾದಿ, ಚರಕ, ಓಟು–ಇತ್ಯಾದಿ ಪದಗಳು ಪ್ರಚಾರಕ್ಕೆ ಬಂದುವು. ರಾಜ

ಕೀಯ ಬದಲಾವಣೆ, ಆಡಳಿತದಲ್ಲಿ ಬರುವ ಹೊಸ ಪದ್ಧತಿಗಳ ಚಲಾವಣೆ, ಇವು ಭಾಷೆಯ ಮೇಲೆ ಬಹುವಾಗಿ ಪರಿಣಾಮವನ್ನು ಉಂಟುಮಾಡುತ್ತವೆ ಎಂಬುದನ್ನು ನಿದರ್ಶನಗಳೊಡನೆ ನೋಡಬಹುದು. ಬಹಳ ಹಿಂದೆ ಹಾಗ, ಅಡ್ಡಹಾಗ, ಮುಪ್ಪಾಗದ ಕ್ರಮವಿತ್ತು. ಅದು ತಪ್ಪಿ ಮೊನ್ನೆ ಮೊನ್ನೆಯ ವರೆಗೂ ಇದ್ದ ಕಾಸು, (ಬಿಡಿಕಾಸು), ಮೂರು ಕಾಸು (ಬಿಲ್ಲೆ-ಬಿಲ್ಲಿ) ತೂತು ಮೂರುಕಾಸು, ಆರುಕಾಸು (ಅರ್ಧಾಣೆ) ದುಡ್ಡು (ನಾಲ್ಕುಕಾಸು=೧ದುಡ್ಡು) ಆಣೆ, ದೊಡ್ಡಾಣೆ, ನಾಲ್ಕಾಣೆ (ಪಾವಲಿ) ಎಂಟಾಣೆ (ಅರ್ಧರೂಪಾಯಿ) ; ತೊಲ, ಚಟಾಕು ಅರೆಪಾವು (ಅರ್ಪಾವು) ಪಾವು, ಸೇರು, ಸವ್ವಾಸೇರು, ಪಂಚೇರು, ದಡಿಯ, ಮಣ-ಇವೆಲ್ಲ ಇಂದು ಹೊರಟುಹೋಗಿ ಇವುಗಳ ಸ್ಥಾನದಲ್ಲಿ ನಯಾಪೈಸೆ, ಗ್ರಾಂ, ಕಿಲೋಗ್ರಾಮ್, ಕಿಲೋಗಳ ಲೆಕ್ಕ ಬಂದಿದೆ. ಬಹಳ ಹಿಂದೆ ಇದ್ದ ಯೋಜನ – ಗಾವುದ – ಹರದಾರಿಗಳು ಹೋಗಿ ಫರ್ಲಾಂಗು-ಮೈಲಿ ಬಂದಿದ್ದುವು. ಈಗ ಅದು ತಪ್ಪಿಹೋಗಿ ಕಿಲೋಮೀಟರ್ ಅಳತೆ ಬಂದಿದೆ. ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಗಳೆಂಬ ಹಳೆಯ ಪದಗಳು ಬಿದ್ದುಹೋಗಿ ಹಳ್ಳಿ ಪಟ್ಟಣ ಹೋಬಳಿ ತಾಲ್ಲೂಕು ಜಿಲ್ಲೆಗಳು ಕಾಣಿಸಿಕೊಂಡಿವೆ. ಹೀಗೆ ಪದ್ಧತಿಗಳೊಡನೆ ಪದಗಳೂ ಪರಿವರ್ತಿತವಾಗುತ್ತಿರುತ್ತವೆ.

ಎಷ್ಟೋ ಬಾರಿ ಸುಪ್ರಸಿದ್ಧರ ಹೆಸರುಗಳು ಸಾಮಾನ್ಯ ವಾಚಕ ಪದಗಳಾಗಿ ಬಳಕೆಯಲ್ಲಿ ಬಂದು ಹೋಗುತ್ತವೆ. ಉದಾಹರಣೆ ರುಸ್ತುಂ ಎಂಬ ಪದ. ರುಸ್ತುಂ ಇರಾನಿನ ಪ್ರಖ್ಯಾತ ವೀರ, ಪೈಸ್ತಾನದ ಒಡೆಯ, ತಾಯಮಿನೆಯ ಪತಿ, ಸೋಹ್ರಾಬನ ತಂದೆ, ಎದುರಾಳಿಗಳಿಗೆ ಸಿಂಹಸ್ವಪ್ನ. ಆ ಮಹಾವೀರನೊಬ್ಬನ ಹೆಸರು ಈಗ ಸಾಮಾನ್ಯ ಬಳಕೆಯಲ್ಲಿದೆ. ಮೀಸೆಯ ಮೇಲೆ ಕೈ ಆಡಿಸುತ್ತಾ 'ರುಸ್ತುಂ' ಎಂದುಕೊಂಡರೆ ಠೀವಿಯ ಮಾತಾಗಿ ಪರಿಣಮಿಸುತ್ತದೆ; 'ಒಳ್ಳೆ ರುಸ್ತುಂ ಇದ್ದಹಾಗೆ ಇದ್ದಾನೆ' ಎಂಬುದು ಪ್ರಶಂಸೆಯ ಪರಾಕ್ರಮದ ಪರಮಾವಧಿ. 'ಒಳ್ಳೆ ಬಕಾಸುರ ತಿಂದ ಹಾಗೆ ತಿನ್ನುತ್ತೀಯ'-ಎಂಬ ಹೇಳಿಕೆಯಿದೆ. ಪಂಚಪಾಂಡವರು ಅರಗಿನ ಮನೆಯಿಂದ ತಮ್ಮ ತಾಯಿಯೊಡನೆ ತಪ್ಪಿಸಿಕೊಂಡು ಏಕಚಕ್ರಪುರದಲ್ಲಿ ಬ್ರಾಹ್ಮಣ ವೇಷದಲ್ಲಿದ್ದಾಗ ಭೀಮ ಬಕನೆಂಬ ರಾಕ್ಷಸನನ್ನು ಕೊಂದಕತೆ ಎಲ್ಲರಿಗೂ ಗೊತ್ತಿದೆ. ಏಕಚಕ್ರಪುರದ ಹತ್ತಿರದ ಒಂದು ಗುಹೆಯೊಳಗೆ ವಾಸಿಸುತ್ತಿದ್ದ ಹೊಟ್ಟೆಬಾಕನಾದ ಆ ಕ್ರೂರರಾಕ್ಷಸನು ಪ್ರಾಣಿಗಳನ್ನೂ, ಪುರುಷರನ್ನೂ, ಒಂದು ಬಂಡಿ ಆಹಾರವನ್ನೂ ತನ್ನಿಷ್ಟ ಬಂದಂತೆ ಅಧಿಕ ಪ್ರಮಾಣದಲ್ಲಿ ತಿನ್ನುತ್ತಿದ್ದುದರಿಂದ ಇಂದು ಹೆಚ್ಚಾಗಿ ತಿನ್ನುವವರಿಗೆ ಬಕಾಸುರನೆಂಬ ಬಿರುದು ಬರುತ್ತದೆ! ಲಂಕಾಧಿಪತಿ ರಾವಣನ ಸೋದರನಾದ ಕುಂಭಕರ್ಣ ಸುಮಾರು ಆರುತಿಂಗಳವರೆಗೂ ದೀರ್ಘಕಾಲ ನಿದ್ರಿಸುತ್ತಿದ್ದನೆಂದು ಪುರಾಣಗಳ ಹೇಳಿಕೆ. ಆದುದರಿಂದ ಯಾರಾದರೂ ಹೆಚ್ಚುಕಾಲ ನಿದ್ರಿಸುತ್ತಿದ್ದರೆ ಅವರನ್ನು ಕುಂಭಕರ್ಣನೆಂದು ಕರೆಯುವುದು ರೂಢಿಯಾಗಿದೆ. ಹೀಗೆಯೇ ನಿಶ್ಚಲ ಮನಸ್ಸಿನ ಪ್ರಯತ್ನಕ್ಕೆ ಭಗೀರಥ ಸಾಹಸವೆಂದೂ, ದಾನಕ್ಕೆ ದಾನಶೂರ ಕರ್ಣ-ದಧೀಚಿ, ನಾಗಾನಂದರೂ, ಐಶ್ವರ್ಯಕ್ಕೆ ಕುಬೇರ, ಸತ್ಯ-ತ್ಯಾಗಕ್ಕೆ ಹರಿಶ್ಚಂದ್ರ, ಭೋಗಕ್ಕೆ ದೇವೇಂದ್ರ, ಒಳ್ಳೆಯಗುಣಗಳಿಗೆ ಧರ್ಮರಾಯ- ಇತ್ಯಾದಿ ಪೌರಾಣಿಕ ಆದರ್ಶ ಪುರುಷರ ಹೆಸರುಗಳು ನಿತ್ಯದ ವ್ಯವಹಾರದ ಹೆಸರುಗಳಾಗಿ ಜನ ಬಳಕೆಯಲ್ಲಿ ಉಳಿದಿವೆ, ಭಾಷೆ ಬೆಳೆಯಲು ಇಂಬಾಗಿವೆ. ಜೀವಂತಭಾಷೆ ತನ್ನ ಸೌಕರ್ಯಕ್ಕಾಗಿ ಎಲ್ಲ ಕಡೆಗಳಿಂದಲೂ ಸಹಸ್ರಾರು ಪದಗಳನ್ನು ಸ್ವೀಕರಿಸಲೇಬೇಕು. ಆರೋಗ್ಯವಂತರಾಗಿ ಬಾಳ

ಬೇಕೆನ್ನುವವರು ಹೇಗೆ ಹೊಸಗಾಳಿ ಹೊಸಬೆಳಕನ್ನು ಎಲ್ಲ ಕಡೆಗಳಿಂದಲೂ ಸ್ವೀಕರಿಸುವರೋ–ಸ್ವೀಕರಿಸಬೇಕೋ, ಹಾಗೆ ಆಡುನುಡಿ ಇನ್ನೂ ನೂರು ಕಾಲ ಆಳಿ–ಬಾಳಿ ಬೆಳಗಬೇಕಾದರೆ ತನ್ನಲ್ಲಿಲ್ಲದ ಆದರೆ ತನಗೆ ಅಗತ್ಯವಾದ ಎಲ್ಲ ಹೊಸಪದಗಳನ್ನೂ ಆನಂದದಿಂದ ಆಹ್ವಾನಿಸಬೇಕು, ಸಂತೋಷದಿಂದ ಸ್ವೀಕರಿಸಬೇಕು, ಸಂಕೋಚವಿಲ್ಲದೆ ಬಳಸಿಕೊಳ್ಳಬೇಕು–ಅದೇ ಭಾಷೆಯಾಳುವ ಲಕ್ಷಣ, ಬೆಳೆಯುವ ಚಿಹ್ನೆ. ಅನ್ಯಭಾಷೆಯ ಪದಗಳನ್ನು ತೆಗೆದುಕೊಳ್ಳುವ ವಿಚಾರದಲ್ಲಿ ಮಡಿವಂತಿಕೆ ಸಲ್ಲ, ಹೀಗೆಂದು ಭಾಷಾಶಾಸ್ತ್ರಕಾರಬಲ್ಲ; ಪರಭಾಷೆಯಿಂದ ಪದಗಳನ್ನು ಪಡೆಯುವುದು ಅಪಹರಣವಲ್ಲ. ಅದು ಸ್ವೀಕರಣ! ಆದರೆ ಹಾಗೆಂದು ಅನವಶ್ಯಕವಾಗಿ ಅನ್ಯಭಾಷೆಯ ಪದಗಳನ್ನೇ ಬಳಸಬಾರದು, ತುಂಬಿಕೊಳ್ಳಬಾರದು. ನಮ್ಮ ವ್ಯಕ್ತಿತ್ವ–ಆಕಾರಗಳನ್ನು ಅಳಿಸದಂತೆ, ನಮ್ಮ ಉಸಿರಾಟಕ್ಕೇ ಭಾರವಾಗದಂತೆ, ಆದರೆ ನಮ್ಮ ಅಂದಚೆಂದಗಳನ್ನೂ, ಆನಂದ ಐಶ್ವರ್ಯಗಳನ್ನೂ ವೆಗ್ಗಳಿಸಲು ಇಂಬಾಗಬಲ್ಲ ಎಲ್ಲ ಪದಗಳನ್ನೂ ಸ್ವೀಕರಿಸುವಂತೆ ನೋಡಿಕೊಳ್ಳಬೇಕು.

ಜೀವಂತಭಾಷೆ ಬೆಳೆಯುವ ಬಳ್ಳಿ, ಸಸಿ. ಭಾಷೆ ಬೆಳೆಯುವಾಗ ಅದರಲ್ಲಿ ನೂರು ಪರಿವರ್ತನೆಗಳು, ನೂರು ಬದಲಾವಣೆಗಳು ಆಗುತ್ತವೆ. ಬದಲಾವಣೆಯ ಕೆಲವು ಕಾರಣಗಳನ್ನು ಇದುವರೆಗೆ ವಿವರಿಸಿದೆವು. ಆದರೆ ಭಾಷೆಯ ಬದಲಾವಣೆಗೆ ಇರುವುದು ಅಷ್ಟೇ ಕಾರಣಗಳಲ್ಲ. ಇನ್ನುಳಿದ ಕಾರಣಗಳನ್ನು ಭಾಷಾವಿಜ್ಞಾನಿಗಳು ಆಂತರಿಕ ಮತ್ತು ಬಾಹ್ಯ–ಎಂದು ಎರಡು ಪ್ರಧಾನ ಗುಂಪುಗಳನ್ನಾಗಿ ವಿಂಗಡಿಸುತ್ತಾರೆ. ಮನುಷ್ಯ ಮೊದಲಿನಿಂದಲೂ ಸೌಕರ್ಯ–ಸೌಲಭ್ಯಗಳನ್ನು ಬಯಸುತ್ತಾ ಬಂದಿದ್ದಾನೆ. ಅದರ ಜೊತೆಗೆ ಅವನ ನಡೆನುಡಿಗಳಲ್ಲಿ, ಉಡುಗೆ–ತೊಡುಗೆಗಳಲ್ಲಿ ಸೌಂದರ್ಯ, ಸೌಷ್ಠವ, ಅಚ್ಚುಕಟ್ಟು ಕಾಣುವಂತೆ ಪ್ರಯತ್ನಗಳು ನಡೆದಿವೆ. ಆಡುವ ಮಾತಿನಲ್ಲಿ ಒಂದು ಬಗೆಯ ಠೀವಿ, ಶಿಸ್ತು, ಗತ್ತು ಕಾಣತೊಡಗಿದೆ. No two languages employ precisely the same sound (Sturtevant. Page 39.) ಎಂಬಂತೆ No two persons employ precisely the same sound ಎಂದೂ ನಾವು ಹೇಳಬಹುದು. ಒಬ್ಬನ ಆಕಾರದಂತೆ ಇನ್ನೊಬ್ಬನದಿಲ್ಲ, ಒಬ್ಬನ ಮಾತಿನಂತೆ–ಧ್ವನಿಯಂತೆ–ಉಚ್ಚಾರ ಕ್ರಮದಂತೆ ಇನ್ನೊಬ್ಬನದಿಲ್ಲ. ಒಬ್ಬ ಮನುಷ್ಯ ಇನ್ನೊಬ್ಬನಂತೆ ಎಲ್ಲ ವಿಧದಲ್ಲಿಯೂ ಇರುವುದು ಎಷ್ಟು ಅಪರೂಪವೋ, ಒಬ್ಬನ ಧ್ವನಿ-ಉಚ್ಚಾರದಂತೆ ಇನ್ನೊಬ್ಬನ ಧ್ವನಿ-ಉಚ್ಚಾರಗಳು ಇರುವುದೂ ಅಷ್ಟೇ ಅಪರೂಪ. ಇಷ್ಟೇ ಅಲ್ಲ, ಒಬ್ಬನೇ ವ್ಯಕ್ತಿ ಒಂದೇ ಪದವನ್ನು ಒಂದೇ ರೀತಿಯಲ್ಲಿ ಎರಡುಬಾರಿ ಉಚ್ಚರಿಸುವುದೂ ಕೆಲವೊಮ್ಮೆ ಕಷ್ಟವೆಂಬುದು ವೈಜ್ಞಾನಿಕ ವಿಶ್ಲೇಷಣೆ, ಪ್ರಯೋಗ-ಪರೀಕ್ಷೆಗಳಿಂದ ಸ್ಪಷ್ಟವಾಗಿದೆ. ಏಕೆಂದರೆ ಇದು ದೇಹದ ಒಳಭಾಗದಲ್ಲಿ ಧ್ವನಿ ಉಚ್ಚಾರವಾಗುವ ಮಾಂಸಖಂಡಗಳ ಧ್ವನ್ಯಂಗಗಳ ವ್ಯವಸ್ಥೆಗೆ ಸಂಬಂಧಪಟ್ಟದ್ದು. ಸಾಮಾನ್ಯವಾಗಿ ಹೆಂಗಸಿನ ಧ್ವನಿ ಕೇಳುವುದಕ್ಕೆ ಇಂಪಾಗಿಯೂ, ದಪ್ಪವಿಲ್ಲದೆ-ಒರಟಿಲ್ಲದೆ ಮೃದುವಾಗಿಯೂ ಇರುತ್ತದೆ; ಗಂಡಸರ ಉಚ್ಚಾರ-ಧ್ವನಿ ಹೆಚ್ಚು ಗಡುಸಾಗಿಯೂ, ಮಂದವೆಂಬಂತೆ ಸಾಂದ್ರವಾಗಿಯೂ ಇರುತ್ತದೆ. ಆದರೆ ಈ ಪದ್ಧತಿ ವಿಪರೀತವಾಗಿರುವುದೂ ಉಂಟು. ಅದು ಉಚ್ಚಾರ ಮಾಡುವ ಸ್ನಾಯುಗಳ ಹೆಚ್ಚು ಕಡಮೆಗೆ ಸೇರಿದ ವಿಷಯ. ವೈಯಕ್ತಿಕ ಉಚ್ಚಾರಭೇದ ಉಂಟು, ಅದು ವರ್ಣೋತ್ಪತ್ತಿಸ್ಥಾನದಲ್ಲಿನ ಭೇದ. ಈ ಭೇದವೂ ಭಾಷೆಯಲ್ಲಾಗುವ ಪರಿವರ್ತನೆಗಳಲ್ಲಿ ತನ್ನ ಪಾತ್ರವಹಿಸುವುದರಿಂದ ಗಮನಾರ್ಹ.—ಇವೆಲ್ಲಾ ಆಂತರಿಕ ಕಾರಣಗಳು.

ಗಡಿನಾಡಿನಲ್ಲಿರುವ ಜನರ ಭಾಷೆ ವಿಶಿಷ್ಟ ವಾಗಿರುತ್ತದೆ. ಕರ್ನಾಟಕದ ಪಶ್ಚಿಮದಲ್ಲಿ ಅರಬ್ಬಿ ಸಮುದ್ರವಿದೆಯಾದರೂ ಉತ್ತರದಲ್ಲಿನ ಮಹಾ ರಾಷ್ಟ್ರ ಪೂರ್ವದಲ್ಲಿರುವ ಆಂಧ್ರ, ತಮಿಳುನಾಡು ಗಳು, ದಕ್ಷಿಣದಲ್ಲಿರುವ ತಮಿಳು-ಮಲಿಯಾ ಳದೇಶ ಗಳು ಕನ್ನಡ ನುಡಿಯ ಮೇಲೆತಮ್ಮ ಪ್ರಭಾವ ಬೀರಿವೆ. ಒಂದು ಭಾಷೆಯ ಮೇಲೆ ಇನ್ನೊಂದು ಭಾಷೆಯ ಪ್ರಭಾವಬಿದ್ದು ಆ ಭಾಷೆ ಎರಡರ ಸಂಬಂಧದಿಂದ ಹೊಸರೂಪಗಳನ್ನೂ ಹೊಸಪದ ಗಳನ್ನೂ ಆನಾಮತ್ತಾಗಿ ತೆಗೆದುಕೊಳ್ಳುತ್ತವೆ,ಸೃಷ್ಟಿ ಮಾಡಿ ಕೊಳ್ಳುತ್ತವೆ. ಇದು ಪರಸ್ಪರ ಭಾಷೆಗಳ ಸಂಪರ್ಕದ ಸ್ವರೂಪಕ್ಕೂ ನಿಕಟಬಾಂಧವ್ಯಕ್ಕೂ ಸೇರಿದ್ದು. ಮೈಸೂರು ಕನ್ನಡ, ಮಂಗಳೂರು ಕನ್ನಡ, ಧಾರವಾಡ ಕನ್ನಡ, ಬಳ್ಳಾರಿ ಕನ್ನಡ, ಹೈದರಾಬಾದು ಕನ್ನಡ, ರಾಯಚೂರು ಕನ್ನಡ, ಕೋಲಾರ ಕನ್ನಡ—ಹೀಗೆ ಕನ್ನಡನುಡಿಯೊಂದ ರಲ್ಲೇ ಹಲವು ಪ್ರಭೇದಗಳು ಕಾಣಲು ಈ ಗಡಿ ನಾಡಿನ ಭಾಷೆಗಳೇ ಬಹುಮಟ್ಟಿಗೆ ಕಾರಣ ವಾಗಿವೆ. ಹಾಗೆಯೇ ಒಂದು ದೇಶದ ಭಾಷೆ ಬೇರೆ - ಆಡಳಿತಭಾಷೆಯೇ ಬೇರೆಯಾದಾಗ ಆ ಆಡಳಿತಭಾಷೆಯ ಪ್ರಭಾವ-ಪರಿಣಾಮ ದೇಶ ಭಾಷೆಯಮೇಲೆ ವಿಶೇಷಪ್ರಮಾಣದಲ್ಲಿ ನಡೆಯುವು ದೆಂಬುದನ್ನೂ, (ಕನ್ನಡಭಾಷೆಯಮೇಲೆ ಹಿಂದೆ ಸಂಸ್ಕೃತಭಾಷೆ ಈ ಕೆಲಸ ನಡೆಸಿತ್ತು. ಈಗ ಇಂಗ್ಲಿಷ್ ಭಾಷೆಯ ಸಂಸರ್ಗದಿಂದ ಇಂಗ್ಲಿಷ್ ಪದಗಳು ಹೇರಳವಾಗಿ ಬಳಕೆಗೆ ಬರುತ್ತಿವೆ ಯೆಂಬುದನ್ನೂ) ಈ ಮೊದಲೇ ವಿವರಿಸಲಾಗಿದೆ. ಕೈಲಾಸಂ ನಾಟಕಗಳು ಇಂಗ್ಲಿಷ್ ಕನ್ನಡ ಕಲ ಬೆರಕೆಗೆ ಸರಿಯಾದ ನಿದರ್ಶನ. ಹಿಂದೆ ದೇಶ ವಿಸ್ತಾರವೂ, ಅವುಗಳ ಮಧ್ಯೆ ನದಿ ಬೆಟ್ಟ ಕಾಡು ಗಳೂ ಬಂದು ಜನರ ಸಂಪರ್ಕವನ್ನು ಕಡಮೆ ಮಾಡುತ್ತಿದ್ದುವು ಮತ್ತು ಈ ಸಂಪರ್ಕ ಕಡಮೆ ಯಾದಂತೆಲ್ಲಾ ಭಾಷೆಯಲ್ಲಿ ವ್ಯತ್ಯಾಸ ಮಾಡು ತ್ತಿತ್ತು. ಪ್ರಾಂತಭೇದಗಳು ಉಂಟಾಗಲು ಇದು ಪ್ರಧಾನವಾದ ಕಾರಣವಾಗಿತ್ತು. ಆದರೆ ಇಂದು ಭೂ ವಾಯು ಜಲವಾಹನ ಸೌಕರ್ಯದಲ್ಲಿ ವಿಶೇಷ ಪ್ರಗತಿಯುಂಟಾಗಿರುವುದರಿಂದ ಸಂಪರ್ಕ ಸಮೀಪತರವಾಗಿದೆ. ಆದರೆ ಇತರೆ ಕೆಲವು ಕಾರಣ ಗಳು ಇಂದು ಭಾಷೆಯಲ್ಲಿ ವ್ಯತ್ಯಾಸಗಳಿಗೆ ಅವ ಕಾಶ ಮಾಡಿಕೊಟ್ಟವೆ. ಸಮಾಜದಲ್ಲಿ ಶ್ರೀಮಂತ ಬಡವ, ವಿದ್ಯಾವಂತ-ಅವಿದ್ಯಾವಂತ, ಸಂಸ್ಕೃತ ಅಸಂಸ್ಕೃತ, ಹಳ್ಳಿಯವನು ಪಟ್ಟಣದವನು,— ಈ ರೀತಿಯ ಮಾನವಕಲ್ಪಿತ ವಿಭಾಗಗಳೂ ಭಾಷಾ ವ್ಯತ್ಯಾಸಗಳಿಗೆ ಕಾರಣವಾಗುತ್ತಿವೆ. ಮೈಸೂರಿನಲ್ಲೇ ಕನ್ನೆಗೌಡನ ಕೊಪ್ಪಲ ಕನ್ನಡಕ್ಕೂ ಅದರ ಪಕ್ಕದಲ್ಲೇ ಇರುವ ಸರಸ್ವತೀಪುರಂ ನ ಜನ ರಾಡುವ ಕನ್ನಡಕ್ಕೂ ಎಷ್ಟೋ ವ್ಯತ್ಯಾಸವಿದೆ. ಒಂದು ಭಾಗದ ಸರ್ಕಾರಿ ಅಧಿಕಾರಿಗಳನ್ನು ಇನ್ನೊಂದು ಭಾಗಕ್ಕೆ—ಉದಾಹರಣೆಗೆ ಧಾರ ವಾಡದವರನ್ನು ಬೆಂಗಳೂರಿಗೆ ವರ್ಗಾಯಿಸಿದರೆ ಅವರು ಮೊದಲು ಮಾತನಾಡುತ್ತಿದ್ದ ಭಾಷೆ ಯಲ್ಲೇ ಹಲ ಕೆಲವು ಮಾರ್ಪಾಟುಗಳಾಗುತ್ತಿರು ತ್ತವೆ. ಭಾಷೆ ನಿರಂತವಾಗಿ ಬೆಳೆಯುತ್ತಿರುವುದ ರಿಂದ ಹಳೆಯ ಕೆಲವು ಪದಗಳು ಅದೃಶ್ಯವಾಗು ತ್ತವೆ, ಇನ್ನುಕೆಲವು ಅಪರೂಪವಾಗುತ್ತವೆ, ಮತ್ತೆ ಕೆಲವು ಬೇರೆ ಅರ್ಥದಲ್ಲಿ ಬಳಕೆಗೆ ಬರುತ್ತವೆ.

—ಇದುವರೆಗೂ ವಿವರಿಸಿದ ಸ್ಥೂಲ ವಿಭಾಗ ಕ್ರಮಗಳ ಒಳಪಂಗಡಗಳನ್ನು ಸೂಕ್ಷ್ಮ ವಾಗಿ ನೋಡೋಣ. ಭಾಷೆಯಲ್ಲಿ ರೂಪವ್ಯತ್ಯಾಸ ಗಳೂ, ಧ್ವನಿ-ಪದ-ಅರ್ಥ ಇತ್ಯಾದಿಗಳಲ್ಲಿ ಆಗುವ ವ್ಯತ್ಯಾಸಗಳೂ ಗಮನಾರ್ಹವಾಗಿರುತ್ತವೆ. ವ್ಯತ್ಯಾಸ ಯಾವುದೇ ಆಗಲಿ, ಅದು ಭಾಷೆಯ ಬೆಳ ವಣಿಗೆಗೆ ಸಂಬಂಧಪಟ್ಟದ್ದು, ನುಡಿಯ ಏರು

ಪೇರಿಗೆ ಸೇರಿದ್ದು. ಸಾಮಾನ್ಯವಾಗಿ ಎಲ್ಲ ವ್ಯತ್ಯಾಸಗಳೂ ಭಾಷೆಯ ಬೆಳವಣಿಗೆಯಲ್ಲಿ ಒಂದು ಹೆಜ್ಜೆ ಮುಂದಮುರಿಯಲು ಸಹಾಯ ಮಾಡುತ್ತವೆ. ಭಾಷೆಯಲ್ಲಿ ಆಗುವ ಅರ್ಥವ್ಯತ್ಯಾಸವನ್ನು ಕುರಿತು ವಿವೇಚಿಸುವ ಶಾಸ್ತ್ರವನ್ನು ಶಬ್ದಾರ್ಥ (Semantics) ಶಾಸ್ತ್ರ ಎಂದೂ, ಧ್ವನಿಗೆ ಸಂಬಂಧಪಟ್ಟಂತೆ ಆಗುವ ವ್ಯತ್ಯಾಸಗಳನ್ನು ವಿವರಿಸುವ ಶಾಸ್ತ್ರಕ್ಕೆ ಧ್ವನಿಶಾಸ್ತ್ರವೆಂದೂ (Phonetics) ಕರೆಯುವರು. ಉಚ್ಚಾರ (ಧ್ವನಿ) ದೈಹಿಕವಾದುದು, ಅರ್ಥ (ವಿಚಾರ) ಮಾನಸಿಕವಾದುದು. ಶಬ್ದಾರ್ಥ ಶಾಸ್ತ್ರದಲ್ಲಿ ಕಾಣುವ ನಾಲ್ಕು ಪ್ರಧಾನವಾದ ವಿಭಾಗಗಳನ್ನು ರೇಖಾಚಿತ್ರರೂಪದಲ್ಲಿ ಹೀಗೆ ತೋರಿಸಬಹುದು—

ಭಾಷಾಶಾಸ್ತ್ರ (Philology)




ಒಂದು ಕಾಲದಲ್ಲಿ ಒಳ್ಳೆಯ ಅರ್ಥವನ್ನು ಹೊಂದಿದ ಕೆಲವು ಪದಗಳು ತಮ್ಮ ಮೂಲಾರ್ಥವನ್ನು ಕುಗ್ಗಿಸಿ ತಗ್ಗಿಸಿಕೊಳ್ಳುತ್ತವೆ. ಮತ್ತೆ ಕೆಲವು ಪದಗಳು ಒಳ್ಳೆಯ ಅರ್ಥವನ್ನು ಕಳೆದುಕೊಂಡು ಕೀಳು ಅರ್ಥದಲ್ಲಿ ಬಳಕೆಗೆ ಬರುತ್ತವೆ. ಇನ್ನು ಕೆಲವು ಪದಗಳು ಈ ಕ್ರಮಕ್ಕೆ ತದ್ವಿರುದ್ಧವಾದ ರೀತಿಯಲ್ಲಿ ಸಾಧಾರಣ ಅರ್ಥದಿಂದ ಜಿಗಿದು ವಿಶಾಲವಾದ ಅರ್ಥವನ್ನೂ, ಉತ್ತಮವಾದ ಅರ್ಥವನ್ನೂ ಹೊಂದುತ್ತವೆ. ಮಾನವ ಲೋಕದ ಎಲ್ಲ ಏಳುಬೀಳುಗಳೂ ಈ ಶಬ್ದ ಪ್ರಪಂಚದಲ್ಲಿ ನಡೆಯುತ್ತಿರುತ್ತವೆ. ಭಾಸಕವಿ ಸ್ವಪ್ನವಾಸವದತ್ತ ನಾಟಕದಲ್ಲಿ ನುಡಿದ 'ಚಕ್ರಾರಪಂಕ್ತಿರಿವಗಚ್ಛತಿ ಭಾಗ್ಯಪಂಕ್ತಿಃ' ಎನ್ನುವ ಮಾತು ಮನುಷ್ಯನಿಗೆ ಮಾತ್ರವಲ್ಲದೆ ಈ ಪದಗಳ ಚರಿತ್ರೆಗೂ ಅನ್ವಯಿಸುತ್ತದೆ. ಶಬ್ದಾರ್ಥ ಶಾಸ್ತ್ರದಲ್ಲಿ ಮೇಲೆ ಹೇಳಿದ ನಾಲ್ಕು ವಿಭಾಗಗಳೇ ಅಲ್ಲದೆ ಕೆಲವು ಕಸುಬಿನವರು ಉಪಯೋಗಿಸುವ ಸಂಕೇತಗಳು (Freemasonry) ಇತ್ಯಾದಿಯಾಗಿ ಇನ್ನು ಕೆಲವು ವ್ಯತ್ಯಾಸಗಳಿವೆ. ಭಾಷೆಯ ಬೆಳವಣಿಗೆಯಲ್ಲೂ ಪರಿವರ್ತನೆಯಲ್ಲೂ ಪಾತ್ರವಹಿಸುವ ಸುಮಾರು ಇಪ್ಪತ್ತೆರಡು ರೀತಿಯ ಕಾರಣಗಳನ್ನು ಈ ಮುಂದೆ ವಿವರಿಸಲಾಗುವುದು. ಭಾಷೆಯ ಬದಲಾವಣೆಗೆ ಆಂತರಿಕ-ಬಾಹ್ಯ ಕಾರಣಗಳಾದ ಇವುಗಳಲ್ಲಿ ಒಂದಕ್ಕೊಂದು ಸಂಬಂಧಪಟ್ಟಂತೆ ಕಂಡರೂ ಸೂಕ್ಷ್ಮವಾದ ಪರಿಶೀಲನೆಗೆ ವ್ಯತ್ಯಾಸ ಸ್ಪಷ್ಟವಾಗಿ ಕಾಣುತ್ತದೆ. ಪ್ರತಿಯೊಂದು ವಿಭಾಗದಲ್ಲೂ ಒಂದಕ್ಕಿಂತ ಹೆಚ್ಚಿನ ಭಾಷೆಗಳಿಂದ ಉದಾಹರಣೆಗಳನ್ನು ಕೊಟ್ಟು ವಿಷಯ ಸ್ಪಷ್ಟೀಕರಿಸಲು ಪ್ರಯತ್ನಿಸಿದ್ದೇನೆ. ಏಕೆಂದರೆ ಈ ಅಂಶಗಳು ಸಾಮಾನ್ಯವಾಗಿ ಎಲ್ಲ ಜೀವಂತ ಭಾಷೆಗಳಿಗೂ ಅನ್ವಯವಾಗುವ ವಿಶ್ವಮಾನ್ಯವಾದುದರಿಂದ ವಿವರಣೆ ನಿಚ್ಚಳವಾಗಿದ್ದರೆ ಅನುಕೂಲ.

### ೧. ಅಕ್ಷರ ಪಲ್ಲಟ: Metathesis.

ಪದಗಳಲ್ಲಿರುವ ವರ್ಣಗಳು ಸ್ಥಾನಾಂತರ ಹೊಂದಿ ಸ್ಥಳಪಲ್ಲಟವಾಗುವ ಪದ್ಧತಿ ಕನ್ನಡದಲ್ಲೂ ಇತರ ಭಾಷೆಗಳಲ್ಲೂ ಪ್ರಾಚೀನವಾದ ಪದ್ಧತಿ. ಇದರ ಇನ್ನೊಂದು ಸ್ವಾರಸ್ಯವೆಂದರೆ ಅಕ್ಷರ ಪಲ್ಲಟವಾದರೂ ಅರ್ಥಪಲ್ಲಟವಾಗುವುದಿಲ್ಲ. ಇದರ ತದ್ವಿರುದ್ಧವಾದ ಕ್ರಿಯೆ ವರ್ಣವ್ಯತ್ಯಯ ಅಥವಾ ಸ್ಥಾನಲೋಪವೆಂಬ ವಿಭಾಗದಲ್ಲಿ ನಡೆಯು

ತ್ತದೆ. ಇದಕ್ಕೆ ಸಂಬಂಧ ಪಟ್ಟಂತೆ ಸಿದ್ಧಾಂತ ಕೌಮುದಿಯಲ್ಲಿ ಬರುವ ಒಂದು ಸೂತ್ರವನ್ನು ಇಲ್ಲಿ ಉದಾಹರಿಸಬಹುದು :—

ಭವೇದ್ವರ್ಣಾಗಮಾದ್ಧಂಸಃ
ಸಿಂಹೋವರ್ಣ ವಿಪರ್ಯಯಾತ್
ಗೂಢಾತ್ಮಾವರ್ಣವಿಕೃತೇ
ವರ್ಣನಾಶಾತ್ಪೃಷೋದರಂ ||

—ಭಟ್ಟೋಜಿದೀಕ್ಷಿತ

ಕನ್ನಡದಲ್ಲಿ ಅಕ್ಷರಪಲ್ಲಟ ಕ್ರಿಯೆಗೆ ನೂರಾರು ಉದಾಹರಣೆಗಳು—ಪ್ರಾಚೀನ ಕಾವ್ಯಗಳಿಂದ ಮೊದಲುಗೊಂಡು ಇಂದಿನವರೆಗೂ—ಸಿಗುತ್ತವೆ. ಕೆಲವನ್ನು ಮಾತ್ರ ದೃಷ್ಟಾಂತವಾಗಿ ನೋಡಬಹುದು. ಮರಲ್ > ಮಲರ್, ಅಸಗ > ಅಗಸ, ಮರಲ್ > ಮಳಲ್ > ಮರಳು, ಅಲರ್ > ಅರಲ್ > ಅರಳು, ಅಂಬಿಲ > ಅಂಬಲಿ, ನೆಳಲ್ > ನೆರಳು, ಎರಲ್ > ಎಲರ್, ಕುಂಬಱರ್ > ಕುಱುಂಬರ್ > ಕುರುಬರು, ಹೀಗೆಯೇ ಸಂಸ್ಕೃತದಲ್ಲಿ ಮರಹಟ್ಟ < ಮಹಾರಾಷ್ಟ್ರ, ಬನಾರಸೀ < ಬಾರಾಣಸೀ (ವಾರಣಾಶಿ), ದೀಹರ < ದೀರ್ಘ, ನಟಲ < ಲಲಾಟ, ಸಿಂಹಃ < ಹಿಂಸಃ. ಇಂಗ್ಲಿಷ್ ಭಾಷೆಯಲ್ಲಿ Proto- plasm > ploto-prasm ; elevate > evelate But and Glut > Gut and Blut. ಇಂಗ್ಲೀಷಿನಲ್ಲಿ ಕೇರೀಬಿಯನ್ನಿನವನು ಎಂಬುದಕ್ಕೆ Caribal ಎಂಬ ಪದವಿತ್ತು. ಅದು ಕ್ರಮೇಣ ವ್ಯತ್ಯಾಸಗೊಂಡು Cariban ಎಂಬ ಇನ್ನೊಂದು ರೂಪವನ್ನು ಪಡೆಯಿತು. ಈ ರೂಪದಿಂದ Can(n)-ibal ಎಂಬ ಮತ್ತೊಂದು ರೂಪ ಮಾಡಿತು. ಆದರೆ ಆ ಪದವೂ ಅಕ್ಷರ ಪಲ್ಲಟವಾಗಿ Caliban ಎಂದಾಗಿದೆ. ಕ್ಯಾನಿಬಾಲ್ > ಕ್ಯಾಲಿಬಾನ್- ವರ್ಣಪಲ್ಲಟಕ್ಕೆ ಇದೊಂದು ಶ್ರೇಷ್ಠ ನಿದರ್ಶನ. ಷೇಕ್ಸ್‌ಪಿಯರನ ಟೆಂಪೆಸ್ಟ್ ನಾಟಕದಲ್ಲಿ ಕ್ಯಾಲಿಬಾನ್ ಪಾತ್ರವೊಂದಿದೆ. ಇವೆಲ್ಲಾ ನಿದರ್ಶನಗಳನ್ನು ಗಮನಿಸಿದಾಗ ಯಾಸ್ಕನ ಸಂಸ್ಕೃತದ ಒಂದು ಹೇಳಿಕೆ—(ಈ ವರ್ಣಪಲ್ಲಟ ನಿಯಮಕ್ಕೆ ಸಮಂಜಸವಾಗಿ ಅನ್ವಯವಾಗುವ ಹೇಳಿಕೆ) ನೆನಪಾಗುತ್ತದೆ.

ಅಥಾಪ್ಯಾದ್ಯಂತ ವಿಪರ್ಯಯೋ
ಭವತಿಸ್ತೋಕಾ, ರಜ್ಜುಃ ಸಿಕತಾ ಇತಿ ||

೨. ಸ್ವರ (ವರ್ಣ) ಲೋಪ : Syncopation.

ಭಾಷೆಯಪರಿವರ್ತನೆಯಲ್ಲಿ ಕಾಣುವ ಒಂದು ಗುಣವೆಂದರೆ ಪದದ ಸ್ವರಗಳು ಲೋಪವಾಗುವುದು. ಸಂಸ್ಕೃತದಲ್ಲಿ ಇದನ್ನೇ ಯಾಸ್ಕನು, ಹೀಗೆ ವಿವರಿಸಿದ್ದಾನೆ. 'ಅಥಾಪ್ಯುಪಧಾಲೋಪೋ ಭವತಿ ಜಗ್ಮತುರ್ಜಗ್ಮುರಿತಿ.' ಅದರಂತೆ– ರಾಜನ್ > ರಾಜ್ಞಃ, ಭೂಮಾನ್ > ಭೂಮ್ನಃ, ಪೂಷನ್ > ಪೂಷ್ಣಾ—ಇತ್ಯಾದಿಯಾಗಿ ಸಂಸ್ಕೃತದಲ್ಲಿ ವರ್ಣಲೋಪ ಹೊಂದಿರುವ ಪದಗಳನ್ನು ಗಮನಿಸಬಹುದು. ಕನ್ನಡದಲ್ಲಿ ಕೆಲವು ನಿದರ್ಶನಗಳು : ನಾಣ್ಚು > ನಾಚು, ಸೋಲ್ತು > ಸೋತು. ಬಿಂದು ಲೋಪವು ಈ ವಿಭಾಗದಲ್ಲೇ ಬೆಡಂಗು > ಬೆಡಗು, ಸೆರಂಗು > ಸೆರಗು–ಇಒಂದು ಅಥವಾ ಒಂದಕ್ಕಿಂತ ಹೆಚ್ಚಿನ ವರ್ಣಗಳ ಲೋಪವೂ ಆಗಬಹುದು. ಆದರೆ ಇದು ಒಂದೇ ಪದದಲ್ಲಿ ಆಗುವ ಲೋಪ.

೩. ಏಕವರ್ಣಲೋಪ : Haplology.

ಇದು ಸಾಮಾನ್ಯವಾಗಿ ಸಮಾಸಗಳಲ್ಲಿ ನಡೆಯುವ ಕ್ರಿಯೆ. ಎರಡು ಮತ್ತು ಹೆಚ್ಚಿನ ಪದಗಳು ಕೂಡಿ ಒಂದು ಸಮಾಸಪದವಾದಾಗ ಸಮಾನವಾದ ಗುಣಿತಾಕ್ಷರಗಳಲ್ಲಿ ಯಾವುದಾದರೂ ಒಂದು ವರ್ಣಲೋಪವಾಗಬಹುದು – ಲೋಪ

ವಾಗುವ ಸಂಭವೇ ಹೆಚ್ಚು. ಸಂಸ್ಕೃತದಲ್ಲಿ ಶಷ್ಪಿಂಜರಃ < ಶಷ್ಪಪಿಂಜರಃ, ಮದುಘಃ < ಮದುದುಘಃ, ಜಹಿ < ಜಹೀಹಿ, ಶೀವೃದ್ಧ < ಶೇವವೃದ್ಧಃ–ಮೊದಲಾದ ಪದಗಳಲ್ಲಿ ಈ ಕ್ರಿಯೆ ನಡೆದಿದೆ. ಇಂಗ್ಲಿಷಿನಲ್ಲಿ Probably > Probly Madam > Mam, Semimodius > Semodius ಮೊದಲಾದ ಪದಗಳು ಈ ಬಗೆಯವು. ಕನ್ನಡದ ಮೆಲ್ಲನೆ ಮೆಲ್ಲನೆ > ಮೆಲ್ಲಮೆಲ್ಲನೆ, ಬೇಗನೆಬೇಗನೆ > ಬೇಗಬೇಗನೆ-ಇತ್ಯಾದಿ ಪದಗಳು ಈ ರೀತಿಯವು. ಪುರಂದರದಾಸರ 'ಮೆಲ್ಲಮೆಲ್ಲನೆ ಬಂದನೆ'....ಎಂಬ ಕೀರ್ತನೆಯ ಮೊದಲ ಸಾಲನ್ನು ಸ್ಮರಿಸಿಕೊಳ್ಳಬಹುದು.

**೪. ರೂಪಸಾಮ್ಯವಿಧಿ :** Analogy.

ಭಾಷಾಶಾಸ್ತ್ರದಲ್ಲಿ ಇದೊಂದು ದೊಡ್ಡ ಪರಿಚ್ಛೇದವಾಗಿ ಪರಿಗಣಿತವಾಗಬೇಕಾಗುತ್ತದೆ, ಅಷ್ಟು ವಿಸ್ತಾರ ಇದರ ಕ್ಷೇತ್ರ. ಗೊತ್ತಿರುವ ರೂಪಗಳ ಸಂಬಂಧ ಹಾಗೂ ಸಾದೃಶ್ಯಗಳ ಆಧಾರದ ಮೇಲೆ ಹೊಸದೊಂದು ರೂಪವನ್ನು ಸೃಷ್ಟಿಸುವುದೇ ಈ ಸಾಮ್ಯವಿಧಿಯ ಕ್ರಮ. ಇದು ಹೆಚ್ಚು ಕಡಮೆ ಎರಕಹೊಯ್ದಂತೆ. ಇಂಗ್ಲಿಷ್ ಕಲಿಯುವ ಹುಡುಗರು ಸಾಮ್ಯವಿಧಿಯ ಆಧಾರದ ಮೇಲೆ ಎಷ್ಟೋ ತಪ್ಪುಗಳನ್ನು ಮಾಡುತ್ತಾರೆ. ಅದರಲ್ಲಿಯೂ ಮಕ್ಕಳಿಗೆ ಮೂರು ಪದಗಳಲ್ಲಿ ಕಾಣುವ ಸಾದೃಶ್ಯ, ಹೋಲಿಕೆ, ಹೊಂದಾಣಿಕೆಗಳ ಅನುಭವದಿಂದ ನಾಲ್ಕನೆಯ ಪದವನ್ನು ಅವುಗಳಂತೆ ನಡೆಸಿಕೊಳ್ಳುವುದು ಅಭ್ಯಾಸವಾಗಿದೆ. ಇದನ್ನು ಶಾಲೆಯ ಇಂಗ್ಲಿಷ್ ಅಧ್ಯಾಪಕರು ಗಮನಿಸಿದ್ದಾರೆ. ಆದರೆ ಅನುಕರಣೆಯ ತತ್ತ್ವವನ್ನು ಬಿಂಬಿಸುವ ಈ ಅಭ್ಯಾಸ ಮಕ್ಕಳಿಗೆ ಮಾತ್ರ ಮೀಸಲಾದುದಲ್ಲ, ಮಾನವ ಸಹಜವಾದುದು ಮಾನವನ ಹುಟ್ಟುಗುಣ. ಎಷ್ಟೊ ವಿದ್ವಾಂಸರು ಈ ರೀತಿ ಸಾಮ್ಯದ ಮೇಲೆ ಹೊಸ ಪದಗಳನ್ನು ಸೃಷ್ಟಿ ಮಾಡುತ್ತಾರೆ. ಸಾದೃಶ್ಯನೇಯ್ಗೆಯಲ್ಲಿ ವ್ಯಾಕರಣನಿಯಮದ ನೂಲೂ ಸೇರಿರುತ್ತದೆ. Book:Books- Lip:Lips—ಎಂಬೆರಡು ಉದಾಹರಣೆಗಳಲ್ಲಿ ಒಂದು ಏಕವಚನ ಪದಕ್ಕೆ 's' ಸೇರಿಸಿದರೆ ಬಹುವಚನವಾಗುತ್ತದೆಯೆಂಬುದನ್ನು ಹುಡುಗನಿಗೆ ಸ್ಪಷ್ಟಪಡಿಸಿದಂತಾಗಿರುತ್ತದೆ. ಆಗ Foot ಎಂಬ ಪದವನ್ನು ಕೊಟ್ಟು ಅದರ ಬಹುವಚನವನ್ನು ಹೇಳುವಂತೆ ಕೇಳಿದರೆ ಅವನು ಎರಡಿಲ್ಲದೆ ಒಡನೆಯೇ Foots ಎಂದು ಹೇಳಿಬಿಡುತ್ತಾನೆ. ಹೀಗೆಯೇ Change: Changes ಎಂಬಂತೆ ox:oxes, Index: indexes ಎಂದೂ, Sing:Sung ಎಂಬ ಆಧಾರದಿಂದ Bring:Brung ಎಂದೂ Commencement ಎಂಬ ಆಧಾರದಿಂದ Beginement ಎಂದೂ ತಪ್ಪು ರೂಪಗಳನ್ನು ಮಾಡಿರುವುದಕ್ಕೆ ಇಂಗ್ಲಿಷ್ ಭಾಷಾಶಾಸ್ತ್ರಜ್ಞರು ಅನೇಕ ಪ್ರಯೋಗ - ಪರೀಕ್ಷೆಗಳಿಂದ ಸ್ಪಷ್ಟಪಡಿಸಿದ್ದಾರೆ. ನಮ್ಮಲ್ಲಿಯೂ ವನಸ್ಪತಿ, ಬೃಹಸ್ಪತಿ, ದಿವಸ್ಪತಿ; ನಿಂತು, ಕುಂತು; ಒದ್ದು, ಬಿದ್ದು, ಗೆದ್ದು ; ಒದಿ, ಕದಿ, ಗೆದಿ ; ಸಿಗು ; ನಿಗು ; ಲಂಚಗುಳಿ, ಅಬಿಗುಲಿ; ಬನ್ನಿ ಕೊನ್ನಿ-ಇ.ರೂಪಗಳಲ್ಲಿ ಬಹುಮಟ್ಟಿಗೆ ಕೇವಲ ಹೋಲಿಕೆಯಿಂದಲೇ ಸೃಷ್ಟಿಯಾದ ರೂಪಗಳೆಂಬುದು ಸ್ಪಷ್ಟ.

**೫. ಯಮಳ ಶಬ್ದಗಳು :** Polyglottism.

ಸಮಾನಾರ್ಥಕವಾದ ಭಿನ್ನಭಿನ್ನ ಭಾಷೆಯ ಶಬ್ದಗಳೆರಡು ಸೇರಿ ಆಗುವ ಒಂದು ಪದವನ್ನು ಯಮಳಪದವೆಂದು ಕರೆಯಬಹುದು. ಈ ಬಗೆಯ ಯಮಳ ಶಬ್ದಗಳ ಪ್ರಯೋಗಗಳು ಹಳೆಯ ಕನ್ನಡ ಕಾವ್ಯಗಳಲ್ಲಿ ಬಹಳ ಹಿಂದಿನಿಂದಲೂ ಸಿಗುತ್ತವೆ. ಚಪ್ಪನ್ನೈವತ್ತಾರು < ಚಪ್ಪನ್ನ+ಐವತ್ತಾರು, ರಪಣ < ರೈ+ಪಣ, ಹಣ್ಣುಹಂಪಲು < ಪಣ್+ಫಲ, ಯುಗದ್ವಯ, ಅವಳಿಜವಳಿ, ತಲೆ ಶಿರೋಬಾರ, ಗೇಟ್ ಬಾಗಿಲು, ಕಾಂಪೌಂಡ್ ಗೋಡೆ,

ಟಾಪ್‌ಮೇಲೆ, ಆಕಳಗೋಮಾತ್ರ, ಫುಲ್‌ರಪ್, ಫುಲ್‌ಭರ್ತಿ, ಭಿಕ್ಷುಕರು ಕೂಗುವ ಅಮ್ಮಾತಾಯಿ, ಕೂಡಲಸಂಗಮ, ಆಳುಮನುಷ್ಯ—ಇ. ಇ.

೬. ವರ್ಣೈಕ್ಯ : Assimilation.

ಸಂಧಿಕಾರ್ಯದಲ್ಲಿ ಸ್ವರ ಅಥವಾ ವ್ಯಂಜನ ಪದದ ಗರ್ಭದಲ್ಲಿ ಸೇರಿಹೋಗುವುದೂ ಉಂಟು. ಹೀಗೆ ಅಕ್ಷರ ಐಕ್ಯವಾಗುವ ಈ ಕ್ರಿಯೆಗೆ ವರ್ಣೈಕ್ಯ ವೆಂದು ಹೇಳಬಹುದು. ಏಕವರ್ಣಲೋಪ ವಿಭಾಗವು ಸಮಾಸಗಳಲ್ಲಿ ನಡೆಯುವ ಕ್ರಿಯೆ ಯಾದರೆ ವರ್ಣೈಕ್ಯ ವಿಶೇಷವಾಗಿ ಸಂಧಿಕಾರ್ಯ ದಲ್ಲಿ ನಡೆಯುತ್ತದೆಯಲ್ಲದೆ ವರ್ಣಲೋಪಕ್ಕಿಂತಲೂ ವರ್ಣ ಐಕ್ಯವಾಗುವುದು ಮುಖ್ಯ. ಇಂಗ್ಲಿಷ್ ಭಾಷೆಯ ಒಂದೆರಡು ಪದಗಳನ್ನು ತೆಗೆದುಕೊಂಡು ವಿವರಿಸಿದರೆ ಇದು ಸ್ಪಷ್ಟವಾಗುತ್ತದೆ. ಈ ಕೆಳ ಗಿನ ಪದಗಳಲ್ಲಿ ಮೊದಲು ಆಯಾ ಪದವನ್ನು ಬರ ವಣಿಗೆಯುಲ್ಲಿ ಬರೆಯುವ ರೀತಿಯನ್ನೂ ಅನಂತರ ಅದರ ಉಚ್ಚಾರವಾಗುವಾಗ ಹೇಳುವ ವರ್ಣ ಗಳನ್ನೂ ಬರೆಯಲಾಗಿದೆ: Sitdown > Sidown ; Cupboard > cubberd. ಅಂದರೆ ಸಿಟ್‌ಡೌನ್ ಎಂಬ ಪದವನ್ನು ಹಾಗೆ ಉಚ್ಚರಿಸದೆ ಸಿಡೌನ್ ಎಂದೂ, 'ಕಪ್‌ಬೋಡ್' ಪದವನ್ನು ಕಬ್ಬರ್ಡ್ ಎಂದೂ ಹೇಳುತ್ತೇವೆ. ಇಲ್ಲಿ ಕ್ರಮವಾಗಿ ಟ್ ಮತ್ತು ಪ್ ವ್ಯಂಜನಗಳು ಐಕ್ಯವಾಗಿದೆ. ೧೮–೧೯ ನೆಯ ಶತಮಾನದಿಂದೀಚೆಗೆ ಇಂಗ್ಲಿಷ್ ಭಾಷೆಯಲ್ಲಿ Cupboard ಎಂದು ಬರೆಯುತ್ತಿರುವರಾದರೂ, ೧೬–೧೭ನೆಯ ಶತಮಾನಗಳಲ್ಲಿ Cubberd, Cobbourd, Cubboorde, Cubbord—ಮೊದಲಾದ ವಿವಿಧರೂಪಗಳ ಪದಗಳು ಬಳಕೆಯಲ್ಲಿದ್ದುವು. ೧೮ ನೆಯ ಶತಮಾನದಲ್ಲಿ ಈ ಪದಕ್ಕೆ ಕಾಗುಣಿತದ ಒಂದು ಸರಿಯಾದ ರೂಪ ದೊರಕಿತು. ನಮ್ಮಲ್ಲಿರುವ ತತ್‌ಕ್ಷಣ > ತಕ್ಷಣ, ಅಹುದು > ಹೌದು, ಇಹಗೆ > ಹೀಗೆ, ಎಹಗೆ > ಹೇಗೆ, ಅಹಗೆ > ಹಾಗೆ—ಮೊದಲಾದ ಪದಗಳಲ್ಲಿ ಈ ವರ್ಣೈಕ್ಯ ವಿಭಾಗದ ಕ್ರಿಯೆ ನಡೆದಿದೆ. ಮತ್ತು ನಮ್ಮ ಶಿಥಿಲದ್ವಿತ್ವದ ಪದಗಳು ಈ ರೀತಿಯವೆಂದು ಹೇಳಬಹುದು.

೭. ಲಯ : Rhythm.

ಭಾಷೆಯಲ್ಲಿ ಯಾವುದೋ ಒಂದು ಲಯ ಎದ್ದುಕಾಣುತ್ತದೆ—ಭಾಷೆಯಲ್ಲೇ ಏನು ಸೃಷ್ಟಿ ಯಲ್ಲೇ ಎಲ್ಲೆಲ್ಲೂ ಒಂದು ಹೊಂದಾಣಿಕೆ—ಯತಿ ಕಾಣುತ್ತದೆ. Rhythm is the pulse of Universe ಎಂದು ಹೇಳುವರು. ಲಯ ಗದ್ಯ ಕ್ಕಿಂತಲೂ ಪದ್ಯ-ಕಾವ್ಯದಲ್ಲಿ ಹೆಚ್ಚಾಗಿ ಕಾಣುತ್ತದೆ. ಲಯವನ್ನು ಕಾಪಾಡಲು ಕವಿಗಳು ಪದಗಳನ್ನು ವ್ಯ ತ್ಯಾಸಮಾಡುವರು. ಇಂಥ ವ್ಯತ್ಯಾಸದಿಂದಭಾಷೆಗೆ ಅಪಚಾರವಾಗಲೀ-ಅಗೌರವವಾಗಲೀ ಆಗಲೆಂಬ ತಪ್ಪುಕಲ್ಪನೆ ಅಥವಾ ಭೀತಿ ಕವಿಗಳಿಗಿಲ್ಲ. ಏಕೆಂದರೆ ಹೇಳಬೇಕೆಂದಿರುವ ಭಾವದ ಗಾಂಭೀರ್ಯ ವನ್ನು ತೂಗಿಸಲು ಲಯವನ್ನು ಉಳಿಸಿಕೊಳ್ಳಲು ಈ ವ್ಯತ್ಯಾಸವನ್ನು ಅವರು ಮಾಡುವರು. It has always been suggested that words do more than merely express meaning ; they sound and suggest' (Sparrow : Sense and poetry : P.5) ಎಂಬ ಹೇಳಿಕೆಯ ಮರ್ಮ ಲಯದ ವ್ಯತ್ಯಾಸದಲ್ಲಿ ಅಡಗಿದೆ. ಕನ್ನಡದ ಹಳೆಯ ಕಾವ್ಯಗಳಿಂದ ಹಿಡಿದು ಇಂದಿನವರೆಗೂ ಈ ಮಾರ್ಪಾಟುಗಳನ್ನು ಗಮನಿಸಬಹುದು. ಬಂದಪ್ಪಂ > ಬಂದಪಂ, ರಂಜಿಕ್ಕುಂ > ರಂಜಿಕುಂ, ಮೂರ್ತಿ > ಮೂರುತಿ, ಕೀರ್ತಿ > ಕೀರುತಿ, ವರ್ಷ > ವರುಷ, ಹರ್ಷ > ಹರುಷ....ಇ. ಇ.

> ಸಂಸಾರದ ವಿಷವೃಕ್ಷದಿ ಹಣ್ಣೆರಡಿವೆ ಅಮೃತೋಪ
> ಕಾವ್ಯಾಮೃತದಾಸ್ವಾದನ ಮೇಣ್' ಸಜ್ಜನ ಸಲ್ಲಾಪ

ಎಂಬಲ್ಲಿ. ಮೊದಲ ಸಾಲಿನ ಕೊನೆಯ ಪದ ಅಮೃತೋಪಮ ಎಂದಿರಬೇಕು, ಆದರೂ ಪಕಾರದ ಪ್ರಾಸಕ್ಕಾಗಿ ಮಕಾರವನ್ನು ಮರೆಸಿಬಿಟ್ಟದ್ದಾರೆ—ಇದೇ ಲಯವನ್ನು ಕಾಪಾಡಲು ಮಾಡಿಕೊಂಡ ಮಾರ್ಪಾಟು! ಒಂದೇ ಪದಕ್ಕೆ–ಇದರಿಂದಾಗಿ ಎರಡೆರಡು ರೂಪಗಳಾಗುತ್ತವೆ. ಛಂದಸ್ಸಿನಲ್ಲಿ ಈ ಲಯದ ಅಗತ್ಯ ಕವಿಗೆ ವಿಶೇಷವಾಗಿ ಬೇಕಾಗುತ್ತದೆ. ಲಘು (ಅಕ್ಷರ)ಬೇಕಾದಾಗ ಸಂಯುಕ್ತಾಕ್ಷರವನ್ನು ಬಿಡಿಸಿ ಬರೆಯುವನು. ಗುರು ಬೇಕಾದಾಗ ವಿರಳಾಕ್ಷರವನ್ನು ಕೂಡಿಸಿ ಬರೆಯುವನು—'ಅಪಾರೇ ಕಾವ್ಯಸಂಸಾರೇ ಕವಿರೇವ ಪ್ರಜಾಪತಿಃ' ಕವಿ ಇವುಗಳಲ್ಲಿ ಸರ್ವತಂತ್ರ ಸ್ವತಂತ್ರ. ಭಾಷೆಯ ಬೆಳವಣಿಗೆಗೆ ಇದೂ ಕಾರಣವಾಗುತ್ತದೆ.

**೮. ವೇಗೋಚ್ಚಾರಣೆ**: Rapidity (speed) of Utterance.

ಈ ಬಗೆಯ ವ್ಯತ್ಯಾಸ ಭಾಷೆಯಲ್ಲಿ ಸಾಮಾನ್ಯವಾಗಿ ಕಾಣಿಸಿಕೊಳ್ಳಲು ಕಾರಣ ಕೆಲವು ವರ್ಣಗಳ ಉತ್ಪತ್ತಿ-ಉಚ್ಚಾರಣೆಯ ದೃಷ್ಟಿಯಿಂದ ಸಮೀಪ ಸ್ಥಾನೀಯಗಳಾಗಿರುವುದಲ್ಲದೆ ಆದಷ್ಟೂ ಬೇಗ ಹೇಳಬೇಕಾದುದನ್ನು ಹೇಳಿಮುಗಿಸಿಬಿಡಬೇಕೆಂಬ ಆತುರವೂ ಸಹಜವಾಗಿ ಎಲ್ಲರಲ್ಲೂ ಇದ್ದೇ ಇರುತ್ತದೆ. ಅದರ ಪರಿಣಾಮವಾಗಿ ವಾಕ್ಯದಲ್ಲಿ ಸಮಾಸಗಳೂ ಸಂಧಿಗಳೂ ಸಂಘಟಿತವಾಗುತ್ತವೆ, ದೀರ್ಘಪದಗಳು ಮೊಟಕಾಗುತ್ತವೆ. ಈ ಬದಲಾವಣೆ ಬರವಣಿಗೆಗಿಂತಲೂ ಉಚ್ಚಾರಣೆಯಲ್ಲಿ, ಸಂಭಾಷಣೆಯಲ್ಲಿ ಹೆಚ್ಚಾಗಿ ನಡೆಯುತ್ತಿರುತ್ತದೆ. ನಮ್ಮ ಮನೆಗೆ ಈ ದಿವಸ ಬರಬೇಕು > ಈವೊತ್ನಮ್ಮನೇಗ್ಬನ್ನಿ, ಯಾರಿಗ್ಗೊತ್ತು, ಕೂಕೊ < ಕುಳಿತುಕೊ, ಇ. ಇ. ತಂತಿ ಕಳುಹಿಸು ವಾಗ ಕಡಮೆ ಪದಗಳನ್ನು ಬಳಸಿ ಹೆಚ್ಚಿನ ಅರ್ಥ ಮೂಡುವಂತೆ ಮಾಡುತ್ತೇವೆ, ಆಗಲೂ ಕೆಲವು ಪರಿವರ್ತನೆಯಾಗಲು ಸಾಧ್ಯವಿದೆ.

**೯. ಅವಧಾರಣೆ**: Emphasis.

ನಾವು ಹೇಳುವ ವಿಷಯವನ್ನು ಕೇಳುವವರ ಮನಸ್ಸಿಗೆ ನಾಟುವಂತೆ ಮಾಡಬೇಕೆಂದು ಅನೇಕವೇಳೆ ಮತ್ತೆಮತ್ತೆ ಅದನ್ನು ಒತ್ತಿಹೇಳುತ್ತೇವೆ. ಹೀಗೆ ಮಾಡುವಾಗ ಅಲ್ಪಪ್ರಾಣಾಕ್ಷರಗಳನ್ನು ಸಾಮಾನ್ಯವಾಗಿ ಮಹಾಪ್ರಾಣವರ್ಣಗಳನ್ನಾಗಿ ಉಚ್ಚರಿಸುವುದುಂಟು, ಮತ್ತು ಕ್ರಮೇಣ ಬಾಯಿಮಾತಿನಿಂದ ಬರವಣಿಗೆಗೂ ಈ ಮಾತಿನ ರೂಪಗಳು ಮೆಲ್ಲನೆ ನುಸುಳುತ್ತವೆ. ಈ ಪದ್ಧತಿ ಬಹಳ ಹಿಂದಿನಿಂದಲೂ ಕನ್ನಡಿಗರಲ್ಲಿ ಬಳಕೆಯಲ್ಲಿರಬೇಕು. ಕೇಶಿರಾಜ ಕನ್ನಡದಲ್ಲಿ ಮಹಾಪ್ರಾಣಾಕ್ಷರಗಳ–ಪದಗಳು 'ಸಹಜವಾಗಿಯೇ ಒಳವು' ಎಂದು ಹೇಳಲು ಈ ವಿಭಾಗವೇ ಕಾರಣ. ಒಂಬತ್ತು > ಒಂಭತ್ತು—ತೊಂಭತ್ತು, ಒಂಭೈನೂರು; ಬಂಗಾರ > ಭಂಗಾರ, ಭಡವ, ಭಾವಿ, ಖತ್ತೆ, ಖೋಟ, ಧೊರೆ, ಛಪ್ಪನ್ನ, ಪಿತ್ಥ, ನೆತ್ಥಿ, ಪೆಣ್ಢತಿ, ಫಾಳಿ—ಇತ್ಯಾದಿ ರೂಪಗಳು-ಪದಗಳು ತಪ್ಪಾದರೂ ರೂಢಿಯಲ್ಲಿವೆ.

**೧೦ ಮಿತವ್ಯಯಾಸಕ್ತಿ**: Economy of Effort.

ಮಾನವ ಕೆಲವೊಮ್ಮೆ ಸೋಮಾರಿ, ಸೌಲಭ್ಯಾಕಾಂಕ್ಷಿ; ಅವನಿಗೆ ಕಷ್ಟವಾದದ್ದು ಸುಲಭವಾಗಿಯೇ ಸಾಧ್ಯವಾಗಲೆಂಬ ತುಂಬು ಹಂಬಲ. ಹೀಗಾಗಿ ಅವನಲ್ಲಿ ಮಿತವ್ಯಯಾಸಕ್ತಿ ಮೊದಲಿನಿಂದಲೂ ಕಂಡುಬಂದಿದೆ. ಭಾಷೆಯಲ್ಲೂ ಈ ಗುಣ ಕಾಣುತ್ತದೆ. ವೇಗೋಚ್ಚಾರಣೆ ವಿಭಾಗದಲ್ಲಿ ತೋರಿಸಿದ ಕ್ರಮವೂ ಕೆಲವೊಮ್ಮೆ ಈ ಮಿತವ್ಯ

ಯಾಸಕ್ತಿಯ ವಿಭಾಗದಂತೆಯೇ ಕಂಡರೂ ಅಲ್ಪಸ್ವಲ್ಪ ವ್ಯತ್ಯಾಸವಿದ್ದೇ ಇದೆ. ಭಾಷೆಯ ಪರಿವರ್ತನೆಯಲ್ಲಿ ಈ ಮಿತವ್ಯಯಾಸಕ್ತಿಯ ಪಾತ್ರ ಮಹತ್ತರವಾದುದು. ದೀರ್ಘವಾದ, ಬಿಡಿಬಿಡಿಯಾದ ಪದಗಳನ್ನು ಮೊಟಕು ಮಾಡಿ ಆದಷ್ಟೂ ಸಂಗ್ರಹವಾಗಿ ಹೇಳುತ್ತೇವೆ. ಇದರಿಂದ ವಿರಾಮವಿದ್ದಾಗಲೂ, ಯಾವ ಆತುರವೂ ಇರದಿದ್ದರೂ ವೇಗೋಚ್ಚಾರಣೆಯ ವಿಭಾಗದಲ್ಲಿರುವಂತೆ ಜೀವಕ್ಕೆ ಒಗ್ಗಿಹೋದ ಅಭ್ಯಾಸ ಬಲದಿಂದ ಉದ್ದನೆಯ ಪದಗಳನ್ನು ಚಿಕ್ಕ ಪದಗಳನ್ನಾಗಿ ಪರಿವರ್ತನೆ ಮಾಡಿಯೇ ಉಚ್ಚರಿಸುತ್ತೇವೆ. ಮನೆಯ ಮಕ್ಕಳ-ಮಂದಿಯ ಹೆಸರುಗಳನ್ನು ಕರೆಯುವಾಗಲಂತೂ ಈ ಅಂಶ ಪ್ರಧಾನವಾದ ಪಾತ್ರವಹಿಸುತ್ತದೆ. ಶ್ರೀನಿವಾಸ > ಶೀನ (ಚೀನಿ), ಗಿರಿಜಾಂಬಿಕೆ > ಗಿರಿ, ಅನಂತಪದ್ಮನಾಭರಾವ್ > ಅಂತಪ್ಪ (ಅಂತು), ಚಮ್ಮಟಿಗೆ (< ಚರ್ಮಪಟ್ಟಿಕಾ) > ಚಾಟಿ, ಪೊಸಂತಿಲ್ > ಹೊಸಲು—ಗೌಡ, ಪಟೇಲ, ಮಾನಾಮಿ,ಮಾಸ್ತಿ, ಮಾದೇವಿ—ಮೊದಲಾದ ಪದಗಳು ಈ ವಿಧವಾದ ವ್ಯತ್ಯಾಸಕ್ಕೆ ಗುರಿಯಾಗಿ ನಿತ್ಯಪ್ರಚಾರದಲ್ಲಿ ಉಳಿದು ಹೋದ ಪದಗಳು. ಸಂಸ್ಕೃತದ 'ಸ್ನಾತಾನುಲಿಪ್ತಃ' ಎಂಬ ಪದ 'ಪೂರ್ವಂ ಸ್ನಾತಃ ಪಶ್ಚಾದನುಲಿಪ್ತಃ' ಎಂಬುದರಿಂದ ಬಂದ ಪದವೆಂದರೆ ಆಶ್ಚರ್ಯವಾಗಬಹುದು.

### ೧೧. ನಿರೀಕ್ಷಣೆ : Anticipation.

ಮಾತನಾಡುವಾಗ ಒಂದು ಪದವನ್ನು ಹೇಳುತ್ತಿರುವಾಗಲೇ ಮುಂದಿನ ಪದಗಳನ್ನು ಏನೇನು ಹೇಳಬೇಕೆಂಬುದನ್ನು ಕುರಿತು ಯೋಚಿಸುತ್ತಿರುತ್ತೇವೆ, ನಿರೀಕ್ಷಿಸುತ್ತಿರುತ್ತೇವೆ. ಆದರೆ ಒಮ್ಮೊಮ್ಮೆ ಈ ನಿರೀಕ್ಷಣೆ ಹಾಸ್ಯಕ್ಕೆ ಎಡೆಕೊಡುವಂತೆ ಅಬದ್ಧ-ಅಸಂಬದ್ಧ ರೂಪಗಳು ನಮ್ಮ ಬಾಯಿಂದಲೇ ಉಚ್ಚಾರವಾಗಲು ಕಾರಣವಾಗುತ್ತದೆ. ಸುಬ್ಬಣ್ಣಚಾರ್ ಅಂಕಗಣಿತ > ಅಂಕಣ್ಣಾಚಾರ್ ಸುಬ್ಬಗಣಿತ ; ಭದ್ರಾವತಿ ಐರನ್ ವರ್ಕ್ಸ್ > ಐರಾವತಿ ಭದ್ರನ್ ವರ್ಕ್ಸ್: Weary benches > beary wenches ; Pardon me Madam > Mordon me padam ಇತ್ಯಾದಿ. ಇದನ್ನೇ Spoonerism ಎಂದು ಕರೆಯಬಹುದು. ಇದು ಉದ್ದೇಶದಿಂದ ಆದುದಲ್ಲ.

### ೧೨. ವರ್ಣವ್ಯತ್ಯಯ : Lapses.

ವರ್ಣಲೋಪ (Loss) ಮತ್ತು ವರ್ಣವ್ಯತ್ಯಯಗಳು (Lapses) ಬೇರೆ ವಿಧಾನಗಳೆನ್ನಬಹುದಾದರೂ ಇವುಗಳಲ್ಲಿ ಸಂಬಂಧವಿದೆ. ವರ್ಣವ್ಯತ್ಯಯದಲ್ಲಿ ಅಕ್ಷರ ನಾಶವಾಗದೆ ಸ್ಥಾನಲೋಪ ಹೊಂದುತ್ತದೆ. ಈ ವರ್ಣವ್ಯತ್ಯಯ ಕಾಲದಲ್ಲಿ ಧ್ವನಿಗಳು ಐಕ್ಯವಾಗುವುದೂ ಉಂಟು. ಒಮ್ಮೆ ನಾನು ಹೊಸದಾಗಿ ಪರಿಚಯ ಆದವರ ಬಳಿ ಮಾತನಾಡುತ್ತಿರುವಾಗ ಅವರು 'ನಿಮ್ಮಕಡೆ ಮಳೆಹೇಗಿದೆ?' ಎಂದು ಕೇಳಿದರು. ನಾನು 'ವಿಪರೀತ' ಮಳೆ ಎಂದು ಹೇಳಲೋ ಅಥವಾ 'ಅಪಾರ' ಮಳೆ ಎಂದು ಹೇಳಲೋ ಎಂಬುದಾಗಿ ಮನಸ್ಸಿನಲ್ಲೇ ಯೋಚಿಸುತ್ತಾ ಯಾವುದಾದರೂ ಒಂದು ಹೇಳಿದರಾಯಿತೆಂದು ಬಾಯಿಬಿಟ್ಟರೆ 'ವಿಪಾರಮಳೆ' ಎಂಬ ಪದ ಉಚ್ಚಾರವಾಯಿತು ! ಲಜ್ಜೆಯಿಂದ ನನ್ನ ಕಪ್ಪು ಮುಖವೂ ಕೊಂಚ ಕೆಂಪಾಯಿತು ! ಹೀಗೆಯೇ ಇಂಗ್ಲೀಷಿನಲ್ಲಿ avoid ಮತ್ತು evade ಎಂಬ ಪದಗಳಿಂದ evoid ಅಥವಾ avede ಎಂಬ ಪದವಾಗಲು ಸಾಧ್ಯವಿದೆ. 'ವ' (v) ಎಂಬ ಸಾಮಾನ್ಯ ಧ್ವನಿಮಾ, ಅದರ ಅಕ್ಕಪಕ್ಕದ ಧ್ವನಿಮಾಗಳ ವ್ಯತ್ಯಾಸಕ್ಕೆ ಕಾರಣವಾಗುತ್ತದೆ. ಇದನ್ನೇ Contamination ಎಂದೂ ಕರೆಯುವರು. ನಿರೀಕ್ಷಣೆಗೂ ಈ ವರ್ಣವ್ಯತ್ಯಯ ವಿಭಾಗಕ್ಕೂ ವ್ಯತ್ಯಾಸವಿದೆ.

**೧೩. ಪುನರುಕ್ತಿ [ದ್ವಿರುಕ್ತಿ]: Tautology.**

ಒಂದೇ ಪದದಲ್ಲಿ ಹೇಳಬಹುದಾದ ವಿಚಾರವನ್ನು ಅದೇ ಅರ್ಥದ ಇನ್ನೊಂದು ಪದವನ್ನು ಸೇರಿಸಿ ಹೇಳುವುದನ್ನು ದ್ವಿರುಕ್ತಿ ಅಥವಾ ಪುನರುಕ್ತಿ ಎಂದು ಕರೆಯಬಹುದು. ಯಮಳಶಬ್ದಗಳು ವಿಭಾಗವೂ ಇಂತಹುದೇ ಆದರೂ ಅಲ್ಲಿ ಸಮಾನಾರ್ಥಕವಾದ ಭಿನ್ನಭಾಷೆಯ ಪದಗಳು ಸೇರುತ್ತವೆ. ಇಲ್ಲಿ ಸಮಾನಾರ್ಥಕವಾದ ಒಂದೇ ಭಾಷೆಯ—ಪದಗಳು ಎರಡು ಪದಗಳು ಕೂಡಿ ಅದೇ ಅರ್ಥದಲ್ಲಿ ಬಳಕೆಗೆ ಬರುತ್ತವೆ. ಸಂಸ್ಕೃತದ ಪದಚರಣ, ಯುಗದ್ವಯ ಇತ್ಯಾದಿ ಪದಗಳೂ, ಕನ್ನಡದ ಹಸಿವದ್ದೆ, ಎಳ್ಳೆಣ್ಣೆ, ಹೆಣ್ಣುಕೂಸು, ಜಗಲಿ(ತಿ)ಕಟ್ಟೆ, ಮುನ್ನೀರ್ಗಡಲ್ ಇತ್ಯಾದಿಪದಗಳೂ ಪುನರುಕ್ತಿಗೆ ಉದಾಹರಣೆಗಳಾಗಿವೆ.

**೧೪. ಸ್ವರಪ್ರಾರಂಭ: Prosthes.**

ಪದಗಳ ಪ್ರಾರಂಭದಲ್ಲಿ ವ್ಯಂಜನಾಕ್ಷರ ಬಂದರೆ ಕೆಲವರಿಗೆ ಒಮ್ಮೊಮ್ಮೆ ಉಚ್ಚಾರ ಕಷ್ಟವಾಗಬುದು. ಅದಕ್ಕಾಗಿ ಪದದ ಆದಿಯಲ್ಲಿ ಒಂದು ಸ್ವರವನ್ನು ಸೇರಿಸಿಕೊಂಡು ಆ ಪದಗಳನ್ನು ಉಚ್ಚರಿಸುವುದು ಸುಮಾರು ಭಾಷೆಗಳಲ್ಲಿ ಕಾಣುತ್ತದೆ. ಅದರಲ್ಲಿ ಮುಸ್ಲಿಮರು ಈ-(ಇಸ್) ಸ್ವರವನ್ನು ಸೇರಿಸುವುದಂತೂ ಸುಪ್ರಸಿದ್ಧವಾಗಿದೆ—(ಇಸ್ಕ್ರೂ, ಇಸ್ಪಿತಾಲ್, ಇಸ್ಕೂಲ್, ಇಸ್ಪಾನರ್, ಇಸ್ಪೆಷಲ್ ಇತ್ಯಾದಿ.) ಸಂಸ್ಕೃತದ 'ಸ್ತ್ರೀ' ಪ್ರಾಕೃತದಲ್ಲಿ ಇತ್ಥಿಯಾ, ಇತ್ಥೀ ಎಂದೂ ,ಮರಾಠಿಯಲ್ಲಿ ಅಸ್ತುರಿ ಎಂದೂ, ಸಂಸ್ಕೃತದ ಸ್ಥಾನ ಮರಾಠಿಯಲ್ಲಿ ಅಸ್ಥಾನ ಎಂದೂ ಆಗುತ್ತದೆ. ದ್ರಾವಿಡ ಭಾಷೆಗಳಲ್ಲೂ ಈ ಕ್ರಮ ಪ್ರಚಾರದಲ್ಲಿದೆ—ಅದರಲ್ಲಿಯೂ ತಮಿಳಿನಲ್ಲಿ ಇರಾಮುಮ್, ಇರಾಮಾನುಜನ್, ಇಲಕ್ಕಣಮ್, ಅರಸನ್, ಉಲೋಕಮ್-ಇತ್ಯಾದಿ.

**೧೫. ತಪ್ಪುಸಾಹಚರ್ಯ: Fale Association.**

ಒಬ್ಬರಿಗೊಬ್ಬರು ಮಾತನಾಡುವಾಗ ಸರಿಯಾಗಿ ಕಿವಿ ಕೇಳಿಸದೆಯೋ, ಗಮನವಿಟ್ಟು ಕೇಳದೇ ಇದ್ದುದರಿಂದಲೋ ತಪ್ಪುಸಾಹಚರ್ಯದಿಂದಾಗಿ ಹಲವು ಪದಗಳು ಸರಿಯಾದ ಪದವನ್ನು ಮರೆಮಾಡಿ ಮೆರೆದಾಡುತ್ತವೆ. ಪಾಂಪ್ ಷೂಸ್ > ಪಂಪ್‌ಷೂಸ್, ಜನ < ಜಲ (ಪ್ರಯೋಗ, ನಿಂದೆಯಲ್ಲಿ 'ಸಿನ್ನಜಲ್ಮಸುಡ') ನೋಟೀಸು > ಲೋಟೀಸು -ಇತ್ಯಾದಿ. ಮೈಸೂರಿನಲ್ಲಿ ನೂರಡಿ ರಸ್ತೆ, ಮಹಾರಾಜಾಕಾಲೇಜು ವಿದ್ಯಾರ್ಥಿನಿಲಯದಿಂದ ಪ್ರಾರಂಭವಾಗುವ ಚೌಕಕ್ಕೆ ರಾಮಸ್ವಾಮಿ ಚೌಕ (ಸರ್ಕಲ್) ಎಂಬ ಹೆಸರಿದೆಯಾದರೂ, ಮಧ್ಯದಲ್ಲಿರುವ ದೊಡ್ಡ ವಿದ್ಯುತ್ ಕಂಬದಲ್ಲಿ ಐದುದೀಪಗಳಿರುವುದರಿಂದ ('ಐದು ದೀಪದ ಚೌಕ') 'Five lights Circle' ಎಂಬ ಹೆಸರು ರೂಢಿಗೆ ಬಂದಿದೆ. ಆದರೆ ಮಾರುಕಟ್ಟೆಯಿಂದ ಬಸ್ಸಿನಲ್ಲಿ ಸರಸ್ವತಿಪುರಂಗೆ ಹೊರಟರೆ ಇಂಗ್ಲಿಷ್ ಬಾರದ ಜನ, ಅರ್ಥಂಬರ್ಥ ತಿಳಿದಜನ 'Pilot circle,ಗೆ ಟೀಕೇಟು ( > ತಿಕೇಟು) ಕೊಡಿ' ಎಂದು ಕೇಳುವುದನ್ನು ಗಮನಿಸಬಹುದು. ಬೆಂಗಳೂರಿನ ಪ್ಯಾಲೆಸ್ ಆರ್ಚರ್ಡ್ ಮಾರ್ಗದ (ನಂ. ೩೧) ಬಸ್ಸಿನಲ್ಲಿ ಹೋಗುವಾಗಲೂ ಬದಲಾಗಿ ಲಿಂಕನ್ ರೋಡ್ ಎಂದು ಹೇಳುವುದನ್ನು ಕೆಲವರಾದರೂ ಕೇಳಿರಬಹುದು—ಇವೆಲ್ಲಾ ತಪ್ಪುಸಾಹಚರ್ಯದಿಂದ ಬಂದ ಪದಗಳು. ಸಂಸ್ಕೃತದಿಂದ ಕನ್ನಡಕ್ಕೆ ಬಂದಿರುವ ಕೆಲವು ಪದಗಳಿಗೆ ಮೂಲಾರ್ಥಹೋಗಿ ಬೇರೆ ಅರ್ಥಬಂದಿರುವುದಕ್ಕೆ ಇದೇ ಕಾರಣವಿರಬೇಕು.

## ೧೭. ಭಾಷಾಗೌರವ [ಚಾರುವಾಕುಗಳು] Euphemism.

ಈ Euphemism ಎಂಬ ಇಂಗ್ಲಿಷ್ ಪದ ಗ್ರೀಕ್‌ಭಾಷೆಯ Euphony ಪದದಿಂದ ಬಂದಿದೆ. ಗ್ರೀಕ್‌ಭಾಷೆಯಲ್ಲಿ Euphony ಎಂದರೆ ಒಳ್ಳೇಮಾತಾಡು, Speak well ಎಂಬ ಅರ್ಥವಿದೆ. ಪ್ರತಿಯೊಂದು ಭಾಷೆಯಲ್ಲೂ ಮಾತ ನಾಡುವಾಗ ಒಂದು ಭಾಷಾಮರ್ಯಾದೆಯನ್ನು ಗಮನಿಸುವರು. ಹೇಳುವ ವಿಚಾರದಲ್ಲಿ ಕಾಠಿಣ್ಯ ತಲೆದೋರದೆ ಆದಷ್ಟೂ ಸೌಕುಮಾರ್ಯ-ಸಭ್ಯತೆ ಕಾಣುವಂತೆ ಮಾತುಗಳನ್ನು ಜೋಡಿಸುವರು. ಇಂಗ್ಲಿಷ್‌ನಲ್ಲಿ Died ಎನ್ನುವುದಕ್ಕೆ Breathed his lost, Expired, Kicked his bucket—ಇತ್ಯಾದಿಯಾಗಿ ಹೇಳುವರು. ಹಾಗೆಯೇ He is no more, He is gone ಎಂಬ ಮಾತಗಳೂ ಈ ರೀತಿಯವೇ ಆಗಿವೆ. 'ಹಾಳಾಗಿ ಹೋಗು' ಎನ್ನುವುದಕ್ಕೆ Go west ಎನ್ನುವರು. ಕನ್ನಡದಲ್ಲೂ ಈ ಬಗೆಯ ಪದಗಳು-ದೃಷ್ಟಿ ವಿಶೇಷ. ಬಳೆ ಒಡೆದು ಹೋದರೆ ಅದನ್ನು 'ಬಳೆ ಹೆಚ್ಚಿತು' ಎನ್ನುವರು; ಕುಂಕುಮ ಅಳಿಸಿದರೆ ಕುಂಕುಮ ಹೆಚ್ಚಿತು ಎನ್ನುವರು ; ಸತ್ತವರನ್ನು—ಸ್ವರ್ಗ ಸೇರಿದರು, ಮುಕ್ತಿಗೆ ಹೋದರು, ಕೈಲಾಸ ವಾಸಿಗಳಾದರು, ವೈಕುಂಠಕ್ಕೆ ಹೋದರು, ದಿವಂಗತರಾದರು, ತೀರಿಹೋದರು—ಇತ್ಯಾದಿಯಾಗಿ ವಿವರಿಸುವರು. ಅಕ್ಷಯ ಸಂವತ್ಸರ, ಮಂಗಳ ವಾರ—ಇವೂ ಇಂಥ ಪದಗಳೇ. ಹೀಗೆಯೇ ರೋಗಿಗಳನ್ನು, ಕಾಯಿಲೆಯಿಂದ ಇರುವವರನ್ನು ನಿಮ್ಮ ಆರೋಗ್ಯ ಹೇಗಿದೆ? ಎಂದು ಕೇಳುವರು. ಇವೆಲ್ಲಾ ಮಾತನಾಡುವವನ ಸಂಸ್ಕೃತಿ, ಸಂಸ್ಕಾರ, ವಿದ್ಯೆ, ವಯಸ್ಸು, ಅನುಭವ-ವಿವೇಕಗಳಿಗೆ ಸೇರಿದ ವಿಷಯ. ಗಂಗಳವೆಂದು ಕೆಲವರೂ, ತಟ್ಟೆಯೆಂದು ಹಲವರೂ, ಪ್ಲೇಟ್ ಎಂದು ಆಧುನಿಕರೂ ಬಳಸುವರು—ಯಾವುದರಲ್ಲಿ ಮಾಡಿದರೂ ಊಟವೇ, ಆದರೂ ಗೌರವ-ಅಂತಸ್ತು ಗಮನಿಸಬೇಡವೇ? 'ಎರಡು ತಟ್ಟೆ ಇಡ್ಲಿ ಸಾಂಬಾರ್ ತಗೊಂಡುಬಾ' ಎಂದು ಹೋಟಲಿನ ಮಾಣಿಗೆ ಹೇಳಿದರೆ ಸುತ್ತ ಇರುವವರೆಲ್ಲಾ ನಗರೆ? ಹಾಗೆ ಹೇಳಿದವನನ್ನು ಹಳ್ಳಿಯವನೆಂದು ಅಲ್ಲಗಳೆಯುವ ಕಾಲ ಬಂತು!

## ೧೭. ವ್ಯಂಗ್ಯಪದಗಳು : Irony

ಒಬ್ಬರ ಅವಗುಣಗಳನ್ನು ನಿರ್ದೇಶಿಸುವಾಗ, ಮಾಡುತ್ತಿರುವ ಕೆಲಸವನ್ನು ಸರಿಯಲ್ಲವೆಂದು ಸೂಚಿಸುವಾಗ ವಿಡಂಬನೆಯ ದೃಷ್ಟಿಯಿಂದ ಮಾತನಾಡುವಾಗ ಕಟಕಿ ಅಥವಾ ವ್ಯಂಗ್ಯವಾಗಿ ಪದಗಳನ್ನು ಬಳಸುವರು. ಕಪ್ಪಗಿರುವವರನ್ನು-ಅದರಲ್ಲಿಯೂ ಹುಡುಗಿಯರನ್ನು 'ನೀವು ಕಪ್ಪಗಿದ್ದೀರಿ' ಎಂದು ಹೇಳುವುದು ಹೇಗೆ? ಹೇಳಿ ಉಳಿಯುವುದು ಸಾಧ್ಯವೆ? ಅಥವಾ ಬೇರೆಯವರ ಹತ್ತಿರ ಹಾಗೆ ಹೇಳಿದರೆ ಅದರ ಸ್ವಾರಸ್ಯ ವೇನು? ಆದುದರಿಂದ 'ಅವಳು ಭದ್ರಾವತಿ ಚಿನ್ನ! ತೊಳೆದ ಕೆಂಡ!' ಎಂದರೆ ಹೇಳಿದವರಿಗಾದರೂ ಸಂತೃಪ್ತಿ! ಮತ್ತೆ ಮತ್ತೆ ಅನುತ್ತೀರ್ಣನಾಗುವ ವಿದ್ಯಾರ್ಥಿಯನ್ನು ಬೃಹಸ್ಪತಿಯೆಂದೂ, ಮಂದಬುದ್ಧಿಯ ಮಹಿಳೆಯನ್ನು ಸರಸ್ವತಿಯ ಮುರುಕು (ತುಂಡು) ಎಂದೂ, ಹೆಂಡ ಕುಡಿಯುವವರನ್ನು 'ತೀರ್ಥ ತಗೊಳ್ಳೋ ಅಭ್ಯಾಸ ಉಂಟೋ? ಗುಂಡು ಹಾಕ್ತೀರಾ?' ಎಂದೂ, ಕುರಿಕಣಯ್ಯಾ ಎನ್ನುವುದನ್ನು 'ಏನಯ್ಯಾ ಬಿನ್ನಿ, ಚೆನ್ನಾಗಿದೀಯಾ?' ಎಂದೂ, ಸರಿಯಾಗಿ ಮಾತನಾಡದವನನ್ನು 'ರೂಟ್ ನಂಬರ್ ನಾಲ್ಕನೆಯ ಬಸ್ಸಿನಲ್ಲಿ ಹೋಗು', 'ಸ್ಕ್ರೂ ಲೂಸಾಗಿದೆಯೆಲ್ಲಾ' ಎಂದೂ, ಬಡಾಯಿ ಕೊಚ್ಚುವವನನ್ನು

'ರೈಲು ಬಿಡುತ್ತಿದ್ದಾನೆ, ಎಕ್ಸ್‌ಪ್ರೆಸ್ ಹೊಡೀ ತಾನೆ, ಏನಪ್ಪ ಡೋಂಗರೆ ಬಾಲಾಮೃತ'— ಇತ್ಯಾದಿಯಾಗಿ ಹೇಳುವುದನ್ನು ನಿತ್ಯವೂ ಕೇಳ ಬಹುದು. ತಲೆ ಕ್ಷೌರಮಾಡಿಸಿಕೊಂಡು ಬಂದ ವರನ್ನು 'ಪಟ್ಟಾಭಿಷೇಕ ಆಯಿತೆ?' ಎಂದು ಕೇಳುವರು. ಇಸ್ಪೀಟು ಆಟದವರನ್ನು ರಾಮಾ ಯಣ ಪಾರಾಯಣ ಆಯಿತೆ? ಭಾರತ ಎಲ್ಲಾ ಓದಿ ಮುಗಿಸಿದಿರಾ? ಎಂದು ಪ್ರಶ್ನಿಸುವರು. ಅವಿದ್ಯಾವಂತನಿಂದ ಹಿಡಿದು ವಿದ್ಯಾವಂತನ ವರೆಗೂ ವ್ಯಂಗ್ಯವಾಗಿ ಮಾತನಾಡಿ ಸಂಭಾಷಣೆಗೆ ಸ್ವಾರಸ್ಯ ತರುವ ಕಲೆ ಹರಡಿಕೊಂಡಿದೆ.

## ೧೮. ಪದಾದಿಸ್ವರಲೋಪ: Apheresis

ಇದು ಸ್ವರ ಪ್ರಾರಂಭಕ್ಕೆ ತದ್ವಿರುದ್ಧವಾದ ಕ್ರಮ. ಕೆಲವು ಪದದ ಪ್ರಾರಂಭದಲ್ಲಿರುವ ಸ್ವರ ಗಳನ್ನು ಬಿಟ್ಟು ಆ ಪದಗಳನ್ನು ಬಳಸುವುದು ರೂಢಿಯಲ್ಲಿದೆ. ಈ ಪದ್ಧತಿ ಎಲ್ಲ ಭಾಷೆಗಳಲ್ಲೂ ಇರುವಂತೆ ಕಾಣುತ್ತದೆ. ಲ್ಯಾಟಿನ್ನಿನ illa eccelsia ಎಂಬ ಪದ ಇಟಾಲಿಯನ್ ಭಾಷೆ ಯಲ್ಲಿ la chiesa ಎಂದಾಗಿದೆ. ಸಂಸ್ಕೃತದಲ್ಲಿ ಅಪಿಧಾನ > ಪಿಧಾನ, ಅವಗಾಹ > ವಗಾಹ; ಪ್ರಾಕೃತದಲ್ಲಿ ಅರಣ್ಯ > ರಣ್ಣ; ಪಾಳಿಯಲ್ಲಿ ಅಲಂಕಾರ > ಲಂಕಾರ; ಸಿಂಹಳಿಯಲ್ಲಿ ಅವಟ > ವಡಾ; ಕನ್ನಡ ಕಾವ್ಯಗಳಲ್ಲಿ ಆಹಾರ > ಹಾರ(ಅಗ್ರಹಾರ) ಮತ್ತು ಜನಬಳಕೆ ಯಲ್ಲಿ ಅನಂತರ > ನಂತರ. (ಸಂಸ್ಕೃತ) ಅಹಮ್ > (ಹಿಂದಿ) ಹಮ್.

## ೧೯. ವರ್ಣಾಗಮ [ಸ್ವರಭಕ್ತಿ]: Anaptyxis

ಸಾಮಾನ್ಯವಾಗಿ ಶಬ್ದಗಳ ಉಚ್ಚಾರದ ಕಾಲದಲ್ಲಿ ಆದಷ್ಟೂ ಧ್ವನಿಯನ್ನು ಕಡಮೆ ಮಾಡು ವುದು ವಾಡಿಕೆಯೆಂಬುದನ್ನು ಮಿತವ್ಯಯಾಸಕ್ತಿ ವಿಭಾಗದಲ್ಲಿ ನೋಡಿದ್ದೇವೆ. ಆದರೆ ಈ ಪದ್ಧತಿಯೇ ಬೇರೆ. ಉಚ್ಚರಿಸಲು ಕಷ್ಟವಾದ ಪದಗಳಲ್ಲಿ ಸಾಧಾರಣವಾಗಿ ಪದಮಧ್ಯೆ ಒಂದು ವರ್ಣ ಸೇರಿ ಸುವುದು ಕಂಡುಬರುತ್ತದೆ. ಪೃಥ್ವೀ > ಪೃಥಿವೀ, ಪ್ರತ್ನ > ಪ್ರತನ, ನೂತ್ನ > ನೂತನ, ಭಕ್ತಿ > ಭಕುತಿ . . . ಇತ್ಯಾದಿ.

## ೨೦. ಆಲಂಕಾರಿಕ ಭಾಷೆ: Figurative Language

ಅಲಂಕಾರಗಳ ಪರಿಭಾಷೆ ಹೊಸ ಪದಗಳ ಸೃಷ್ಟಿಗೆ ನಾಂದಿಯಾಗುತ್ತದೆ. ರೂಪಕಗಳು, ಉಪ ಮೆಗಳು ಇದಕ್ಕೆ ಒಳ್ಳೆಯ ಉದಾಹರಣೆಗಳು: ಒಳ್ಳೆಯ ಮನುಷ್ಯರನ್ನು–ದೇವರಂಥಾ ಮನುಷ್ಯ- ಧರ್ಮರಾಯ ಇದ್ದಹಾಗೆ—ಎಂದು ಸ್ತುತಿ ಸುತ್ತೇವೆ: ದುಷ್ಟನನ್ನು ಶನಿಯೆಂದೂ, ಪೀಡಿಸುವ ನನ್ನು ನಕ್ಷತ್ರಕನೆಂದೂ, ಕೋಪಿಷ್ಠನನ್ನು ದೂರ್ವಾ ಸನೆಂದೂ ಆರೋಪಿಸಿ, ಪುರಾಣ ಪುರುಷರೊಡನೆ ಹೋಲಿಸಿ ಅಲಂಕಾರಮಯವಾಗಿ ಮಾತನಾಡುವು ದುಂಟು. ಕಂಡ ವ್ಯಕ್ತಿ-ವಸ್ತುಗಳ ವೈಶಿಷ್ಟ್ಯವನ್ನು ಕಾಣದ ವ್ಯಕ್ತಿ-ವಸ್ತುಗಳೊಡನೆ ತುಲನೆಮಾಡಿ ಅಥವಾ ಸಂಬಂಧ ಕಲ್ಪಿಸಿ ಭಾಷೆ ಬಳಸುತ್ತೇವೆ, ಬೆಳೆಸುತ್ತೇವೆ. ಆದಿಕವಿ ಪಂಪ ತನಗೆ ಆಶ್ರಯ ವಿತ್ತ ಅರಸನಾದ ಎರಡನೆಯ ಅರಿಕೇಸರಿಯನ್ನು ಮಹಾಭಾರತದ ಅರ್ಜುನನೊಡನೆಯೂ, ರನ್ನ ಕವಿ ಸತ್ಯಾಶ್ರಯ ಇರಿವಬೆಡಂಗನನ್ನು ಭೀಮ ಸೇನನೊಡನೆಯೂ ಅಭೇದಭಾವದಿಂದ ಒಂದು ಗೂಡಿಸಿ ಮಹಾಕಾವ್ಯಗಳನ್ನೇ ರಚಿಸಿದರು. ನಮ್ಮ ದೈನಂದಿನ ಮಾತುಕತೆಗಳಲ್ಲಿ ಇಂತಹ ನೂರಾರು ವಾಕ್ಯಗಳು ವ್ಯಕ್ತವಾಗುತ್ತಿರುತ್ತವೆ. ಎಳೆಯ ಮಕ್ಕಳನ್ನು ಕುರಿತು, ಮುದ್ದು ಕೃಷ್ಣ, ಬಾಲಕೃಷ್ಣ ಎಂದೂ, ಕೋಗಿಲೆ ಕಂಠ, ಅಮೃತ ಇದ್ದಂತಿದೆ, ಈ ನರಕ ಹಿಂಸೆ ಬೇಡಪ್ಪಾ, ನಂದನ ವನ

ನೋಡಿದ ಹಾಗಿದೆ, ದೇವಲೋಕದಂತಿದೆ, ಅಪ್ಸರೆ ಯಂತೆ, ರತಿಯಂತೆ, (ಕೆಲವು ರೂಪಕಗಳು) ಗರ ಗಸದ ಹಲ್ಲು, ಕೊಡಲಿ ಬಾಯಿ, ಬುದ್ಧಿ ಮಿಂಚುತ್ತದೆ,—ಇ. ಇ. ಗ್ರಾಮೀಣ ಗಾವಿಲನಿಂದ ಹಿಡಿದು ಪಟ್ಟಣದ ಪಂಡಿತವರೇಣ್ಯರವರೆಗೂ ಈ ಕ್ಷೇತ್ರ ವಿಸ್ತಾರವಾಗಿ ವ್ಯಾಪಿಸಿಕೊಂಡಿದೆ.

### ೨೧. ತಪ್ಪುಕಲ್ಪನೆ [ಪೂರ್ವಾಭಿಪ್ರಾಯ ಪ್ರೇರಿತ ಪದಗಳು] : Bais words

ತಮ್ಮ ಬಗ್ಗೆ ಅಭಿಮಾನವನ್ನೂ ಇನ್ನೊಬ್ಬರ ಬಗ್ಗೆ ಕುತ್ಸಿತ ದೃಷ್ಟಿಯನ್ನೂ ಹೊಂದಿರುವುದು ಮಾನವ ಗುಣಗಳಲ್ಲೊಂದು. ಇದರಿಂದಾಗಿ ಹಲವು ಹೊಸ ಪದಗಳು ಜನಿಸುತ್ತವೆ. ನಿಂದಿಸುವ ಬೈಗುಳದ ನುಡಿಗಳೂ ಇದರಲ್ಲೇ ಸೇರುತ್ತವೆ. ಅರವು ಅಧ್ವಾನ, ಕೊಂಗಾಟ (ತಮಿಳರಿಗೆ ಕೊಟ್ಟ ಬಿರುದು ಬಾವಲಿಗಳು !) ತೆಲುಗು ತೇಟ, ಕನ್ನಡ ಕಸ್ತೂರಿ; ಜಿಪುಣಾಗ್ರೇಸರ ಚಕ್ರವರ್ತಿ, ಎಮ್ಮೆ ಹಾಲು ಕುಡಿದು ಬೆಳೆದಿದ್ದಾನೆ, ಕತ್ತೆಯಂಥವನು, ಗೂಬೆಮುಂಡೇದು, ಪುಡಾರಿ, ಕಳ್ಳರಸಿಕೆರೆ, ಗಂಜಾಮ್‌ಗೆ ಹೋಗು (ಹೆಣ ಹೊರುವುದಕ್ಕೆ ಹೋಗು), ಚನ್ನಪಟ್ಣ (ನಪುಂಸಕತ್ವವೆಂದು ಸೂಚನೆ),—ಇತ್ಯಾದಿ ಪದಗಳು ಈ ಗುಂಪಿಗೆ ಸೇರುತ್ತವೆ. ಗೋಲ್ಡ್‌ಸ್ಮಿತ್ ಬರೆದ National Prejudice ಎಂಬ ಪ್ರಬಂಧದಲ್ಲಿ ಒಳ್ಳೆಯ ಉದಾಹರಣೆಗಳು ಸಿಗುತ್ತವೆ.

### ೨೨. ಕಲಬೆರಕೆಯ ಪದಗಳು : Hybrid words

ಭಿನ್ನ ಭಿನ್ನ ಭಾಷೆಗೆ ಸೇರಿದ ಪದಗಳನ್ನು ಕೂಡಿಸಿ ಹೊಸಪದಗಳನ್ನಾಗಿ ಮಾಡಿಕೊಳ್ಳುವುದನ್ನು ಸಾಮಾನ್ಯವಾಗಿ ಎಲ್ಲ ಭಾಷೆಗಳಲ್ಲೂ ಗಮನಿಸಬಹುದು. ಉದಾಹರಣೆಯಾಗಿ ಕೆಲವು ಪದಗಳನ್ನು ನೋಡಿ. ಇಂದು ಜನ ಬಳಸುವ ಇಂಗ್ಲಿಷ್ ಭಾಷೆಯ 'ಆಟೊಮೊಬೈಲ್' ಎಂಬ ಪದವನ್ನು ಗಮನಿಸಬಹುದು. ಈ ಸಮಾಸ ಪದದ ಸ್ವಾರಸ್ಯವೆಂದರೆ ಇದರಲ್ಲಿರುವ ಆಟೊ-ಮೊಬೈಲ್ ಎಂಬ ಎರಡು ಪದಗಳೂ ಇಂಗ್ಲಿಷ್ ಭಾಷೆಯ ಪದಗಳಲ್ಲ. ಇದರ ಪೂರ್ವಪದ ಗ್ರೀಕ್ ಭಾಷೆಯದು. ಉತ್ತರಪದ ಲ್ಯಾಟಿನ್ ಭಾಷೆಯದು ! ಗ್ರೀಕ್ ಭಾಷೆಯ Autos ಎಂಬ ಪದ (ಇಂಗ್ಲಿಷಿನಲ್ಲಿ) Auto ಎಂದಾಗಿ, ಲ್ಯಾಟಿನ್ ಭಾಷೆಯ Mobilis ಎಂಬುದು Mobile ಎಂದಾಗಿದೆ. ಈ ರೀತಿಯಲ್ಲಿ ಎರಡು ಬೇರೆ ಬೇರೆ ಭಾಷೆಗಳ ಪದಗಳು ಸೇರಿ ಆಗಿರುವ ಒಂದು ಕಲಬೆರಕೆಯ ಪದ Automobile ಎಂಬುದು. ಪುನರುಕ್ತಿ ವಿಭಾಗದಲ್ಲಿ ಒಂದೇ ಭಾಷೆಗೆ ಸೇರಿದ ಸಮಾನಾರ್ಥಕವಾದ ಪದಗಳು ಸೇರುತ್ತವೆ ; ಯಮಳ ಶಬ್ದಗಳು ವಿಭಾಗದಲ್ಲಿ ಬೇರೆ ಭಾಷೆಗೆ ಸೇರಿದ ಸಮಾನಾರ್ಥಕ ಪದಗಳು ಸೇರುತ್ತವೆ ; ಈ ವಿಭಾಗದಲ್ಲಿ ಭಿನ್ನಾರ್ಥಕವಾದ ಬೇರೆ ಭಾಷೆಯ ಪದಗಳು ಸೇರಿ ಮತ್ತೊಂದು ಅರ್ಥದಲ್ಲಿ ಬಳಕೆಗೆ ಬರುತ್ತವೆ. ಈ ಬಗೆಯ ಪದಗಳ ಸೃಷ್ಟಿ ಕನ್ನಡದಲ್ಲಿ ಒಹಳ ಹಿಂದಿನಿಂದಲೂ ನಡೆದಿದೆ. ಅದರಲ್ಲಿಯೂ ಸಂಸ್ಕೃತ-ಕನ್ನಡಗಳ ಅಪೂರ್ವ ಸಂಗಮ ಸಾವಿರ ವರುಷದ ಹಿಂದಿನಿಂದಲೂ ಸಹಸ್ರಾರು ಸಂಖ್ಯೆಯಲ್ಲಿ ಸಾಧಿತವಾಗಿದೆ, ನಿರಂತರವಾಗಿ ನಡೆದಿದೆ ; ಅರಿಸಮಾಸದೋಷವಾಗುವುದೆಂದು ವ್ಯಾಕರಣ ಶಾಸ್ತ್ರಕಾರರು ಇಂಥ ರಚನೆಗೆ ಅಡ್ಡಿ ಆತಂಕಗಳ ಅಡ್ಡಗೋಡೆಯನ್ನಿಟ್ಟರೂ ಈ ಕಾರ್ಯವೇನೂ ನಿಲ್ಲಲಿಲ್ಲ. ಅತ್ಯಂತ ಪ್ರಾಚೀನ ಕನ್ನಡ ಶಾಸನವಾದ ಪಲ್ಮಿಡಿ ಶಾಸನದಲ್ಲೇ 'ಪೆತ್ತಜಯನ್' ಮೊದಲಾದ (ಅರಿಸಮಾಸ) ಕಲಬೆರಕೆ ಪದಗಳಿವೆ. ಏನು ಸ್ವಾಮಿ, ಸ್ಕೂಲು ಬಾಗಿಲು, ಕಾಲೇಜು ಹುಡುಗ, ರೂಮಿನಲ್ಲಿ, ಬುಕ್ಕಿನ ಮೇಲೆ—ಇತ್ಯಾದಿ ಪದಗಳು ಕಲಬೆರಕೆಯವು. ಇಂಗ್ಲಿಷ್ ಕನ್ನಡದ ಕಲಬೆರಕೆ

ಪದಸೃಷ್ಟಿ ಇಂದು ಅಧಿಕವಾಗಿದೆ, ಭಾಷೆಯ ಬೆಳವಣಿಗೆಗೆ ಕಾರಣವಾಗಿದೆ. ಪ್ರಪಂಚದಲ್ಲಿ ಪರಿವರ್ತನೆಗೆ ಒಳಗಾಗದ ಯಾವ ಜೀವಂತ ಭಾಷೆಯೂ ಇಲ್ಲ. ಇದುವರೆಗೂ ಮೇಲೆ ವಿವರಿಸಿದ ಸುಮಾರು ಇಪ್ಪತ್ತೆರಡು ಕ್ರಮಗಳಿಂದ ಮಾತ್ರ ಭಾಷೆ ವ್ಯತ್ಯಾಸ ಹೊಂದುತ್ತಿರುತ್ತದೆಂದು ಅರ್ಥವಲ್ಲ. ಇನ್ನೂ ಹಲವು ಹದಿನೆಂಟು ಕಾರಣಗಳಿಂದ ಭಾಷೆ ಬೆಳೆಯುತ್ತಿರುತ್ತದೆ, ಮಾರ್ಪಾಟು ಹೊಂದುತ್ತಿರುತ್ತದೆ. ಕೆಲವು ಗೋಚರ ಮತ್ತೆ ಕೆಲವು ಅಗೋಚರ, ಆದರೆ ಪರಿವರ್ತನೆ ಮಾತ್ರ ನಿರಂತರ! ". . . . the reason for the changeability of language is as mysterious as the origin of language itself"! (Mario Pei.)

ಹಂಪ. ನಾಗರಾಜಯ್ಯ.

**ಆಧಾರ ಗ್ರಂಥಗಳು, ಲೇಖನಗಳು—**


(ಅ) Introductory Readings on Language :
Editors : Wallace L. Anderson and Norman C. Stageberg.

(ಇ) An Introduction to Linguistic Science : —Edger H. Sturtevant.

(ಉ) Language : Leonard Bloomfield.

(ಎ) An Introduction to Modern Linguistics : – L. R. Palmer.

(ಏ) ಭಾಷಾವಿಜ್ಞಾನದ ಕೆಲವು ರೂಪರೇಖೆಗಳು : ಹಂಪ. ನಾಗರಾಜಯ್ಯ.

(ಒ) A Course in Modern Linguistics : Charles F. Hockett,

(ಓ) Foundations of Language : Louis H. Gray.

# ಪರಶುರಾಮ ಕೃಷ್ಣ ಗೋಡೆ.

[ಪುಣೆಯಲ್ಲಿರುವ ಭಾಂಡಾರ್‌ಕರ್ ಪ್ರಾಚ್ಯಸಂಶೋಧನಾ ಸಂಸ್ಥೆಯ ಕ್ಯುರೇಟರ್ ಆಗಿದ್ದ ಶ್ರೀ ಪರಶುರಾಮ ಕೃಷ್ಣ ಗೋಡೆ ಅವರ ಸಂಭಾವನಾ ಗ್ರಂಥದಲ್ಲಿ ಡಾ|| ಎಂ. ಎಂ ಪಾಠಕರ, ಅವರು ಬರೆದ ವ್ಯಕ್ತಿಪರಿಚಯ ಲೇಖದ ಕನ್ನಡಛಾಯಾನುವಾದವಿದು. ಶ್ರೀ ಪಿ. ಕೆ. ಗೋಡೆಯವರು ಜಾಗ್ರತಿಕ ಸುಪ್ರಸಿದ್ಧ ವಿದ್ವಾಂಸರಾಗಿದ್ದಾರೆ. ಇವರ ಲೇಖನಗಳ ಸಂಕಲನವು ಎಂಟು ಸಂಪುಟಗಳಲ್ಲಿ ಪ್ರಕಟವಾಗುತ್ತಲಿದೆ. ಇವರ ಹೆಸರನ್ನು ಕೇಳದ ಚಾರಿತ್ರಿಕ ವಿದ್ವಾಂಸರಿಲ್ಲ. ಪ್ರಸ್ತುತ ಲೇಖವನ್ನು ಲೇಖಕರ ಅನುಮತಿಯಂತೆ ಅನುವಾದಿಸಲಾಗಿದೆ. ಕನ್ನಡಿಗರು ಶ್ರೀ ಪಿ. ಕೆ. ಗೋಡೆಯವರ ಲೇಖನಗಳನ್ನು ಓದಿಕೊಳ್ಳುವಂತೆ ವಿನಂತಿ]

ಡಾ|| ಪಿ. ಕೆ. ಗೋಡೆ ಅವರು ಮಹಾರಾಷ್ಟ್ರದ 'ಕರ್ಹ್ಹಾಡಾ' ನಾಮಾಂಕಿತ ಬ್ರಾಹ್ಮಣ ಸಮಾಜಕ್ಕೆ ಸೇರಿದ 'ಠಾಕೂರ್' ಎಂಬ ಮೂಲ ನಾಮಾಂಕಿತವಾದ ಮನೆತನವೊಂದರಲ್ಲಿ ಜನ್ಮವೆತ್ತಿದರು. ಇವರು ಕಾಶ್ಯಪಗೋತ್ರದವರು. ಈ ಮೂಲ ಠಾಕೂರ್ ಮನೆತನವು ಮಹಾರಾಷ್ಟ್ರದ ರತ್ನಗಿರಿಜಿಲ್ಲೆಯ ದೇವಗಡ ತಾಲೂಕಿಗೆ ಸೇರಿದ 'ಜಮಸಂಡೆ ಮತ್ತು ಹದಪೀಡ' ಎಂಬೆರಡು ಗ್ರಾಮಗಳಲ್ಲಿ ನೆಲೆಗೊಂಡಿತ್ತು. ಪ್ರೊ. ಗೋಡೆಯವರು ತಮ್ಮ ಮನೆತನದ ಚರಿತ್ರೆಯನ್ನು ಸಾಧಾರಣ ಕ್ರಿ. ಶ. 1600 ರ ವರೆಗೆ ಪರಿಶೋಧಿಸಿ, ಮನೆತನಕ್ಕೆ ಸಂಬಂಧಿಸಿದ ಕೆಲವು ವಿವರಗಳನ್ನು ಸ್ಫುಟಗೊಳಿಸಿ ಪ್ರಕಟಿಸಿದ್ದರು. ಅವುಗಳಲ್ಲಿ 'ಗೋಡೆ ಬಖಾರ್' ಎಂಬ ಶಿರೋನಾಮೆಯಿರುವ ಮನೆತನದ ಇತಿಹಾಸವನ್ನೊಳಗೊಂಡ ಪ್ರಬಂಧವು ಪ್ರಾಮುಖ್ಯವಾಗಿದೆ. ಇಷ್ಟೇ ಅಲ್ಲದೆ ಪ್ರೊ. ಗೋಡೆಯವರು ತನ್ನ ಪೂರ್ವಜನಾದ ನಾರೋ ರಾಯಾಜಿ ಠಾಕೂರ್ ಎಂಬವನು ತುಲಾಜಿ ಆಂಗ್ರಿಯನೆಂಬ ಸೇನಾನಿಯೊಡನೆ ಕಾದಾಡಿ ಪ್ರಸಿದ್ಧವಡೆದ 'ಮುದಗಡಯುದ್ಧ' (ಕ್ರಿ. ಶ. 1748)ದ ವೃತ್ತಾಂತಗಳನ್ನು ಸವಿಸ್ತಾರವಾಗಿ ಬರೆದು ಪ್ರಕಟಿಸಿರುವರು. (Journal of the University of Bombay—Jan.1937).

ಈ ಯುದ್ಧದಲ್ಲಿ ನಾರೋ ರಾಯಾಜಿಯೂ ಹತ್ತು ಸಾವಿರ ಸೈನಿಕರನ್ನೊಳಗೊಂಡು ತುಲಾಜಿ ಆಂಗ್ರೀಯನನ್ನು ಸಂಪೂರ್ಣವಾಗಿ ಬಗ್ಗುಬಡೆದನು. ಅಲ್ಲದೆ, ಅವನು ಹೊಸತಾಗಿ ನಿರ್ಮಿಸಿದ ಮುದಗಡ ಕೋಟೆಯನ್ನು ನೆಲಸಮಮಾಡಿಬಿಟ್ಟನು. ಈ ವಿಜಯೀ ದಂಡಯಾತ್ರೆಯ ಪ್ರತಿಫಲವಾಗಿ ಗಂಗಾಧರ ಕೃಷ್ಣ ಪ್ರತಿನಿಧಿಯು ನಾರೊ ರಾಯಾಜಿಗೆ ಖೋಟಿ ಇನಾಮುಗಳ ರೂಪದಲ್ಲಿ ದೇವಡೆ ಮತ್ತು ಭದಕಾಂಬೆ ಗ್ರಾಮಗಳನ್ನು ಉಚಿತವಾಗಿತ್ತು ಬಹುಮಾನಿಸಿದನು. ಈ ಎರಡು ಗ್ರಾಮಗಳು ಕ್ರಿ. ಶ. 1748 ನೆಯ ಇಸವಿಯಿಂದ ಗೋಡೆ ಮನೆತನದವರ ವಶದಲ್ಲಿಯೇ ಉಳಿದಿವೆ. ಕ್ರಿ. ಶ. 1782 ರಿಂದ ಇಂದು ತನಕವೂ ಗೋಡೆ ಮನೆತನವು ವಿಶಾಲಘಡ ಕೋಟೆಯ ಸಮೀಪದ ಭದಕಾಂಬೆ ಗ್ರಾಮದಲ್ಲಿ ವಾಸಿಸಿದೆ.

ಪ್ರೊ. ಗೋಡೆಯವರ ತಂದೆ ಕೃಷ್ಣಾಜಿ ಗೋವಿಂದ ಗೋಡೆಯವರು (ಕ್ರಿ. ಶ. 1861–1930) ಓರ್ವ ಉತ್ಸಾಹೀ ಸಮಾಜಸುಧಾರಕರಾಗಿದ್ದರು. ಪುಸ್ತಕಗಳೆಂದರೆ ಅವರಿಗೆ ಬಹುಪ್ರೀತಿ. ಅವರು ಹಲವು ಪತ್ರಿಕೆಗಳ ಚಂದಾದಾರರಾಗಿದ್ದರು. ಅವುಗಳಲ್ಲಿ ದಿ. ಲೋಕಮಾನ್ಯ ತಿಲಕರ ಸಂಪಾದಕತ್ವದಲ್ಲಿ ಹೊರಡುತ್ತಿದ್ದ

‘ಕೇಸರಿ’ ಪತ್ರಿಕೆಯೂ, ಪ್ರಿನ್ಸಿಪಾಲ್ ಅಗರಕರರ ಸಂಪಾದಕತ್ವದಲ್ಲಿ ಹೊರಡುತ್ತಿದ್ದ ‘ಸುಧಾರಕ’ ಪತ್ರಿಕೆಯೂ ಗೋಡೆಯವರ ಅಚ್ಚುಮೆಚ್ಚಿನ ಪತ್ರಿಕೆಗಳು. ಮಹಾಪ್ರಾಜ್ಞರಾದ ತಿಲಕ ಮತ್ತು ಅಗರಕರ್ ಇವರೀರ್ವರ ಬರಹಗಳೂ ಗೋಡೆಯವರ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದ್ದವು. ಕ್ರಿ. ಶ. 1900 ರ ಸುಮಾರಿಗೆ ಗೋಡೆಯವರು ತಮ್ಮ ಮೂವರು ಹೆಮ್ಮಕ್ಕಳನ್ನು ವಿದ್ಯಾಭ್ಯಾಸಕ್ಕಾಗಿ ಪುಣೆಯಲ್ಲಿ ಅಣ್ಣಾಸಾಹೇಬ ಕರ್ವೆ (**Dr. D.K. Karve, founder of the Indian Women's University**), ಅವರ ಸಂಚಾಲಕತ್ವದಲ್ಲಿ ನಡೆಯುತ್ತಿದ್ದ ವಿದ್ಯಾಪೀಠಗಳಿಗೆ ಕಳುಹಿಸಿಕೊಟ್ಟರು. ಆ ಮೂವರಲ್ಲಿ ಹಿರಿಯವರಾದ ಸೌ. ಬಾನೂಬಾಯಿ ಸಹಸ್ರಬುದ್ಧೆ (ದಿ. ರಾವ್ ಬಹದೂರ್ ಡಾ. ಡಿ. ಎಲ್. ಸಹಸ್ರಬುದ್ಧೆಯವರ ಸಹಧರ್ಮಿಣಿ) ಮತ್ತು ಅವರ ತಂಗಿ ಸೌ. ಮಾಲತಿ ಬಾಯಿ ಕರ್ವೆ (ದಿ. ಪ್ರೊ. ಆರ್. ಡಿ. ಕರ್ವೆಯವರ ಸಹಧರ್ಮಿಣಿ), ಅವರು ಪ್ರೊ. ಗೋಡೆಯವರ ವಿದ್ಯಾಭ್ಯಾಸದ ಹೊಣೆಯನ್ನು ಹೊತ್ತು ಚೆನ್ನಾಗಿಯೇ ನಿರ್ವಹಿಸಿದರು.

ಪ್ರೊ. ಗೋಡೆಯವರ ಪ್ರಾಥಮಿಕ ವಿದ್ಯಾಭ್ಯಾಸವೂ ರತ್ನಗಿರಿ, ರಾಜಾಪುರ ಮತ್ತು ಕೊಲ್ಲಾಪುರಗಳಲ್ಲಿ ನಡೆಯಿತು. ಕೊಲ್ಲಾಪುರದಲ್ಲಿ ಅವರ ವಿದ್ಯಾಭ್ಯಾಸವು ಪ್ರೊ. ವಿ. ಜಿ. ವಿಜಾಪುರಕರರಿಂದ ಸಂಸ್ಥಾಪಿಸಲ್ಪಟ್ಟ ‘ಸಮರ್ಥ ವಿದ್ಯಾಲಯ’ದಲ್ಲಿ ನಡೆಯಿತು. 1908 ರಲ್ಲಿ ಪ್ರೊ. ಗೋಡೆಯವರು ಪುಣೆಯಲ್ಲಿ ನ್ಯೂ ಇಂಗ್ಲೀಷ್ ಹೈಸ್ಕೂಲನ್ನು ಸೇರಿ, 1910 ರಲ್ಲಿ ಮೆಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಆಮೇಲೆ ಅವರ ಪ್ರೌಢ ಶಿಕ್ಷಣವು ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ಮುಂದುವರಿಯಿತು. 1916 ನೆಯ ಇಸವಿಯಲ್ಲಿ ಗೋಡೆಯವರು ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಸಂಸ್ಕೃತದಲ್ಲಿ ದ್ವಿತೀಯ ಶ್ರೇಣಿಯನ್ನು ಗಳಿಸಿ ಉಚ್ಚಮಟ್ಟದಲ್ಲಿ ತೇರ್ಗಡೆಯಾದರು. ತದನಂತರ ಎರಡು ವರ್ಷಗಳ ಅವಧಿಯಲ್ಲಿ ಪುಣೆಯ ಮೂರು ಹೈಸ್ಕೂಲ್‌ಗಳಲ್ಲಿ ಇಂಗ್ಲಿಷ್ ಮತ್ತು ಸಂಸ್ಕೃತಗಳ ಅಧ್ಯಾಪಕರಾಗಿ ದುಡಿದು, 1918 ರಲ್ಲಿ ಎಂ. ಎ. ಪರೀಕ್ಷೆಯಲ್ಲಿ ಇಂಗ್ಲಿಷ್ ಮತ್ತು ಸಂಸ್ಕೃತಗಳನ್ನು ಪ್ರಧಾನವಿಷಯಗಳನ್ನಾಗಿ ಆರಿಸಿಕೊಂಡು ಉತ್ತೀರ್ಣರಾದರು. 1908 ರಿಂದ 1918 ರ ವರೆಗಿನ ಅವಧಿಯಲ್ಲಿ ಪ್ರೊ. ಗೋಡೆಯವರಿಗೆ ಮಹಾವಿದ್ವಾಂಸರಾದ ಕೀ. ಶೇ. ಡಾ|| ಪಿ. ಡಿ. ಗುಣೆಯವರು ಗುರುಗಳಾಗಿಯೂ ಮಾರ್ಗದರ್ಶಕರಾಗಿಯೂ ದೊರೆತುದು ಒಂದು ಅಪೂರ್ವ ಸಂಯೋಗವೆನ್ನಬೇಕು. 1918 ರಿಂದ 1919 ರ ವರಗೆ ಪ್ರೊ. ಗೋಡೆಯವರು ಡಾ. ಡಿ. ಕೆ. ಕರ್ವೆಯವರಿಂದ ಸ್ಥಾಪಿಸಲ್ಪಟ್ಟ ಭಾರತೀಯ ಮಹಿಳಾ ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ್ ಮತ್ತು ಸಂಸ್ಕೃತಗಳ ಪ್ರಾಧ್ಯಾಪಕರಾಗಿ ಸೇವೆಗೈದರು. ಇದೇ ಸಮಯದಲ್ಲಿ ಡಾ. ಗುಣೆಯವರು ಕೆಲವು ಮಂದಿ ಪ್ರಮುಖವಿದ್ವಾಂಸರ ಸಹಯೋಗ ಪಡೆದು ‘ಭಂಡಾರ್ಕಾರ್ ಪ್ರಾಚ್ಯ ಸಂಶೋಧನಾ ಸಂಸ್ಥೆ’ ಯೆಂಬ ಹೆಸರಿನ ಸಂಶೋಧನಾ ಸಂಸ್ಥೆಯನ್ನು ಸ್ಥಾಪಿಸಿ ಅವರ ಪ್ರವರ್ತಕರಾದರು. ಡಾ. ಗುಣೆ ಹಾಗೂ ಡಾ. ಆರ್. ಡಿ. ರಾನಡೆಯವರು ಪ್ರೊ. ಗೋಡೆಯವರ ಯೋಗ್ಯತೆಯನ್ನು ಚೆನ್ನಾಗಿ ಅರಿತವರಿದ್ದು, ಅವರ ಪ್ರತಿಭೆಯ ಪೂರ್ಣವಿಕಸನಕ್ಕೆ ಈ ಭಂಡಾರ್ಕಾರ್ ಸಂಶೋಧನಾ ಸಂಸ್ಥೆಯೆಂಬ ಹೊಸ ಸಂಸ್ಥೆಯಲ್ಲಿ ಯಥೇಷ್ಟ ಅನುವು ಸಿಕ್ಕೀತು ಎಂದರಿತು ಈ ಸಂಸ್ಥೆಯನ್ನು ಸೇರಿಕೊಳ್ಳುವಂತೆ ಪ್ರೊ. ಗೋಡೆಯವರನ್ನು ಪ್ರೇರೇಪಿಸಿದರು. ಆ ವಿದ್ವನ್ಮಣಿಗಳ ಮಾತನ್ನು ಅಂಗೀಕರಿಸಿ, ಪ್ರೊ. ಗೋಡೆಯವರು 1919 ನೆಯ ಇಸವಿ ಎಪ್ರಿಲ್ ತಿಂಗಳ 26 ನೆಯ ತೇದಿ

ಯಂದು ಭಂಡಾರ್ಕಾರ್ ಸಂಶೋಧನಾ ಸಂಸ್ಥೆಯಲ್ಲಿ ಗ್ರಂಥಭಂಡಾರದ ಉಪಾಧ್ಯಕ್ಷರಾಗಿ (Assistant Curator)ಸೇರಿಕೊಂಡರು. ಸ್ವಲ್ಪ ಕಾಲದಲ್ಲಿಯೇ, ಅಂದರೆ 1921 ನೆಯ ಇಸವಿ ಜನವರಿ ತಿಂಗಳಲ್ಲಿ ಪ್ರೊ. ಗೋಡೆಯವರು ಗ್ರಂಥಾಲಯದ ಅಧ್ಯಕ್ಷರಾಗಿ (Curator) ನೇಮಕಗೊಂಡರು. ಮತ್ತು ಆ ಗುರುತರವಾದ ಹೊಣೆಗಾರಿಕೆಯನ್ನು ದಕ್ಷತೆಯಿಂದ ಹೊತ್ತು, ಅವ್ಯಾಹತವಾಗಿ ದುಡಿದರು. 1943 ನೆಯ ಇಸವಿ ಜನವರಿ ತಿಂಗಳಲ್ಲಿ ಭಂಡಾರ್ಕಾರ್ ಸಂಶೋಧನಾ ಸಂಸ್ಥೆಯ ರೌಪ್ಯಮಹೋತ್ಸವವು ಜರುಗಿದ ಪರ್ವದಿನದಲ್ಲಿ, ಪ್ರೊ. ಗೋಡೆಯವರು ಆ ಮಹಾಸಂಸ್ಥೆಗೆ ಸಲ್ಲಿಸಿದ ಅವಿಶ್ರಾಂತ ಹಾಗೂ ಅನುಪಮ ಸೇವೆಯನ್ನು ಸ್ಮರಿಸಿ, 'ಇಂಡಾಲಜಿ' (Indology) ಕ್ಷೇತ್ರದಲ್ಲಿ ಅವರು ನಡೆಸಿದ ಅಪಾರ ಸಂಶೋಧನೆಯನ್ನು ಅನುಲಕ್ಷಿಸಿ, ಡಾ. ರಾಧಾಕೃಷ್ಣನ್ ಅವರ ದಿವ್ಯಹಸ್ತದಿಂದ ಬಂಗಾರದ ಪದಕವನ್ನು(Distinguished services medal) ಕೊಟ್ಟು ಅವರನ್ನು ಗೌರವಿಸಲಾಯಿತು.

ಪ್ರೊ. ಗೋಡೆಯವರು ಬಿ. ಎ. ತರಗತಿಯಲ್ಲಿರುವಾಗಲೇ ಅವರ ಸಂಶೋಧನಾಪ್ರವೃತ್ತಿ ಜಾಗೃತವಾಗಿತ್ತು. 1916 ನೆಯ ಇಸವಿಯಲ್ಲಿ ಅವರು ಬರೆದ ಪ್ರಪ್ರಥಮ ನಿಬಂಧ 'ಮಹಾಭಾರತದ ಕಲೆ, ಶೈಲಿ ಮತ್ತು ಪದಬಂಧ' (Art, style and Versification of the Mahabharatha)ವು ಬೆಂಗಳೂರಿನ ಸಂಸ್ಕೃತ ವಿದ್ಯಾಪೀಠದ 'ಸಂಸ್ಕೃತ ಸಂಶೋಧನೆ' (Sanskrit Research) ಎಂಬ ಪತ್ರಿಕೆಯಲ್ಲಿ ಪ್ರಕಟವಾಯಿತು. ಆ ಪತ್ರಿಕೆಯ ಆಗಿನ ಸಂಪಾದಕರಾಗಿದ್ದ ಡಾ. ಕುರ್ತುಕೋಟಿಯವರು (ಉತ್ತರಾಶ್ರಮದಲ್ಲಿ ಶ್ರೀ ಶಂಕರಾಚಾರ್ಯರೆಂದು ಪ್ರಸಿದ್ಧಿಪಡೆದವರು). ಈ ನಿಬಂಧಕ್ಕೆ ಐವತ್ತು ರೂಪಾಯಿಗಳನ್ನು ಸಂಭಾವನಾರೂಪದಲ್ಲಿ ಕೊಟ್ಟರು. ಆ ಸಂಭಾವನೆ ಒಂದು ಪ್ರಚೋದನೆಯೇ ಆಗಿ ಪರಿಣಮಿಸಿತೋ ಏನೋ ಅಂದಿನಿಂದ ಪ್ರೊ. ಗೋಡೆಯವರು 'ಇಂಡಾಲಜಿ' ಕ್ಷೇತ್ರದಲ್ಲಿ ಎಡೆಬಿಡದೆ ಸಂಶೋಧನೆಯನ್ನು ನಡೆಸುವ ಉತ್ಕಟೇಚ್ಛೆಯಿಂದ ಪ್ರೇರಿತರಾಗಿ, ತಮ್ಮ ಜೀವನವನ್ನೇ ಅದಕ್ಕಾಗಿ ಮೀಸಲಿರಿಸಿದರು. ದುರದೃಷ್ಟವಶಾತ್ 1922 ನೆಯ ಇಸವಿಯಲ್ಲಿ ಭಂಡಾರ್ಕಾರ್ ಪ್ರಾಚ್ಯ ಸಂಶೋಧನಾ ಸಂಸ್ಥೆಯ ಪ್ರಥಮ ಕಾರ್ಯದರ್ಶಿಯಾಗಿದ್ದ, ಅವರ ಗುರುವರ್ಯರಾದ ಡಾ. ಗುಣೆಯವರು ತೀರಿಹೋದುದರಿಂದ ಪ್ರೊ. ಗೋಡೆಯವರಿಗೆ ಈ ದಿಶೆಯಲ್ಲಿ ಸರಿಯಾದ ದಾರಿತೋರಿಸುವ ತಜ್ಞರು ಇಲ್ಲವಾದರು. ಆದರೂ 1925 ನೆಯ ಇಸವಿಯಲ್ಲಿ ಪ್ರೊ. ಗೋಡೆಯವರು ಬಲು ದೊಡ್ಡ ಜವಾಬ್ದಾರಿಕೆಯನ್ನು ಹೊರಬೇಕಾದ ಪ್ರಮೇಯ ಬಂತು. ಭಂಡಾರ್ಕಾರ್ ಸಂಸ್ಥೆಯ ರೆಗ್ಯುಲೇಟಿಂಗ್ ಕೌನ್ಸಿಲಿನವರು ಪ್ರೊ. ಗೋಡೆಯವರನ್ನು ಬೃಹತ್ಕಾರ್ಯ ಒಂದಕ್ಕಾಗಿ ನಿಯೋಜಿಸಿದರು. ಗವರ್ನಮೆಂಟ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರೆರಿಯನ್ನು ಪ್ರೊ. ಗೋಡೆಯವರ ವಶದಲ್ಲಿ ಕೊಟ್ಟು, ಅದರಲ್ಲಿ ಅವ್ಯವಸ್ಥಿತವಾಗಿ ಬಿದ್ದಿರುವ ಇಪ್ಪತ್ತು ಸಾವಿರ ಕೈಬರೆಹದ ಪ್ರತಿಗಳನ್ನು ವಿಷಯಾನುಕ್ರಮವಾಗಿ ವರ್ಗೀಕರಿಸುವಂತೆ ಅವರನ್ನು ಕೇಳಿಕೊಂಡರು. ಭಂಡಾರ್ಕಾರ್ ಸಂಸ್ಥೆಯ ನಿರ್ದೇಶನದ ಮೇರೆಗೆ ಆ ಕೈಬರೆಹಗಳ ವಿವರಣಾತ್ಮಕ ಯಾದಿಯೊಂದು ಸಿದ್ಧವಾಗಬೇಕಾಗಿತ್ತು. ಈ ಘನವಾದ ಕರ್ತವ್ಯದಲ್ಲಿ ನಿರತರಾಗಿದ್ದಾಗ ಪ್ರೊ. ಗೋಡೆಯವರಿಗೆ ಈ ಅಸಂಖ್ಯಾತ ಹಸ್ತಲೇಖಗಳ ವಿಷಯಬಾಹುಳ್ಯದ ನಿಕಟಪರಿಚಯವಾಯಿತು. ಅಲ್ಲದೆ ಸಂಸ್ಕೃತ ಭಾಷೆಯ ಅಪೂರ್ವ ಕೃತಿಗಳ ಹಾಗೂ ಕವಿಗಳ ಕುರಿತಾದ ಚರಿತ್ರೆ ಮತ್ತು ಕಾಲಗಣನೆಯ ಬಗೆಗೆ ಒದಗಬಹುದಾದ ಸಂಶೋಧನಾ ಸೌಲಭ್ಯದ ಅರಿವು ಉಂಟಾಯಿತು. ಮತ್ತೆ ಕೇಳಬೇಕೆ, ಪ್ರೊ ಗೋಡೆಯವರು ಪ್ರಾಚ್ಯ

ಸಂಶೋಧನೆಗೆ ಮೀಸಲಾದ ದೇಶ ವಿದೇಶಗಳ ಪತ್ರಿಕೆಗಳಲ್ಲಿ ಒಂದರ ಅನಂತರ ಇನ್ನೊಂದು ಪ್ರಬಂಧಗಳನ್ನು ಪ್ರಕಟಗೊಳಿಸುತ್ತ ಬಂದರು. ಈ ಲೇಖನಗಳು ಎಲ್ಲಾ ಕಡೆಗಳಲ್ಲಿ ವಿದ್ವಜ್ಜನರ ಗಮನವನ್ನು ಸೆಳೆದುವು. ಪ್ರಸಿದ್ಧ ವಿದ್ವಾಂಸರಾದ ಡಾ. ಎ. ಬಿ. ಕೀತ್ ಮತ್ತು ಡಾ. ಎಂ. ವಿಂಟರ್‌ನಿಟ್ಸ್ ಮೊದಲಾದವರು ಪ್ರೊ. ಗೋಡೆಯವರ ಲೇಖನಗಳನ್ನು ಮನವಾರೆ ಪ್ರಶಂಸಿಸಿದರು. 1941 ನೆಯ, ಇಸವಿಯಲ್ಲಿ ಪ್ರೊ. ಗೋಡೆಯವರು ಐವತ್ತರ ಹರಯವನ್ನು ದಾಟಿದ ಸಂದರ್ಭದಲ್ಲಿ ತಾನು ಈತನಕ ಬರೆದ 202 ಲೇಖನಗಳ ವಿಷಯಸೂಚಿ ಪಟ್ಟಿ (Bibliography) ಯನ್ನು ಸಿದ್ಧಗೊಳಿಸಿ ಅದನ್ನು ಗೌರವಪೂರ್ವಕವಾಗಿ ತನ್ನ ಗುರುಗಳಾದ ಡಾ. ಪಿ. ಡಿ. ಗುಣೆಯವರಿಗೆ ಅರ್ಪಿಸಿದರು. 163 ಲೇಖನಗಳ ಇದರ ಮೊದಲನೆಯ ಆವೃತ್ತಿಯು 1939 ರಲ್ಲಿ ಪ್ರಕಟವಾಗಿತ್ತು. ಎರಡನೆಯ ಆವೃತ್ತಿಯ ಕೊನೆಯಲ್ಲಿ ಪ್ರೊ. ಗೋಡೆಯವರು, ತನ್ನ ಸಂಶೋಧನೆಗಳ ಬಗೆಗೆ ದೇಶ ವಿದೇಶಗಳ ವಿದ್ವಾಂಸರು ವ್ಯಕ್ತಗೊಳಿಸಿದ ಅಭಿಪ್ರಾಯಗಳನ್ನು ಪ್ರಕಟಿಸಿದ್ದರು. ಈ ಅಭಿಪ್ರಾಯಗಳನ್ನೆಲ್ಲಾ ಅವಲೋಕಿಸುವಾಗ ಪ್ರೊ. ಗೋಡೆಯವರ ಸಂಶೋಧನಾಕಾರ್ಯದ ಆಳ–ವಿಸ್ತಾರಗಳೆಷ್ಟು, ಅವರ ಸಾಧನೆಯ ಪಾಶ್ಚಾತ್ಯ ಪೌರ್ವಾತ್ಯ ಪಂಡಿತರ ಸಾರ್ವತ್ರಿಕವಾದ ಗೌರವ ಗಳಿಸಿದುದರ ಗುಟ್ಟೇನು ಎಂಬುದು ವಿದಿತವಾಗುತ್ತದೆ. 1941ನೆಯ ಇಸವಿಯಿಂದ ಪ್ರೊ. ಗೋಡೆಯವರು ಭಾರತೀಯ ಇತಿಹಾಸಕ್ಕೆ ಸಂಬಂಧಿಸಿದ, ಮುಖ್ಯತಃ ಭಾರತೀಯ ಸಂಸ್ಕೃತಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಆಳವಾಗಿ ಅಭ್ಯಸಿಸಲಾರಂಭಿಸಿದರು. ಅಲ್ಲದೆ, ಈ ವಿಷಯಗಳ ಮೇಲೆ ಎಷ್ಟೆಷ್ಟೋ ಲೇಖನಗಳನ್ನು ಬರೆದು ಪ್ರಕಟಿಸಿದರು. 1946 ನೆಯ ಇಸವಿಯೊಳಗಾಗಿ ಇವರು ಪ್ರಕಟಿಸಿದ ಲೇಖನಗಳ ಸಂಖ್ಯೆ 336 ಕ್ಕೆ ಏರಿತು. 1947 ಪ್ರೊ. ಗೋಡೆಯವರು ತಮ್ಮ ಲೇಖನಗಳ ಯಾದಿಯ ಮೂರನೆಯ ಆವೃತ್ತಿಯನ್ನು ಪ್ರಕಟಿಸಿದರು. ಇದರಲ್ಲಿ ನಮೂದಿಸಿದ 336 ಲೇಖನಗಳಲ್ಲಿ 150 ಲೇಖನಗಳು ಕೇವಲ ಭಾರತೀಯ ಸಂಸ್ಕೃತಿಯನ್ನು ಕುರಿತು ಇವೆ. ಈ ಯಾದಿಯ ಕೊನೆಯಲ್ಲಿ ಕೊಟ್ಟ ವಿಷಯ ಸೂಚಿಯ ಪ್ರಕಾರ ಪ್ರೊ. ಗೋಡೆಯವರ ಲೇಖನಗಳ ವೈವಿಧ್ಯದ ಹರಹು ದಂಗುಬಡಿಸುವಂತಹದು; ಅಲಂಕಾರಶಾಸ್ತ್ರ; ಛಂದಸ್ಸು; ಗಣಿತ; ಭಾರತೀಯ ಸಂಸ್ಕೃತಿ; ಭಾರತೀಯ ಇತಿಹಾಸ, ಜೈನಕವಿಗಳು ಮತ್ತವರ ಕೃತಿಗಳು, ಜ್ಯೋತಿಷ್ಯ; ಕಾಮಶಾಸ್ತ್ರ, ಕಾವ್ಯ, ಕೋಶ, ಮೀಮಾಂಸೆ, ನಾಟಕ, ನಾಟ್ಯ, ನಾಣ್ಯವಿಜ್ಞಾನ, ನ್ಯಾಯಶಾಸ್ತ್ರ, ಮನೋವಿಜ್ಞಾನ, ಪುರಾಣ, ಸಂಗೀತ, ಸಮಾಜಶಾಸ್ತ್ರ, ತಂತ್ರ; ವೈದ್ಯಕ, ವೇದಾಂತ, ವಿಜ್ಞಾನ, ವ್ಯಾಕರಣ' ಯೋಗ, ಇತ್ಯಾದಿ ಇತ್ಯಾದಿ. ಸಂಸ್ಕೃತ ಸಾಹಿತ್ಯದ ಸುಸಂಬದ್ಧವಾದ ಚರಿತ್ರೆಯೊಂದನ್ನು ಬರೆಯಲು ಪ್ರೊ. ಗೋಡೆಯವರ ಲೇಖನಗಳ ಉಪಯುಕ್ತತೆ ಎಷ್ಟೆಂಬುದನ್ನು ಸಂಸ್ಕೃತ ಸಾಹಿತ್ಯದ ಸುಪ್ರಸಿದ್ಧ ಚರಿತ್ರಕಾರರಾದ ಡಾ. ಎ. ಬಿ. ಕೀತ್' ರಂಥ ಮಹನೀಯರು ಚೆನ್ನಾಗಿ ಮನಗಂಡಿರುವರು. ಡಾ. ಕೀತ್', ಅವರು ಪ್ರೊ, ಗೋಡೆಯವರಿಗೆ ಬರೆದ ಪತ್ರವೊಂದರಲ್ಲಿ ಈ ಕೆಳಗಿನ ಗಮನಾರ್ಹ ವಾಕ್ಯಗಳಿದ್ದವು :—

"... ಸಂಸ್ಕೃತ ಸಾಹಿತ್ಯದಲ್ಲಿ ಕಾಲ ಗಣನೆಗೆ ಸಂಬಂಧಿಸಿದ ನಮ್ಮ ತಿಳಿವಳಿಕೆಯನ್ನು, ಇನ್ನಷ್ಟು ಸ್ಫುಟಗೊಳಿಸಲು ನಿಮ್ಮ ಲೇಖನಗಳು ಅತ್ಯಂತ ಪ್ರಯೋಜನಕಾರಿಯಾಗಿವೆ. ಸಂಸ್ಕೃತ ಸಾಹಿತ್ಯದ ಮುಂದಿನ ಚರಿತ್ರೆಕಾರರಿಗೆ ಇಂಥ ಕೆಲಸ ತುಂಬ ಉಪಯುಕ್ತವಾಗುವುದು. ನೀವು ಈ ಕೆಲಸವನ್ನು ಸತತ ಪರಿಶ್ರಮದಿಂದ ಮಾಡುತ್ತಿರುವಿರಿ ಎಂದು ತಿಳಿದು ನನಗೆ ಸಂತೋಷವೆನಿಸಿದೆ."

1947 ನೆಯ ಇಸವಿಯಲ್ಲಿ ಪ್ರೊ. ಗೋಡೆಯವರು ತಮ್ಮ ವಿವಿಧ ಲೇಖನಗಳ ಯಾದಿಯ ಮೂರನೆಯ ಆವೃತ್ತಿಯನ್ನು ಪ್ರಕಟಿಸಿದರು. ಆ ಮೇಲೆ ಪ್ರಕಟವಾದ ಅವರ ಲೇಖನಗಳ ಸಂಖ್ಯೆ 136. 1916 ರಿಂದ ತೊಡಗಿ 1959ರ ವರೆಗೆ (43 ವರ್ಷಗಳ ಅವಕಾಶದಲ್ಲಿ ಪ್ರಕಟವಾದ ಅವರ ಲೇಖನಗಳ ಒಟ್ಟು ಸಂಖ್ಯೆ 475. ಅವುಗಳ ಸಂಪೂರ್ಣವಿವರಗಳನ್ನು ಈ ಸಂಭಾವನಾ ಗ್ರಂಥದಲ್ಲಿ ಕಾಣಬಹುದು. ಅವರು ಬರೆದ ಹಲ ಕೆಲವು ಲೇಖನಗಳು ಹಿಂದೀ ಭಾಷೆಯಲ್ಲಿಯೂ, ಇತರ ಪ್ರಾದೇಶಿಕ ಭಾಷೆಗಳಲ್ಲಿಯೂ ಅನುವಾದ ಗೊಂಡಿವೆ. **ಪ್ರೊ. ಗೋಡೆಯವರು, ತಾವು ಬರೆದ ಪ್ರತಿಯೊಂದು ಲೇಖನವನ್ನೂ: ಅವಶ್ಯಕತೆ ಬಿದ್ದಾಗಲೆಲ್ಲ ಪುನರಪಿ ಮುದ್ರಿಸಿ ಹೆಚ್ಚು ಪ್ರತಿಗಳನ್ನು ಮಾಡಿಸಿ, ಲೋಕದ ಮೂಲೆ ಮೂಲೆಗಳಲ್ಲಿದ್ದ ವಿದ್ವಾಂಸರಿಗೆ ಪುಕ್ಕಟೆಯಾಗಿ ಕಳುಹಿಸುತ್ತಿದ್ದರು.** ಈ ಪ್ರಸರಣ ಕಾರ್ಯಕ್ಕೆ ಕಡಿಮೆಯೆಂದರೆ 5000 ರೂಪಾಯಿ ಅವರ ಸ್ವಂತಹಣ ವಿನಿಯೋಗವಾಗಿತ್ತು. ಹೀಗಿದ್ದರೂ, ಅವರ ಲೇಖನಗಳನ್ನೋದಿದ ಎಲ್ಲರ ಅಭಿಮತವೇನೆಂದರೆ ಅವರ ಲೇಖನಗಳನ್ನೆಲ್ಲ ಒಂದೆಡೆ ಸೇರಿಸಿ, ವಿಷಯ ಸೂಚಿಯೊಡನೆ ಪುಸ್ತಕ ರೂಪದಲ್ಲಿಪ್ರಕಟಿಸಬೇಕೆಂದು. 1948 ರಲ್ಲಿ ಪ್ರೊ. ಗೋಡೆಯವರ ಆಪ್ತಮಿತ್ರರಾದ ಮೌನಿ ಶ್ರೀ ಜಿನ ವಿಜಯಜೀಯವರು (Sighi Jain Series) ಗ್ರಂಥಮಾಲೆಯ ಸಂಪಾದಕರು, ಮುಂಬಯಿಯ ಭಾರತೀಯ ವಿದ್ಯಾಭವನ ಮತ್ತು ಜಯಪುರದ ರಾಜಸ್ಥಾನಪುರಾತತ್ವ ಮಂದಿರದ ಗೌರವಾರ್ಥ ಡೈರೆಕ್ಟರರು) ಅವರ ಲೇಖನಗಳೆಲ್ಲವನ್ನು ಒಟ್ಟುಗೂಡಿಸಿ ಪುಸ್ತಕರೂಪದಲ್ಲಿ ಪ್ರಕಟಿಸುವ ಯೋಚನೆ ಮಾಡಿದರು. ಅಷ್ಟೇ ಅಲ್ಲದೆ, ಅವರ ಲೇಖನಗಳನ್ನೊಳಗೊಂಡ ಎರಡು ಸಂಪುಟಗಳನ್ನು ಧಾರಾವಾಹಿಯಾಗಿ ತಮ್ಮ Sighi Jain Series ಮಾಲೆಯಲ್ಲಿ ಪ್ರಕಟಿಸಲು ಮುಂದಾದರು. ಪ್ರೊ. ಗೋಡೆಯವರು ಕೊಂಚವೂ ಕಾಲವಿಳಂಬ ಮಾಡದೆ ತಮ್ಮ ಲೇಖನಗಳ ಪ್ರತಿಗಳನ್ನು ಮುದ್ರಣಾಲಯಕ್ಕೆ ಕಳುಹಿಸಿಕೊಟ್ಟರು; ಅಲ್ಲದೆ ಅಯ್ದು ವರ್ಷಕಾಲ ಸತತ ಪರಿಶ್ರಮಪಟ್ಟು ಮೊದಲನೆಯ ಸಂಪುಟವನ್ನು (546 ಪುಟಗಳು), ಎರಡನೆಯ ಸಂಪುಟವನ್ನು (543 ಪುಟಗಳು) ಪ್ರಚುರಗೊಳಿಸಲು ಸಮರ್ಥರಾದರು. ಇವುಗಳಲ್ಲಿರುವ ಬರೆಹಗಳೆಲ್ಲ ಭಾರತೀಯ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದವುಗಳು. 1951 ನೆಯ ಇಸವಿ ಜುಲೈ ತಿಂಗಳಲ್ಲಿ ಪ್ರೊ. ಗೋಡೆಯವರ ಷಷ್ಟ್ಯಬ್ದಿ ಪೂರ್ತಿ. ಆ ಸುಸಂದರ್ಭವನ್ನು ಬರಿದೆಹೋಗಗೊಡದೆ ಪ್ರೊ. ಗೋಡೆಯವರ ಗೆಳೆಯರನೇಕರು ಸೇರಿ, ಅವರ ಇನ್ನುಳಿದ ಬರೆಹಗಳನ್ನೊಳಗೊಂಡ ಗ್ರಂಥಗಳನ್ನು ಪ್ರಕಟಿಸುವ ಮನಮಾಡಿ, ಧನ ಸಂಗ್ರಹಕ್ಕಾಗಿ ಸಮಿತಿಯೊಂದನ್ನು ರಚಿಸಿದರು.

ಡಾ. ಎ. ಟಿ. ಪುಸಾಲ್ಕರ್, ಎಂ.ಎ., ಎಲ್‌ಎಲ್.ಬಿ, ಪಿಎಚ್‌ಡಿ., ಮತ್ತು ಪ್ರೊ. ಎಸ್. ಎ. ಗೋರೆ, ಎಂ.ಎ., ಅವರು ಕಾರ್ಯದರ್ಶಿಗಳಾಗಿಯೂ; ಪ್ರಿನ್ಸಿಪಾಲ್ ಜೆ. ಆರ್. ಘರ್ಪುರೆ, ಬಿ.ಎ., ಎಲ್‌ಎಲ್.ಬಿ. ಅವರು ಅಧ್ಯಕ್ಷರಾಗಿಯೂ; ಡಾ. ಆರ್. ಎಸ್, ದಂಡೇಕರ್, ಎಂ.ಎ, ಪಿಎಚ್‌ಡಿ., ಅವರು ಕೋಶಾಧಿಕಾರಿಗಳಾಗಿಯೂ ನೇಮಕಗೊಂಡರು. ಆ ಸಮಿತಿಯು ಕೂಡಲೆ ಕಾರ್ಯೋನ್ಮುಖವಾಗಿ ಸ್ವಲ್ಪ ಧನವನ್ನು ಶೇಖರಿಸಿ, ಪ್ರೊ. ಗೋಡೆಯವರ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಬರೆಹಗಳ ಮೂರನೆಯ ಸಂಪುಟವನ್ನು ಈಗ ತಾನೆ ಪ್ರಕಟಿಸಿತು, ನಾಲ್ಕನೆಯ ಸಂಪುಟವನ್ನು ಪ್ರಕಟಿಸುವ ಹೊಣೆಯನ್ನು ಹೋಶ್ಯಾರಪುರದ ವಿಶ್ವೇಶ್ವರಾನಂದ ವೈದಿಕ ಸಂಶೋಧನಾ ಸಂಸ್ಥೆಯ ಪ್ರಾಧ್ಯಾಪಕರಾದ ಶ್ರೀವಿಶ್ವಬಂಧು ಶಾಸ್ತ್ರಿಯವರು ಹೊತ್ತಿರುವರು. ಈ ಗ್ರಂಥವು ಕ್ಷಿಪ್ರದಲ್ಲಿಯೇ ಓದುಗರ ಕೈಸೇರಲಿದೆ. ಅದರೊಟ್ಟ

ಗೇನೇ ಅಯ್ದನೆಯ ಸಂಪುಟವು ಸಿದ್ಧವಾಗಿ ಮುದ್ರಣದ ಕೆಲಸವು ನಡೆಯುತ್ತಿದೆ. ಇವಿಷ್ಟೇ ಅಲ್ಲದೆ, ಅಸ್ಸಾಮಿನ ಗೌಹಾತಿ ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಪ್ರೊ. ಕೆ. ಕೆ. ಹಂದೀಕಿ ಯವರು ನೀಡಿದ 2,100 ರೂಪಾಯಿಗಳ ಉದಾರ ದಾನದ ದೆಸೆಯಿಂದ ಆರನೆಯ ಸಂಪುಟವು ಕೂಡ ಬೇಗನೆ ಬೆಳಕು ಕಾಣುವುದರಲ್ಲಿದೆ. ಭಾರತೀಯ ಸಂಸ್ಕೃತಿಗೆ ಮೀಸಲಾದ ಪ್ರೊ. ಗೋಡೆಯವರ ಬರೆಹಗಳ ಇನ್ನು ಮೂರು ಭಾಗಗಳು (ಸಾಧಾರಣ 1,900 ಪುಟ) ಪ್ರಕಟವಾಗಲಿಕ್ಕಿವೆ. 'ಇಂಡಾಲಜಿ' ಕ್ಷೇತ್ರದಲ್ಲಿ ನಡೆಯಬೇಕಾದ ಸ್ವತಂತ್ರ ಸಂಶೋಧನೆಗಳ ಬೆಲೆಯನ್ನು ತಿಳಿದ ವಿದ್ವಜ್ಜನರೂ, ವಿದ್ವನ್ಮಂಡಲಿಗಳೂ ಮೇಲೆಹೇಳಿದ ಸಮಿತಿಯವರು ತಂದ P. K. Gode Works Publication Fund—ಇದಕ್ಕೆ ಆದಷ್ಟು ತ್ವರೆಯಾಗಿ ಉದಾರದಾನ ನೀಡುವರೆಂದು ಆಶಿಸಲಾಗಿದೆ. ಪ್ರೊ. ಗೋಡೆಯವರ ಎಲ್ಲಾ ಲೇಖನಗಳೂ ಸಾಧಾರಣ 3,500 ಪುಟಗಳಷ್ಟಾಗಬಹುದು. ಇದನ್ನು 8 ಸಂಪುಟಗಳಲ್ಲಿ ಪ್ರಕಟಿಸುವ ವೆಚ್ಚ ಎಷ್ಟು ಕಡಿಮೆಯೆಂದರೂ ರೂ. 40,000 ವನ್ನು ಮೀರುತ್ತದೆ.

ಪ್ರೊ. ಗೋಡೆಯವರ ಕಾರ್ಯವ್ಯಾಪ್ತಿ ಇಷ್ಟಕ್ಕೆ ಸೀಮಿತವಾಗಿರಲಿಲ್ಲ. 'ಇಂಡಾಲಜಿ ಕ್ಷೇತ್ರದಲ್ಲಿ ಸಂಶೋಧನೆ ನಡೆಸುವ ಇನ್ನಿತರ ಎಷ್ಟೋ ಮಂದಿ ವಿದ್ವಾಂಸರಿಗೆ ಅವರು ನೆರವು ನೀಡಿದ್ದಾರೆ, ದಾರಿ ತೋರಿಸಿದ್ದಾರೆ. ಬೇರೆಯವ ರೊಡನೆ ಕೂಡಿ ಅವರು ಸಂಪಾದಿಸಿದ ಸಂಶೋಧ ನಾತ್ಮಕ ಲೇಖನಗಳು 10,000 ಪುಟಗಳನ್ನು ತುಂಬುನಷ್ಟು ಇವೆ. ಪ್ರೊ. ಆರ್. ಡಿ. ರಾನಡೆ ಎಂ.ಎ., ಡಿ.ಲಿಟ್, (ಅಲಹಾಬಾದ್ ವಿಶ್ವವಿದ್ಯಾ ನಿಲಯದ ಮಾಜಿ ಕುಲಪತಿಗಳು)ಮತ್ತು ಡಾ.ಎಸ್ ಎಂ. ಖತ್ರೆ, ಎಂ.ಎ., ಪಿಎಚ್‌ಡಿ (ಪುಣೆಯ ಡೆಕ್ಕನ್ ಕೋಲೇಜಿನ ಸಂಶೋಧನ ಸಂಸ್ಥೆಯ ಡೈರೆಕ್ಟರ್ ಮತ್ತು ಚಾರಿತ್ರಿಕ ವಿಷಯಾತ್ಮಕ ಸಂಸ್ಕೃತಕೋಶದ ಮುಖ್ಯ ಸಂಪಾದಕರು) ಇವರು ಮುಖ್ಯವ್ಯಕ್ತಿಗಳು. 1948 ರಲ್ಲಿ ಈ ಕಾರ್ಯ ತೊಡ ಗಿದ್ದಾರೆ. 1930ರಲ್ಲಿ ಪ್ರೊ. ಗೋಡೆಯವರು ಡಾ. ರಾನಡೆಯವರಿಂದ ಸ್ಥಾಪಿಸಲ್ಪಟ್ಟ 'ಧರ್ಮತತ್ವ ಗಳ ಸಂಸ್ಥೆ' ಯೆಂಬ ವಿದ್ಯಾಪೀಠದಮೂಲಕ 'ಧರ್ಮ ತತ್ವಗಳ ವಿಮರ್ಶೆ' ಯೆಂಬ ಪತ್ರಿಕೆಯನ್ನು ಹೊರ ಡಿಸಲಾರಂಭಿಸಿದರು. ಈ ಪತ್ರಿಕೆಯು ಪ್ರೊ. ಗೋಡೆಯವರ ಸಂಪಾದಕತ್ವದಲ್ಲಿ ಆರುವರ್ಷ ನಡೆಯಿತು. 1938 ರಲ್ಲಿ ಪ್ರೊ. ಗೋಡೆಯವರ ಡಾ॥ಎಸ್. ಎಂ. ಖತ್ರೆಯವರ ಸಹಕಾರದಿಂದ 'ದಿ ಓರಿಯಂಟಲ್ ಲಿಟರರಿ ಡೈಜೆಸ್ಟ್' ಮತ್ತು 'ದಿ ನ್ಯೂ ಇಂಡಿಯನ್ ಆಂಟಿಕ್ವೆರಿ' ಎಂಬೆರಡು ಪತ್ರಿಕೆಗಳನ್ನು ಪ್ರಕಟಿಸಲಾರಂಭಿಸಿದರು. 1941 ರಲ್ಲಿ ಯುದ್ಧಕಾಲದ ತೊಂದರೆಗಳಿಂದಾಗಿ ಮೊದಲ ನೆಯ ಪತ್ರಿಕೆಯನ್ನು ನಿಲ್ಲಿಸಬೇಕಾಗಿ ಬಂತು. ಎರಡನೆಯದರ 9ನೆಯ ಸಂಪುಟವು ಪ್ರಕಟವಾದ ಮೇಲೆ 1948 ರಲ್ಲಿ ಅದರ ಹೊಸ ಪ್ರಕಾಶಕರು ಅದನ್ನು ನಿಲ್ಲಿಸಿಬಿಟ್ಟರು. 'ಇಂಡಾಲಜಿ' ಕ್ಷೇತ್ರ ದಲ್ಲಿ ಅತ್ಯುಪಯುಕ್ತ ಬರೆಹಗಳನ್ನುಳ್ಳ ಇಂಥ ಮಾಸಿಕಗಳನ್ನು ಪ್ರಕಟಿಸಿದುದು ಮಾತ್ರವಲ್ಲದೆ ಅವರೀರ್ವರೂ ಜತೆಗೂಡಿ 'ನ್ಯೂ ಇಂಡಿಯನ್ ಆಂಟಿಕ್ವೆರಿ ಎಕ್ಸ್ಟ್ರಾ ಸೀರೀಸ್' ಎಂಬ ಪತ್ರಿಕೆ ಯನ್ನು ಸಂಪಾದಿಸಿ ಆರು ಸಂಪುಟಗಳನ್ನು ಹೊರ ಡಿಸಿದರು. ಅಷ್ಟೇ ಅಲ್ಲದೆ, 'ಇಂಡಾಲಜಿ' ಕ್ಷೇತ್ರ ದಲ್ಲಿ ಅಮೂಲ್ಯ ಸೇವೆಮಾಡಿದ ಮಹನೀಯರು ಗಳಾದ ಮಹಾಮಹೋಪಾಧ್ಯಾಯ ಡಾ॥ಪಿ.ವಿ. ಕಾಣೆ, ಡಾ॥ಎಫ್. ಡಬ್ಲ್ಯು. ಥೊಮಸ್, ಸರ್ ಡೇನಿಸನ್ ರಾಸ್, ಡಾ.ಬಿ.ಸಿ.ಲಾ ಮುಂತಾದವರಿಗೆ ಅರ್ಪಿಸಿದ ಸ್ಮಾರಕ (ಸಂಭಾವನೆ) ಗ್ರಂಥಗಳನ್ನು ಸಂಪಾದಿಸುವ ಭಾರ ಹೊತ್ತರು. 1844-5 ರಲ್ಲಿ

ಡಾ॥ ಎ. ಎಸ್. ಸುಕ್ತಂಕರರ ಬರೆಹಗಳನ್ನೊಳಗೊಂಡ ಎರಡು ಸಂಪುಟಗಳನ್ನು ಪ್ರೊ. ಗೋಡೆಯವರ ಸಂಪಾದಕತ್ವದಲ್ಲಿಯೇ ಪ್ರಕಟಿಸಲಾಯಿತು. ಈತರದ ಸಂಪಾದಕತ್ವದ ಹೊಣೆಯೇ ಅಲ್ಲದೆ, ಪ್ರೊ. ಗೋಡೆಯವರು ದೇಶವಿದೇಶಗಳ ವಿವಿಧ ಪತ್ರಿಕೆಗಳಲ್ಲಿ ನಾನ್ನೂರಕ್ಕಿಂತಲೂ ಹೆಚ್ಚಿಗೆ ಪುಸ್ತಕಗಳನ್ನು ವಿಮರ್ಶೆ ಮಾಡಿದರು.

1949 ನೆಯ ಇಸವಿ ಮೇ 13ನೆಯ ತಾರೀಖಿನಂದು ಪುಣೆಯ ವಿದ್ವಜ್ಜನರೂ, ವಿದ್ವನ್ಮಂಡಲಿಗಳೂ ಸೇರಿ ಪ್ರೊ. ಗೋಡೆಯವರು ಮಾಡಿದ ಅಪಾರವಾದ ಸೇವೆಯನ್ನು ಸ್ಮರಿಸಿ ಭಂಡಾರ್ಕರ್ ಸಂಶೋಧನಾ ಸಂಸ್ಥೆಯವರಾರದಲ್ಲಿ ಅವರಿಗೆ ಸಾರ್ವಜನಿಕ ಸನ್ಮಾನವನ್ನಿತ್ತರು. ಆ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಮುಂಬಯಿ ವಿಶ್ವವಿದ್ಯಾಲಯದ ಆಗಣ ಉಪಕುಲಪತಿಗಳಾಗಿದ್ದ ಮಹಾಮಹೋಪಾಧ್ಯಾಯ ಡಾ॥ಪಿ.ವಿ. ಕಾಣೆಯವರು ಪ್ರೊ. ಗೋಡೆಯವರ ಅಮೌಲ್ಯ ಸೇವೆಯನ್ನು ಕಂಠೋಕ್ತವಾಗಿ ಕೊಂಡಾಡಿದರು. ಪ್ರೊ. ಗೋಡೆಯವರ ಕೆಲಸವನ್ನು ಮೆಚ್ಚುತ್ತ ಬಂದಿದ್ದ ಎಷ್ಟೋ ಮಂದಿ ವಿದ್ವಾಂಸರೂ, ಮಿತ್ರವೃಂದದವರೂ ಅವರನ್ನು ಮನವಾರೆ ಶ್ಲಾಘಿಸಿದರು. ಈ ಸಮಾರಂಭವು ಮೂರುಗಂಟೆಗಳಕಾಲ ವಿಜೃಂಭಣೆಯಿಂದ ನಡೆಯಿತು. ಸಮಾರಂಭದ ವರದಿಯು ಪುಣೆಯ ಹಲವು ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಕೆಲವು ಪತ್ರಿಕೆಗಳ ಸಂಪಾದಕೀಯ ಲೇಖನಗಳು ಪ್ರೊ. ಗೋಡೆಯವರ ಜೀವನ ಹಾಗೂ ಅನುಪಮ ಸೇವೆಯನ್ನು ಸ್ತುತಿಸಿ ಪ್ರಕಟವಾಗಿದ್ದವು. ಕಳೆದ ಮೂವತ್ತೈದು ವರ್ಷಗಳಿಂದ ಪ್ರೊ. ಗೋಡೆಯವರು ಪುಣೆಯ ಆವರಣವನ್ನು ಬಿಟ್ಟು ಹೊರಟದ್ದಿಲ್ಲ. ಆದರೂ ಅವರು ಬಳೆಸಿಕೊಂಡ ಜಾಗತಿಕ ಸಂಪರ್ಕವು ಅಚ್ಚರಿಯನ್ನುಂಟು ಮಾಡುತ್ತದೆ. ಜಗತ್ತಿನ ಎಲ್ಲಡೆಯ ವಿದ್ವಾಂಸರುಗಳೊಡನೆ ಪತ್ರವ್ಯವಹಾರಮಾಡುತ್ತ ಅತ್ಯಂತ ವ್ಯಾಪಕವಾದ ಸಂಪರ್ಕವನ್ನು ಅವರು ಹೆಣೆದುಕೊಂಡಿದ್ದರು. ಇಂಥ ಸಂಪರ್ಕಗಳಿಂದ ಒದಗಿದ ಲಾಭವೋ ಅಪಾರ. ಇದು ಪ್ರೊ. ಗೋಡೆಯವರ ಸಂಶೋಧನಾಕಾರ್ಯಕ್ಕೆ ಸಂಜೀವನಿಯಾಯಿತು! 'ಇಂಡಾಲಜಿ' ಯ ವಿವಿಧಕ್ಷೇತ್ರಗಳಲ್ಲಿ ಅವರು ನಡೆಸಿದ ಸಂಶೋಧನೆ ಧೃತಿಯಿಂದ ಸಾಗಿತು! ಅಲ್ಲದೆ, ಅವರ ಸಂಶೋಧನಾತ್ಮಕ ಲೇಖನಗಳಲ್ಲಿ ಇನ್ನೆಲ್ಲಿಯೂ ಕಾಣಸಿಗದ ಒಂದು ದಾರ್ಢ್ಯ, ಅಂತಃಸತ್ವ, ಪ್ರಾಮಾಣಿಕತೆ—ಈ ಉತ್ಕೃಷ್ಟ ಗುಣಗಳು ಎದ್ದು ತೋರುತ್ತಿವೆ. ಪ್ರೊ. ಗೋಡೆಯವರ ಈ ರೀತಿಯ ನಿರ್ದೋಷ ದೃಷ್ಟಿಯಿಂದಾಗಿ ಸಂಶೋಧನೆಯಲ್ಲಿ ನಿರತರಾದ ಇತರರು ಅಡ್ಡದಾರಿ ಹಿಡಿಯದಂತಾಯಿತು!

ಮೂಲ: ಡಾ॥ ಎಂ.ಎಂ. ಪಾಠಕರ
ಅನು: ಕೆ.ಎಸ್. ನಿಡಂಬೂರು

ವಿ.ಸೂ.—ಪ್ರೊ. ಗೋಡೆಯವರು ಸೇರಿದ, ಪಡೆದ ಘನತೆಯ ಹುದ್ದೆ, ಪ್ರಶಸ್ತಿಗಳ ಪಟ್ಟಿ ಈ ಲೇಖನದಲ್ಲಿ ಕೊನೆಗೆ ಹೇಳಿದೆ. ಅದು ಮಾತ್ರವಲ್ಲ, ಪ್ರೊ. ಗೋಡೆಯವರು ಬರೆದ ಲೇಖನಗಳ ಕಾಲಾನುಕ್ರಮದ ಯಾದಿಯೂ ಈ ಸಂಭಾವನಾಗ್ರಂಥದಲ್ಲಿದೆ. ಅದು ಬೇರೆ ಅಚ್ಚಾಗಿ ದೊರೆಯುತ್ತದೆ. ಇದರಿಂದಾಗಿ ದೇಶ ವಿದೇಶಗಳ ಘನ ಸಂಸ್ಥೆಗಳ ಮತ್ತು ಪತ್ರಿಕೆಗಳ ಸಂಪರ್ಕವು ಪ್ರೊ॥ ಗೋಡೆಯವರಿಗೆ ಒದಗಿತ್ತೆಂದು ತಿಳಿಯುತ್ತದೆ! ಪ್ರೊ॥ ಗೋಡೆಯವರ ಸಂಭಾವನಾಗ್ರಂಥವು ಪುಣೆಯ ಓರಿಯಂಟಲ್ ಬುಕ್ ಏಜನ್ಸಿಯವರಿಂದ ಪ್ರಕಟವಾಗಿದೆ. ಈ ಲೇಖನವನ್ನು ಕನ್ನಡಿಸಲು ಅನುಮತಿಸಿದ ಪುಣೆಯ ಡೆಕ್ಕನ್ ಕೋಲೇಜಿನ ಡಾ. ಎಂ. ಎಂ. ಪಾಠಕರ ಅವರಿಗೆ ಕೃತಜ್ಞತೆಗಳು.

(ಲೇ.)

# ನರಕದಲ್ಲೊ ಅನುಭವಮಂಟಪ

ಭಗವಾನ್ ಮಹಾವೀರನ ಸಮವಸರಣ ದಲ್ಲಿ ಮೂರುಲೋಕದ ಭವ್ಯಜೀವಿಗಳೆಲ್ಲ ಒಂದೆಡೆ ಕಲೆತು ಉಚ್ಚನೀಚ ಭೇದಭಾವವನ್ನು ಮರೆತು ಜಿನೇಂದ್ರನ ದಿವ್ಯಧ್ವನಿಯಲ್ಲಿ ಮಿಂದು ಪಾವನವಾದವು! ಅಂತೆ ಭಗವಾನ್ ಬುದ್ಧದೇವನ ಧರ್ಮ ಸಭೆಯೂ ಮೇಲುಕೀಳೆಂಬ ಮಲಿನ ಬುದ್ಧಿಯನ್ನು ಮೂಲೋತ್ಪಾಟನಗೊಳಿಸಿ ವಿಶ್ವವನ್ನು ಉದ್ಧರಿಸಿತು! ಮೇಲಿನ ಮಹಾತ್ಮರಿಬ್ಬರೂ ನಿರ್ವಾಣ ಗೊಂಡು ಶತಮಾನ ಶತಮಾನಗಳುರುಳಿದಂತೆ ಅವರ ಉಚ್ಚಧ್ಯೇಯವೂ, ಅವರ ಸಮತಾವಾದವೂ, ಅವರ ಸಮನ್ವಯ ಸೂತ್ರವೂ ಮತ್ತೆ ಮೂಲೆಗುಂಪಾಗಿ ಧಾರ್ಮಿಕ ರಂಗದಲ್ಲಿ ಜಾತಿಮದ, ಗೋತ್ರಮದ, ಪಾತ್ರಮದ ಮುಂತಾದ ಪೈಶಾಚಿಕ ದೃಶ್ಯಗಳು ತಂಡೋಪತಂಡವಾಗಿ ತಲೆಯೆತ್ತಿ ಭರತಖಂಡದ ಸುಖಶಾಂತಿಗೆ ಕುಠಾರ ಪ್ರಾಯವಾದವು. ಇಂಥ ಶೋಚನೀಯಾವಸ್ಥೆಯಲ್ಲಿ ಧಾರ್ಮಿಕ ರಂಗದ ಸುಧಾಕರನಂತೆ ಬಸವಣ್ಣನವರು ಅಚ್ಚಕನ್ನಡ ಭೂಮಿಯಲ್ಲಿ ಅವತರಿಸಿ ಜನತೆಯ ಅಜ್ಞಾನವನ್ನು ನೀಗಲು ಅನುಭವ ಮಂಟಪವನ್ನು ತಮ್ಮ ತಪಶ್ಯಕ್ತಿಯಿಂದ ಸ್ಥಾಪಿಸಿದರು. ಈ ಅನುಭವ ಮಂಟಪಕ್ಕೆ ವಿಶ್ವಾನುಕಂಪವೇ ತಳಹದಿ, ಲೋಕೋದ್ಧಾರವೇ ಅನುಭವ ಮಂಟಪದ ಪರಮಧ್ಯೇಯ. 'ಸಮವಸರಣ' ಹಾಗು 'ಧರ್ಮಸಭೆ'ಗಳು ಧಾರ್ಮಿಕ ಪ್ರಪಂಚಕ್ಕೆ ಉತ್ತರ ಭಾರತದ ಕಾಣಿಕೆಗಳಾದರೆ ಅನುಭವ ಮಂಟಪ ಕನ್ನಡ ನಾಡಿನ ಕಾಣಿಕೆ!

ವೇದೋಪನಿಷತ್ ಭಗವದ್‌ಗೀತೆಗಳು ಗೀರ್ವಾಣ ಭಾಷೆಯಲ್ಲಿ ರೂಪಗೊಂಡವು. ಅಂತೆ ಭಾರತ ರಾಮಾಯಣಗಳೂ ಗೀರ್ವಾಣ ಭಾಷೆಯಲ್ಲಿ ತಮ್ಮ ರಸಪ್ರವಾಹವನ್ನು ಹರಿಸಿದವು. ಸಂಸ್ಕೃತವೇ ಗೀರ್ವಾಣ ಭಾಷೆ, ಗಂಭೀರವಾದ ವಿಷಯಗಳನ್ನು ಸಂಸ್ಕೃತದಲ್ಲೇ ಬರೆಯಬೇಕು, ಸುಸಂಸ್ಕೃತರೆಲ್ಲ ಸಂಸ್ಕೃತದಲ್ಲೇ ಮಾತನಾಡಬೇಕು ಎಂಬ ದುರಭಿಮಾನಕ್ಕೆ ಕಟ್ಟು ಬಿದ್ದು ಪ್ರಾಂತಭಾಷೆಗಳು ಮುರುಟಿಹೋಗುವಂಥ ವಿಷಮ ಪರಿಸ್ಥಿತಿ ತಲೆದೋರಿತು. ಅಲ್ಪಸಂಖ್ಯಾತರ ಭಾಷೆ ಭರತಖಂಡದ ಬಹುಸಂಖ್ಯಾತರನ್ನು ಬಹುಕಾಲ ಆಳಿತು! ಇಂಥ ಭಾಷಾಮದವೆದ್ದ ಕಾಲದಲ್ಲಿ ಭಗವಾನ್ ಮಹಾವೀರ ಸಮವಸರಣದಲ್ಲಿ 'ಜಿನವಾಣಿ ಸರ್ವಭಾಷಾಮಯಿ' ಎಂದು ಘೋಷಿಸಿ ಜಗತ್ತಿನ ಸರ್ವಭಾಷೆಗಳೂ ಗೀರ್ವಾಣ ಭಾಷೆಗಳೆಂದು ಸಾರಿದನು! ಅತ್ತ ಬುದ್ಧದೇವ ದೇಶ ಭಾಷೆಯಾದ ಪಾಳಿಯಲ್ಲಿ ಧರ್ಮರಹಸ್ಯವನ್ನು ಬಿತ್ತಿದನು. ಮಹಾವೀರ ನುಡಿದಂತೆ ನಡೆದ ಮಹಾನುಭಾವ. ತನ್ನ ಪ್ರಾಂತ ಭಾಷೆಯಾದ ಅರ್ಧಮಾಗಧಿಯಲ್ಲಿ ಅಹಿಂಸಾ ಧರ್ಮವನ್ನು ಎರಕಹೊಯ್ದನು. ಬುದ್ಧ ಮತ್ತು ಮಹಾವೀರರು ಭಾಷಾಮದಕ್ಕೆ ಕತ್ತಿ ಎತ್ತದೆ ಹೋಗಿದ್ದರೆ ಭರತ ಖಂಡದ ಪ್ರಾಂತಭಾಷೆಗಳು ಖಂಡಿತ ಮುರುಟ ಹೋಗುತಿದ್ದವು!

ಮೊಟ್ಟಮೊದಲು ಕನ್ನಡ ಭಾಷೆಯನ್ನು ಗ್ರಂಥಸ್ಥಗೊಳಿಸಿ ಮಹಾಕಾವ್ಯಗಳನ್ನು ಬರೆದ ಕೀರ್ತಿ ಜೈನರದಾದರೂ ಕನ್ನಡ ಕಲ್ಪವೃಕ್ಷದ ಮೂಲ ಚೂಲಗಳೆರಡನ್ನೂ ಅಚ್ಚಕನ್ನಡವಾಗಿಸಿದ ಕೀರ್ತಿ ಮಾತ್ರ ವೀರಶೈವರದೇ! ಅಚ್ಚಕನ್ನಡ ನುಡಿ, ಅಚ್ಚಕನ್ನಡ ಛಂದೋವಿಲಾಸ ಇದರ

ಜೊತೆಗೆ ಅಚ್ಚಕನ್ನಡದ ಕಥಾನಾಯಕರು ಇವನೆಲ್ಲ ನಾವು ಒಂದೇಕಡೆ ಕಾಣಬೇಕಾದರೆ ವೀರ ಶೈವ ಸಾಹಿತ್ಯದಲ್ಲೇ ಎಂಬುದು ನಿರ್ವಿವಾದ

ರಾಘವಾಂಕ ಕನ್ನಡದ ಕಟ್ಟಭಿಮಾನಿ!

ಮಾನವ ಸ್ವಭಾವವನ್ನು ಬಯಲಿಗೆಳೆದು ಬಣ್ಣ ಕಟ್ಟುವ ಬೆಡಗುಗಾರ. ಶ್ರವ್ಯಕಾವ್ಯದುದ್ದಕ್ಕೂ ದೃಶ್ಯಕಾವ್ಯದ ನಾಟಕೀಯತೆಯನ್ನು ತಂದು ಓದುಗರ ಮುಂದೆ ಸಂದರ್ಭ ಮತ್ತು ಸನ್ನಿವೇಶಗಳು ಕಣ್ಣಿಗೆ ಕಟ್ಟುವಂತೆ ಮಾಡುವ ಕಲಾಕುಶಲ! ಸಿದ್ಧರಾಮನ ಪವಾಡಗಳ ಪರ್ವತದಲ್ಲಿ ಬಿಲ್ಲೇಶನುದ್ಧಾರ ಉತ್ತುಂಗಶಿಖರವಾಗಿ ಕಂಗೊಳಿಸುವಂತೆ ರಾಘವಾಂಕ ಈ ಸಂದರ್ಭವನ್ನು ಸರ್ವಾಂಗಸುಂದರವಾಗಿ ಚಿತ್ರಿಸಿ ಕೃತಕೃತ್ಯನಾಗಿರುವನು. ನರಕಕ್ಕೂ ಅನುಭವ ಮಂಟಪವನ್ನು ಕಳಿಸಿದ ಅನುಭಾವಿ ರಾಘವಾಂಕ!

ಮಹಾಸಾಧಕರ ಪರಿವಾರದಲ್ಲೂ ಹೇಗೋ ಏನೊ ಸಮಯ ಸಾಧಕರೂ ನುಸುಳಿ ಆಶ್ರಯ ಪಡೆದು ಬಿಡುವರು. ವೇಷಧಾರಿಗಳು ಭೇದಿಸಲಾರದ ರಹಸ್ಯಮಯಸ್ಥಾನ ಬ್ರಹ್ಮಸೃಷ್ಟಿಯಲ್ಲಿ ಇಲ್ಲವೊ ಏನೊ! ಏಸುಕ್ರಿಸ್ತನನ್ನು ಪೇಚಿಗೆ ಸಿಲುಕಿಸಿದಾತ ಆತನ ಪಟ್ಟ ಶಿಷ್ಯರಲ್ಲೊಬ್ಬನೆಂಬುದನ್ನು ಮರೆಯಲಾದೀತೆ? ಮಹಾವೀರನ ಅಹಿಂಸಾ ಧರ್ಮದ ಪ್ರಗತಿಯನ್ನು ತಡೆಯಲು ಕೊನೆಯವರಿಗೂ ಪ್ರತಿಸ್ಪರ್ಧಿಯಾಗಿ ನಿಂತವನೂ ಮಹಾವೀರನ ಶಿಷ್ಯನಾದ ಘೋಶಾಲನೇ ತಾನೆ! ಕಾಮಧೇನುವಿನ ಕೊಡಗೆಚ್ಚಲಲ್ಲಿ ಆಶ್ರಯ ಪಡೆಯುವ ಪಿಡಿತಗಳಂತೆ ಸಮಯ ಸಾಧಕರೂ ಸರ್ವೋದಯ ಸಾಧಕರ ಬಳಿ ಬಂದು ಸೇರಿಕೊಂಡು ಬಿಡುವರು!

ಬಿಲ್ಲೇಶ ಬೊಮ್ಮಯ್ಯ ನೋಡುವರೆಲ್ಲ ಮರುಳಾಗುವಂತೆ ಹದಿನಾರಾಣೆ ವೀರಶೈವನಂತೆ ನಟಿಸುವನು; ಒಂದಂಗುಲ ಮಂದವಾಗಿ ವಿಭೂತಿಪಟ್ಟೆ ಹಾಕಿ ಅಂಚು ಕಟ್ಟುವನು. ಇವನು ಕಟ್ಟುವ ಕರಡಿಗೆ ತೂಕವಾದ ಕರಡಿಗೆಯೆ! ಪೂಜೆಗೆ ಕುಳಿತು ಇವನು ಪಂಚಾಕ್ಷರಿ ಜಪಿಸಿದರೆ ಅದು ಕೈಲಾಸಕ್ಕೆ ಕೇಳಿಸಬೇಕು!

ನುಡಿಯ ನಯಮಂ ವೇಷದೊಪ್ಪಂವ ತೋರಿತ
ನ್ನೊಡಲೊಳನ್ಯಾಯ ಶತಮಂ ಮಡಗಿಕೊಂಡುನೆರೆ
ತೊಡೆದುಹುಲುಹೊರೆದು ಮುಚ್ಚಿದ ಮಡಕೆ
ಯಂದದಿ ಹೊರಗೆ ಮರೆಯುತಿರಲು ||

ಒಡವೆ ಹೋದಳಲಿಗರು ನಿಲಲಾರದಾತನೀ
ಯೊಡೆಯೊಳೀ ಪರಿಯೊಳಿರ್ದಪನೆಂದು ಕೇಳ್ದು
ಘುಡು ಘುಡಿಸಿ ನಡೆದರೈತಂದು ಕಂಡರು ಕಂಡು
ಪಿಡಿದರಾ ಪುರದ ನಡುವೆ || (ಸಿದ್ಧರಾ. ೭-೨)

ಸರ್ವೋದಯ ಸಾಧಕನಾದ ಸಿದ್ಧರಾಮನ ಸಾನ್ನಿಧ್ಯದಲ್ಲಿ ಕಿರಾತಕ ಬಿಲ್ಲೇಶಬೊಮ್ಮಯ್ಯ ಆಶ್ರಯ ಪಡೆದುಕೊಂಡು ಹಾಯಾಗಿದ್ದನು. ಮೈಯೆಲ್ಲ ಸಾಲವಾಗಿ, ಕೊಟ್ಟವರಿಗೆ ಕೈಕೊಟ್ಟು ಬಾಳಬಾರದ ಬಾಳನ್ನು ಬಾಳಿ ಕೊನೆಗೆ ಜಂಗಮ ವೇಷಧಾರಿಯಾಗಿ ಧಾರ್ಮಿಕರಂಗದ ಜಂಗಮ ಹಿಮಾಚಲವಾದ ಸಿದ್ಧರಾಮನ ಪಟ್ಟದ ಶಿಷ್ಯನಾಗಿ ಇವನು ವಿರಾಜಿಸಿದನು. ಇವನಿಂದ ಕಷ್ಟನಷ್ಟಗಳನ್ನುಂಡವರು ಹೇಗೋ ಇವನ ಗೊತ್ತುಗುರಿಯನ್ನು ಪತ್ತೆಮಾಡಿದರು.

ನೆವವೊಡ್ಡಿ ನೀಂ ಕದ್ದುಕೊಂಡು ಬಂದೆಮ್ಮವ|
ಸ್ತುವ ಕೊಡೆಂದೇಕಾಂತದೊಳು ನುಡಿದಡೆನ್ನವ|
ಸ್ತುವನು ನಾ ತಂದೆನಲ್ಲದೆ ನಿಮ್ಮ ವಸ್ತುವಂ ತಂದೆನೇ
ಎಂದಂಜದೆ||

ಭವಿಗಳಾದೆಕ್ಕವಿಂಡಿಂಗುರುವ ಗುಡ್ಡನಹ
ಶಿವಭಕ್ತನಹ ಸದಾಚಾರಿಯಪ್ಪೆನ್ನ ಮೇ
ಲವಿಚಾರದಿಂ ಕಳವನಿಟ್ಟರೆಂದಾಕ್ರೋಶದಿಂ ಜರಿದು ಜಂ
ಕಿಸಿದನು || (ಸಿದ್ಧರಾ. ೭-೩)

ಇವನಿಂದ ನೊಂದಿದ್ದ ದಾಯಾದಿಗಳೂ ಇವನ ವೇಷವನ್ನು ಕಂಡು ಚಣಕಾಲ ಡಂಗಾದರು! ಶಿವಭಕ್ತನ ಮರ್ಯಾದೆ ಕಳೆಯಬಾರದೆಂದು ಏಕಾಂತದಲ್ಲಿ ವ್ಯವಹರಿಸಿದರು. ಬಿಲ್ಲೇಶ ಹುಟ್ಟು

ದಗಲಬಾಜಿ! ಈಗ ಇವನ ದಗಲಬಾಜಿತನ ವಿಭೂತಿಯ ಜವಾಜಿಯನ್ನು ಧರಿಸಿ ಇನ್ನೂ ಅಪಾಯಕಾರಿಯಾಗಿದೆ. ಇವನ ಒಳಹೊರಗನ್ನೆಲ್ಲ ಬಲ್ಲವರೂ ಕೂಡ ಕಕರಮಕರಾಗುವಂತೆ ಇವನು ಬಾಯ್ ಬಡಿಯುವನು.

ಇಲ್ಲಿ ಬಾಯಾಲಿದಲ್ಲದೆ ಹೋಗದಂದು ನೆನೆ |
ದಿಲ್ಲದನ್ಯಾಯಮುಂ ಎನ್ನ ಮೇಲಿಟ್ಟ ನಿಮ್ಮೆಲ್ಲರಂ |
ಕೊಲ್ಲುವನೆನ್ನೊಡಲ ನಿಮಗೊಪ್ಪಿಸುವೆನೆಂದು ದಿಟ |
ಶುದ್ಧನಂತೆ ||

ಕಲ್ಲ ಹಾಯ್ವಂತಿರಿದುಕೊಂಬಂತೆ ಸಂಭ್ರಮಿಸು
ತಲ್ಲಲ್ಲಿ ಹೋಹರಂ ಕರೆಕರೆದು ದೂರುತಿಹ
ಘಲ್ಲಣೆಗೆ ತಲ್ಲಣಿಸಿ ಬಿಡಹೋಗಿ ಗಂಟಿಕ್ಕಿದಂತಾದರಾ
ಬಡವರು || (ಸಿದ್ಧರಾ. ೭--೪)

ಊರಿಗಿಂತ ದೊಡ್ಡವರಾರು ಎಂದರೆ ಮೂರು ಬಿಟ್ಟವರಲ್ಲವೆ? ಬಿಲ್ಲೇಶ ಬೊಮ್ಮಯ್ಯ ಪ್ರಳಯಾಂತಕನಂತೆ ಅವಾಂತರವೆಬ್ಬಿಸಿ ಊರಿನ ಜನತೆಯ ಗಮನವನ್ನು ತನ್ನತ್ತ ಸೆಳೆದುದಲ್ಲದೆ ಅವರ ಸಹಾನುಭೂತಿಯನ್ನು ಪಡೆವಂತೆ ಕೋಲಾಹಲವೆಬ್ಬಿಸಿದನು. ಹಾದರಗಿತ್ತಿಯನ್ನು ಆಕ್ಷೇಪಿಸಿ ಗರತಿ ಉಳಿಯಲಾದೀತೆ? ಇವನ ದಾಯಾದಿಗಳು ಗಂಟೂ ಹೋಯಿತು ನಂಟೂ ಹೋಯಿತಲ್ಲ ಎಂದು ತಮ್ಮಲ್ಲೇ ಪರಿತಪಿಸುವಂತಾಯಿತು.

"ಇನಿತುಗ್ರವೇಕೆ ಬೊಮ್ಮಯ್ಯ ನೀನೊಲಿದು ಕೊಟ್ಟನಿತೆ ಸಾಕು!" ಎಂದು ಮುಳುಗಿ ಹೋಗುತ್ತಿರುವ ಗಂಟಿನಲ್ಲಿ ಅಷ್ಟೋ ಇಷ್ಟೋ ಗಿಲುಬಲು ಪ್ರಯತ್ನಿಸಿದರು "ಕೊಡುವಂತಾಗಿ ಮುನ್ನ ಕೊಂಡೆನೆ!" ಬಿಲ್ಲೇಶ ಬೊಮ್ಮಯ್ಯ ಸಾಲ ಮಾಡುತ್ತಿದ್ದುದು ಗಂಟು ಎಗರಿಸುವ ಸಲವಾಗೇ ಕೊಂಡುದನ್ನು ಎಂದೂ ಇವನು ಹಿಂದಿರುಗಿಸಿದವನಲ್ಲ.

"ದಾನವಾಗಿ ಕೊಡು" ಗಂಟುನೀಗಿ ಕೊಂಡವರು ಕಂಗಾಲಾಗಿ ಬೇಡಿಕೊಂಡರು. ದಾರೀಕರ್ಚಾದರೂ ಹುಟ್ಟದಿದ್ದರೆ ಹೇಗೆ?

"ಕೊಡುವಡೆ ಎನ್ನರ್ಥವಲ್ಲ"

"ಅಲ್ಲದೊಡೆ ಬಳಿಕಾರದು?"

"ಧನವೆಲ್ಲ ಮಲ್ಲಿಕಾರ್ಜುನನ ಧರ್ಮವ್ಯಯದದು!" ಬಿಲ್ಲೇಶ ಬೊಮ್ಮಯ್ಯ ಎಲ್ಲರ ಗಂಟಿಗೂ ನಾಮ ಹಾಕಿ ಹಣವನ್ನೆಲ್ಲ ತಂದು ಮಲ್ಲಿಕಾರ್ಜುನ ಬಾಂಕಿನಲ್ಲಿಟ್ಟು ಬೆಳೆಸುತ್ತಿರುವನು!

"ಕರುಣ ಹುಟ್ಟಿದ ದಿನದಲಿ ಕೊಡು, ಕೊಡದೆ ಮಾಣು! ಇನ್ನು ಹೋಹೆವೇ?" ದಾಯಾದಿಗಳು ತಮ್ಮನ್ನು ಬಿಟ್ಟರೆ ಸಾಕಪ್ಪ ಎಂದೂ ರೋಸಿ ಹೋಗಿರುವರು.

"ಇನ್ನು ಹೋಹೆವೇ?"

"ಎನ್ನ ಬಡವನ ಅಭಿಮಾನಂ ಕೊಂಡು ಪೋದಪಿರೇ? ಬಿಡುವೆನೆ! ಹೋದಿರಾದಡೆ ಭಕ್ತರಾಣೆ!" ಎಂದು ಬಿಲ್ಲೇಶ ಬೊಮ್ಮಯ್ಯ ಮೋಡಿ ಹಾಕುವನು; ತನ್ನ ಅಭಿಮಾನಕ್ಕೆ ನಿಮ್ಮಿಂದ ಕುಂದಾಯಿತು ಎಂದು ಬೊಬ್ಬೆಹಾಕುವನು; ಮಾನನಷ್ಟಕ್ಕೆ ಪರಿಹಾರ ಕೇಳುವನು! ಮೊವಲೇ ಗಂಟು ಕಳೆದು ಕೊಂಡ ದಾಯಾದಿಗಳು ಈಗ ಅಮೇಧ್ಯದ ರಾಡಿಯ ಮೇಲೆ ಕಲ್ಲೆಸೆದಂತಾಯಿತು! ಭರತ ಖಂಡದಲ್ಲಿ ವೇಷಕಟ್ಟಿ ಮೋಸಮಾಡುವುದು ಬಹಳ ಸುಲಭ. ಸಮಯಸಾಧಕರ ಕೈಲಿ ಸಂದರ್ಭೋಚಿತವಾಗಿ ಕಾವಿ, ಕಾದಿ, ಕಾಕಿ ಇವೆಲ್ಲ ತುಪಾಕಿಗಳಾಗದಿರವು!

ಹಣ ಕೊಟ್ಟು ಕಳೆದುಕೊಂಡವರು ಕೋಡಂಗಿಯಾದರು; ತಿಂದು ತೇಗಿದವನು ವೀರ ಭದ್ರನಾಗಿ ವಿಜೃಂಭಿಸಿದನು!

ಹಲವು ಪಾಸಂ ಪತ್ತಿ ಬರಕ ಬಸುರ್ ಅರತ ಬಾಯ್
ಕುಳಿದ ಕಣ್ ಇಳಿವ ಕಂಬನಿ ಹಿಡಿದ ಹುಲುದರ್ಪ
ವಳಿದ ನಡೆ ನಡುಗವದೆವೆರಸು ಮೊರೆಯಿಡುವವ
ರಿಂಗಭಯವಿತ್ತೋವಿ ನಿಲಿಸಿ ||

ತಿಳಿಯಹೇಳಿನಲೀತ ಕದ್ದು ತಂದೆ ವ್ಮ ಥರ್ಗ
ದೊಳಗೆನ್ನ ಭಾಗೆಯಂ ಕೊಡು ಕೊಡದೊಡದರ ಬೆಂ
ಬಳಿಯ ಧರ್ಮವನಾದೊಡಂ ಕೊಡೆಂದೆನೆ ಕೊಡಂ ದೇವ
ಚಿತ್ತೈಸೆಂದರು || (ಸಿದ್ಧರಾ. ೭-೮)

ಧನದಾಸೆಯಂ ಬಿಟ್ಟೆವಾವು ಹದುಳದೊಳೆಮ್ಮ
ಮನೆಮುಖವ ಕಾಂಬಂತೆ ಕಳುಹಿಕೊಡು ಕರುಣಿ,ಸಿದ್ಧ
ನಿಧಾನಯೆಂದು ಬಾಯ್ಬಿಟ್ಟಡೆಲೆ ಬೊಮ್ಮಯ್ಯ ನಿನ್ನ
ಮೇಲಿವರ ದೆಸೆಯು ||

ಎನಿತರ್ಥವುಂಟಿಲ್ಲವಂ ಕೊಡೆಂದೆನಲು ಕೊಡೆ
ನೆನಗಿದಂ ನೀವಾಡಬೇಡೆಂದೊಡೆಮ್ಮಾಜ್ಞೆ
ಯನು ಮೀರಿಂದಾ ಎನಲಿದೊಂದಕ್ಕೆ ಮೀರಿದಾತಂ
ಕೊಡುವನಲ್ಲೆಂದನು || (ಸಿದ್ಧರಾ. ೭-೯)

ನಷ್ಟಕ್ಕೊಳಗಾಗಿ ಅದೂ ಸಾಲದೆ ಕಷ್ಟಕ್ಕೆ ಸಿಲು ಕಿದ ಬಿಲ್ಲೇಶ ಬೊಮ್ಮಯ್ಯನ ದಾಯಾದಿಗಳ ದಾರುಣಾವಸ್ಥೆಯನ್ನು ರಾಘವಾಂಕ ಕಲ್ಲೆದೆಯೂ ಕರಗುವಂತೆ ನಿರೂಪಿಸಿರುವನು. ಸಮಯಸಾಧ ಕರಿಗೆ ಯಾವುದಾದರೂ ನೀತಿ ನಿಯಮಗಳುಂಟೆ? ಸ್ವಾರ್ಥಸಾಧನೆಗೋಸ್ಕರ ಎಂಥ ಅನರ್ಥಕ್ಕಾ ದರೂ ಅವರು ಸಿದ್ಧ. ತಮ್ಮ ಗುರಿ ವಿಫಲವಾಗುವ ಸೂಚನೆ ಕಂಡುಬಂದಾಗ ಅರೆಚಣದಲ್ಲಿ ಅವರು ತಮ್ಮ ಬಣ್ಣವನ್ನು ಕೂಡ ಮಾರ್ಪಡಿಸಿಕೊಳ್ಳದಿ ರರು. ಬಿಲ್ಲೇಶ ಬೊಮ್ಮಯ್ಯ ಸಿದ್ಧರಾಮನಿಗೆ ತಿರುಗಿಬಿದ್ದನು. ಇಂಥ ಅಯೋಗ್ಯನಿಗೆ ಶಿಷ್ಯ ಪಟ್ಟಕಟ್ಟಿದೆನಲ್ಲ ಎಂದು ಸಿದ್ಧಪುರುಷ ಕೈಕೈ ಹಿಸುಕಿ ಕೊಳ್ಳಬೇಕಾಯಿತು. ಆ ಚಣದಿಂದ ಬಿಲ್ಲೇ ಶನಿಗೆ ಅಲ್ಲಿನ ಆಶ್ರಯ ತಪ್ಪಿಹೋಯಿತು. ತನ್ನ ತಪ್ಪನ್ನು ತಿದ್ದಿಕೊಳ್ಳದೆ ಅವನು ಕೊನೆಗೆ ಆತ್ಮಹತ್ಯೆ ಮಾಡಿಕೊಳ್ಳುವನು. ಲೋಕವನ್ನು ವಂಚಿಸಿ ವಂಚಿಸಿ ಬಿಲ್ಲೇಶ ಬೊಮ್ಮಯ್ಯ ಆತ್ಮವಂಚನೆ ಯನ್ನು ಮಾಡಿಕೊಂಡನು.

ಬಿಲ್ಲೇಶ ಬೊಮ್ಮಯ್ಯ ನರಕಕ್ಕಿಳಿದರೂ ತನ್ನ ವೇಷವನ್ನು ಬಿಡಲಿಲ್ಲ. ತನ್ನೊಡನೆ ವಿಭೂತಿ ಯನ್ನೂ ನರಕಕ್ಕೆ ಕೊಂಡ್ಯೊಯ್ದನು. ಲಿಂಗಕ್ಕೂ ನರಕವಾಸದ ಅನುಭವವನ್ನು ಬರುವಂತೆ ಮಾಡಿ ದ್ದನು. ನರಕ ಬಾಧೆಗೆ ಸಹಿಸಲಾರದೆ ಪಶ್ಚಾ ತ್ತಾಪಗೊಂಡನು. ಅಲ್ಲಿ ಸಿದ್ಧರಾಮನನ್ನು ಹಗಲು ರಾತ್ರಿ ನೆನೆದನು. ಉಚ್ಚಕಂಠದಲ್ಲಿ ಸಿದ್ಧ ರಾಮ, ಸಿದ್ಧರಾಮ ಎಂದು ಒರಲುತ್ತಿದ್ದನು. ಒಮ್ಮೆ ಗಂಧರ್ವನೊಬ್ಬ ನರಕಕ್ಕೆ ಏಕೋ ಬಂದಾಗ ಬಿಲ್ಲೇಶ ಬೊಮ್ಮಯ್ಯನನ್ನು ಕಂಡು ಬೆರಗಾದನು. "ಬಾಯಲ್ಲಿ ಪಂಚಾಕ್ಷರಿ, ಹಣೆಯಲ್ಲಿ ವಿಭೂತಿ, ಕೊರಳಲ್ಲಿ ಕರಡಿಗೆ ಹೀಗಿದ್ದರೂ ಇವನಿಗೆ ನರಕ ವಾಸವಾಯಿತೆ" ಎಂದು ಗಂಧರ್ವ ಪರಿತಪಿಸುತ್ತ ಕೊನೆಗೆ ಸಿದ್ಧರಾಮನಿಗೆ ಸುದ್ದಿ ಮುಟ್ಟಿಸಿ ಆ ಶಿವ ಭಕ್ತನನ್ನು ಉದ್ಧರಿಸಬೇಕೆಂದು ಅಂಗಲಾಚಿದನು. "ಏಕೀ ಮಹಾವೇಷ, ಈ ನಾಮಮಿಡಿದು ಮತ್ತೀ ನರಕವೇಕಾದದು, ಎನಗಿದ ತಿಳುಹಿಕೊಡಬೇಕು" ಎಂದು ಪ್ರಾರ್ಥಿಸುವನು.

ದುರುಳನವನಿರ್ದಪಂ ತೆಗೆಯಲೇಕೆನೆ ಜಗದ|
ಗುರುವೆ ವತ್ಸನ ಗುಣವ ನೋಡಿತೇ ಧೇನು ಸುರ|
ಚಿರಪಯಃಪಾನಮಂ ಕೊಡುವಳೆಂದಾಡಿದಾ ಗಂ
ಧರ್ವವೆರಸು ನಡೆದು ||

ಹರನೋಲಗವನೈದಿ ಪೈಯಿಕ್ಕಿ ನಿಂದು ಪುರ |
ಹರ ಕೃಪಾಕರ ಶಿವಾವರ ಸುಖಂಕರ ಮಹೇ |
ಶ್ವರ ಸುರಾಸುರ ನಮಿತ ಚರಣ ಶರಣೆಂದು ಹೊಗ
ಳ್ದನು ಸಿದ್ಧಕುಲತಿಲಕನು || (ಸಿದ್ಧರಾ. ೭-೧೩)

ಸಿದ್ಧರಾಮ ವೇಷಧಾರಿಗಳನ್ನು ಕಂಡು ರೋಸಿ ಹೋಗಿದ್ದನು. ಬಿಲ್ಲೇಶ ಬೊಮ್ಮಯ್ಯ ಎಲ್ಲಾದರೂ ಹಾಳಾಗಲಿ ಎಂದು ತೆಪ್ಪಗಿದ್ದನು. ಆದರೆ ಗಂಧ ರ್ವನ ಮಾತು ಕೇಳಿದ ಮೇಲೆ ಸಿದ್ಧರಾಮನಲ್ಲೂ ಕರುಣೆ ಉಕ್ಕಿ ಬಂದಿತು. ಪರಮೇಶ್ವರನ ಬಳಿ ಧಾವಿಸಿ ವಿಶೇಷ ಪರವಾನಿಗೆ ಪಡೆದು ಬಿಲ್ಲೇಶ ಬೊಮ್ಮಯ್ಯನನ್ನು ಉದ್ಧರಿಸಲು ಧಾವಿಸಿದನು. ಸಿದ್ಧರಾಮ ಆ ವೇಳೆಗಾಗಲೇ ಸರ್ವಶಕ್ತನಾಗಿ

ದ್ದರೂ ಎಂದೂ ಶಿವಭಕ್ತಿಯನ್ನು ಬಿಟ್ಟಿರಲಿಲ್ಲ. ಸಿದ್ಧರಾಮನ ಸರ್ವಶಕ್ತಿಯೂ ಶಿವಭಕ್ತಿಯೇ!

ಪರಿಪರಿಯ ರೌರವಂಗಳ ನೋಡಿ ನೋಡಿ ಕೊ
ಕ್ಕರಿಸುತ್ತ ಬರವರಲು ಮುಂದೆ ನಾಯಕ ನರಕ
ದುರವಣೆಯ ದಂಡನೆಯನನುಭವಿಸಿ ಕಾದುಕ್ಕುವ
ಧಮರಸಕೂಪದೊಳಗೆ ||

ಗುರುಸಿದ್ಧರಾಮಯ್ಯ ವರಸಿದ್ಧರಾಮಯ್ಯ
ಕರುಣಿಸೆಂದೊರಲುತಡಿಗಡಿಗಾಳುತೇಳುತ್ತ
ಇರದೆ ತಲೆಯೆತ್ತಿ ಕಂಡಂ ಜಗದ ಗುರುವನಾ
ಬಿಲ್ಲೇಶ ಬೊಮ್ಮಯ್ಯನು|| (ಸಿದ್ಧರಾ ೭--೧೯)

ತಿಳಿಗೇಡಿಯಾದ ಶಿಷ್ಯನನ್ನು ಕಟ್ಟಿಕೊಂಡುದರಿಂದ ಸಿದ್ಧರಾಮನೂ ನರಕದ ರೌರವವನ್ನು ಕಣ್ಣಲ್ಲಾದರೂ ಕಾಣುವಂತಾಯಿತು! ನರಕದಲ್ಲೂ ಶಿವಭಕ್ತನನ್ನು ಕಂಡು ಅಳಬೇಕೋ ನಗಬೇಕೋ ಅವನಿಗೆ ತಿಳಿಯದೇ ಹೋಯಿತು. ಸಿದ್ಧರಾಮನನ್ನು ಕಂಡ ಕೂಡಲೆ ಬಿಲ್ಲೇಶ ಬೊಮ್ಮಯನ ಪರಿತಾಪ ಪರಾಕಷ್ಟತೆಗೇರಿತು. ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡಾನೆ?

ದುರುಳತನದಿಂ ದೇವರಾಜ್ಞೆಯಂ ಮೀರಿದು
ಸ್ತರ ನರಕದೊಳು ನವೆದೆನಿನ್ನಾರೆನಖಿಳೈಕ
ಗುರುವೆ ಪುಣ್ಯದ ಕರುವೆ ಭಕ್ತರ ಸುರುತರುವೆ
ಎಂದತಿ ದೈನ್ಯದಿಂದೊರಲಲು ||

ಕರಣಂ ಕಲಂಕಿ ಮತಿಮಾಸಿ ಮುದವದಿರಿ ಹಿರಿ
ಯರ ಬಲ್ಲಹಂ ಧೈರ್ಯಮೇರು ಕರುಣಾಬ್ಧಿ ನೆನೆ
ವರನಿಧಾನಂ ಮಗನೆ ಬಾರೆಂದು ನೀಡಿದಂ ನಿಜಕರದ
ಲಾಕುಳವನು || (ಸಿದ್ಧರಾ. ೭--೨೦)

ಬಿಲ್ಲೇಶ ಬೊಮ್ಮಯ್ಯ ಮೂತಿ ಸುಟ್ಟುಕೊಂಡ ಬೆಕ್ಕಿನ ಮರಿಯಂತೆ ಅರಿಚಿರುವನು. ಸಿದ್ಧರಾಮನ ಗಮನ ಸೆಳೆಯಲು ಶತಮಾನ ಶತಮಾನಗಳಿಂದ ಎಡೆಬಿಡದೆ ಆಕ್ರಂದನ ವೆಸಗಿರುವನು. ಈ ಪಶ್ಚಾತ್ತಾಪಕ್ಕಿಂತ ದೊಡ್ಡದಾದ ಪಂಚಾಗ್ನಿ ತಪಸ್ಸು ಇನ್ನಾವುದಿದೆ? ಕೊನೆ ಕೊನೆಗೆ ಬಿಲ್ಲೇಶ ಬೊಮ್ಮಯ್ಯ ನರಕದ ಕ್ರೂರತಮ ಶಿಕ್ಷೆಗಳನ್ನೆಲ್ಲ ಮರೆತು 'ಸಿದ್ಧರಾಮಯ್ಯ' 'ಸಿದ್ಧರಾಮಯ್ಯ' ಎಂದು ಜಪಿಸಿ ಜಪಿಸಿ ಕೊನೆಗೆ ಸಿದ್ಧರಾಮನನ್ನು ಆವಾಹನೆ ಮಾಡೇ ಮಾಡಿದನು! ತನ್ನ ಮಗು ಬೆಂಕಿಯಲ್ಲಿ ಬಿದ್ದು ಬೇಯುತ್ತ ಅಮ್ಮ ಅವ್ವ ಎಂದು ಒರಲಿದಾಗ ತಾಯ್ಗರುಳು ತಂಪಾಗಿದ್ದೀತೇ ತನ್ನ ಪ್ರಾಣದ ಮೇಲೆ ಹಂಗನ್ನಿಡದೆ ತಾಯಿ ಉರಿವ ಜ್ವಾಲೆಯಲ್ಲಿ ಜ್ವಾಲಾಮಾಲಿನಿಯಾಗಿ ನುಗ್ಗಿ ಮಗುವನ್ನು ಹೊರ ಸೆಳೆಯಲು ಕಾತರಿಸುವಂತೆ ಜಗದ್ಗುರುವಾದ ಸಿದ್ಧರಾಮನೂ ಕಾತರ ಗೊಂಡಿರುವನು. ತನಗೆ ಶರಣಾದ ಬಿಲ್ಲೇಶ ಬೊಮ್ಮಯ್ಯನನ್ನು ಉದ್ಧರಿಸಲು ಸಿದ್ಧರಾಮ ನರಕ ಬಿಲದೊಳಗೆ ತನ್ನ ಯೋಗದಂಡವಾದ ಲಾಕುಳವನ್ನು ನೀಡುವನು. ಲಾಕುಳ ನೀಡಿದಾಕ್ಷಣ ಅನುಭವ ಮಂಟಪದ ಮಹಾದ್ವಾರ ತೆಗೆದಂತಾಯಿತು!

ವಿನಿತ ಲಾಕುಳವನಾ ಬೊಮ್ಮಯ್ಯ ಪಿಡಿದೊಡಾ
ತನ ಕಾಲಪಿಡಿದವನ ಕಾಲನೊಬ್ಬಾತನಾ |
ತನಕಾಲ ಪಿಡಿದವನ ಕಾಲನದಿದೆನ್ನದೆಲ್ಲಾ
ನರಕಿಗಳು ತಪ್ಪದೆ ||

ತನತನಗೆ ಹಿಡಿದು ತುರುಗಿದ ನರಕ ಮಾಲೆಯಂ
ವಿನಯದಿಂದೆತ್ತಿ ಮೆರೆದಂ ನರರ ಭವಮಾಲೆ |
ಯನು ತುಡುಕಿ ನೆಗಪಿ ರುದ್ರಂಗೆ ಮಾರುವ
ಮಾಲೆಗಾರ ನೆಂಬಂತಾಗಳು|| (ಸಿದ್ಧರಾ. ೭--೨೧)

ಅಯಸ್ಕಾಂತಕ್ಕೆ ಅಪ್ಪಿ ತಪ್ಪಿ ಸೋಕಿದ ಕಬ್ಬಿಣ್ಣದ ರಜವೆಲ್ಲ ಅಯಸ್ಕಾಂತವಾಗಿ ಬಿಡುವುದು; ಜಗದೋದ್ಧಾರಕನ ಕೃಪಾದೃಷ್ಟಿಗೆ ಪಾತ್ರನಾದ ಬಿಲ್ಲೇಶ ಬೊಮ್ಮಯ್ಯನಲ್ಲೂ ಜಗದೋದ್ಧಾರಕ ಶಕ್ತಿ ಮೂಡದಿರುತ್ತದೆಯೇ? ಸಿದ್ಧರಾಮನನ್ನು ಇವನು ಭದ್ರವಾಗಿ ಹಿಡಿದು ಬಿಟ್ಟನು. ಸ್ವಾರ್ಥತೆಯನ್ನು ತೊರೆದು ಇವನು ತನ್ನ ಪಾದದಲ್ಲಿ ಉದಾರವಾಗಿ ಇನ್ನೊಂದು ಜೀವಕ್ಕೆ ಆಶ್ರಯ ನೀಡಿದನು. ಇವನ ಪಾದವನ್ನು ಸೋಕಿದ ಸರ್ವ ಸಾಧಾರಣ ಚೇತನವೂ ಚಣದಲ್ಲಿ ಮೂಲ ಚೇತನದಷ್ಟೇ ಮಹಿಮಾವಂತವಾಯಿತು; ಹೀಗೆ ನರಕದ ಒಂದೊಂದು

ಜೀವಿಯೂ ಆತ್ಮೋದ್ಧಾರದ ಮಾರ್ಗವನ್ನು ಕಂಡುಕೊಂಡುದರ ಜೊತೆಗೆ ಜಗದೋದ್ಧಾರದ ಚಿಂತೆಯನ್ನೂ ಮಾಡಿ ಪುನೀತವಾಗಿವೆ.

ಒಂದು ಜೀವಿಯನ್ನು ಉದ್ಧರಿಸಲು ಬಂದ ಸಿದ್ಧರಾಮನಿದಿರು ಇಡೀ ನರಕವೇ ಮೇಲೆದ್ದು ಧೀಕಿಟ್ಟಾಗ ಸರ್ವಶಕ್ತಿಗೂ ಚಣಕಾಲ ದಿಗ್ಭ್ರಾಂತಿ ಹಿಡಿದಂತಾಯಿತು ; ಯಾರನ್ನು ತೆಗೆಯುವುದು ಯಾರನ್ನು ಬಿಡುವುದು ?

ಭರವಸದಿ ತೆಗೆಯುತ್ತ ನೆನೆದು ಶಂಕಿಸಿ ತೆಗೆಯ
ಲರಿದೆನುತ್ತಿಳುಹಲನುಗೈಯುತಿರೆ ಕಂಡಿದೇಂ
ಮರಳಿ ಬಿಡದೆಲೆಲೆ ತೆಗೆ ತಂದೆ ಕಾಲ್ ಪಿಡಿದು
ನೋಯುತ್ತಲಿವೆ ಕೈಬಿಡುತಿವೆ ||

ತರಣಿ ಮೂಡಲು ತಿಮಿರವೇ ಅಯ್ಯ ದಮ್ಮಯ್ಯ
ತರಹರಿಸಲಾಱದೀ ಬಿದ್ದೆನಯ್ಯೋ ದಯಾ
ಶರಧಿ ಶಿವಧೋ ಕರುಣಿಸೆಂದು ನರಕದ ನರರ
ಮಾಳೆ ನೆಱೆ ಮೊರೆಯಿಟ್ಟವು||
(ಸಿದ್ಧರಾ ೮-೩೫)

ನರಕಕ್ಕೆ ನರಕವೇ ಉದ್ಧಾರಾಕಾಂಕ್ಷೆಯಿಂದ ಬೊಬ್ಬೆ ಹಾಕಿದೆ. ನೀರಲ್ಲಿ ಮುಳುಗುತ್ತಿರುವ ಜೀವ ತುಸಗಾಳಿಗಾಗಿ ಚಡಪಡಿಸುವಂತೆ ನರಕದ ಜೀವ ಕೋಟಿಯೆಲ್ಲ ದೈವಾನುಗ್ರಹಕ್ಕಾಗಿ ಅಂಗಲಾಚುತ್ತಿರುವಾಗ ಸಿದ್ಧರಾಮನ ವಿಶ್ವಾನುಕಂಪದ ಸಂಪುಟ ತಾನಾಗಿ ತೆರೆಯಿತು ! ಬಿಲ್ಲೇಶ ಬೊಮ್ಮಯ್ಯ ಜಪಿಸುತ್ತಿದ್ದ 'ಸಿದ್ಧರಾಮ' ಎಂಬ ಪಂಚಾಕ್ಷರಿಯನ್ನು ನರಕವೆಲ್ಲ ಆಲಿಸಿತ್ತು. ನರಕವೆಲ್ಲ ಕೇಳಿಸುವಂತೆ ಬಿಲ್ಲೇಶ ಬೊಮ್ಮಯ್ಯ ದಿನದಿನವೂ ಪಂಚಾಕ್ಷರೀ ಪ್ರತಿರೂಪವಾದ 'ಸಿದ್ಧರಾಮಯ್ಯ' ಮಹಾಮಂತ್ರವನ್ನು ಘೋಷಿಸುತ್ತಿದ್ದನು. ಈಗ ಬಿಲ್ಲೇಶ ಬೊಮ್ಮಯ್ಯ ಉದ್ಧಾರಕ್ಕೆ ಅರ್ಹನಾದರೆ ಉಳಿದಪರೆಲ್ಲರೂ ಅರ್ಹರೇ ! ಅನುಭವಮಂಟಪದ ಔದಾರ್ಯಕ್ಕೆ ಮೇರೆಯಿದೆಯೆ ? ಭಕ್ತರನ್ನು ಕಂಡಷ್ಟೂ ಅನುಭವಮಂಟಪ ಹಿಗ್ಗುವುದು ! ಶಿವನಿಂದ ವಿಶೇಷ ಶಕ್ತಿಯನ್ನು ಪಡೆದು ಸಿದ್ಧರಾಮ ತನ್ನ ಶಿಷ್ಯನೊಬ್ಬನಿಂದಾಗಿ ಇಡೀ ನರಕವನ್ನೇ ಉದ್ಧರಿಸಿಬಿಟ್ಟನು !

ಭಗವದನುಗ್ರಹ ನರಕಕ್ಕೂ ನುಗ್ಗಿ ಜೀವಿಯನ್ನು ಉದ್ಧರಿಸುವ ಕಲ್ಪನೆಯನ್ನು ನಾವು ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲು ಕಾಣುವುದೆಂದರೆ ಪಂಪನ ಆದಿಪುರಾಣದಲ್ಲೇ. ಆದಿತೀರ್ಥಂಕರರ ಭವಾವಳಿಯಲ್ಲಿ ಆರನೆಯದು ಶ್ರೀಧರದೇವ ಭವ. ಇದಕ್ಕೆ ಹಿಂದೆ ಮೂರನೇ ಭವದಲ್ಲಿ ಇವನು ಮಹಾಬಲನಾಗಿದ್ದ. ಆ ಸಂದರ್ಭದಲ್ಲಿ ಇವನಿಗೆ ಸ್ವಯಂಬುದ್ಧ, ಮಹಾಮತಿ, ಸಂಭಿನ್ನಮತಿ, ಶತಮತಿಗಳೆಂಬ ನಾಲ್ವರು ಮಂತ್ರಿಗಳಿದ್ದರು. ಇವರಲ್ಲಿ ಸ್ವಯಂಬುದ್ಧ ಧರ್ಮಪರಾಯಣನಾಗಿ ರಾಜನಲ್ಲೂ ಧರ್ಮಾನುರಾಗ ಮೂಡುವಂತೆ ಯತ್ನಿಸುತ್ತಿದ್ದರೆ ಉಳಿದ ಮಂತ್ರಿಗಳೆಲ್ಲ ವಿಷಯಲಂಪಟರಾಗಿ ರಾಜನಲ್ಲೂ ವಿಷಯಾಸಕ್ತಿಯನ್ನು ಪ್ರಚೋದಿಸಲು ಪ್ರಯತ್ನಿಸಿದರು. ಸ್ವಯಂಬುದ್ಧಿಯ ಮುನ್ನೆಚ್ಚರಿಕೆಯಿಂದ ಅವರ ಪ್ರಯತ್ನ ವಿಫಲವಾಯಿತು. ಅವರು ಬಾಳಬಾರದ ಬಾಳನ್ನು ಬಾಳಿ ಕೊನೆಗೆ ದುರ್ಗತಿಗುರುಳಿದರು.

ಮಹಾಬಲ ಕ್ರಮೇಣ ಲಲಿತಾಂಗನಾಗಿ, ವಜ್ರಜಂಘನಾಗಿ, ಭೋಗಭೂಮಿಜನಾಗಿ ಅನಂತರ ಶ್ರೀಧರ ದೇವನಾದನು. ಈ ಸಂದರ್ಭದಲ್ಲಿ ಕೇವಲಜ್ಞಾನ ಪಡೆದ ಪ್ರೀತಿಂಕರಾರ್‍ಯರ ಬಳಿ ಶ್ರೀಧರದೇವ ಧಾವಿಸಿ ಹಿಂದೆ ತನಗೆ ಮಂತ್ರಿಗಳಾಗಿದ್ದ ಮಹಾಮತಿ ಸಂಭಿನ್ನಮತಿ ಮತ್ತು ಶತಮತಿಗಳ ಪಾಡೇನಾಯಿತೆಂದು ಬೆಸಗೊಳ್ಳುವನು. ಅವರೆಲ್ಲ ನರಕಕ್ಕಿಳಿದುದಾಗಿ ಪ್ರೀತಿಂಕರಾರ್ಯ ಬಿತ್ತರಿಸುವನು. ಈ ಸಂದರ್ಭದಲ್ಲಿ ಶ್ರೀಧರದೇವ ಎರಡನೆಯ ನರಕಕ್ಕೆ ಧಾವಿಸಿ ಬಂದು ಶತಮತಿಗೆ ಹಿತವಚನಗಳನ್ನಾಡುವನು. ಅವನಲ್ಲಿ ಸಮ್ಯಕ್ತ್ವ

ವನ್ನು ತುಂಬಿ ಪಂಚನಮಸ್ಕಾರವನ್ನು ಉಪದೇಶಿಸುವನು. ಶತಮತಿಯ ಉದ್ಧಾರಕ್ಕೆ ಶ್ರೀಧರದೇವ ಸುಗಮವಾದ ಮಾರ್ಗ ಕಲ್ಪಿಸುವನು. ಉಳಿದ ಮಂತ್ರಿಗಳಿದ್ದ ಘೋರತಮ ನರಕಕ್ಕೆ ಹೋಗಲು ಈತನಿಂದ ಆಗಲಿಲ್ಲವೋ ಏನೋ! ಅಂತು ಸಮವಸರಣವೂ ನರಕಕ್ಕಿಳಿದು ಜೀವಿಯನ್ನು ಉದ್ಧರಿಸಿದ್ದುಂಟು. ಪಂಪನ ಆದಿಪುರಾಣದಲ್ಲಿ ನರಕದ ವ್ಯಕ್ತಿಯೊಬ್ಬನ ಉದ್ಧಾರವಾದರೆ ರಾಘವಾಂಕನ ಕಾವ್ಯದಲ್ಲಿ ನರಕದ ಇತಿಹಾಸಕ್ಕೇನೆ ಇತಿಶ್ರೀ ಬಿದ್ದಂತಾಗಿದೆ! ಶ್ರೀಧರದೇವ ಇನ್ನೂ ಆಗ ಸಾಮಾನ್ಯ ಸಾಧಕನಾಗಿದ್ದ, ಸಿದ್ಧನಾಗಿರಲಿಲ್ಲ. ಇತ್ತ ಸಿದ್ಧರಾಮ ಸಾಧಕಾವಸ್ಥೆಯನ್ನು ಮೀರಿ ಸಿದ್ಧನಾಗಿದ್ದ. ಈ ವ್ಯತ್ಯಾಸವನ್ನು ನಾವು ಮನಗಂಡರೆ ಆದಿಪುರಾಣದಲ್ಲಿ ಎಳೆಯಾಗಿ ನರಕದತ್ತ ಹರಿದ ವಿಶ್ವಾನುಕಂಪ ಸಿದ್ಧರಾಮ ಚರಿತ್ರೆಯಲ್ಲಿ ಮಹಾನದಿಯಾಗಿ ಬೋರ್ಗರೆಯುತ್ತ ಇರುವುದಕ್ಕೆ ಕಾರಣವನ್ನು ಊಹಿಸುವುದು ಸುಲಭವಾಗುವುದು.

ಜಿ. ಬ್ರಹ್ಮಪ್ಪ. ಎಂ.ಎ.

# ವಿಕ್ರಮ ಮತ್ತು ಬೇತಾಳನ ಕಥೆ

ಶ್ವೇತಾಂಬರ ಜೈನಗ್ರಂಥಗಳಲ್ಲಿ ವಿಕ್ರಮಾದಿತ್ಯನಿಗೆ ಸಂಬಂಧಪಟ್ಟ ನೂರಾರು ರೋಚಕ ಕಥೆಗಳು ತುಂಬಿವೆ. ಸಾಂಪ್ರದಾಯಿಕ ಆವರಣವನ್ನು ದಾಟಿ, ವಿಮರ್ಶಕ ದೃಷ್ಟಿಯಿಂದ ಅನ್ವೇಷಣವನ್ನು ಮಾಡಿದರೆ, ಈ ಕಥೆಗಳಲ್ಲಿ ಅನೇಕ ಹೊಸ ತಥ್ಯಗಳ ಸ್ವರೂಪವು ದೃಷ್ಟಿಗತವಾಗದಿರಲಾರದು. ಸಂಸ್ಕೃತ ಕಥೆಗಳನ್ನು ನಾವು ಇದುವರೆಗೆ ರೋಚಕತೆಯ ದೃಷ್ಟಿಯಿಂದ ಅಧ್ಯಯನ ಮಾಡಿರುತ್ತೇವೆಯೇ ಹೊರತು ಅನ್ವೇಷಣದ ದೃಷ್ಟಿಯಿಂದಲ್ಲ. 'ಸಿಂಹಾಸನದ್ವಾತ್ರಿಂಶತಿ' ಪ್ರಾಯಃ ಎಲ್ಲಾ ಭಾಷೆಗಳಲ್ಲಿ ಅನುವಾದಿಸಲ್ಪಟ್ಟು ಸಾಹಿತಿಗಳ ಮುಂದೆ ಬಂದಿದೆ. ಈ ಗ್ರಂಥವೂ ರೋಚಕ ಕಥೆಯ ದೃಷ್ಟಿಯಿಂದಲೇ ಜನರ ಮನಸ್ಸನ್ನು ಸೆಳೆದಿರುವುದು ಹೊರತು ಇದರಲ್ಲಿರುವ ತಥ್ಯವನ್ನು ಅರಿತುಕೊಳ್ಳುವುದಕ್ಕೋಸ್ಕರ ನಾವು ಇದುವರೆಗೂ ಪ್ರಯತ್ನ ಮಾಡಿದ್ದಿಲ್ಲ. 'ಬೇತಾಳಪಂಚವಿಂಶತಿ'ಯ ಅವಸ್ಥೆಯೂ ಇದೇ ಆಗಿದೆ.

'ಬೇತಾಳಪಂಚವಿಂಶತಿ' ಸಂಸ್ಕೃತ ಸಾಹಿತ್ಯದಲ್ಲಿ ಒಂದು ಸುಪ್ರಸಿದ್ಧ ಕಥಾಗ್ರಂಥವಾಗಿದೆ. ಇದು ದೇಶವಿದೇಶಗಳ ಅನೇಕ ಭಾಷೆಗಳಲ್ಲಿ ಅನುವಾದಿಸಲ್ಪಟ್ಟಿರುವುದು. ಪ್ರಾಯಃ ಕಥಾಕಲ್ಪನೆಗಳು ತಮ್ಮ ಸೃಷ್ಟಿಯ ಪೂರ್ವ ಅಥವಾ ಸಮಕಾಲೀನ, ಸಮಾಜ ಹಾಗೂ ದೇಶದ ಸ್ಥಿತಿ, ಪ್ರಚಲಿತ ಸರ್ವಪ್ರಿಯ ವಿಷಯ ಮತ್ತು ವಾತಾವರಣವನ್ನನುಸರಿಸಿಯೇ ನಿರ್ಮಿಸಲ್ಪಡುವುವು. ಆದರೆ ಇವು ಐತಿಹಾಸಿಕ ಆಧಾರದಮೇಲೆಯೇ ನಿರ್ಮಿಸಲ್ಪಡುವುವೆಂದು ಹೇಳಲಾಗುವುದಿಲ್ಲ. ಮೇಲೆ ಹೇಳಿದ 'ಬೇತಾಳಪಂಚವಿಂಶತಿ'ಯು ಈ ಕಥಾಪರಂಪರೆಗೆ ಸೇರಿದ ಗ್ರಂಥವಾಗಿರುವುದರಿಂದ ಇದಕ್ಕೆ ಕಥೆಯ ಮಹತ್ವವೇ ಸಿಗುತ್ತಾ ಬಂದಿರುವುದು ಆಶ್ಚರ್ಯವಲ್ಲ. ಬೇರೆ ಪ್ರದೇಶಗಳ ಅಪೇಕ್ಷೆಯಿಂದ ಮಾಳವದಲ್ಲಿ ಈ 'ಬೇತಾಳಪಂಚವಿಂಶತಿ'ಯು ಒಂದು ಅತ್ಯಧಿಕ ಲೋಕಪ್ರಿಯವಾದ ಕಥೆಯಾಗಿದೆ. ಇದನ್ನು ಓದಲು ಪ್ರಾರಂಭಿಸಿದರೆ ಮುಗಿಸದೆ ಕೆಳಗಿಡುವುದಕ್ಕೆ ಮನಸ್ಸೇ ಬರುವುದಿಲ್ಲ. ಬೇತಾಳಕಥೆಯಲ್ಲಿ ವಿಕ್ರಮಾದಿತ್ಯನ ಮಹತ್ವವೇ ಒಡೆದು ಕಾಣುವುದು. ಈ ಕಥೆಯು ಎಂದಿನಿಂದ ಯಾವ ಕಾರಣದಿಂದ ಪ್ರಾರಂಭವಾಯಿತೆಂದು ಹೇಳಲು ಸಾಧ್ಯವಿಲ್ಲ. ಅಂತು ಇದು ಅರ್ವಾಚೀನವಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು.

ಹಲವು ಶತಮಾನಗಳ ಮೊದಲೇ ಈ ಕಥೆಯು ಪ್ರಚಾರದಲ್ಲಿತ್ತು. ಹನ್ನೊಂದನೆಯ ಶತಮಾನದಲ್ಲಿ ರೂಪಾಂತರಗೊಂಡು ಇದು 'ಕಥಾಸರಿತ್ಸಾಗರ'ದಲ್ಲಿ ಸಿಗುವುದು. ಈ ಕಥೆಯು 'ಕಥಾಸರಿತ್ಸಾಗರ'ದಲ್ಲಿ ಮೊದಲನೆಯ ಶತಮಾನದ, ಪೈಶಾಚಿ ಭಾಷೆಯ ಕೃತಿಯಾದ 'ಬೃಹತ್ಕಥಾಕೋಶ'ದಿಂದ ಬಂದಿರಬೇಕು. ಅನಂತರ ಹದಿನಾಲ್ಕನೆಯ ಶತಮಾನದಲ್ಲಿ ಜೈನ ವಿದ್ವಾಂಸರಾದ ಮೇರುತುಂಗರು ತಮ್ಮ 'ಪ್ರಬಂಧಚಿಂತಾಮಣಿ' ಯಲ್ಲಿ ಆಂಶಿಕರೂಪದಲ್ಲಿ ಇದನ್ನು ತೆಗೆದುಕೊಂಡರು. ಹೀಗೆ ಹಲವು ಶತಮಾನಗಳ ಪರಂಪರೆಯಿಂದ ತಥ್ಯರೂಪದಲ್ಲಿ ವ್ಯಾಪಕ ಲೋಕಪ್ರಿಯತೆಯನ್ನು ಗಳಿಸಿ, ಇದು ಇಂದಿನ ವರೆಗೂ ಜೀವಿಸಿಕೊಂಡು ಬಂದಿದೆ.

'ಬೇತಾಳಪಂಚವಿಂಶತಿ'ಯಲ್ಲಿ ವಿಕ್ರಮನ ರಾಜ್ಯಾರೋಹಣದ ಕಥೆಯು ರೋಚಕವಾಗಿ ವರ್ಣಿಸಲ್ಪಟ್ಟದೆ. ಉಜ್ಜಯಿನಿಯ ರಾಜಸಿಂಹಾಸನದಲ್ಲಿ ದೀರ್ಘಕಾಲದ ವರೆಗೆ ಯಾವ ರಾಜನೂ ಸ್ಥಾಯಿಯಾಗಿ ಕುಳಿತುಕೊಳ್ಳುತ್ತಿರಲಿಲ್ಲ. ಪ್ರಾಯಃ ರಾತ್ರಿಯಲ್ಲಿ ಒಂದು ಶಕ್ತಿಯು ಬಂದು ಅವನನ್ನು ಕೊಂದುಬಿಡುತ್ತಿತ್ತು. ಇದರ ಪರಿಣಾಮವಾಗಿ ಪ್ರತಿದಿನಸ ಒಬ್ಬ ವ್ಯಕ್ತಿಯು ಆರಿಸಲ್ಪಡುತ್ತಿದ್ದು ಅದರಿಂದ ತಿನ್ನಲ್ಪಡುತ್ತಿದ್ದನು. ನಗರ ಹಾಗೂ ಪ್ರಾಂತದಲ್ಲೆಲ್ಲಾ ಈ ಭೀತಿಯು ಹರಡಿದ್ದುದರಿಂದ ಯಾವನೂ ರಾಜನಾಗುವುದಕ್ಕೋಸ್ಕರ ಒಪ್ಪುತ್ತಿರಲಿಲ್ಲ.

ಈ ಮಧ್ಯದಲ್ಲಿ ಒಂದು ದಿನ ವಿಕ್ರಮನೆಂಬ ಒಬ್ಬ ನಿರ್ಧನ ವ್ಯಕ್ತಿಯ ಸರ್ತಿಯು ಬಂತು. ಅವನು ಸಿಂಹಾಸನದಲ್ಲಿ ಕೂತು ತನ್ನ ಬುದ್ಧಿ ಮತ್ತು ಸಾಹಸದಿಂದ ಕೆಲಸ ಮಾಡಿದನು. ಯಾವ ಅಜ್ಞಾತ ಶಕ್ತಿಯು ಪ್ರತಿದಿವಸ ರಾಜನನ್ನು ಭಕ್ಷಿಸುವುದೊ ಅದನ್ನು ಬೇರೆರೂಪದಿಂದ ಸಂತೋಷಪಡಿಸುವುದು ಅಗತ್ಯವೆಂದೂ ಹಾಗೆಯೇ ಸಂದರ್ಭ ಎದ್ದರೆ ಸಾವಧಾನದಿಂದ ಅದನ್ನು ಎದರಿಸುವುದು ಅನಿವಾರ್ಯವೆಂದೂ ಅವನು ಯೋಚಿಸಿದನು. ಹೀಗೆ ಯೋಚಿಸಿ ವಿಕ್ರಮನು ನಾನಾ ಪ್ರಕಾರವಾದ ಭಕ್ಷ್ಯಗಳನ್ನು ತಯಾರಿಸಿಟ್ಟು ತಾನು ಖಡ್ಗಹಸ್ತನಾಗಿ ಒಂದೆಡೆ ಅಡಗಿ ನಿಂತನು. ಮಧ್ಯರಾತ್ರಿಯ ಗಾಢಾಂಧಕಾರದಲ್ಲಿ ಧೂಮ್ರಪಟಲದ ಹಿಂದೆ ಯಮದೂತನಂತಿದ್ದ ಒಬ್ಬ ಭಯಂಕರ ಮನುಷ್ಯನು ಬಾಗಿಲಿನಿಂದ ಕೋಣೆಯ ಒಳಗೆ ಪ್ರವೇಶಿಸಿದನು. ಬಂದವನೇ ಮೊತ್ತಮೊದಲು ಅಲ್ಲಿಟ್ಟಿದ್ದ ಭಕ್ಷ್ಯಗಳನ್ನೆಲ್ಲಾ ತಿಂದು ಹಸಿವೆಯನ್ನು ನೀಗಿಸಿಕೊಂಡನು. ಈ ಹೊಸಯೋಜನೆಯಿಂದಲೂ ಉತ್ತಮ ಸ್ವಾದಿಷ್ಟ ಭಕ್ಷ್ಯಗಳಿಂದಲೂ ಅವನಿಗೆ ಬಹಳ ಸಂತೋಷವಾಯಿತು. ವಿಶ್ರಾಂತಿಯ ಅನಂತರ ಬೇತಾಳನು ಆ ಚತುರ ಹೊಸ ರಾಜನನ್ನು ತನ್ನ ಮುಂದೆ ಕರೆದನು.

ಅಭಯವಚನವನ್ನು ಪಡೆದು ವಿಕ್ರಮನು ಬೇತಾಳನ ಮುಂದೆ ಬಂದು ನಿಂತನು. ಬೇತಾಳನು ಅಗ್ನಿಬೇತಾಳನ ರೂಪದಲ್ಲಿ ವಿಕ್ರಮನಿಗೆ ತನ್ನ ಪರಿಚಯವನ್ನು ಕೊಟ್ಟು, ಸತ್ಕಾರದ ಉಪಲಕ್ಷ್ಯವಾಗಿ ವಿಕ್ರಮನನ್ನು ಉಜ್ಜಯಿನಿಯ ಸ್ಥಾಯಿ ರಾಜನನ್ನಾಗಿ ಘೋಷಿಸಿ, ತನ್ನ ಸ್ಥಾಯಿ ಸತ್ಕಾರದ ವಚನವನ್ನು ವಿಕ್ರಮನಿಂದ ತೆಗೆದುಕೊಂಡನು. ಅಂದಿನಿಂದ ಬೇತಾಳನು ವಿಕ್ರಮನ ಸಹಾಯಕನಾದನು. ಈ ಕಥೆಯು ಬಹಳ ಸುಂದರವಾಗಿ ಹೇಳಲ್ಪಟ್ಟದೆ. ಸಂಕ್ಷೇಪದಲ್ಲಿ ಇದೇ ಕಥೆಯ ಅಭಿಪ್ರಾಯವಾಗಿದೆ. ಬೇರೆ ಬೇರೆ ಕಥೆಗಳಲ್ಲಿ ವಿಕ್ರಮನ ಪರೀಕ್ಷೆಯು ಮಾಡಲ್ಪಟ್ಟು, ಎಲ್ಲದರಲ್ಲಿಯೂ ಅವನು ಶ್ರೇಷ್ಠನೆಂದು ಸಿದ್ಧಮಾಡಲ್ಪಟ್ಟದೆ. ಏನೇ ಆಗಲಿ; ಮಾಳವದಲ್ಲಿ ಈ ಕಥೆಯಲ್ಲಿ ಜನರಿಗೆ ನಂಬಿಕೆಯಿದೆ ಹಾಗೂ ಈ ನಂಬಿಕೆಗೆ ಕಾರಣವೂ ಇದೆ.

ಈ ಕಥೆಯಿಂದ ವಿಕ್ರಮಾದಿತ್ಯನಿಗೆ ಬೇತಾಳನಂತಹ ಒಂದು ಮಹಾಶಕ್ತಿಯ ಸಹಯೋಗವು ಪ್ರಾಪ್ತವಾಗಿತ್ತೆಂದೂ ಬೇತಾಳನು ಅನೇಕ ರಾಜರ ಅಸ್ತಿತ್ವವನ್ನೇ ನಿರ್ನಾಮಮಾಡಿ, ಒಬ್ಬ ರಾಜನನ್ನು ಒಂದು ದಿವಸದ ಮಟ್ಟಿಗೇ ಶಾಸಕನನ್ನಾಗಿ ನೇಮಿಸುತ್ತಿದ್ದನೆಂದೂ ಮುಂದೆ ಅವನು ಪ್ರಭಾವಶಾಲಿಯಾದ ವಿಕ್ರಮನನ್ನೇ ಉಜ್ಜಯಿನಿಯ ಸ್ಥಾಯಿ ಶಾಸಕನನ್ನಾಗಿ ನೇಮಿಸಿದನೆಂದೂ ಸ್ಪಷ್ಟವಾಗಿ ಸಿದ್ಧವಾಗುವುದು. ಬೇತಾಳನ ಉಪದ್ರವದಿಂದ ಉಜ್ಜಯಿನಿಯ ಸಿಂಹಾಸನದಲ್ಲಿ ಸ್ಥಾಯಿಯಾಗಿ ಕೂತುಕೊಳ್ಳಲು ಎಲ್ಲರೂ ಅಸಮರ್ಥರಾದಾಗ ಹಾಗೂ ವಿಕ್ರಮನೂ ಅವನ ಸಹಾಯದಿಂದಲೇ ಸ್ಥಾಯಿಯಾಗಿ ಸಿಂಹಾಸನವನ್ನೇರಿದಾಗ ಆ ಬೇತಾಳನು ಉಜ್ಜಯಿನಿಯ ಶಾಸನದ ಒಬ್ಬ ಉಗ್ರ

ಹಾಗೂ ತೇಜಸ್ವಿ ನೇತನಾಗಿದ್ದಿರಬೇಕು. ಅದರಲ್ಲೂ ಅವನು ಓರ್ವ ಶುದ್ಧ ರಾಜನೀತಿಯ ನೇತನಾಗಿದ್ದಿರಬಹುದು. ಏಕೆಂದರೆ ಬೇತಾಳನು ಪ್ರಜೆಗಳಿಗೆ ಯಾವ ಪ್ರಕಾರವಾದ ಉಪದ್ರವವನ್ನೇ ಆಗಲಿ, ಕೊಟ್ಟಿದ್ದು ಕಥೆಯಿಂದ ತಿಳಿದುಬರುವುದಿಲ್ಲ.

ಆದುದರಿಂದ ಬೇತಾಳನು ಬೆಂಕಿಯಂತಹ ಒಬ್ಬ ತೇಜಸ್ವಿ ಮನುಷ್ಯನಾಗಿದ್ದನೆಂದೂ ತಾನು ಶಾಸಕನಾಗಬೇಕೆಂಬ ಆಶೆಯು ಅವನಿಗೆ ಸಲ್ಪವೂ ಇರಲಿಲ್ಲವೆಂದೂ ರಾಜರನ್ನು ನೇಮಿಸಿ ಅವರ ಮೂಲಕ ರಾಜ್ಯಭಾರವನ್ನು ನಡೆಸುವ ತೀವ್ರೇಚ್ಛೆಯೇ ಅವನಲ್ಲಿತ್ತೆಂದೂ ನಾವು ಊಹಿಸುವುದು ತಪ್ಪಾಗಲಾರದು. ವಿಕ್ರಮಾದಿತ್ಯ ಚಿತ್ರಪಟದ ನಿರ್ಮಾಪಕರಾದ ಶ್ರೀವಿಜಯ ಭಟ್ಟರು ತಮ್ಮ ಚಿತ್ರಪಟದಲ್ಲಿ ಬೇತಾಳನನ್ನು ಓರ್ವ ತೇಜಸ್ವಿ ದೇಶಭಕ್ತನಾದ ಪ್ರಧಾನ ಮಂತ್ರಿಯನ್ನಾಗಿಟ್ಟುಕೊಂಡು, ಅವನ ಮೂಲಕ ಯಾವ ಅಪೂರ್ವವಾದ ಕಾರ್ಯವನ್ನು ಸಾಧಿಸಿರುವರೋ ಅದು ಸರ್ವಥಾ ಉಚಿತವೆಂದೇ ತೋರುವುದು. ಬೇತಾಳನಿಗೆ ಭೂತಾದಿ ವ್ಯಂತರಯೋನಿಯ ರೂಪವನ್ನು ಕೊಟ್ಟವರು ಯಾರೋ ಹಿಂದಿನ ಕಾಲದವರಿರಬೇಕು.

ಬೇತಾಳನನ್ನು ಕ್ಷೇಮಂಕರನು 'ಕಥಾಸರಿತ್ಸಾಗರ'ದಲ್ಲಿ ಅಗ್ನಿಶಿಖನನ್ನಾಗಿಯೂ ಮೇರುತುಂಗರು 'ಪ್ರಬಂಧ ಚಿಂತಾಮಣಿ'ಯಲ್ಲಿ ಅಗ್ನಿವರ್ಣನನ್ನಾಗಿಯೂ ಹೆಸರಿಸಿರುವರು. ಸಾಮಾನ್ಯವಾಗಿ ಇವೆರಡರ ಅಭಿಪ್ರಾಯ ಒಂದೆ. ನಾವು ಬೇತಾಳನನ್ನು ಮನುಷ್ಯನನ್ನಾಗಿಟ್ಟುಕೊಂಡರೆ ಇವನಾರೆಂಬ ಒಂದು ಜಟಿಲ ಪ್ರಶ್ನೆಯು ನಮ್ಮ ಮುಂದೆ ಬಂದು ನಿಲ್ಲುವುದು. ವಿಕ್ರಮಾದಿತ್ಯನ ರಾಜಸಭೆಯ ನವರತ್ನಗಳಲ್ಲಿ ಒಬ್ಬ ಬೇತಾಳ ಭಟ್ಟನ ಹೆಸರು ನಮಗೆ ಕಂಡುಬರುವುದು. ಅವನು ಬ್ರಾಹ್ಮಣನಾಗಿರಬೇಕು.

ಹೀಗೆಯೇ ಮೇರುತುಂಗರ 'ಪ್ರಬಂಧ ಚಿಂತಾಮಣಿ'ಯಲ್ಲಿಯೂ ವಿಕ್ರಮನ ಸಹಾಯಕನಾದ ಒಬ್ಬ ಭಟ್ಟನ ಉಲ್ಲೇಖವು ಸಿಗುವುದು. ಈ ಭಟ್ಟನು ಬೇತಾಳ ಭಟ್ಟನೇ ಆಗಿದ್ದರೂ ಇರಬಹುದು. ಇವೆಲ್ಲಾ ಸೂಕ್ಷ್ಮ ಅನ್ವೇಷಣದಿಂದ ಬಗೆಹರಿಯತಕ್ಕ ವಿಷಯಗಳು. ಅಂತು ಬೇತಾಳ ಅಥವಾ ಬೇತಾಳಭಟ್ಟ, ಅಗ್ನಿಶಿಖ ಅಥವಾ ಅಗ್ನಿವರ್ಣ ಇವು ಒಂದು ರೋಚಕ ಕಥೆಯ ಕಾಲ್ಪನಿಕ ಹೆಸರು ಮಾತ್ರವಾಗಿರದೆ, ವಿಕ್ರಮನಿಗೆ ಸಂಬಂಧಪಟ್ಟ ಯಾವುದೋ ಒಂದು ಅಪೂರ್ವ ತೇಜಸ್ವಿ ಶಕ್ತಿಯಾಗಿದ್ದಿರಬೇಕೆಂದು ಇದರ ಒಟ್ಟು ಸಾರಾಂಶವಾಗಿದೆ.

ವಿದ್ಯಾ ಭೂಷಣ
ಕೆ. ಭುಜಬಲಿ ಶಾಸ್ತ್ರಿ

# ತುಳುವಿನ ಗಾದೆಗಳು

ದ್ರಾವಿಡ ಭಾಷೆಗಳಲ್ಲಿ ತುಳು ಒಂದು ಪ್ರಸಿದ್ಧವಾದ ಭಾಷೆ. ಅದೊಂದು ಪ್ರಾಚೀನ ಭಾಷೆ. ಕರ್ಣಾಟಕದ ಪಶ್ಚಿಮ ಕರಾವಳಿಯ ಇಂದಿನ ದಕ್ಷಿಣ ಕನ್ನಡದ ಹೆಚ್ಚಿನ ಭಾಗ ತುಳು ನಾಡೆಂಬುದಾಗಿ ಪರಿಗಣಿಸಲಾಗಿದೆ. ಈ ಭಾಷೆಯನ್ನಾಡುವ ಜನರನ್ನು ತುಳುವರೆನ್ನುವರು. ಇವರ ಸಂಖ್ಯೆ ಸುಮಾರು ಎಂಟುಲಕ್ಷ ಎನ್ನಬಹುದು. ಈ ಶತಮಾನದ ಎರಡನೆಯ ದಶಕದಿಂದ ತುಳುನಾಡಿನ ಅನೇಕ ಕುಟುಂಬಗಳು ಮುಂಬಯಿ ಮುಂತಾದ ಬೇರೆ ಪ್ರಾಂತಗಳಿಗೆ ವಲಸೆ ಹೋಗಿರುವುದರಿಂದ ತುಳುಜನತೆಯ ಸರಿಯಾದ ಅಂಕೆ ಸಂಖ್ಯೆ ತೆಗೆಯುವುದು ಸ್ವಲ್ಪ ಕಷ್ಟವಾಗಿದೆ.

ಭಾಷಾ ಸಾಹಿತ್ಯಗಳ ದೃಷ್ಟಿಯಿಂದ ತುಳುವಿನ ಸ್ಥಾನ ದೊಡ್ಡದು. ತುಳುವಿನ ಶಬ್ದ ಭಂಡಾರ ವಿಪುಲವಾಗಿದೆ. ತಮಿಳು, ಕನ್ನಡ, ತೆಲುಗು, ಮಲೆಯಾಳಗಳಲ್ಲಿ ಕಂಡುಬರುವ ದೇಶ್ಯ ಶಬ್ದಗಳಲ್ಲಿ ಹೆಚ್ಚಿನವಕ್ಕೆ ತುಳುವಿನಲ್ಲಿ ಸಮಾನ ಜ್ಞಾತಿಶಬ್ದಗಳು ದೊರಕುತ್ತವೆ.* ಎಂಥ ಸೂಕ್ಷ್ಮ ವಿಚಾರಗಳನ್ನಾದರೂ ತುಳುವಿನಲ್ಲಿ ಸುಲಲಿತವಾಗಿ ಹೇಳುವುದಕ್ಕೆ ಶಕ್ಯವಿದೆ.

ತಮಿಳಿನಲ್ಲಿ ಕ್ರಿ.ಶ. ಸುಮಾರು ಎರಡನೆಯ ಶತಮಾನದಲ್ಲಿ ರಚಿತವಾಗಿರಬೇಕೆಂದು ಎನ್ನಲಾದ ಅಗನಾನ್ನೂರು ಎಂಬ ಕವನಸಂಗ್ರಹದಲ್ಲಿ ತುಳುನಾಡನ್ನು ಪ್ರಶಂಸನೆ ಮಾಡಿದ ಸಂದರ್ಭವುಂಟು. ತಮಿಳು ನಾಡಿನ ಮುತ್ತೂರು ಎಂಬ ಪ್ರದೇಶದ ಹಿರಿಮೆಯನ್ನು ವರ್ಣಿಸುವಾಗ ಕವಿ ಅದನ್ನು ತುಳುನಾಡಿಗೆ ಹೋಲಿಸುತ್ತಾನೆ. ಇಷ್ಟು ಪ್ರಾಚೀನ ಭಾಷೆಯಲ್ಲಿ ಎಷ್ಟೋ ಸಾಹಿತ್ಯ ರಚನೆಯಾಗಿರಬೇಕು. ಆದರೆ ರಾಜಾಶ್ರಯದ ಅಭಾವದಿಂದ, ಸ್ವತಂತ್ರಲಿಪಿಯ ಅಭಾವದಿಂದ ತುಳು ಸಾಹಿತ್ಯದ ಅಧಿಕಭಾಗ ಇಂದು ಕಣ್ಮರೆಯಾಗಿದೆ ಎಂದರೆ ತಪ್ಪಾಗದು. ಅದೇನೊ ಜನರ ಬಾಯಲ್ಲಿ ಹಿರಿಯರಿಂದ ಕಿರಿಯರಿಗೆ ಬಂದ ಕೆಲವು ಜಾನಪದ ಗೀತೆಗಳೂ ಪಾಡ್ದನಗಳೂ ಸಂದಿಗಳೂ ಪುಣ್ಯವಶಾತ್ ಇಂದಿಗೆ ಉಳಿದು ಕೊಂಡಿವೆ.** ಪೇಜಾವರ ಸದಾಶಿವರಾಯರು ವರ್ಣಿಸಿದ ಲಕ್ಕಣನಂಥ ತುಳುನಾಡ ಕವಿಯ ನಾಮೋಚ್ಚಾರಣೆಯಿಂದ ಮೈನವಿರೇಳುವುದು.

ಇತರ ಭಾಷೆಗಳ ಪ್ರದೇಶಗಳಲ್ಲಿ ಆಯಾ ಪ್ರದೇಶದ ಎಲ್ಲ ಕೋಮುವಾರಿನವರಿಗೆ ಆಯಾ ಪ್ರದೇಶ ಭಾಷೆ ತಾಯ್ನುಡಿಯಾಗಿರುವಂತೆ ತುಳುನಾಡಿನಲ್ಲಿ ಎಲ್ಲ ಮತೀಯರಿಗೂ ಹರಿಜನರು, ಜೈನರು, ಬ್ರಾಹ್ಮಣರು, ಬಂಟರು, ಗೌಡರು, ಮೂಲ್ಯರು, ಗಾಣಿಗರು, ಬೈದ್ಯರು, ಕ್ರೈಸ್ತರು (ಹೆಚ್ಚಾಗಿ ಪ್ರೊಟೆಸ್ಟೆಂಟ್ ಪಂಗಡದವರು) ಮೊದಲಾದವರಿಗೆ ತುಳು ತಾಯ್ನುಡಿಯಾಗಿದೆ. ಒಂದು ಜಿಲ್ಲೆಯೊಳಗೆ ವ್ಯವಹರಿಸುವ ಈ ಭಾಷೆಯಲ್ಲಿ ಇನ್ನಷ್ಟು ಒಳಪ್ರಭೇದಗಳಿರುವುದು ಗಮನೀಯವಾದ ವಿಚಾರವಾಗಿದೆ; ತುಳುವಿನಲ್ಲಿ ಬ್ರಾಹ್ಮಣರ ತುಳು, ಬ್ರಾಹ್ಮಣೇತರರ ತುಳು,

* Dravidian Etymological Dictionary by Burrow and Emeneau.

** ಪಾಡ್ದನಗಳೆಂದರೆ ತುಳುನಾಡಿನ ವೀರಶ್ರೀಯನ್ನು ಕೊಂಡಾಡುವ ಐತಿಹಾಸಿಕ ಹಿನ್ನೆಲೆಯುಳ್ಳ ಕಾವ್ಯಮಯ ಗದ್ಯರಚನೆಗಳು. ಸಂದಿಗಳು ಕೆಲವು ಐತಿಹಾಸಿಕ ಘಟನೆಗಳ ಛಾಯೆಯನ್ನು ಬೀಸುವ ಹಾಡುಗಬ್ಬಗಳು. ಭೂತಕೋಲಗಳಲ್ಲಿನ ಹಿಮ್ಮೇಳದಾಕೆ ಇದನ್ನು ಹಾಡುತ್ತಾಳೆ.

ಪಾದ್ರಿ ತುಳು, ಕೊಂಕಣಿ ತುಳು ಎಂಬು ದಾಗಿಯೂ ಉಡುಪಿ ತುಳು, ಕಾರ್ಕಳ ತುಳು, ಮಂಗಳೂರು ತುಳು, ಪುತ್ತೂರು ತುಳು, ಎಂಬು ದಾಗಿಯೂ—ಭಾಷಾದೃಷ್ಟಿಯಿಂದ ಕೆಲವು ವ್ಯತ್ಯಾಸಗಳಿರುತ್ತವೆ.

ಇಂಥ ಪ್ರಾಚೀನ ಭಾಷೆಯಲ್ಲಿನ ಕೆಲವು ನಾಣ್ಣುಡಿಗಳನ್ನು ಪ್ರಸ್ತುತದಲ್ಲಿ ವಿವೇಚಿಸೋಣ.

ನಾಣ್ಣುಡಿ ಎಂದರೆ 'ನಾಡ ನುಡಿ', 'ಊರ ಮಾತು' ಇದೇ ಲೋಕಾನುಭವ. ಇದನ್ನೇ ತಮಿಳರು 'ಪಱಮೊೞಿ' (ಹಳೆಮಾತು) ಎಂದೂ ತೆಲುಗರು ನಮ್ಮಂತೆ 'ನಾನುಡಿ' ಎಂದೂ ತುಳುವರು 'ಪಱಮೆ' ಎಂದೂ ನುಡಿಯುವರು. ಇದನ್ನೇ ಗಾದೆ (ಸಂಗಾಥಾ), ಸಾಮಿತಿ ಎನ್ನುವುದೂ ಉಂಟು.

ಗಾದೆಯನ್ನು ಯುಕ್ತಸಂದರ್ಭದಲ್ಲಿ ಹೇಳಿದರೆ ಅದರ ಪರಿಣಾಮ ಬಹಳ. ವಿಶೇಷ ಅನುಭವಗಳನ್ನು ಭಟ್ಟಿಕಟ್ಟಿ ಇಳಿಸಿದ ಸಾರವೇ ನಾಣ್ಣುಡಿಗಳೆನ್ನಬಹುದು. ಇವನ್ನು ಮಿಠಾಯಿಯಂತೆ ಇಟ್ಟುಕೊಂಡು ಬೇಕಾದಾಗ ಬಾಯಲ್ಲಿ ಸವಿಯಬಹುದು. ಹೆಚ್ಚಿನ ಗಾದೆಗಳು ನೀತಿಯನ್ನು ಸಾರುತ್ತದೆ. ಜನತೆಯನ್ನು ವಿನಯದಿಂದ ತಿದ್ದುವುದೇ ಅವುಗಳ ಮಹಾಕಾರ್ಯವೆಂದರೆ ತಪ್ಪಾಗದು. ಅವುಗಳು ಅನುಭವ ಪೂರ್ಣವಾದ ಸತ್ಯವನ್ನು ಎತ್ತಿಹಿಡಿದು ಸತ್ಪರಿಣಾಮವನ್ನು ಸಕಾಲದಲ್ಲಿ ಉಂಟುಮಾಡಬಲ್ಲವು. ಅವು ಜನರ ಕಣ್ಣನ್ನು ತೆರೆಯುತ್ತವೆ.

ಮಾನವ ಮನೋವೃತ್ತಿಯ ಮೂಲತತ್ವಗಳು ಬಹುತೇಕ ಸಮಾನವಿರುವುದರಿಂದ ಮಾನವ ಸಂಸ್ಕೃತಿಯ ಪ್ರಾಚೀನ ಪ್ರತೀಕಗಳಂತಿರುವ ಗಾದೆಗಳು ವಿಶ್ವದ ಭಾಷೆಗಳಲ್ಲಿ ಕೆಲವು ವೇಳೆ ಒಂದೇ ಅನುಭವವನ್ನು ಸಾರಬಹುದು. ಇದು ಆಕಸ್ಮಿಕವಲ್ಲ, ಸಹಜ. ಉದಾಹರಣೆಗೆ—ಆಂಗ್ಲದಲ್ಲಿ–"When you go to Rome do as the Romans do" (ನೀನು ರೋಮು ನಗರಕ್ಕೆ ಹೋದಾಗ, ರೋಮಕನಂತೆ ನಡೆದುಕೊ); ಕನ್ನಡದಲ್ಲಿ—"ಕೇರೆ ತಿನ್ನುವ ರಾಜ್ಯಕ್ಕೆ ಹೋದರೆ ನಡು ತುಂಡು ಕೇಳು." ಇಲ್ಲಿ ಒಂದು ಗಾದೆ ಇನ್ನೊಂದರ ಮಕ್ಕಿಕ್ಕಾಮಕ್ಕಿ ಭಾಷಾಂತರವಲ್ಲ. ಆದರೆ ಮಥಿತಾರ್ಥ ಒಂದೇ. ಪರರೆಡೆಯಲ್ಲಿರುವಾಗ ಅವರ ಮನಸ್ಸಿಗೆ ನೋವಾಗದಂತೆ, ಅವರನ್ನೊಲಿಸುವಂತೆ, ಅವರಂತೆ ವರ್ತಿಸು. ಎಂಥ ಉದಾತ್ತ ನೀತಿಯಿದು. ಇದರಲ್ಲಿ ವಿಶ್ವಸಂಸ್ಕೃತಿಯ ಸಮಾನಧರ್ಮವನ್ನು ಕಾಣುತ್ತೇವೆ. ಹೀಗಿದ್ದರೂ ಪ್ರತಿಯೊಂದು ದೇಶದವರ, ಏಕೆ ಪ್ರದೇಶದವರ ಪ್ರಾಕೃತಿಕ ಪರಿಸ್ಥಿತಿ ಪ್ರಭೇದಗಳಿಂದ ಪ್ರತಿಯೊಂದು ವರ್ಗದವರ ನಡೆನುಡಿಗಳಲ್ಲಿ ಒಂದು ವೈಶಿಷ್ಟ್ಯವನ್ನು ಅವರ ಮಾತುಗಳಲ್ಲಿ ಕಂಡುಕೊಳ್ಳಬಹುದು. "ಬೆಳೆಯ ಸಿರಿ ಮೊಳೆಯಲ್ಲಿ ಕಾಣುತ್ತೆ" ಎಂಬ ನಾಣ್ಣುಡಿಯನ್ನು ಕೇಳಿದೊಡನೆಯೇ ಇದು ಬೇಸಾಯಗಾರರ ವಿಶಿಷ್ಟಾನುಭವದ ರಸಘಟ್ಟಿ ಎನ್ನಬಹುದು. "ಕುಂಬಾರಗೆ ವರ್ಷ ದೊಣ್ಣೆಗೆ ನಿಮಿಷ" ಎಂಬ ಗಾದೆಯ ಮಾತು ಮಡಕೆ ತಟ್ಟುವವರ ಕಷ್ಟಕಾರ್ಪಣ್ಯಗಳನ್ನು ಅರಿತುಕೊಂಡವರ ಮಧ್ಯದಿಂದ ಹೊರಹೊಮ್ಮಿದೆ ಎನ್ನುವುದರಲ್ಲಿ ಸಂದೇಹ ಬೇಡ. "ಇರುಳು ಕಾಗೆಗೆ ಆಗದು ಹಗಲು ಗೂಬೆಗೆ ಆಗದು" ಎಂಬ ಹೇಳಿಕೆ ಪಕ್ಷಿಗಳ ಸ್ವಭಾವಗಳನ್ನು ಚೆನ್ನಾಗಿ ಪರಿಶೀಲಿಸಿಕೊಂಡಿದ್ದುದರ ಫಲ. ಪರಸ್ಪರವಿರುದ್ಧ ಸ್ವಭಾವದವರ ಮನೋವೃತ್ತಿಯನ್ನು ಎಷ್ಟು ಸ್ವಾರಸ್ಯವಾಗಿ ಈ ಗಾದೆ ಚಿತ್ರಿಸುತ್ತದೆ!

ಯಾವ ಗಾದೆಯನ್ನು ಆರಿಸಿಕೊಂಡರೂ ಸರಿಯೆ, ಮೂಲತಃ ಅದರಲ್ಲೊಂದು ವಿಶೇಷಾ

ನುಭವವಿದ್ದು, ಮತ್ತೆ ಅದು ಜನತೆಯ ಅನುಭವಾಮೃತವಾಗಿ ಪರಿಣಮಿಸುತ್ತದೆ. ಅದು ಅಂಥ ಅನ್ಯೃತವಾಗುವಾಗ ಅದರೊಳಗಿನ ವೈಶಿಷ್ಟ್ಯ ಮಾಯವಾಗುತ್ತಾ ಬರುತ್ತದೆ; ವಾಚ್ಯಾರ್ಥ ದೂರವಾಗಿ ವ್ಯಂಗ್ಯಾರ್ಥ ಸ್ಫುರಿಸುವುದು; ಒಂದು ಆಲಂಕಾರಿಕ ಶೋಭೆಯ ಕಳೆಕಟ್ಟುವುದು.

ಈಗ ತುಳುವಿನ ಕೆಲವು ಗಾದೆಗಳನ್ನು ಸಮೀಕ್ಷಿಸೋಣ.

(1) ಕುದ್ಕೆ ಬೊಳ್ಳ ಪೋನಾಗ ಊರೇ ಬೊಳ್ಳೊಪೊಪುಂಡು ಪಂಡಿ ಲೆಕ್ಕೊ: ನರಿ (ಕುದ್ಕ) ಬೆಳ್ಳ (ಪ್ರವಾಹದಲ್ಲಿ ಬಿದ್ದು) ಹೋಗುವಾಗ ಊರಿಗೆ ಊರೇ ಬೆಳ್ಳಹೋಗುತ್ತದೆಂಬುದಾಗಿ ಅದು ಭಾವಿಸುವುದಂತೆ. ಜಾಣ ನರಿಯ(ಹಾಗೆಯೇ ಜಾಣರೆಂದೆನಿಸಿಕೊಳ್ಳುವ ಸಂಕುಚಿತ ಬುದ್ಧಿಯವರ) ವಕ್ರದೃಷ್ಟಿಯನ್ನು ಅವಹೇಳನ ಮಾಡುವ ಒಂದು ಗಾದೆಯ ಮಾತಿದು.

(2) ಎಲಿಕ್ ಪೋಡ್ದು ಇಲ್ಲ್‌ಗ್ ಸೂಕೊರಿ ಲೆಕ್ಕೊ: ಇಲಿಗೆ ಹೆದರಿ ಮನೆಗೆ ಬೆಂಕಿ ಕೊಟ್ಟಂತೆ. ಅವಿವೇಕ ವರ್ತನೆಗೆ ಹೇಳುವ ಗಾದೆ.

(3) ಉಂಗಿಲ್ ಪಾಡ್ನ ಕೈಟ್ ಹಾಕ್ಂಟ್ ಬೇನೆ ಇದ್ದಿ: ಉಂಗುರ ಹಾಕಿದ ಕೈಯಿಂದ ಹೊಡೆದರೆ ನೋವು ಇಲ್ಲ. ಸ್ಥಾನಮಾನವುಳ್ಳವರ ಮಾತಿಗೆ ಬೆಲೆ ಎಂಬುದನ್ನು ಒತ್ತಿ ಹೇಳುವ ರೀತಿ.

(4) ಉಪ್ಪು ತಿಂದ್ನಾಯೆ ನೀರ್ ಪರ್ವೆ: ಉಪ್ಪು ತಿಂದವ ನೀರು ಕುಡಿದಾನು. ಎಷ್ಟು ಸಮನಾದ ಕನ್ನಡಗಾದೆ ತುಳುವಿನಲ್ಲಿದೆ.

(5) ಉರಿಪ್ಪಿ ಪುಡಿಕ್ ಉಪ್ಪುಪಾಡಿ ಲೆಕ್ಕೊ: ಉರಿಯುವ ಹುಣ್ಣಿಗೆ ಉಪ್ಪು ಹಾಕಿದಂತೆ. ಇದೂ ಎರಡು ಭಾಷೆಗಳಲ್ಲೂ ಒಂದೇ ತೆರನಾಗಿದೆ.

(6) ಉಣ್ಯಾರ ಇದ್ದಾಂತಿ ಉಪ್ಪಾಡ್: ಊಟಕ್ಕಿಲ್ಲದ ಉಪ್ಪಿನ ಕಾಯಿ. ಸಂದರ್ಭಕ್ಕೊದಗದ ವಸ್ತುವಿನ ನಿರರ್ಥಕತೆಯನ್ನು ಎಷ್ಟು ಚೆನ್ನಾಗಿ ಇಲ್ಲಿ ಹೇಳಿದೆ.

(7) ಎಸಳೆ ಕೊರಿ ನಾಯಿ ಬಿಸಳೆ ನಕ್ಕ್: ನಾಯಿಗೆ ಸಲಿಗೆ ತೋರಿಸಿದರೆ ಅದು ಮನೆಯಲ್ಲಿ ಅಡಿಗೆ ಪಾತ್ರೆಯನ್ನು ನೆಕ್ಕುವುದಂತೆ. ಅಂದರೆ ಅಪಾತ್ರರಲ್ಲಿ ಸಲಿಗೆ ತೋರಿಸಬಾರದು.

(8) ಎರು ಕಂಜಿ ಪಾಡ್‌ಂಡ್ ಕೊಟ್ಯಾಡ್ ಕಟ್ಲೆ: ಎತ್ತು ಕರು ಹಾಕಿತು, ಹಟ್ಟಿಯಲ್ಲಿ ಕಟ್ಟು. ಅಸಂಭವ ಎಂಬುದನ್ನು ಎಣಿಸದೆ ದುಮುಕುವ ಅವಿವೇಕಿಗಳ ವರ್ತನಗೆ ಹೇಳುವ ಸ್ವಾರಸ್ಯವಾದ ನಾಣ್ಣುಡಿಯಿದು.

(9) ಇಡೀ ಮುರ್‌ಂಕ್‌ನಾಯಾಗ್ ಚಳಿ ದಾನೆ: ಇಡಿ ಮುಳುಗಿದವನಿಗೆ ಚಳಿ ಏನು? ಎಲ್ಲ ಮಾನ ಹೋದ ವ್ಯಕ್ತಿಗೆ ಮತ್ತೆ ಭಯವೆತ್ತಣದು ಎಂಬುದೇ ಈ ಮಾತಿನ ಭಾವ.

(10) ಒಗ್ಗಟ್ಟ್‌ಡ್ ಬಲವುಂಡು: ಒಗ್ಗಟ್ಟನಲ್ಲಿ ಬಲವಿದೆ.

(11) ಒಂಜಿ ಕಣ್ ಕಣ್ಣತ್ತ್, ಒರಿ ಮಗೆ ಮಗೆ ಅತ್ತ್: ಒಬ್ಬ ಮಗ ಮಗನಲ್ಲ, ಒಂದು ಕಣ್ಣು ಕಣ್ಣಲ್ಲ.

(12) ಒಡಲ್‌ಡ್ ಪುಟ್ಟೊಡು ಬುದ್ಧಿ ಬೆನ್ನಿಡ್ ಪುಟ್ಟೊಡು ಒರಕೊ: ದೇಹದಲ್ಲಿ ಹುಟ್ಟಬೇಕು ಬುದ್ಧಿ, ಭೂಮಿಯಲ್ಲಿ ಹುಟ್ಟಬೇಕು (ಸಹಜವಾಗಿ) ಒರತೆ. ಎಂಥ ಸುಂದರ ಉದಾಹರಣೆಯಿಂದ ಪ್ರತಿಭೆಯ ಸ್ವರೂಪವನ್ನು ಇಲ್ಲಿ ವಿವೇಚಿಸಲಾಗಿದೆ.

(13) ಕಟ್ಟಿಕೊರಿ ಪೊದಿಕೆಲ ಪಂಡು ಕೊರಿ ಬುದ್ಧಿಲ ಔಡೇಗ್ ಮುಟ್ಟು: ಕಟ್ಟಿಕೊಟ್ಟ ಬುತ್ತಿಯೂ ಹೇಳಿಕೊಟ್ಟ ಬುದ್ಧಿಯೂ ಎಷ್ಟು ದೂರ ಬಂದೀತು? ತನ್ನ ಕಾಲ ಮೇಲೆ ತಾನು ನಿಲ್ಲಬೇಕೆಂಬ ನೀತಿ ಎಷ್ಟು ಚೆನ್ನಾಗಿ ಇಲ್ಲಿ ಸ್ಫುಟವಾಗಿದೆ.

(14) ಕುಡೋಳುಗು ಕಲ್ ಅಡಕ್ಕಿಲೆಕ್ಕೊ: ಕಡುಂದುರು ಗೂಡಿಗೆ ಕಲ್ಲೆಸದ ಹಾಗೆ. ದುಷ್ಟರನ್ನು ಕೆಣಕಿದವರ ಪಾಡು ಇಲ್ಲಿ ವರ್ಣಿತವಾಗಿದೆ.

(15) ಬೇಲೆ ಇದ್ಯಾಂತಿ ಆಚಾರಿ ಬಾಲೆತ ಕಡೆ ಕೆತ್ತ್ಂಡ್: ಕೆಲಸವಿಲ್ಲದ ಬಡಗಿ ಮಗುವಿನ ಅಡಿ (ಆಸನ) ಕೆತ್ತಿದ. ಅಧಿಕ ಪ್ರಸಂಗಿಗಳ ಉಪದ್ರವವನ್ನು ಹೀಗೆ ಭಂಗಪಡಿಸುವುದುಂಟು.

(16) ಬಾಯಿಡ್ ಮಗ ಮಗ ಬಂಜಿಟ್ ಬಗ ಬಗ; ಬಾಯಲ್ಲಿ ಮಗ ಮಗ, ಒಳಗೆ ಬಗ ಬಗ. ವಂಚಕರ ಸೋಗನ್ನು ಹೀಗೆ ವರ್ಣಿಸುವುದು ರೂಢಿ.

(17) ತರೆಕ್ ಮಯ್ತ್ನ ನೀರ್ ಕಾರ್‌ಗ್: ತಲೆಗೆ ಎರೆದ ನೀರು ಕಾಲಿಗೆ. ಕೆಟ್ಟದ್ದು ಮಾಡಿದರೆ ಪರಿಣಾಮ ಅದೇ.

(18) ಪೊರುಳು ಇತ್ನಾಯೆ ಎನ ಕಂಡಾನಿ: ಚಂದ ಇದ್ದವ ನನ್ನ ಗಂಡ. ಶಕ್ತನಾದವನನ್ನು ಎಲ್ಲರೂ ಓಲಯಿಸುವರು.

(19) ಏರೆ ಮಗಳೆ ಪದ್ದೆಯಿ ಎನ್ನ ಮಗಳ ಒಡ್ಡಾರೊ: ಯಾರ ಆಭರಣವೊ ಏನೊ, ನನ್ನ ಮಗಳು ಮಾತ್ರ ಮೆರೆಯುತ್ತಾಳೆ. ಹೆರವರ ಭೂಷಣಗಳಿಂದ (ಎಲ್ಲ ರೀತಿಯಲ್ಲಿಯೂ) ಅಲಂಕೃತರಾಗಿ ಸ್ವಶಕ್ತಿಯಿಲ್ಲದೆ ಜಂಭಮಾಡುವವರ ಪಾಡನ್ನು ಹಳಿಯುವ ರೀತಿ.

(20) ಬಾರ್ ಬಲ್ಲಾಳಾಗ್ ದೂರು ಕುಂಡಬ್ಬಾಗ್: ಭತ್ತ (ನೆಲ್ಲು) ತಿಂದು ಹಾಕಿದಾತ ಬಲ್ಲಾಳ (ಅಧಿಕಾರಿ), ಆದರೆ ಆ ದೂರು ಅಳಿಲಿನ ಮೇಲೆ. ದೊಡ್ಡವ ಮಾಡಿದ ಮೋಸಕ್ಕೆ ಸಾಮಾನ್ಯ ವ್ಯಕ್ತಿಯೊಬ್ಬನನ್ನು ಬಲಿಹಾಕಿದ ಸಂದರ್ಭ ಲೋಕದಲ್ಲಿ ನಾವು ಕಾಣುತ್ತೇವೆ.

(21) ಬಾಲೆತಿ ಅಪ್ಪೆ ಬೇಲೆತ ಕಂಡು-ಪುಟ್ಟ ಮಗುವಿನ ತಾಯಿ ಕೆಲಸದ ಕಳ್ಳಿಯಂತೆ. ಮಗುವಿಗೆ ಮೊಲೆಯೂಡಲಿದೆ ಇತ್ಯಾದಿ ನೆಪದಿಂದ ಆಕೆ ಕೆಲಸದಿಂದ ತಪ್ಪಿಸಿಕೊಳ್ಳುವಳಂತೆ. ತುಂಬ ಶ್ರಮ ವಹಿಸುವ ಬಡಕಾರ್ಮಿಕ ಕುಟುಂಬದ ಕಾರ್ಪಣ್ಯದಿಂದ ಬಂದ ಚಿತ್ರವಿದು.

(22) ಮಿಾಸೆ ಬನ್ನಾಗ ದೇಶ ತೋಜಾಂದ್: ಮಿಾಸೆ ಬರುವಾಗ ದೇಶ ತೋರದು. ತಾರುಣ್ಯದ ಉನ್ಮತ್ತತೆಯ ಪ್ರಕಾರವಿದು.

(23) ನಾಯಿಗ್ ನಾರಂಗಾಯಿತ ಉಪ್ಪಾಡ್: ನಾಯಿಗೆ ಲಿಂಬೆಹಣ್ಣಿನ ಉಪ್ಪಿನಕಾಯಿ. ಅಪಾತ್ರಕ್ಕೆ ಕೊಡುವ ಗೌರವವನ್ನು ಹಳಿಯುವುದು.

(24) ಕಾಳಾಗ್ ಬತ್ತಿ ಬಡು ಬೊಳ್ಳಾಗ್: ಕಾಳನಿಗೆ ಬಿದ್ದ ಬೆತ್ತದೇಟು ಬೊಳ್ಳನಿಗೂ. ಅಂದರೆ ಹೊಲ ಉಳುವ ಸನ್ನಿವೇಶದಿಂದ ಬಂದ ಮಾತು ಇದು. ನೊಗಕ್ಕೆ ಕಟ್ಟಿದ ಎರಡೆತ್ತುಗಳು ಕಾಳ ಮತ್ತು ಬೊಳ್ಳ. ನಡಿಕೆ ಮೆಲ್ಲಗಾಯಿತೆಂದು ಉಳುವಾತ ಕಾಳನಿಗೆ ಮೊದಲು ಕೋಲಿನಿಂದ ಒಂದು ಬಿಗಿದರೆ, ಮತ್ತೆ ಆತ ಬೊಳ್ಳನಿಗೆ ಬಿಗಿದೇ ಬಿಡುವನು. ಬೊಳ್ಳ ತಪ್ಪಿಸಿಕೊಳ್ಳುವಂತಿಲ್ಲ. ಇತರರಂತೆ ತನಗೂ ಕಷ್ಟ ಬರಬಹುದೆಂಬ ಭಯ ಒಬ್ಬನಿಗೆ ಇರಲೇ ಬೇಕು ಎಂಬುದಕ್ಕೆ ಹೇಳುವ ಹಳ್ಳಿಯ ತುಳಗಾದೆ ಇದು.

(25) ಇಟ್ಟೆಲ್‌ಗ್ ಪೋಪಿ ಸಾದಿ ಓಳಿ ಎಂದ್‌ಟ, 'ಏನ್ ಕಾಳಾನ್‌ಲ ಕೊರಾಯೆ ಬೊಳ್ಳಾನ್‌ಲ ಕೊರಾಯೆ' ಎಂದ್ ಪಂಡಿ ಲೆಕ್ಕೊ: ವಿಟ್ಲಕ್ಕೆ ಹೋಗುವ ದಾರಿ ಯಾವುದು ಎಂದು ಕೇಳಿದರೆ, 'ನಾನು ಕಾಳನನ್ನೂ ಕೊಡೆನು, ಬೊಳ್ಳನನ್ನೂ ಕೊಡೆನು' ಎಂದು ಹೇಳಿದಂತೆ. ಕಿವುಡನೊಬ್ಬ ಉಳುವಾತ. ದಾರಿಗ ಆತನಲ್ಲಿ ವಿಟ್ಲಕ್ಕೆ ದಾರಿ ಕೇಳುತ್ತಾನೆ. ಕಿವುಡ ಈತ ತನ್ನ ಎತ್ತುಗಳನ್ನು ಬೆಲೆಗೆ ಕೇಳುವನೆಂದು ಭ್ರಮಿಸಿ, "ಇಲ್ಲ ಯಾವ ಎತ್ತನ್ನು ನಾನು ಕೊಡೆ" ನೆಂದು ಗುಡು

ಗುಡಿಸುವನು. ಈ ನಾಣ್ಣುಡಿಯನ್ನು ಒಂದಕ್ಕೊಂದು ತಪ್ಪಿ ಅಸಂಬದ್ಧ ಪ್ರಲಾಪ ಗೈಯುವ ಬಗೆ ಕಿವುಡರಿಗೆ ಅನ್ವಯಿಸಿ ತುಳುವರು ನುಡಿಯುವರು.

(26) ಮದ್ಮಾಳೆ ಒಟ್ಟ್‌ಗ್ ಚಂಡೀರ್, ಪೆದ್ದೊಳ್ತಿ ಒಟ್ಟ್‌ಗ್ ಬೆಂದ್ರ್: ಮದುಮಗಳ ಜತೆಯಲ್ಲಿ ತಣ್ಣೀರು ಸ್ನಾನ, ಬಾಣಂತಿ ಜತೆಯಲ್ಲಿ ಬಿಸಿನೀರು ಸ್ನಾನ. ದೊರೆತ ಸಂದರ್ಭವನ್ನು ಚೆನ್ನಾಗಿ ಉಪಯೋಗಿಸುವ ಜಾಣರಿಗೆ ಅನ್ವಯಿಸುವ ಗಾದೆ.

(27) ನಿಲಿಕೆ ಕಡ್ಯ ಅಳಂಕಾಂದ್: ತುಂಬಿದ ಕೊಡ ತುಳುಕದು. ಈ ಉದಾತ್ತ ತತ್ವ ಸರ್ವ ವಿದಿತ.

(28) ಪಾಪ್ ಕಡಪ್ಪುನೇಟ ನಾರಾಯಣ ಬುಕ್ಕೊ ಪಾರಾಯಣ: ಪಾಲ ದಾಟುವ ತನಕ ನಾರಾಯಣ ಮತ್ತೆ ಪಾರಾಯಣ (ಓಟ. ತುಳುವಿನಲ್ಲಿ ಪಾರ್ = ಓಡು). ಕೆಲಸವಾದ ಬಳಿಕ ಮರೆತು ಬಿಡುವ ಸ್ವಭಾವದವರನ್ನು ಹೀಗೆ ಹೇಳುವರು.

(29) ತೌಡು ತಿನ್ಪುನಾಯೆ ಪೋಂಟ ಉಮಿ ತಿನ್ಪುನಾಯೆ ಬರ್ಪೆ: ತೌಡು ತಿನ್ನುವಾತ ಹೋದರೆ ಉಮಿ ತಿನ್ನುವಾತ ಬಂದಾನು. ಕೆಟ್ಟವ ಹೋದರೆ ಬರುವಾತ ಮತ್ತೂ ಕೆಟ್ಟವ ಎಂಬ ಅಭಿಪ್ರಾಯ. ಅಂತೆ ಬದಲಾಯಿಸುವುದರಲ್ಲಿ ಉಪಯೋಗವಿಲ್ಲ. ಅನುಭವದಿಂದ ತಿದ್ದುವುದು ಒಳಿತು.

(30) ಅಡಿಕ್ ಬೂರುಂಟಲ ಮುಂಕು ಮಿತ್ತ್: ಅಡಿಗೆ ಬಿದ್ದರೂ ಮೂಗು ಮೇಲೆ. ವಾದದಲ್ಲಿ ಸೋತರೂ ನಿಷ್ಕಾರಣವಾಗಿ ಪಟ್ಟು ಹಿಡಿಯುವವರಿಗೆ ಈ ಗಾದೆಯನ್ನು ಸರ್ವತ್ರ ಉಪಯೋಗಿಸುವರು.

ಇನ್ನು ಎಷ್ಟೋ ಮುತ್ತಿನಂಥ ಮಾತುಗಳಿವೆ. ಮೇಲಿನ ನಾಣ್ಣುಡಿಗಳ ಬೆಡಗನ್ನು ಗಮನಿಸಿದರೆ ತುಳು ಸಾಕಷ್ಟು ಸುಸಂಸ್ಕೃತ ಭಾಷೆ, ತುಳುವರು ಸುಸಂಸ್ಕೃತ ಜನ ಎಂಬ ಅರಿವು ಉಂಟಾಗುವುದು. ಈ ಪ್ರಾಚೀನ ಭಾಷೆಯ ಮಕ್ಕಳು ಅಲ್ಪಸಂಖ್ಯಾತರಾದರೂ ತಮ್ಮ ಉತ್ಸಾಹ, ಸಾಹಸಬುದ್ಧಿ, ವಿದ್ಯಾವಿನಯ ಸಂಪನ್ನತೆ ಇತ್ಯಾದಿ ಗುಣಗಳಿಂದ ಭಾರತದ ಅನೇಕ ಕಾರ್ಯ ಕ್ಷೇತ್ರಗಳಲ್ಲಿ ಯಶಸ್ಸು ಗಳಿಸಿರುತ್ತಾರೆ.

ಎಂ. ಮರಿಯಪ್ಪ ಭಟ್ಟ.

# ದ್ರಾವಿಡ ಸಂಸ್ಕೃತಿ ಮತ್ತು ಭಾಷೆಗಳ ಪ್ರಾಚೀನತೆ

ಹಾಗೂ

# ಅದರ ಸ್ವರೂಪದ ಸ್ಥೂಲ ವಿವೇಚನೆ

ಮಾನವ ಸಮಾಜ ಜೀವಿ. ಆತ ತನ್ನ ಎಲ್ಲಾ ಬೇಕು–ಬೇಡಗಳಿಗೆ ಸಮಾಜದ ಇತರ ಅನೇಕ ಸದಸ್ಯರನ್ನು ಅವಲಂಬಿಸಿರಬೇಕಾಗುತ್ತದೆ. ಹೀಗೆ ಪರಸ್ಪರ ಸಹಕಾರದಿಂದ ಬದುಕಿ ಬಾಳುತ್ತಿರುವ ಮಾನವ ಜನಾಂಗಕ್ಕೆ ಭಾಷೆ ಮಾಡಿರುವ ಮಾಡುತ್ತಿರುವ ಉಪಕಾರ ಅಷ್ಟಿಷ್ಟಲ್ಲ. ಏಕೆಂದರೆ ಮನುಷ್ಯನು ತನ್ನ ನೆರೆಹೊರೆಯವರೊಂದಿಗೆ ವ್ಯವಹಾರ ಮಾಡುವುದಕ್ಕೆ ಭಾಷೆ ಅತ್ಯವಶ್ಯಕವಾದ ಮಾಧ್ಯಮವಾಗಿರುತ್ತದೆ. ಇಂದು ಭಾಷೆಯ ಸಹಾಯವಿಲ್ಲದೆ ನಾವು ಯಾವ ಕಾರ್ಯವನ್ನೂ ಮಾಡುವಂತಿಲ್ಲ.

ಮಾನವನಿಗೂ ಮೃಗಕ್ಕೂ ಇರುವ ವ್ಯತ್ಯಾಸವೇ ಭಾಷೆ. ಆದುದರಿಂದಲೇ ಬರ್ಟ್ರೆಂಡ್ ರಸೆಲ್ ರವರು, "ಭಾಷೆಯೆಂಬುದು ಮಾನವ ಮಾತ್ರವಾದ ಹಕ್ಕು" ಎಂದಿದ್ದಾರೆ. ಮಾನವನ ನಾಗರಿಕತೆಯ ಇತಿಹಾಸದಲ್ಲಿ ಆತ ಭಾಷೆಯ ಉಪಯೋಗವನ್ನು ಮೊತ್ತಮೊದಲಿಗೆ ಕಂಡುಕೊಂಡ ಘಟ್ಟವು ಅತ್ಯಂತ ಮಹತ್ವಪೂರಿತವಾದುದಾಗಿದೆ. ಅದು ಆತನ ಮಹತ್ತರ ಸಿದ್ಧಿಗಳಲ್ಲೊಂದು. " ಶಬ್ದವೆಂಬ ಜ್ಯೋತಿ ಜೀವನದುದ್ದಕ್ಕೂ ಬೆಳಗದಿದ್ದರೆ ಎಲ್ಲವೂ ಕತ್ತಲಿನಲ್ಲಿ ಮುಳುಗಿ ಹೋಗುತ್ತಿತ್ತು" ಎಂಬ ದಂಡಿಯ ಮಾತು ಯುಕ್ತವೇ ಆಗಿದೆ.

ಭಾಷೆಯಿಲ್ಲದಿದ್ದ ಕಾಲದಲ್ಲಿ ಮನುಷ್ಯ ಅನಾಗರಿಕನಾಗಿದ್ದ. ಏಕೆಂದರೆ ನಾಗರಿಕತೆಯಾಗಲಿ, ಸಂಸ್ಕೃತಿಯಾಗಲಿ ಒಂದೆಡೆಯಿಂದ ಮತ್ತೊಂದೆಡೆಗೆ ಹರಡಲು ಭಾಷೆ ಅತ್ಯಂತ ಪ್ರಮುಖವಾದ ಸಾಧನ. ಒಂದು ದೃಷ್ಟಿಯಿಂದ ಭಾಷೆ, ಮೃತ ಹಾಗೂ ಜೀವಂತ ಸಮಾಜಗಳ ನುಡಿಯುವ ಶಾಸನ. "ಒಟ್ಟಿನಲ್ಲಿ ಜನಾಂಗವೊಂದರ ಸಂಪೂರ್ಣ ಪರಿಚಯವಾಗಬೇಕಾದಲ್ಲಿ ಅದರ ಭಾಷೆಯನ್ನು ಗಣನೆಗೆ ತೆಗೆದುಕೊಳ್ಳಬೇಕು"—ಎಂದು ಕ್ರೋಬರ್ ಹೇಳಿರುವ ಮಾತು ಒಪ್ಪತಕ್ಕದ್ದಾಗಿದೆ.

ಸಮಾಜ ಶಾಸ್ತ್ರಜ್ಞರು ಮಾನವನ ವಿಕಾಸವನ್ನು—ಜನಾಂಗ, ಭಾಷೆ ಹಾಗೂ ಸಂಸ್ಕೃತಿ ಎಂಬ ಮೂರು ವಿಭಾಗಗಳಲ್ಲಿ ಗುರುತಿಸಿದ್ದಾರೆ. ಆದರೆ ವೈಜ್ಞಾನಿಕವಾಗಿ ಹೇಳುವುದಾದರೆ ಇವುಗಳಿಗಿರುವ ಪರಸ್ಪರ ಸಂಬಂಧ ಕೇವಲ ಬಾಹ್ಯವಾದುದೇ ಹೊರತು ಆಂತರಿಕವಾದುದಲ್ಲ, ಏಕೆಂದರೆ ಒಂದು ಭಾಷೆಗೂ, ಜನಾಂಗಕ್ಕೂ ಹಾಗೂ ಸಂಸ್ಕೃತಿಗೂ ಅಂತಹ ನಿಕಟವಾದ ಸಂಬಂಧವಿರಬೇಕಾಗಿಲ್ಲ. ಅಲ್ಲದೆ ಒಂದಕ್ಕೊಂದು ಸಂಬಂಧವಿಲ್ಲದ ಭಾಷೆಗಳ ಜನ ಒಂದೇ ಬುಡಕಟ್ಟಿಗೆ ಸೇರಿರುವ ಹಾಗೂ ಒಂದೇ ಸಂಸ್ಕೃತಿಯನ್ನು ರೂಢಿಸಿಕೊಂಡು ಬಂದಿರುವ ಅನೇಕ ಉದಾಹರಣೆಗಳಿವೆ. ಹಾಗೆಂದ ಮಾತ್ರಕ್ಕೆ ಭಾಷೆಗೂ ಸಂಸ್ಕೃತಿಗೂ ಸ್ವಲ್ಪವೂ ಸಂಬಂಧವಿಲ್ಲವೆಂದು ಅರ್ಥವಲ್ಲ. ಜನಾಂಗ ಹಾಗೂ ಭಾಷೆಗೆ ಅತ್ಯಂತ ನಿಕಟವಾದ ಸಂಬಂಧವಿರುವ ಉದಾ

ಹರಣೆಗಳೂ ಸಹ ಇವೆ. ದಕ್ಷಿಣ ಆಫ್ರಿಕಾ ದೇಶದ ಕೆಲವು ಜನಾಂಗಗಳ ಹಾಗೂ ಭಾಷೆಗಳ ಮತ್ತು ಎಸ್ಕಿಮೋ ಪಂಗಡಗಳನ್ನು ಇದಕ್ಕೆ ಉದಾಹರಣೆಯಾಗಿ ಕೊಡಬಹುದು. ಒಂದೇ ಜನಾಂಗಕ್ಕೆ ಸೇರಿದ ಜನ ಒಂದೇ ಭಾಷೆಯನ್ನು ರೂಢಿಸಿಕೊಂಡು ಬರದಿದ್ದರೂ ಅವರ ಸಂಸ್ಕೃತಿಗೂ ಹಾಗೂ ಭಾಷೆಗೂ ಸ್ವಲ್ಪವಾದರೂ ಸಂಬಂಧವಿದ್ದೇ ಇರುತ್ತದೆ. ಒಂದು ಭಾಷೆಯ ವೈವಿಧ್ಯತೆ ಹಾಗೂ ಸಂಪತ್ತು ಆ ಸಂಸ್ಕೃತಿಯನ್ನೇ ಪ್ರತಿಬಿಂಬಿಸುತ್ತದೆ ಎಂಬ ಅಂಶವನ್ನು ಗಮನಿಸಿದರೆ, ಆ ಮಾತು ಮತ್ತೂ ಸ್ಪಷ್ಟವಾದಂತಾಗುತ್ತದೆ. ಹೀಗೆ, ಭಾಷೆ ಹಾಗೂ ಸಂಸ್ಕೃತಿಗಳೆರಡರ ವಿಕಾಸದ ಇತಿಹಾಸ-ಪಥ, ಒಂದಕ್ಕೊಂದು ಹೆಣೆದುಕೊಂಡಿರದಿದ್ದರೂ ಸಹ ಪರಸ್ಪರ ಸಮಾನಾಂತರ ರೇಖೆಗಳಲ್ಲಿ ಜೊತೆ ಜೊತೆಯಲ್ಲಿಯೇ ಪ್ರವಹಿಸುತ್ತಿರುತ್ತದೆ.

ದ್ರಾವಿಡ ಸಂಸ್ಕೃತಿ ಹಾಗೂ ದ್ರಾವಿಡ ಭಾಷೆಗಳು ಸಹ ಮೇಲಿನ ಅಂಶಗಳಿಗೆ ಹೊರತಾಗಿಲ್ಲ. ಈ ದೃಷ್ಟಿಯಿಂದ ಪ್ರಕೃತದಲ್ಲಿ ನಮ್ಮ ಗಮನವನ್ನು ಪ್ರಾಚೀನ ದ್ರಾವಿಡ ಸಂಸ್ಕೃತಿ ಹಾಗೂ ಭಾಷೆಗಳ ಸ್ಥೂಲಸ್ವರೂಪದ ವಿವೇಚನೆಯ ಕಡೆ ಹರಿಸಬಹುದು.

'ದ್ರಾವಿಡ' ಎನ್ನುವ ಪದ ಅತಿ ಪ್ರಾಚೀನವಾಗಿದ್ದು ವ್ಯಾಸ, ಪರಾಶರ, ಮನು ಹಾಗೂ ವರಾಹಮಿಹಿರ ಮುಂತಾದ ಸಂಸ್ಕೃತ ಪುರಾಣಕಾರರಿಂದ ಉಲ್ಲೇಖಿಸಲ್ಪಟ್ಟಿದೆ. ದ್ರಾವಿಡ ಎನ್ನುವ ಪದವನ್ನು, ಒಂದು ಭೂಪ್ರದೇಶ, ಜನಾಂಗ ಹಾಗೂ ಒಂದು ಭಾಷೆಗಳ ಗುಂಪು—ಹೀಗೆ ಮೂರು ಅರ್ಥದಲ್ಲಿ ಪ್ರಧಾನವಾಗಿ ಗುರುತಿಸಿರುವಂತೆ ಕಂಡುಬರುತ್ತದೆ. ಭಾಷಾ ದೃಷ್ಟಿಯಿಂದ ಹೇಳುವುದಾದರೆ ಈ ಪದಕ್ಕೆ ವಿಶಾಲವಾದ ಮತ್ತು ಸಂಕುಚಿತವಾದ ಎರಡು ಅರ್ಥಗಳೂ ಬಳಕೆಯಲ್ಲಿವೆ. ದಕ್ಷಿಣ ಭಾರತದ ಎಲ್ಲ ಭಾಷೆಗಳನ್ನು ಒಳಕೊಳ್ಳುವ ಒಂದು ಭಾಷಾ ಕುಟುಂಬಕ್ಕೇ 'ದ್ರಾವಿಡ ಭಾಷೆಗಳು' ಎಂಬ ಅರ್ಥವಿದೆ, ಮತ್ತು ತಮಿಳಿಗೆ ಮಾತ್ರ ಅನ್ವಯಿಸುವಂಥ ಮತ್ತೊಂದು ಅರ್ಥವೂ ಇದೆ. ಪ್ರಾಚೀನ ಪಾಳಿ ಗ್ರಂಥವಾದ 'ಮಹಾ ವಂಶದಲ್ಲಿ' ತಮಿಳರನ್ನು 'ದಮಿಳ' ಎಂದು ಕರೆದಿದ್ದಾರೆ. ಮುಂದೆ ಇದೇ ಪದ ಸಂಸ್ಕೃತೀಕರಣವಾಗಿ—ದ್ರಮಿಳ, ದ್ರವಿಡ ಹಾಗೂ ದ್ರಾವಿಡ ಎಂದಾಯಿತೆಂದು ಶ್ರೀ ಆರ್. ನರಸಿಂಹಾಚಾರ್ಯರು ಸೂಚಿಸಿದ್ದಾರೆ. ಆರನೆಯ ಶತಮಾನದಲ್ಲಿದ್ದ ವರಾಹಮಿಹಿರನೂ ತನ್ನ 'ಬೃಹತ್ಸಂಹಿತೆ'ಯಲ್ಲಿ 'ದ್ರವಿಡ' ಎಂಬುದಾಗಿಯೇ ಪ್ರಯೋಗಿಸಿರುವಂತೆ ತಿಳಿದು ಬರುತ್ತದೆ. ಮುಂದೆ 'ತಮಿೞ್' ಎನ್ನುವ ಪದವೂ ಸಹ ಸಂಸ್ಕೃತದಿಂದಲೇ ತಮಿಳಿಗೆ ಬಂದಿರುವಂತೆ ಕಂಡುಬರುತ್ತದೆ. ದ್ರಾವಿಡ ಎನ್ನುವ ಪದದ ಪ್ರಾಚೀನ ಅರ್ಥ ಏನೇ ಇದ್ದರೂ ಸಹ ಈಗ ಪ್ರಚಲಿತವಿರುವ ಅರ್ಥ ಇಡೀ ಒಂದು ಭಾಷಾ ಕುಟುಂಬಕ್ಕೆ ಅನ್ವಯಿಸುವ ರೀತಿಯಲ್ಲಿದೆ.

ದ್ರಾವಿಡರು ಭಾರತದ ಮೂಲ ನಿವಾಸಿಗಳೇ ಅಥವಾ ಹೊರಗಿನಿಂದ ಬಂದವರೇ ಎಂಬುದೊಂದು ಬಗೆಹರಿಯದ ಸಮಸ್ಯೆಯಾಗಿದೆ. ಪಾಶ್ಚಾತ್ಯ ಹಾಗೂ ಪೌರಾತ್ಯ ವಿದ್ವಾಂಸರಲ್ಲಿ ಈ ಬಗ್ಗೆ ಸಾಕಷ್ಟು ಚರ್ಚೆ ನಡೆದಿದ್ದರೂ ಸ್ಪಷ್ಟ ತೀರ್ಮಾನಕ್ಕೆ ಬರಲು ಯಾರಿಗೂ ಸಾಕಷ್ಟು ಆಧಾರಗಳಿಲ್ಲವೆಂದೇ ಹೇಳಬೇಕಾಗಿದೆ.

ಪ್ರಾಚೀನ ತಮಿಳು ಸಾಹಿತ್ಯದ ಪ್ರಕಾರ ದ್ರಾವಿಡರ ಮೂಲ ನಿವಾಸಸ್ಥಾನ 'ಲೆಮೂರಿಯಾ'. ಈಗ ಪೆಸಿಫಿಕ್ ಸಾಗರವಿರುವ ಪ್ರದೇಶವೆಲ್ಲಾ ಒಂದು ಕಾಲದಲ್ಲಿ ದೊಡ್ಡ ಭೂಖಂಡವಾಗಿದ್ದು ಅನೇಕ ಪ್ರಾಕೃತಿಕ ಕ್ರಾಂತಿಗಳಿಂದಾಗಿ ಆ ಪ್ರದೇಶವೆಲ್ಲಾ ಜಲಾವೃತ್ತವಾಗಿ ಈ ಲೆಮೂರಿಯಾ

ಭೂಖಂಡವು ಮುಚ್ಚಿಹೋಯಿತೆಂದು ಭೂಗರ್ಭ ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಪ್ರಾಚೀನ ದ್ರಾವಿಡರು ಇದೇ ಪ್ರದೇಶದಲ್ಲಿದ್ದು ಬಳಿಕ ಸುರಕ್ಷಿತ ವಾದ ಸ್ಥಳಗಳಿಗೆ ಅಳಿದುಳಿದ ಜನ ವಲಸೆ ಹೋಗಿ, ದಕ್ಷಿಣ ಭಾರತ ಹಾಗೂ ಮಧ್ಯ ಭಾರತದಲ್ಲಿ ನೆಲಸಿ ಮುಂದೆ ತಮ್ಮ ಸಂಸ್ಕೃತಿಯನ್ನು ಬಳಸಿಕೊಂಡ ರೆಂದು ಒಂದು ಪಂಥದವರ ನಂಬಿಕೆ. ಆದರೆ ಅದಕ್ಕೆ ತದ್ವಿರುದ್ಧವಾಗಿ ಕೆಲವು ವಿದ್ವಾಂಸರು, ದ್ರಾವಿಡರು ಭಾರತದ ಮೂಲನಿವಾಸಿಗಳಾಗಿರದೆ ಹೊರಗಿನಿಂದ ಬಂದವರೆಂಬ ಅಭಿಪ್ರಾಯವುಳ್ಳವ ರಾಗಿದ್ದಾರೆ. ದ್ರಾವಿಡರ ಮೂಲ ಪುರುಷರು ಪ್ರಾಚೀನ ಅಕೇಡಿಯನ್ ಜನಾಂಗವಾಗಿದ್ದು— ಅವರು ಏಷ್ಯಾಮೈನರ್ ಪ್ರದೇಶದಿಂದ ಭಾರತಕ್ಕೆ ಬೊಲಾನ್ ಕಣಿವೆ ಮುಖಾಂತರ ಹಾದು ಬಂದ ರೆಂದೂ, ಮಧ್ಯೆ ಬೆಲೂಚಿಸ್ಥಾನದಲ್ಲಿ ಕೆಲವರು ಉಳಿದು, ಮುಂದುವರಿದು ಬಂದವರು ಸಿಂಧೂ ನದಿಯ ಬಯಲು ಪ್ರದೇಶದಲ್ಲಿ ನೆಲಸಿದರೆಂದೂ, ಮುಂದೆ ಇದೇ ಜನ ಹರಪ್ಪಾ ಹಾಗೂ ಮೊಹೆಂ ಜದಾರೋ ಸಂಸ್ಕೃತಿಗೆ ಕಾರಣರಾದರೆಂದೂ ಈ ಪಂಥದವರ ನಂಬಿಕೆಯಾಗಿದೆ. ಹೀಗೆ ಈ ಎರಡು ಪಂಥದವರ ಮಧ್ಯೆ ದ್ರಾವಿಡರ ಉಗಮದ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ ಕೂಡ, ದ್ರಾವಿಡರು ಆರ್ಯರಿಗಿಂತ ಪ್ರಾಚೀನ ಜನಾಂಗವಾಗಿದ್ದು, ಆರ್ಯರು ಭಾರತಕ್ಕೆ ಬರುವ ಹೊತ್ತಿಗಾಗಲೇ ಬಹು ಶ್ರೇಷ್ಠ ಮಾದರಿಯ ನಾಗರಿಕತೆಯನ್ನು ಬೆಳೆಸಿಕೊಂಡಿದ್ದ ರೆಂದು ಒಮ್ಮತದಿಂದ ಒಪ್ಪಿಕೊಂಡಿರುತ್ತಾರೆ.

ಡಾ. ಕಾಲ್ಡ್‌ವೆಲ್‌ರವರು ಪ್ರಾಚೀನ ತಮಿಳು ಸಾಹಿತ್ಯದ ಆಧಾರದ ಮೇಲೆ ಆರ್ಯ ಪೂರ್ವದ ದ್ರಾವಿಡ ಸಂಸ್ಕೃತಿ ಹಾಗೂ ನಾಗರಿ ಕತೆಯ ಬಗ್ಗೆ ಕೆಲವು ಊಹೆಗಳನ್ನು ನಡೆಸಿ ರುತ್ತಾರೆ. ಅವರ ಅಭಿಪ್ರಾಯದಂತೆ ಪ್ರಾಚೀನ ದ್ರಾವಿಡರು ಚಿಕ್ಕ ಪುಟ್ಟ ರಾಜರು ಅಥವಾ ಪಾಳೆಯ ಗಾರರಿಂದ ಆಳಲ್ಪಡುತ್ತಿದ್ದು, ಕೋಟೆ ಕೊತ್ತಳ ಗಳನ್ನು ಕಟ್ಟಿಕೊಂಡಿದ್ದರೆಂದೂ ಓಲೆಯಗರಿಯ ಮೇಲೆ ತಮ್ಮ ಸಾಹಿತ್ಯವನ್ನು ಬರೆದಿಡುತ್ತಿದ್ದ ರೆಂದೂ ತಿಳಿದುಬರುತ್ತದೆ. 'ಕೋ' ಎಂಬುದಾಗಿ ತಮ್ಮ ದೇವರನ್ನು ಕರೆಯುತ್ತಿದ್ದ ಈ ಪ್ರಾಚೀನ ಜನಾಂಗದವರು ತಮ್ಮ ದೇವರಿಗಾಗಿ ಕೋಯಿಲ್ (ಗುಡಿ) ಗಳನ್ನು ಕಟ್ಟಿಸುತ್ತಿದ್ದರೆಂದೂ, ಅವರ ಸಮಾಜದ ಕಟ್ಟುಪಾಡುಗಳು ಭದ್ರವಾಗಿದ್ದು ಅವುಗಳ ರಕ್ಷಣೆಗಾಗಿ ನ್ಯಾಯಾಧೀಶರುಗಳೂ ಸಹ ಇದ್ದರೆಂದು ತಿಳಿದುಬರುತ್ತದೆ. ವ್ಯವಸಾಯ ಹಾಗೂ ಯುದ್ಧ ಕಲೆಯಲ್ಲಿ ನಿಪುಣರಾಗಿದ್ದ ಇವರಿಗೆ ಸಿಲೋನ್ ಹೊರತು ಮತ್ತಾವ ವಿದೇಶಿ ರಾಜ್ಯಗಳ ಸಂಪರ್ಕವೂ ಇರಲಿಲ್ಲವೆಂದು ಹೇಳುತ್ತಾರೆ. ಆರ್ಯರು ಭಾರತಕ್ಕೆ ಬರುವುದಕೆ ಬಹು ಮುಂಚೆಯೇ ತಮ್ಮ ಸಂಸ್ಕೃತಿಯ ಪ್ರಗತಿ ಪಥದಲ್ಲಿ ದ್ರಾವಿಡರು ಬಹು ದೂರ ಮುನ್ನಡೆದಿದ್ದರೆಂಬ ಅಂಶ ಇದರಿಂದ ವ್ಯಕ್ತ ವಾಗುತ್ತದೆ. ಇತ್ತೀಚೆಗೆ ಅಂದರೆ ಈ ಶತಮಾನದ ಆದಿಭಾಗದಲ್ಲಿ ಹರಪ್ಪ ಮತ್ತು ಮೊಹೆಂಜ ದಾರೋ ಪ್ರದೇಶದಲ್ಲಿ ನಡೆಸಿದ ಭೂಶೋಧನೆ ಯಿಂದ ಈ ವಿಚಾರದ ಮೇಲೆ ಒಂದು ಹೊಸ ಬೆಳಕು ಬಿದ್ದಿದೆಯೆನ್ನಬಹುದಾಗಿದೆ.

ಭಾರತದ ಈಶಾನ್ಯ ಭಾಗದಲ್ಲಿನ 'ರಾವಿ' ನದಿಯ ದಂಡೆಯಲ್ಲಿ ಮೊದಲು ಹರಪ್ಪಾದಲ್ಲಿಯೂ ಬಳಿಕ ಸಿಂಧೂ ನದಿಯ ಬಯಲಿನಲ್ಲಿರುವ ಮೊಹೆಂಜದಾರೋವಿನಲ್ಲಿಯೂ ನಡೆಸಿದ ಭೂ ಗರ್ಭ ಶೋಧನೆಯ ಫಲವಾಗಿ ಬೆಳಕಿಗೆ ಬಂದಿರುವ ಈ ಎರಡು ಪ್ರಾಚೀನ ನಗರಗಳು ಇತಿಹಾಸ ಕಾರರಿಗೆ ಒಂದು ಹೊಸ ದೃಷ್ಟಿಯನ್ನು ತಂದು ಕೊಟ್ಟವೆ. ಈ ಸಂಶೋಧನೆಯ ಬಳಿಕ ಪ್ರಾಚೀನ ಇತಿಹಾಸ ಸಂಗತಿಗಳ ಬಗ್ಗೆ ಅಲ್ಲಿಯ ವರೆಗೆ ಪ್ರಚಲಿತವಿದ್ದ ಎಷ್ಟೋ ನಂಬಿಕೆಗಳು ಬುಡ ಮೇಲಾಗಿವೆಯೆಂದರೂ ತಪ್ಪಾಗಲಾರದು. ಪರಸ್ಪರ ಇನ್ನೂರು ಮೈಲಿ ಅಂತರದಲ್ಲಿರುವ ಈ

ಎರಡು ನಗರಗಳೂ ಒಂದೇ ಸಾಮ್ರಾಜ್ಯದ ಎರಡು ರಾಜಧಾನಿಗಳಾಗಿದ್ದಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ—Stuart Piggot ಎಂಬ ಮಹಾಶಯರು ಹೀಗೆ ಹೇಳಿದ್ದಾರೆ :— As we shall see, there is no evidence to imply that the cities of Harappa and Mohenjadaro were not contemporary; laid to a common ground plan, each with its defenced citadel towering above the rest of the town, they seem to have been twin capitals a northern and a southern, of one united kingdom". ಬ್ರಿಟಿಷ್ ಮ್ಯೂಸಿಯಂನ ಮುಖ್ಯಾಧಿಕಾರಿಗಳಾಗಿದ್ದ ಡಾ. ಹಾಲ್‌ರವರು ಕೂಡ ಈದೇ ಅಭಿಪ್ರಾಯವನ್ನು ಹೊಂದಿದ್ದು, ಮದ್ರಾಸ್ ಪ್ರಾಂತದ ತಿನ್ನವೆಲ್ಲಿ ಜಿಲ್ಲೆಯ ಅತ್ತಿತ್ತ ನೆಲ್ಲೂರಿನಲ್ಲಿ ದೊರೆಕಿರುವ ಪ್ರಾಚೀನ ಅವಶೇಷಗಳೂ ಸಹ ಹರಪ್ಪ ಮೊಹೆಂಜ ದಾರೋ ಸಂಸ್ಕೃತಿಯ ರೀತಿಯನ್ನು ಹೋಲುತ್ತವೆಂದು ಅಭಿಪ್ರಾಯ ಪಡುತ್ತಾರೆ.

ಹರಪ್ಪಾ ಮತ್ತು ಮೊಹೆಂಜಾದಾರೋ ಸಂಸ್ಕೃತಿಯು, ಆರ್ಯ ಪೂರ್ವ–ಅಂದರೆ ಕ್ರಿ. ಪೂ. 3500ರ ಕಾಲಕ್ಕೆ ಸೇರಿರುವ–ದ್ರಾವಿಡ ಸಂಸ್ಕೃತಿಯೆಂದು ಫಾದರ್ ಹೆರಾಸ್, ಸರ್‌ಜಾನ್ ಮಾರ್ಷಲ್ ಮುಂತಾದವರೆ ಒಪ್ಪಿರುತ್ತಾರೆ. ಈ ಸಂಸ್ಕೃತಿ ಬೆಲೂಚಿಸ್ಥಾನ, ಸುಮೇರಿಯಾ, ಮೆಸೊಪಟೋಮಿಯಾದ ಸಮಕಾಲೀನ ನಾಗರಿಕತೆಗಳನ್ನು ಹೋಲುತ್ತಿರುವ ಅನೇಕ ಆಧಾರಗಳು ದೊರಕಿರುವುದರಿಂದ ದ್ರಾವಿಡರು ಸುಮೇರಿಯಾದಿಂದಲೇ ಬಂದಿರಬೇಕೆಂದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಈ ಊಹೆಯನ್ನು ಒಪ್ಪದ ಡಾ. ಹಾಲ್‌ರವರು ತಮ್ಮದೇ ಆದ ಬೇರೆ ಅಭಿಪ್ರಾಯವನ್ನು ಮಂಡಿಸಿರುತ್ತಾರೆ. "The ethnic type of the Sumerians, so strongly marked in their statues and relicts was as different from those of the races which surrounded them as was their language from those of the Semites, Aryans or others. They were decidedly Indian in type. The face type of the average Indian of today is no doubt much the same as that of his Dravidian race-ancestors thousands of years ago. Among the modern Indians as amongst the modern Greeks or Italians, the ancient Pre-Aryan type of the head has survived, while that of the Aryan Conqueror died out long ago. And it is to this Dravidian ethnic type of India that the ancient Sumerian bears most resemblance, so far as we can judge from his monuments. He was very like a southern Hindu of the 'Decca'. (who still speaks Dravidian Languages) And it is by no means improbable that the Sumerians were an Indian tribe which passed, certainly by land, perhaps also by sea, through Persia to the valley of the two rivers. It was in the Indian home (perhaps the Indus valley) that we suppose their culture was developed".— ಶ್ರೇಷ್ಠಮಟ್ಟದ ವಿದ್ವಾಂಸರಿಂದ ಈ ದಿಸೆಯಲ್ಲಿ

ಇನ್ನೂ ಹೆಚ್ಚಿನ ಸಂಶೋಧನೆ ನಡೆದ ಪಕ್ಷಕ್ಕೆ ಸುಮೇ-ರಿಯಾದ ನಾಗರಿಕತೆಯೇ ಪ್ರಾಚೀನ ದ್ರಾವಿಡರ ನಾಗರಿಕತೆಯಿಂದ ಪ್ರಭಾವಿತವಾಗಿರಬಹುದೆಂಬ ಅಂಶ ಸ್ಪಷ್ಟವಾಗಬಹುದೆಂದು ತೋರುತ್ತದೆ. ಹಾಗಿದ್ದ ಪಕ್ಷಕ್ಕೆ ಈಗ ನಮ್ಮ ಗಮನಕ್ಕೆ ಬಿದ್ದಿರುವ ಮಾನವ ಜನಾಂಗದ ಶ್ರೇಷ್ಠರೀತಿಯ ಪ್ರಾಚೀನ ನಾಗರಿಕತೆಗಳಿಗೆಲ್ಲಾ ದ್ರಾವಿಡ ನಾಗರಿಕತೆ ಪ್ರಾಚೀನತಮವಾಗಿರುವುದರಲ್ಲಿ ಸಂಶಯವಿಲ್ಲವೆಂದು ಹೇಳಬಹುದಾಗಿದೆ.

ಹರಪ್ಪಾ ಮೊಹೆಂಜದಾರೋ ನಾಗರಿಕ-ತೆಯು ಅದರ ಪರಿಪೂರ್ಣಸ್ಥಿತಿಯಲ್ಲಿದ್ದಾಗಲೇ ನಾಶಹೊಂದಿರುವಂತೆ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅಲ್ಲಿ ಸಿಕ್ಕಿರುವ ಶಿಲೆಗಳ ಮತ್ತು ಮಡಕೆಗಳ ಮೇಲೆ ಕೊರೆದಿರುವ ಚಿತ್ರಗಳು ಸಂಕೇತ ರೂಪದಲ್ಲಿದ್ದು ಅವರ ಶ್ರೇಷ್ಠಮಟ್ಟದ ಕಲಾಭಿಜ್ಞತೆಯನ್ನು ವ್ಯಕ್ತಪಡಿಸುತ್ತಿವೆ. ಹರಪ್ಪಾ ಮತ್ತು ಮೊಹೆಂಜದಾರೋ—ಎರಡು ನಗರಗಳ ರಚನೆಯೂ ಒಂದೇ ರೀತಿಯದಾಗಿದ್ದು ಅವೆರಡೂ ನದಿಯ ದಂಡೆಯಲ್ಲಿಯೇ ಕಟ್ಟಲ್ಪಟ್ಟಿರುವುದು ಗಮನಾರ್ಹ. ಏಕೆಂದರೆ ಯಾವ ಉತ್ತಮ ಸಂಸ್ಕೃತಿ ಬೆಳೆಯಬೇಕಾದರೂ ವ್ಯವಸಾಯಕ್ಕೆ ಅನುಗುಣವಾದ ಫಲವತ್ತಾದ ಭೂಮಿ ಹಾಗೂ ನೀರಿನ ಆಸರೆ, ಇವೆರಡೂ ಅನಿವಾರ್ಯ. ಈ ಅನುಕೂಲತೆ ಸಿಂಧೂನದಿಯ ಬಯಲಿನಲ್ಲಿ ಯಥೇಚ್ಛವಾಗಿದ್ದುದರಿಂದಲೇ ಅಲ್ಲ ಅಂತಹ ಶ್ರೇಷ್ಠ ಮಟ್ಟದ ನಾಗರಿಕತೆ ಬೆಳೆಯಲು ಕಾರಣವಾಯಿತು. ಎರಡೂ ನಗರಗಳ ಚರಂಡಿ ವ್ಯವಸ್ಥೆ, ಒಂದೊಂದು ಮನೆಯ ಮುಂದೂ ಇರುವ ಸ್ನಾನಗೃಹಗಳು ಹಾಗೂ ನೀರಿನ ವ್ಯವಸ್ಥೆಗಾಗಿ ತೋಡಿರುವ ಭಾವಿಗಳು, ಮತ್ತು ಕಕ್ಕಸಿನ ಮಾದರಿಗಳಿಂದ—ಹರಪ್ಪಾ ಸಂಸ್ಕೃತಿಯ ಜನ ಆರೋಗ್ಯ ಹಾಗೂ ಶುಚಿತ್ವದ ಕಡೆಗೆ ಹೆಚ್ಚು ಗಮನವನ್ನಿಟ್ಟುಕೊಂಡಿದ್ದ ಸುಸಂಸ್ಕೃರಾದ ಜನಗಳೆಂದು ವ್ಯಕ್ತವಾಗುತ್ತದೆ. ಆನೆ, ಒಂಟೆ, ಕುದುರೆ, ಎತ್ತು, ಆಡು, ಹಂದಿ, ನಾಯಿ, ಬೆಕ್ಕು ಮುಂತಾದ ಪ್ರಾಣಿಗಳನ್ನು ಪಳಗಿಸಿ ತಮ್ಮ ಕೆಲಸಗಳಿಗೆ ಅವುಗಳನ್ನು ಬಳಸಿಕೊಳ್ಳುತ್ತಿದ್ದರೆಂದೂ—ಅಲ್ಲಿ ಸಿಕ್ಕಿರುವ ಅವಶೇಷಗಳ ಮೇಲಿನ ಚಿತ್ರಗಳಿಂದ ವ್ಯಕ್ತವಾಗುತ್ತದೆ. ಅವರು ಕಟ್ಟಿರುವ ಗೃಹಗಳ ಮಾದರಿಗಳು ಹಾಗೂ ಸಾರ್ವಜನಿಕ ಸ್ನಾನದ ಕೊಳ ಮತ್ತು ಮಂದಿರಗಳು ಅತ್ಯಾಧುನಿಕ ರೀತಿಯ ಮಾದರಿಯಲ್ಲಿದ್ದು ಅವುಗಳ ಕಟ್ಟಡಕ್ಕೆ ಸುಟ್ಟ ಇಟ್ಟಿಗೆಯನ್ನೇ ಉಪಯೋಗಿಸಿರುವುದು ಆಶ್ಚರ್ಯಕರವಾದ ಅಂಶವಾಗಿದೆ. ನಗರದ ನೈರ್ಮಲ್ಯ ಹಾಗೂ ಸೌಂದರ್ಯದ ರಕ್ಷಣೆಗಾಗಿ ನಾಗರೀಕರ ಆಡಳಿತ ಮಂಡಲಿಗಳೂ, ನ್ಯಾಯವಿತರಣೆಗಾಗಿ ನ್ಯಾಯಾಧೀಶರೂ ಇದ್ದರೆಂದು ಊಹಿಸಿ, ಹರಪ್ಪಾ ಸಂಸ್ಕೃತಿಯ ಜನರ ರಾಜ್ಯಾಡಳಿತ, ಏಕಪ್ರಭುತ್ವಕ್ಕಿಂತ ಪ್ರಜಾಪ್ರಭುತ್ವದ ಮಾದರಿಯನ್ನು ಹೋಲುತ್ತಿದ್ದಿರಬಹುದೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಹರಪ್ಪಾ ಮೊಹೆಂಜದಾರೋ ಜನ ಸುಸಂಸ್ಕೃತರಾಗಿದ್ದ ನಾಗರಿಕರೇ ಹೊರತು, ಯುದ್ಧಕಲೆಯಲ್ಲಿ ನಿಷ್ಣಾತರಾಗಿರಲಿಲ್ಲವೆಂದು ಹೇಳಬಹುದಾಗಿದೆ. ಏಕೆಂದರೆ ಅಲ್ಲಿ ಸಿಕ್ಕಿವೆಯೆಂದು ತಿಳಿದು ಬಂದಿರುವ ಆಯುಧ ಸಾಮಗ್ರಿಗಳು ತೀರಾ ಅಲ್ಪ ಪ್ರಮಾಣದಲ್ಲಿದ್ದು ಕೀಳು ದರ್ಜೆಯ ರೀತಿಯವುಗಳಾಗಿವೆ. ಕೇವಲ ವ್ಯವಸಾಯ ಹಾಗೂ ಕುಶಲ ಕಲೆಗಳಿಗೇ ಗಮನ ಕೊಟ್ಟು ಯುದ್ಧಕಲೆಯನ್ನು ಚೆನ್ನಾಗಿ ರೂಢಿಸಿಕೊಳ್ಳದ ಆ ಜನ ಅದರ ಪ್ರತಿಫಲವನ್ನು ಅನುಭವಿಸಬೇಕಾಗಿ ಬಂದದು ಬಹುಶಃ ಕ್ರಿ. ಪೂ. ೨೦೦೦ ವರ್ಷಗಳ ಸುಮಾರಿನಲ್ಲಿ ಎಂದು ತೋರುತ್ತದೆ. ಮಧ್ಯ ಏಷ್ಯಾದಿಂದ ಬೆಲೂಚಿಸ್ಥಾನದ ಮಾರ್ಗವಾಗಿ ಅಲ್ಲಿನ ನಗರ ನಾಗ

ರಿಕತೆಗಳನ್ನು ಸುಟ್ಟು ನೆಲಸಮನೂಡಿ, ಭಾರತದ ಕಡೆಗೆ ಬೋಲಾನ್ ಹಾಗೂ ಖೈಬರ್ ಕಣಿವೆಗಳ ಮುಖಾಂತರ ಹಾದು, ನುಗ್ಗಿ ಬಂದ, ಅನಾಗರಿಕ ಆದರೆ ಯುದ್ಧ ಕಲೆಯಲ್ಲಿ ತುಂಬಾ ನಿಷ್ಣಾತ ರಾಗಿದ್ದ ಆರ್ಯರೇ ಹರಪ್ಪ ಮೊಹೆಂಜದಾರೋ ಸಂಸ್ಕೃತಿಯನ್ನು ನಾಶಪಡಿಸಲು ಕಾರಣರಾದ ರೆಂದು ಎಲ್ಲ ವಿದ್ವಾಂಸರ ಅಭಿಪ್ರಾಯವಾಗಿದೆ. ಈ ಅನಾಗರಿಕ ಜನ ಹಾಗೂ ಅವರ ಆಕ್ರಮಣ ವನ್ನು ಒಬ್ಬ ಇತಿಹಾಸಕಾರ "A host whose onslaught was like a hurricane, a people who had never known a city"—ಎಂದು ಬಣ್ಣಿಸಿದ್ದಾನೆ. ಈ ಜನ ಬೇರೆ ಮತ್ತಾರು ಆಗಿರದೆ ಆರ್ಯರೇ ಎಂದು ಹೇಳಲು ಸಾಕಷ್ಟು ಆಧಾರಗಳು ಋಗ್ವೇದದ ಮಂತ್ರಗಳಿಂದಲೇ ಸಿಕ್ಕಿದೆ. ಹೀಗೆ ಪ್ರಪಂಚದ ನಾಗರಿಕತೆಗಳಿಗೆಲ್ಲಾ ಪ್ರಾಚೀನತಮವಾಗಿದ್ದು ಮಿಕ್ಕೆಲ್ಲ ಶ್ರೇಷ್ಠದರ್ಜೆಯ ನಾಗರಿಕತೆಗಳ 'ಮೂಲಜ್ಯೋತಿ' ಯಂತಿದ್ದ ಹರಪ್ಪಾ ಮತ್ತು ಮೊಹೆಂಜದಾರೋವಿನ ದ್ರಾವಿಡ ಸಂಸ್ಕೃತಿಯ ಅಂತ್ಯ ದುರಂತಮಯವಾಗಿದೆ. ಇಡೀ ಪ್ರದೇಶ ವನ್ನೆಲ್ಲಾ ವೈರಿಗಳು ಸುಟ್ಟು ನೆಲಸಮ ಮಾಡಿ ದ್ದರೂ ಸಹ, ಇಂದಿಗೂ ಅಲ್ಲಿ ಅಳಿದುಳಿದಿರುವ ಶ್ರೇಷ್ಠ ಮಾದರಿಯ ಕುರುಹುಗಳು ಅಂದಿನ ಉನ್ನತ ಮಟ್ಟದ ಜನ ಜೀವನಕ್ಕೆ ಮೂಕಸಾಕ್ಷಿ ಯಂತೆ ನಿಂತಿವೆ. ಸಾವಿರಾರು ವರ್ಷಗಳು ಬಾಳಿ ಬದುಕಿ, ಬೆಳೆದ ಒಂದು ಮಹಾನಾಗರೀಕತೆಯ ಅಂತ್ಯ—ಆ ಜನಗಳು ತೀರಾ ಸುಸಂಸ್ಕೃತ ರಾಗಿದ್ದ ಕಾರಣದಿಂದಲೇ ಆಯಿತೆಂಬ ಅಂಶ ವಂತೂ ಅತೀವ ಸಂಕಟವನ್ನುಂಟುಮಾಡು ವಂತಹುದಾಗಿದೆ ಎನ್ನಬಹುದು.

ಪ್ರಾಚೀನ ದ್ರಾವಿಡ ಜನಾಂಗದವರು ಕೇವಲ ಉತ್ತಮ ಮಟ್ಟದ ನಾಗರಿಕರು ಮಾತ್ರ ವಾಗಿರದೆ ಉತ್ತಮ ಮಟ್ಟದ ವ್ಯಾಪಾರಿಗಳೂ ಆಗಿದ್ದರೆಂಬುದು ಗಮನಾರ್ಹವಾದ ಸಂಗತಿ ಯಾಗಿದೆ. ಸಿಂಧೂ ಕಣಿವೆ ಸಂಸ್ಕೃತಿಯ ಜನ ಈ ಹಿಂದೆಯೂ ತಿಳಿಸಿರುವಂತೆ ಪ್ರಾಚೀನ ಸುಮೇ ರಿಯಾ ಹಾಗೂ ಈಜಿಪ್ಟ್ ಮುಂತಾದ ದೇಶ ಗಳೊಡನೆ ನಿಕಟವಾದ ಸಂಪರ್ಕವನ್ನು ಹೊಂದಿದ್ದು ಅವರೊಂದಿಗೆ ವ್ಯಾಪಾರೋದ್ಯಮ ವನ್ನು ನಡೆಸುತ್ತಿದ್ದರೆನ್ನಲು ಬಲವಾದ ಆಧಾರ ಗಳು ಎರಡು ಕಡೆಯಲ್ಲೂ ದೊರೆತಿವೆ. ಹೊರ ನಾಡಿಗೆ ಹಿಂದಿನ ಕಾಲದಲ್ಲಿ ರಫ್ತಾಗುತ್ತಿದ್ದ ಮಸ್ಲಿನ್ ಬಟ್ಟೆಯಲ್ಲಿನ 'ಮಸ್ಲಿನ್' ಎಂಬ ಶಬ್ದವು ದ್ರಾವಿಡ ಪದವಾದ 'ಚಿಂದಿ' ಯಿಂದಲೇ ಬಂದಿದೆ ಯೆಂಬ ಒಂದು ಊಹೆಯೂ ಇದೆ. ತೇಗ, ಮಸ್ಲಿನ್, ಚಿನ್ನ, ಬೆಳ್ಳಿ ಹಾಗೂ ಇತರೆ ಲೋಹ ಗಳು ಇಲ್ಲಿಂದ ಹೋಗುತ್ತಿದ್ದ ವಸ್ತುಗಳಲ್ಲಿ ಪ್ರಾಮುಖ್ಯತೆ ಪಡೆದಿವೆ. ವೇದದ ಮಂತ್ರಗಳಿಂದ, ಆರ್ಯರೂ ಸಹ ವಿದೇಶಗಳೊಂದಿಗೆ ವ್ಯಾಪಾರ ಸಂಪರ್ಕವನ್ನಿಟ್ಟು ಕೊಂಡಿದ್ದರೆಂಬ ಸಂಗತಿ ವ್ಯಕ್ತವಾಗುತ್ತದೆ. ಅವರಿಗಿಂತ ಪ್ರಾಚೀನರಾದ ದ್ರಾವಿಡರಿಂದಲೇ ಬಹುಶಃ ಆರ್ಯರು ಈ ವ್ಯಾಪಾರೋದ್ಯಮ ಹಾಗೂ ಸಾಗರ ಪ್ರಯಾಣ ವನ್ನು ಕಲಿತಿರಬೇಕೆಂಬು ಊಹಿಸಲವಕಾಶವಿದೆ.

ದಕ್ಷಿಣ ಭಾರತ ಹಾಗೂ ದ್ರಾವಿಡ ಜನಾಂಗದ ಬಗ್ಗೆ ಸಂಸ್ಕೃತದ ಪ್ರಾಚೀನ ಸಾಹಿತ್ಯ ದಲ್ಲಿ ಆದಿಯಿಂದಲೂ ಅಲ್ಲಲ್ಲಿ ಉಲ್ಲೇಖಿಸಿರುವುದು, ದ್ರಾವಿಡ ಸಂಸ್ಕೃತಿ ಬಗ್ಗೆ ಅಭ್ಯಾಸಮಾಡುವ ಪ್ರತಿಯೊಬ್ಬರ ಗಮನವನ್ನೂ ಸೆಳೆಯುವ ಅಂಶ ವಾಗಿದೆ. ಋಗ್ವೇದದ ಮಂತ್ರಗಳಲ್ಲಿಯಂತೂ ಈ ಜನಗಳೊಡನೆ ಆರ್ಯರು ಹೋರಾಡಬೇಕಾಗಿ ಬಂದ ಸಂದರ್ಭವನ್ನೂ ಹಾಗೂ ಹಾಗೆ ಹೋರಾ ಡಲು ಶಕ್ತಿಯನ್ನೂ ಕೊಡಲು ದೇವರನ್ನು ಪ್ರಾರ್ಥಿ ಸಿರುವ ಉದಾಹರಣೆಗಳು ಹಲವಿವೆ. ವೇದಗಳ

ಮಂತ್ರಗಳಲ್ಲಿ 'ದಸ್ಯು' ಗಳೆಂದು ಕರೆಯಲ್ಪಟ್ಟಿರುವ ಈ ಜನಗಳನ್ನು ಋಷಿಗಳು, ತುಂಬಾ ಕೀಳು ದರ್ಜೆಯ ಜನಗಳೆಂದು ವರ್ಣಿಸಿರುವರಾದರೂ, ಅದು ವೈರಿಜನಾಂಗದ ಬಗ್ಗೆ ಅವರಿಗಿದ್ದ ಸಹಜವಾದ ತಿರಸ್ಕಾರವಾಗಿದೆಯೇ ಹೊರತು, ನಿಜಸ್ಥಿತಿಯಾಗಿಲ್ಲ. ಏಕೆಂದರೆ ವೇದದ ಮಂತ್ರಗಳಲ್ಲಿಯೇ, ಈ ದಸ್ಯು ಹಾಗೂ ರಾಕ್ಷಸರ ಶ್ರೇಷ್ಠಮಟ್ಟದ ನಾಗರಿಕತೆ, ಅವರ ಉತ್ತಮ ರೀತಿಯ ಅರಮನೆಗಳು ಮತ್ತು ಒಡವೆ ವಸ್ತುಗಳನ್ನು ವರ್ಣಿಸಿರುವುದನ್ನು ನೋಡಿದರೆ, ಅವರು ಅನಾಗರಿಕ ಪಶುಸಹಜ ಮಾನವರಾಗಿರಲಿಲ್ಲವೆಂಬುದು ಸ್ಪಷ್ಟಪಡುತ್ತದೆ.

ವೇದಗಳ ಕಾಲದಿಂದ ಮುಂದೆ ಸ್ಪಷ್ಟ ಹಾಗೂ ನಿರ್ದಿಷ್ಟವಾಗಿ ಮೊತ್ತಮೊದಲಿಗೆ ದಕ್ಷಿಣ ಭಾರತದ ಬಗ್ಗೆ ನಮಗೆ ಗ್ರಾಂಥಿಕ ಆಧಾರ ದೊರೆಯುವುದು ರಾಮಾಯಣದಲ್ಲಿ. ವಾಲ್ಮೀಕಿ ಮುನಿಗಳ ಕಾಲದಲ್ಲಿ ಅಂದರೆ. ಕ್ರಿ.ಪೂ.ಸು.೨೦೦೦ ವರ್ಷಗಳಷ್ಟು ಹಿಂದೆ ಗೋದಾವರಿ ನದಿಯ ದಕ್ಷಿಣಕ್ಕೆ ರಾಕ್ಷಸರ ರಾಜ್ಯವಿತ್ತೆಂದೂ ಉತ್ತರಕ್ಕೆ ಆರ್ಯರ ಅನೇಕ ಸಣ್ಣ ಪುಟ್ಟ ರಾಜ್ಯಗಳಿದ್ದುವೆಂದೂ ಇತಿಹಾಸಕಾರರು ಊಹಿಸಿರುತ್ತಾರೆ. ಆರ್ಯರಾದ ಋಷಿಗಳು ನಡೆಸುತ್ತಿದ್ದ ಅನೇಕ ಯಜ್ಞಯಾಗಾದಿ ಕಾರ್ಯಗಳಿಗೆ 'ಅನಾರ್ಯ'ರು ಅಡ್ಡಿತಂದು ನಾಶಪಡಿಸುತ್ತಿದ್ದರೆಂದೂ, ಅವರ ಕಿರುಕುಳಗಳಿಂದ ರಕ್ಷಣೆಪಡೆಯಲೂ ಮತ್ತು ತಾನು ಮಾಡುತ್ತಿರುವ ಯಾಗವೊಂದರ ಕಾವಲುಗಾಗಿಯೂ ವಿಶ್ವಾಮಿತ್ರ ಋಷಿಯು ತನ್ನ ಸಹಾಯಕ್ಕೆ ರಾಮಲಕ್ಷ್ಮಣರನ್ನು ಕರೆದುಕೊಂಡು ಬಂದಂತೆ ರಾಮಾಯಣದಲ್ಲಿ ವರ್ಣಿತವಾಗಿದೆ. ಈ ಅನಾರ್ಯ ಅಥವಾ ದಸ್ಯುಗಳು ಬೇರೆ ಯಾರೂ ಆಗಿರದೆ,ದ್ರಾವಿಡರೇ ಆಗಿದ್ದರೆಂಬುದರಲ್ಲಿ ಸಂದೇಹವಿಲ್ಲ. ಮುಂದೆ ಅರಣ್ಯಕಾಂಡದಲ್ಲಿ ಭರತನು ರಾಮನನ್ನು ಅಯೋಧ್ಯೆಗೆ ಹಿಂದಿರುಗಿಸಲು ಮನವೊಲಿಸುವ ಸಲುವಾಗಿ ದಂಡಕಾರಣ್ಯಕ್ಕೆ ಬರುತ್ತಿದ್ದಾಗ, ಆತನ ಸೈನಿಕರು ದಾಕ್ಷಿಣಾತ್ಯರ ರೀತಿಯಲ್ಲಿ ಕೂದಲನ್ನು ಕೆದರಿ ಅದಕ್ಕೆ ಹೂ ಮುಡಿದುಕೊಂಡು ಸಿಂಗರಿಸಿಕೊಂಡರೆಂದು ಕವಿ ವರ್ಣಿಸಿರುತ್ತಾನೆ.



ರಾಕ್ಷಸರೆಂದು ರಾಮಾಯಣದಲ್ಲಿ ಕರೆಯಲ್ಪಟ್ಟಿರುವ ಈ ದ್ರಾವಿಡರು ಆಗ ಆಡುತ್ತಿದ್ದ ಭಾಷೆ ಯಾವುದೋ ಸ್ಪಷ್ಟವಾಗಿ ತಿಳಿಯದಾಗಿದ್ದರೂ ಸಹ ಅದು ಸಂಸ್ಕೃತವಲ್ಲವೆಂಬುದಂತೂ ಖಚಿತ. ಆದರೆ ಆರ್ಯರ ಪ್ರಾಬಲ್ಯದಿಂದಾಗಿ ಹಾಗೂ ಋಷಿಗಳನ್ನೂ ಮೋಸಪಡಿಸುವ ಸಲುವಾಗಿ ಕೆಲವು ಅನಾರ್ಯರೂ ಸಂಸ್ಕೃತವನ್ನು ಕಲಿಯುತ್ತಿದ್ದಂತೆ ಕಂಡು ಬರುತ್ತದೆ. ರಾವಣನಂತೂ ಸಂಸ್ಕೃತದಲ್ಲಿ ಶ್ರೇಷ್ಠ ವಿದ್ವಾಂಸನಾಗಿದ್ದನೆಂದು ತೋರುತ್ತದೆ. ಅಶೋಕ ವನದಲ್ಲಿ ರಾವಣನಿಂದ ಬಂಧಿತಳಾಗಿದ್ದ ಸೀತೆಯನ್ನು ರಾಮಭಂಟ ಹನುಮಂತನು ಕಂಡಾಗ ಅವಳೊಡನೆ ಮಾತನಾಡುವುದಕ್ಕೆ ಆರಂಭಿಸುವ ಮುನ್ನ ಈ ರೀತಿ ಆಲೋಚಿಸಿದನಂತೆ: "ನಾನು ಈಗ ಈಕೆಯೊಡನೆ ಸಂಸ್ಕೃತದಲ್ಲಿ ಮಾತನಾಡಿದರೆ, ಆಕೆ ನನ್ನನ್ನು ರಾವಣನೆಂಬುದಾಗಿ ತಪ್ಪು ತಿಳಿದುಕೊಳ್ಳುವಳು" ಎಂದು. ಮುಂದೆ ಆತ ಸೀತಾದೇವಿಯೊಡನೆ ಬೇರೆ ಭಾಷೆಯಲ್ಲಿ ಮಾತನಾಡಿದ. ಅದೂ ತಮಿಳಿನಲ್ಲಿಯೇ ಎಂಬುದು ಕೆಲವರ ಅಭಿಪ್ರಾಯ. ಅದರ ಸತ್ಯಾಸತ್ಯತೆಯ ವಿಮರ್ಶೆ ಇಲ್ಲಿ ಅನಗತ್ಯವಾದರೂ, ಇದರಿಂದ ರಾವಣನಿಗೆ ಸಂಸ್ಕೃತ ಚೆನ್ನಾಗಿ ಬರುತ್ತಿದ್ದಿರಬಹುದೆಂಬ ಅಂಶ ತಿಳಿದುಬರುತ್ತದೆ.

ಸೀತಾನ್ವೇಷಣೆಯ ಕಾಲದಲ್ಲಿ ಸುಗ್ರೀವನು ತನ್ನ ಸೈನಿಕರಿಗೆ ಎಲ್ಲೆಲ್ಲಿ ಹೋಗಬೇಕೆಂಬುದರ

ಬಗ್ಗೆ ಆದೇಶವನ್ನೀಯುತ್ತಾ ಆಂಧ್ರ, ಚೋಳ, ಪಾಂಡ್ಯ ಮತ್ತು ಕೇರಳ—ಮುಂತಾದ ದ್ರಾವಿಡ ದೇಶಗಳ ಹೆಸರುಗಳನ್ನು ಸಹ ಹೇಳುತ್ತಾನೆಂಬುದೂ ಇಲ್ಲಿ ಉಲ್ಲೇಖಿಸಬಹುದಾದ ಸಂಗತಿಯಾಗಿದೆ ಯಾದರೂ, ಈ ಭಾಗ ಬಹುಶಃ ಪ್ರಕ್ಷಿಪ್ತವಾಗಿರ ಬಹುದೆಂಬ ಒಂದು ಅಭಿಪ್ರಾಯವೂ ಇದೆಯೆಂಬು ದನ್ನು ಗಮನಿಸಬಹುದು.

ರಾಮ, ರಾವಣರ ಘನ ಘೋರ ಸಂಗ್ರಾಮದ ಬಳಿಕ ಆರ್ಯರಿಗೂ ದ್ರಾವಿಡರಿಗೂ ಹೆಚ್ಚಿನ ಸಂಪರ್ಕ ಬೆಳೆದು ಕ್ರಮೇಣ ಎಷ್ಟೋ ಜನ ಆರ್ಯರೂ ದ್ರಾವಿಡರೊಂದಿಗೆ ಸಂಬಂಧ ಬೆಳಸಿ ಅಲ್ಲಿಯೇ ನೆಲಸಿದರೆಂದೂ ಕಾಲದಿಂದ ಕಾಲಕ್ಕೆ ಈ ರೀತಿಯ ಜನರ ಸಂಖ್ಯೆ ವೃದ್ಧಿಯಾಗುತ್ತಾ ನಡೆಯಿತೆಂದು ಕಂಡುಬರುತ್ತದೆ. ರಾಮಾಯಣದಲ್ಲಿ ದಾಕ್ಷಿಣಾತ್ಯರ ಅಥವಾ ದ್ರಾವಿಡರ ಪ್ರಸ್ತಾಪವಿದ್ದರೂ ಸಹ ಅಲ್ಲಿ ಬರುವಅವರ ವರ್ಣನೆ ಸ್ವಲ್ಪ ಉತ್ಪ್ರೇಕ್ಷೆಯಿಂದ ಕೂಡಿದೆಯೆಂದು ಹೇಳಬಹುದು. ಅದು ಸ್ವಲ್ಪ ಹೊಟ್ಟೆ ಉರಿಯಿಂದ, ಒಬ್ಬ ವೈರಿ ತನ್ನ ಇನ್ನೊಬ್ಬ ವೈರಿಯ ವಿಚಾರವನ್ನು ಹೇಳಿದಂತಿದೆಯೆಂದರೂ ತಪ್ಪಾಗಲಾರದು. ಏಕೆಂದರೆ ಅಲ್ಲಿ ಅವರು ರಾಕ್ಷಸ ರೆಂದೂ, ಅನಾಗರಿಕರೆಂದೂ ವರ್ಣಿಸಲ್ಪಟ್ಟಿದ್ದರೂ ಸಹ ವಾಸ್ತವ ಸ್ಥಿತಿ ಅದಲ್ಲ. ತಮ್ಮ ವೈರಿಗಳ ವಿಚಾರವನ್ನು ಹೇಳುವಾಗ, ಎಂಥ ಋಷಿಯೇ ಆದರೂ ನಿರ್ಲಿಪ್ತನಾಗಿ ಅವರ ಶ್ರೇಷ್ಠತೆಯನ್ನು ಗುರುತಿಸುತ್ತಾನೆಂದು ನಿರೀಕ್ಷಿಸುವುದೂ, ಹಾಗೆ ಗುರುತಿಸಬೇಕೆಂದು ಅಪೇಕ್ಷೆ ಪಡುವುದೂ ಸರಿಯಲ್ಲ. ಆದರೆ ಅಲ್ಲಿ ಬರುವ ಲಂಕಾಪಟ್ಟಣದ ವರ್ಣನೆ, ರಾಕ್ಷಸ ವೀರರ ಶೌರ್ಯ ಹಾಗೂ ಭೋಗದ ರೀತಿಯ ವರ್ಣನೆ ಮತ್ತು ರಾವಣನ ಆಸ್ಥಾನ, ಅಂತಃಪುರ ಮತ್ತು ಅಶೋಕವನದ ಚಿತ್ರಣ ಇತ್ಯಾದಿ ತುಣುಕುಗಳ ಆಧಾರದ ಮೇಲೆ ಆಗಿನ ಕಾಲದಲ್ಲಿನ ಅವರ ಸಂಸ್ಕೃತಿ ಹಾಗೂ ನಾಗರಿಕತೆಯ ಸ್ವರೂಪವನ್ನು ಊಹಿಸಿಕೊಂಡರೆ ನಮಗೆ ಗೊತ್ತಾಗುತ್ತದೆ– ಆಗಿನ ಕಾಲದಲ್ಲಿಯೂ ಸಹ ಆರ್ಯರ ನಾಗರಿಕತೆಯ ಮಟ್ಟಕ್ಕಿಂತ ದ್ರಾವಿಡರದೇ ಒಂದು ಕೈ ಮೇಲಾಗಿತ್ತೆಂಬ ಅಂಶ

ಇಕ್ಷ್ವಾಕು ವಂಶದರಸುಗಳ ಪತನವಾದ ಬಳಿಕ ಪ್ರಾಚೀನ ಉತ್ತರ ಭಾರತದಲ್ಲಿ ಮತ್ತೊಂದು ದೊಡ್ಡ ರಾಜವಂಶ ತಲೆಯೆತ್ತಿತು. ಅದೇ ಕುರು ವಂಶ. ಮುಂದೆ ಇದೇ ವಂಶಕ್ಕೆ ಸೇರಿದ ದಾಯಾದಿ ಗಳಾದ ಕೌರವ ಪಾಂಡವರ ಚರಿತ್ರೆಯನ್ನೇ ಕಥಾ ವಸ್ತುವನ್ನಾಗುಳ್ಳ ಪುರಾಣಕಾವ್ಯವಾದ ಮಹಾ ಭಾರತದಲ್ಲಿ ಉದ್ದಕ್ಕೂ ದಕ್ಷಿಣ ದೇಶಗಳ ಪ್ರಸ್ತಾಪ ನೇರವಾಗಿ ಹಲವು ಕಡೆ ಬಂದಿದೆ. ಆ ಕಾಲದ ಹೊತ್ತಿಗಾಗಲೇ ಉತ್ತರ ಹಾಗೂ ದಕ್ಷಿಣ ದೇಶಗಳ ನಡುವೆ ಉತ್ತಮರೀತಿಯ ಸ್ನೇಹ ಸೌಹಾರ್ದಗಳು ಬೆಳೆದು ಇಬ್ಬರೂ ಸರಿಸಮಾನರು ಎನ್ನುವ ಭಾವನೆಯಿದ್ದಂತೆ ತೋರಿಬರುತ್ತದೆ. ದ್ರೌಪದಿಯ ಸ್ವಯಂವರದಲ್ಲಿ ಭಾಗವಹಿಸಿದ್ದ ಅನೇಕ ಜನ ಉತ್ತಮ ಕುಲೀನ ಅರಸರ ಪೈಕಿ ಪಾಂಡ್ಯ ದೊರೆಯೂ ಒಬ್ಬನಾಗಿದ್ದನೆಂಬ ಅಂತ ಹಾಗೂ ಇತರೆ ಅಂಶಗಳು ಮೇಲಿನ ವಾದಕ್ಕೆ ಪುಷ್ಟಿ ಕೊಡುತ್ತವೆ. ಮುಂದೆ ಯುಧಿಷ್ಠಿರನು ರಾಜಸೂಯ ಯಾಗ ನಡೆಸಿದಾಗ ಸಹದೇವನು ದಕ್ಷಿಣ ದೇಶಗಳಲ್ಲಿ ಅಂದರೆ ದ್ರಾವಿಡ, ಚೋಳ, ಕೇರಳ ಹಾಗೂ ಪಾಂಡ್ಯ ದೇಶಗಳಲ್ಲಿ ದಿಗ್ವಿಜಯ ಯಾತ್ರೆ ನಡೆಸಿ ಅವರನ್ನೆಲ್ಲಾ ಸೋಲಿಸಿದನೆಂದೂ ರಾಜಸೂಯಯಾಗದಲ್ಲಿ ಚೋಳ, ಪಾಂಡ್ಯ ದೊರೆಗಳು ಖುದ್ದಾಗಿ ಭಾಗವಹಿಸಿ ತಮ್ಮ ಉಡುಗೊರೆಗಳನ್ನು ಯುಧಿಷ್ಠಿರನಿಗೆ ಒಪ್ಪಿಸಿದರೆಂದೂ ಮಹಾಭಾರತ ದಲ್ಲಿ ವರ್ಣಿತವಾಗಿದೆ. ಆ ಮಹಾಯುದ್ಧ ನಡೆದ

ಕಾಲದಲ್ಲಿ ಪಾಂಡ್ಯರಾಜನಾದ ಸಾರಂಗಧ್ವಜನೂ ಮತ್ತು ಕೇರಳ ಹಾಗೂ ಚೋಳ ದೊರೆಗಳೂ ಪಾಂಡವರ ಪಕ್ಷದಲ್ಲಿ ಹೋರಾಡಿ ಪಾಂಡ್ಯರಾಜನು ಅಶ್ವತ್ಥಾಮನಿಂದ ಹತನಾದನೆಂದು ವರ್ಣಿತ ವಾಗಿದೆ. ಅಲ್ಲದೆ ತೀರ್ಥಯಾತ್ರೆಯ ಕಾಲದಲ್ಲಿ ಅರ್ಜುನನು ವಿವಾಹವಾದ ಮಣಿಪುರದರಸು ಚಿತ್ರವಾಹನನ ಏಕಮಾತ್ರ ಪುತ್ರಿ ಚಿತ್ರಾಂಗದೆ ಸಹ ದಾಕ್ಷಿಣಾತ್ಯಳೆಂಬ ಅಂಶ ಇಲ್ಲಿ ಗಮನಾರ್ಹ ವಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ಮಹಾ ಭಾರತದಲ್ಲಿ ಬರುವ ದಾಕ್ಷಿಣಾತ್ಯರ ಪ್ರಸ್ತಾಪವು ರಾಮಾಯಣಕ್ಕಿಂತ ಗೌರವ ಪೂರ್ಣವಾಗಿ, ಗಂಭೀರವಾಗಿದೆ ಎನ್ನಬಹುದು.

ಮಹಾಭಾರತ ಯುದ್ಧ ಮುಗಿದು, ಕೆಲವು ಕಾಲ ಸಂದ ಬಳಿಕ ಕುರುವಂಶದ ಪತನವೂ ಆದ ಮೇಲೆ, ಹಿಂದೂ ಧರ್ಮದಲ್ಲಾದ ಒಂದು ಮಹತ್ತರ ಬದಲಾವಣೆ—ಆರ್ಯಸಂಸ್ಕೃತಿಯ ಮೇಲೆ ದ್ರಾವಿಡಸಂಸ್ಕೃತಿ ಬೀರಿದ ಪ್ರಭಾವಕ್ಕೆ ಶ್ರೇಷ್ಠ ಉದಾಹರಣೆಯಾಗಿದೆ. ಮಹಾಭಾರತ ಯುದ್ಧ ಮುಗಿದ ಸ್ವಲ್ಪಕಾಲದ ಬಳಿಕ ಹಿಂದೂ ಧರ್ಮದ ಮೇಲೆ ವೇದಗಳಿಗಿದ್ದ ಹಿಡಿತ ಸಡಿಲ ವಾಗಿ, ಆಗಮಗಳ ಪ್ರಾಬಲ್ಯ ಜಾಸ್ತಿಯಾಯಿತು. ಇಲ್ಲಿ ವೇದಗಳಿಗೂ ಆಗಮಗಳಿಗೂ ಇರುವ ವ್ಯತ್ಯಾಸವನ್ನು ಮನಗಾಣಬೇಕಾಗಿದೆ. ಒಂದು ಕಾಲದಲ್ಲಿ ಈ ಎರಡು ಸಂಪ್ರದಾಯಗಳ ನಡುವೆ ಬದ್ಧದ್ವೇಷವೇ ಇತ್ತೆಂಬುದನ್ನು ಮರೆಯುವಂತಿಲ್ಲ. ಆಗಮಗಳು ವೇದಗಳ ಮಂತ್ರಗಳ ಮೂಲ ದಿಂದಲೇ ಹುಟ್ಟಿ ಬಂದಿವೆಯಾದರೂ ಸಹ ಅನೇಕ ನಂಬಿಕೆ ಹಾಗೂ ಸಿದ್ಧಾಂತಗಳಲ್ಲಿ ಇವೆರಡಕ್ಕೂ ಮೂಲಭೂತ ತತ್ತ್ವಗಳಲ್ಲೇ ವ್ಯತ್ಯಾಸಗಳಿವೆ. ವೇದದ ಮಂತ್ರಗಳು ಅಪೌರುಷೇಯವೆಂದೂ ಶಿವ ಮುಂತಾದ ದೇವರುಗಳು ಪುರುಷರಾದುದರಿಂದ ಅವರಿಗೆ ಅಲ್ಲಿ ಅಷ್ಟು ಪ್ರಾಧಾನ್ಯತೆ ಇಲ್ಲ. ಆದರೆ ಆಗಮಗಳು ಸಾಕ್ಷಾತ್ ಶಿವನಿಂದಲೇ ಪ್ರಣೀತವಾಗಿದ್ದು, ಶಿವ ಮತ್ತು ವಿಷ್ಣುವಿನ ಆರಾಧನೆಗೆ ಹೆಚ್ಚು ಪ್ರಾಧಾನ್ಯತೆ ಕೊಟ್ಟಿವೆ. ಇಲ್ಲಿ ದ್ರಾವಿಡರು ಬಹಳ ಹಿಂದಿನಿಂದಲೂ ಶಿವಾರಾಧಕರೆಂಬ ಅಂಶವನ್ನು ಮರೆಯುವಂತಿಲ್ಲ. ಯಜ್ಞಯಾಗಾದಿಗಳ ಆಚರಣೆ ನಂಬಿಕೆಗಳಲ್ಲಿಯೂ ಸಹ ವೇದ ಹಾಗೂ ಆಗಮ ಗಳಿಗೆ ತುಂಬಾ ವ್ಯತ್ಯಾಸಗಳಿವೆ. ವೇದಗಳಲ್ಲಿ ವರ್ಣಾಶ್ರಮ ಧರ್ಮಗಳು ಪ್ರಧಾನ ವಾಗಿದ್ದು, ಬ್ರಾಹ್ಮಣನೇ ವೇದಾಧ್ಯಯನಕ್ಕೆ ಅರ್ಹನೆಂದೂ, ಶೂದ್ರರಿಗೆ ಮೋಕ್ಷವಿಲ್ಲವೆಂದೂ ಪ್ರತಿಪಾದಿತವಾಗಿದ್ದರೆ, ಆಗಮಗಳು ಈ ನಂಬಿಕೆ ಗಳನ್ನು ತಿರಸ್ಕರಿಸಿವೆ. ಆಗಮಗಳು ಪ್ರತಿಪಾದಿಸಿ ರುವ ಸಿದ್ಧಾಂತಗಳು ಆರ್ಯರಿಗಿಂತ ಬಹಳ ಮುಂಚೆ ಯೇ ಅಂದರೆ ವೇದಪೂರ್ವ ಕಾಲದಲ್ಲಿಯೇ ಅನಾರ್ಯ ರಲ್ಲಿ ಪ್ರಚಲಿತವಾಗಿದ್ದುವೆಂದೂ ಮುಂದೆ ಭಾರತ ಯುದ್ಧವಾದ ಬಳಿಕ ಆರ್ಯ—ದ್ರಾವಿಡ ಸಂಸ್ಕೃತಿ ಯ ಮಿಲನ ಕ್ರಮೇಣ ಆಗಿ ಆಗಮಗಳ ಪ್ರಾಬಲ್ಯ ಜಾಸ್ತಿಯಾಯಿತೆಂದೂ ವಿದ್ವಾಂಸರ ಅಭಿಪ್ರಾಯ ವಾಗಿದೆ. ಈ ಊಹೆಗೆ ಹಿಂದೆ ಕೊಟ್ಟ ಅನೇಕ ಆಧಾರಗಳಲ್ಲದೆ ಆಗಮಗಳಲ್ಲಿ ಅಗ್ನಿಗೆ ಪ್ರಾಧಾನ್ಯತೆ ಇಲ್ಲದಿರುವ ಅಂಶವೂ ಬಹಳ ಮುಖ್ಯವಾದ ವಿಷಯವಾಗಿದೆ. ಆರ್ಯರ ನಂಬಿಕೆಯ ಪ್ರಕಾರ ಹಾಗೂ ವೇದಗಳಲ್ಲಿ, ಅಗ್ನಿಗೆ ತುಂಬಾ ಪ್ರಾಧಾ ನ್ಯತೆ ಇದೆ.

ವೇದ ಹಾಗೂ ಆಗಮಗಳ ತಿಕ್ಕಾಟ ಬಹಳ ಕಾಲ ನಡೆಯದೆ ಮುಂದೆ ಕ್ರಮೇಣ ಈ ಎರಡು ನಂಬಿಕೆಗಳೂ ಒಂದರೊಡನೊಂದು ಪೂರ್ಣ ವಿಲೀನ ಹೊಂದಿ, ಒಂದು ಹೊಸ ನಂಬಿಕೆ ಹಾಗೂ ಸಿದ್ಧಾಂತಗಳು ಸೃಷ್ಟಿಗೊಂಡವು. ಬಹುಶಃ ಇಲ್ಲಿಂದ ಮುಂದಕ್ಕೆ ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಆರ್ಯರಿಗೂ ದ್ರಾವಿಡರಿಗೂ ಇದ್ದ ವೈರ ಮಾಯವಾದಂತೆ

ತೋರುತ್ತದೆ. ಧಾರ್ಮಿಕ ಕ್ಷೇತ್ರದಲ್ಲಿ ಬಳಿಕ ಹುಟ್ಟಿದ ಶ್ರೇಷ್ಠತತ್ತ್ವಗಳಿಗೆ ಮುಂದೆ ಬಹಳ ಕಾಲದ ಬಳಿಕ ಅವತರಿಸಿದ ಮಹಾಪುರುಷರಾದ ಶಂಕರರೇ ಮೊದಲಾದ ವಿಭೂತಿಪುರುಷರು ಕಾರಣರಾದರಲ್ಲದೆ ಹಿಂದೂ ಧರ್ಮ ತನ್ನ ಎಲ್ಲ ವೈವಿಧ್ಯತೆಗಳನ್ನೂ ಬಿಟ್ಟುಕೊಟ್ಟು, ಆದಷ್ಟು ಏಕರೂಪವನ್ನು ಪಡೆಯಲು ಶ್ರಮಿಸಿದರು.

ಪ್ರಾಚೀನ ಭಾರತದ ಸಾಮ್ರಾಜ್ಯಗಳಲ್ಲಿ ಬಹು ವೈಭವೋಪೇತವಾಗಿ ಮೆರೆದ ರಾಜ್ಯವೆಂದರೆ ಕ್ರಿ. ಪೂ. ಸು. ೪೦೦ರಲ್ಲಿ ತಲೆಯೆತ್ತಿದ ಮಗಧ ರಾಜ್ಯ. ಮಗಧರ ಕಾಲದಲ್ಲಿಯೂ ಸಹ ಭಾರತದಲ್ಲಿ ದಕ್ಷಿಣದವರ ಸಂಸ್ಕೃತಿ ಹಾಗೂ ನಾಗರಿಕತೆಗಳು ಉಚ್ಚ ಮಟ್ಟದಲ್ಲಿದ್ದುವೆಂದು ತಿಳಿದುಬರುತ್ತದೆ. ಕೌಟಲ್ಯನು ತನ್ನ ಅರ್ಥಶಾಸ್ತ್ರದಲ್ಲಿ, ದಾಕ್ಷಿಣಾತ್ಯರ ಶ್ರೀಮಂತಿಕೆ ಹಾಗೂ ಕುಶಲ ಕಲೆಗಳಲ್ಲಿ ಅವರಿಗಿದ್ದ ನೈಪುಣ್ಯ ಹಾಗೂ ಆಸಕ್ತಿಯನ್ನು ಪ್ರಸ್ತಾಪಿಸಿದ್ದಾನೆ. ಚಂದ್ರಗುಪ್ತನು ಬಹಳ ಕಾಲ ರಾಜ್ಯವಾಳಿ ವೈರಾಗ್ಯ ಪಡೆದ ಬಳಿಕ,ಉಳಿದ ತನ್ನ ಜೀವಮಾನವನ್ನೆಲ್ಲಾ ಶ್ರವಣಬೆಳಗೊಳದಲ್ಲಿಯೇ ಕಳೆದು, ಸಲ್ಲೇಖನ ವ್ರತದಿಂದ ಕೊನೆಗೆ ತನ್ನ ಪ್ರಾಣತ್ಯಾಗ ಮಾಡಿದಂತೆ ತಿಳಿದುಬರುತ್ತದೆ. ಹೀಗೆ ಸಾವಿರಾರು ಜನ ಜೈನ ಹಾಗೂ ಬೌದ್ಧ ಸಂನ್ಯಾಸಿಗಳು ತಮ್ಮ ಸಾಧನೆಗಾಗಿ ದಕ್ಷಿಣ ದೇಶಗಳಿಗೆ ಉತ್ತರದಿಂದ ಬರುತ್ತಿದ್ದರೆಂದು ತಿಳಿದು ಬರುತ್ತದೆ. ಅಶೋಕನ ಹಾಗೂ ಮೌರ್ಯರ ಕಾಲದಲ್ಲಿಯೂ ದಕ್ಷಿಣದ ಅನೇಕ ದೇಶಗಳು ಸ್ವತಂತ್ರವಾಗಿದ್ದು ಉತ್ತಮವಾದ ನಾಗರಿಕತೆಯಿಂದ ಕೂಡಿ ವೈಭವಪೂರ್ಣವಾಗಿದ್ದುವೆಂದು ಇತಿಹಾಸದಿಂದ ವ್ಯಕ್ತವಾಗುತ್ತದೆ

ಕ್ರಿ. ಪೂ. ೩೫೦೦ ವರ್ಷಗಳಿಂದ ಕ್ರಿ.ಶ.ದ ವರೆಗಿನ ಅವಧಿಯಲ್ಲಿನ ದ್ರಾವಿಡ ಸಂಸ್ಕೃತಿ ಹಾಗೂ ನಾಗರಿಕತೆಗಳ ಸ್ಥೂಲ ವಿವೇಚನೆಯನ್ನು ಇಲ್ಲಿಯವರೆಗೆ ಮಾಡಲಾಗಿದೆ. ಆದರೆ ಸಮಗ್ರವಾಗಿ ಹಾಗೂ ಸ್ಪಷ್ಟವಾಗಿ ಯಾವ ವಿಚಾರವನ್ನು ಹೇಳಲು ಸಹ ಈ ಕ್ಷೇತ್ರದಲ್ಲಿ, ಅಂದರೆ ದ್ರಾವಿಡ ಸಂಸ್ಕೃತಿಯ ಬಗ್ಗೆ ನಡೆದಿರುವ ಸಂಶೋಧನೆಯ ಕೆಲಸಗಳು ಸಾಲದು ಎಂದರೆ ಬಹುಶಃ ತಪ್ಪಾಗಲಾರದೆನಿಸುತ್ತದೆ. ಶ್ರೇಷ್ಠ ವಿದ್ವಾಂಸರಿಂದ ಈ ದಿಶೆಯಲ್ಲಿ ಇನ್ನೂ ಹೆಚ್ಚಿನ ಪ್ರಯತ್ನ ನಡೆದು,ಹರಪ್ಪಾ-ಮೊಹೆಂಜೊದಾರೋ ಸ್ಥಳಗಳಲ್ಲಿನ ಫಲಕಗಳ ಮೇಲಿರುವ ಲಿಪಿಯನ್ನು ಇನ್ನೂ ಸ್ಪಷ್ಟವಾಗಿ ಗುರುತಿಸಿದ ಮೇಲೆ, ಹಾಗೂ ಇನ್ನೂ ಅನೇಕ ತೊಡಕಾಗಿರುವ ಸಮಸ್ಯೆಗಳನ್ನು ಕೂಲಂಕಷವಾಗಿ ಚರ್ಚಿಸಿರುವ ಪ್ರಮಾಣ ಗ್ರಂಥಗಳು ಹೊರಬಂದ ಮೇಲೆ ಈ ವಿಚಾರದಲ್ಲಿ ಅಭ್ಯಾಸ ನಡೆಸುವ ಸಂಶೋಧಕರಿಗೆ ಹೆಚ್ಚಿನ ಸಹಾಯಕವಾದೀತೆಂದು ನಿರೀಕ್ಷಿಸಬಹುದಾಗಿದೆ.

ಪ್ರಾಚೀನ ದ್ರಾವಿಡ ಸಂಸ್ಕೃತಿಯ ಹಾಗೂ ನಾಗರಿಕತೆಯ ಸ್ಥೂಲರೂಪ ರೇಖೆಗಳನ್ನು ಚಿತ್ರಿಸಿದ ಬಳಿಕ, ದ್ರಾವಿಡ ಭಾಷೆಗಳ ಪ್ರಾಚೀನತೆ ಹಾಗೂ ಸ್ವರೂಪದ ಕಡೆಗೆ ನಮ್ಮ ಗಮನವನ್ನು ಹರಿಸಬಹುದಾಗಿದೆ. ಆದರೆ ಅದಕ್ಕೆ ಮುನ್ನ ದ್ರಾವಿಡ ಭಾಷೆಗಳಿಗೆ ಮೂಲ ಯಾವುದು? 'ದ್ರಾವಿಡ ಭಾಷೆಗಳು' ಎನ್ನುವ ಪ್ರತ್ಯೇಕ ವರ್ಗವೊಂದಿದೆಯೇ ಎಂಬ ಅಂಶವನ್ನೂ ಸ್ವಲ್ಪ ವಿವೇಚಿಸಬಹುದಾಗಿದೆ.

ಹಿಂದಿನ ಭಾಷಾಶಾಸ್ತ್ರಜ್ಞರು ಪ್ರಪಂಚದಲ್ಲಿರುವ ಭಾಷೆಗಳನ್ನೆಲ್ಲಾ ಜನಾಂಗದ ಆಧಾರದ ಮೇಲೆ, ಇಂಡೋ ಯೂರೋಪಿಯನ್, ಸಿಥಿಯನ್

ಹಾಗೂ ಸೆಮಿಟಿಕ್ ಎಂಬುದಾಗಿ ಮೂರು ವರ್ಗಗಳನ್ನಾಗಿ ವಿಂಗಡಿಸಿದರು. ಆದರೆ ಈಗಿನ ಭಾಷಾಶಾಸ್ತ್ರಜ್ಞರು ಜನಾಂಗದ ಆಧಾರದ ಮೇಲೆ ಮಾಡುವ ವರ್ಗೀಕರಣವನ್ನು ಪುರಸ್ಕರಿಸುವುದಿಲ್ಲ. ಏಕೆಂದರೆ, ಒಂದು ಜನಾಂಗಕ್ಕೂ ಅವರಾಡುವ ಭಾಷೆಗೂ ಅಷ್ಟು ನಿಕಟವಾದ ಸಂಬಂಧ ಇರಲೇಬೇಕಾಗಿಲ್ಲವೆಂಬುದು ಇತ್ತೀಚಿನ ಸಿದ್ಧಾಂತವಾಗಿದೆ. ಆಧುನಿಕ ರೀತಿಯ ವರ್ಗೀಕರಣಕ್ಕೆ ಒಂದು ಭಾಷೆಯ ವ್ಯಾಕರಣವೇ ಮೂಲ ಮಾನದಂಡವಾಗಿರಬೇಕೇ ಹೊರತು ಮತ್ತಾವುದೂ ಅಲ್ಲ. ಈ ತತ್ವದ ಪ್ರಕಾರ ವಿಶ್ವದ ಭಾಷೆಗಳನ್ನೆಲ್ಲಾ ಪ್ರತ್ಯೇಕ, ಸಮುಚ್ಚಾಯಕ, ಪ್ರಾತ್ಯಯಿಕ, ಬಹುಪದಯುಕ್ತ ಹಾಗೂ ಅಂತರ್ಗಮಕ ಎಂಬ ಐದು ವಿಧವಾಗಿ ವಿಂಗಡಿಸಿರುತ್ತಾರೆ. ದ್ರಾವಿಡ ವರ್ಗದ ಭಾಷೆಗಳು ಸಮುಚ್ಚಾಯಕ ಗುಂಪಿಗೂ, ಸಂಸ್ಕೃತ ಮೊದಲಾದ ಆರ್ಯವರ್ಗದ ಭಾಷೆಗಳು ಪ್ರಾತ್ಯಯಿಕ ಗುಂಪಿಗೂ ಸೇರುತ್ತವೆ. ಹಿಂದಿನ ಭಾಷಾಶಾಸ್ತ್ರಜ್ಞರಾದರೋ ದ್ರಾವಿಡ ಭಾಷೆಗಳನ್ನು ಒಬ್ಬೊಬ್ಬರು ಒಂದೊಂದು ವರ್ಗಕ್ಕೆ – ಅಂದರೆ ಪೋಪ್ ಮುಂತಾದವರು ಆರ್ಯವರ್ಗಕ್ಕೂ, ಡಾ. ಕಾಲ್ಡ್ವೆಲ್ ಮತ್ತು ಮ್ಯಾಕ್ಸ್‌ಮುಲ್ಲರ್‌ರವರು ಸಿಥಿಯನ್ ವರ್ಗಕ್ಕೂ ಸೇರಿಸಲು ಪ್ರಯತ್ನಪಟ್ಟಿದ್ದರು. ಆದರೆ ದ್ರಾವಿಡಭಾಷೆಗಳನ್ನು ಅವುಗಳ ಪದ, ಕೋಶ ಹಾಗೂ ವ್ಯಾಕರಣವನ್ನು ಪ್ರಧಾನವಾಗಿಟ್ಟುಕೊಂಡು ಅಭ್ಯಾಸಮಾಡಿದಾಗ, ಅವು ಸಮುಚ್ಚಾಯಕ ಲಕ್ಷಣವನ್ನುಳ್ಳ ಭಾಷೆಗಳೆಂಬ ಅಂಶ ಸ್ಪಷ್ಟಪಡುತ್ತದೆ. ಡಾ. ಗ್ರೀಯರ್‌ಸನ್‌ರವರು ಈ ಬಗ್ಗೆ "With regard to the Dravidian Languages, the attempt to Connect them with other linguistic families outside India is now generally recognised as a failure and we must still consider them as an isolated family" ಎಂದು ಹೇಳಿರುತ್ತಾರೆ.

ದ್ರಾವಿಡ ಭಾಷೆಗಳು ಹಾಗೂ ಅವುಗಳ ಮೂಲದ ಬಗ್ಗೆ ಭಾಷಾಶಾಸ್ತ್ರಜ್ಞರ ಅಭಿಪ್ರಾಯವೇನೇ ಇರಲಿ, ಪ್ರಾಚೀನ ಕಾಲದಿಂದ ಇತ್ತೀಚಿನವರೆವಿಗೂ ಪಂಡಿತ ವರ್ಗದವರು, ಸಂಸ್ಕೃತವೇ ದ್ರಾವಿಡ ಭಾಷೆಗಳಿಗೆಲ್ಲ ಮೂಲಭಾಷೆಯೆಂದು ನಂಬಿದ್ದರು. ದ್ರಾವಿಡ ಭಾಷೆಗಳ ಕಾವ್ಯಗಳಲ್ಲಿ ಕಂಡುಬರುವ ಸಂಸ್ಕೃತ ಶಬ್ದಗಳ ಪ್ರಮಾಣ ಧಾರ್ಮಿಕವಾಗಿ ಸಂಸ್ಕೃತಕ್ಕಿದ್ದ ಮಾನ್ಯತೆ ಹಾಗೂ ಕೆಲವು ದ್ರಾವಿಡ ಭಾಷೆಗಳ ಪ್ರಾಚೀನ ವ್ಯಾಕರಣಕಾರರ ಅಭಿಪ್ರಾಯಗಳು ಈ ನಂಬಿಕೆಯನ್ನು ಮತ್ತೂ ದೃಢಪಡಿಸಿದವು. ಆದರೆ ಈ ನಂಬಿಕೆ ಕೇವಲ ತಪ್ಪುಗ್ರಹಿಕೆಯೆನ್ನಲು ಅನೇಕ ಆಧಾರಗಳನ್ನು ಉದಾಹರಣೆಗಳ ಸಹಿತವಾಗಿ ತಮ್ಮ ಗ್ರಂಥಗಳಲ್ಲಿ ಡಾ. ಕಾಲ್ಡ್‌ವೆಲ್ ಮತ್ತು ಶ್ರೀ ಆರ್. ನರಸಿಂಹಾಚಾರ್ಯರು ಕೊಟ್ಟು ದ್ರಾವಿಡ ಭಾಷೆಗಳು ಸಂಸ್ಕೃತದಿಂದ ಭಿನ್ನ ಎಂದು ಸಿದ್ಧಪಡಿಸಿರುತ್ತಾರೆ. ದ್ರಾವಿಡ ಭಾಷೆಗಳ ಪ್ರತ್ಯೇಕ ವಿಶಿಷ್ಟತೆಯನ್ನು ಗುರುತಿಸಿ ಅವರು ಕೊಟ್ಟಿರುವ ಕಾರಣಗಳನ್ನು ಈ ರೀತಿ ಸಂಗ್ರಹವಾಗಿ ಹೇಳಬಹುದು:—

ದ್ರಾವಿಡ ಭಾಷೆಗಳಲ್ಲಿ ಲಿಂಗವಿವಕ್ಷೆ ಆರ್ಯಭಾಷೆಗಳಂತಿರದೆ ಕ್ರಮಬದ್ಧವಾಗಿದೆ ಮತ್ತು ಅಲ್ಲಿ ಎರಡೇ ವಚನಗಳಿದ್ದು, ಸಂಸ್ಕೃತದಲ್ಲಿರುವಂತೆ ದ್ವಿವಚನವಿಲ್ಲ. ಸಂಖ್ಯಾವಾಚಕ, ಸರ್ವನಾಮ, ಗುಣವಚನ ಹಾಗೂ ಕ್ರಿಯಾಪದಗಳು ಕೂಡ ಸಂಸ್ಕೃತದಿಂದ ಭಿನ್ನವಾಗಿದ್ದು, ಎಲ್ಲ ದ್ರಾವಿಡ ಭಾಷೆಗಳಲ್ಲಿಯೂ ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿವೆ. ದ್ರಾವಿಡ ಭಾಷೆಗಳಲ್ಲಿ ಕರ್ಮಣಿ ಪ್ರಯೋಗ ಕ್ವಚಿತ್ತಾಗಿದ್ದರೆ, ಸಂಸ್ಕೃತದಲ್ಲಿ ಹೇರಳವಾಗಿದೆ. ಶಬ್ದಾಂತ್ಯಸ್ವರ ಹಾಗೂ ಸ್ವರಾನುರೂಪತೆಯೂ ದ್ರಾವಿಡ ಭಾಷೆಗಳ

ಪ್ರಧಾನ ವೈಶಿಷ್ಟ್ಯಗಳಲ್ಲೊಂದಾಗಿದೆ. ವರ್ಣ ಮಾಲೆಯ ದೃಷ್ಟಿಯಿಂದಲೂ ಸಹ ಐ, ಟಿ, ಳ, ಎ, ಒ— ಎಂಬ ದೇಶ್ಯ ವರ್ಣಗಳು ದ್ರಾವಿಡ ಭಾಷೆ ಗಳಲ್ಲಿವೆ. ಸಂಬಂಧವಾಚಕ ಪದಗಳೂ ಸಹ ಸಂಸ್ಕೃತದಿಂದ ಭಿನ್ನವಾಗಿವೆ. ಕೊನೆಯದಾಗಿ ಉಚ್ಚಾರಣೆಯ ದೃಷ್ಟಿಯಿಂದಲೂ ದ್ರಾವಿಡ ಭಾಷೆ ಗಳಲ್ಲಿ ಒಂದು ವೈಶಿಷ್ಟ್ಯವನ್ನು ಗಮನಿಸಬಹುದು. ಆರ್ಯ ಭಾಷೆಗಳಲ್ಲಿರುವಂತೆ ಅವಧಾರಣೆಯು ಶಬ್ದದ ದ್ವಿತೀಯ ಇಲ್ಲವೇ ತೃತೀಯ ವರ್ಣಗಳ ಮೇಲಿರದೆ, ಸಾಮಾನ್ಯವಾಗಿ ಪ್ರಥಮ ವರ್ಣದ ಮೇಲಿರುತ್ತದೆ.

ಇನ್ನು ಈ ಭಾಷೆಗಳ ಕೋಶದಲ್ಲಿ ಕಂಡ್ರು ಬರುವ ಸಂಸ್ಕೃತ ಶಬ್ದಗಳ ವಿಚಾರ : ಅಂದಿನಿಂದ ಇಂದಿನವರೆಗೂ ಕೂಡ ನಮ್ಮ ಭಾಷೆಗಳಲ್ಲಿ, ಅದ ರಲ್ಲೂ ಕಾವ್ಯಭಾಷೆಯಲ್ಲಿರುವ ಸಂಸ್ಕೃತ ಶಬ್ದ ಪ್ರಮಾಣ ನಿಜವಾಗಿಯೂ ದಿಗಿಲುಪಡಿಸುವಷ್ಟು ಪ್ರಮಾಣದಲ್ಲಿದೆಯೆಂದೂ, ಮೊದಲ ನೋಟಕ್ಕೆ, ಈ ಭಾಷೆಗಳಗೆ ಪ್ರತ್ಯೇಕ ಅಸ್ತಿತ್ವವಿಲ್ಲವೆಂದೆನಿಸುತ್ತದೆ ಯೆಂದೂ ನಾವು ಒಪ್ಪಿಕೊಳ್ಳಲೇ ಬೇಕಾಗಿದೆ. ಈ ರೀತಿಯ ಪರಿಸ್ಥಿತಿ ಇದ್ದುದರಿಂದಲೇ ಬಹುಶಃ ಹಿಂದಿನ ಎಲ್ಲ ವ್ಯಾಕರಣಕಾರರೂ ದ್ರಾವಿಡ ಭಾಷೆ ಗಳು ಸಂಸ್ಕೃತಜನ್ಯವೆಂದರು. ಆದರೆ ಕನ್ನಡ ವ್ಯಾಕರಣಕಾರ ಕೇಶಿರಾಜನೊಬ್ಬ ಮಾತ್ರ ಸ್ವಲ್ಪ ಮಟ್ಟಿಗೆ ದ್ರಾವಿಡ ಭಾಷೆಗಳ ವೈಶಿಷ್ಟ್ಯವನ್ನು ಗುರು ತಿಸಿದ್ದಾನೆಂಬುದು ಹೆಮ್ಮೆಪಡಬಹುದಾದ ಅಂಶ ವಾಗಿದೆ. ದ್ರಾವಿಡ ಭಾಷೆಗಳ ಪ್ರತ್ಯೇಕ ವರ್ಗದ ಬಗ್ಗೆ ಆತ ಏನೂ ಹೇಳಿಲ್ಲವಾದರೂ ಸಹ ಕನ್ನಡದ ಅಸಾಧಾರಣ ಲಕ್ಷಣಗಳನ್ನು ಕುರಿತು ಹೀಗೆ ಹೇಳಿ ದ್ದಾನೆ—

ಗಮಕ ಸಮಾಸದಿಂ ಐಟಿಕುಳಕ್ಷಳದಿಂ ಶ್ರುತಿಸಹ್ಯ ಸಂಧಿಯಿಂ |
ಸಮುಚಿತವಾಗಿ ಬರ್ಪ ಸತಿ ಸಪ್ತಮಿಯಿಂ ಸಮ ಸಂಸ್ಕೃತೋಕ್ತಿಯಿಂ |
ವಮಹಪ ಭೇದದಿಂ ವಿರಹಿತಾನ್ವಯ ಸಂಸ್ಕೃತ ಲಿಂಗದಿಂ ಪದೋ |
ತ್ತಮ ಶಿಥಿಲತ್ವದಿಂ ಯತಿ ವಿಲಂಘನದಿಂದರಿದಲ್ತೆ ಕನ್ನಡಂ ||

ಆತ ಹೇಳಿರುವ ಎಲ್ಲ ಲಕ್ಷಣಗಳಲ್ಲದಿದ್ದರೂ ಕೆಲ ವಾದರೂ ಸಹ ಇಡೀ ದ್ರಾವಿಡ ವರ್ಗಕ್ಕೆ ಅನ್ವಯಿ ಸುವಂತಿವೆಯೆಂಬುದನ್ನು ಇಲ್ಲಿ ಗಮನಿಸಬಹುದಾ ಗಿದೆ. ವ್ಯಾಕರಣ ದೃಷ್ಟಿಯಿಂದೆಂತೋ ಅಂತೆ ಕೋಶದ ದೃಷ್ಟಿಯಿಂದಲೂ ದ್ರಾವಿಡ ಭಾಷೆಗಳೇ ಪ್ರತ್ಯೇಕ ವಿಶಿಷ್ಟವರ್ಗಕ್ಕೆ ಸೇರುತ್ತವೆ. ಮೇಲುನೋ ಟಕ್ಕೆ ಸಂಸ್ಕೃತ ಪದಗಳ ಪ್ರಮಾಣ ಅಲ್ಲಿ ಜಾಸ್ತಿಯಿ ದ್ದರೂ ಸಹ ಸಂಸ್ಕೃತದಿಂದ ಅವು ಪಡೆದಿರುವ ಎರವು ಬಾಹ್ಯವಾದದ್ದು. ಒಂದು ಭಾಷೆಯ ವಿಶಿ ಷ್ಟತೆಯನ್ನು ಗುರುತಿಸಬೇಕಾದರೆ ನಾವು ಗಮನಿ ಸಬೇಕಾದದ್ದು ಅದರ ಆಂತರಿಕ ಪದಕೋಶವನ್ನು; ಅಂದರೆ ಜೀವನದ ಆವಶ್ಯಕ ವಿಷಯಗಳಿಗೆ ಸಂಬಂಧಿಸಿದ ದೇಹದ ಭಾಗಗಳು, ಸಂಬಂಧ ವಾಚಕಗಳು ಮುಂತಾದ ವಿಚಾರಗಳನ್ನು ತಿಳಿಸುವ ಪದಗಳು ಅಲ್ಲಿ ಮುಖ್ಯ. ಈ ದೃಷ್ಟಿಯಿಂದ ನೋಡಿದಾಗ, ದ್ರಾವಿಡ ಭಾಷೆಗಳ ಆಂತರಿಕ ಪದಕೋಶವೆಲ್ಲಾ ಒಂದೇ ರೀತಿಯಾಗಿದ್ದು ಸಂಸ್ಕೃ ತದ ಸೋಂಕೂ ಅದಕ್ಕಿಲ್ಲ. ಈ ರೀತಿಯ ಮಾದ ರಿಗೆ ಉದಾಹರಣೆಗಳ ಪದಗಳ ಪಟ್ಟಿಯನ್ನು ಡಾ. ಕಾಲ್ಡ್‌ವೆಲ್‌ರವರು ವಿವರವಾಗಿ ಕೊಟ್ಟಿರುತ್ತಾರೆ. ಅಲ್ಲದೆ ಕಾವ್ಯಭಾಷೆಯಲ್ಲಿಯೂ ಸಹ ದ್ರಾವಿಡ ಭಾಷೆಗಳಲ್ಲಿ ಸಂಸ್ಕೃತದ ಪ್ರಾಚುರ್ಯ ತೆಲುಗಿನಲ್ಲಿ ದ್ದಷ್ಟು ಪ್ರಮಾಣದಲ್ಲಿ ಕನ್ನಡದಲ್ಲಿಲ್ಲ; ಕನ್ನಡದಲ್ಲಿ ದ್ದಷ್ಟು ಪ್ರಮಾಣದಲ್ಲಿ ತಮಿಳಿನಲ್ಲಿಲ್ಲ. ಅಲ್ಲದೆ ಹೀಗೆ ಎರವಲಾಗಿ ಪದಗಳನ್ನು ದ್ರಾವಿಡ ಭಾಷೆಗಳು ಮಾತ್ರ ತೆಗೆದುಕೊಂಡಿರದೆ, ಸಂಸ್ಕೃತವೂ ಸಹ

ದ್ರಾವಿಡ ಭಾಷೆಗಳಿಂದ ಸಾಕಷ್ಟು ಹೆಚ್ಚು ಪ್ರಮಾಣದಲ್ಲಿಯೇ ಸ್ವೀಕರಿಸಿದೆಯೆಂಬುದೂ ಸಹ ನೆನಪಿನಲ್ಲಿಡಬೇಕಾದ ಸಂಗತಿಯಾಗಿದೆ. ಈ ಎಲ್ಲ ಅಂಶಗಳ ಆಧಾರದ ಮೇಲೆ ದ್ರಾವಿಡ ಭಾಷೆಗಳೆಲ್ಲವೂ ಒಂದೇ ವರ್ಗಕ್ಕೆ ಸೇರಿವೆ, ಹಾಗೂ ಒಂದೇ ಮೂಲ ಭಾಷೆಯೊಂದರಿಂದ ಕವಲಾಗಿ ಒಡೆದಿವೆ ಎಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ವ್ಯಾಕರಣ ಪ್ರಕ್ರಿಯೆಗಳಲ್ಲಿ ಕಂಡುಬರುವ ಸಾದೃಶ್ಯದ ಆಧಾರದ ಮೇಲೆ ಹೇಳುವುದಾದರೆ, ತಮಿಳಿಗೂ ಮಲೆಯಾಳಕ್ಕೂ ಹೆಚ್ಚಿನ ಸಂಬಂಧವಿದೆ. ಹಾಗೆಯೇ ತಮಿಳಿಗೂ ಕನ್ನಡಕ್ಕೂ ಸ್ವಲ್ಪ ಕಡಿಮೆ ಪ್ರಮಾಣದಲ್ಲಿ ಸಂಬಂಧವಿದೆ. ತೆಲುಗಿಗೂ ತಮಿಳಿಗೂ ಇರುವ ಸಂಬಂಧ ಇನ್ನೂ ಕಡಿಮೆ ಪ್ರಮಾಣದಲ್ಲಿದೆ. ಈ ಹೋಲಿಕೆಗಳನ್ನು ಗಮನಿಸಿದರೆ, ಮೂಲ ದ್ರಾವಿಡದಿಂದ ತೆಲುಗು ಮೊದಲು ಬೇರೆಯಾಯಿತೆಂದೂ ಬಳಿಕ ಕನ್ನಡ ತಮಿಳುಗಳು ಪ್ರತ್ಯೇಕಗೊಂಡು, ಮುಂದೆ ಸ್ವಲ್ಪ ಕಾಲದ ನಂತರ, ತಮಿಳಿನಿಂದ ಮಲಯಾಳವೂ, ಕನ್ನಡದಿಂದ, ತುಳು ಕೊಡಗು ಇತ್ಯಾದಿ ಭಾಷೆಗಳೂ ಹುಟ್ಟಿದುವೆಂದು ಧಾರಾಳವಾಗಿ ಹೇಳಬಹುದಾಗಿದೆ. ಹೀಗೆ ದ್ರಾವಿಡ ಭಾಷೆಗಳು ಸಂಸ್ಕೃತದಿಂದ ಭಿನ್ನವಾಗಿರುವುದು ಮಾತ್ರವಲ್ಲದೆ ಆರ್ಯರು ಭಾರತಕ್ಕೆ ಬರುವುದಕ್ಕೆ ಬಹು ಮುಂಚಿನಿಂದಲೂ ಬಳಕೆಯಲ್ಲಿದ್ದುವೆಂದು ಊಹಿಸಲು ಅನೇಕ ಆಧಾರಗಳಿವೆ.

ದ್ರಾವಿಡ ಭಾಷೆಗಳ ಪ್ರಾಚೀನತೆಯನ್ನು ಗುರುತಿಸಲು ಇರುವ ಪ್ರಮುಖ ಆಧಾರಗಳ ಪೈಕಿ ಪ್ರಧಾನವಾದುವೆಂದರೆ, ಸಂಸ್ಕೃತ ಹಾಗೂ ವಿದೇಶೀ ಅನ್ಯಭಾಷೆಗಳಲ್ಲಿ ಈ ಭಾಷೆಗಳ ಬಗ್ಗೆ ಇರುವ ಉಲ್ಲೇಖಗಳು. ಅತ್ಯಂತ ಪ್ರಾಚೀನತಮವಾದ ದ್ರಾವಿಡ ಪದ ನಮಗೆ ಮೊತ್ತಮೊದಲನೆಯದಾಗಿ ದೊರೆತಿರುವುದು ಹೀಬ್ರೂ ಗ್ರಂಥವೊಂದರಲ್ಲಿ. ಕ್ರಿ.ಪೂ. ಒಂದುಸಾವಿರ ವರ್ಷಗಳಷ್ಟು ಹಿಂದಿನ ಕಾಲಕ್ಕೆ ಸೇರಿರುವ ಈ ಗ್ರಂಥದಲ್ಲಿ 'ತೂಕಿ' ಎಂಬ ದ್ರಾವಿಡ ಪದ ಕಾಣಿಸಿಕೊಂಡಿದೆ. ಈ ಪದವು ಬೇರೆಯಾವುದೂ ಆಗಿರದೆ ತಮಿಳಿನ 'ತೋಕೈ' ಎಂಬುದೇ ಆಗಿದೆಯೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಈ ಪದದ ನಿಷ್ಪತ್ತಿ ಇತ್ಯಾದಿ ವಿಚಾರಗಳನ್ನು ಕುರಿತು ಮ್ಯಾಕ್ಸ್ ಮುಲ್ಲರ್ ರವರು ಈ ರೀತಿ ಹೇಳುತ್ತಾರೆ: "If this etymology be right, it would be an important confirmation of the antiquity of the Tutanic languages spoken in India before the advent of the Aryan tribes."

ಹೆರೋಡಟಸ್ ಎಂಬ ಗ್ರೀಕ್ ದೊರೆಯ ಕಾಲದಲ್ಲಿ ರಚಿಸಲ್ಪಟ್ಟಿರುವ ಗ್ರಂಥವೊಂದರಲ್ಲಿ ಕಾಣಿಸಿಕೊಂಡಿರುವ karpion ಎಂಬ ಪದವು karuppu ಅಥವಾ karuppa ಎಂಬ ತಮಿಳು ಮಲಯಾಳಂ ಪದವೇ ಆಗಿದೆಯೆಂದು ಡಾ. ಕಾಲ್ಡ್‌ವೆಲ್ ಊಹಿಸಿರುತ್ತಾರೆ. ಪ್ರಾಚೀನ ದ್ರಾವಿಡ ಪದಗಳು ಬಹು ಹೆಚ್ಚು ಪ್ರಮಾಣದಲ್ಲಿ ನಮಗೆ ದೊರೆಯುವುದು ಕ್ರಿ.ಶ.ದ ಆದಿಯಲ್ಲಿದ್ದ ಟಾಲೆಮಿ ಎಂಬ ಗ್ರೀಕ್ ಭೂಗೋಳ ಶಾಸ್ತ್ರಜ್ಞನ ಗ್ರಂಥದಲ್ಲಿ. ಈ ಗ್ರಂಥದಲ್ಲಿ ಅನೇಕ ದ್ರಾವಿಡ ಸ್ಥಳಗಳ ಹಾಗೂ ಕುಲಗಳ ಹೆಸರುಗಳು ಉಲ್ಲೇಖಿಸಲ್ಪಟ್ಟಿವೆ. ಕಾಲ್ಡ್‌ವೆಲ್‌ರವರು ಇಂಥ ಸುಮಾರು ಇಪ್ಪತ್ತಕ್ಕೂ ಮೇಲ್ಪಟ್ಟ ಪದಗಳನ್ನು ಉದಾಹರಣೆಯಾಗಿ ಕೊಟ್ಟು ಅವುಗಳು ದ್ರಾವಿಡ ಪದಗಳೇ ಎಂದು ಸ್ಥಿರಪಡಿಸಿರುತ್ತಾರೆ.

ಗ್ರೀಕ್ ಭೂಗೋಳ ಶಾಸ್ತ್ರಜ್ಞರು ಪ್ರಾಚೀನ ಭಾರತದ ಭಾಷೆಗಳ ವಿಚಾರದಲ್ಲಿ ಯಾವ ವಿಧವಾದ ಹೆಚ್ಚಿನ ಮಾಹಿತಿಯನ್ನು ಕೊಟ್ಟರದಿದ್ದರೂ ಸಹ ಅವರು ಉಲ್ಲೇಖಿಸಿರುವ ಕೆಲವು ಸ್ಥಳಗಳ ಹಾಗೂ ಕುಲಗಳ ಹೆಸರುಗಳು ಮತ್ತು ಪದಗಳ ಆಧಾರದ ಮೇಲೆ ಕಾಲ್ಡ್‌ವೆಲ್‌ರವರು ಹೀಗೆ

ಹೇಳುತ್ತಾರೆ—"....and from an examination of the words which they have recorded, we seem to be justified in drawing the conclusion not only that the Dravidian language have remaind almost unaltered for the last two thousand years, but probably also that the prinipal dialects that now prevail had a separate existence at the commencement of the Christian era, and prevailed at that period in the very same districts of the country in which we now find them. The art of writing had probably been introduced, the grammar of the Dravidian languages had been fixed and some progress made in the art of composition before the arrival of the Greek merchants".

ವಿದೇಶೀ ಸಾಹಿತ್ಯದಲ್ಲಿ ಸಿಕ್ಕಿರುವ ಆಧಾರಗಳ ಜೊತೆಗೆ ಸಂಸ್ಕೃತ ಸಾಹಿತ್ಯದಲ್ಲಿ ಸಹ ಬಹಳ ಪ್ರಾಚೀನ ಕಾಲದಿಂದಲೂ ದ್ರಾವಿಡ ಪದದ ಉಲ್ಲೇಖ ಮಹಾಭಾರತ, ಪರಾಶರ, ಮನುಸ್ಮೃತಿ ಮತ್ತು ಬೃಹತ್ಸಂಹಿತೆಗಳಲ್ಲಿ ಬಂದಿರುತ್ತದೆ. ಏಳನೇ ಶತಮಾನದ ಕುಮಾರಿಲ ಭಟ್ಟನು ಆಂಧ್ರ-ದ್ರಾವಿಡ ಭಾಷೆಗಳ ಬಗ್ಗೆ ಪ್ರಸ್ತಾಪಿಸಿದ್ದಾನೆ. ಅಂತೂ ಈ ಎಲ್ಲ ಆಧಾರಗಳ ಮೇಲೆ 'ಕ್ರಿಸ್ತ ಪೂರ್ವದ ಬಹು ಹಿಂದಿನ ಕಾಲಕ್ಕೆ ದ್ರಾವಿಡ ಭಾಷೆಗಳು ಮೂಲ ದ್ರಾವಿಡದಿಂದ ಬೇರೆ ಬೇರೆ ಕವಲಾಗಿ ಒಡೆದು ಸ್ವತಂತ್ರ ಭಾಷೆಗಳಾಗಿ, ತಮ್ಮದೇ ಆದ ಸಾಹಿತ್ಯವನ್ನು ರೂಢಿಸಿಕೊಳ್ಳಲು ಆರಂಭಿಸಿದ್ದಿರಬಹುದೆಂದು ಹೇಳಬಹುದಾಗಿದೆ.

ದ್ರಾವಿಡ ಭಾಷೆಗಳನ್ನೆಲ್ಲಾ ಅಭ್ಯಾಸ ಸೌಕರ್ಯಕ್ಕಾಗಿ ಉತ್ತರ ದ್ರಾವಿಡ, ಮಧ್ಯದ್ರಾವಿಡ ಹಾಗೂ ದಕ್ಷಿಣ ದ್ರಾವಿಡ ಭಾಷೆಗಳೆಂದು ಮೂರು ವಿಧವಾಗಿ ವಿಂಗಡಿಸಿರುತ್ತಾರೆ. ಆರ್ಯರ ಧಾಳಿಯನ್ನೆದುರಿಸಲಾರದೆ ದಕ್ಷಿಣಕ್ಕೆ ಬಂದು ಪ್ರಾಚೀನ ದ್ರಾವಿಡರು ನೆಲಸಿದರೂ ಸಹ ಅಳಿದುಳಿದ ಜನ ಉತ್ತರ ಹಾಗೂ ಮಧ್ಯ ಭಾರತದಲ್ಲಿ ಕೆಲವರು ಇಂದಿಗೂ ದ್ರಾವಿಡ ಭಾಷೆಗಳನ್ನಾಡುವವರಿದ್ದಾರೆ. ಕುರುಖ್, ಮಲ್ತೊ, ಬ್ರಾಹೂಇ, ಗೊಂಡಿ, ಕುಈ, ನಾಯಿಕಿ ಮತ್ತು ಭಿಲ್ಲೀ ಭಾಷೆಗಳೆಲ್ಲಾ ಈ ಎರಡು ವರ್ಗಕ್ಕೆ ಸೇರಿವೆ. ಈ ಭಾಷೆಗಳೆಲ್ಲಾ ಕ್ಷುಲ್ಲಕ ಭಾಷೆಗಳು.

ದ್ರಾವಿಡ ವರ್ಗದ ಭಾಷೆಗಳಲ್ಲಿ ಪ್ರಮುಖವಾದ ಭಾಷೆಗಳೆಂದರೆ ದಕ್ಷಿಣ ವರ್ಗದ ಭಾಷೆಗಳು. ಅವುಗಳಲ್ಲಿಯೂ ತಮಿಳು, ಕನ್ನಡ, ತೆಲುಗು ಮತ್ತು ಮಲಯಾಳಂಗಳು ಪ್ರಮುಖ ಭಾಷೆಗಳಾಗಿದ್ದು, ಸಾವಿರಾರು ವರ್ಷಗಳ ಸಾಹಿತ್ಯದ ಹಿನ್ನೆಲೆಯನ್ನು ಹೊಂದಿವೆ. ಉಳಿದ ಕ್ಷುಲ್ಲಕ ಭಾಷೆಗಳಾದ ತುಳು, ಕೋಟ, ಬಡಗ, ಕೊಡಗು, ಕುಱುಂಬ, ಹಾಗೂ ಇರುಳಗಳು ಹೆಚ್ಚು ಕಡಿಮೆ ಕನ್ನಡದ ಉಪಭಾಷೆಗಳಾಗಿವೆ.

ದ್ರಾವಿಡ ವರ್ಗದ ನಾಲ್ಕು ಪ್ರಮುಖ ಭಾಷೆಗಳ ಪ್ರಾಚೀನತೆ ಹಾಗೂ ಅದರ ಸ್ವರೂಪದ ಬಗ್ಗೆ ಇನ್ನು ಸ್ವಲ್ಪ ವಿವರವಾಗಿ ವಿವೇಚಿಸಬಹುದಾಗಿದೆ. ಉಳಿದವುಗಳೆಲ್ಲಾ ಕ್ಷುಲ್ಲಕ ಭಾಷೆಗಳಾಗಿರುವುದರಿಂದ, ವುಅಗಳ ಬಗ್ಗೆ ಹೆಚ್ಚಿನ ವಿವೇಚನೆ ಪ್ರಕೃತದಲ್ಲಿ ಅನಗತ್ಯವಾಗಿದೆ.

ದ್ರಾವಿಡ ವರ್ಗದ ಭಾಷೆಗಳಲ್ಲೆಲ್ಲಾ ತಮಿಳು ಭಾಷೆಯೇ ಅತಿ ಪ್ರಾಚೀನವೂ ಹೆಚ್ಚು ವಿಪುಲವಾದ ಸಾಹಿತ್ಯವುಳ್ಳದ್ದೂ ಆಗಿದೆ. 'ತಮಿಳು' ಎನ್ನುವುದಕ್ಕೆ ಸವಿ, ಕಾರುಣ್ಯ - ಎಂದು ಅರ್ಥ ಕೊಡು

ತ್ತಾರೆ ತಮಿಳು ನಿಘಂಟುಕಾರರು. ಅಮೃತ, ಎನ್ನುವ ಅರ್ಥವೂ ಉಂಟು.

ಪ್ರಾಚೀನ ತಮಿಳು ವ್ಯಾಕರಣಕಾರರ ಪ್ರಕಾರ ಶಿವನ ಡಮರುವಿನ ಬಲಭಾಗದಿಂದ ಸಂಸ್ಕೃತವೂ ಎಡಭಾಗದಿಂದ ತಮಿಳೂ ಉದ್ಭವಿಸಿದವು. ಬಳಿಕ ಸಂಸ್ಕೃತವನ್ನು ಪಾಣಿನಿಗೂ ತಮಿಳನ್ನು ಅಗಸ್ತ್ಯನಿಗೂ ಶಿವನೇ ಅನುಗ್ರಹಿಸಿದನು. ಅವರ ನಂಬುಗೆಯ ಪ್ರಕಾರ ಅಗಸ್ತ್ಯನೇ ತಮಿಳಿಗೆ ಮೂಲ ಪುರುಷ. ತಮಿಳುಭಾಷೆ ದ್ರಾವಿಡ ಭಾಷೆಗಳಲ್ಲೆಲ್ಲಾ ಈಗ ತಿಳಿದಿರುವಷ್ಟರ ಮಟ್ಟಿಗೆ ತೀರಾ ಪ್ರಾಚೀನವಾದುದೆಂದು ಹೇಳಬಹುದಾದರೂ ತಮಿಳು ಗ್ರಂಥಕರ್ತರು ಹೇಳಿಕೊಳ್ಳುವಷ್ಟು ಪ್ರಾಚೀನತೆ ಅದಕ್ಕಿದೆಯೋ ಎಂಬುದು ಮಾತ್ರ ಸಂಶಯಗ್ರಸ್ತವಾದ ಅಂಶವಾಗಿದೆ. ಒಟ್ಟುಮೂರು 'ಸಂಘಂ ಸಾಹಿತ್ಯ' ದ ಅವಧಿ ಎಲ್ಲ ಸೇರಿ ಅವರ ಪ್ರಕಾರ ಸುಮಾರು ಹನ್ನೊಂದು ಸಾವಿರ ವರ್ಷಗಳಷ್ಟು ಕಾಲದ ಪ್ರಾಚೀನತೆ ತಮಿಳಿಗಿದೆ. ಅದರಲ್ಲಿ ಸಿಕ್ಕಿರುವ ಶಾಸನಗಳಲೆಲ್ಲಾ ಪ್ರಾಚೀನ ಕಾಲಕ್ಕೆ ಸೇರಿದ ಶಾಸನ ಕ್ರಿ.ಪೂ 350ಕ್ಕೂ ಪ್ರಾಚೀನ ಗ್ರಂಥ ಕ್ರಿ.ಶ ಎರಡನೇ ಶತಮಾನಕ್ಕೂ ಸೇರಿದೆ. ಅಲ್ಲದೆ ಅಗಸ್ತ್ಯನಿಂದಲೇ ತಮಿಳು ಹುಟ್ಟಿತು ಎಂಬ ಮಾತೂ ಸಹ ನಂಬಲರ್ಹವಾದುದಲ್ಲ. ಏಕೆಂದರೆ ಯಾವ ಒಬ್ಬ ವ್ಯಕ್ತಿಯಿಂದಲೂ ಒಂದು ಭಾಷೆ ಹುಟ್ಟಿ ಬೆಳೆಯುವುದು ಸಾಧ್ಯವೇ ಇಲ್ಲವೆಂಬುದು ವೈಜ್ಞಾನಿಕ ಸತ್ಯವಾಗಿವೆ.

ಕನ್ನಡ ಹಾಗೂ ತೆಲುಗು ಜನರು ತಮಿಳರನ್ನು 'ತಿಗುಳರು' ಮತ್ತು 'ಅರವರು' ಎಂದು ಕರೆದಿದ್ದಾರೆ. ಅದರ ಅರ್ಥ 'ಒರಳು' ಎಂದಾಗುತ್ತದೆ. ಕನ್ನಡದ ಕವಿ ಸರ್ವಜ್ಞನಾದರೋ 'ತಿಗುಳ ಜನ ಗೆಣೆಯಿಂದ ತಿಗುಣೆಯಾ ಕಡಿ ಲೇಸು" ಎಂದು ಕಹಿಯಾಗಿ ಉದ್ಗಾರವೆತ್ತಿದ್ದಾನೆ.

ಸಿಕ್ಕಿರುವ ಎಲ್ಲ ಆಧಾರಗಳ ಮೇಲೆ ಸ್ವಲ್ಪ ಧಾರಾಳವಾಗಿಯೇ ಹೇಳಬಹುದಾದರೆ ತಮಿಳಿಗೆ 2500 ವರ್ಷಗಳ ಅಂದರೆ ಬೇರಾವ ದ್ರಾವಿಡ ಭಾಷೆಗೂ ಇಲ್ಲದಷ್ಟು ಪ್ರಾಚೀನತೆ ಇದೆ ಎಂದು ಖಂಡಿತವಾಗಿ ಹೇಳಬಹುದು ; ಉಳಿದುದೆಲ್ಲಾ ಗಾಳಿಮಾತು. ಭಾಷೆಯ ಶುದ್ಧತೆಯ ದೃಷ್ಟಿಯಿಂದ ಹೇಳುವುದಾದರೂ ಸಹ ಈ ವರ್ಗದ ಬೇರೆ ಯಾವ ಭಾಷೆಯೂ ಉಳಿಸಿಕೊಂಡು ಬಂದಿರದಷ್ಟು ಪ್ರಮಾಣದ ವೈಶಿಷ್ಟ್ಯ ಹಾಗೂ ಪರಿಶುದ್ಧತೆಯನ್ನು ತಮಿಳು ಕಾಪಾಡಿಕೊಂಡು ಬಂದಿದೆಯೆಂಬುದರಲ್ಲಿ ಸಂದೇಹವೇ ಇಲ್ಲವೆನ್ನಬಹುದು.

ಮೂಲದ್ರಾವಿಡ ಭಾಷೆಯಿಂದ ತಮಿಳು ಬೇರ್ಪಟ್ಟ ಬಹು ಕಾಲದ ಬಳಿಕ ಅಂದರೆ ಬಹುಶಃ ಕ್ರಿ. ಶ. ಆರು ಅಥವಾ ಏಳನೇ ಶತಮಾನದಲ್ಲಿ ಮಲಯಾಳಂ ಭಾಷೆಯು ತಮಿಳಿನಿಂದ ಹುಟ್ಟಿರಬಹುದೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. 'ಕೇರಳ' ಎನ್ನುವ ಮಾತು ಮಾತ್ರ ಅಶೋಕನ ಕಾಲದಿಂದಲೂ ಇದೆಯಾದರೂ ಸಹ ಅದು ಒಂದು ಜನಸಮುದಾಯಕ್ಕೆ ಅಥವಾ ದೇಶಕ್ಕೆ ಅನ್ವಯಿಸುತ್ತದೆಯೇ ಹೊರತು ಭಾಷೆಗಲ್ಲ. ಸಿಕ್ಕಿರುವ ಪ್ರಥಮಗ್ರಂಥ ಹದಿನಾಲ್ಕನೇ ಶತಕದ ಆದಿ ಭಾಗಕ್ಕೆ ಸೇರಿದೆ. ಅದಕ್ಕಿಂತ ಹಿಂದೆ ಒಂದೆರಡು ಶತಮಾನಗಳಿಂದಲೂ ಅಂದರೆ ಬಹುಶಃ ಹನ್ನೆರಡನೇ ಶತಮಾನದಿಂದಲೂ ಈ ಭಾಷೆಯಲ್ಲಿ ಸಾಹಿತ್ಯ ಸೃಷ್ಟಿ ನಡೆಯುತ್ತಾ ಬಂದಿರಬಹುದೆಂದು ಊಹಿಸಬಹುದಾಗಿದೆ. ಈ ಭಾಷೆಯಲ್ಲಿರುವಷ್ಟು ಸಂಸ್ಕೃತ ಶಬ್ದಗಳ ಪ್ರಾಚುರ್ಯ ದ್ರಾವಿಡವರ್ಗದ ಮತ್ತಾವ ಭಾಷೆಗಳಲ್ಲೂ ಇಲ್ಲವೆಂದು ತಿಳಿದು ಬರುತ್ತದೆ. 'ಮಲಯಾಳಂ' ಎಂಬ ಮಾತು 'ಮಲೆಯ+ಆಳ್ಮ' ಎಂಬುದರಿಂದ ಬಂದಿರಬಹುದೆಂದು ಊಹಿಸಿರುತ್ತಾರೆ.

ಭಾಷೆಯ ದೃಷ್ಟಿಯಿಂದ ಹೇಳುವುದಾದರೆ ತೆಲುಗು ದ್ರಾವಿಡ ವರ್ಗದ ಭಾಷೆಗಳಲ್ಲೆಲ್ಲಾ ಪ್ರಾಚೀನ ವಾದುದು. ಮೂಲದ್ರಾವಿಡ ಭಾಷೆಯಿಂದ ತೆಲುಗು ಮೊದಲು ಕವಲೊಡೆದು ಹೊರಟಿತೆಂದೂ ಕನ್ನಡ ತಮಿಳುಗಳು ಸಲ್ಪ ಕಾಲ ಜೊತೆಯಲ್ಲಿದ್ದು ಬಳಿಕ ಬೇರೆಯಾದುವೆಂದೂ ಹೇಳುವ ವಿದ್ವಾಂಸರ ಮಾತುಗಳನ್ನು ಗಮನಿಸಿದರೆ ಇದು ಇನ್ನೂ ಹೆಚ್ಚು ಸ್ಪಷ್ಟವಾಗುತ್ತದೆ. ಸಾಹಿತ್ಯದ ದೃಷ್ಟಿಯಿಂದ ಹೇಳುವುದಾದರೆ ತೆಲುಗಿಗೆ ಮೂರನೇ ಸ್ಥಾನ ದೊರ ಕುತ್ತದೆ. ಸಿಕ್ಕಿರುವ ಪ್ರಥಮಗ್ರಂಥ ನನ್ನಯ್ಯ ಭಟ್ಟನ ಭಾರತವು ಹನ್ನೊಂದನೇ ಶತಮಾನದ ಆದಿಭಾಗಕ್ಕೆ ಸೇರಿರುವ ಕೃತಿ. ಪಂಪನ ಪ್ರಭಾವ ಈ ಭಾರತದ ಮೇಲೆ ಬಿದ್ದಿದೆಯೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ತೆಲುಗಿ ನಲ್ಲಿ ಶಾಸನಗಳೂ ಸಹ ಕಿ. ಶ. ಆರನೇ ಶತಮಾನ ದಿಂದ ಈಚೆಗೆ ಮಾತ್ರ ದೊರೆಯುತ್ತವೆ.

ತೆಲುಗು ಎನ್ನುವ ಪದ 'ತೇನ್' ಎಂಬ ಧಾತುವಿನಿಂದ ಬಂದಿದೆ; ತೇನ್ ಎಂದರೆ 'ಸಿಹಿ' ಎಂದರ್ಥ. ದ್ರಾವಿಡ ಭಾಷೆಗಳಲ್ಲೆಲ್ಲಾ ತೆಲುಗು ಅತಿಮಧುರವಾದ ಭಾಷೆಯೆಂದು ಐರೋಪ್ಯ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. 'ಆಂಧ್ರ' ಎನ್ನುವ ಪದದ ಉಲ್ಲೇಖ ಅಶೋಕನ ಶಾಸನಗಳಲ್ಲಿ ರಾಮಾಯಣ ಮಹಾಭಾರತಗಳಲ್ಲಿ ಹಾಗೂ ಕುಮಾರಿಲಭಟ್ಟನಲ್ಲಿ ಕಂಡುಬರುತ್ತದೆ.ಅಲ್ಲದೆ ಚೀನಿ ಯಾತ್ರಿಕನಾದ ಹೂಯನ್‌ತ್ಸಾಂಗನೂ ಮತ್ತು ಕ್ರಿ.ಶ. ಮೂರನೇ ಶತಮಾನದಲ್ಲಿ 'ಪ್ಲಿನಿ' ಎಂಬ ಲೇಖಕನೂ ಈ ಪದವನ್ನು ಉಲ್ಲೇಖಿಸಿರುತ್ತಾರೆ. ಮಹಾಭಾರತದಲ್ಲಿ ಆಂಧ್ರರನ್ನು 'ಚೀನ' ಯವನ ಹಾಗೂ ಕಾಂಭೋಜರೆಂಬ ದುರ್ಧರ್ಮಿಗಳ ಜೊತೆ ಯಲ್ಲಿ ಸೇರಿಸಿರುವುದು ಮಾತ್ರವಲ್ಲದೆ, ಪಾಪಿಷ್ಠರು ಮಾತ್ರ ಆಂಧ್ರ, ಪುಳಿಂದ, ಶಬರ ಮನೆತನಗಳಲ್ಲಿ ಜನ್ಮವೆತ್ತುತ್ತಾರೆಂದು ಹೇಳಲಾಗಿದೆ. ತಮಿಳರು ಅಗಸ್ತ್ಯ ಮೂಲವನ್ನು ಹೇಳಿದಂತೆ ತೆಲುಗರು ತಮಗೆ ಕಣ್ವ ಮೂಲವನ್ನು ಹೇಳುತ್ತಾರಾದರೂ ಅದು ನಂಬಬಹುದಾದ ವಿಚಾರವಲ್ಲ. ಭಾಷೆಯ ದೃಷ್ಟಿಯಿಂದಲ್ಲವಾದರೂ ಲಿಪಿಯ ದೃಷ್ಟಿಯಿಂದ ಕನ್ನಡಕ್ಕೂ ತೆಲುಗಿಗೂ ಅತಿ ಹೆಚ್ಚು ಪ್ರಮಾ ಣದ ಹೋಲಿಕೆಯಿದೆ.

ಸಿಕ್ಕಿರುವ ಸಾಹಿತ್ಯದ ದೃಷ್ಟಿಯಿಂದ ಹೇಳು ವುದಾದರೆ ದ್ರಾವಿಡ ವರ್ಗದ ಭಾಷೆಗಳಲ್ಲೆಲ್ಲಾ ತಮಿಳನ್ನು ಬಿಟ್ಟರೆ ಅತಿ ಪ್ರಾಚೀನ ಹಾಗೂ ವಿಪುಲ ವಾದ ಸಾಹಿತ್ಯವನ್ನುಳ್ಳ ಭಾಷೆಯೆಂದರೆ ಕನ್ನಡ. ಹರಪ್ಪಾ ಮೊಹೆಂಜದಾರೋ ಭೂಶೋಧನೆಯ ಕಾಲದಲ್ಲಿ ಅಲ್ಲಿ ಸಿಕ್ಕಿರುವ ಫಲಕಗಳ ಮೇಲಿರುವ ಭಾಷೆ ಕನ್ನಡವೇ ಎಂಬ ತೀರ್ಮಾನಕ್ಕೆ ಫಾದರ್ ಹೆರಾಸ್‌ರವರು ಬಂದಿರುವರಾದರೂ ಈ ಬಗ್ಗೆ ಇನ್ನೂ ಖಚಿತವಾದ ಅಭಿಪ್ರಾಯ ಹೊರಬಿದ್ದಿಲ್ಲ.

ಕರ್ನಾಟಕದ ಪ್ರಾಚೀನತಮ ಉಲ್ಲೇಖವು ನಮಗೆ ದೊರೆಯುವುದು (ಕ್ರಿ.ಪೂ. 200 ಅಥವಾ 300 ಕ್ಕೆ ಸೇರಿದ) ವ್ಯಾಸಭಾರತದಲ್ಲಿ. ಸಿಕ್ಕಿರುವ ಎಲ್ಲ ಪ್ರತಿಗಳಲ್ಲೂ ಈ ಭಾಗವಿರುವುದರಿಂದ ಇದನ್ನು ಪ್ರಕ್ಷಿಪ್ತವೆಂದು ಹೇಳಲು ಸಾಧ್ಯವೇ ಇಲ್ಲ. ಅಂದರೆ ಮಹಾಭಾರತದ ರಚನೆಯ ಕಾಲಕ್ಕಿಂತ ಬಹು ಹಿಂದಿನಿಂದಲೂ ಕನ್ನಡನಾಡು ಅಸ್ಥಿತ್ವದಲ್ಲಿ ತ್ತೆಂದು ಊಹಿಸಬಹುದಾಗಿದೆ. ಸೋಮದೇವನ 'ಕಥಾಸರಿತ್ಸಾಗರ'ದಲ್ಲಿಯೂ ಸಹ ಕರ್ನಾಟಕದ ಉಲ್ಲೇಖವಿರುವುದರಿಂದ ಅದರ ಆಕರಗ್ರಂಥ ವಾದ ಗುಣಾಢ್ಯನ ಪೈಶಾಚಿ ಬೃಹತ್ಕಥೆಯಲ್ಲೂ ಇದರ ಬಗ್ಗೆ ಪ್ರಸ್ತಾಪವಿರಬಹುದೆಂದು ಶ್ರೀಮಾನ್ ಆರ್. ನರಸಿಂಹಾಚಾರ್ಯರು ಊಹಿಸಿರುತ್ತಾರೆ. ಆರನೇ ಶತಮಾನದ ವರಾಹಮಿಹಿರನ 'ಬೃಹತ್ಸಂ ಹಿತೆ' ಯಲ್ಲೂ ಕ್ರಿ.ಶ. 700 ರಲ್ಲಿದ್ದ ಪಾಂಡ್ಯ ದೊರೆ

'ಶೆಡ್ಮೈ' ಯನ ವೆಳ್ಳಿಕುಡಿ ಶಾಸನಗಳಲ್ಲಿಯೂ ಸಹ ಕನ್ನಡದ ಬಗ್ಗೆ ಉಲ್ಲೇಖವಿದೆ. ಕ್ರಿ.ಶ.9ನೇ ಶತಮಾನದ ಸಂಸ್ಕೃತ ಲಾಕ್ಷಣಿಕನಾದ ರಾಜಶೇಖರನೂ ಕನ್ನಡಿಗರನ್ನು 'ಟಂಕಾರೋತ್ಕರಪಾಠಿನ' ರೆಂದು ಕರೆದಿದ್ದಾನೆ. ಅಂದರೆ ರಾಜಶೇಖರನ ಕಾಲಕ್ಕಾಗಲೇ ಕರ್ಣಾಟಕದಲ್ಲಿ ಓದುಗಾರಿಕೆ ಹೆಚ್ಚು ಪ್ರಾಶಸ್ತ್ಯವನ್ನು ಪ್ರೋತ್ಸಾಹವನ್ನೂ ಪಡೆದ ಲಲಿತ ಕಲೆಯಾಗಿತ್ತೆಂದು ಶ್ರೀ ರಾಳ್ಲಪಲ್ಲಿ ಅನಂತಕೃಷ್ಣ ಶರ್ಮರು ತಮ್ಮ 'ಕರ್ಣಾಟಕಟಂಕಾರಟೀಕೆ' ಯಲ್ಲಿ ಅಭಿಪ್ರಾಯಪಡುತ್ತಾರೆ. ಕ್ರಿ.ಶ. ಎರಡನೇ ಶತಮಾನದ ತಮಿಳು ಪುರಾಣ ಕಾವ್ಯ 'ಶಿಲಪ್ಪದಿಗಾರಮ್'ನಲ್ಲಿಯೂ ಸಹ ಕನ್ನಡಿಗರನ್ನು ಕರುನಾಡರ್ ಎಂದು ಸಂಬೋಧಿಸಲಾಗಿದೆ.

ಕನ್ನಡ ಎನ್ನುವ ಪದವನ್ನು ಮರಾಠಿಯಲ್ಲಿ ಜ್ಞಾನೇಶ್ವರರು 'ಅಗಮ್ಯ' ಎನ್ನುವ ಅರ್ಥದಲ್ಲಿ ಉಪಯೋಗಿಸಿದ್ದಾರೆ. ಡಾ. ಗುಂಡರ್ಟ್‌ರವರು 'ಕನ್ನಡ'ದ ವ್ಯುತ್ಪತ್ತಿಯನ್ನು ಕರ್+ನಾಡು, ಅಂದರೆ ಕಪ್ಪು ಭೂಮಿಯ ನಾಡು ಎಂದು ಹೇಳುತ್ತಾರೆ. ಡಾ. ಕಾಲ್ಡ್‌ವೆಲ್‌ರವರೂ ಸಹ ಇದೇ ಅಭಿಪ್ರಾಯವನ್ನು ಅನುಮೋದಿಸುವವರಾಗಿದ್ದಾರೆ. ಆದರೆ ಶ್ರೀ ಹತ್ತಂಗಡಿ ನಾರಾಯಣರಾಯರು ಕರು+ನಾಡು, ಅಂದರೆ ಎತ್ತರವಾದ ಪ್ರದೇಶದಲ್ಲಿರುವ ದೇಶ ಎಂದು ಅರ್ಥವಿಸುತ್ತಾರೆ. ಶ್ರೀ ಗೋವಿಂದಪೈಗಳಾದರೋ ಕರು+ನಾಡು ಎಂದರೆ ಬಹು ವಿಸ್ತೀರ್ಣವಾದ ಮಹಾರಾಷ್ಟ್ರವೆಂದು ಹೇಳುತ್ತಾರೆ. ಶ್ರೀ ಆರ್. ನರಸಿಂಹಾಚಾರ್ಯರು ತಮಿಳು ತೆಲುಗರ ಸಂಪ್ರದಾಯವನ್ನು ಅನುಸರಿಸಿ ಕಮ್ಮಿತು+ನಾಡು ಅಂದರೆ ಪರಿಮಳ ಯುಕ್ತವಾದ ಭೂಮಿ ಎಂದು ಅರ್ಥವಿಸುತ್ತಾರೆ. ಹೀಗೆ ಇನ್ನೂ ಅನೇಕ ವಿದ್ವಾಂಸರು ಕನ್ನಡ ಪದದ ವ್ಯುತ್ಪತ್ತಿಯನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಕೊಡುತ್ತಾರೆ. ಈ ಬಗ್ಗೆ 'ಇದಮಿತ್ಥಂ' ಎಂಬ ಕೊನೆಯ ತೀರ್ಮಾನ ಯಾವುದೂ ಇಲ್ಲವಾದರೂ ಸಹ ಶ್ರೀ ಶಂಬಾ ಜೋಶಿಯವರು ಕೊಡುವ ವಿವರಣೆ ಹೆಚ್ಚು ಸಮರ್ಪಕವೆನಿಸುತ್ತದೆ. ಈ ವಿಚಾರವನ್ನು ವಿಸ್ತಾರವಾಗಿ ತಮ್ಮ ಗ್ರಂಥವಾದ 'ಕನ್ನಡದ ನೆಲೆ' ಯಲ್ಲಿ ಅವರು ಚರ್ಚಿಸುತ್ತಾರೆ. ಅವರ ಅಭಿಪ್ರಾಯದಲ್ಲಿ ಕನ್ನಡ ಹಾಗೂ ಕರ್ಣಾಟಕ ಪದಗಳ ಬಗ್ಗೆ ಇರುವ ವಾದಗಳಲ್ಲಿ 'ಯಾವುದಕ್ಕೂ ಪ್ರಾಚೀನ ಸಾಂಸ್ಕೃತಿಕ ಪರಂಪರೆ; ಇತಿಹಾಸಗಳ ಬೆಂಬಲವಿಲ್ಲ" ಯಾವ ಭಾಷೆಗಾಗಲಿ ಅಥವಾ ದೇಶಕ್ಕಾಗಲೀ ಒಂದು ಹೆಸರು ಬೀಳಬೇಕಾದರೆ ಆ ಜನಾಂಗದ ಪ್ರಾಚೀನ ಪರಂಪರೆಯೇ ಅದಕ್ಕೆ ಬಹುಮಟ್ಟಿಗೆ ಕಾರಣವಾಗುತ್ತದೆಯೆಂಬ ಅಂಶವನ್ನು ಲಕ್ಷಿಸಿದರೆ ಶ್ರೀ ಜೋಶಿಯವರ ನಿಲುವು ಸ್ಪಷ್ಟವಾಗುತ್ತದೆ. ಮುಂದುವರಿದು ಶ್ರೀಮಾನ್ ಜೋಶಿಯವರು ಹೀಗೆ ಹೇಳುತ್ತಾರೆ. "ಜಗತ್ತಿನ ಪ್ರಾಚೀನವೆನಿಸಿರುವ ದೇಶಗಳಿಗೆ ಇರುವ ಹೆಸರುಗಳೆಲ್ಲಾ ಅಲ್ಲಿಯ ಮೂಲ ಜನಾಂಗಳಿಂದಲೇ ಬಂದವುಗಳಾಗಿವೆ. ಕರ್ಣಾಟಕವು ಇದೂ ಒಂದು ಪ್ರಾಚೀನ ದೇಶವಾಗಿದ್ದರೆ— ಪ್ರಾಚೀನವಾಗಿದೆಯೆಂದು ಮಹಾಭಾರತ ಉಲ್ಲೇಖದಿಂದಲೂ, ಬೇರೆ ಪ್ರಮಾಣಗಳಿಂದಲೂ ಸಿದ್ಧ ಸಂಗತಿ–ಈ ದೇಶದ ಹೆಸರಾದರೂ ಇಲ್ಲಿಯ ಮೂಲ ಜನಾಂಗದಿಂದಲೇ ಬಂದಿರಬೇಕೆಂಬುದು ನಿಶ್ಚಿತ........ ಆರಂಭಕಾಲದಲ್ಲಿ ಆಹಾರಕ್ಕಾಗಿ ತಂಡಗಟ್ಟಿಕೊಂಡು ಅಲೆಯುತ್ತಿದ್ದ ಜನಾಂಗಗಳು ಕುಟುಂಬಿಗಳಾಗಿ ಒಕ್ಕಲುತನವನ್ನು ಕಯ್ಕೊಂಡು ಒಂದೆಡೆಯಲ್ಲಿ ನೆಲಸಿದ ಬಳಿಕ ನಾಡುಗಳು ತಲೆದೋರಿದವು ಎಂದು ಇತಿಹಾಸವು ಹೇಳುತ್ತದೆ. ಆದುದರಿಂದ ನಾಡುಗಳಿಗೆ ಮೊಟ್ಟ ಮೊದಲು ಹೆಸರು ಜನಾಂಗಗಳಿಂದಲೇ ಬಂದವು ಈ ದೃಷ್ಟಿಯಿಂದ ವಿಚಾರಿಸಿದರೆ ಕನ್ನಾಡು ಅಥಾವ

ಕನ್ನಡ ಇದರೊಳಗಿನ ಉತ್ತರ ಪದವಾದ 'ನಾಡು' ಎಂಬುದನ್ನು ಬೇರ್ಪಡಿಸಿದ ಬಳಿಕ ಉಳಿದ 'ಕನ್' ಎಂಬ ಪದವು ಜನಾಂಗ ವಾಚಕವೆಂದು ನಿರ್ಧರಿಸಬಹುದು." ಆದ್ದರಿಂದ ಕನ್ನಾಡೆಂದರೆ ಕಣ್ಣರ ನಾಡು ಈ 'ಕಣ್ಣ' ರೇ 'ಕಳ್ಳರು' ಎಂಬ ಪ್ರಾಚೀನ ಜನಾಂಗವಾಗಿದ್ದು ಹಾಲುಮತದ ಗೋವಳರೆಂದು ನಿಶ್ಚಯಿಸಿದ್ದಾರೆ. ಇವರು ವಿಂಧ್ಯದಿಂದ ನೀಲಗಿರಿ ವರೆಗೆ ಇರುವ ಪ್ರದೇಶದಲ್ಲಿ ವಾಸಿಸುತ್ತಿದ್ದರೆಂದೂ ಅವರ ಅಭಿಪ್ರಾಯವಾಗಿವೆ. ಸದ್ಯಕ್ಕೆ ಈ ಬಗ್ಗೆ ಇರುವ ಎಲ್ಲ ಅಭಿಪ್ರಾಯಗಳಿಗಿಂತ ಶ್ರೀ ಜೋಶಿಯವರ ಅಭಿಪ್ರಾಯವು ಹೆಚ್ಚು ಸಮಂಜಸವಾಗಿದೆ ಎನ್ನಬಹುದಾಗಿದೆ.

ಚಾರಿತ್ರಿಕ ದೃಷ್ಟಿಯಿಂದಲೂ ಕನ್ನಡನಾಡು ಬಹುಪ್ರಖ್ಯಾತಿ ಪಡೆದ ದೇಶ. ಇಲ್ಲಿ ಶಾತವಾಹನ, ಗಂಗ, ಕದಂಬ,ಚಾಲುಕ್ಯ, ಹೊಯಿಸಳ ಮುಂತಾದ ಸಾಮ್ರಾಜ್ಯಗಳು ಹುಟ್ಟಿ ಬೆಳೆದು ಈ ದೇಶದ ಹಿರಿಮೆಯನ್ನು ಹೆಚ್ಚಿಸಿ ಇದರ ಕೀರ್ತಿಯನ್ನು ಬೆಳಗಿದವು.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೋಕಿನ ಬ್ರಹ್ಮಗಿರಿಯಲ್ಲಿ 1947 ರಲ್ಲಿ ನಡೆಸಿದ ಭೂಶೋಧನೆಯ ಫಲವಾಗಿ ಕರ್ಣಾಟಕದ ಪ್ರಾಚೀನ ಸಂಸ್ಕೃತಿಯ ಸ್ವರೂಪದ ಮೇಲೆ ಹೆಚ್ಚಿನ ಬೆಳಕು ಬಿದ್ದಂತಾಗಿದೆ. ಬ್ರಹ್ಮಗಿರಿಯ ಸಮೀಪದಲ್ಲೇ ಕ್ರಿ.ಪೂ. ಮೂರನೇ ಶತಮಾನದಲ್ಲಿ 'ಇಸಿಲಾ' ಎಂಬ ಪಟ್ಟಣವಿದ್ದು ಅದು ಅಶೋಕನ ಸಾಮ್ರಾಜ್ಯದ ದಕ್ಷಿಣ ಭಾಗದ ರಾಜಧಾನಿಯಾಗಿತ್ತೆಂದು ಶ್ರೀ ಬಿ. ಎಲ್ ರೈಸ್‌ರವರು ಸಿದ್ಧಪಡಿಸಿರುತ್ತಾರೆ. ಬ್ರಹ್ಮಗಿರಿಯ ಕೆಳಗಿನ ಪದರಗಳಲ್ಲಿ ಸಿಕ್ಕಿರುವ ಪ್ರಾಚೀನ ಸಂಸ್ಕೃತಿಯ ಅವಶೇಷಗಳು ಶಿಲಾಯುಗಕ್ಕೆ ಸೇರಿದ್ದು ಕ್ರಿ.ಪೂ. 1000 ಅಥವಾ ಅದಕ್ಕೂ ಹಿಂದಿನ ಕಾಲದವುಗಳೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಚಿತ್ರದುರ್ಗದ ಬಳಿಯಲ್ಲೇ ಬೆಟ್ಟಗಳ ನಡುವೆ ಇರುವ ಚಂದ್ರವಳ್ಳಿ ಕಣಿವೆಯಲ್ಲಿ ನಡೆಸಿದ ಭೂಶೋಧನೆಯೂ ಪ್ರಾಚೀನ ಕರ್ಣಾಟಕದ ಇತಿಹಾಸವನ್ನು ತಿಳಿಯಲು ತುಂಬಾ ಸಹಾಯವನ್ನುಂಟುಮಾಡಿದೆ ಎನ್ನ ಬಹುದಾಗಿದೆ.

ಚಂದ್ರವಳ್ಳಿಯೆಂಬುದು ಪುರಾಣ ಪ್ರಸಿದ್ಧವಾದ ಮಹಾಭಾರತದ ಕಾಲದ ದೊಡ್ಡ ಪಟ್ಟಣವೆಂದು ಈಗಲೂ ಅಲ್ಲಿಯ ಜನರಲ್ಲಿ ನಂಬಿಕೆಯಿದೆ. ಚಂದ್ರವಳ್ಳಿ ಭೂಶೋಧನೆಯ ಕಾಲಕ್ಕೆ ದೊರೆತ ಪದಾರ್ಥಗಳು ನಾಲ್ಕು ಸಾವಿರಕ್ಕಿಂತ ಹೆಚ್ಚಾಗಿದೆಯೆಂದು ಗೊತ್ತಾಗಿದೆ. ರೋಮ್ ಚಕ್ರಾಧಿಪತಿಗಳಾಗಿದ್ದ ಅಗಸ್ಟಸ್ ಹಾಗೂ ಸೀಸರರ ಹೆಸರಿರುವ ಬೆಳ್ಳಿಯ ನಾಣ್ಯಗಳು ಮತ್ತು ಕ್ರಿ.ಪೂ. 130 ರ ಕಾಲಕ್ಕೆ ಸೇರಿದ ಚೀನದ ಅರಸು ಹ್ಯಾನ್ ವಂಶದ ವೂ-ಟೆ, ಎಂಬುವನ ಹೆಸರಿರುವ ನಾಣ್ಯಗಳು ದೊರೆತಿವೆ. ಆದುದರಿಂದ ಚಂದ್ರವಳ್ಳಿ ಸಂಸ್ಕೃತಿಯ ಜನ ವಿದೇಶಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದರೆಂದು ತಿಳಿದು ಬರುತ್ತದೆ. ಈ ಪ್ರದೇಶದಲ್ಲಿ ದೊರೆತಿರುವ ಬಹುಪಾಲು ನಾಣ್ಯಗಳು ಹಾಗೂ ಅವಶೇಷಗಳೆಲ್ಲಾ ಕ್ರಿ.ಶ. ಒಂದನೇ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ಪ್ರಸಿದ್ಧರಾಗಿದ್ದ ಶಾತವಾಹನರ ಕಾಲಕ್ಕೆ ಸೇರಿವೆ. ಈ ಶಾತವಾಹನರು ಕನ್ನಡಿಗರೆಂದು ಬಹು ಜನ ವಿದ್ವಾಂಸರ ಅಭಿಪ್ರಾಯವಾಗಿದೆ. ಮುಂದೆ ಶಾತವಾನಹವಂಶ ಕೊನೆಗೊಂಡು ಕ್ರಿ.ಶ. ಮೂರನೇ ಶತಮಾನದಲ್ಲಿ ರಾಜ್ಯವು ಕದಂಬರ ಕೈಗೆ ಸೇರಿತೆಂದು ತಿಳಿದು ಬರುತ್ತದೆ. ಕದಂಬರ ಮೂಲ ಪುರುಷನಾದ ಮಯೂರಶರ್ಮನ ಶಾಸನವೂ ಸಹ ಇಲ್ಲಿ ದೊರೆತಿದೆ. ಅಲ್ಲದೆ ಕೆಳಗಿನ ಪದರಗಳಲ್ಲಿ ದೊರೆತಿರುವ ಹಳೆ ಶಿಲಾಯುಗಕ್ಕೆ ಸೇರಿದ ಅನೇಕ

ಬಗೆಯ ವಸ್ತುಗಳು ಈ ಸಂಸ್ಕೃತಿಯ ಪ್ರಾಚೀನತೆಯನ್ನು ಮತ್ತಷ್ಟು ದೃಢಪಡಿಸಿವೆ.

ಕರ್ನಾಟಕದ ಪ್ರಾಚೀನ ಅರಸು ವಂಶಗಳಲ್ಲಿ ಆರನೇ ಶತಮಾನದ ಬಾದಾಮಿಯ ಚಾಲುಕ್ಯರೂ ಹಾಗೂ ಎಂಟನೇ ಶತಮಾನದ ರಾಷ್ಟ್ರಕೂಟರು ಪ್ರಮುಖರು. ಮುಂದೆ ಬಂದ ಕಲ್ಯಾಣಿಯ ಚಾಲುಕ್ಯರು ಹಾಗೂ ಹೊಯಿಸಳರ ಕಾಲವಂತೂ ಕನ್ನಡ ನಾಡಿನ ಇತಿಹಾಸದಲ್ಲಿ ಉಜ್ವಲವಾದ ಕಾಲವಾಗಿದೆ. ಈ ಕಾಲದಲ್ಲಿ ಕನ್ನಡ ಸಾಹಿತ್ಯಕ್ಕೆ ಸಿಕ್ಕಿದಷ್ಟು ರಾಜಮನ್ನಣೆ ಹಾಗೂ ಪ್ರೋತ್ಸಾಹ ಮತ್ತೆ ಯಾವ ಕಾಲದಲ್ಲೂ ದೊರೆತ್ತಿಲ್ಲವೆಂದರೂ ತಪ್ಪಾಗಲಾರದು.

ಇತಿಹಾಸದಲ್ಲಿಂತೋ ಅಂತೆ ಪುರಾಣಕಾಲದಲ್ಲೂ ಸಹ ಕನ್ನಡನಾಡು ಕೆಲವು ಮಹಾ ವ್ಯಕ್ತಿಗಳ ಕಾರ್ಯಕ್ಷೇತ್ರವಾಗಿತ್ತೆಂದು ತಿಳಿದುಬರುತ್ತದೆ. ಜಮದಗ್ನಿಪುತ್ರ ಪರಶುರಾಮನ ಕಾರ್ಯಕ್ಷೇತ್ರ ಕರ್ನಾಟಕವೇ ಆಗಿತ್ತೆಂದು ಹಲವರ ಅಭಿಪ್ರಾಯವಿದೆ. ಪ್ರಾಚೀನ ಕನ್ನಡ ಶಾಸನಗಳಲ್ಲಿ ಪರಶುರಾಮನು ಅನೇಕ ವೀರರ ಆದರ್ಶ ಪುರುಷನಾಗಿದ್ದಾನೆ. ರಾಮಭಂಟ ಹನುಮಂತನಂತೂ ಅಚ್ಚ ಕನ್ನಡಿಗನೇ ಆಗಿದ್ದು ಹೊನ್ನಾವರವೇ ಆತನ ಸ್ಥಳವಾಗಿತ್ತೆಂದು ಒಂದು ಅಭಿಪ್ರಾಯವಿದೆ. ರಾವಣನು ಆತ್ಮಲಿಂಗವನ್ನು ಪಡೆದ ಕಥೆಗೆ ಸಂಭಂಧಿಸಿದ ಗೋಕರ್ಣಕ್ಷೇತ್ರವಂತೂ ಸುಪ್ರಸಿದ್ಧವೇ ಇದೆ. ಇದರಂತೆಯೇ ಮಹಾಭಾರತದಲ್ಲಿ ಬರುವ ಹಿಡಿಂಬಾಸುರನ ಊರು ಚಿತ್ರದುರ್ಗವೇ ಎಂದು ನಂಬಿಕೆಯಿದೆ.

ಕನ್ನಡನಾಡು ಹಾಗು ಜನಾಂಗದ ಅಸ್ತಿತ್ವದ ಕುರುಹು ಹೀಗೆ ಕ್ರಿಸ್ತಪೂರ್ವ ಸಾವಿರಾರು ವರ್ಷಗಳಷ್ಟು ಹಿಂದೆ ಹೋಗಬಹುದಾದರೂ ಸಹ ಕನ್ನಡ ನುಡಿಯ ಪ್ರಾಚೀನತೆ ಅಷ್ಟಿಲ್ಲ. ಕ್ರಿ. ಶ. ಒಂದನೇ ಶತಮಾನದಲ್ಲಿದ್ದ ಹಾಲರಾಜನೆಂಬ ಶಾತವಾಹನರ ಅರಸನ 'ಗಾಥಾಸಪ್ತಶತಿ' ಎಂಬ ಪ್ರಾಕೃತ ಕಾವ್ಯದಲ್ಲಿ ಪೊಟ್ಟ, ತುಪ್ಪ, ಪೆಟ್ಟು, ತೀರ್ ಮುಂತಾದ ಕನ್ನಡ ಪದಗಳಿವೆಯೆಂದು ಶ್ರೀ ಗೋವಿಂದ ಪೈಗಳು ತೋರಿಸಿ ಕೊಟ್ಟದ್ದಾರೆ. ಅದೇ ರೀತಿಯಲ್ಲಿ ಕ್ರಿ. ಶ. ಎರಡನೇ ಶತಮಾನಕ್ಕೆ ಸೇರಿದ ಗ್ರೀಕ್ ಪ್ರಹಸನವೊಂದರಲ್ಲಿ ಕನ್ನಡ ಪದಗಳಿವೆಯೆಂದೂ, - ಈ ಎಲ್ಲ ಆಧಾರಗಳ ಮೇಲೆ ಕ್ರಿ.ಶ. ಒಂದು ಅಥವಾ ಎರಡನೇ ಶತಮಾನದ ಹೊತ್ತಿಗಾಗಲೇ ಕನ್ನಡದಲ್ಲಿ ಕಾವ್ಯ–ಸಾಹಿತ್ಯ ವಿದ್ದಿರಬೇಕೆಂದೂ ಶ್ರೀ ಗೋವಿಂದ ಪೈಗಳು ಊಹಿಸಿರುತ್ತಾರೆ. ಶ್ರೀಮಾನ್ ರಂ. ಶ್ರೀ. ಮುಗಳಿಯವರು ಹೇಳಿರುವಂತೆ "ಈ ಊಹೆ ವಿಚಾರಣೀಯವೆನ್ನಬಹುದಾದರೂ ನಿರ್ಣಾಯಕವಾಗಲಾರದು.''

ಕನ್ನಡದಲ್ಲಿ ಸಿಕ್ಕಿರುವ ಅತಿಪ್ರಾಚೀನ ಶಾಸನವೆಂದರೆ ಕ್ರಿ. ಶ. 450 ರ ಸುಮಾರಿನ ಹಲ್ಮಿಡಿ ಶಾಸನವೇ ಆಗಿದೆ. ಈ ಶಾಸನದ ಪದ್ಯವು ಪೂರ್ವ ಹಳಗನ್ನಡವೆಂದು ಹೇಳಬಹುದಾದ ರೂಪದಲ್ಲಿದ್ದು, ಸಾಹಿತ್ಯ ಗುಣದಿಂದ ಕೂಡಿದೆ. ಮುಂದಿನ ಕಾಲಕ್ಕೆ ಸೇರಿದ ಶಾಸನಗಳಲ್ಲಿ ಕಪ್ಪೆ ಅರಭಟ್ಟನೆಂಬುವನ ಸ್ತುತಿಗೆ ಸಂಬಂಧಿಸಿದ ಬಾದಾಮಿಯ ಶಾಸನವಂತೂ ಒಂದು ಚಿಕ್ಕ ಭಾವಗೀತೆಯ ರೂಪದಲ್ಲಿರುವ ತ್ರಿಪದಿಯಾಗಿದ್ದು ಉತ್ತಮ ರೀತಿಯ ಸಾಹಿತ್ಯ ಗುಣದಿಂದ ಕಂಗೊಳಿಸುತ್ತದೆ. ಈ ಶಾಸನಗಳ ಪದ್ಯದ ಮಾದರಿ ಹಾಗೂ ಬಂಧ ಇವುಗಳನ್ನು ನೋಡಿದರೆ ಕ್ರಿ. ಶ. 700 ಕ್ಕಿಂತ ಒಂದೆರಡು ಶತಮಾನಗಳ ಹಿಂದಿನಿಂದಲೂ ಕನ್ನಡದಲ್ಲಿ ಪದ್ಯಸಾಹಿತ್ಯದ ರಚನೆಯಾಗುತ್ತಿದ್ದಿರಬಹುದೆಂಬ ಊಹೆಯನ್ನು ನಂಬಬಹುದಾಗಿದೆ.

ಶಾಸನಗಳನ್ನು ಬಿಟ್ಟರೆ, ಕನ್ನಡ ಸಾಹಿತ್ಯದ ಪ್ರಾಚೀನ ಸ್ಥಿತಿಯನ್ನು ಅರಿಯಲು ನಮಗಿರುವ ಎರಡನೆಯ ಸಾಧನವೆಂದರೆ ಕವಿರಾಜಮಾರ್ಗ. ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗ ದೇವನ ಕಾಲದಲ್ಲಿ ಅವನಿಂದಲೋ ಅಥವಾ ಅವನ ಸಭಾಸದನಿಂದಲೋ ರಚಿತವಾಗಿರುವ ಅಲಂಕಾರ ಶಾಸ್ತ್ರಕ್ಕೆ ಸಂಬಂಧಿಸಿದ ಈ ಕಾವ್ಯದ ಕಾಲ ಕ್ರಿ. ಶ. ಒಂಬತ್ತನೇಶತಮಾನವಾಗಿದೆ. ದಂಡಿಯ 'ಕಾವ್ಯಾದರ್ಶ'ವೆಂಬ ಸಂಸ್ಕೃತಗ್ರಂಥವನ್ನನುಸರಿಸಿ ಕಾವ್ಯದ ಗುಣ ದೋಷಗಳನ್ನು ವಿವರಿಸಿರುವ ಈ ಗ್ರಂಥದಿಂದ ಪ್ರಾಚೀನ ಕನ್ನಡನಾಡು ಹಾಗೂ ನುಡಿಯ ವಿಚಾರದಲ್ಲಿ ಅನೇಕ ವಿವರವಾದ ಮಾಹಿತಿಗಳು ದೊರಕುತ್ತವೆ. ಕಾವೇರಿಯಿಂದ ಗೋದಾವರಿಯವರೆಗೆ ಹಬ್ಬಿದ್ದ ಕನ್ನಡ ನಾಡಿನಲ್ಲಿ ಕಿಸುವೊಲಲು, ಒಂಕುಂದ, ಪುಲಿಗೆಱೆ ಹಾಗೂ ಕೊಪಣದ ನಡುವಿನ ಪ್ರದೇಶವೇ ತಿರುಳ್ಗನ್ನಡ ಸೀಮೆಯಾಗಿತ್ತೆಂದು ತಿಳಿದು ಬರುತ್ತದೆ. ಅಲ್ಲದೆ ಕವಿರಾಜಮಾರ್ಗಕಾರನು ಉತ್ಕಟವಾದ ಕನ್ನಡಾಭಿಮಾನಿಯಾಗಿದ್ದು ಕನ್ನಡಿಗರು 'ಕುಱಿ ತೋದದೆ ಕಾವ್ಯಪ್ರಯೋಗ ಪರಿಣತಮತಿಗಳೆಂದೂ, ಚಿಕ್ಕಮಕ್ಕಳು ಮತ್ತು ಮೂಗರೂ ಸಹ ವಿವೇಕದ ಮಾತುಗಳನ್ನಾಡುವ ಶಕ್ತಿಯುಳ್ಳವರಾಗಿದ್ದರೆಂದೂ' ಹೇಳಿಕೊಂಡಿದ್ದಾನೆ.

ಕವಿರಾಜಮಾರ್ಗಕಾರನು ತನಗಿಂತ ಹಿಂದೆ ಇದ್ದ ಅನೇಕ ಕನ್ನಡ ಕವಿಗಳ ಹೆಸರುಗಳನ್ನು ಹೇಳಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಆಗಿನ ಕಾಲದಲ್ಲಿ ಕವಿಗಳು ಬಳಸುತ್ತಿದ್ದ ವಿವಿಧ ಛಂದಸ್ಸಿನ ರೂಪಗಳನ್ನು ಸಹ ಹೇಳಿದ್ದಾನೆ. ಕಾವ್ಯಪ್ರಪಂಚದಲ್ಲಿಯ ಪೂರ್ವಾಚಾರ್ಯರಲ್ಲಿ-ಶ್ರೀ ವಿಜಯ, ಕವಿಶ್ವರ, ಪಂಡಿತ, ಚಂದ್ರ, ಲೋಕಪಾಲರೂ ಗದ್ಯ ಕವಿಗಳಲ್ಲಿ ವಿಮಳೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತರೂ ಪ್ರಸಿದ್ಧರಾಗಿದ್ದು ಕವಿರಾಜಮಾರ್ಗಕಾರನಿಂದ ಸ್ತುತಿಸಲ್ಪಟ್ಟಿದ್ದಾರೆ. ಅಲ್ಲದೆ ರಾಮಾಯಣದ ಹಲವು ಪದ್ಯಗಳು ಕವಿರಾಜಮಾರ್ಗದಲ್ಲಿ ಉದಾಹೃತವಾಗಿರುವುದರಿಂದ ಅದಕ್ಕಿಂತ ಹಿಂದೆ ಕನ್ನಡದಲ್ಲಿ ರಾಮಾಯಣವೊಂದು ರಚಿತವಾಗಿದ್ದಿರಬಹುದೆಂದು ಊಹಿಸಬಹುದಾಗಿದೆ. ಕವಿರಾಜಮಾರ್ಗದಿಂದ ಮುಂದೆ ಸಿಕ್ಕಿರುವ ಅನೇಕ ಕಾವ್ಯಗಳಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದ ಹಾಗೂ ಕವಿಗಳ ಉಲ್ಲೇಖವಿದೆ. ಹಾಗೆ ಉಲ್ಲೇಖಿಸಿರುವವರಲ್ಲಿ ಆದಿಮಹಾಕವಿ ಪಂಪ, ಅಭಿನವಪಂಪ-ಮುಂತಾದ ಕವಿಗಳು ಮುಖ್ಯರಾಗಿದ್ದಾರೆ.

ಈ ಎಲ್ಲ ಆಧಾರಗಳ ಮೇಲೆ, ಕ್ರಿ.ಪೂ.ಐದು ಅಥವಾ ಆರನೇ ಶತಮಾನದಿಂದಲೂ ಕನ್ನಡದಲ್ಲಿ ಗ್ರಂಥರಚನೆಯಾಗುತ್ತಾ ಬಂದಿರಬಹುದೆಂದು ಧಾರಾಳವಾಗಿ ಹೇಳಬಹುದಾಗಿದೆ. ಕನ್ನಡಕ್ಕಿರುವ ಉಪಭಾಷೆಗಳ ಸಂಖ್ಯೆ, ಅದಕ್ಕಿರುವ ಪ್ರಾಚೀನತೆ ಹಾಗೂ ವಿಪುಲವಾದ ಸಾಹಿತ್ಯ ಈ ಎಲ್ಲ ದೃಷ್ಟಿಯಿಂದ ದ್ರಾವಿಡ ವರ್ಗದ ಭಾಷೆಗಳಲ್ಲಿ ತಮಿಳಿನಷ್ಟೆ ಪ್ರಮುಖವಾದ ಮತ್ತೊಂದು ಭಾಷೆಯೆಂದರೆ ಕನ್ನಡವಾಗಿದೆ. ಮೊಹೆಂಜದಾರೋ ಶಾಸನಗಳನ್ನು ಬಹುಪರಿಶ್ರಮಪಟ್ಟು ಓದಿ ಅವುಗಳ ಮೇಲಿರುವ ಭಾಷೆ ಕನ್ನಡವೇ ಎಂದು ಹೇಳಿರುವ ಫಾದರ್ ಹೆರಾಸ್‌ರವರ ಸಂಶೋಧನೆಯಲ್ಲಿ ಸತ್ವಾಂಶವಿದೆಯೆಂದು ಸಿದ್ಧವಾದರೆ ಕನ್ನಡಿಗರ ಪ್ರಾಚೀನ ಇತಿಹಾಸದ ಭವ್ಯತೆಯು ಇನ್ನೂ ಉಜ್ವಲವಾಗುವುದರಲ್ಲಿ ಸಂದೇಹವಿಲ್ಲ. ಹೀಗೆ ಕನ್ನಡನಾಡು, ನುಡಿ ಹಾಗೂ ಜನಾಂಗಕ್ಕೆ ಸಾವಿರಾರು ವರ್ಷಗಳ ಇತಿಹಾಸದ ಪರಂಪರೆಯಿದೆ; ಅದನ್ನು ಉಳಿಸಿ ಬೆಳಸಿ ಅದರಿಂದ ಚಿರಂತನ ಸ್ಫೂರ್ತಿಯನ್ನು ಪಡೆಯಬೇಕಾದದು—ನಮ್ಮೆಲ್ಲರ ಕರ್ತವ್ಯವಾಗಿದೆ.

## ಗ್ರಂಥ ಮತ್ತು ಲೇಖನ ಋಣ


| | Work | Author |
|---|---|---|
| 1. | "Language" | by Edward Sapir |
| 2. | "Prehistoric India" | ,, Stuart Piggot |
| 3. | "Early India & Pakistan" | ,, M. Wheeler |
| 4. | "History of the Tamils" | ,, Srinivasa Iyengar |
| 5. | "Comparative Grammar of the Dravidian Languages | ,, Dr. Caldwell |
| 6. | "History of Kannada Language | ,, R. Narasimhachar |
| 7. | "ಕನ್ನಡ ಭಾಷಾ ಶಾಸ್ತ್ರ" | ಶ್ರೀ ರಾ. ಯ. ಧಾರವಾಡಕರ |
| 8. | "ಕನ್ನಡ ನೆಲೆ" | ಶ್ರೀ ಶಂ. ಬಾ. ಜೋಶಿ |
| 9. | "ಕರ್ನಾಟಕದಲ್ಲಿಯ ಭೂಶೋಧನ—ಚಂದವಳ್ಳಿ" | ಶ್ರೀ ಹಟ್ಟಿ ಕೃಷ್ಣಯ್ಯಂಗಾರ್ |
| 10. | ಬ್ರಹ್ಮಗಿರಿಯ ಭೂಶೋಧನೆ | ಶ್ರೀ ಎಂ. ಶೇಷಾದ್ರಿ |


ಕೆ. ಮರುಳಸಿದ್ದಪ್ಪ

# ವೀರಶೈವ ಆಧ್ಯಾತ್ಮ ದರ್ಶನ

ಶೈವ ಧರ್ಮವು, ಪ್ರಪಂಚದ ಧರ್ಮಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದ ಧರ್ಮವೆಂಬುದೂ, ಈಗಿನಿಂದ ಸುಮಾರು ಐದು ಸಹಸ್ರ ವರ್ಷಗಳ ಹಿಂದೆಯೇ ಸಿಂಧು ನದಿಯ ತೀರದ ನಾಗರಿಕರಲ್ಲಿ ಈ ಧರ್ಮವು ಬೆಳೆದುನಿಂತು ಲಿಂಗ ಧಾರಣೆಯೂ ಲಿಂಗಪೂಜೆಯೂ ಆಸೇತುಹಿಮಾಚಲದವರೆಗೂ ಅದರಾಚೆಗೂ ಪ್ರಚಲಿತವಾಗಿದ್ದುದೂ, ದ್ರಾವಿಡರು ದಕ್ಷಿಣದೇಶದ ಕಡೆಗೆ ಆರ್ಯರ ಆಕ್ರಮಣದಿಂದ ಒತ್ತಲ್ಪಟ್ಟು ಅಲ್ಲಿ ನೆಲೆಸಿದುದರಿಂದ, ಅಲ್ಲಿಯೇ ವಿಶೇಷವಾಗಿ ಉಳಿದು ಬಂದಿದೆಯೆಂಬುದೂ, "ವೀರಶೈವದ ಉಗಮ" ವೆಂಬ ವೀರಶೈವ ತ್ರೈಮಾಸಿಕದಲ್ಲಿ ಪ್ರಕಟವಾದ ಲೇಖನದಿಂದ ತಿಳಿದು ಬರುವುದು. ಆಗಲೇ ಶಕ್ತಿ ವಿಶಿಷ್ಟ ಶಿವನ ಕಲ್ಪನೆಯು ಮತ್ತು ಶಿವಯೋಗದ ಕಲ್ಪನೆಯೂ ಮೊಳಕೆಯಾಗಿ ಎದ್ದು ಕಾಣುತ್ತಿದ್ದುದನ್ನು ಸಹಾ ಗೋಚರಿಸಲಾಯಿತು. ಹೀಗೆ ಮುಂದುವರಿದ ದ್ರಾವಿಡ ಜನಾಂಗದ ಮೇಲೆ ಆರ್ಯರ ಆಕ್ರಮಣದಿಂದ ಮೊದಲು ಮೊದಲು ಬಹಳ ಘಾತವಾಯಿತು. ಆದರೆ ಪ್ರಾಜ್ಞರಾದ ಆರ್ಯರು ವಿಜಿಗೀಷುಗಳ ಹಾಗೆ ವರ್ತಿಸದೆ ದ್ರಾವಿಡರ ಆಧಿದೈವಿಕ ಮತ್ತು ಅಧ್ಯಾತ್ಮಕಲ್ಪನೆಗಳನ್ನು ಮೆಚ್ಚಿ ಅವರೊಡನೆ ಕಲೆತು ಒಂದೇ ಜನಾಂಗವಾಗಿ ಹೋಗಲು ಬಹಳ ಕಾಲ ಹಿಡಿಯಲಿಲ್ಲ. ಶಿಶ್ನವೆ ದೇವರಾಗಿ ಉಳ್ಳವರೆಂದು ಹೀಯಾಳಿಸಿದ ಆರ್ಯರೇ ಮುಂದೆ ಅವರ ದೇವರಾದ ಶಿವನನ್ನು ಪೂಜಿಸಲು ಪ್ರಾರಂಭಿಸಿದುದು ಯಜುರ್ವೇದ ಕಾಲದಲ್ಲೇ ಪ್ರಾರಂಭವಾಯಿತು. ದ್ರಾವಿಡರೊಡನೆ ಮೊದಲು ಬೆರತು ಪತಿತರೆಂದು ಕರೆಯಲ್ಪಟ್ಟ ಆರ್ಯವ್ರಾತ್ಯರು ಅಥರ್ವಣ ವೇದದ ಕಾಲದ ಹೊತ್ತಿಗೆ ಸಂಪೂಜ್ಯರಾದುದನ್ನು "ವೇದಾಗಮೋಪನಿಷತ್ ಕಾಲಗಳಲ್ಲಿ ವೀರಶೈವದ ಪ್ರಗತಿ" ಎಂಬ ಲೇಖನದಲ್ಲಿ ಕಾಣಬಹುದು. "ಶಿಶ್ನದೇವಾಃ" ಎಂದರೆ ಶಿಶ್ನವೇ ದೇವರಾಗುಳ್ಳವರು ಎಂದು ಋಗ್ವೇದದ ಕಾಲದಲ್ಲಿ ತೆಗಳಿದುದು ಮರೆತುಹೋಗಿ, ಶಿವನನ್ನು ಆರ್ಯರು ಪೂಜಿಸಲು ಪ್ರಾರಂಭಿಸಿದ ಮೇಲೆ "ಶಿಶ್ನದೇವಾಃ" ಎಂದರೆ "ಅಬ್ರಹ್ಮಚರ್ಯಾಃ" ಎಂದು ನಿರುಕ್ತದಲ್ಲಿ ತೇಲಿಸಿ ಅರ್ಥಮಾಡಲಾಗಿದೆ. ಅಂತೂ ಆರ್ಯ ದ್ರಾವಿಡರ ನಾಗರಿಕತೆಯು ಒಟ್ಟುಗೂಡಿ ಹಾಲುಜೇನು ಸೇರಿದಂತಾಗಿ ಸುಸ್ವಾದವಾಯಿತು. ಇಂದು ಆಗಮಿಕ ವೃಕ್ಷದ ಆಧಾರದಿಂದ ನಿಂತಿರುವ ವೈದಿಕ ಲತೆಯ ಪುಷ್ಪಗಳು ಅಲ್ಲೊಂದು ಇಲ್ಲೊಂದು ಕಂಗೊಳಿಸುತ್ತಿವೆ.

ಮಾನ್ಯ ದಿವಾಕರರ ವಚನ ಶಾಸ್ತ್ರರಹಸ್ಯದಲ್ಲಿ ಹೇಳಿದಂತೆ" ಅಥರ್ವವು ಯಂತ್ರ, ತಂತ್ರ, ಮಂತ್ರ, ಜಾರಣ, ಮಾರಣ, ಅಭಿಚಾರ ಮುಂತಾದ ಸಂಗತಿಗಳಿಂದ ತುಂಬಿದೆ. ಮೊದಲಿನ ಮೂರು ವೇದಗಳಿಗೆ ತ್ರಯೀವಿದ್ಯೆ, ವೇದತ್ರಯೀ ಅಥವಾ ಬರಿಯ ತ್ರಯೀ ಎಂದೆನ್ನುವ ಪರಿಪಾಠವೂ ಉಂಟು. ವಿವಿಧ ದೇವತೆಗಳ ಸ್ತುತಿಸ್ತೋತ್ರ, ಯಜ್ಞ ಯಾಗಾದಿ ಕರ್ಮಗಳು ಮತ್ತು ಅವುಗಳ ವಿಧಿವಿಧಾನ, ಯಜ್ಞ ಮಂತ್ರಗಳು ಇವೇ ಈ ಮೂರು ವೇದಗಳ ಮುಖ್ಯ ವಿಷಯಗಳು. ವೇದಗಳಲ್ಲಿ ಚಿನ್ನದ ರಾಶಿಯಲ್ಲಿ ಮಿಂಚುವ ವಜ್ರ ಗೋಲಕಗಳಂತೆ ಮಾತ್ರ ಅಲ್ಲಲ್ಲಿ ಅಧ್ಯಾತ್ಮ ವಿಷಯಕ ಮಂತ್ರಗಳು ಕಂಡುಬರುವುದು. ನಿಜವಾದ ಅಧ್ಯಾತ್ಮ ಶಾಸ್ತ್ರವು ಉಪ

ನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುದು." ವೇದಗಳಲ್ಲಿ ಅಲ್ಲೊಂದು ಇಲ್ಲೊಂದು ಕಂಡುಬರುವ ವಜ್ರಗೋಲಕಗಳಲ್ಲಿ ಅತಿ ಪ್ರಕಾಶಮಾನವಾದುದು ನಾಸದೀಯ ಸೂಕ್ತ. ಈ ಸೂಕ್ತವು ಋಗ್ವೇದದ ಕೊನೆಯಲ್ಲಿ ದಶಮಂಡಲದಲ್ಲಿದೆ. ಆ ಕಾಲದ ಆ ಪರಮ ಋಷಿಯ ಪರಾತ್ಪರದ ಪರಾನುಭವವೂ ಎರಡು ಮೂರು ಸಹಸ್ರವರ್ಷಗಳ ನಂತರ ಪರಮಾನುಭವಿಯಾದ ಅಲ್ಲಮಪ್ರಭುವಿನ ಪರಾನುಭವವೂ ಒಂದೇಯಾಗಿರುವುದು ಸೋಜಿಗವೇ ಸರಿ. ಆದರೂ ಇದು ಮಾನ್ಯ ದಿವಾಕರರು ವಚನಶಾಸ್ತ್ರ ರಹಸ್ಯದಲ್ಲಿ ಹೇಳಿದಂತೆ ಸಹಜವಾದುದೇ–"ವಿವಿಧ ದೇಶಕಾಲಗಳಲ್ಲಿಯ ಸಾಧುಗಳ ಆಚಾರ ವಿಚಾರಗಳನ್ನು ಹೋಲಿಸಿ, ಅವು ಅಲ್ಲಮಾದಿ ವಚನಕಾರರೊಡನೆ ಹೇಗೆ ಸರಿಯಾಗುವುವು ಇದನ್ನು ನೋಡಬಹುದು ....ಪರಮಾರ್ಥಿಗಳ ಬಳಗವೂ ಎಲ್ಲೆಲ್ಲಿಯೂ ಒಂದೆ ಎಂದು ಹೇಳಬಲ್ಲೆವು. ಅವರು ಉತ್ತರ ಧ್ರುವದಷ್ಟು ದಕ್ಷಿಣ ಧ್ರುವದಷ್ಟು ದೂರವಿರಲಿ, ಅಥವಾ ಅವರು ಅತ್ಯಂತ ಸುಸಂಸ್ಕೃತ ಭಾಷೆಯನ್ನು ಇಲ್ಲವೇ ಗ್ರಂಥಸ್ಥವಾಗದ ಯಾವದೊಂದು ನುಡಿಯನ್ನು ಮಾತಾಡುತ್ತಿರಲಿ, ಅವರು ಜಗದಾದಿಯಲ್ಲಿ ಹುಟ್ಟಿರಲಿ, ಇಲ್ಲವೇ ಜಗತ್ತಿನ ಪ್ರಳಯದ ಸಮಯಕ್ಕೆ ಹುಟ್ಟಲಿ ....., ಅವರೆಲ್ಲರೂ ಒಂದೇ ಮಹಾಸಂಗೀತದಲ್ಲಿ ತಮ್ಮ ಸ್ವರಗೂಡಿಸುತ್ತಿರುವರು; ಒಂದೇ ನಲ್ನುಡಿಯನ್ನಾಡುತ್ತಿರುವರು; ಒಂದೇ ತಾಳಕ್ಕೆ ಹೆಜ್ಜೆಯನ್ನಿಕ್ಕುತ್ತಿರುವರು; ಅವರೆಲ್ಲರೂ ವಿಶ್ವಾತ್ಮಕರೊಡನೆ ಏಕರಸವಾಗಲು ಹಗಲಿರುಳು ಹೆಣಗುವರು." ಅಲ್ಲಮ ಪ್ರಭುವಿನ ಎರಡು ವಚನಗಳಿವು—

> ಧರೆಯಾಕಾಶವಿಲ್ಲದಂದು, ತ್ರೈಮಂಡಲ ನೆಲೆಗೊಳ್ಳದಂದು, ಹೋಮ ನೇಮ ಜಪ ತಪವಿಲ್ಲದಂದು ನಿಮ್ಮನಾರು ಬಲ್ಲರು.... ಗಗನ ಕಮಳ



> ಕುಸುಮ ಪರಿಮಳದಿಂದತ್ತಲು, ಗುಹೇಶ್ವರಾ ನಿಮ್ಮ ನಿಲವನಾರು ಬಲ್ಲರು?

> ಆದಿ ಅನಾದಿ ಇಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು, ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು, ಸಚರಾಚರವೆಲ್ಲ ರಚನೆಗೆ ಬಾರದಂದು, ಗುಹೇಶ್ವರನೊಬ್ಬನೇ, ಇದ್ದಿಯಲ್ಲ ಇಲ್ಲದಂತೆ

ಸೃಷ್ಟಿಗೆ ಮೊದಲು ಧರೆ, ಆಕಾಶ, ತ್ರೈಮಂಡಲ ಮೊದಲಾದುವೆಲ್ಲ ಸೃಷ್ಟಿಯಾಗದ ಮೊದಲು, ಮೊದಲು ಎಂದು ಹೇಳಲು ಸಹ ಆಗದಿರುವಾಗ —ಏಕೆಂದರೆ ಆದಿ ಅನಾದಿ ಇಂದು ನಾಳೆ ಹಗಲು ರಾತ್ರಿ ಮೊದಲಾದ ಕಾಲನಿರ್ಣಯವಾದುದೂ ಸೃಷ್ಟಿಯಾದ ಮೇಲೆ ತಾನೆ—ಆದುದರಿಂದ ಆದಿ ಅನಾದಿ ಇಲ್ಲದಂದು ಇದ್ದದು ಆ ಪರಾತ್ಪರ ಬ್ರಹ್ಮವೊಂದೆ—ಇದ್ದದು ಎಂಬುದು ತಾನೇ ಹೇಗೆ ಹೇಳುವುದು? ಇದ್ದುದೆಂದರೆ ಸತ್ ಆಯಿತು. ಇಲ್ಲವೆಂದರೆ ಅಸತ್ ಆಯಿತು. ಆದುದರಿಂದ ಸದಸತ್ತುಗಳ ಕಲ್ಪನೆಗೆ ಮೊದಲೇ ಆ ಪರಾತ್ಪರವನ್ನು "ಇದ್ದಿಯಲ್ಲಾ ಇಲ್ಲದಂತೆ" ಎಂದು ಹೇಳಬೇಕಾಯಿತು. "ಒಬ್ಬನೇ" ಎಂದು ಹೇಳಿರುವುದು ಅದ್ವೈತ ಕಲ್ಪನೆಯದು. ಪರಾತ್ಪರವು ಇದ್ದಿತು ಇಲ್ಲದಂತೆ ಎಂದು ಹೇಳುವ ಮಾತಾದರೂ ಕಲ್ಪನೆಗೆ ಬಾರದ ವಿಷಯದ ಮಾತು. ಆದುದರಿಂದ ಅದರ ಇರವು "ಗಗನಕಮಲಕುಸುಮ ಪರಿಮಳದಿಂದತ್ತಲು" ಎನ್ನಬೇಕಾಯಿತು. ಗಗನವೆಂಬುದು ಎಲ್ಲೋ ಇರುವುದು. ನಮ್ಮ ಕೈಗೆ ನಿಲುಕುವುದಿಲ್ಲ. ಅದರಲ್ಲಿ ಕಮಲ ಕುಸುಮವೆನ್ನುವುದು ಕಲ್ಪನೆಗೆ ಬಾರದುದೆಂದ ಮೇಲೆ ಅದರ ಪರಿಮಳದ ಕಲ್ಪನೆಯು ಆಗುವುದೆಂತು? ಇನ್ನು ಪರಮಾತ್ಮನ ಇರವಿನ ಕಲ್ಪನೆಯು ಆ ಪರಿಮಳಕ್ಕಿಂತಲೂ ಆಚಿನ ಮಾತೆಂದು ವಚನವು ಹೇಳಿದೆ. ಋಗ್ವೇದದಲ್ಲಿನ ನಾಸದೀಯ ಸೂಕ್ತ ವಿಷಯವಾದರೂ ಇದೆ.

ನಾಸದಾಸೀನ್ನೋಸದಾಸೀತ್ತದಾನೀಂ ನಾಸೀದ್ರ
ಜೋ ನೋ ವ್ಯೋಮಾಪರೋಯತ್ ||....ನ
ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ
ಅಹ್ನಆಸೀತ್ ಪ್ರಕೇತಃ|

ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾ
ನ್ಯನ್ನಪರಃ ಕಿಂ ಚನಾಸ||

ಅರ್ಥ—ತದಾನೀಂ=ಆಗ ಎಂದರೆ ಸೃಷ್ಟಿಗೆ ಮೊದಲು, ಅಸತ್‌ನ ಆಸಿತ್ = ಅಸತ್ ಇರಲಿಲ್ಲ. ಸತ್‌ನೊ ಆಸೀತ್=ಸತ್ ಇರಲಿಲ್ಲ, ರಜಃ=ಲೋಕಗಳು ನ ಆಸೀತ್=ಇರಲಿಲ್ಲ. ವ್ಯೋಮ=ಅಂತರಿಕ್ಷವೂ, ನೋ=ಇರಲಿಲ್ಲ. ಪರಃಯತ್ ನೋ=ಅದರಾಚೆಗೆ ಇರುವ (ಸ್ವರ್ಗಾದಿ) ಲೋಕಗಳೂ ಇರಲಿಲ್ಲ. ಮೃತ್ಯುಃ ನ ಆಸೀತ್=ಮರಣವು ಇರಲಿಲ್ಲ. ತರ್ಹಿ=ಹಾಗಾದರೆ, ಅಮೃತಂ ನ=ಮರಣವಿಲ್ಲದಿರುವುದೂ ಇರಲಿಲ್ಲ. ರಾತ್ರ್ಯಾ, ಅಹ್ನಃ ಪ್ರಕೇತ=ರಾತ್ರಿಯ ಹಗಲಿನ ಪರಿಜ್ಞಾನವನ್ನುಂಟುಮಾಡುವ ಸಾಧನವಾದರೂ, ನ ಆಸೀತ್=ಇರಲಿಲ್ಲ. ತತ್ ಏಕಂ=ಪರಾತ್ಪರವೂ, ಅದ್ವಿತೀಯವಾಗಿ, ಸ್ವಧಯಾ= ಸ್ವಶಕ್ತಿಯಿಂದ, ಅವಾತಂ=ವಾಯುವಿಲ್ಲದೆ, ಆನೀತ್=ಸ್ಫುರಣೆಗೊಂಡಿತ್ತು. ಅನ್ಯತ್ ಕಿಂಚನ=ಇನ್ನುಬೇರೆಯಾವುದೂ ನ ಆಸ=ಇರಲಿಲ್ಲ. ಪರಃ=ಅದರಾಚೆಗೆ ಏನೂ, ನ ಆಸ=ಇರಲಿಲ್ಲ.

ಸಾರಾಂಶ—ಸೃಷ್ಟಿಗೆ ಮೊದಲು ಸತ್ ಆಗಲಿ ಅಸತ್ ಆಗಲಿ, ಲೋಕಗಳಾಗಲಿ, ಅಂತರಿಕ್ಷವಾಗಲಿ, ಮರಣವಾಗಲಿ ಇರಲಿಲ್ಲ. ಅದ್ವೈತವಾದ ಪರಬ್ರಹ್ಮವೊಂದೆ ವಾಯುವಿಲ್ಲದೆ ಇದ್ದರೂ ಶಕ್ತಿವಿಶಿಷ್ಟವಾಗಿದ್ದುದರಿಂದ ಚೈತನ್ಯಯುತವಾಗಿದ್ದಿತು. ಅದು ಹೊರತು ಬೇರೆ ಏನೂ ಇರಲಿಲ್ಲವೆಂದು ಭಾವ. ಆನೀತ್ ಎಂಬ ಪದವು ಅನು=ಪ್ರಾಣನೇ ಎಂಬ ಧಾತುವಿನಿಂದ ಹುಟ್ಟಿದ ಭೂತಕಾಲದ ಪದ. ಪ್ರಾಣಚೈತನ್ಯವಿರುವ ಪ್ರಾಣಿಗಳಿಗೆ ವಾಯುವಿನ ಸಹಾಯದಿಂದ ಉಸಿರಾಡುವಮೂಲಕ ಚೈತನ್ಯ ಸ್ಫುರಣೆಯಾಗುವುದು. ವಾಯುವೇ ಪರಬ್ರಹ್ಮನಿಂದ ಸೃಷ್ಟಿಸಲ್ಪಡುವುದು. ಆದುದರಿಂದ ಆಪರಾತ್ಪರಕ್ಕೆ ಸ್ಫುರಣೆಯಾಗುವುದು ವಾಯುವಿನಿಂದಲ್ಲ; 'ಸ್ವಧಯಾ' ಎಂದರೆ ಅದು ಶಕ್ತಿವಿಶಿಷ್ಟವಾಗಿರುವುದರಿಂದ ಅದರಿಂದ ಚೈತನ್ಯ ಸ್ಫುರಣೆಯಾಗುವುದು. ಸಾಯಣ ಭಾಷ್ಯದಲ್ಲಿ—

ಸ್ವಧಯಾ- ಸ್ವಸ್ಮಿನ್ ಧೀಯತೇ ಧ್ರಿಯತ ಆಶ್ರಿತ್ಯ ವರ್ತತೆ ಇತಿ ಸ್ವಧಾ ಮಾಯಾ, ತಯಾ ತದ್ಬ್ರಹ್ಮೈಕ ಮವಿಭಾಗಾಪನ್ನಮಾಸೀತ್"

ಎಂದು ಹೇಳಿದೆ. ತನ್ನಲ್ಲಿರುವ ಶಕ್ತಿಸಾಮರ್ಥ್ಯಕ್ಕೆ ಸ್ವಧಾ ಎಂದು ಹೆಸರು. ಇದನ್ನೇ ಶ್ವೇತಾಶ್ವತರದಲ್ಲಿ ಮಾಯೆಯೆಂದು ಕರೆದಿರುವಂತೆ ನಾಸದೀಯ ಸೂಕ್ತದ ಸಾಯಣಭಾಷ್ಯದಲ್ಲಿ ಮಾಯೆಯೆಂದು ಕರೆದಿದೆ. ಆ ಶಕ್ತಿಯು ಬ್ರಹ್ಮದಲ್ಲಿ ಅವಿಭಾಗವಾಗಿದೆ. "ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂ ಚ ಮಹೇಶ್ವರಂ," ಎಂದು ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿರುವುದಾದರೂ ಶಕ್ತಿವಿಶಿಷ್ಟ ಪರಶಿವ ಬ್ರಹ್ಮದ ವಿಷಯವೆ. ಹಗಲು ರಾತ್ರಿಗಳೂ ಸತ್ ಅಸತ್‌ಗಳೂ ಇಲ್ಲದಾಗ ಇದ್ದುದು ಏನೆಂಬುದನ್ನು ಮತ್ತೊಂದು ಶ್ವೇತಾಶ್ವತರ ಶ್ರುತಿಯು ನಾಸದೀಯ ಸೂಕ್ತದ ಮಾತಿನಲ್ಲಿಯೇ ವಿವರಿಸಿ, ಆಗಲಿದ್ದುದು ಪರಶಿವಬ್ರಹ್ಮನೆ, ಎಂದು ಹೇಳುತ್ತದೆ.

ಯದಾಽ ತಮಸ್ತನ್ನ ದಿವಾ ನ ರಾತ್ರಿಃ ನ ಸನ್ನ ಚಾಸಚ್ಛಿವ ಏವ ಕೇವಲಃ/
ತದಕ್ಷರಂ ತತ್ ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ||

ಈ ಮಂತ್ರದ ವಿಜ್ಞಾನ ಭಗವತ್‌ಕೃತ ವಿವರಣದಲ್ಲಿ ''ನ ಸದಾಸೀನ್ನೋ ಸದಾಸೀದಿತಿ ಶ್ರುತ್ಯಂತರೇಣ" ಎಂದು ಹೇಳಿ ಶ್ವೇತಾಶ್ವತರ ಶ್ರುತಿಗೆ ನಾಸ

ದೀಯ ಸೂಕ್ತವೇ ಆಧಾರವೆಂಬುದನ್ನು ಸ್ಪಷ್ಟ ಮಾಡಿದೆ. ಆದುದರಿಂದ ಶ್ವೇತಾಶ್ವತರ ಉಪನಿಷತ್ತು, ನಾಸದೀಯ ಸೂಕ್ತದಲ್ಲಿ ಹೇಳಿರುವ ಆದಿ ಕಾರಣವು ಪರಶಿವಬ್ರಹ್ಮವೆಂಬುದನ್ನು ಸ್ಪಷ್ಟ ಮಾಡುತ್ತದೆ. ಅಲ್ಲದೆ ಕೇವಲ ಎಂದರೆ ಅದ್ವಿತೀಯ ವಾಗಿದ್ದ ಪರಶಿವ ಬ್ರಹ್ಮವು "ತತ್ ಸವಿತುರ್ವರೇಣ್ಯಂ" ಎಂದು ಹೇಳಿ ಗಾಯತ್ರೀ ಮಂತ್ರದಲ್ಲಿ ಸ್ತುತಿಸಲ್ಪಟ್ಟಿರುವುದೂ ಪರಶಿವಬ್ರಹ್ಮವೆ ಎಂದು ಸ್ಪಷ್ಟಮಾಡಿದೆ. "ಪ್ರಜ್ಞಾಚ ತಸ್ಮಾತ್ ಪ್ರಸೃತಾ ಪುರಾಣೀ" ಎಂದು ಹೇಳಿರುವುದರಲ್ಲಿ ಜ್ಞಾನ ಶಕ್ತಿಯ ಆವಿರ್ಭಾವವು ಹೇಳಲ್ಪಟ್ಟಿದೆ.

ನಾಸದೀಯ ಸೂಕ್ತದಲ್ಲಿ "ತಪಸಸ್ತನ್ಮಹಿನಾಽ ಜಾಯತೈಕಂ॥ ಎಂದೂ ಕಾಮಸ್ತದಗ್ರೇ ಸಮವರ್ತತಾಧಿ ಮನಸೋ ರೇತಃ ಪ್ರಥಮಂಯದಾಸೀತ್" ಎಂದೂ, ಹೇಳಿರುವುದರಲ್ಲಿ ಜಾನ್ನಶಕ್ತಿಯ ಮತ್ತು ಇಚ್ಛಾಶಕ್ತಿಯ ಆವಿರ್ಭಾವವು ಆ ಅದ್ವಯವಾದ ಪರಬ್ರಹ್ಮದಲ್ಲಿ ಪ್ರಕಟವಾಗಿ ಜಗದುತ್ಪತ್ತಿಗೆ ಆರಂಭವಾದುದು ಕಂಡು ಬರುವುದು. ಇದರ ಸಾಯಣ ಭಾಷ್ಯದಲ್ಲಿ "ತಪಸಃ ಸ್ರಷ್ಟವ್ಯ ಪರ್ಯಾಲೋಚನ ರೂಪತ್ವಂ ಚಾನ್ಯತ್ರಾಮ್ನಾಯತೇ। ಯಃ ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ॥

ಮುಂ. ಉ. ೧-೧-೯। ಇತಿ॥ ಎಂದು ಹೇಳಿರುವಂತೆ ಜ್ಞಾನಶಕ್ತಿಯ ಆವಿರ್ಭಾವವಾಗುವುದನ್ನು ಸಮರ್ಥಿಸುತ್ತದೆ. ಸಾಯಣಭಾಷ್ಯದಲ್ಲಿ "ಮನಸೋಽ ತಃ ಕರಣಸ್ಯ ಸಂಬಂಧಿ ವಾಸನಾಶೇಷೇಣ ಮಾಯಾಯಾಂ ವಿಲೀನೇಽ ತಃ ಕರಣೇ ಸಮವೇತಂ" ಎಂದು ಹೇಳಿರುವುದು ಕ್ರಿಯಾಶಕ್ತಿಯ ಆವಿರ್ಭಾವವಾಗುವುದೆಂಬುದನ್ನು ಸಮರ್ಥಿಸುತ್ತದೆ. ನಾಸದೀಯ ಸೂಕ್ತಕ್ಕೆ ಆಧಾರವಾಗಿ ತೆಗೆದುಕೊಂಡಿರುವ ಮುಂಡಕ ಶ್ರುತಿಯಲ್ಲಿ ತಪಸ್ಸು ಜ್ಞಾನಮಯವಾದುದೆಂದು ಹೇಳಿದೆಯಷ್ಟೆ. ಅದರ ಹಿಂದಿನ ಮಂತ್ರದಲ್ಲಿ ಸೃಷ್ಟ್ಯುನ್ಮುಖವಾದಾಗ ಪರಬ್ರಹ್ಮವು ಅಂಕುರಾಯಮಾಣವಾದ ಬೀಜದಂತೆ ಉಬ್ಬುವುದೆಂದು ಹೇಳಿದೆಯೆಂದು ಅದರ ಶಾಂಕರ ಭಾಷ್ಯವು ಹೇಳುತ್ತದೆ.

"ತಪಸಾ ಚೀಯತೇ ಬ್ರಹ್ಮ"ವೆಂದು ಮೊದಲಾಗುವ ಈ ಮಂತ್ರದ ಶಂಕರ ಭಾಷ್ಯದಲ್ಲಿ ಜಗತ್ತು ಸೃಷ್ಟಿಯಾಗುವ ಮೊದಲಸ್ಥಿತಿಯು ಹಿರಣ್ಯಗರ್ಭವೆಂದೂ ಅದು "ಜ್ಞಾನಕ್ರಿಯಾ ಶಕ್ತ್ಯಾಧಿಷ್ಠಿತ"ವೆಂದೂ ಹೇಳಿದೆ. ಇದರ ಅರ್ಥವನ್ನು ಆನಂದಗಿರಿಯು ಟೀಕೆಯಲ್ಲಿ ಹೀಗೆ ಸ್ಪಷ್ಟಮಾಡಿದ್ದಾನೆ. "ಜ್ಞಾನಶಕ್ತಿ ಭಿಃ ಕ್ರಿಯಾಶಕ್ತಿಭಿಶ್ಚಾಧಿಷ್ಠಿತಂ ವಿಶಿಷ್ಟಂ". ಹೀಗೆ ಜ್ಞಾನಶಕ್ತಿ ಕ್ರಿಯಾಶಕ್ತಿಗಳಿಂದ ವಿಶಿಷ್ಟವಾದುದು ಜಗತ್ತಿನ ಸೃಷ್ಟಿಗೆ ಕಾರಣವಾಯಿತೆನ್ನುವುದು, ನಿಷ್ಕಲ ಪರಶಿವ ಬ್ರಹ್ಮವು ಶಕ್ತಿ ವಿಶಿಷ್ಟವಾದ ಮೇಲೆ ಸಕಲ ನಿಷ್ಕಲವಾಗಿ, ಸಕಲವಾಗಿ, ಸೃಷ್ಟಿಗೆ ಕಾರಣವಾಗುವುದೆನ್ನುವ ವೀರಶೈವ ಸಿದ್ಧಾಂತಕ್ಕೆ ಸರಿಹೋಗುವುದು. "ಲೋಕಾದಿ ಲೋಕಂಗಳೇನೂ ಇಲ್ಲದಂದು ನೆನಹು ನಿಷ್ಪತ್ತಿಯಾಗಿತ್ತು ನೋಡಾ; ನೆನಹಿಲ್ಲದ ಘನವನ್ನು ನೆನದ ನೆನಹೇ ಸವಯವನಾಗಿ ಚಿತ್ತೆನಿಸಿಕೊಂಡಿತ್ತು" ಎಂದು ಮೊದಲಾಗುವ ತೋಂಟದ ಸಿದ್ಧಲಿಂಗೇಶನ ವಚನದಲ್ಲಿ ಹೇಳಿರುವ ನೆನಹಿಲ್ಲದ ಘನವೇ ನಿರ್ವಿಶೇಷ ಪರಶಿವಬ್ರಹ್ಮ. ಅದು ನೆನದ ನೆನಹೇ ಇಚ್ಛಾಶಕ್ತಿಯಾಗುವುದು.

ಏನೆಂದೆನಲಿಲ್ಲದ ಮಹಾಘನವು ತನ್ನ ಲೀಲೆಯಿಂದ ತಾನೇಸ್ವಯಂಭುಲಿಂಗವಾಯಿತ್ತು; ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ; ಶಿವಶಕ್ತ್ಯಾತ್ಮಕನಿಂದಾದುದು ಆತ್ಮ; ಆತ್ಮನಿಂದಾದುದು ಆಕಾಶ; ಆಕಾಶದಿಂದಾದುದು ವಾಯು; ವಾಯುವಿನಿಂದಾದುದು ಅಗ್ನಿ; ಅಗ್ನಿಯಿಂದಾದುದು ಅಪ್ಪು; ಅಪ್ಪುವಿನಿಂದಾದುದು ಪೃಥ್ವಿ; ಪೃಥ್ವಿಯಿಂದಾದುದು ಸಕಲ ಜೀವವೆಲ್ಲ;

ಇವೆಲ್ಲ ನಿಮ್ಮ ನೆನಹು ಮಾತ್ರದಿಂದಾದುವು, ಚನ್ನಮ್ಮ ಲಿಗೆಯ ಚೆನ್ನರಾಮಾ

ನಿರಮಯ ನಿಷ್ಕಲ ನಿರಂಜನ ಪರಶಿವ ಬ್ರಹ್ಮವು ಶಿವಶಕ್ತ್ಯಾತ್ಮಕ ಅರ್ಥಾತ್ ಶಕ್ತಿ ವಿಶಿಷ್ಟಶಿವನೆನಿಸುವುದಕ್ಕಿಂತ ಮೊದಲಿನ ಶಿವಾದ್ವೈತಸ್ಥಿತಿಯಲ್ಲಿರುವುದೆಂಬುದೂ, ಅನಂತರ ಅದು ಶಕ್ತಿವಿಶಿಷ್ಟವಾಗಿ ಆತ್ಮವಾಗಿ ಪಂಚಭೂತಗಳಾಗಿ ಸೃಷ್ಟಿಯು ಆವಿರ್ಭಾವವಾಗುವುದೆಂಬ ವಚನಕಾರರ ನಿಲುವು ಉಪನಿಷತ್ ನಿಲುವಿಗೆ ಸರಿಹೊಂದುತ್ತದೆ. ತೈತ್ತರೀಯದಲ್ಲಿ ಪಂಚಭೂತಗಳ ಆವಿರ್ಭಾವವು ಹೀಗೆಯೇ ಹೇಳಿದೆ—

> ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ
> ಸಂಭೂತಃ, ಆಕಾಶಾದ್ವಾಯುಃ,
> ವಾಯೋರಗ್ನಿಃ, ಅಗ್ನೇರಾಪಃ,
> ಅದ್ಭ್ಯಃ ಪೃಥಿವೀ||
> (ತೈ.ಮು, ಮ೧)

ಇದೇ ತೈತ್ತರೀಯ ಉಪನಿಷತ್ತಿನಲ್ಲಿ
(ತೈ.ವ೨, ಅನು೬)

ಸೋಽ ಕಾಮಯತ ಬಹುಸ್ಯಾಂ ಪ್ರಜಾಯೇಯೇತಿ"ಎಂದರೆ ಪರಬ್ರಹ್ಮನು ತಾನು ಅನೇಕವಾಗಿ ಬೆಳೆಯುವೆನು ಎಂದು ಇಚ್ಛಿಸಿದನೆಂದು ಹೇಳಿರುವುದರಲ್ಲಿ ಇಚ್ಛಾಶಕ್ತಿಯ ಆವಿರ್ಭಾವವನ್ನು ಹೇಳಿದಂತಾಯಿತು. ಎಂದರೆ ಅವನು ತಪಸ್ಸನ್ನು ಆಚರಿಸಿದನೆಂದು ಹೇಳುವುದರಲ್ಲಿ ಜ್ಞಾನಶಕ್ತಿಯ ಆವಿರ್ಭಾವವನ್ನು ಹೇಳಿದಂತಾಯಿತು. ಏಕೆಂದರೆ ತಪಸ್ಸೆಂಬುದು ಜ್ಞಾನಮಯ ತಪಸ್ಸೆಂದೂ ಮುಂಡಕೋಪನಿಷತ್ತಿನಲ್ಲಿ ಹೇಳಿರುವುದನ್ನು ಹಿಂದೆಯೇ ಹೇಳಿದೆ. "ಸತಪಸ್ತಪ್ತ್ವಾ ಇದಂ ಸರ್ವಂ ಅಸೃಜ" ಎಂದರೆ ಅವನು ತಪಸ್ಸನ್ನು ಮಾಡಿ ಎಲ್ಲವನ್ನು ಸೃಷ್ಟಿಸಿದನು ಎಂದು ಹೇಳುವಲ್ಲಿ ಕ್ರಿಯಾಶಕ್ತಿಯ ಆವಿರ್ಭಾವವನ್ನು ಹೇಳಿದಂತಾಯಿತು. "ತತ್ ಸೃಷ್ಟ್ವಾ ತದೇವಾನು ಪ್ರಾವಿಶತ್" ಎಂದರೆ ಸೃಷ್ಟಿಸಿದುದರಲ್ಲಿ ಅವನು ಅನುಪ್ರವೇಶ ಮಾಡಿದನು ಎಂದು ಹೇಳಿರುವುದು ಸಹ ಶರಣರ ಅನುಭಾವ ವಚನಗಳಿಗೆ ಸರಿಹೊಂದುವುದು. "ಶಿವ....ವಿಶ್ವವ ರಚಿಸಿ ತಾನು ವಿಶ್ವಕ್ಕೆ ಹೊರಗಾಗಿದ್ದನೆ? ಇಲ್ಲ; ವಿಶ್ವಮಯ ತಾನಾದನು" ಎಂದು ವಚನ ಸಾಹಿತ್ಯದಲ್ಲಿ ಹೇಳಿರುವುದು ಶಿವನು ಜಗತ್ತನ್ನು ಸೃಷ್ಟಿಸಿ ಅದರಲ್ಲಿ ಅನುಪ್ರವೇಶ ಮಾಡಿದನೆಂಬುದನ್ನೇ ಹೇಳುವುದು.

ಮೇಲಿನ ವಿವೇಚನೆಯಿಂದ ಪರಶಿವ ಬ್ರಹ್ಮವು ಶಕ್ತಿವಿಶಿಷ್ಟವಾಗುವುದರಿಂದ ಜೀವ ಜಗತ್ತುಗಳ ಉದಯವಾಗುವುದೆಂಬ ವೀರಶೈವದ ನಿಲುವಿಗೆ ಋಗ್ವೇದದ ನಾಸದೀಯ ಸೂಕ್ತದ ಆಧಾರವಿರುವುದೆಂಬುದೂ, ನಾಸದೀಯ ಸೂಕ್ತವೇ ಉಪನಿಷತ್ ಸಾಹಿತ್ಯಕ್ಕೆ ಮುನ್ನುಡಿಯಂತಿರುವುದರಿಂದ ಉಪನಿಷತ್ ಸಾಹಿತ್ಯಕ್ಕೆ ಅನುಸಾರವಾಗಿಯೇ ವೀರಶೈವದ ನಿಲುವು ಇರುವುದೆಂಬುದೂ ವ್ಯಕ್ತವಾಯಿತು. ಅಷ್ಟೇಕೆ? ಶ್ರೀ ಶಂಕರಾಚಾರ್ಯರ ಭಾಷ್ಯದ ಪ್ರಕಾರವೂ ಪರಬ್ರಹ್ಮವು ಶಕ್ತಿವಿಶಿಷ್ಟವಾಗುವುದರಿಂದಲೇ ಸೃಷ್ಟಿಯಾಗುವುದೆಂಬುದನ್ನೂ ತೋರಿಸಲಾಯಿತು. ಆದರೆ ಶಾಂಕರ ಸಿದ್ಧಾಂತದ ಪ್ರಕಾರ, ಶ್ರೀಯುತ ವೈ. ಸುಬ್ಬರಾಯರ "ಸಭಾಷ್ಯ ಮುಂಡಕೋಪನಿಷತ್ತಿನಲ್ಲಿ ಹೇಳಿರುವಂತೆ" ನಿಜವಾಗಿ ನೋಡಿದರೆ ಸೃಷ್ಟಿಯೇ ಸುಳ್ಳಾದ್ದರಿಂದ ಅದಕ್ಕೆ ಕ್ರಮವೇ ಇಲ್ಲ. ಸೃಷ್ಟಿಯಲ್ಲಿ ತೋರುವ ವಸ್ತುಗಳು....ನಿಜವೆಂದು ತೋರುವವರೆಗೂ ಅವು ಹುಟ್ಟುವುದಕ್ಕೆ ಒಂದು ಕ್ರಮವು ಬೇಕೆಂದು ತೋರುವುದು. ಇದಕ್ಕಾಗಿ ಉಪನಿಷತ್ತುಗಳಲ್ಲಿ ಕ್ರಮವನ್ನೂ ಅಲ್ಲಲ್ಲಿ ತಿಳಿಸಿರುತ್ತದೆ. ಈ ವಿಷಯದಲ್ಲಿ ಸ್ವಾಭಾವಿಕವಾಗಿಯೇ ಭಿನ್ನಾಭಿಪ್ರಾಯವಿದೆ. ಕನಸಿನಲ್ಲಿ ತಿಂದ ಬೆಣ್ಣೆ

ಯನ್ನು ತೆಗೆಯಲು, ಕರೆದವರಾರು, ಕಾಸಿದವ ರಾರು, ಹೆಪ್ಪುಹಾಕಿದವರಾರು ಎಂಬುದನ್ನು ವಿಚಾರಿಸುವಂತೆ ಇಲ್ಲದ ಜಗತ್ತಿನ ಸೃಷ್ಟಿಗೆ ಕ್ರಮ ವನ್ನು ಹುಡುಕುವುದು ಎಂದು ಮೂಗು ಮುರಿಯು ವವರುಂಟು; ಆದರೆ ಶ್ರೀಶಂಕಾರಚಾರ್ಯರಂತಹ ಮೇಧಾವಿಗಳ ನಿಲುವನ್ನು ಇಷ್ಟು ಸುಲಭವಾಗಿ ತೆಗಳಲಾಗುವುದಿಲ್ಲ. ಅದು ಹೇಗೇ ಇರಲಿ ವಚನ ಕಾರರ ನಿಲುವಂತೂ ಬೇರೆ. ಈ ಜಗತ್ತು ಸುಳ್ಳಲ್ಲ. ಜೀವ ಜಗತ್ತುಗಳು ಶಿವಾಂಶವಾದುವೆನ್ನುವುದು ವೀರಶೈವ ಶರಣರ ಸಿದ್ಧಾಂತ. ಮಹದೇವಿಯಕ್ಕನ ಸೃಷ್ಟಿ ವಚನದಲ್ಲಿಯೇ "ದೇಹ ಸಂಬಂಧಮಂ ಶಿವ ತನ್ನ ಚಿದಂಶಿಕನಪ್ಪ ಆತ್ಮಂಗೆ ಸಂಬಂಧಿಸಿದ" ನೆಂದು ಹೇಳಿದೆ.

ಸ್ವಶಕ್ತಿ ಕ್ಷೋಭಮಾತ್ರೇಣ
ಸ್ಥಲಂ ತದ್ವಿವಿಧಂ ಭವೇತ್।
ಏಕಂ ಲಿಂಗಸ್ಥಲಂ
ಪ್ರೋಕ್ತಮನ್ಯದಂಗಸ್ಥಲಂ ಸ್ಮೃತಂ॥
(ಅನುಭವಸೂತ್ರ)

ಅನಾದ್ಯವಿದ್ಯಾ ಸಂಬಂಧಾತ್
ತದಂಶೋ ಜೀವನಾಮಕಃ
(ಸಿದ್ಧಾಂತ ಶಿಖಾಮಣಿ)

ಶರೀರಾತ್ ಪೃಥಗಾತ್ಮಾ
ನವಾತ್ಮನಃ ಪೃಥಗೀಶ್ವರಃ
(ಸಿದ್ಧಾಂತ ಶಿಖಾಮಣಿ)

ಈ ಆಧಾರಗಳಿಂದ ಜೀವನು ಪರಶಿವ ಬ್ರಹ್ಮದ ಅಂಶವೆಂಬುದೂ ಅಂಶಿಯಲ್ಲಿ ಅಂಶನು ಬೆರೆದು ಸಮರಸವಾಗುವುದಕ್ಕೆ ಮೊದಲು ಭೇದ ವಿರುವುದೆಂಬುದೂ ಸ್ಪಷ್ಟ. ಆದರೂ ಪರಶಿವ ಬ್ರಹ್ಮ ಸರ್ವಾಂತರ್ಯಾಮಿಯಾಗಿರುವುದರಿಂದ ಅಂಶ ವೆಂದರೆ ಅಂಶಿಯಲ್ಲಿ ಕೊರೆದು ತೆಗೆದು ಬೇರೆ ಮಾಡಿದ ತುಂಡಲ್ಲ. ಎಲೆ, ಹೂ, ಕಾಯಿಗಳು ಮರದ ಅಂಶಗಳಾಗಿರುವಂತೆ ಘಟಾಕಾಶವು ಮಹಾಕಾಶದ ಅಂಶವಾಗಿರುವಂತೆ ಜೀವ ಜಗತ್ತು ಗಳು ಪರಶಿವ ಬ್ರಹ್ಮದ ಅಂಶಗಳು. ಮಡಕೆಯಲ್ಲಿ ಮಣ್ಣಿನಂಶವಿಲ್ಲದೆ ಮಡಕೆಯಾಗುವುದಿಲ್ಲ. ಚಿನ್ನದ ಅಂಶವಿಲ್ಲದೆ ಆಭರಣವಾಗುವುದಿಲ್ಲ. ಸಮುದ್ರದ ಅಲೆ ನೊರೆ ತೆರೆಗಳಲ್ಲಿ ಸಮುದ್ರದ ಅಂಶವಿದೆ. ಶ್ರೀ ಶಂಕರಾಚಾರ್ಯರ ನಿಲುವು ಇದಕ್ಕೆ ವಿರುದ್ಧ ವಾಗಿದೆ. 'ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವನಾ ಪರಃ' ಎಂಬುದು ಅವರ ಸಿದ್ಧಾಂತ. ಬ್ರಹ್ಮವು ಸತ್ಯ, ಜಗತ್ತು ಮಿಥ್ಯವು. ಜೀವನು ಬ್ರಹ್ಮನೇ ಅಲ್ಲದೆ ಬೇರೆಯಲ್ಲ. ಜೀವನು ಬ್ರಹ್ಮವೇ ಹೊರತು ಅಂಶವಲ್ಲ. ಏಕೆಂದರೆ ಪರಬ್ರಹ್ಮವು ನಿರವಯವು ಎಂಬುದು ಅವರ ವಾದ. ಬ್ರಹ್ಮ ಸೂತ್ರದಲ್ಲಿ 'ಅಂಶೋ ನಾನಾ ವ್ಯಪದೇಶಾತ್' ಎಂದು ಹೇಳಿರುವುದನ್ನೂ ಗೀತೆಯಲ್ಲಿ 'ಮಮೈ ವಾಂಶೋ ಜೀವಲೋಕೇ ಜೀವಭೂತಸ್ಸನಾತನಃ' ಎಂದು ಹೇಳಿರುವುದನ್ನೂ ಅಲ್ಲಿ ಹೇಳಿರುವಂತೆಯೇ ಅರ್ಥಮಾಡಿದರೆ ಶಾಂಕರ ಸಿದ್ಧಾಂತಕ್ಕೆ ಹೊಂದು ವುದಿಲ್ಲ. ಅಲ್ಲಿ ಜೀವ ಜಗತ್ತುಗಳು ಬ್ರಹ್ಮದ ಅಂಶವೆಂದೇ ಹೇಳಿದೆ. ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರದ ಅಥವಾ ಗೀತೆಯ ಆಧಾರವನ್ನು ನಿರಾಕರಿಸುವಂತಿಲ್ಲ. ಆದುದರಿಂದ ಹೇಗಾದರೂ ತಮಗೆ ಹೊಂದುವ ಅರ್ಥವನ್ನು ಜಗ್ಗಿ ಎಳೆಯ ಬೇಕು. ಆದುದರಿಂದ 'ಅಂಶ ಇವ' ಅಂಶವೋ ಎನ್ನುವಂತೆ ಕಲ್ಪಿಸಿಕೊಳ್ಳಬೇಕೆಂದು ಹೇಳಿದ್ದಾರೆ. ಇದರಿಂದ ಶ್ರೀ ಶಂಕರ ಅಭಿಪ್ರಾಯವು ಜೀವನು ಬ್ರಹ್ಮದ ಅಂಶವಲ್ಲ. ಆದರೆ ಹಾಗೆ ಕಲ್ಪಿಸಿಕೊಳ್ಳ ಬೇಕೆಂದಾಯಿತು. ತಂದೆಯು ಪುತ್ರನನ್ನು ಪುತ್ರನೋ ಎಂಬಂತೆ ಕಲ್ಪಿಸಿಕೊಳ್ಳುವುದಿಲ್ಲ, ಏಕೆಂ ದರೆ ಅವನು ಅವನ ಪುತ್ರನೆ. ಗುರುವು ಶಿಷ್ಯ ನನ್ನು ಪುತ್ರನೋ ಎಂಬಂತೆ ಕಲ್ಪಿಸಿಕೊಳ್ಳಬೇಕು. "ಇವ" ಪದ ಪ್ರಯೋಗದ ಪರಿಣಾಮವದು. ಶಾಂಕರ ಸಿದ್ಧಾಂತವನ್ನು ಬಲ್ಲವರಾರೂ ಜೀವನು

ಬ್ರಹ್ಮದ ಅಂಶವೆನ್ನುವುದಿಲ್ಲ. ಶಾಂಕರ ಭಾಷ್ಯಗಳನ್ನು ಕನ್ನಡಿಸಲು ಶ್ರೀ ಮನ್ಮಹಾರಾಜರು ಆರಿಸಿಕೊಂಡಿರುವಷ್ಟು ಹಿರಿಯ ವಿದ್ವಾಂಸರಾದ ವೈ. ಸುಬ್ಬರಾಯರು ಅವರ ಗೀತಾಭಾಷ್ಯದ ಗ್ರಂಥದ 'ಮಮೈವಾಂಶೋ ಜೀವ ಲೋಕೇ ಜೀವಭೂತಸ್ಸನಾತನಃ' ಎಂಬುದರ ಅಡಿಟಪ್ಪಣಿಯಲ್ಲಿ ಹೀಗೆ ಬರೆದಿದ್ದಾರೆ—"ಜೀವನು ನಿಜವಾಗಿ ಪರಮಾತ್ಮನ ಅಂಶವಲ್ಲ....ಉಪಾಧಿಯಿಂದ ಪರಮಾತ್ಮನ ಒಂದು ಭಾಗವಾಗಿರುವಂತೆ....ತೋರುತ್ತಾನೆ." ಆದುದರಿಂದ ಶಾಂಕರ ಸಿದ್ಧಾಂತದಂತೆ ಜೀವನು ಬ್ರಹ್ಮದ ಅಂಶವಲ್ಲ. ಘಟದಲ್ಲಿ ಆಕಾಶದ ಅಂಶವಿರುವುದೇ ಹೊರತು ಆಕಾಶವೋ ಎನ್ನುವಂತೆ ಹೊಗೆಯೋ, ಹಬೆಯೋ ಇರುವುದಿಲ್ಲ. ಘಟಾಕಾಶದ ಉದಾಹರಣೆಯನ್ನು ತೆಗೆದುಕೊಂಡು ಸ್ಥಲಪದದಿಂದ ನಿರ್ದೇಶಿಸಲ್ಪಟ್ಟ ಬ್ರಹ್ಮವು ಲಿಂಗ ಮತ್ತು ಅಂಗ (ಜೀವ)ವೆಂಬ ಎರಡು ಭಾಗವು ಎಂದು ಅನುಭವಸೂತ್ರದಲ್ಲಿ ಸ್ಪಷ್ಟವಾಗಿ ಹೇಳಿದೆ. ಸಿದ್ಧಾಂತ ಶಿಖಾಮಣಿಯ ನಿಲುವೂ ಇದೆ. ಇದು ಶಾಂಕರ ಸಿದ್ಧಾಂತಕ್ಕೆ ವಿರುದ್ಧವಾದ ನಿಲುವು. ಈ ವಿಷಯದಲ್ಲಿ ಶ್ರೀ ಶಂಕರಾಚಾರ್ಯರಿಗೂ ಇತರರಿಗೂ ಭಿನ್ನಾಭಿಪ್ರಾಯಗಳನ್ನು ಮಾನ್ಯ ರಾಧಾಕೃಷ್ಣನ್‌ರವರು ಅವರ Indian philosophy(volume II) ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ :—

"The passage that the Jiva is a part (amsa) of the highest reality is taken by Shankara to mean "part as it were" (amsa iva) since Brahman who is not composed of parts cannot have parts in the literal sense. Bhaskara and vallabha assert that the Jiva is part of the Lord because there is difference as well as identity between them. Ramanuja Nimbarka, Baladeva and Srikanta think that the Jiva is a real part of Brahman, even as light issuing from a luminous object like the fire or the sun is a part of that object.

ಇದರಿಂದ ಶಾಂಕರ ಸಿದ್ಧಾಂತದಂತೆ ಜೀವನು ಬ್ರಹ್ಮದ ಅಂಶವಲ್ಲವೆಂದೂ ಇತರ ಭಾಷ್ಯಕಾರರು ಇದನ್ನು ಒಪ್ಪಿಲ್ಲವೆಂದೂ ತಿಳಿದು ಬರುವುದು. ಮೇಲಿನ ವೀರಶೈವ ಆಧಾರಗಳು ಸಹಾ ಶ್ರೀ ಶಂಕರಾಚಾರ್ಯರು ಜೀವನು ಬ್ರಹ್ಮನ ಅಂಶವಲ್ಲವೆನ್ನುವುದನ್ನು ಒಪ್ಪಿಲ್ಲ.

ಜೀವ ಬ್ರಹ್ಮರ ಸಂಬಂಧದ ವಿಷಯದಲ್ಲೂ, ಇದನ್ನನುಸರಿಸಿದ ಪ್ರಶ್ನೆಯಾದ ಮೋಕ್ಷಸ್ವರೂಪ ಮತ್ತು ಅದನ್ನು ಸಾಧಿಸುವ ಉಪಾಯ ಈ ವಿಷಯಗಳಲ್ಲೂ ಉಪನಿಷತ್ ಕಾಲದಿಂದಲೂ ಭಿನ್ನಾಭಿಪ್ರಾಯಗಳಿವೆ. ಕೆಲವು ಶ್ರುತಿಗಳು ಅದ್ವೈತವನ್ನು ಹೇಳಿದರೆ ಕೆಲವು ದ್ವೈತವನ್ನು ಹೇಳುವುವು. ಆದುದರಿಂದಲೇ ವಿವಿಧ ಮಂತ್ರಗಳಲ್ಲಿ ಏಕವಾಕ್ಯತೆಯನ್ನು ತೋರಿಸಲು ವೇದವ್ಯಾಸರಿಂದ ವೇದಾಂತಸೂತ್ರಭಾಷ್ಯದಲ್ಲಿ ಎಂದರೆ ವೇದಾಂತ ವಾಕ್ಯಗಳೆಂಬ ಕುಸುಮಗಳನ್ನು ಕಟ್ಟುವ ಸೂತ್ರಗಳೇ ವೇದಾಂತ ಸೂತ್ರಗಳೆಂದು ಹೇಳಿದ್ದಾರೆ. ಈ ವೇದಾಂತ ಸೂತ್ರಗಳನ್ನು ರಚಿಸುವಾಗಲೇ ಇದ್ದ ಭಿನ್ನಾಭಿಪ್ರಾಯಗಳನ್ನು ವೇದಾಂತ ಸೂತ್ರದಲ್ಲೇ ಹೇಳಿದ್ದಾರೆ.

"ಪ್ರತಿಜ್ಞಾ ಸಿದ್ಧೇರ್ಲಿಂಗಮಾಶ್ಮರಥ್ಯಃ; ಉತ್ಕ್ರಮಿಷ್ಯತ ಏವಂ ಭಾವಾದಿ ತ್ಯೌಡುಲೋಮಿಃ ಅವಸ್ಥಿತೇರಿತಿ ಕಾಶಕೃತ್ಸ್ನಃ"

ಇವು ಮೂರು ಸೂತ್ರಗಳಲ್ಲಿ ಹಿಂದಿನ ಮೂವರು ಆಚಾರ್ಯರ ಭಿನ್ನಾಭಿಪ್ರಾಯಗಳಿವೆ. ಬ್ರಹ್ಮವನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವುದು. ಎಂದ ಮೇಲೆ ಜೀವನಿಗೆ ಬ್ರಹ್ಮವು ಕಾರಣವೆಂದಂತಾಯಿತು. ಕಾರ್ಯಕಾರಣಗಳಿಗೆ ಭೇದವೂ ಅಭೇದವೂ ಇರುವಂತೆ ಜೀವ ಬ್ರಹ್ಮರಿಗೆ ಭೇದಾಭೇದವನ್ನು ಹೇಳುವುದು ಸರಿಯೆಂಬುದು ಭೇದಾಭೇದವಾದಿಗಳಾದ ಅಶ್ಮರಥ್ಯರು. ಜೀವನು ಬ್ರಹ್ಮನೂ ಮೋಕ್ಷಕ್ಕೆ ಮೊದಲು ಬೇರೆ ಬೇರೆಯಾದರೂ ಮೋಕ್ಷದಲ್ಲಿ ಒಂದೆಯಾಗಿರುವರೆಂಬರು ಓಡುಲೋಮಿ. ಜೀವನು ಬ್ರಹ್ಮದ ಪ್ರತಿಬಿಂಬವಾಗಿ ಅಭೇದವಾಗಿ ಇರುವನೆಂದು ಕಾಶಕೃತ್ಸ್ನರು ಹೇಳುವರು ; ಬಹುಮಟ್ಟಿಗೆ ಇವರ ವಾದವೇ ಶಾಂಕರ ಸಿದ್ಧಾಂತದಂತಿದೆ.

ಮಾನ್ಯ ರಾಧಾಕೃಷ್ಣನ್‌ರವರು ಇಂಡಿಯನ್ ಫಿಲಾಸಫಿಯ ಎರಡನೆಯ ಭಾಗದಲ್ಲಿ ವೇದಾಂತ ಸೂತ್ರ ವಿಷಯವಾಗಿ ಹೀಗೆ ಬರೆದಿರುವರು—

"Brahman as the material cause as well as the instrumental cause of the World (i-4-23 to 27) Brahman is the creator of all things and transforms himself into al- things as clay or of gold....Brahman and the world are not different (ananya ii-1-4) even as the clay pot is not different from the clay (11-1-14 to 20) Even as the clay pot is not different from the clay (ii-1 14 to 20)....The instances of cause and effect given in the Chandogya upanishad are earth, gold, and iron and things made of them and not rope and snake or shell and silver. Finite things are real as determinations of Brahman. The statement that Brahman is the material cause of the world suggests that the world is modification of Brahman (i-1-26) The world is not an illusion or dream like structure but a real positive some thing which has its origination, existence and obsorption in Brahman.

ಜಗತ್ತು ಸತ್ಯವೆಂದೂ, ಮಡಕೆಗೆ ಮಣ್ಣು ಕಾರಣವಾಗಿರುವಂತೆ, ಚಿನ್ನವು ಆಭರಣಕ್ಕೆ ಕಾರಣವಾಗಿರುವಂತೆ ಬ್ರಹ್ಮವು ಜಗತ್ತಿಗೆ ಉಪಾದಾನ ಕಾರಣವಾಗಿದೆಯೆಂದೂ ಜಗತ್ತು ಬ್ರಹ್ಮವೂ ಬೇರೆ ಬೇರೆಯಲ್ಲವೆಂದೂ ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿರುವ ಉದಾಹರಣೆಗಳು ಮಣ್ಣು ಚಿನ್ನ ಕಬ್ಬಿಣ ಮತ್ತು ಅವುಗಳಿಂದಾದ ವಸ್ತುಗಳೇ ಹೊರತು ರಜತ ಶುಕ್ತಿಯಾಗಲೀ ಸರ್ಪರಜ್ಜುಗಳಾಗಲೀ ಅಲ್ಲವೆಂದು ವೇದಾಂತ ಸೂತ್ರದ ನಿಲುವನ್ನು ಹೇಳುವ ಸಂದರ್ಭದಲ್ಲಿ ಮಾನ್ಯ ರಾಧಾಕೃಷ್ಣನ್ನರು ಹೇಳಿರುವರು. ಮುಂದುವರೆದು "Badarayana believes that the power of creation belogns to the pure, stainless Brahman even as heat belong s to fire" ಎಂದು ಹೇಳಿರುವುದು ಇಂಗಡಲೊಳಿಂಪು ಬೆಳುದಿಂಗಳೊಳು ತಂಪು ಕುಸುಮಂಗಳೊಳು ಕಂಪು ಬೆರದಂತೆ ಪರಮನೊಳು ಬೆರದಿಹ ಅಗಜಾತೆಗೆ ನತನಪ್ಪೆನೆಂದು ನಿಜಗುಣ ಶಿವಯೋಗಿಗಳು ಹೇಳಿರುವ ಶಿವಶಕ್ತಿಯರ ಅದ್ವೈತವು ಜ್ಞಾಪಕಕ್ಕೆ ತರುತ್ತದೆ. ಇದೇ ಗ್ರಂಥದ ಮೊದಲನೆಯ ಭಾಗದಲ್ಲಿ ಉಪನಿಷತ್ತುಗಳ ನಿಲು

ವಿನ ವಿಚಾರವಾಗಿ ಹೀಗೆ ಹೇಳಿದ್ದಾರೆ—"Each little leaf on a tree may very naturally have sufficient consciousness to believe that it is an entirely separate being maintains itself in the sunlight and the air, withering away and dying when the winter comes on— and there is an end of it. It probably does not realise that all the time it is being suppoted by the sap which flows form the trunk of the tree and that in its turn it is feeding the tree too. If the leaf could really understand itself, it would see that its self was deeply, intimately connected practically one with the life of whole tree. ಹೀಗೆ ಹೇಳಿರುವುದರಲ್ಲಿ ಪರಬ್ರಹ್ಮವನ್ನು ಮರಕ್ಕೂ, ಜೀವಗಳನ್ನು ಎಲೆಗಳಿಗೂ ಹೋಲಿಸಿ ಜೀವಿಗಳು ಪರಬ್ರಹ್ಮನ ಅಂಶವೆಂಬುದನ್ನು ಮರೆತಿರುವುದು ಮಾಯೆಯಿಂದ ಎಂದು ತಿಳಿಸಿದ್ದಾರೆ.

ಮರದೊಳಗಣ ಪತ್ರೆಫಲಂಗಳು ಮರಕಾಲ ವಶದಲ್ಲಿ ತೋರುವಂತೆ ಹರನೊಳಗಣ ಲೀಲಾ ಪ್ರಕೃತಿ ಸ್ವಭಾವಂಗಳು ಹರಲೀಲಾಕಾಲ ವಶದಲ್ಲಿ ತೋರುವುವು. ಲೀಲೆಯಾದೊಡೆ ಉಮಾಪತಿ,ಲೀಲೆ ನಿಂದೊಡೆ ಸ್ವಯಂಭು ನಮ್ಮ ಗುಹೇಶ್ವರ ಲಿಂಗವು

ಅಲ್ಲಮ ಪ್ರಭುವಿನ ಈ ವಚನದಲ್ಲಿ ಶಿವನ್ನು ಶಕ್ತಿವಿಶಿಷ್ಟನಾಗುವುದಕ್ಕೆ ಮೊದಲು ಅವನನ್ನು ಸ್ವಯಂಭುವೆಂದು ಕರೆಯಲಾಗಿದೆ. ಶಕ್ತಿವಿಶಿಷ್ಟನಾಗಿ ಜೀವ ಜಗತ್ತುಗಳುದಯವಾಗುವುದನ್ನು ಮರಗಳಲ್ಲಿ ಸಕಾಲದಲ್ಲಿ ಪತ್ರೆ ಫಲಗಳು ಹುಟ್ಟುವುದಕ್ಕೆ ಹೋಲಿಸಿರುವುದು ಮಾನ್ಯ ರಾಧಾಕೃಷ್ಣನ್ನರ ಹೋಲಿಕೆಗೆ ಸರಿಹೊಂದುವುದು. ಮಾನ್ಯ ರಾಧಾಕೃಷ್ಣನ್‌ರವರು ಮುಂದುವರೆದು, "Below the separate wave crests of Conciousness there is the unfathomed common depth of life form which all spirits draw the springs of their being" ಎಂದು ಹೇಳಿರುವುದು ವಚನಕಾರರು "ಘನಗಂಭೀರ ಮಹಾವಾರಿಧಿಯಲ್ಲಿ ಫೇನತರಂಗ ಬುದ್ಬುದಗಳುದಯವಲ್ಲದೆ ಬೇರಾಗಬಲ್ಲವೆ? ಆತ್ಮನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡ ಕೋಟಿಗಳುದಯವಲ್ಲದೆ ಬೇರಾಗ ಬಲ್ಲವೆ?" ಎಂದು ಹೇಳಿರುವುದನ್ನು ಜ್ಞಾಪಕಕ್ಕೆ ತರುವುದು.

ಟಿ. ಎನ್. ಮಲ್ಲಪ್ಪ

# ಜೈನಧರ್ಮ ಹಾಗೂ ವಚನಧರ್ಮ

ಕನ್ನಡ ಸಾಹಿತ್ಯದ ಒಲವುಗಳಲ್ಲಿ, ವಚನ ವಾಙ್ಮಯವು ತಲೆಎತ್ತಿದುದು ನಮ್ಮ ನಾಡಿನ ಆಧ್ಯಾತ್ಮಿಕ ಸಿದ್ಧಿಗೊಂದು ದ್ಯೋತಕವಾಗಿದೆ. ಕನ್ನಡ ಸಾಹಿತ್ಯವು ಆರಂಭದಿಂದಲೂ ಧರ್ಮಾಧಿಷ್ಠಿತವಾಗಿದೆ. ಸತ್ಯ, ಅಹಿಂಸೆ, ತ್ಯಾಗ, ಅಪರಿಗ್ರಹಗಳ ಪ್ರಚಾರಕ್ಕೆಂದೇ ಜೈನಾಚಾರ್ಯರು ಕನ್ನಡದಲ್ಲಿ ಗ್ರಂಥಗಳನ್ನು ರಚಿಸತೊಡಗಿದರು. ಅವರು ಮಹಾಕವಿಗಳಾದುದರಿಂದ ಪ್ರಚಾರವು ಕಾವ್ಯದ ಅಂತರಂಗದಲ್ಲಿಯೇ ಉಳಿಯುವಂತೆ ನೋಡಿಕೊಂಡರು; ಭಾಷೆಗೊಂದು ಸುಲಲಿತ ಸ್ವರೂಪವನ್ನು ತಂದುಕೊಟ್ಟರು. ಆ ಮಹಾಕಾವ್ಯಗಳ ಕೋಟೆಯನ್ನು ಒಡೆದು ಧರ್ಮದ ತಿರುಳನ್ನು ಜನಸಾಮಾನ್ಯರ ಮನಕ್ಕೆ ಒಯ್ದು ತಲುಪಿಸಿದ ಶ್ರೇಯವು ಕನ್ನಡ ವಚನಕಾರರಿಗಿದೆ. ಇಷ್ಟೇ ಅಲ್ಲ, ವಚನಧರ್ಮವೊಂದನ್ನು ರೂಪಿಸಿದ ಮಹಿಮೆಯು ವೀರಶೈವ ಮಹಾಪುರುಷರಿಗೆ ಸಲ್ಲುತ್ತದೆ. ಅದು ಕನ್ನಡದ ಕೀರ್ತಿಯ ಕಲಶನಾಗಿದೆ.

ಕನ್ನಡ ವೀರಶೈವ ವಚನ ವಾಙ್ಮಯಕ್ಕೆ ಕನ್ನಡ ಮಹಾಕಾವ್ಯಗಳ ಹಿನ್ನೆಲೆ ಇತ್ತು. ವಚನ ಶೈಲಿಯ ಹುಟ್ಟು ವಿಕಾಸಗಳನ್ನು ಹಿಂದಿನ ಕವಿ ಚಕ್ರವರ್ತಿ ಪಂಪ, ರನ್ನ ಮೊದಲಾದವರ ಚಂಪೂ ಕಾವ್ಯಗಳಲ್ಲಿಯೇ ನಾವು ಕಾಣುತ್ತೇವೆ. ಕನ್ನಡ ಗದ್ಯಶೈಲಿಯ ಮೂಲವು ಆ ಚಂಪೂ ಕಾವ್ಯಗಳಲ್ಲಿಯೇ ವ್ಯಕ್ತವಾಗಿಹೆ. ಆದರೆ ಒಂದು ವಿಶಿಷ್ಟ ಸ್ವರೂಪವನ್ನು ತಾಳಿ, ವೀರಶೈವ ವಚನ ವಾಙ್ಮಯವು ಕನ್ನಡ ಸಾಹಿತ್ಯರಂಗದಲ್ಲಿ ವ್ಯಕ್ತವಾಯಿತು.

ಆರಂಭದ ಕನ್ನಡ ಜೈನ ವಾಙ್ಮಯವು ತೀರ್ಥಂಕರ ಚರಿತ್ರೆಗಳಿಂದಲೂ, ಮಹಾಭಾರತ-ರಾಮಾಯಣಗಳಂಥ ಜೈನಪುರಾಣ ಕಥೆಗಳಿಂದಲೂ ಧರ್ಮ, ನೀತಿ, ತತ್ತ್ವಜ್ಞಾನಗಳನ್ನು ಪ್ರಚುರಗೊಳಿಸಿತು. ಜನಜೀವನವನ್ನು ಸುಸಂಸ್ಕೃತ ಸ್ವರೂಪಕ್ಕೆ ಒಯ್ಯಲು ಯತ್ನಿಸಿತು. ಅದಕ್ಕಾಗಿ ಅದು ತನ್ನ ಪರಂಪರೆಯ ತತ್ತ್ವಜ್ಞಾನ, ವಿಚಾರ, ಆಚಾರಗಳನ್ನು ಕಾವ್ಯಗಳ ಮುಖಾಂತರ ಬೋಧಿಸಿತು; ಬಿತ್ತರಿಸಿತು. ಆದರೆ ವಚನ ವಾಙ್ಮಯವು ಅಂಥ ವಿಚಾರಗಳನ್ನು ನೇರವಾಗಿ ಕನ್ನಡ ಗದ್ಯಶೈಲಿಯಲ್ಲಿ ವಿವರಿಸಿತು.

ಜೈನ ಧರ್ಮಕ್ಕೆ ಎಲ್ಲ ಧರ್ಮಗಳಿಗಿರುವಂತೆ ತಾತ್ವಿಕ ಅಂಗವೊಂದಿದೆ. ಅದು ವಿಶ್ವಜೀವನದ ಉದ್ದೇಶವನ್ನು, ಧ್ಯೇಯವನ್ನು ಸಿದ್ಧಾಂತಿಸುವ ಸೂತ್ರವಾಗಿದೆ. ಆ ಸೂತ್ರಕ್ಕೆ ಅನುಸರಿಸಿ ಮಾನವ ಜೀವನವನ್ನು ರೂಪಿಸಬೇಕೆನ್ನುವ ಜೈನ ವಿಚಾರ ಸರಣಿಯೇ ಅದರ ಆಚಾರಾಂಗವೆನಿಸುತ್ತದೆ. ಈ ದರ್ಶನ, ಆಚಾರಗಳು ಒಂದು ನಾಣ್ಯದ ಎರಡು ಮೈಗಳಿದ್ದಂತೆ ಇವೆ. ಇಂಥ ಮೈಗಳಲ್ಲಿ ಸಮಾಜದ ಹಾಗೂ ವ್ಯಕ್ತಿಯ ಆಚಾರಾಂಗವನ್ನೇ ಹೆಚ್ಚಾಗಿ ಪ್ರತಿನಿಧಿಸಲು ವಚನವಾಙ್ಮಯವು ಯತ್ನಿಸಿತು. ವಚನಗಳಿಗೆ ತಾತ್ವಿಕ ಹಾಗೂ ದಾರ್ಶನಿಕ ಹಿನ್ನೆಲೆ ಇಲ್ಲದಿಲ್ಲ. ಆದರೆ ಅದು ಚೆನ್ನಬಸವಣ್ಣನವರು ಹೇಳುವಂತೆ "ದೇಹ ನಿರ್ದೇಹವೆನುತಿಪ್ಪರಯ್ಯ, ದೇಹ ನಿರ್ದೇಹವಪ್ಪ ಮರ್ಮವನರಿಯರು. ಅಹಂ ಎಂಬುದೇ

ದೇಹ, ದಾಸೋಹಂ ಎಂಬುದೇ ನಿರ್ದೇಹ ನೋಡಾ...." ಎನ್ನುವಾಗ ಜೀವನ ಹಾಗೂ, ಮುಕ್ತಿಗಳ ವ್ಯಾಖ್ಯೆಯನ್ನು ಹೊಸ ದೃಷ್ಟಿಯಿಂದ ರೂಪಿಸಿದ್ದಾರೆ. ಇಲ್ಲಿ ಶರಣಭಾವನೆಯ ಅತ್ಯಂತಿಕ ಸ್ಥಿತಿಯೇ ಮುಕ್ತಿಯೆಂದು ಸಾರಿದ್ದಾರೆ. ಇದು ಶೈವದರ್ಶನದ ಶಿವೈಕ್ಯ ದೃಷ್ಟಿಯಿಂದ ಒಂದು ಅತ್ಯುಚ್ಚ ಜೀವನ ದದರ್ಶನವಾಗಿದೆ. ಅದರಂತೆ ಜನಸಾಮಾನ್ಯರೂ ಕೂಡ ತಮ್ಮ ಜೀವನದಲ್ಲಿ ತಮ್ಮ ಆಗುಹೋಗುಗಳಿಗೆಲ್ಲ ಶಿವನೇ ಕಾರಣನೆಂದು ಭಾವಿಸಿ, ಶಿವಾರ್ಪಣ ಭಾವನೆಯಿಂದ ಬಾಳಿನಲ್ಲಿ ಸುಖವಾಗಿರುತ್ತಾನೆ. ಸುಖ-ದುಃಖಗಳಲ್ಲಿ ಸಮಭಾವನೆಯನ್ನು ಹೊಂದುತ್ತಾನೆ. ಇಂಥ ಮಾಧ್ಯಸ್ಥ ಭಾವವನ್ನು ಜೈನ ದರ್ಶನವು ಪೂರ್ವಭವದ 'ಕರ್ಮ' ಬಂಧನದ ನಿಮಿತ್ತದಿಂದ ಉಂಟುಮಾಡಿದೆ. ಆದರೆ ಮುಕ್ತಾವಸ್ಥೆಯನ್ನು ಸಂಸಾರ ರಂಗಕ್ಕೆ ಇಳಿಸಲು ಅದು ಯತ್ನಿಸಿಲ್ಲ.

ಇನ್ನು ಜೈನದರ್ಶನವು ತನ್ನ ಅನುಯಾಯಿಗಳ ನಿಷ್ಠೆಯನ್ನು ಸಂರಕ್ಷಿಸಿಕೊಳ್ಳಲಿಕ್ಕೆ ಸಮ್ಯಕ್ತ್ವದ ಭದ್ರವಾದ ಗೋಡೆಯನ್ನು ಕಟ್ಟಿದೆ. ಅನ್ಯದೈವ, ದರ್ಶನ, ಅನ್ಯ ಗುರುಗೌರವ, ಅನ್ಯಶಾಸ್ತ್ರಗಳ ಅಭ್ಯಾಸಗಳಿಗೆಲ್ಲ ನಿರ್ಬಂಧವನ್ನು ಹಾಕಿದೆ. ಅದರಂತೆ ಚೆನ್ನಬಸವಣ್ಣನವರು ಸಹ "ಹುಸಿ, ಕಳವು, ಪರದಾರ, ಅನ್ಯದೈವಭಜನೆ, ಭವಿಬಳಕೆ ಬಿಡದನ್ನಕ್ಕರ ಲಿಂಗಭಕ್ತನೆನಿಸಬಾರದು." ಎಂದು ಸ್ಪಷ್ಟವಾಗಿ ಸಾರಿದರು. ಅಲ್ಲಿಯೇ ಸಾಮಾನ್ಯವಾಗಿ 'ಅನಾಚಾರ ಸಹಿತನಾದವನು ನರನು. ಆಚಾರ ಸಹಿತನಾದವನು ಭಕ್ತ' ಎಂದೂ ಸೂಚಿಸಿದ್ದಾರೆ. ಇಲ್ಲಿಯ ನರನು ಕೇವಲ ಮಿಥ್ಯಾದೃಷ್ಟಿಯಲ್ಲ. ಜೈನ ಗೃಹಸ್ಥನಂತೆ, ಇವನು ದೃಷ್ಟಿದೋಷದೊಡನೆ ದುರಾಚಾರಿಯು ಆಗಿರುತ್ತಾನೆ. ಆ ದುರಾಚಾರಗಳು ಹುಸಿ, ಕಳವು, ಇತ್ಯಾದಿಗಳಾಗಿವೆ. ಅದರಂತೆ ಭಕ್ತನ ವ್ಯಾಖ್ಯೆಯಲ್ಲಿಯೂ ಆಚಾರದ ಮಹತ್ವವನ್ನು ಸೂಚಿಸಿದ್ದಾರೆ. ಅನುಯಾಯಿಗಳ ಶ್ರದ್ಧೆಯನ್ನು ಭದ್ರಗೊಳಿಸಿ ಶರಣ ಮಾರ್ಗದಲ್ಲಿಯೇ ಮುಂದರಿಯುವಂತೆ ಯತ್ನಿಸಿದ್ದಾರೆ.

ವಚನಕಾರರ ದೃಷ್ಟಿಯು ಪರಮಾತ್ಮನ ವಿಚಾರದಲ್ಲಿ ವೈದಿಕ ದರ್ಶನವನ್ನು ಅನುಸರಿಸದೆ ಜೈನ ದೃಷ್ಟಿಯನ್ನೇ ಹೆಚ್ಚಾಗಿ ಅನುಮೋದಿಸುತ್ತದೆ. ದೇವನೊಬ್ಬ ಸೃಷ್ಟಿಕರ್ತನೆಂದು ಅದು ಹೇಳದೆ "ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯಲಡಗಿದ ಮಿಂಚಿನಂತೆ, ಬಯಲ ಮರೆಯಲಡಗಿದ ಮರೀಚಿಯಂತೆ,ಕಂಗಳ ಮರೆಯಲಡಗಿದ ಬೆಳಗಿನಂತೆ ಗುಹೇಶ್ವರ ನಿಮ್ಮ ನಿಲುವು" ಎಂದು ವಿಸ್ತರಿಸುತ್ತದೆ. ಇಲ್ಲಿ ಪರಮಾತ್ಮನು ಅಂತಸ್ಥನಾಗಿರುವುದನ್ನು ಸೂಚಿಸಿದ್ದಾರೆ. ಇದೇ ಭಾವವನ್ನು ಇನ್ನೊಬ್ಬ ವಚನಕಾರರು 'ಮರದೊಳಗಣ ಮಂದಾಗ್ನಿ, ನೊರೆವಾಲೊಳಗೆ ತುಪ್ಪ ಶರೀರದೊಳಗಾತ್ಮ' ಎಂದಿತ್ಯಾದಿಯಾಗಿ ಬಿತ್ತರಿಸಿದ್ದಾರೆ. ಮರದೊಳಗಿನ ಅಗ್ನಿಯಾಗಲಿ, ಹಾಲಿನೊಳಗಿನ ತುಪ್ಪವಾಗಲೀ ಹೊರಗಿನಿಂದ ಬಂದವುಗಳಲ್ಲ. ಅವು ಉಜ್ಜುವುದರಿಂದಲೂ ಕಡಿಯುವುದರಿಂದಲೂ ವ್ಯಕ್ತವಾಗುತ್ತವೆ. ಅದರಂತೆ ಪರಮಾತ್ಮನೂ ನಮ್ಮಲ್ಲಿಯೇ ಇದ್ದಾನೆ. ಅವನು ನೆಲದೊಳಗಿನ ನಿಧಾನದಂತೆ ಕಾಣದೆ ಇದ್ದಾನೆ. ಅವನನ್ನು ಕರ್ಮಮಲಗಳು ಆವರಿಸಿವೆ. ಸಾಧನೆಯಿಂದ ಅವನನ್ನು ನಾವು ಪಡೆಯಬೇಕಾಗುತ್ತದೆ. ಈ ಮಾತುಗಳು ಜೈನದರ್ಶನಕ್ಕೆ ತೀರ ಹತ್ತಿರದ ಬಾಂಧವ್ಯವನ್ನು ವ್ಯಕ್ತಪಡಿಸುತ್ತವೆ.

ಭಕ್ತಿಭಾಂಡಾರಿಗಳಾದ ಬಸವಣ್ಣನವರಂತೂ ಸಂಸಾರದಲ್ಲಿ ತೊಳಲುವ ಜೀವವನ್ನು

ಕಂಡು ಕನಿಕರದಿಂದ "ಬಡಪಶು ಪಂಕದಲ್ಲಿ ಬಿದ್ದರೆ ಕಾಲಬಡಿಯುವುದಲ್ಲದೆ ಬೇರೆ ಗತಿಯುಂಟೆ?" ಎಂದು ಕೊರಗುವರು. ಈ ಸಂಸಾರದ ಭೋಗವು ಶೂಲದ ಮೇಲಿನದು. ಅದರಲ್ಲಿ ನಿಜವಾದ ಸುಖವೆಂಬುದು ಇರುವದಿಲ್ಲ. ವಿಷಯ ಸುಖಗಳೆಲ್ಲ ಮಾನವನನ್ನು ಕ್ಷೀಣದೆಸೆಗೆ ಒಯ್ಯಲಿಕ್ಕೆಂದು ಇದೆ. ಈ 'ನಾನಾ ವರ್ಣದ ಸಂಸಾರವು ಹಾವಾಡಿಗನ ಸ್ನೇಹದಂತೆ' ಎಂದು ಶರಣರು ವಿವರಿಸುವರು. ಸಂಸಾರ ಸುಖವು ಹೇಯವೆಂಬುದನ್ನು ಜೈನದರ್ಶನವಂತೂ ಮೊದಲಿನಿಂದಲೂ ಘಂಟಾಘೋಷವಾಗಿ ಸಾರುತ್ತಲೇ ಬಂದಿದೆ. ವೈರಾಗ್ಯದ ಬೀಜಮಂತ್ರವೇ ಈ ಘೋಷಣೆಯಲ್ಲಿದೆ.

ಆದರೆ ಬಸವಣ್ಣನವರು ಬೋಧಿಸುವ ವೈರಾಗ್ಯವು ತೀರ ಉಗ್ರವಾದುದಲ್ಲ. ಸಾಮಾಜಿಕ ಜೀವನ, ಗ್ರಹಜೀವನಗಳಿಂದ ಶರಣರು ದೂರವಿರುವ ಅವಶ್ಯಕತೆಯಿಲ್ಲ. ಅವರಿಗೆ ಅವರವರ 'ಕಾಯಕವೇ ಕೈಲಾಸ' ಸುಖವನ್ನು ಒದಗಿಸುತ್ತದೆ. ಅಂದರೂ ಅಲ್ಲಮಪ್ರಭುವು 'ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ' ಎಂದು ಸಂಸಾರದ ಬೇಟದ ಪರಿಯನ್ನು ಸೂಚಿಸಿ ಎಚ್ಚರಿಸುತ್ತಾನೆ. ಇದನ್ನು ಗ್ರಹಿಸಿ ಯಾವನು ಹೊನ್ನು, ಹೆಣ್ಣು, ಮಣ್ಣುಗಳನ್ನು ತಿರಸ್ಕರಿಸಿ ಪರಮಾತ್ಮನನ್ನೇ ಬಯಸುವನೋ ಅವನಿಗೆ ಸಿದ್ಧಿಯು ದೊರೆಕೊಳ್ಳುವದು. ಶರಣರು ಯಾವ ಯಾವ ರೀತಿಯಿಂದ 'ವಚನ ಧರ್ಮ'ವನ್ನು ರೂಪಿಸಲು ಯತ್ನಿಸಿದರೂ ವೀರವೈರಾಗ್ಯದಿಂದ ಅವರಿಗೆ ಚ್ಯುತಿಗೊಳ್ಳುವಿಕೆ ಆಗಲಿಲ್ಲ. ಮಹಾಸಾಧ್ವಿಯಾದ ಅಕ್ಕಮಹಾದೇವಿಯ ಸಾಧಕ ಜೀವನವಂತೂ ವೀರವೈರಾಗ್ಯದ ಪ್ರತೀಕವಾಗಿದೆ.

ಆ ಮಹಾಸತಿಯು ತನ್ನ ಆತ್ಮನನ್ನೇ ಚೆನ್ನಮಲ್ಲಿಕಾರ್ಜುನನನ್ನೇ ಪತಿಯೆಂದು ಸ್ವೀಕರಿಸಿದ್ದಾಳೆ. "ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವಂಗಾನೊಲಿದೆನವ್ವ. ಎಡೆಯಿಲ್ಲದ, ಕಡೆಯಿಲ್ಲದ, ತೆರಹಿಲ್ಲದ, ಕುರುಹಿಲ್ಲದ ಚೆಲುವಂಗಾನೊಲಿದೆ. ಎಲೆ ಅವ್ವಾ, ನೀನು ಕೇಳಾ ತಾಯೆ ಭವವಿಲ್ಲದ, ಭಯವಿಲ್ಲದ, ನಿರ್ಭಯ ಚೆಲುವಂಗೆ ನಾನೊಲಿದೆ. ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು...." ಎಂದಿದ್ದಾಳೆ. ಇದು ಪರಮಾತ್ಮನ ಸ್ವರೂಪವನ್ನೇ ಬಯಸುವ ಪರಿಯಲ್ಲದೆ ಬೇರೆಯಲ್ಲ. ಅವಳ ಧ್ಯಾನಶೀಲತೆ, ವೈರಾಗ್ಯ ಜೀವನ, ಕಷ್ಟಸಹಿಷ್ಣುತೆ ಇವೇ ಮೊದಲಾದವುಗಳೆಲ್ಲ ಈ ಮಾತಿಗೆ ಪುಷ್ಟಿಯನ್ನೀಯುತ್ತವೆ.

ಇನ್ನು ವಚನ ವಾಙ್ಮಯದಲ್ಲಿ ರೂಪು ಪಡೆದ ಷಟ್‌ಸ್ಥಲ ಸಿದ್ಧಾಂತವು ಜೈನಪರಂಪರೆಯ ಗುಣಸ್ಥಾನ ಕ್ರಮದ ಸಾಧದ ಮಾರ್ಗವನ್ನು ಹೋಲುತ್ತದೆಂದರೆ ಅತ್ಯುಕ್ತಿಯೇನಲ್ಲ. ಭಾರತೀಯ ಸಂಸ್ಕೃತಿ ಧರ್ಮಗಳಲ್ಲಿ ಒಂದೇ ಬುಡಕಟ್ಟಿಗೆ ಸೇರಿದ ಎರಡು ಧರ್ಮಗಳ ಸಾಧನಾಕ್ರಮದಲ್ಲಿರುವ ಸಾಮ್ಯವನ್ನು ಇದು ಎತ್ತಿ ತೋರಿಸುತ್ತದೆ. ಸಾಧಕರಲ್ಲಿ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಗಳೆಂದು ಆರು ಸ್ಥಳಗಳನ್ನು ರೂಪಿಸಲಾಗಿದೆ. ವಚನಕಾರರು ಭಕ್ತನ ವ್ಯಾಖ್ಯೆಯನ್ನು ಮಾಡುತ್ತ "ಸದಾಚಾರದಲ್ಲಿ ನಡೆವನ, ಶಿವನಲ್ಲಿ ಭಕ್ತಿಯಾಗಿಪ್ಪನ, ಶಿವಲಾಂಛನವ ಕಂಡಲ್ಲಿ ವಂದನೆಗೆಯ್ಯುತಿಪ್ಪನ, ಲಿಂಗ ಜಂಗಮ ಒಂದೇ ಭಾವದಲ್ಲಿ ಕಂಡು, ಭೃತ್ಯಾಚಾರಯುಕ್ತವಾಗಿರಬಲ್ಲಡೆ ಭಕ್ತಸ್ಥಲವೆಂದೆಂಬೆನಯ್ಯಾ[1]...." ಎಂದು ಹೇಳುತ್ತಾರೆ. ಇದರಲ್ಲಿ ಜೈನ ಶ್ರಾವಕರಲ್ಲಿ ಇರಬೇಕಾದ ಸಮ್ಯಗ್ದೃಷ್ಟಿ, ಜ್ಞಾನ, ಚಾರಿತ್ರಗಳ ಸೂಚನೆಯಿದೆ.

1. ವಚನ ಶಾಸ್ತ್ರಸಾರ ಭಾಗ ೧. ಪುಟ ೧೪೯.

ರತ್ನತ್ರಯಗಳ ತಳಹದಿಯಿದೆ. ಮಾಹೇಶ್ವರ ಸ್ಥಲದಲ್ಲಿರುವ ಸಾಧಕನಂತೂ "ಅನೃತ, ಅನಾಚಾರ, ಅನ್ಯಹಿಂಸೆ, ಪರಧನ, ಪರಸ್ತ್ರೀ, ಪರನಿಂದೆ, ಇವ ಬಿಟ್ಟು ಲಿಂಗನಿಷ್ಠೆಯಿಂದ ಶುದ್ಧಾತ್ಮನಾಗಿರಬಲ್ಲಡೆ ಮಹೇಶ್ವರ ಸ್ಥಲ ಇದೆಂಬೆನಯ್ಯ."1 ಎನ್ನುವಂತಿರಬೇಕು. ಈ ಗುಣಗಳು ಜೈನಪರಂಪರೆಯ ಅಹಿಂಸಾ, ಸತ್ಯ, ಅಚೇರ್ಯ, ಬ್ರಹ್ಮಚರ್ಯ, ಪರಿಗ್ರಹ ಪರಿಮಾನಗಳನ್ನು ಬಿಟ್ಟು ದೂರವೇನಿಲ್ಲ. ಅಣುವ್ರತಗಳನ್ನಾಚರಿಸುವ ಜೈನ ಶ್ರಾವಕರೂ ಮಾಹೇಶ್ವರ ಸ್ಥಲದ ಶಿವಶರಣರೂ ಒಂದೇ ಹಂತದ ಸಾಧಕರಾಗಿದ್ದಾರೆ.

ಜೈನ ಗ:ಣಸ್ಥಾನ ಕ್ರಮದಲ್ಲಿ ಪ್ರತಿಮಾಧಾರಿಗಳ ಅವಸ್ಥೆಯೊಂದು ಬರುತ್ತದೆ.2 ಅದು ಪ್ರಬುದ್ಧ ಸಾಧಕನ ಮುಂಚಿನ ಸ್ಥಿತಿಯಾಗಿದೆ. ಶರಣರ ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಲಗಳು ಈ ಅವಸ್ಥೆಯನ್ನು ಸೂಚಿಸುತ್ತವೆ. ವಚನ ಶಾಸ್ತ್ರದಲ್ಲಿ ಬರುವ ಶಬ್ದ, ಸ್ಪರ್ಶ, ರೂಪು, ರಸ, ಗಂಧ, ಪಂಚೇಂದ್ರಿಯಗಳು ಮೊದಲಾಗಿ ನಡೆದುವು ಲಿಂಗದತ್ತತ್ತಲೆ" ಎನ್ನುವ ಮಾತಾಗಲೀ "ನೆಲ ತಳವಾರನಾದರೆ ಕಳ್ಳಂಗೆ ಹೋಗಲೆಡೆಯುಂಟೆ? ಸರ್ವಾಂಗ ಲಿಂಗಿಗೆ ಅನರ್ಪಿತ ಉಂಟೆ? ನಿಷ್ಕಳಂಕ–ಮಲ್ಲಿಕಾರ್ಜುನಾ"3. ಇಲ್ಲಿ ಪೂರ್ಣ ಸಂಯಮದ ಸಾಧನೆಯ ಸೂಚನೆಯಿದೆ. ಅದನ್ನು ಸಾಧಿಸುವ ಮೊದಲು'ಇಂದ್ರಿಯ ಜನ್ಯ ಸುಖದುಃಖಗಳಲ್ಲಿ ಸಮಭಾವ ಉಳ್ಳವರಾಗಿರಬೇಕು. ಅರ್ಥಾತ್ ಶಿವಾರ್ಪಿತವೆಂದು ಬಾಳಬೇಕೆಂದು ಹೇಳಿದೆ.

ಮುಂದಿನ ಶರಣ ಸ್ಥಲವಂತೂ ಪ್ರಬುದ್ಧ ಸಾಧಕನ ನಿರ್ಗಂಥಾವಸ್ತೆಯ ಸ್ಥಿತಿಯೇ ಆಗಿದೆ. "ಅಂತರಂಗದ ಅರಿವು, ಬಹಿರಂಗದ ಕ್ರಿಯೆ, ಈ ಉಭಯ ಸಂಪುಟ ಒಂದಾದ ಶರಣಂಗೆ ಹಿಂಗಿತ್ತು ತನುಸೂತಕ, ಹಿಂಗಿತ್ತು ಮನಸೂತಕ ಕೂಡಲಚೆನ್ನ ಸಂಗಯ್ಯನಲ್ಲಿ ಸಂಗವಾದದ್ದು ಸರ್ವೇಂದ್ರಿಯ."4 ಈ ಅವಸ್ಥೆಯಲ್ಲಿರುವ ಶರಣನು ಮಾಯೆಯ ಉಪಾಧಿಯಿಂದಾದ ದೇಹ, ದೇಹವ್ಯಾಪಾರ, ಇವುಗಳನ್ನು ಮೀರಿ ಭಗವಂತನ ಪ್ರೇಮದಲ್ಲಿ ಮುಳುಗಿ ಆನಂದಪರವಶನಾಗಿರತಕ್ಕವನು. ಶರಣ; ಕಾರ್ಮಿಕಮಲ, ಮಾಯಾಮಲಗಳಿಂದ ಮುಕ್ತನಾಗಿ ಆಣವ ಮಲವನ್ನು ನೀಗಿಕೊಳ್ಳುವ ಸ್ಥಿತಿಯಲ್ಲಿರತಕ್ಕವನು ಶರಣ. ಈ ಶರಣನಾಗಲಿ ಜೈನ ನಿರ್ಗ್ರಂಥ ಸಾಧುವಾಗಲಿ ಕರ್ಮಮಲವನ್ನು ಕಳೆದುಕೊಳ್ಳುವ ಯತ್ನದಲ್ಲಿರುತ್ತಾರೆ. ಪಾರಿಭಾಷಿಕ ಪದಗಳ ಅರ್ಥವಿವರದಲ್ಲಿ ಭಿನ್ನ ಭಿನ್ನ ಪರಿಗಳು ಕಂಡುಬಂದರೂ ಕೂಡ ಸಾಧನೆಯ ಉದ್ದೇಶಗಳು ಒಂದೇ ಆಗಿದೆ.

ಮುಂದಿನ ಐಕ್ಯಸ್ಥಲವಂತೂ ಸಿದ್ಧಾವಸ್ಥೆಯೇ ಆಗಿದೆ. ಸಿದ್ಧರ ಸ್ವರೂಪವನ್ನು ಕುರಿತು ಜೈನಾಗಮಗಳಲ್ಲಿ—

"ಣಟ್ಠಟ್ಠ ಕಮ್ಮದೇಹೋ ಲೋಯಾ
ಲೋಯಸ್ಸ ಜಾಣ ಓದಟ್ಠಾ ।

ಪುರಿಸಾಯಾರೋ ಅಪ್ಪಾಸಿದ್ಧೋಝಾ
ಏಹ ಲೋಯ ಸಿರರತ್ಥೋ॥"5

1. ಸಿದ್ಧೇಶ್ವರ ವಚನ, ಪುಟ ೯೧.
2. ವಿವರಗಳಿಗಾಗಿ ಮಿರ್ಜಿ ಅಣ್ಣಾರಾಯರ "ಜೈನಧರ್ಮ" ನೋಡಿರಿ.
3. ವಚನ ಶಾಸ್ತ್ರಸಾರ, ಭಾಗ ೧. ಪುಟ ೪೪.
4. ವಚನ ಶಾಸ್ತ್ರಸಾರ, ಭಾಗ ೧. ಪುಟ ೧೯೫.
5. ಶ್ರೀ ನೇಮಿಚಂದ್ರಾಚಾರ್ಯರ ದ್ರವ್ಯ ಸಂಗ್ರಹ.

ಎಂದು ಹೇಳಿದೆ. ಇವರು ಎಂಟು ಕರ್ಮಗಳನ್ನೆಲ್ಲಾ ಕಳೆದವರು ಲೋಕಾಲೋಕದ ಜ್ಞಾನ ಉಳ್ಳವರು. ಲೋಕಾಗ್ರದಲ್ಲಿ ಸ್ಥಿರಗೊಂಡವರು. ಈ ಮಾತನ್ನೇ ಇನ್ನಿಷ್ಟು ವಿವರಗೊಳಿಸಿ, ವಚನಕಾರರು ಹೀಗೆ ಉಸುರಿದ್ದಾರೆ. "ಕ್ಷುತ್, ಪಿಪಾಸೆ, ಶೋಕ, ಮೋಹ, ಮದ, ಮತ್ಸರವೆಂಬ ಷಡ್ವರ್ಗಂಗಳು ಇಲ್ಲದೆ ಇರುತಿಪ್ಪನು. ನಾಹಂ ಕೋಹಂ ಸೋಹಂ ಎಂಬ ಭಾವವಿರಹಿತನಾಗಿಪ್ಪನು. ಅಷ್ಟವಿಧಾರ್ಚನೆ ಷೋಡಶೋಪಚಾರ ರಹಿತನಾಗಿಪ್ಪನು. ಕರ್ಪುರ ಅಗ್ನಿಸಂಯೋಗವಾಗಿ, ಕರ್ಪುರದ ಗುಣವಳಿದು ಅಗ್ನಿಯಾದಂತೆ ಲಿಂಗವ ನೆನೆನೆನೆದು ಲಿಂಗವೇ ತಾನಾಗದಿಪ್ಪುದೀಗ ನಿಜೈಕ್ಯಸ್ಥಲವೆಂದೆಂಬೆನಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ."6

ಹದಿನೆಂಟು ದೋಷಗಳನ್ನು ಅಳಿದ ಅರಹಂತರ ಗುಣಗಳನ್ನು ಹೇಳುವಾಗಲೂ ಸಹ ಇಲ್ಲಿಯ ಕೆಲವು ವಿವರಗಳು ನೆನಪಿಗೆ ಬರುತ್ತವೆ. ಶುದ್ಧಾತ್ಮನ ಗುಣಗಳನ್ನೇ ನೆನೆನೆನೆದು ಶುದ್ಧಾತ್ಮನಾದ ಪರಿಯನ್ನು ಈ ವಚನವು ಸೂಚಿಸುತ್ತದೆ. ಹೀಗೆ ಸಾಧನೆಯ ರೀತಿಯಲ್ಲಿ ಸಾಧಕನ ಗುಣಗಳ ವಿಕಾಸಕ್ರಮವನ್ನು ಜೈನ, ಶೈವದರ್ಶನಗಳು ಒಂದೇ ಬಗೆಯಾಗಿ ಬಿತ್ತರಿಸಿವೆ.

ತತ್ತ್ವಜ್ಞಾನದ ವಿಷಯದಲ್ಲಿ ಇನ್ನಿಷ್ಟು ಆಳಕ್ಕೆ ಇಳಿದರೆ ವಚನ ಧರ್ಮವೂ ಅದಕ್ಕೆ ಮೂಲವಾದ ಶೈವ ದರ್ಶನವೂ ಆಣವಮಲ, ಮಾಯಾಮಲ, ಕಾರ್ಮಿಕಮಲಗಳು ಆತ್ಮನಿಗೆ ಅಂಟಿಕೊಂಡಿವೆಯೆಂದು ಹೇಳುತ್ತವೆ. ಒಂದೇ ಒಂದಾದ ಪರವಸ್ತುವಿನಿಂದ ಅಂತಸ್ಫುರಣದಿಂದಾಗಿ ಆತ್ಮರುಗಳು ಹೊರಬಿದ್ದರೆಂದು ಹೇಳಿದೆ. ಇದಕ್ಕೆ ಆಣವಮಲವು ಕಾರಣವೆನ್ನುವರು. ಇಲ್ಲಿ ಜೈನ ದರ್ಶನದ ವಿಚಾರವು ಭಿನ್ನವಾಗಿದೆ. ಅದು ಕರ್ಮ ಹಾಗೂ ಆತ್ಮರುಗಳ ಸಂಯೋಗವು ಅನಾದಿಯೆಂದು ಸ್ವೀಕರಿಸುತ್ತದೆ. ಕರ್ಮಮಲಕ್ಕೆ ವಶನಾದ ಜೀವನು ಲಕ್ಷಾಂತರ ಭವಗಳನ್ನು ಹೊಂದುವ ವಿಚಾರದಲ್ಲಿಯೂ ನಾಲ್ಕು ಗತಿಗಳ ಭ್ರಮಣದ ಪರಿಯಲ್ಲಿಯೂ ಎರಡೂ ದರ್ಶನಗಳಲ್ಲಿ ವಿವರಗಳಲ್ಲಿ ಕೆಲವು ಭಿನ್ನತೆಗಳಿದ್ದರೂ ಒಮ್ಮತವಿದೆ. ಕೊನೆಯ ಐಕ್ಯ ಅಥವಾ ಮುಕ್ತಿಯಲ್ಲಿ ಸ್ವರೂಪದಲ್ಲೇನೂ ಅಂತರವಿಲ್ಲ. ಅವಸ್ಥೆಯಲ್ಲಿ ಮಾತ್ರಾಭಿನ್ನತೆಯು ಕಂಡುಬರುತ್ತದೆ. ಪರಮಾತ್ಮ ರೂಪದಲ್ಲಿ ಆತ್ಮರುಗಳೆಲ್ಲ ಸ್ವತಂತ್ರರಾಗಿ ಉಳಿಯುತ್ತಾರೆಂದು ಜೈನ್ಯದರ್ಶನವು ಸೂಚಿಸುತ್ತದೆ. ಶೈವದರ್ಶನವು ಆತ್ಮರೆಲ್ಲ ಶಿವಸ್ವರೂಪದಲ್ಲಿ ಐಕ್ಯಹೊಂದುವರೆನ್ನುವುದು. ಶಿವರೂಪ ಸಿದ್ಧರೂಪದಂತೆ ಒಂದು ಅವಸ್ಥೆಯ ಹೆಸರೆಂದು ಸ್ವೀಕರಿಸಿದಲ್ಲಿ ಈ ಅಂತರವೂ ಇಲ್ಲದಂತಾಗುತ್ತದೆ.

ಕನ್ನಡ ಸಾಹಿತ್ಯದ ಒಲವಿನ ದೃಷ್ಟಿಯಿಂದ, ಜನಜೀವನವನ್ನು ರೂಪಿಸಿ ಮೇಲೆತ್ತುವ ಪ್ರಯತ್ನದಲ್ಲಿ ಜೈನಸಾಹಿತ್ಯದ ಮುಂದಿನ ಹೆಜ್ಜೆಯಾಗಿ ವೀರಶೈವ ವಚನವಾಙ್ಮಯವು ತಲೆಯೆತ್ತಿದೆ. ಕನ್ನಡ ಜನಾಂಗವನ್ನು ಕಟ್ಟುವಲ್ಲಿ, ಕನ್ನಡಿಗರ ಹೃದಯವನ್ನು ಅರಳಿಸುವಲ್ಲಿ ಅದು ಸಾಫಲ್ಯವನ್ನು ಹೊಂದಿದೆ. ಮೊದಲಿನಿಂದಲೂ ವಿಕಾಸ ಹೊಂದುತ್ತಿದ್ದ 'ಜನತಾಂತರ್ದೃಷ್ಟಿ'ಯನ್ನು ತಿಳಿಗೊಳಿಸಿದೆ. ಶಿವಸ್ವರೂಪದ ಕಡೆಗೆ ಸೆಳೆದಿದೆ.

—ಮಿರ್ಜಿ ಅಣ್ಣಾರಾಯ

6. ವಚನ ಶಾಸ್ತ್ರ ಭಾಗ ೧. ಪುಟ ೧೫೧.

# ಕನ್ನಡ ಕಾವ್ಯದ ರೂಪಭೇದಗಳು

## (ಚಂಪೂ ಕಾವ್ಯ)

ಕನ್ನಡ ಕಾವ್ಯದ ಪ್ರಾಚೀನ ರೂಪಗಳಲ್ಲಿ ಚಂಪುವೇ ಹೆಚ್ಚು ಪ್ರಚುರವಾಯಿತು. ಬೆದಂಡೆ, ಚತ್ತಾಣ ಎಂಬ ರೂಪಗಳ ಉಲ್ಲೇಖವೇನೊ ಕವಿರಾಜಮಾರ್ಗದಲ್ಲಿದೆ. ಆದರೆ ಅವುಗಳ ಲಕ್ಷಣಕ್ಕೆ ಸರಿಯಾಗಿ ಹೊಂದುವ ಒಂದು ಕಾವ್ಯವೂ ಈಗ ಉಪಲಬ್ಧವಿಲ್ಲ. ಕನ್ನಡದಲ್ಲಿ ಚಂಪೂರೂಪ ಹೇಗೆ ಬಂತು, ತೀರ ಮೊದಲನೆಯ ಚಂಪೂಕೃತಿ ಯಾವುದು ಈ ಬಗ್ಗೆ ನಿರ್ದಿಷ್ಟವಾದ ಸಂಗತಿಗಳು ತಿಳಿದಿಲ್ಲ. 6ನೆಯ ಶತಕದಲ್ಲಿದ್ದ ದಂಡಿಯ ಕಾವ್ಯಾದರ್ಶದಲ್ಲಿ ಗದ್ಯಪದ್ಯ ಮಿಶ್ರವಾದ ಬರವಣಿಗೆಯ ಪ್ರಕಾರಕ್ಕೆ ಚಂಪೂ ಎಂದು ಹೇಳಲಾಗಿದೆ. ಆದರೆ ಸಂಸ್ಕೃತದ ಪ್ರಥಮ ಚಂಪೂಗ್ರಂಥಗಳು 10ನೆಯ ಶತಮಾನದಲ್ಲಿ ಮಾತ್ರ ದೊರೆಯುತ್ತವೆ. ಕನ್ನಡದ ಉಪಲಬ್ಧ ಚಂಪೂ ಗ್ರಂಥಗಳಲ್ಲಿ ಪಂಪನ ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯ ಇವು ಮೊತ್ತಮೊದಲನೆಯವಾಗಿರುತ್ತವೆ. 1ನೆಯ ಗುಣವರ್ಮನ ಹರಿವಂಶ, ಶೂದ್ರಕ ಇವು ಪಂಪನಿಗಿಂತ ತುಸು ಪ್ರಾಚೀನವಾದ ಚಂಪೂ ಗ್ರಂಥಗಳಾಗಿರಬೇಕೆಂದು ಊಹಿಸಲು ಆಧಾರವಿದೆ. ಆದರೆ ಇವು ಕೈಗೆ ದೊರೆತಿಲ್ಲ. ಸಂಸ್ಕೃತ ಚಂಪೂಗ್ರಂಥಗಳಿಗಿಂತ ಪೂರ್ವದಲ್ಲಿಯೇ ಕನ್ನಡದಲ್ಲಿ ಚಂಪೂ ಗ್ರಂಥಗಳ ಪರಂಪರೆ ನಿರ್ಮಾಣವಾಗಿರಬೇಕೆಂದು ತೋರುತ್ತದೆ. ಚಂಪೂ ಶಬ್ದಕ್ಕೆ ಸಂಸ್ಕೃತದಲ್ಲಿ ಸಹಜವೆಂದು ತೋರುವ ವ್ಯುತ್ಪತ್ತಿಯನ್ನು ಹೇಳಲು ಬರುವಂತಿಲ್ಲ. ಅಂತೇ ಚಂಪೂರೂಪದ ವಿಷಯದಲ್ಲಿ ಕನ್ನಡ ಕಾವ್ಯದಿಂದ ಸಂಸ್ಕೃತಕಾವ್ಯವು ಸ್ಫೂರ್ತಿ ಪಡೆದಿರಬೇಕೆಂದು ಊಹೆ ಮಾಡಲು ಅವಕಾಶವಿದೆ. ಆದರೆ ನಿರ್ಧಾರವಾಗಿ ಇದನ್ನು ಹೇಳಲು ಬರುವಂತಿಲ್ಲ! ಯಾಕೆಂದರೆ ಕಾವ್ಯಾದರ್ಶಕಾರನಾದ ದಂಡಿ ಸಂಸ್ಕೃತ ಚಂಪೂ ಗ್ರಂಥಗಳನ್ನು ನೋಡದೆ ಚಂಪೂರೂಪದ ಉಲ್ಲೇಖವನ್ನು ಹೇಗೆ ಮಾಡಿದನು? ಅವನ ಕಾಲದಲ್ಲಿ ಅಂಥ ಗ್ರಂಥಗಳಿದ್ದುವೇ? ಕನ್ನಡ ಪರಂಪರೆ ಅಷ್ಟು ಹಳೆಯದೆನ್ನಲು ನಿರ್ದಿಷ್ಟ ಆಧಾರಗಳೆಲ್ಲಿವೆ?

ಚಂಪೂಕಾವ್ಯ ಕನ್ನಡದಲ್ಲಿ ಹುಲುಸಾಗಿ ಬೆಳೆದಿದೆ, ತನ್ನದೊಂದು ಯುಗವನ್ನೇ ನಿರ್ಮಿಸಿಕೊಂಡಿದೆ. ಹತ್ತನೆಯ ಶತಕದಿಂದ ಹನ್ನೆರಡರ ಮಧ್ಯದವರೆಗೆ ಚಂಪುವಿನ ಹೊರತಾಗಿ ಇನ್ನಾವ ರೂಪವೂ ಪ್ರೌಢ ಸುದೀರ್ಘ ನಿರ್ಮಿತಿಗೆ ವಾಹಕವಾಗಲಿಲ್ಲ. ಹನ್ನೆರಡರ ಮಧ್ಯದಿಂದ ಇತರ ರೂಪಗಳೊಡನೆ ಚಂಪುವಿನ ಬಳಕೆ ಆಗೀಗ ಆಗುತ್ತಲೇ ಇತ್ತು. 15ನೆಯ ಶತಕದಿಂದ 17ರ ವರೆಗೆ ಅದರ ಇಳಿಗಾಲವು ಬಂತು. ಇಳಿಗಾಲವೆಂದೂ ಅಳಿಗಾಲವಾಗಲಿಲ್ಲ. 17ರಿಂದ ಮುಂದೆ ಕೆಲಕಾಲ ಚಂಪೂ ಕಾವ್ಯದ ಪುನರುಜ್ಜೀವನವಾಗಿರುವುದೂ ಕಂಡುಬರುತ್ತದೆ. ಚಂಪೂ ರೂಪದ ಆಕರ್ಷಣೆ ಎಷ್ಟೆಂದರೆ ಇಂದಿನ ಕಾಲದಲ್ಲಿಯೂ ಅಪರೂಪವಾಗಿ ಕೆಲವರು ಚಂಪೂಕೃತಿಗಳನ್ನು ರಚಿಸಿರುತ್ತಾರೆ. ಕಾವ್ಯ ಪರಂಪರೆಯಲ್ಲಿ ಮಾರ್ಗ,ದೇಸಿ ಅಥವಾ ಪ್ರೌಢ,ಸುಲಭ ಎಂಬ ಎರಡು ರೀತಿಗಳಿರುತ್ತವೆ. ಚಂಪೂಕಾವ್ಯ ಇದು ಮಾರ್ಗರೀತಿಗೆ ಉತ್ತಮ ಉದಾಹರಣೆ. ಮಾರ್ಗಕಾವ್ಯ ಕೇವಲ ಒಂದು ರೀತಿಯಲ್ಲ, ಒಂದು ದೃಷ್ಟಿ. ಯಾವುದಾದರೊಂದು ಕಥೆಯ ನಿಮಿತ್ತಮಾಡಿಕೊಂಡು ಕವಿ ತನ್ನ ವಿಶಾಲ

ಜೀವನದ ಅನುಭವವನ್ನೂ ವಿವಿಧ ರಸಾನುಭವ ವನ್ನೂ ಕೈಸಡಿಲುಬಿಟ್ಟು ಬೀಸಾಗಿ ಬಣ್ಣಿಸುತ್ತಾನೆ. ತನ್ನ ಪಾಂಡಿತ್ಯ—ನೈಪುಣ್ಯವನ್ನೆಲ್ಲ ಶೈಲಿಯಲ್ಲಿ ಪ್ರದರ್ಶಿಸುತ್ತಾನೆ. ಇದಕ್ಕೆಲ್ಲ ಒಂದು ಪೂರ್ವನಿಶ್ಚಿತ ವಾದ ಪಡಿಯಚ್ಚು ಸಿದ್ಧವಾಗಿರುತ್ತದೆ. ಕಾವ್ಯ ವಿಷಯ, ನಾಯಕ, ರಸ, ಛಂದಸ್ಸು, ಶೈಲಿ ಇವುಗಳಲ್ಲಿ ಪೂರ್ವಪರಂಪರೆಯನ್ನು ಬಿಟ್ಟು ಅತ್ತಿತ್ತ ಮಿಸುಕಾಡಲು ಅವನಿಗೆ ಅವಕಾಶವಿಲ್ಲ. ಚಂಪೂಕಾವ್ಯವೆಂದರೆ ಕಟ್ಟುನಿಟ್ಟು, ಚರ್ವಿತ ಚರ್ವಣ ಎನ್ನುವುದು ಇದಕ್ಕಾಗಿಯೆ. ಕಟ್ಟುನಿಟ್ಟಿನ ಪರಿಮಿತಿಯಲ್ಲಿಯೂ ಚಂಪೂಕಾವ್ಯ ಕೆಲವು ಸಲ ಆಶ್ಚರ್ಯಕಾರಕವಾದ ಭವ್ಯಸೌಂದರ್ಯವನ್ನು ಪಡೆ ದಿರುತ್ತದೆ. ಕೆಲವು ಕನ್ನಡ ಚಂಪೂಕಾವ್ಯಗಳ ವಿಷ ಯದಲ್ಲಿ ಈ ಮಾತನ್ನು ಹೆಮ್ಮೆಯಿಂದ ಹೇಳಬಹು ದು. ಸಾಮಾನ್ಯವಾಗಿ ಸಂಸ್ಕೃತ ಮಹಾಕಾವ್ಯಗಳ ಲ್ಲಿರುವಂತೆ ಕನ್ನಡ ಚಂಪೂಕಾವ್ಯಗಳಲ್ಲಿ ಪೌರಾಣಿಕ ವಿಷಯ, ಉದಾತ್ತನಾಯಕ, ಅಷ್ಟಾದಶವರ್ಣನೆ, ಅಷ್ಟರಸ, ಕವಿಸಮಯ, ಶಬ್ದಶ್ಲೇಷ ಇವೆಲ್ಲ ಕಂಡು ಬರುತ್ತವೆ. ಅನೇಕ ಸಲ ಕಥಾನಕ ಸ್ವಲ್ಪವಾಗಿ ಅದರ ತೆಳು ಹಂದರದ ಮೇಲೆ ವರ್ಣನೆಗಳ ಬಳ್ಳಿ ಹಬ್ಬಿ ಅದನ್ನು ಬಾಗಿಸುವಂತಾಗಿರುತ್ತದೆ. ಕವಿಯ ಪ್ರತಿಭೆ–ಪಾಂಡಿತ್ಯಗಳ ಪರಿಪಾಕದಿಂದ ವಿವಿಧ ವರ್ಣನೆ, ಶೈಲಿ, ಛಂದಸ್ಸುಗಳ ಸಂಮಿಲನ ವಾದ ಪ್ರೌಢಕೃತಿಗೆ ಚಂಪು ಎನ್ನಬೇಕು. ಬರೀ ಗದ್ಯಪದ್ಯಮಿಶ್ರಿತವಾದದ್ದೆಲ್ಲಾ ಚಂಪುವೆನಿಸಿ ಕೊಳ್ಳಲಾರದು. ಸಂಸ್ಕೃತ ಮಹಾಕಾವ್ಯದಿಂದ ಸ್ಫೂರ್ತಿಪಡೆದಿದ್ದರೂ ಕನ್ನಡ ಚಂಪೂಕಾವ್ಯವು ಕೆಲವಂಶಗಳಲ್ಲಿ ತನ್ನತನವನ್ನು ಪಡೆದಿದೆ. ಉದಾಹರಣೆಗೆ, ವಿಷಯದ ಆಯ್ಕೆಯಲ್ಲಿ ಮತ್ತು ವಿನ್ಯಾಸದಲ್ಲಿ ಕನ್ನಡದಲ್ಲಿಯ ಜೈನಪುರಾಣಗಳು ತಮ್ಮದೇ ಆದೊಂದು ವಿಶಿಷ್ಟಪರಂಪರೆಯನ್ನು ಬೆಳಸಿಕೊಂಡಿರುತ್ತವೆ. ಪೌರಾಣಿಕವಲ್ಲದ ವಿಷಯ, ತತ್ಕಾಲೀನ ಮಹಾವ್ಯಕ್ತಿಚರಿತೆ ಇವು ಸಹ ಕನ್ನಡ ಚಂಪುವಿನಲ್ಲಿ ಕಾಣದೊರೆಯುತ್ತದೆ. ಒಂಬತ್ತನೆಯ ರಸವಾದ ಶಾಂತರಸವು ಉಳಿದೆಂಟುರಸಗಳೊಡನೆ ಸಹಕರಿಸಿ ಬರುವುದಲ್ಲದೆ ಜೈನಪುರಾಣಗಳಲ್ಲಿ ಅದೇ ಪ್ರಧಾನಪಟ್ಟವನ್ನು ಪಡೆಯುತ್ತದೆ. ಛಂದ ಸ್ಸಿನ ದೃಷ್ಟಿಯಿಂದ ಕನ್ನಡ ಚಂಪೂಕೃತಿಗಳಲ್ಲಿ ಸಂಸ್ಕೃತ ಅಕ್ಷರವೃತ್ತಗಳ ಪೈಕಿ "ಇವಾಱುಂ ಖ್ಯಾತ ಕಾರ್ಣಾಟಕಂ" ಎಂಬಲ್ಲಿ ಹೇಳಿರುವಂತೆ ಚಂಪಕಮಾಲಾ, ಉತ್ಪಲಮಾಲಾ ಇತ್ಯಾದಿ ಆರು ವೃತ್ತಗಳನ್ನು ಹೆಚ್ಚು ಬಳಸಿರುತ್ತದೆ. ಆರ್ಯಾ ವೃತ್ತದ ಕನ್ನಡದ ರೂಪವಾದ ಕಂದಪದ್ಯದ ಬಳಕೆ ಈ ವೃತ್ತಗಳಿಗಿಂತ ಅಧಿಕಪ್ರಮಾಣದಲ್ಲಿರುತ್ತದೆ. ಜೊತೆಗೆ ಅಕ್ಕರ, ತ್ರಿಪದಿ ರಗಳೆ ಇವುಗಳನ್ನು ಸಮಯೋಚಿತವಾಗಿ ತಂದಿರುವುದುಂಟು. ಬಹುಶಃ ತೀರ ಮೊದಲಿಗೆ ಪ್ರಚಾರದಲ್ಲಿದ್ದ ಬೆದಂಡೆ ಚತ್ತಾಣಗಳು ಗದ್ಯಭಾಗದೊಡನೆ ಕೂಡಿಕೊಂಡು ವಿಸ್ತಾರವಾಗಿ ಚಂಪೂರೂಪವನ್ನು ಪಡೆದಿರಬೇಕು. ಆದ್ದರಿಂದ ಕನ್ನಡಟ ಚಂಪುವೆಂದರೆ ಕೇವಲ ಸಂಸ್ಕೃತದ ಅನುಕರಣವೆಂದು ತಿಳಿಯಬಾರದು. ಯತಿಯನ್ನು ಬಿಟ್ಟು ಎರಡನೆಯ ಅಕ್ಷರದ ಪ್ರಾಸ ವಿಟ್ಟು ಅದು ಅನುಕರಣದಿಂದ ಇನ್ನೂ ದೂರ ಹೋಗಿರುತ್ತದೆ.

ಕನ್ನಡ ಚಂಪೂ ಕಾವ್ಯಗಳು ಮೊದಲಿನಿಂದ ಇಲ್ಲಿಯವರೆಗೆ ಒಂದೇ ಪಡಿಯಚ್ಚಿನಲ್ಲಿ ಎರಕ ಹೊಯ್ದಂತಿವೆ ಎಂದು ತಿಳಿಯುವುದು ಸರಿಯಲ್ಲ. ಪ್ರಾರಂಭದಿಂದಲೇ ಲೌಕಿಕ ಮತ್ತು ಆಗಮಿಕ ಅಥವಾ ಧಾರ್ಮಿಕ ಎಂಬ ಎರಡು ಪ್ರಕಾರಗಳು ಅವುಗಳಲ್ಲಿ ಕಾಣಿಸಿಕೊಂಡವು. ಲೌಕಿಕದಲ್ಲಿ ಮಹಾಭಾರತದ ಕಥೆಯ ಆಧಾರದಿಂದ ನಿರ್ಮಿತ ವಾದ ಪಂಪಭಾರತ, ಗದಾಯುದ್ಧದಂಥ ಕೃತಿ ಗಳು ಇದ್ದರೆ ಚಿಕ್ಕದೇವರಾಜವಿಜಯ, ಕೆಳದಿ

ನೃಪವಿಜಯದಂಥ ಚರಿತ್ರಾತ್ಮಕ ಗ್ರಂಥಗಳೂ ಇರುತ್ತವೆ. 'ಕಬ್ಬಿಗರ ಕಾವ್ಯ'ವು ಕಲ್ಪನಾಚಮತ್ಕೃತಿಯಾಗಿ ಮೆರೆಯುತ್ತದೆ. ಆಗಮಿಕದಲ್ಲಿ ಜೈನ ಪುರಾಣಗಳು ಒಂದು ರೀತಿಯಾದರೆ, ವೀರಶೈವ ಮತ್ತು ಬ್ರಾಹ್ಮಣ ಪುರಾಣ ಪುಣ್ಯ ಕಥೆಗಳು ಬೇರೆ ರೀತಿಯಾದುವು. ಜೈನ ಪುರಾಣಗಳು ತೀರ್ಥಂಕರರ ಮತ್ತು ಚಕ್ರವರ್ತಿಗಳ ಚರಿತ್ರೆಗಳಾಗಿರುವಂತೆ ಸುಕುಮಾರಚರಿತದಂಥ ಕೃತಿಗಳಲ್ಲಿ ಬೇರೆ ಚರಿತೆ ಕಥೆಗಳು ವಿಷಯವಾದುವು. "ಧರ್ಮಾಮೃತ" ದಲ್ಲಿ ಬರೀ ಕಥಾಮಾಲಿಕೆಯೆ ಚಂಪೂರೂಪ ತಾಳಿತು. ಚಂಪೂರೂಪದಲ್ಲಿ ಚರಿತ್ರೆ, ಇತಿಹಾಸ, ಕಥೆ, ತತ್ವ, ಶಾಸ್ತ್ರ ಎಲ್ಲದಕ್ಕೂ ಆಸ್ಪದ ದೊರೆಯಿತು.

ರಚನೆಯ ದೃಷ್ಟಿಯಿಂದ ಚಂಪೂರೂಪವು ಸ್ಥೂಲಮಾನದಿಂದ ಕಂದ, ವೃತ್ತ ಮತ್ತು ಗದ್ಯ ಇವುಗಳ ವಿಶಿಷ್ಟ ಸಂಯೋಜನೆಯಿಂದ ಒಂದೇ ತೆರನಾಗಿದೆ ಎಂದು ತೋರುವುದು ಸಹಜ. ಆದರೆ ಕಂದದ ರಚನೆಯಲ್ಲಿ, ಯಾವ ವೃತ್ತ ಎಲ್ಲಿ, ಗದ್ಯ ಭಾಗವೆಲ್ಲಿ ಈ ವಿಷಯದಲ್ಲಿ ಯಾವ ನಿರ್ದಿಷ್ಟ ನಿಯಮವೂ ಇಲ್ಲ. ಅಂತೆ ಕವಿ ತನ್ನ ಔಚಿತ್ಯಪ್ರಜ್ಞೆಯಿಂದ ತನಗೆ ತೋರಿದಂತೆ ಅವುಗಳನ್ನು ರಚಿಸುತ್ತಾನೆ. ಇದರಿಂದ ಪ್ರತಿಯೊಂದು ಚಂಪೂಕೃತಿಗೆ ತನ್ನತನವುಂಟಾಗಿದೆ. ಪಂಚತಂತ್ರ, ಧರ್ಮಾಮೃತದಂಥ ಕಥನಪರವಾದ ಚಂಪೂಗಳಲ್ಲಿ ಕಂದ ವೃತ್ತಗಳು ಸರಳವಾಗಿದ್ದು ಗದ್ಯಭಾಗವು ಹೆಚ್ಚಿನ ಪ್ರಮಾಣದಲ್ಲಿದೆ. ಅವುಗಳಲ್ಲಿಯೂ ಪಂಚತಂತ್ರದ ಗದ್ಯವು ಹಿತಮಿತವಾಗಿದ್ದರೆ ಧರ್ಮಾಮೃತದ ಗದ್ಯವು ಹೋಲಿಕೆ ಮತ್ತು ನಾಣ್ಣುಡಿಗಳ ಸರಪಣಿಯಿಂದ ಅತಿಯ ಹತ್ತಿರ ಹೋಗಿದೆ. ಚಂದ್ರರಾಜನ ಮದನತಿಲಕದಲ್ಲಿ ಹಲವು ಛಂದಗಳಿವೆ. ಒಂದೇ ಪದ್ಯದಲ್ಲಿ ಶರಷಟ್ಪದಿ ಮುಂತಾದ ಅನೇಕ ವೃತ್ತ ಮತ್ತು ಬಂಧಗಳು ರಚನಾಚಮತ್ಕೃತಿಯಾಗಿ ತಲೆದೋರಿದೆ. ಹರಿಹರನ ಗಿರಿಜಕಲ್ಯಾಣದಲ್ಲಿ ಈ ಮೊದಲಿನ ಚಂಪೂಕೃಗಳಿಗಿಂತ ಬೇರೆಯಾದ ಒಂದು ಭಾವಾವೇಶ ಮತ್ತು ರಚನೆಯ ರಭಸವು ಎದ್ದು ಕಾಣುತ್ತದೆ. ರುದ್ರಭಟ್ಟನ ಜಗನ್ನಾಥವಿಜಯ ಮತ್ತು ಚೌಂಡರಸನ ಅಭಿನವದಶಕುಮಾರ ಚರಿತೆಯಲ್ಲಿ ಭಕ್ತಿಪರವಾದ ಸ್ತೋತ್ರಗಳೂ ವರ್ಣನೆಗಳೂ ಸೇರಿರುತ್ತವೆ. 16ನೆಯ ಶತಮಾನದಲ್ಲಿದ್ದ ಸದಾಶಿವಯೋಗಿಯ ರಾಮನಾಥವಿಲಾಸವೆಂಬ ಚಂಪುವಿನಲ್ಲಿ ಅಲ್ಲಲ್ಲಿ ಷಟ್ಪದಿಗಳು ಬಂದಿವೆ.

ಯಾವುದೇ ಸಾಹಿತ್ಯರೂಪದ ಸಾರ್ಥಕತೆ ಆಶಯ ಮತ್ತು ರೀತಿ, ರಚನೆ ಇವುಗಳ ಅನ್ಯೋನ್ಯ ಭಾವದಲ್ಲಿರುತ್ತದೆ. ಚಂಪೂಕೃತಿಗಳಲ್ಲಿಯ ಆಶಯವು ವಿಸ್ತಾರವೈವಿಧ್ಯಗಳಿಂದ ಕೂಡಿರುವುದು. ಅದಕ್ಕೆ ಅನುಗುಣವಾಗಿ ಅದರ ರೀತಿಯಲ್ಲಿ ಮತ್ತು ರಚನೆಯಲ್ಲಿ ವಿಸ್ತಾರ–ವೈವಿಧ್ಯಗಳು ಬಂದಿವೆ. ಪ್ರೌಢಿಮೆ ಅದರ ಗುಣವಾಗಿದೆ; ಅತಿವಿಸ್ತಾರ–ಶುಷ್ಕ ಚಮತ್ಕೃತಿಗಳು ಅದರ ದೋಷವಾಗಿ ಆಗಾಗ ನುಸುಳುತ್ತವೆ. ಮಾರ್ಗಕಾವ್ಯವು ಶಾಸ್ತ್ರೀಯ ಸಂಗೀತದಂತೆ. ರಾಗ ತಾಳಗಳ ಕಟ್ಟುನಿಟ್ಟಿನಲ್ಲಿಯೂ ಶಾಸ್ತ್ರೀಯ ಸಂಗೀತವು ರಸಾನಂದವನ್ನು ನೀಡುವಂತೆ ಮಾರ್ಗಕಾವ್ಯವು ತನ್ನೆಲ್ಲ ನಿಯಮ ನಿರ್ಬಂಧಗಳ ಪಂಜರದಲ್ಲಿಯೂ ಪ್ರತಿಭಾವಿಲಾಸವನ್ನು ತೋರಿರುತ್ತದೆ. ಸಾಧಾರಣ ಕವಿಯ ಕೈಯಲ್ಲಿ ಅದು ರಚನಾಚಮತ್ಕೃತಿ ಮಾತ್ರ ಆಗಿರಬಹುದು, ಅಂಧಾನುಕರಣವಾಗಿರಬಹುದು. ಆದರೆ ಅಸಾಧಾರಣ ಪ್ರತಿಭೆಯುಳ್ಳ ಪಂಪ, ರನ್ನ, ಹರಿಹರ, ಜನ್ನ ಮುಂತಾದವರ ಕೃತಿಗಳಲ್ಲಿ ಅದು ಸಾರ್ಥಕವಾಗಿದೆ ಮಾತ್ರವಲ್ಲ, ಉನ್ನತ ಕಾವ್ಯವು ಕೇವಲ ಪದ್ಯರೂಪ ಕೃತಿಗಳಲ್ಲಿದ್ದು ಚಂಪೂರೂದಲ್ಲಿ ಹೆಚ್ಚಾಗಿ ಸಂಸ್ಕೃತದ ಪಾಂಡಿತ್ಯ ಚಮತ್ಕೃತಿಗಳು ತಲೆಯೆತ್ತಿವೆ. ಕನ್ನಡ ಮಹಾಕಾವ್ಯ ಎಂದರೆ ಮಾರ್ಗಕಾವ್ಯದ ಮಹೋನ್ನತಿ ಆದಿಪುರಾಣ, ಪಂಪಭಾರತ, ಗದಾಯುದ್ಧದಂಥ ಚಂಪೂಕೃತಿಗಳಲ್ಲಿ ಮೆರೆದಿದೆ. ಈ ವಿಷಯವನ್ನು ಗಮನಿಸುವುದು ಅವಶ್ಯ.

ರಂ. ಶ್ರೀ ಮುಗಳಿ

(ಆಕಾಶವಾಣಿಯ ಕೃಪೆಯಿಂದ ಇದನ್ನು ಪ್ರಕಟಿಸಲಾಗಿದೆ)

# ದ್ವೀಪಾಂತರ ಮತ್ತು ಭಾರತದಲ್ಲಿ ಸಾಂಸ್ಕೃತಿಕ ಸಂಬಂಧ

**[ಶೈವಧರ್ಮದ ಪ್ರತಿಪಾದಕ: ಬೃಹಸ್ಪತಿತತ್ತ್ವ]**

ಅನೇಕ ಶತಮಾನಗಳಿಂದ ದ್ವೀಪಾಂತರ ಮತ್ತು ಭಾರತದ ನಡುವೆ ಸಂಪರ್ಕವಿತ್ತು. ಇಲ್ಲಿಯ ಸಾಹಿತ್ಯದಲ್ಲಿ ಧರ್ಮ ಮತ್ತು ಸಂಸ್ಕೃತಿಗಳ ಸೌಖ್ಯಮಯ, ಆದರಪೂರ್ಣ ಭ್ರಾತೃತ್ವವು ಪ್ರಚುರ ಪ್ರಮಾಣದಲ್ಲಿ ವಿಸ್ಫುಟಿತಗೊಂಡಿದೆ. ಉಚ್ಚವಿಚಾರಗಳ ಅಭಿವ್ಯಕ್ತಿ, ಧರ್ಮ, ನಿತ್ಯ ಪ್ರತಿಯ ವಿವಿಧ ಅನುಷ್ಠಾನಗಳು ಮತ್ತು ಪೂಜೆ–ಜಾವಾದಲ್ಲಿ ಇವುಗಳೆಲ್ಲವೂ ಸಂಸ್ಕೃತದಿಂದ ತುಂಬಿ ತುಳುಕುತ್ತಿವೆ. ರಾಜೇಂದ್ರ ಮೂಲವರ್ಮರವರಿಂದ ಸಂಪನ್ನರಾಜಸೂಯ ಯಜ್ಞಕ್ಕೆಂದು ನಿರ್ಮಿತ ಯೂಪದ ಮೇಲೆ ಐದನೆಯ ಶತಾಬ್ದಿಯ ಪೂರ್ವಾರ್ಧದಲ್ಲಿ ಬರೆಯಲ್ಪಟ್ಟ ಈ ಶಿಲಾಲೇಖವು, ದ್ವೀಪಾಂತರದಲ್ಲಿ ಸಂಸ್ಕೃತಕ್ಕೆ ಲಭಿಸಿದ್ದ ಸ್ಥಾನಮಾನಗಳಿಗೆ ಒಂದು ಗೌರವಮಯ ನಿದರ್ಶನವಾಗಿದೆ—

ಶ್ರೀಮತಃ ಶ್ರೀನರೇಂದ್ರಸ್ಯ
ಕುಂಡಙ್ಗಸ್ಯ ಮಹಾತ್ಮನಃ।
ಪುತ್ರೋಽಶ್ವವರ್ಮಾ ವಿಖ್ಯಾತೋ
ವಂಶಕರ್ತಾ ಯಥಾಂಶುಮಾನ್ ॥
ತಸ್ಯಪುತ್ರಾ ಮಹಾತ್ಮಾನಸ್ತ್ರಯಸ್ತ್ರಯ
ಇವಾಗ್ನಯಃ ।
ತೇಷಾಂ ತ್ರಯಾಣಾಂ
ಪ್ರವರಸ್ತಪೋಬಲ ದಮಾನ್ವಿತಃ ॥
ಶ್ರೀ ಮೂಲವರ್ಮ ರಾಜೇಂದ್ರೋ
ಯಷ್ಟ್ವಾ ಬಹುಸುವರ್ಣಕಮ್ ।
ತಸ್ಯ ಯಜ್ಞಸ್ಯ ಯೂಪೋಽಯಂ
ದ್ವಿಜೇಂದ್ರೈಸ್ಸಂಪ್ರಕಲ್ಪಿತಃ ॥



೬೮೨ ಶಕ ಸಂವತ್ಸರ ಅರ್ಥಾತ್ ಕ್ರಿಸ್ತಶಕ ೭೬೦ ರಲ್ಲಿ ಲಿಖಿತ ಮತ್ತೊಂದು ಶಿಲಾಲೇಖವಿದೆ. ಇದು ದ್ವೀಪಾಂತರದಲ್ಲಿ ಋತ್ವಿಗ್ ಮತ್ತು ವೇದವಿಜ್ಞರ ಕುಶಲಹಸ್ತಗಳಿಂದ ನಿರ್ಮಿತಮೂರ್ತಿಯ ಪ್ರತಿಷ್ಠಾಪನೆಯಲ್ಲಿ, ಈವತ್ತೂ ಸಹ ಪೂಜೆ ಮತ್ತು ಪ್ರಾಣವನ್ನು ತುಂಬುತ್ತಿದೆಯೇನೋ ಎಂಬಂತಿದೆ.

ಪ್ರಸಿದ್ಧ ಚೀಣೀ ಯಾತ್ರಿಕ ಈ–ತ್ಸಿಙ್ ರವರು ದ್ವೀಪಾಂತರದ ಶ್ರೀ ವಿಜಯರ ರಾಜ್ಯದಲ್ಲಿ (ಕ್ರಿ. ಶ. ೬೭೧) ಆರುತಿಂಗಳ ತನಕ ಸಂಸ್ಕೃತ ವ್ಯಾಕರಣದ ಅಧ್ಯಯನ ಕೈಗೊಂಡನಂತರ ಹತ್ತು ವರ್ಷಗಳವರೆಗೆ ವಿಶ್ವವಿಖ್ಯಾತ ನಾಲಂದಾ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿದ್ದರು. ಅಲ್ಲಿಂದ ಸ್ವದೇಶಕ್ಕೆ ಮರಳುತ್ತಿರುವಾಗ ಅವರು ಜಾವಾದಲ್ಲಿದ್ದು ಏಳುವರ್ಷಗಳ ತನಕ ಬೌದ್ಧದರ್ಶನದ ಮೂಲಗ್ರಂಥಗಳನ್ನು ಚೀಣೆಗೆ ಅನುವಾದಿಸಿದರು. ಇಲ್ಲಿಯೇ ಭಾರತೀಯ ಬೌದ್ಧಧರ್ಮ ಹಾಗೂ ತಮ್ಮ ಯಾತ್ರಾ ವಿವರಣೆಯನ್ನು ಬರೆದರು. ಇದಕ್ಕನುಸಾರ, ಮತ್ತೊಬ್ಬ ಚೀನಿ ಯಾತ್ರಿಕರಾದ ಹುಈನಿಙ್ ಎಂಬುವರು ವಿದ್ವಾನ್ ಪಂಡಿತ ಗುರುಗಳಾದ ಆಚಾರ್ಯ ಜ್ಞಾನಭದ್ರರಿಂದ ಜಾವಾದಲ್ಲಿ ಮೂರು ವರ್ಷಗಳ ತನಕ ಶಿಕ್ಷಣ ಪಡೆದರು. ಜಾವಾ ದೇಶವು ಬೌದ್ಧಧರ್ಮದಲ್ಲಿನ ಹೀನಯಾನದ ಮೂಲಸರ್ವಾಸ್ತಿವಾದಿನ್ ಶಾಖೆಯ ಅಧ್ಯಯನ–ಅಧ್ಯಾಪನಕ್ಕೆ ಮುಖ್ಯ ಕೇಂದ್ರವಾಗಿದ್ದಿತು.

ಭಾಷಾದೃಷ್ಟಿಯಿಂದ ವ್ಯಾ ಕ ರ ಣ ವು ಅತ್ಯಾವಶ್ಯಕ. ವ್ಯಾಕರಣವು ಸಾಹಿತ್ಯದ ಷಡಂಗ ಗಳ ಪೈಕಿ ಒಂದು. ಜಾವಾದಲ್ಲಿಯೂ ಸಹ, ಸಂಸ್ಕೃತ ಭಾ ಷೆ ಯ ನ್ನು ಕಲಿಯಲೋಸುಗ ವ್ಯಾಕರಣಕ್ಕೆ ಸಂಬಂಧಪಟ್ಟ ಅನೇಕ ಪುಸ್ತಕಗಳು ಬರೆಯಲ್ಪಟ್ಟವು. 'ಸ್ವರವ್ಯಂಜನ' ಎಂಬ ಶೀರ್ಷಿಕೆಯ ವ್ಯಾಕರಣದೊಳಗೆ ಸ್ವರಗಳ ಏಕಮಾತ್ರೆ, ದ್ವಿಮಾತ್ರೆ ಅರ್ಥಾತ್ ಹ್ರಸ್ವ, ದೀರ್ಘ ಮತ್ತು ಪ್ಲುತದ ವರ್ಗೀಕರಣವಿದೆ. ಮೂರ್ಧನ್ಯ, ತಾಲವ್ಯ, ದಂತ್ಯ, ಅಲ್ಪಪ್ರಾಣ, ಘೋಷ ಮುಂತಾದವುಗಳ ವರ್ಣನೆ ಮಾಡುತ್ತಾ ಸ್ವರಸಂಧಿ, ವ್ಯಂಜನಸಂಧಿ, ಮತ್ತು ವಿಸರ್ಗಸಂಧಿಗಳನ್ನು ಉದಾಹರಣೆಗಳ ಮೂಲಕ ಸ್ಪಷ್ಟಗೊಳಿಸಲಾಗಿದೆ. ಕವಿಭಾಷೆಯಲ್ಲಿ ಕೂಡ ಅಲ್ಲಲ್ಲಿ ಈ ಸಂಧಿಗಳ ಪ್ರಯೋಗ ಕಂಡು ಬರುತ್ತದೆ. 'ಕಾರಕ ಸಂಗ್ರಹ' ಎಂಬ ಗ್ರಂಥದ ಪ್ರಾರಂಭವು ಪಾಠಕರಿಗೆ ರುಚಿಕರವೆನಿಸುವುದು.

ಯತ್ ಕೃತಂ ಕರ್ಮ ತತ್‌ಪ್ರೋಕ್ತಂ
ಸ ಕರ್ತಾ ಯಃ ಕರೋತಿ ವಾ ।

ಮತ್ತೊಂದು ವ್ಯಾಕರಣ ಗ್ರಂಥ 'ಕೃತಭಾಷಾ' ಎಂಬುದು ಸಂಸ್ಕೃತ ಭಾಷೆಯ ಅಪಭ್ರಂಶ. ಇದರಲ್ಲಿ ಸೂಚಿಗಳು ಕೊಡಲ್ಪಟ್ಟಿವೆ. ಪಶುಗಳ ಹೆಸರುಗಳು, ದೇವತೆಗಳ ವಿಭಿನ್ನ ನಾಮಗಳು (ಉದಾಹರಣಾರ್ಥ ಇಂದ್ರನ ೫೯ ಹೆಸರುಗಳು, ಅಗ್ನಿಯ ೩೧ ಹೆಸರುಗಳು, ಚಂದ್ರನಿಗೆ ೪೮ ನಾಮಗಳು) ತದನಂತರ ಪಂಡಿತರ ೫೯ ಹೆಸರುಗಳು ಇತ್ಯಾದಿ. ಕಡೆಯಲ್ಲಿ ಧಾತುಗಳ ರೂಪಗಳನ್ನು ಪಟ್ಟಿ ಮಾಡಲಾಗಿದೆ. 'ತಿಷ್ಠತಿ, ತಿಷ್ಠತಃ, ತಿಷ್ಠಂತಿ....' 'ಚಂಡ ಕಿರಣ' ಎಂಬ ಹಸ್ತಲೇಖವು ಭಾರತೀಯ ಕೋಶ ಪರಂಪರೆಯನ್ನು ಅನುಸರಿಸುತ್ತದೆ. ಇದು ವಿಭಿನ್ನ ಸಮಾನಾರ್ಥ ಶಬ್ದಗಳು ಶ್ಲೋಕ ರೂಪದಲ್ಲಿರುವ ಒಂದು ಕೋಶ. ಜಾವೀಯಲ್ಲಿ ಸಂಸ್ಕೃತ ಶ್ಲೋಕಗಳ ವ್ಯಾಖ್ಯೆ ಅಥವಾ ಸ್ಪಷ್ಟೀಕರಣ ಮಾಡಲಾಗಿದೆ. ಇದು ಆರಂಭವಾಗುವುದು ದೇವ ಶಬ್ದದ ಪರ್ಯಾಯಗಳಿಂದ. ದೇವತೆಗೆ 'ಸುಧಾಶಿನ್' ಎಂಬ ಪ್ರಯೋಗವಾಗಿರುವುದು ಉಲ್ಲೇಖನೀಯ. ತತಃ ಶಿವ ಅರ್ಥಾತ್ ಭಟಾರ ಗುರುಗಳ ವಿವಿಧ ನಾಮಗಳನ್ನೆಣಿಸಿ ಭಟಾರ ಬ್ರಹ್ಮನ ಹೆಸರುಗಳು ಕೊಡಲ್ಪಟ್ಟಿವೆ. ತದನಂತರ ಸಾಮಾನ್ಯ ವಿಷಯಗಳು ಯಥಾ— ಪಶು, ಪಕ್ಷಿ, ಶರೀರಾಂಗ, ಗೃಹ ಮುಂತಾದ ಶಬ್ದಗಳ ವಿವಿಧ ಪರ್ಯಾಯಗಳಿವೆ.

'ವೃತ್ತಸಂಚಯ' ಎಂಬುದು ಛಂದಗಳ ಮೇಲಿನ ಪ್ರಸಿದ್ಧ ಗ್ರಂಥ. ಸಂಸ್ಕೃತದ ಪ್ರಸಿದ್ಧ ಛಂದಗಳಲ್ಲಿ ಕವಿಭಾಷೆಯ ಅನೇಕ ಕಾವ್ಯಗಳ ಸುಮಧುರ ಲಲಿತ ಪದಗಳನ್ನು ರಚಿಸಲಾಗಿದೆ. ದ್ವೀಪಾಂತರದ ಲೋಕಪ್ರಿಯ ಕಾವ್ಯ 'ಅರ್ಜುನ ವಿವಾಹ'ದಲ್ಲಿ ಶಾರ್ದೂಲ ವಿಕ್ರೀಡಿತ, ವಸಂತ ತಿಲಕಾ, ಶಿಖರಿಣೀ, ಸ್ರಗ್ಧರಾ ಮುಂತಾದ ಛಂದಗಳು ನಿರ್ಬಾಧಿತವಾಗಿ ಸುಚಾರು ರೂಪದಲ್ಲಿ ಪ್ರಯೋಗಿಸಲ್ಪಟ್ಟಿವೆ. ಛಂದಶ್ಶಾಸ್ತ್ರವನ್ನು ಕುರಿತು 'ವೃತ್ತ ಸಂಚಯ'ವಲ್ಲದೆ 'ವೃತ್ತಾಯನ', 'ವೃಷಭ ಗತಿವಿಲಸಿತ', 'ಮಣಿಗುಣ ನಿಕರ' ಮುಂತಾಗಿ ಅನೇಕಾನೇಕ ಗ್ರಂಥಗಳಿವೆ. ಈವರೆಗೆ ಇವುಗಳ ಸಮುಚಿತ ಸಂಪಾದನೆಯಾಗಿಲ್ಲ.

ದ್ವೀಪಾಂತರದಲ್ಲಿ ನಿತ್ಯ ಪ್ರತಿಯ ಜೀವನದಲ್ಲಿ ಪ್ರಯುಕ್ತ ಸ್ತವಗಳು ವಿಷ್ಣು, ಶಿವ, ಸೂರ್ಯ, ಶ್ರೀದೇವಿ, ಸರಸ್ವತಿ, ವಾಯು, ಯಮ, ಉಮಾ, ಗಂಗಾ ಮುಂತಾದವರ ಸ್ತುತಿಗಳಿಂದ ಅನುಪ್ರಾಣಿತವಾಗಿವೆ. 'ಪಂಚದಶ ರಸಸ್ತುತಿ'ಯು ಹದಿನೈದು ವಜ್ರದೇವತೆಗಳನ್ನು ಕು ರಿ ತು ಸಂಬೋಧಿಸಲ್ಪಟ್ಟ ಬೌದ್ಧ ತಾಂತ್ರಿಕ ಮಂತ್ರ. 'ಬುದ್ಧವೇದ' ಶೀರ್ಷಿಕೆಯ ಗ್ರಂಥವು, ನೇಪಾಳದ

ಅತಿಪ್ರಸಿದ್ಧ ಪಂಚಬುದ್ಧಸ್ತವ ಮತ್ತು ಮಹಾ ಭಯಸ್ತವದೊಡನೆ ಸೇರಿ ಹೊಂದಿಕೊಳ್ಳುತ್ತದೆ. 'ಮಧ್ಯಪೂಜಾ' ಎಂಬುದು ಪ್ರತಿದಿನದ ಪೂಜಾ ಸ್ತವದ ಹೆಸರು. ಓಂ ಕ್ಷಮಸ್ವದಿಂದ ಪ್ರಾರಂಭ ವಾಗುವ ಈ ಪೂಜೆಯು ಬಾಲಿ ದ್ವೀಪದ ಪಂಡಿತ ರಲ್ಲಿ ಬಹಳ ಪ್ರಿಯವಾಗಿಯೂ, ಪ್ರಚಲಿತ ವಾಗಿಯೂ ಇದೆ—

ಓಂ ಕ್ಷಮಸ್ವ ಮಾಂ ಮಹಾದೇವ
ಸರ್ವಪ್ರಾಣಿಹಿತಂಕರ।
ಮಾಂ ಮೋಚಯ ಸರ್ವಪಾಪೇಭ್ಯಃ
ಪಾಲಯಸ್ವ ಸದಾಶಿವ ॥
ಪಾಪೋऽಹಂ ಪಾಪಕರ್ಮಾಹಂ
ಪಾಪಾತ್ಮಾ ಪಾಪಸಂಭವಃ।
ತ್ರಾಹಿ ಮಾಂ ಸರ್ವಪಾಪೇಭ್ಯಃ
ಕೇನ ಚಿನ್ಮಮ ರಕ್ಷತು ॥
ಕ್ಷಂತವ್ಯಾಃ ಕಾಯಿಕಾ ದೋಷಾಃ
ಕ್ಷಂತವ್ಯಾ ವಾಚಿಕಾ ಮಮ।
ಕ್ಷಂತವ್ಯಾ ಮಾನಸಾ ದೋಷಾಸ್ತತ್ಪ್ರಮಾದಂ
ಕ್ಷಮಸ್ವ ಮಾಮ್ ॥
ಹೀನಾಕ್ಷರಂ ಹೀನಪಾದಂ ಹೀನಮಂತ್ರಂ
ತಥೈವ ಚ।
ಹೀನಭಕ್ತಿಂ ಹೀನವಿಧಿಂ ಸದಾಶಿವ
ನಮೋऽಸ್ತುತೇ ॥
ಓಂ ಮಂತ್ರಹೀನಂ ಕ್ರಿಯಾಹೀನಂ
ಭಕ್ತಿಹೀನಂ ಮಹೇಶ್ವರ।
ಯತ್ಪೂಜಿತಂ ಮಯಾ ದೇವ
ಪರಿಪೂರ್ಣಂ ತದಸ್ತುಮೇ ॥

ಮಂತ್ರಗಳಲ್ಲಿ ಬೀಜಗಳ ಪ್ರಯೋಗ ಬಹಳ ಹೆಚ್ಚಾಗಿದೆ. ನವಶಕ್ತಿ ಪೂಜೆಯು 'ರ' ಬೀಜದ ಮೇಲೆ ಆಧೃತವಾಗಿದೆ. ಕೂಟಮಂತ್ರ, ಗರ್ಭ ಮಂತ್ರ, ಅಷ್ಟಗ್ರಹ ಸಪ್ತೋಂಕಾರ ಮುಂತಾದವು ಗಳಲ್ಲಿ, ಪಾಠಕರು ಅವುಗಳಲ್ಲಿ ಬೀಜಗಳು ಪ್ರಯೋಗಿಸಲ್ಪಟ್ಟಿವೆಯೆಂಬುದನ್ನು ಆ ಶೀರ್ಷಿಕೆ ಗಳಿಂದಲೇ ಊಹಿಸಿಕೊಳ್ಳಬಲ್ಲರು. ಕೇವಲ ಪೂಜಾಸ್ತವ ಮತ್ತು ತಾಂತ್ರಿಕ–ಮಂತ್ರವಷ್ಟೇ ಅಲ್ಲ; ಗಾಯತ್ರೀ ನ್ಯಾಸದಲ್ಲಿನ ಗಾಯತ್ರೀ ಮಂತ್ರವು ಪಾಠಕರಿಗೆ ರುಚಿಕರವಾಗಿ ಕಂಡು ಬರುವುದು.

ತತ್ಸವಿತುರ್ ಬ್ರಹ್ಮಾತ್ಮನೇ
ಹೃದಯಾಯ ನಮಃ।
ವರೇಣ್ಯಂ ವಿಷ್ಣ್ವಾತ್ಮನೇ ಶಿರಸೇ ಸ್ವಾಹಾ।
ಭರ್ಗೋ ದೇವಸ್ಯ ರುದ್ರಾತ್ಮನೇ
ಶಿಖಾಯೈ ವಷಟ್ ।
ಧೀಮಹಿ ಪರಮಾತ್ಮನೇ ಕವಚಾಯ ಹುಂ।
ಧೀಯೋ ಯೋ ನಃ ಜ್ಞಾನಾತ್ಮನೇ
ನೇತ್ರತ್ರಯಾಯ ವೌಷಟ್।
ಪ್ರಚೋದಯಾತ್ ಸತ್ಯಾತ್ಮನೇऽಸ್ತ್ರಾಯ ಫಟ್।

ರಾಮಾಯಣ, ಮಹಾಭಾರತ, ಪುರಾಣ (ಯಥಾ : ಬ್ರಹ್ಮಾಂಡ ಪುರಾಣ)ಗಳು ದ್ವೀಪಾಂ ತರದ ಜೀವನದ ಅಂಗಗಳಾಗಿವೆ. ಅವರಲ್ಲಿ ಇಡೀರಾತ್ರಿ ನಡೆಯುವ ಹಾಗೂ ರಾಮಾಯಣ ಮಹಾಭಾರತಗಳ ಮೇಲೆ ಆಧೃತವಾಗಿರುವ ವಾಯಾಜ್ ಎಂಬ ಛಾಯಾ ನಾಟಕಗಳು ಕೇವಲ ಮನೋರಂಜನೆಗಾಗಿಯಷ್ಟೇ ಅಲ್ಲದೆ, ಶಿಕ್ಷಣ ಮತ್ತು ಆಧ್ಯಾತ್ಮದ ಸ್ರೋತಗಳೂ ಆಗಿವೆ. ರಾಮಾಯಣ ಮತ್ತು ಮಹಾಭಾರತದ ಪ್ರತಿ ಯೊಂದು ಪಾತ್ರವೂ ಒಂದು ವಿಶೇಷ ಆದರ್ಶ ಪ್ರತೀಕ. ಜೀವನದ ಉಭಯ ಅರ್ಥಾತ್ ಒಳ್ಳೆಯ ಮತ್ತು ಕೆಟ್ಟ ಪಕ್ಷಗಳು, ಕಡೆಯಲ್ಲಿ ಒಳ್ಳೆಯ ಪಕ್ಷಕ್ಕೆ ವಿಜಯ, ಅಸತ್ಯದ ಮೇಲೆ ಸತ್ಯದ ವಿಜಯ,—ಇವು ದರ್ಶಕನ ಹೃದಯ ಮತ್ತು ಮನವನ್ನು ಸತ್ಕರ್ಮದತ್ತ ಪ್ರವೃತ್ತ ಗೊಳಿಸುತ್ತವೆ.

ವಿಚಾರದ ಸರ್ವೋಚ್ಚ ಅಂಗ ದರ್ಶನ ಶಾಸ್ತ್ರ. ದ್ವೀಪಾಂತರದಲ್ಲಿ ಮುಖ್ಯವಾಗಿ ಬೌದ್ಧ ಮತ್ತು ಶೈವ ಧರ್ಮದರ್ಶನಗಳು ಎರಡು ರೂಪಗಳಲ್ಲಿಯೂ ಪ್ರಮುಖವಾಗಿವೆ. ಶತಾಬ್ದಿಗಳ ತನಕ ಈ ಧರ್ಮಗಳ ಪ್ರಚಾರ ಮತ್ತು ಪೋಷಣೆಯು, ಅನೇಕ ಬೌದ್ಧ ಮತ್ತು ಶೈವ ಗ್ರಂಥಗಳ ಜಾವೀ ಸಂಸ್ಕರಣಗಳ ಮೂಲಕ ಸಾಗುತ್ತಾ ಇದೆ. ಬೌದ್ಧ ವಿಚಾರಧಾರೆಯ ಪ್ರಮುಖ ಗ್ರಂಥವು 'ಸಂ ಹ್ಯಂಕಮಹಾಯಾನಿಕನ್' ಎಂದೆನಿಸಿಕೊಳ್ಳುತ್ತದೆ. ಶೈವ ಧರ್ಮವನ್ನು ಕುರಿತು 'ಭುವನಕೋಶ'ವೆಂಬ ಹನ್ನೊಂದು ಅಧ್ಯಾಯಗಳುಳ್ಳ ಒಂದು ಬೃಹತ್ ಗ್ರಂಥವಿದೆ. 'ಭುವನಸಂಕ್ಷೇಪ'ದಲ್ಲಿ ಭುವನಜ್ಞಾನದ ಅರ್ಥಾತ್ ಸೃಷ್ಟಿಯನ್ನು ಕುರಿತ ಸಂಕ್ಷಿಪ್ತ ಜ್ಞಾನವಿದೆ. 'ತತ್ವ ಸಂ ಹ್ಯಂ ಮಹಾಜ್ಞಾನ'ವು ಶೈವಜ್ಞಾನದ ತತ್ತ್ವಗಳ ಬಗ್ಗೆ ವಿಶದ ವ್ಯಾಖ್ಯೆ ನೀಡುವ ಗ್ರಂಥ. ಇವುಗಳಲ್ಲಿ ಆರಂಭದಲ್ಲಿ ಸಂಸ್ಕೃತ ಶ್ಲೋಕಗಳು ಮತ್ತು ತತ್ಪಶ್ಚಾತ್ ಕವಿಭಾಷೆಯಲ್ಲಿ ಅವಕ್ಕೆ ವ್ಯಾಖ್ಯೆ ಕೊಡುತ್ತಾ, ದರ್ಶನವನ್ನು ಜನಜೀವನದವರೆಗೆ ಮುಟ್ಟಿಸುವ ಪ್ರಯತ್ನ ಕೈಗೊಳ್ಳಲಾಗಿದೆ.

ಶೈವಧರ್ಮ ಮತ್ತು ದರ್ಶನಕ್ಕೆ ಸಂಬಂಧಿಸಿದ ಅನೇಕಾನೇಕ ಹಸ್ತಲೇಖಗಳು ಉಪಲಬ್ಧವಿವೆ. ಇನ್ನು ಇವುಗಳ ಸಂಪಾದನೆಯಾಗುವುದು ಶೇಷ. ಸಂಪಾದಿತ ಗ್ರಂಥ 'ಬೃಹಸ್ಪತಿ ತತ್ತ್ವ'ವು ಶೈ ವ ದ ರ್ಶ ನ ದ ಪ್ರತಿನಿಧಿ ಗ್ರಂಥ. 'ಬೃಹಸ್ಪತಿ ತತ್ತ್ವ'ದಲ್ಲಿ ಭಟಾರ ಈಶ್ವರರು ದೇವಗುರು ಬೃಹಸ್ಪತಿಗಳಿಗೆ ಉಪದೇಶ ರೂಪದಲ್ಲಿ ಕೊಟ್ಟು ವಿಭಿನ್ನ ತತ್ತ್ವಗಳು, ಸೃಷ್ಟಿಕ್ರಮ, ಮೋಕ್ಷದ ವಿಭಿನ್ನ ಉಪಾಯಗಳು,ಯೋಗ, ಅಷ್ಟೈಶ್ವರ್ಯ ಮುಂತಾದ ವಿಷಯಗಳನ್ನು ಕುರಿತ ಕ್ರಮಬದ್ಧವಾದ ಚರ್ಚೆಯಿದೆ. ಇದರ ಏಳು ಹಸ್ತಲೇಖಗಳಿವೆ. ಒಂದು ಆಚಾರ್ಯ ಶ್ರೀ ರಘುವೀರಜೀ ಯವರ ಸಂಸ್ಥೆಯಾದ 'ಸರಸ್ವತಿ ವಿಹಾರ'ದಲ್ಲಿದೆ. ಉಪಸಂಹಾರಕ್ಕನುಸಾರ ೧೮೭೫ ಶಕ ವರ್ಷದಲ್ಲಿ ಕೃಷ್ಣಪಕ್ಷದತೃತೀಯೆಯಂದು ಇದರ ಬರೆವಣಿಗೆ ಸಮಾಪ್ತಿಗೊಂಡಿತು. ಈ ಗ್ರಂಥವು ೧೫ ಉದ್ದನೆಯ ತಾಳೆ ಪತ್ರಗಳ ಮೇಲೆ ಬಲಿ ಲಿಪಿಯಲ್ಲಿ ಬರೆಯಲಾದ ೪೪ ಹಾಳೆಗಳಲ್ಲಿದೆ. ಪ್ರತಿಯೊಂದು ಪುಟದಲ್ಲಿ ನಾಲ್ಕು ಪಂಕ್ತಿಗಳಿವೆ. ಎರಡನೆಯ ಹಸ್ತಲೇಖವು ೧೬೭೦ ರ ಶಕವರ್ಷ ಆಷಾಢಮಾಸ, ಕೃಷ್ಣಪಕ್ಷದ ನವಮಿಯಂದು ಬಲಿದ್ವೀಪಸ್ಥಿತ ಕವಿಸಾಮ್ಲ ದೇಶದಲ್ಲಿ ಬರೆಯಲಾಗಿದೆ. ಮೂರನೆಯದು ೭೦ ಹಾಳೆಗಳ ಸುಸ್ಪಷ್ಟವಾದ, ೧೭೬೬ ಶಕವರ್ಷದ ಹಸ್ತಲೇಖ. ಇದು ಹಾಲೆಂಡಿನ ಲಾಇಡನ್ ವಿಶ್ವವಿದ್ಯಾಲಯದಲ್ಲಿ ಸುರಕ್ಷಿತವಾಗಿದೆ. ನಾಲ್ಕನೆಯದು ಮತ್ತು ಐದನೆಯದು ಇಂಡೋನೇಶಿಯಾದ ಕೀತ್ಯಾರ್ ವಿಶ್ವವಿದ್ಯಾಲಯದಲ್ಲಿದೆ. ಇವುಗಳಲ್ಲಿ ಉಪಸಂಹಾರವಿಲ್ಲ. ಆರನೆಯ ಹಸ್ತಲೇಖವು ಲಾಇಡನ್ ವಿಶ್ವವಿದ್ಯಾಲಯದಲ್ಲಿದೆ. ಇದರ ತಿಥಿ ಚಂದ್ರ ಸಂಕಾಲದಲ್ಲಿ ಕೊಟ್ಟಿರುವ ೧೭೫೫ ಶಕವರ್ಷ. ಇದರ ಉಪಸಂಹಾರವಾಗಿರುವುದು ಸಂಸ್ಕೃತ ಶ್ಲೋಕ ಮತ್ತು ತತ್ಸಂಬಂಧದ ವಿಸ್ತೃತ ಜಾವೀಟೀಕೆಯೊಡನೆ, ಇದ್ದಕ್ಕಿಂದಂತೆ ಇದರ ಕೊನೆಯಾಗಿ ಬರುತ್ತದೆ. ಏಳನೆಯ ಹಸ್ತಲೇಖವು ೧೦೧ ಪುಟಗಳುಳ್ಳದು. ಸುಂದರ ರೂಪದಿಂದ ಲಿಖಿತ ಪತ್ರ ಹಸ್ತಲೇಖದಲ್ಲಿದೆ. ಇದು ಮೂರನೆಯ ಹಸ್ತಲೇಖದ್ದೇ ಪ್ರತಿ. ಹಾಗಾದರೂ ಸಹ ಅನೇಕ ಸ್ಥಳಗಳಲ್ಲಿ ಪಾಠಭೇದಗಳಿವೆ.

ಅನ್ಯದಾರ್ಶನಿಕ ಗ್ರಂಥಗಳಿಗೆ ಸಮಾನವಾಗಿಯೇ, ಪ್ರಾರಂಭದಲ್ಲಿ ಸಂಸ್ಕೃತ ಶ್ಲೋಕಗಳು, ತದನಂತರ ಕವಿ–ಟೀಕೆಯಲ್ಲಿ ದೀರ್ಘವಾದ

ಸ್ಪಷ್ಟೀಕರಣವಿದೆ. ಒಂದೊಂದು ಕಡೆ ಟೀಕೆಯು ಕೇವಲ ಶ್ಲೋಕದ ಅರ್ಥವನ್ನಷ್ಟೇ ಕೊಡುತ್ತದೆ—ಯಥಾ ಏಳರಿಂದ ಹಿಡಿದು ಹತ್ತರ ವರಗಿನ ಶ್ಲೋಕಗಳು ಮತ್ತು ಐವತ್ತ ಮೂರರಿಂದ ಐವತ್ತೊಂಭತ್ತರ ವರಗಿನ ಷಡಂಗ ಯೋಗದ ಶ್ಲೋಕಗಳು, ಪ್ರಾಯಶಃ ಟೀಕೆಯು ವಿಸ್ತೃತವಾಗಿದೆ. ಕೇವಲ ಅರ್ಥದ ದೃಷ್ಟಿ ಯಿಂದಲ್ಲ, ವಿಷಯದ ದೃಷ್ಟಿಯಿಂದಲೂ ಸಹ ಮೂವತ್ತಮೂರನೆಯ ಶ್ಲೋಕವು ವಿಶೇಷ ಉಲ್ಲೇಖನೀಯವಾಗಿದೆ. ಈ ಶ್ಲೋಕದಲ್ಲಿ ಕೇವಲ ಅಷ್ಟಸಿದ್ಧಿಗಳನ್ನು ಎಣಿಸಲಾಗಿದೆ. ಆದರೆ ಟೀಕೆಯು ಒಂದು ಕಂಡಿಕಾ (ಚಿಕ್ಕ ಅಧ್ಯಾಯ) ದಲ್ಲಿ ಅವುಗಳ ವರ್ಣನೆಮಾಡಿ ಮುಖ್ಯತಃ ಸೃಷ್ಟಿಯ ಉತ್ಪತ್ತಿ ಮತ್ತು ಕ್ರಮವನ್ನು ಕುರಿತು ವರ್ಣನೆಯನ್ನೀಯುತ್ತದೆ. ನಲವತ್ತೇಳನೆಯ ಶ್ಲೋಕದಲ್ಲಿ ಪಂಚ ಪದಗಳ—ಜಾಗ್ರತ್, ಸ್ವಪ್ನ, ಸುಷುಪ್ತಿ, ತುರ್ಯಾ, ತುರ್ಯಾತೀತದ ವರ್ಣನೆ ಯಿದೆ. ಅದರ ಟೀಕೆಯಲ್ಲಿ ಇವುಗಳ ಬಗ್ಗೆ ವಿಸ್ತೃತ ದಾರ್ಶನಿಕ ವಿವೇಚನೆ ಕೂಡ ಇದೆ. ಎಂಬತ್ತನೆಯ ಶ್ಲೋಕದಲ್ಲಿ ಶಂಕರರು ಬೃಹಸ್ಪತಿ ಗಳನ್ನು ಕುರಿತು ಮಾಡಲಾದ ಪ್ರಶಂಸೆಯಿದೆ—ಆದರೆ ಜಾವೀ ಟೀಕೆಯಲ್ಲಿ ಆ ಪ್ರಶಂಸೆಯ ಬಗ್ಗೆ ನಿರ್ದೇಶನ ಮಾಡದಯೇ, ಬೃಹಸ್ಪತಿಗಳ ಚೇತನಾ ಚೇತನಕ್ಕೆ ಸಂಬಂಧಪಟ್ಟ ಸಂದೇಹಗಳನ್ನು ಶಂಕ ರರು ನಿವಾರಿಸುವ ಉಲ್ಲೇಖವಿದೆ.

ಗ್ರಂಥವು ಹೆಚ್ಚಾಗಿ ಪ್ರಯೋಗಿಸಲ್ಪಟ್ಟ ಕಾರಣ, ಶ್ಲೋಕಗಳ ಸಂಸ್ಕೃತವು ವಿಕೃತವೇನೋ ಆಗಿಬಿಟ್ಟಿದೆ. ಹಾಗಾದರೂ ಸಹ, ಸಂಸ್ಕೃತದ ವಿಶಾಲ ದಾರ್ಶನಿಕ ಸಾಹಿತ್ಯದಿಂದ ಕೆಲ ಉದ್ಧರಣೆ ಗಳನ್ನು ಕಲೆಹಾಕಿ ಅವುಗಳನ್ನು ಯಥಾಶಕ್ತಿ ಶುದ್ಧ ಮಾಡುವ ಪ್ರಯತ್ನಮಾಡಿದೆ. ಕೆಲವೊಮ್ಮೆ ಟೀಕೆಯು ಸಹಾಯಕವಾಗುತ್ತದೆ, ಕೆಲವೊಮ್ಮೆ ಇಲ್ಲ. ಗ್ರಂಥದ ಶೈಲಿಯಲ್ಲಿ ಅಲ್ಲಲ್ಲಿ ಸಂಸ್ಕೃತ ಟೀಕೆಗಳ ಶೈಲಿಯ ಛಾಯೆ ಗೋಚರಿಸುತ್ತದೆ. ಬೃಹಸ್ಪತಿಗಳು ಪ್ರಶ್ನೆಮಾಡುವುದು ಮತ್ತು ಶಂಕರರು ಉತ್ತರ ಕೊಡುವುದು—ಇದು ಸಂಸ್ಕೃತ ಪರಂಪರಾನುಗತವೇ ಹೌದು. ಪಾಯಶಃ ಇದು ಶೈವಾಗಮಗಳ ಪರಂಪರೆ. ಅಲ್ಲಿ ಪಾರ್ವತೀ ದೇವಿ ಯವರು ಪ್ರಶ್ನಿಸುತ್ತಾರೆ ಮತ್ತು ಭಟಾರ ಶಿವರು ಜ್ಞಾನಮಯ ಉಪದೇಶವನ್ನೀಯುತ್ತಾರೆ. ಅಥವಾ ಗಣ, ಋಷಿ ಮುಂತಾದವರು ಪ್ರಶ್ನೆ ಮಾಡುತ್ತಾರೆ. ದ್ವೀಪಾಂತರದ ಮತ್ತೊಂದು ಶೈವ ತಾಂತ್ರಿಕ ಗ್ರಂಥವಾದ 'ಗಣಪತಿ ತತ್ತ್ವ'ದ ಶೈಲಿ ಸಹ ಇದೇ. ಇಲ್ಲಿ ಪ್ರಶ್ನಕರ್ತರು ಗಣಗತಿಗಳು. ಓಂ ಪ್ರಣವಜ್ಞಾನವೇ ಮಹಾ ಜ್ಞಾನ. ಇದರಲ್ಲಿಯೇ ಉತ್ಪತ್ತಿ, ಸ್ಥಿತಿ ಮತ್ತು ಪ್ರಲೀನವಿರುವುದು. ಜನ್ಮ ಮತ್ತು ಭುವನದ ರಹಸ್ಯವು ಮೂಲತಃ ಏಕಾಕ್ಷರದಲ್ಲಿ (ಅ ಕಾರ) ಸನ್ನಿಹಿತವಾಗಿದೆ. ಓಂಕಾರದಿಂದ ಉದ್ಧೃತ ಸ್ವರ—ವ್ಯಂಜನಗಳಲ್ಲಿ ಮಾನವನ ಶರೀರಾಂಗಗಳ ರಹಸ್ಯ ಅಡಗಿದೆ. 'ನಮಃ ಶಿವಾಯ'ದ ಪಂಚಾ ಕ್ಷರ ಮಂತ್ರವು ಜಪ್ಯ ಮಂತ್ರವಾಗಿದೆ.

ಬೃಹಸ್ಪತಿ ತತ್ತ್ವದ ಪ್ರಾರಂಭದಲ್ಲಿ ಮೂರು ಭಿನ್ನ ಶೈವಮತಗಳ ಉಲ್ಲೇಖವಿದೆ. ಶೈವ, ಪಾಶು ಪತ ಮತ್ತು ಅಲೇಪಕ. ಬೃಹಸ್ಪತಿತತ್ತ್ವದಲ್ಲಿ ಶೈವ ಮತವನ್ನು ಪ್ರತಿಪಾದಿಸಲಾಗಿದೆ. ನಾಲ್ಕ ನೆಯ ಹಸ್ತಲೇಖದಲ್ಲಿ ಬೃಹಸ್ಪತಿ ತತ್ತ್ವಕ್ಕೆ 'ಶಿವ ತತ್ತ್ವ'ವೆಂಬ ಬೇರೊಂದು ಹೆಸರನ್ನೂ ಕೂಡಾ ಕೊಡಲಾಗಿದೆ. ಶೈವ ಮತ್ತು ಪಾಶುಪತಗಳು ಸರ್ವದರ್ಶನ ಸಂಗ್ರಹದಲ್ಲಿ ಉದ್ಧೃತವಾಗಿವೆ. ಆದರೆ 'ಅಲೇಪಕ' ಶಬ್ದವಂತೂ ಯಾವ ಸಂಸ್ಕೃತ ಕೋಶದಲ್ಲಿಯೂ ಸಿಗಲಿಲ್ಲ. ಅಲೇಪಕ ಶಬ್ದದ

ಶಬ್ದದ ಅರ್ಥ ನಿರ್ಲೇಪ. ಕಾಶ್ಮೀರ ಶೈವ ದರ್ಶನದ ಪ್ರಸಿದ್ಧ ಗ್ರಂಥವಾದ ತಂತ್ರಾಲೋಕದ ಹದಿಮೂರನೆಯ ಪಟಲದ ೩೦೫ ನೆಯ ಶ್ಲೋಕದಲ್ಲಿ ಭೈರವರೊಳಗೆ 'ಮೈಮಲ' ಎಂಬ ಶೈವರಿದ್ದಾರೆ ಸಮಾನಾರ್ಥದ ಆಧಾರದ ಮೇಲೆ ಸಂಭವತಃ ನಮ್ಮ 'ಅಲೇಪಕ'ದ ತಾತ್ಪರ್ಯ ಮೈಮಲರಿಂದಿರಬಹುದೆಂಬುದಾಗಿ ಹೇಳುವುದು ಅನುಪಯುಕ್ತವಾಗದು.

ಗ್ರಂಥದ ದರ್ಶನದ ಪ್ರಾರಂಭವಾಗುವುದು ಈ ತರಹ—

ಭಿನ್ನಪ್ರಕಾರದ ಶಾಸ್ತ್ರಗಳಿವೆ. ಅವುಗಳಲ್ಲಿ ಭಿನ್ನಪ್ರಕಾರದ ಮೋಕ್ಷಮಾರ್ಗಗಳ ಉಲ್ಲೇಖವಿದೆ. ಇದಕ್ಕೇನು ಕಾರಣ? ಇದಕ್ಕೆ ಕಾರಣ ಮನುಷ್ಯನ ವಿಭಿನ್ನಯೋನಿಗಳು. ಪುನರ್ಜನ್ಮಕ್ಕೆ ಕಾರಣ ವಾಸನೆಗಳು—ಇವು ಸತ್ ದುಷ್ಕರ್ಮಗಳನ್ನು ಮಾಡಲು ಪ್ರೇರೇಪಿಸುತ್ತವೆ. ಈ ಕರ್ಮವಾಸನೆಗಳಿಂದ ರಂಜಿತವಾದ ಆತ್ಮವು ವಿಭಿನ್ನ ಯೋನಿಗಳ ಸುಳಿಯಲ್ಲಿ ಸಿಲುಕಿಕೊಂಡಿರುತ್ತದೆ ಹಿಂದಿನ ಜನ್ಮದಲ್ಲಿ ಮಾಡಲಾದ ಕರ್ಮಗಳು ವಾಸನೆಗಳಿಗೆ ಕಾರಣ. ವಾಸನೆಗಳು ಕರ್ಮಗಳಿಗೆ ಕಾರಣ. ಈ ಕರ್ಮಗಳನ್ನು ಮನುಷ್ಯ ಸತತವಾಗಿ ಮಾಡುತ್ತಾ ಹೊರಟು ಹೋಗುತ್ತಾನೆ. ಈ ಜಗತ್ತಿನಲ್ಲಿ ಅವನಿಂದ ಎಸಗಲ್ಪಟ್ಟ ಕರ್ಮಗಳೇನಾದರೂ ಒಳ್ಳೆಯವಾದ ಪಕ್ಷಕ್ಕೆ, ಅವನು ಸ್ವರ್ಗದಲ್ಲಿ ಜನ್ಮತಾಳಿ ಸುಖವನ್ನನುಭವಿಸುತ್ತಾನೆ. ಅವನ ಕರ್ಮಗಳು ಕೆಟ್ಟದ್ದಾಗಿದ್ದರೆ ಆಗ ಅವನು ನರಕ ದುಃಖಗಳಲ್ಲಿ ಭಾಗಿಯಾಗುತ್ತಾನೆ. ಸಂಸ್ಕೃತದಲ್ಲಿ ಇದು ಸಾಮಾನ್ಯ ವಿಚಾರವಾಗಿದೆ.

ಕರ್ಮಭೂಮಿರಿಯಂ ಬ್ರಹ್ಮನ್
ಫಲಭೂಮಿ ರತಃ ಪರಾ |
ಇಹ ಯತ್ ಕ್ರಿಯತೇ ಕರ್ಮ
ತತ್ಪರತ್ರೋಪಭುಜ್ಯತೇ ||

ಕರ್ಮಫಲವು ಸಮಾಪ್ತವಾದ ಮೇಲೆ ಅವನು ಪಶುವಾಗಿಬಿಡುತ್ತಾನೆ. ಸತ್ಕರ್ಮಿಯು ಕರ್ಮಫಲ ಸಮಾಪ್ತವಾದೊಡನೆ ರಾಜ ಅಥವಾ ಅತ್ಯಂತ ಧನಿಕನಾಗುತ್ತಾನೆ. ಅವನಿಗೆ ಉಚ್ಚತಮ ಜ್ಞಾನದ ಆಭಾಸವುಂಟಾಗುತ್ತದೆ. ಆತ 'ವಸ್ತು'ವನ್ನು ಕಾಣುತ್ತಾನೆ. ಅವನಲ್ಲಿ ಸಂವೇಗ ಉತ್ಪನ್ನವಾಗುತ್ತದೆ. ಅವನು ಬಯಸುವುದು ಈಶ್ವರ ಭಕ್ತಿ. ಭಗವಂತನಲ್ಲಿ ಅವನಿಗೆ ಭಕ್ತಿಯುಂಟಾದ ಕಾರಣ ಮತ್ತು ಅವನ ಮೇಲೆ ಭಗತ್ಕೃಪೆಯಾದ ಕಾರಣ, ಅವನು ಜನ್ಮಾವಸ್ಥೆ, ಪುನರ್ಜನ್ಮ ಸುಖದುಃಖಗಳನ್ನು ನೋಡುತ್ತಾನೆ. ಅವನು ಶಾಂತಿಯನ್ನಪೇಕ್ಷಿಸುತ್ತಾನೆ. ಅಲ್ಲದೆ ಉಪದೇಶ ಪಡೆಯಲೋಸುಗ ವಿದ್ವಾಂಸನು ಜ್ಞಾನಿಯ ಬಳಿಗೆ ಹೋಗುತ್ತಾನೆ. ಆದರೆ ತತ್ತ್ವಜ್ಞಾನವು ಅತಿಗುಹ್ಯ ಹಾಗೂ ವಿಶೇಷವಾದುದು. ಆದ್ದರಿಂದ ವಿಭಿನ್ನ ಪ್ರಕಾರದಿಂದ ಅದಕ್ಕೆ ವ್ಯಾಖ್ಯೆಗಳನ್ನು ನೀಡಲಾಗಿದೆ. ಶಾಸ್ತ್ರಗಳಲ್ಲಿನ ವೈವಿಧ್ಯಕ್ಕೆ ಕಾರಣವಿದು.

ಸರ್ವಶಾಸ್ತ್ರಗಳು ಶಂಕರರ ಮೂಲಕ ಉತ್ಕೃಷ್ಟರೂಪದಿಂದ ಉಪದಿಷ್ಟವಾಗಿವೆ. ಮನುಷ್ಯರು ಅವುಗಳಲ್ಲಿ ಭೇದವನ್ನೆಣಿಸುವುದು ಭ್ರಾಂತಿ ಜ್ಞಾನದ ಕಾರಣದಿಂದಾಗಿಯೆ. ಬೃಹಸ್ಪತಿಗಳ ಭ್ರಾಂತ ಜ್ಞಾನವೇನು? ಕೇಳಿದಾಗ, ಸಂಸ್ಕೃತ ಸಾಹಿತ್ಯದಲ್ಲಿ, 'ಅಂಧ ಗಜನ್ಯಾಯ' ಎಂಬುದಾಗಿ ಕಥಿತ 'ಆನೆ ಮತ್ತು ಅಂಧರ' ಕಥೆಯ ದೃಷ್ಟಾಂತದ ಮೂಲಕ ಶಂಕರರು, ಭ್ರಾಂತ ಜ್ಞಾನವನ್ನು ಸ್ಪಷ್ಟೀಕರಿಸುತ್ತಾರೆ. ಅಂಥ ಜನರು ತಮ್ಮ ಅಲ್ಪಜ್ಞಾನಕ್ಕನುಸಾರ ಯಾವರೀತಿ ಆನೆಯ

ವಾಸ್ತವಿಕ ಆಕಾರವನ್ನು ಪೃಥಕ್ ಪೃಥಕ್ಕಾಗಿ ವರ್ಣನೆ ಮಾಡುತ್ತಾರೋ, ಅಲ್ಲದೆ, ಜೊತೆಯ.ಲ್ಲೇ ಅದನ್ನೇ ಸತ್ಯವೆಂದರಿಯುವ ಪ್ರಮಾದವೆಸಗುತ್ತಾರೋ,ಹಾಗೆಯೇ ಅದೇ ತರಹ ವ್ಯಾಮೋಹದಲ್ಲಿ ಬಿದ್ದಿರುವ ಮಾನವ ಕೂಡ ವಾಸ್ತವಿಕ ತತ್ತ್ವವನ್ನರಿತುಕೊಳ್ಳಲಾರ. ಆನೆಯ ಕಾಲು, ಬಾಲ, ಹೊಟ್ಟೆ, ಕಿವಿ ಮುಂತಾದ ಅಂಗಗಳು ಶಾಸ್ತ್ರಗಳು. ಇವುಗಳೆಲ್ಲದರಲ್ಲಿ ವಿಶೇಷ (ಆನೆಯ ಅಂಗೀ) ಲಕ್ಷಣ ವಿದ್ಯಮಾನವಿದ್ದಾಗ್ಯೂ, ಇವು ಬಹಳವಾಗಿವೆ. ಇದೇ ಭ್ರಾಂತಿ ಜ್ಞಾನಕ್ಕೆ ಕಾರಣ. ವಾಸ್ತವಿಕ ಜ್ಞಾನ (ವಿಶೇಷ ಜ್ಞಾನ) ವನ್ನು ಪಡೆಯುವುದಕ್ಕೋಸ್ಕರ ವಿಭಿನ್ನ ಮತಗಳ ಹಾಗೂ ಶಾಸ್ತ್ರಗಳ ಪರಿಶೀಲನೆ ಅತ್ಯಂತ ಆವಶ್ಯಕ. ಆನೆ ಮತ್ತು ಅಂಧರ ಈ ಕಥೆ ಭಾರತೀಯ ದರ್ಶನ ಶಾಸ್ತ್ರಗಳಲ್ಲಿ, ಜೈನದರ್ಶನ ಮತ್ತು ಬೌದ್ಧದರ್ಶನದಲ್ಲಿ ಕೂಡ ಸಿಕ್ಕುತ್ತದೆ. ಪಾಲಿಯ ಉದಾನ ಕಥೆಯಲ್ಲಿ ಮತ್ತು 'ಬೃಹಸ್ಪತಿ ತತ್ತ್ವ'ದ ಕಥೆಯಲ್ಲಿ ಪರ್ಯಾಪ್ತ ಸಾಮಂಜಸ್ಯವಿದೆ ಈ ರೋಚಕ ದೃಷ್ಟಾಂತವು ಭೋಟ್ (ತಿಬ್ಬತ್) ಚೀಣಾ ಮತ್ತು ಜಪಾನಿನಲ್ಲಿ ಕೂಡ ಉಪಲಬ್ಧವಿದೆ.

ಈ ಪುಟ್ಟ ಭೂಮಿಕೆ (ಮುನ್ನುಡಿ)ಯಲ್ಲಿ ಜ್ಞಾನದ ಕಾರಣವನ್ನು ಉಲ್ಲೇಖಿಸಿದ ನಂತರ, ಆರನೆಯ ಶ್ಲೋಕದಿಂದ ಶೈವದರ್ಶನ ಪ್ರಾರಂಭವಾಗುತ್ತದೆ. ಸರ್ವತತ್ತ್ವಗಳ ಪೈಕಿ ಸೂಕ್ಷ್ಮವಾದ ಪರಮತತ್ತ್ವಗಳು ಎರಡು—ಚೇತನ ಮತ್ತು ಅಚೇತನ.

ದ್ವಿವಿಧಂ ತತ್ತ್ವಂ ಪರಮಂ
ಚೇತನಮಚೇತನಂ ಚ |
ವ್ಯಾಪ್ನೋತಿ ಸರ್ವತತ್ತ್ವೇಷು
ಸೂಕ್ಷ್ಮಮುನ್ನೇಯಂ ಯತ್ನತಃ ||
(ಬೃಹಸ್ಪತಿ. ಶ್ಲೋಕ-೬)

ಚೇತನವು ಮೂರು ಪ್ರಕಾರದ್ದು—ಶಿವತತ್ತ್ವ, ಸದಾಶಿವತತ್ತ್ವ ಮತ್ತು ಪರಮಶಿವತತ್ತ್ವ. ಅಚೇತನ ತತ್ತ್ವವು ಮಾಯಾತತ್ತ್ವ. ಇವುಗಳೆರಡರ ಸಂಯೋಗದಿಂದ ಸರ್ವ ತತ್ತ್ವಗಳ ಉತ್ಪತ್ತಿಯಾಗುವ ಕ್ರಮವಿದೆ. ಶಿವತತ್ತ್ವ, ಸದಾಶಿವತತ್ತ್ವ ಮತ್ತು ಪರಮಶಿವತತ್ತ್ವದ ಸರ್ವಜ್ಞತ್ವ, ವಿಭುತ್ವ ಉತ್ಪಾದಕ, ನಾಶಕ, ಪಾಲಕ ಮುಂತಾದ ಗುಣಗಳು ಮತ್ತು ವಿಶೇಷಣಗಳನ್ನುಲೇಖಿಸುತ್ತಾ, ಪರಮೇಶ್ವರ ಶಿವರಿಂದ ಜಗತ್ತು ಪರಿಪೂರ್ಣವಾಗಿ ವ್ಯಾಪ್ತವಾಗಿದೆಯೆಂಬ ವರ್ಣನೆಯಿದೆ. ಯಾವ ರೀತಿ ಒಂದು ಸೂತ್ರದಲ್ಲಿ ಮಣಿಗಳು ಪೋಣಿಸಲ್ಪಟ್ಟವೆಯೋ ಅಂತೆಯೇ ವಿಶ್ವದ ವಿಭಿನ್ನ ವಸ್ತುಗಳು ಆ ಒಬ್ಬ ಈಶ್ವರನಲ್ಲೇ ಪ್ರೋತವಾಗಿವೆ. ಆ ಶಿವರು ಮಂತ್ರಾತ್ಮರು. ದೂರಶ್ರವಣ, ದೂರಸರ್ವಜ್ಞ ಮತ್ತು ದೂರದರ್ಶನ ಅವರ ಗುಣಗಳು. ಅಣಿಮಾ, ಲಘಿಮಾ ಮುಂತಾದವು ಅಷ್ಟೈಶ್ವರ್ಯಗಳು. ಈ ಸದಾಶಿವತತ್ತ್ವದ ಕೆಳಗೆ ಮಾಯಾಶಿರಸ್ತತ್ತ್ವವಿದೆ. ಇದರ ಸ್ಥಾನ ಅಷ್ಟವಿದ್ಯಾಸನ ಅರ್ಥಾತ್ ಅನಂತ,ಸೂಕ್ಷ್ಮ,ಶಿವತಮ,ಏಕರುದ್ರ, ಏಕನೇತ್ರ, ತ್ರಿಮೂರ್ತಿ, ಶ್ರೀಕಂಠ ಮತ್ತು ಶಿಖಂಡಿಯಾಗಿದೆ. ಸಂಸ್ಕೃತದಲ್ಲಿ ಈ 'ಅಷ್ಟವಿದ್ಯಾಸನ'ಗಳು 'ಅಷ್ಟಾವಿದ್ಯೇಶ್ವರ' ಎಂದೆನಿಸಿಕೊಳ್ಳುತ್ತವೆ. ಮಾಯಾಶಿರಸ್ತತ್ತ್ವದ ಕೆಳಗೆ ಮಾಯಾತತ್ತ್ವವಿದೆ. ಇದು ಜಡ, ಅಚೇತನ ಮತ್ತು ಶೂನ್ಯ. ಶಿವತತ್ತ್ವವು ಹಾಸುಹೊಕ್ಕಾಗಿ ಸೇರಿಕೊಂಡನಂತರ ಇದು ಚೇತನ (ಅರ್ಥಾತ್ ಸಕ್ರಿಯ)ವಾಗಿಬಿಡುತ್ತದೆ. ಅಲ್ಲದೆ ಶಿವತತ್ತ್ವವು ಇದರ ಸಂಯೋಗದಿಂದ ಸರ್ವಜ್ಞತ್ವ, ಸರ್ವಕರ್ತೃತ್ವಮಯ

ಮುಂತಾದ ಸ್ವತಃದ ಗುಣಗಳನ್ನು ಮರೆತು ಹೋಗುತ್ತದೆ.

ಈ ಸ್ಥಿತಿಯಲ್ಲಿ ಶಿವತತ್ತ್ವವು ಆತ್ಮವೆಂದೆನಿಸಿ ಕೊಳ್ಳುತ್ತದೆ. ಆತ್ಮತತ್ತ್ವವು ಅಸಂಖ್ಯವಾಗಿದೆ (ಏಕೆಂದರೆ ಆತ್ಮಗಳು ಅನೇಕ). ಮಾಯಾತತ್ತ್ವಕ್ಕೆ ಜೇನುನೊಣಗಳ ಗೂಡಿನ ಉಪಮೆ ಕೊಡಲಾಗಿದೆ. ಆತ್ಮಗಳು ಜೇನುನೊಣಗಳ ಮಕ್ಕಳು. ಇವು 'ಅಧೋಮುಖ'ಗಳಾಗಿವೆ. ಕಾರಣ, ಅವು ತಮಗಿಂತ ಮೇಲಿರುವ ಆ ತತ್ತ್ವಗಳನ್ನು ನೋಡಲಾರವು. ಶಿವ–ಶಕ್ತಿಯಿಂದ ಮಾಯಾತತ್ತ್ವವು ಸಕ್ರಿಯವಾಗಿ ಮೇಲೇಳುತ್ತದೆ. ಅಲ್ಲದೆ ಪ್ರಧಾನ ತತ್ತ್ವ ಉತ್ಪನ್ನವಾಗುತ್ತದೆ. ಅಚೇತನ ಪ್ರಧಾನ ತತ್ತ್ವದ ಪ್ರಭಾವದಿಂದ ಆತ್ಮತತ್ತ್ವ ಕೂಡ ಅಚೇತನವಾಗಿಬಿಡುತ್ತದೆ. ಈಶ್ವರರ ಕ್ರಿಯಾಶಕ್ತಿಯಿಂದ ಪ್ರೇರಿತ ಪ್ರಧಾನತತ್ತ್ವವು ತ್ರಿಗುಣತತ್ತ್ವವನ್ನುಂಟು ಮಾಡುತ್ತದೆ. ಸತ್ವ, ರಜಃ, ತಮಃ ಇವು ತ್ರಿಗುಣಗಳು.

ಬೃಹಸ್ಪತಿತತ್ತ್ವದಲ್ಲಿ ತ್ರಿಗುಣಗಳನ್ನು ಕುರಿತಾದ ವಿಶಿಷ್ಟ ವರ್ಗೀಕರಣ ದೊರಕುತ್ತದೆ. ಸಾಂಖ್ಯದಂತೆಯೇ ಇವುಗಳಿಗೆ ಸಾಮಾನ್ಯ ಮತ್ತು ಪ್ರಚಲಿತ ವ್ಯಾಖ್ಯೆ ನೀಡಿದ ನಂತರ, ಸಾತ್ವಿಕ ಚಿತ್ತ, ಅತ್ಯಂತ ಸಾತ್ವಿಕಚಿತ್ತ, (ಅದರ ಲಕ್ಷಣ ಮತ್ತು ಫಲ) ತದನಂತರ ಸಾತ್ವಿಕ ಮತ್ತು ರಾಜಸ ಮತ್ತು ಸಾತ್ವಿಕ, ರಾಜಸ ಹಾಗೂ ತಾಮಸ ಚಿತ್ರದ ವರ್ಗೀಕರಣವಿದೆ. ರಜಃದಲ್ಲಿ ರಾಜಸ ಚಿತ್ತ ಮತ್ತು ಅತ್ಯಂತ ರಾಜಸ ಚಿತ್ತ, ಹಾಗೆಯೇ ತಮದಲ್ಲಿ ತಾಮಸ ಮತ್ತು ಅತ್ಯಂತ ತಾಮಸ ಚಿತ್ತಗಳಿವೆ. ಸತ್ವದ ಈ ಶುದ್ಧ ಮತ್ತು ಮಿಶ್ರ ವರ್ಗೀಕರಣವು ವೇದಾಂತಕಾರಿಕಾವಳಿ ೧೦೦೧–೨ ರಿಂದ ಸ್ಪಷ್ಟವಾಗಿಬಿಡುತ್ತದೆ.

> ಶುದ್ಧಸತ್ವಂ ಮಿಶ್ರಸತ್ವಮಿತಿ
> ಸತ್ವಂ ದ್ವಿಧಾ ಮತಮ್ ‖ ೧ ‖
> ರಜಸ್ತಮೋಭ್ಯಾಮಸ್ಪೃಷ್ಟಮದ್ರವ್ಯಂ
> ಪೂರ್ವಮುಚ್ಯತೇ ।
> ರಜಸ್ತಮೋ ವಿಮಿಶ್ರಂ ತು ಮಿಶ್ರ ಸತ್ವಂ
> ಪ್ರಕೀರ್ತಿತಮ್ ‖ ೨ ‖

ಅತ್ಯಂತ ಸಾತ್ವಿಕ ಚಿತ್ತದಿಂದ ಮೋಕ್ಷವು ಅವಶ್ಯಂ ಭಾವೀ. ಶ್ರೀಮದ್ಭಗವದ್ಗೀತೆಯ (೧೪–೧೪) ಈ ಶ್ಲೋಕದಿಂದ ಇದಕ್ಕೆ ಸಾಕಷ್ಟು ಪುಷ್ಟಿ ದೊರಕುತ್ತದೆ.

> ಯಥಾ ಸತ್ವೇ ಪ್ರವೃದ್ಧೇ ತು
> ಪ್ರಲಯಂ ಯಾತಿ ದೇಹಭೃತ್ ।
> ತದೋತ್ತಮಾವಿದಾಂ ಲೋಕಾನಮಲಾನ್
> ಪ್ರತಿಪದ್ಯತೇ ‖

ಈ ಮೂರು ಗುಣಗಳಿಂದ ಬುದ್ಧಿಯುಂಟಾಗುತ್ತದೆ. ಬುದ್ಧಿಗೆ ನಾಲ್ಕು ಧರ್ಮಗಳುಂಟು. ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಮತ್ತು ಇವುಗಳಿಗೆ ವಿರುದ್ಧವಾದ ನಾಲ್ಕು ಧರ್ಮಗಳೆಂದರೆ ಅರ್ಥಾತ್ ಅಧರ್ಮ, ಅಜ್ಞಾನ, ಅವೈರಾಗ್ಯ ಮತ್ತು ಅನೈಶ್ವರ್ಯಗಳು. ಬೃಹಸ್ಪತಿತತ್ತ್ವದಲ್ಲಿ ೨೫ ನೇ ಶ್ಲೋಕದಿಂದ ೩೨ ರ ತನಕ ಇವುಗಳ ವ್ಯಾಖ್ಯೆ ಮತ್ತು ಚರ್ಚೆ ಮಾಡಲಾಗಿದೆ. ಧರ್ಮದ ವ್ಯಾಖ್ಯೆಯು, ಕಾಶ್ಮೀರದ ಶೈವಗ್ರಂಥವಾದ ಸ್ವಚ್ಛಂದತಂತ್ರ ಮತ್ತು ಸಾಂಖ್ಯಕಾರಿಕಾವನ್ನು ಕುರಿತ ಮಾಠರಾಚಾರ್ಯರ ಟೀಕೆಗಿಂತ ಬಹಳ ಭಿನ್ನವಾಗಿದೆ. ಜ್ಞಾನವೆಂದರೆ ತಾತ್ಪರ್ಯ, ಸಾಂಖ್ಯದ ಪ್ರಸಿದ್ಧ ಮೂರು ಪ್ರಮಾಣಗಳು ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಎಂದು—

> ಪ್ರತ್ಯಕ್ಷಮನುಮಾನಂ ಚ
> ಕೃತಾಂತಾದ್ವಚನಾಗಮಃ ।
> ಪ್ರಮಾಣಂ ತ್ರಿವಿಧಂ ಪ್ರೋಕ್ತಂ
> ತತ್ಸಮ್ಯಗ್ಜ್ಞಾನಮುತ್ತಮಂ ‖
> (ಬೃಹಸ್ಪತಿ. ೨೬)

ವೈರಾಗ್ಯದ ವ್ಯಾಖ್ಯೆಯು ಯೋಗಸೂತ್ರ (೧-೧೫) ಕ್ಕೆ ಬಹಳ ಸಮೀಪದಲ್ಲಿದೆ.

'ದೃಷ್ಟಾನುಶ್ರಾವಿಕೇ ಭೋಗೇ ಸುಖೇ
ದೇಹೇ ವಿರಾಗಿತಾ'
(ಬೃಹಸ್ಪತಿ. ೨೭)

ಯೋಗಸೂತ್ರದಲ್ಲಿ 'ದೃಷ್ಟಾನುಶ್ರವಿಕ ವಿಷಯ ವಿತೃಷ್ಣಸ್ಯ ವಶೀಕಾರಸಂಜ್ಞಾ ವೈರಾಗ್ಯಂ' ಐಶ್ವ ರ್ಯದ ವ್ಯಾಖ್ಯೆಯು 'ಸ್ವಚ್ಛಂದತಂತ್ರ'ಕ್ಕೆ ಬಹಳ ಹತ್ತಿರದಲ್ಲಿದೆ. ಸಾಂಖ್ಯವುಸರ್ವಥಾ ಭಿನ್ನವಾಗಿದೆ. ಮಾಠರಾಚಾರ್ಯರ ವೃತ್ತಿಗನುಸಾರವಾಗಿ ಐಶ್ವ ರ್ಯದ ಅರ್ಥವೇನೆಂದರೆ ಅಷ್ಟಸಿದ್ಧಿಗಳು. ಆದರೆ ನಮ್ಮ ತಾತ್ಪರ್ಯ ಭೋಗ, ಉಪಭೋಗ ಮತ್ತು ಪರಿಭೋಗದಿಂದ ವೈರಸ್ಯ. ಸಂಸ್ಕೃತ ಸಾಹಿತ್ಯ ದಲ್ಲಿ ಬುದ್ಧಿಯ ಈ ಗುಣ (ಧರ್ಮ)ಗಳ ಫಲ ಗಳನ್ನು ಕುರಿತ ಸಮಾನ ಸ್ಥಳವು, ಮೃಗೇಂದ್ರ ತತ್ವದ ೧–೧೦–೫೯ ಮೇಲಿರುವ ನಾರಾಯಣ ಕಂಠಿಗಳ ಟೀಕೆಯಲ್ಲಿ ಉಪಲಬ್ಧವಿದೆ. ಇವುಗಳ ಲ್ಲದೆ ಪಂಚ ವಿಪರ್ಯಯ, ನವತುಷ್ಟಿಗಳು ಮತ್ತು ಅಷ್ಟಸಿದ್ಧಿಗಳೂ ಸಹ ಬುದ್ಧಿಯ ವೃತ್ತಿಗಳು. ಈ ಪಂಚವಿಪರ್ಯಯಗಳು ಸ್ವಚ್ಛಂದ ತಂತ್ರದಲ್ಲಿ ಬೃಹಸ್ಪತಿ ತತ್ವಕ್ಕೆ ಸಮನಾಗಿಯೇ ಇವೆ.

ತಮೋ ಮೋಹೋ ಮಹಾಮೋಹಸ್ತಾಮಿ
ಸ್ರೋऽನೋ ವಿಪರ್ಯಯಃ |
ಅಂಧಂತಮಿಸ್ರಮಿತ್ಯಾಹುರೇವಂ
ಪಂಚ ವಿಪರ್ಯಯಾಃ ||

ಸಾಂಖ್ಯದಲ್ಲಿ ಇವುಗಳನ್ನು 'ಪಂಚಪರ್ವಾ ಅವಿದ್ಯಾ' ಎಂದೆನ್ನಲಾಗಿದೆ. ಇದಾದ ನಂತರ ಅಷ್ಟತುಷ್ಟಿಗಳ ವರ್ಣನೆಯಿದೆ. ಸಾಂಖ್ಯಕ್ಕನು ಸಾರ ತುಷ್ಟಿಗಳಿರುವುದು ಒಂಬತ್ತು. ಆದರೆ ಬೃಹಸ್ಪತಿಗನುಸಾರ ಇವು ಎಂಟು. ಅರ್ಜನೆ, ರಕ್ಷಣೆ, ಕ್ಷಯ, ಸಂಗ, ಹಿಂಸಾ, ಭಾಗ್ಯ, ಕಾಲ ಮತ್ತು ಆತ್ಮ. ಸಾಂಖ್ಯದಲ್ಲಿ ಸಂಗತುಷ್ಟಿಯ ಸ್ಥಾನ ದಲ್ಲಿ ತೃಪ್ತಿ ತುಷ್ಟಿ ಹಾಗೂ ಆತ್ಮದ ಸ್ಥಾನದಲ್ಲಿ ಪ್ರಕೃತಿ ಮತ್ತು ಉಪಾದಾನ ತುಷ್ಟಿಗಳಿವೆ. ಅಷ್ಟಸಿದ್ಧಿಗಳಂತೂ ಸಾಂಖ್ಯದಲ್ಲಿ ಹೇಗಿವೆಯೋ ಸರ್ವಥಾ ಹಾಗೆಯೇ ಇವೆ. ಕೇವಲ ಸಿದ್ಧಿಗಳ ವರ್ಗೀಕರಣ ಅರ್ಥಾತ್ ಬಾಹ್ಯಸಿದ್ಧಿಗಳು ಮತ್ತು ಆಧ್ಯಾತ್ಮಿಕ ಸಿದ್ಧಿಗಳು, ಸಾಂಖ್ಯಕ್ಕೆ ನವೀನ ವಾಗಿವೆ. ಸಾಂಖ್ಯದ ಮೇಲೆ ವಾಚಸ್ಪತಿ ಮಾಠ ರಾಚಾರ್ಯ ಮುಂತಾದವರ ಪ್ರಥಿತ ಟೀಕೆಗಳಲ್ಲಿ ಇದು ಸಿಕ್ಕುವುದಿಲ್ಲ. ಈ ವರ್ಗೀಕರಣಕ್ಕೆ ಕಾರಣ ಸಂಭವತಃ ತುಷ್ಟಿಗಳ ವರ್ಗೀಕರಣವೇ. ಅರ್ಥಾತ್ ತುಷ್ಟಿಗಳ ಬಾಹ್ಯ ಮತ್ತು ಆಧ್ಯಾತ್ಮಿಕ ವರ್ಗೀಕರಣಕ್ಕೆ ಸಮನಾಗಿಯೇ ಅಷ್ಟಸಿದ್ಧಿ ಗಳನ್ನೂ ಕೂಡ ವರ್ಗೀಕರಣ ಮಾಡುವುದು ಅಧಿಕ ಉಪಯುಕ್ತ ಮತ್ತು ಉಚಿತವಾದುದೆಂಬು ದಾಗಿ ದ್ವೀಪಾಂತರ ವಾಸಿಗಳು ಭಾವಿಸಿದರು.

ಬುದ್ಧಿತತ್ವದ ವಿವಿಧ ವೃತ್ತಿಗಳನ್ನು ಕುರಿತು ಸವಿಸ್ತಾರವಾಗಿ ಉಲ್ಲೇಖ ಮಾಡಿದ ತರುವಾಯ ಪುನಃ ಸೃಷ್ಟಿಕ್ರಮದತ್ತ ಹೋಗುತ್ತಾರೆ. ಬುದ್ಧಿ ತತ್ವದಿಂದ ಅಹಂಕಾರದ ಉತ್ಪತ್ತಿಯಾಯಿತು. ಇದು ಮೂರು ಪ್ರಕಾರದ್ದು ಸಾತ್ವಿಕ, ರಾಜಸ ಮತ್ತು ತಾಮಸ. ಇವಕ್ಕೆ ಇರುವ ಬೇರೆ ಹೆಸರು ಗಳೆಂದರೆ ವೈಕೃತ ತೈಜಸ ಮತ್ತು ಭೂತಾದಿ. ವೈಕೃತ ಅಹಂಕಾರದಿಂದ ದಶೇಂದ್ರಿಯಗಳು ಅಹಂಕಾರದಿಂದ ಪಂಚ ತನ್ಮಾತ್ರಗಳು. ಉತ್ಪನ್ನ ವಾಗುತ್ತವೆ. ತೈಜಸ ಅರ್ಥಾತ್ ರಾಜಸ ಅಹಂ ಕಾರವು ಇವುಗಳೆರಡನ್ನು ಸಕ್ರಿಯಗೊಳಿಸಲು ಸಹಾಯ ಮಾಡುತ್ತದೆ. ಈ ಪ್ರಸಂಗದಲ್ಲಿ ಬೃಹ ಸ್ಪತಿ ತತ್ತ್ವವು ಸರ್ವಥಾ ಸಾಂಖ್ಯಮತವನ್ನು ಪ್ರತಿ ಪಾದಿಸುತ್ತದೆ. ಇಲ್ಲಿಯ ವಿಭಿನ್ನ ಮತಗಳಲ್ಲಿ

ಕೂಡ ಎಲ್ಲರ ಸಹಮತಿಯಿದೆ. ಪಂಚತನ್ಮಾತ್ರಗಳಿಂದ ಪಂಚ ಮಹಾಭೂತಗಳು ಹೊರಡುತ್ತವೆ. ಇವುಗಳಿಗೆ ವ್ಯಾಖ್ಯೆಯನ್ನು ಮಾಡುತ್ತಾ ಬೃಹಸ್ಪತಿಯು, ಕೊನೆಗೆ ಮನುಷ್ಯ ಶರೀರದ ರಚನೆಯ ಮೇಲೆ ಬಂದುಬಿಡುತ್ತದೆ. ಷಟ್‌ಕೋಶದ ಮಧ್ಯೆ ಪದ್ಮ ನಾಡಿಯ ಸ್ಥಾನದಲ್ಲಿ ಶುಕ್ಲ ಮತ್ತು ಶ್ವನಿತ (ಶೋಣಿತ)ಗಳ ಕೂಡುವಿಕೆಯಿಂದ ಪ್ರಾಣಿಗಳ ಉತ್ಪತ್ತಿಯಾಗುತ್ತದೆ. 'ಷಟ್‌ಕೋಶಂ ವಪುಃ' ಎಂಬುದರ ಬೃಹಸ್ಪತಿಗೆ ಅನುಕೂಲವಾದ ಸ್ಥಳವು, ಶಿವಗೀತೆ (ಲಿಂಗಮಹಾಪುರಾಣದಲ್ಲಿ ಉದ್ಧೃತ) ಮತ್ತು ಮುದ್ಗಲೋಪನಿಷತ್ತಿನಲ್ಲಿ ಸಿಕ್ಕುತ್ತದೆ. ಸಾಮಾನ್ಯ ರೂಪದಿಂದ ಉಪನಿಷತ್ತುಗಳಲ್ಲಿ 'ಪಂಚಕೋಶ'ಗಳು ಬರುತ್ತವೆ. ಅವು ಈ ಷಟ್ ಕೋಶಗಳಿಗಿಂತ ಸರ್ವಥಾ ಭಿನ್ನವಾದುವು. ಒಬ್ಬ ಡಚ್ ವಿದ್ವಾಂಸ ಡಾಕ್ಟರ್ ಖೋರಿಸ್ ಎಂಬುವರು ತಮ್ಮ Balinese Theology ಪುಸ್ತಕದಲ್ಲಿ ಪಂಚಕೋಶನನ್ನೇ ಷಟ್‌ಕೋಶವೆಂದು ಮಾನ್ಯಮಾಡಿಬಿಟ್ಟಿದ್ದಾರೆ. ಈ ಭ್ರಮೆಗೆ, ಷಟ್ ಕೋಶಗಳ ಅಪೇಕ್ಷೆ ಅಥವಾ ಪಂಚಕೋಶಗಳ ಅಧಿಕ ಪ್ರಚುರತಯಿರುವುದು ಕಾರಣವಾಗಿರಬಹುದು. ಆದರೆ ಷಟ್‌ಕೋಶಗಳನ್ನು ಸರ್ವಥಾ ಶಾರೀರಿಕ–ಭೌತಿಕ ಅರ್ಥದಲ್ಲಿ ತೆಗೆದುಕೊಳ್ಳಲಾಗುತ್ತದೆ. ಆದರೆ ಪಂಚಕೋಶಗಳ ವ್ಯಾಖ್ಯೆ ಆಧ್ಯಾತ್ಮಿಕ ಶರೀರದೊಡನೆ ಸಂಬದ್ಧವಾಗಿದೆ. ಯಥಾ ಅನ್ನಮಯಕೋಶ, ಪ್ರಾಣಮಯಕೋಶ, ಮನೋಮಯಕೋಶ ವಿಜ್ಞಾನಮಯಕೋಶ, ಆನಂದಮಯಕೋಶ. ಷಟ್ ಕೋಶಗಳು ಹೀಗಿವೆ.

ಪಿತೃಭ್ಯಾಮಶಿತಾದನ್ನಾತ್
ಷಟ್‌ಕೋಶಂ ಜಾಯತೇ ವಪುಃ ।
ಸ್ನಾಯವೋಽಸ್ಥೀನಿ ಮಜ್ಜಾ ಚ
ಜಾಯತೇ ಪಿತೃತಸ್ತಥಾ ॥

ತ್ವಙ್‌ಮಾಂಸಂ ಶೋಣಿತಮಿತಿ
ಮಾತೃತಶ್ಚ ಭವಂತಿ ಷಟ್ ।

(ಶಿವಗೀತೆ)

ದಶೇಂದ್ರಿಯಗಳ ವ್ಯಾಖ್ಯೆಮಾಡುವ ಸಮಯದಲ್ಲಿ ಭಟಾರ ಶಿವರು ಇಂದ್ರಿಯಗಳು ಮತ್ತು ಇಂದ್ರಿಯಗಳ ಆಧಾರಭೂತ ಸ್ಥಾನಗಳ ಭೇದವನ್ನು ಸ್ಪಷ್ಟಗೊಳಿಸುತ್ತಾರೆ. ಕಿವಿಗಳು ಆಧಾರ (=ಗೋಲಕ) ವಾಗಿವೆ. ಕರ್ಣೇಂದ್ರಿಯ ಆದಕ್ಕಿಂತ ಭಿನ್ನ. ಕಿವಿಯಿದ್ದೂ ಕೂಡ ಕಾರಣವಶಾತ್ ವ್ಯಕ್ತಿ ಕೇಳಲಾರ. ಆಧಾರವಂತೂ ಇದೆ ಅರ್ಥಾತ್ ಕರ್ಣಗಳಿವೆ. ಆದರೆ ಕರ್ಣೇಂದ್ರಿಯ ಇಲ್ಲ. ಭಾರತೀಯ ಸಾಹಿತ್ಯದಲ್ಲಿ, ಆಧಾರ ಮತ್ತು ಆಧೇಯದ ಈ ಭೇದವನ್ನು ಇಷ್ಟು ಸ್ಪಷ್ಟರೂಪದಿಂದ ಹೇಳುವ ಅವಶ್ಯಕತೆಯಿದೆ ಎಂಬುದಾಗಿ ಸಂಭವತಃ ಎಂದೂ ಮನಗಾಣಲಿಲ್ಲ. ಕೇವಲ 'ಶಬ್ದತನ್ಮಾತ್ರೇ ಶಕ್ತಮಿಂದ್ರಿಯಂ ಶ್ರೋತ್ರಮುಚ್ಯತೇ' (ವೇದಾಂತ ಕಾರಿಕಾವಳಿ) ಎಂದು ಹೇಳಿ, ಭೇದ ಎಣಿಸುವುದು—ಬಿಡುವುದನ್ನು ಪಾಠಕನಿಗೆ ಬಿಟ್ಟು ಬಿಡಲಾಯಿತು. 'ಆಧಾರ'ಕ್ಕೆ ಜಾವೀಯಲ್ಲಿ 'ಗೋಲಕ' ವೆಂಬುದು ನವೀನ ಶಬ್ದ. ಇದನ್ನು ನಾವು ಸಂಸ್ಕೃತ ಶಬ್ದ ಗೋಲಕ'—ಇದರ ಸಾಮಾನ್ಯ ಅರ್ಥ ಕಣ್ಣಿನ ಗೊಂಬೆ—ದ ಅರ್ಥ ವಿಸ್ತಾರ ಎಂದು ಭಾವಿಸಬಹುದು. ವೇದಾಂತ ಕಾರಿಕಾವಳಿಯ ಪ್ರಕೃತಿ ನಿರೂಪಣ ಅಧ್ಯಾಯ ಗೋಲಕ ಶಬ್ದದ ಪ್ರಯೋಗ ಈ ಪ್ರಕಾರವಿದೆ. 'ಚಕ್ಷುಃಶ್ರವಸಾ ನೇತ್ರಗೋ ಲೋಕವೃತ್ತಿ' ಯಾವ ರೀತಿ ಸಂಸ್ಕೃತದ ಪಿಂಡ ಶಬ್ದವು ಇದರ ಮೂಲ ಅರ್ಥ ಗೋಳ ಎಂದಿತ್ತು-ಶರೀರದ ಅರ್ಥ-ವಾಚಕವಾಗಿ ಬಿಟ್ಟಿತೊ ಅದೇ ರೀತಿ ಗೋಳ ಶಬ್ದವನ್ನು ಶರೀರದ ಅರ್ಥದ್ಯೋತಕವೆಂದು ಭಾವಿಸಿ, ಅದಕ್ಕೆ ಹ್ರಸ್ವಾರ್ಥ'ಕ' ಸೇರಿಸಿ, ಗೋಲಕದ ಅರ್ಥ

ಶರೀರದ ಅಂಗವೆಂದು ಸ್ವೀಕರಿಸಬಹುದು. ಗೋಲಕದ ಈ ರೋಚಕ ಅರ್ಥ ವಿಸ್ತಾರವು ನಮ್ಮ ಪ್ರಸಂಗಕ್ಕೆ ಸರ್ವಥಾ ಅನುಕೂಲವಾಗಿದೆ. ಈ ಇಂದ್ರಿಯಗಳಿಂದ ಸಂಯುಕ್ತನಾದ ಮಾನವನು ಭೋಗ ಬಯಸುತ್ತಾನೆ. ಅವನ ಆತ್ಮ (ಪುರುಷ) ಈ ಸಂಸಾರ ಚಕ್ರದಲ್ಲಿ ಸಿಲುಕಿಕೊಂಡಿರುತ್ತದೆ. ಶರೀರವು ಶಕಟೋಪಮವಾಗಿ ಬಿಡುತ್ತದೆ. ಆತ್ಮವು ವೃಷಭದಂತೆ. ಮೇಲೆ ಈಶ್ವರರು ಚಾಲಕರಾಗಿ ದ್ದಾರೆ. ಈ ಜಗತ್ತು ಚಕ್ರದಂತೆ ಸುತ್ತುತ್ತಿ ರುತ್ತದೆ. ಬೃಹಸ್ಪತಿ ತತ್ತ್ವದ ೩೪ನೇ ಶ್ಲೋಕದ್ದ ಈ ಉಪಮೆ. ಇದರಲ್ಲಿ ಗ್ರಂಥದ ದೃಷ್ಟಾಂತಗಳು ಮತ್ತು ಉಪಮೆಗಳ ಮೂಲಕ, ಗುಪ್ತ ಆಧ್ಯಾ ತ್ಮಿಕ ಸ್ಥಳಗಳನ್ನು ಸರಳ ಸುಬೋಧ ರೂಪದಿಂದ ಪಾಠಕರು ಹಾಗೂ ಶ್ರೋತೃಗಳಿಗೆ ಬುದ್ಧಿಗಮ್ಯ ವಾಗಿಸಿ ಬಿಡುವ ಪ್ರವೃತ್ತಿಯ ಛಾಯೆ ಕಂಡು ಬರುತ್ತದೆ. ಬೃಹಸ್ಪತಿಯ ಪ್ರತಿಯೊಂದು ಕಠಿಣ ಮತ್ತು ದಾರ್ಶನಿಕ ಸ್ಥಳವು ಈ ತರಹದ ದೃಷ್ಟಾಂತಗಳಿಂದ ಪರಿಪೂರ್ಣವಾಗಿದೆ. ಇದು ಬೃಹಸ್ಪತಿಯ ಮಹತ್ವಪೂರ್ಣ ವಿಶೇಷತೆ. ಗಣ ಪತಿತತ್ವದಲ್ಲಿ ಭಟಾರ ಶಿವರು ಗಣಪತಿಗಳಿಗೆ ಕೇವಲ ತಥ್ಯದ ನಿರೂಪಣೆಮಾಡುತ್ತಾ ಹೋಗು ತ್ತಾರೆ. ದೃಷ್ಟಾಂತಗಳು ಅಥವಾ ಉಪಮೆಗಳ ಮೂಲಕ ತಿಳಿಯಪಡಿಸುವ ಪ್ರಯಾಸವಿಲ್ಲ. ಬೃಹ ಸ್ಪತಿಯು ಸಂಭವತಃ ಪ್ರಚಲಿತ ಮತ್ತು ಲೋಕ ಪ್ರಿಯದರ್ಶನ ಗ್ರಂಥವಾಗಿದ್ದು ಕೊಂಡಿದೆ. ಇದ ರದೇ ಆಧಾರದ ಮೇಲೆ ದ್ವಿಪಾಂತರದ ಆಧು ನಿಕ ಭಾಷೆಯಾದ ಬಹಾಸಾದಲ್ಲಿ ಇಂಡೋನೇಷಿ ಯಾದಲ್ಲಿ ಬರೆಯಲಾದ, 'ಅಜಿಸಾಂಖ್ಯ' ಎಂಬುದು ಇದರ ಲೋಕಪ್ರಿಯತೆಗೆ ಒಂದು ಪ್ರಮಾಣವೆಂದು ಭಾವಿಸಲು ಬರುತ್ತದೆ. ಶ್ಲೋಕದ ಪದಗಳಲ್ಲಿ ಉಪಮೆಯಿಂದ ವಿಭೂ ಷಿತ ದಾರ್ಶನಿಕ ತಥ್ಯದ ಅಭಿವ್ಯಕ್ತಿ ಈ ರೀತಿ ಪ್ರಸ್ಫುರಿತವಾಗಿದೆ.

> ಶಕಟೋಪಮಂ ಪ್ರಧಾನಂ ತು
> ಪುರುಷೋ ವ್ಯಾಷಭೋಪಮಃ|
> ಈಶಸಾರಥಿ ಸಂಯುಕ್ತಂ ಜಗದ್
> ಭ್ರಮಿತ ಚಕ್ರವತ್||

ಇಷ್ಟೇ ಅಲ್ಲ ಅಂತಃಕರಣ ಮತ್ತು ಇಂದ್ರಿಯ ಗಳದ್ದೂ ಕೂಡ ಈ ಮಾನವ ಮೋಕ್ಷದ ಪ್ರತಿ ರೋಧದಲ್ಲಿ ಬಹಳ ದೊಡ್ಡ ಕೈವಾಡವಿದೆ —

> ಪ್ರಧಾನಂ ಪ್ರಾಸಾದೇತ್ಯುಕ್ತ
> ಯಂತಾ ಮಂತ್ರೀ ಪ್ರಕೀರ್ತಿತಃ|
> ಶೂಪ್ರಮಿಂದ್ರಿಯ ಮಾಹುರ್ವೈ
> ವಿಷಯಾ ಭೋಗವತ್ತುಖಂ||

ಇಲ್ಲಿ ಒಂದು ಸಹಜ ಪ್ರಶ್ನೆ ಏಳುತ್ತದೆ. ಶರೀರದಲ್ಲಿ ಆತ್ಮವನ್ನು ಬಿಗಿದುಹಾಕುವ ಶೃಂಖಲೆ ಗಳಾವುವು? ಮೋಕ್ಷಪ್ರಾಪ್ತಿ ಗಳಿಸಿಕೊಳ್ಳಲು ಇವುಗಳಿಂದ ಬಂಧನ ಮುಕ್ತರಾಗುವುದು ಹೇಗೆ? ಪುನಶ್ಚ ಈ ಶೃಂಖಲೆಗಳಿಂದ ಮುಕ್ತರಾಗಲು ಇರುವ ಮಾರ್ಗಗಳಾವುವು? ಬೃಹಸ್ಪತಿಯ ಈ ಗಹನ ಸಮಸ್ಯೆಯನ್ನು ಭಟಾರರು ನಿಧಾನವಾಗಿ ಕ್ರಮಶಃ ಬಿಡಿಸುತ್ತಾ ಹೋಗುತ್ತಾರೆ. ಹತ್ತು ಮುಖ್ಯನಾಡಿಗಳು ಶರೀರ ಮತ್ತು ಆತ್ಮವನ್ನು (ಪರ ಸ್ಪರ)ಬಂಧಿಸಿ ಕಟ್ಟಿಹಾಕಿ ಬಿಡುತ್ತವೆ. ಇವು ಇಡಾ, ಪಿಂಗಲಾ, ಸುಷುಮ್ನಾ, ಗಾಂಧಾರಿ, ಹಸ್ತಿಜಿಹ್ವಾ, ಪೂಷಾ, ಯಶಾ, ಅಲಂಬುಷಾ, ಕುಹೂ ಮತ್ತು ಶಂಖಿನಿಗಳೆಂಬ ಪ್ರಾಣವಹ ನಾಡಿಗಳು. ಇವು ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ಎಂಬ ಹತ್ತು ಪ್ರಾಣಗಳ ವಾಹಕಗಳಾಗಿವೆ. ಇವು ಗಳ ದೃಢಬಂಧನದಲ್ಲಿ ವಿಶ್ರಾಂತವಾದ ಆತ್ಮವು ಬೇರೆ ಲೋಕಕ್ಕೆ ಹೋಗ ಬಯಸುತ್ತದೆ. ಅಲ್ಲಿಗೆ ಹೋಗಲು ಐದು ಪದಗಳಿವೆ. ಐದನೇಯ

ಪದವೇ ಮೋಕ್ಷ. ಇದನ್ನು ತಲಪಲು ಆತ್ಮಕ್ಕೆ ಮುಂಚಿನ ನಾಲ್ಕು ಪದಗಳನ್ನು ಪಾರುಮಾಡಬೇಕಾಗುತ್ತದೆ. ಸಂಸ್ಕೃತ ಸಾಹಿತ್ಯದಲ್ಲಿ ಸಾಮಾನ್ಯತಃ ಪದದ ಸ್ಥಾನದಲ್ಲಿ ಪ್ರಯೋಗವಾಗಿರುವುದು ಅವಸ್ಥೆ(ಸ್ಥಿತಿ) ಎಂಬ ಶಬ್ದ. ಆದರೆ ಕಾಶ್ಮೀರದ ಶೈವಗ್ರಂಥವಾದ ತಂತ್ರಾಲೋಕ (೧೦-೨೨೮-೨೨೯) ದಲ್ಲಿ ಇವುಗಳನ್ನು, ಬೃಹಸ್ಪತಿಯಂತೆಯೇ, 'ಪಂಚಪದ' ಎಂದೆನ್ನಲಾಗಿದೆ. ಈ ಪಂಚಪದಗಳಾವುವೆಂದರೆ—ಜಾಗ್ರತ್ ಪದ, ಸ್ವಪ್ನಪದ, ಸುಷುಪ್ತಪದ, ತುರ್ಯಪದ ಮತ್ತು ತುರ್ಯಾತೀತಪದ. ಜಾಗ್ರಪದವು ಜಾಗ್ರತ್ಪದ ತುರ್ಯಂತಪದದ ಅಭಿಪ್ರಾಯವೇನೆಂದರೆ ತುರ್ಯಾತೀತಾವಸ್ಥೆ. ಶ್ಲೋಕದಲ್ಲಿ ಇದಕ್ಕೆ ನಿರ್ವಾಣ ಎಂದೆನ್ನಲಾಗುವುದು. ಜಾಗ್ರಪದ, ಸ್ವಪ್ನ ಮತ್ತು ಸುಷುಗ್ತಪದಗಳೇ 'ಆತ್ಮಸಂಸಾರ.' ಇವುಗಳಲ್ಲೇ ಮನುಷ್ಯ ಸುತ್ತಾಡುತ್ತಿರುತ್ತಾನೆ. ತುರ್ಯಪದವು ಆತ್ಮಸಿದ್ಧಿ. ತರ್ಯಾಂತಪದವು ಜೀವನ್ಮುಕ್ತಿ. ಭಟಾರರು ಈ ಪಂಚಪದಗಳಿಗೆ ದಾರ್ಶನಿಕ ವ್ಯಾಖ್ಯೆ ನೀಡುತ್ತಾರೆ. ಬೃಹಸ್ಪತಿಗಳ ಮನಸಿನಲ್ಲಿ ಅನೇಕ ಪ್ರಶ್ನೆಗಳೇಳುತ್ತವೆ. ಯಥಾ ಮೋಕ್ಷಕ್ಕೆ ಕಾರಣ ಅಚೇತನ. ಏಕೆಂದರೆ ಚೇತನವು (ಮೋಕ್ಷ) ಅಚೇತನದಿಂದ ಹೊರಡುತ್ತದೆ. 'ತನ'ದ ಅರ್ಥ—ಸುಖದುಃಖಮಯ ಜಗತ್ತಿನ ಅನುಭೂತಿ ಪಡೆದುಕೊಳ್ಳುವುದು. ಆದ್ದರಿಂದ ಚೇತನವನ್ನು ವಿಶೇಷ ಎಂದೆನ್ನುವುದು ಎಲ್ಲಿಯವರೆಗೆ ಉಚಿತ? ವಾಸ್ತವವಾಗಿ ಅಚೇತನವು ವಿಶೇಷ ಎಂದೆನಿಸಿಕೊಳ್ಳಬೇಕು. ಏಕೆಂದರೆ ಅದು ಜಗತ್ತನ್ನಾಗಲಿ, ಸುಖ-ದುಃಖಗಳನ್ನಾಗಲಿ ಅನುಭವಿಸುವುದಿಲ್ಲ. ಭಟಾರರು ಈ ತರ್ಕಯುಕ್ತ ಪ್ರಶ್ನೆಗೆ ಏನು ಉತ್ತರ ಕೊಟ್ಟರೋ ಅದರ ಸಾರಾಂಶ ಹೀಗಿದೆ—ಚೇತನವು ಅಚೇತನವನ್ನರಸುತ್ತದೆ. ಅಚೇತನವು ಮನೆ ಕಟ್ಟಬಹುದಾದಂತಹ ಆ ಮಣ್ಣಿಗೆ ಸಮಾನ. ಮನೆಯನ್ನು ನಿರ್ಮಿಸುವಂತಹುದು ಭಟಾರರ ಚೇತನ. ಅಚೇತನವು ಯಾವುದಕ್ಕೆ ಅದು ರೂಪುಕೊಡುತ್ತದೋ ಅದು ಪಾತ್ರಾದಿಗಳ ನಿರ್ಮಾಣ ಅದರ ಅರ್ಥಾತ್ ಚೇತನದ ಇಚ್ಛೆಯನ್ನವಲಂಬಿಸಿದೆ. ಈ ಕುಂಬಾರನಿಗೆ ಸಮಾನವಾಗಿಯೇ ಭಗವಂತರಿದ್ದಾರೆ. ಅವರು ಅಚೇತನಕ್ಕೆ ತಮ್ಮ ಇಚ್ಛಾನುಕೂಲ ರೂಪ ಕೊಡುತ್ತಾರೆ. ಅಚೇತನದ ಸ್ವಭಾವ ಚೇತನಹೀನ. ಆದ್ದರಿಂದ ಅದನ್ನು ಪರಮಾರ್ಥ ಅಥವಾ ವಿಶೇಷ ಎಂದು ಹೇಳುವುದು ಉಪಯುಕ್ತವಲ್ಲ. ಆದರೆ ಇನ್ನೂ ಬೃಹಸ್ಪತಿಗಳ ಪ್ರಶ್ನೆ ಉಳಿದಿದೆ. ಅಚೇತನವಂತೂ ಆಕಾರ ರಹಿತ. ಆದ್ದರಿಂದ ಅದಕ್ಕೆ ರೂಪ ಕೊಡುವುದು ಹೇಗೆ ಸಾಧ್ಯ? ಆದ್ದರಿಂದ ಅಸತ್ ಇದು ಅಚೇತನ ಎನ್ನುವುದೇ ವಿಶೇಷವಾಗಬೇಕು. ಭಟಾರರು ಇದಕ್ಕೆ ಹೀಗೆ ಸಮಾಧಾನ ಕೊಡುತ್ತಾರೆ. ಅಸತ್ ಎನ್ನುವುದೇನಾದರೂ ವಿಶೇಷವಾದ ಪಕ್ಷಕ್ಕೆ, ಈ ಸತ್-ಸಂಸಾರದ ಉತ್ಪತ್ತಿ ಅದರಿಂದಾಯಿತು ಎಂದು ಹೇಗೆ ಹೇಳಲಾಗುತ್ತದೆ? ಐತರೇಯ ಬ್ರಾಹ್ಮಣದ ಪ್ರಸಿದ್ಧ ವಾಕ್ಯವಿದು 'ಕಥಂ ಅಸತಃ ಸಜ್ಜಾಯೇತ|' ಈ ರೀತಿ ಸತ್ ಎಂಬುದು ಅಸತ್ ಮತ್ತು ಪುನಃಸತ್ ಆಗಬಲ್ಲದು. ವಿಶೇಷವು ಇದೇ ತರಹದ ಗುಹ್ಯವಾಗಿದೆ. ಪರಮಾರ್ಥದ ಸ್ವರೂಪ ಹೀಗಿದೆ.

ಸದ್ಭಾವೇನ ಪರಿತ್ಯಕ್ತಮಸದ್ಭಾವ ವಿವರ್ಜಿತಂ|
ಸದಸದ್ಭಾವರಹಿತಂ ನಿಷಕಾಂತಮಲಕ್ಷಣಂ||

ವಿಶೇಷದ ಈ ಸದಸತ್-ಸತ್ತೆಯ ದೃಷ್ಟಾಂತ ಈ ರೀತಿಯಿದೆ. ಯಾವ ತರಹ ಹಾಲಿನಲ್ಲಿ ಬೆಣ್ಣೆ, ದಾರುವಿನಲ್ಲಿ ಅಗ್ನಿ, ಮೇಘಗಳಲ್ಲಿ ಜಲ, ಆಕಾಶದಲ್ಲಿ ವಾಯು ಅದೃಶ್ಯವಿದೆಯೋ, ಅದೇ ತರಹ ಮನ, ರಜ ಮತ್ತು ತಮಗಳು ಮನುಷ್ಯನಲ್ಲಿವೆ. ಅವು ಸತ್‌ಗಳಾಗಿದ್ದುಕೊಂಡೂಕೂಡ ಅಸತ್

ಗಳೇ ಏಕೆಂದರೆ ಅವು ಈ ಬಾಹ್ಯಜಗತ್ತಿನಲ್ಲಿ ಅದೃಶ್ಯವಾಗಿದೆ.—

ಯದ್ ಘೃತಂ ಪಯಸಿ
ಹರಿಶ್ಚ ಯದ್ಧಾರುಷು ಕ್ಷಿತಿಃ
ಜಲಂ ನಭಃಸ್ಥಿತಂ ಸರ್ವ ಗೋಽನಿಲಃ|
ರಜಸ್ತಮೋಽದೃಶ್ಯಂ ಮನೋ
ನರೇ ಸನ್ನ ಸತ್ತಥಾ
ಬಾಹ್ಯೇ ಜಗತಿ ತನ್ನೋಪಲಭ್ಯತೇ||

ಚೇತನ, ಅಚೇತನ, ಮಾಯಾತತ್ವ ಮತ್ತು ಪುರುಷನ ಸ್ವಭಾವಗಳು ಮತ್ತು ಅವುಗಳ ಪಾರಸ್ಪರಿಕ ಸಂಬಂಧಗಳನ್ನು ಕುರಿತು ವಿವೇಚನೆ ಮಾಡಲಾಗಿದೆ. ನಂತರ ಶರೀರ ಮತ್ತು ಆತ್ಮಕ್ಕೆ ಬಂಧನ ಸ್ವರೂಪದಂತಿರುವ ಪ್ರಾಣಗಳಿಂದ ಮುಕ್ತ ಹೊಂದಬೇಕೆಂಬ ಇಚ್ಛುಕರು ಹಾಗೂ ಮೋಕ್ಷ ಜಿಜ್ಞಾಸುಗಳಿಗೋಸ್ಕರ ಮೂರು ಭಾಗಗಳ ನಿರೂಪಣೆಮಾಡಲಾಗಿದೆ. ಜ್ಞಾನಾಭ್ಯುದ್ರೇಕ, ಇಂದ್ರಿಯಗಳೊಡನೆ ಅಯೋಗದ ಮಾರ್ಗ ಮತ್ತು ತೃಷ್ಣಾದೋಷಕ್ಷಯ. ಜ್ಞಾನಿಯ ಜ್ಞಾನ–ವೃದ್ಧಿಯಾಗುವುದು ಮೂರು ಪ್ರಕಾರದಿಂದ ಗುರುತಃ, ಶಾಸ್ತ್ರತಃ, ಸ್ವತಃ. ಯೋಗೀಶ್ವರನು ಪ್ರಯೋಗ-ಸಂಧಿಯ ಪರಮ ರಹಸ್ಯವನ್ನು ಷಡಂಗಯೋಗ ದ್ವಾರಾ ಅರಿತುಕೊಳ್ಳುತ್ತಾನೆ. ಈ ಮೋಕ್ಷ ಮಾರ್ಗಗಳಿಗೆ ಮುನ್ನ ಬೃಹಸ್ಪತಿಗಳ ಮನಸ್ಸಿನಲ್ಲಿ ಶಂಕೆಯೊಂದಿದೆ. ಏನೆಂದರೆ ಜೀವನವು ಸುಖ ದುಃಖ ಭೋಗವನ್ನುಂಟುಮಾಡುತ್ತದೆ. ಅದು ಸಂಸಾರ. ಅದು ಬಂಧನ. ಮೃತ್ಯುವು ಮೋಕ್ಷ. ಏಕೆಂದರೆ ಸತ್ತನಂತರ ಮನುಷ್ಯನಿಗೆ ಯಾವ ತರಹದ ಶಾರೀರಿಕ ಅಥವಾ ಮಾನಸಿಕ ದುಃಖದ ಅನುಭವವಾಗದು. ಬೃಹಸ್ಪತಿಗಳ ಈ ಸಂದೇಹಕ್ಕೆ ಮೂಲವೇನೆಂದರೆ, ಏನೆಲ್ಲಾ ಕಂಡುಬರುತ್ತದೋ ಅದನ್ನೇ ಸತ್ಯವೆಂದು ಭಾವಿಸಿಕೊಳ್ಳುವುದೇ. ಮನುಷ್ಯ ಸ್ವಭಾವದಿಂದ ಅಲ್ಪಜ್ಞ ಹಾಗೂ ಅಲ್ಪಾಯುಷ. ಅವನ ದೃಷ್ಟಿ ಬಹಳ ದೂರದವರೆಗೆ ಹೋಗದು. ಪ್ರತಿದಿನ ಉದಯಿಸುವ ಸೂರ್ಯ ಅವನಿಗೆ ಅದೇ ಒಂದಾಗಿ ಕಂಡು ಬರುತ್ತದೆ. ಆದರೆ ವಾಸ್ತವವಾಗಿ ಈ ತರಹವಲ್ಲ (ದ್ವಾದಶ ಸೂರ್ಯರಿದ್ದಾರೆ). ಮೃತ್ಯುವೇಳೆಯಲ್ಲಿ ಶರೀರವು ಪಂಚ ಮಹಾಭೂತಗಳ ಸ್ಥೂಲಶರೀರದಿಂದ ಅವಶ್ಯ ಮುಕ್ತವಾಗಿಬಿಡುತ್ತದೆ. ಆದರೆ, ಅದು ಪಂಚ ತನ್ಮಾತ್ರಗಳ ಸೂಕ್ಷ್ಮ ಶರೀರವಾಗಿ ಪರಿವರ್ತಿತಗೊಂಡುಬಿಡುತ್ತದೆ. ಪರಿಣಾಮತಃ, ಅದಕ್ಕೆ ಪುನರ್ಜನ್ಮವಾಗುತ್ತದೆ. ಹಾಗೂ ಅದು ತನ್ನ ಶುಭಾಶುಭ ಕರ್ಮಗಳ ಫಲವನ್ನನುಭವಿಸುತ್ತದೆ. ಅದು ಪೂರ್ವಜನ್ಮದಲ್ಲಿ ದುಷ್ಕರ್ಮಗಳನ್ನು ಮಾಡಿದ್ದ ಪಕ್ಷಕ್ಕೆ ನರಕ ಲೋಕಕ್ಕೆ ಹೋಗುತ್ತದೆ ಮತ್ತು ಪೂರ್ವಜನ್ಮದಲ್ಲಿ ಮಾಡಿದ ಸತ್ಕರ್ಮಗಳು ಅದನ್ನು ಸ್ವರ್ಗಕ್ಕೆ ಕರೆದೊಯ್ಯುತ್ತವೆ. ಅವನು ಈ ಮನುಷ್ಯಜನ್ಮದಲ್ಲಿ ಯೋಗ ಮಾಡಿದರೆ, ಮೃತ್ಯುವಿನ ಅನಂತರ ಯಾವಾಗ ಅವನು ಪುನರ್ಜನ್ಮ ಪಡೆಯುತ್ತಾನೋ ಆಗ 'ಯೋಗೀಶ್ವರತ್ವ'ವನ್ನು ಪಡೆದುಕೊಳ್ಳಬಲ್ಲ. ಯೋಗೀಶ್ವರತ್ವದ ಅರ್ಥ ಭಿಕ್ಷುಗಳಲ್ಲಿ ವಿಶಿಷ್ಟ ಸ್ಥಾನ. ಅವನು ಮೂರು ತರಹದ ಯೋಗಿಯಾಗಬಲ್ಲ. ಕರ್ಮಯೋಗಿ, ಜ್ಞಾನಯೋಗಿ ಮತ್ತು ಯೋಗಿ. ಕರ್ಮಯೋಗಿಯ ಅರ್ಥ ಜಪ, ಪೂಜೆ ಪಾಠ, ವ್ರತ ಮುಂತಾದ ಕರ್ಮಗಳನ್ನು ಮಾಡುವುದು. ಜ್ಞಾನಯೋಗಿಯ ಅರ್ಥ ಗುರುತಃ, ಶಾಸ್ತ್ರತಃ, ಸ್ವತಃ ಉಪಾಯಗಳ ಮೂಲಕ ಭಗವದ್ ಜ್ಞಾನ ವೃದ್ಧಿಯಲ್ಲಿ ನಿರತನಾಗಿರುವುದು. ಯೋಗಿಯ ಅರ್ಥ ಷಡಂಗ ಯೋಗದಿಂದ ಆತ್ಮಸಿದ್ಧಿ (ಜೀವನ್ಮುಕ್ತಿ) ಪಡೆಯುವುದು. ಇದಾದನಂತರ ಷಡಂಗಯೋಗದ ಬಗ್ಗೆ ವಿಸ್ತೃತ ವರ್ಣನೆಯಿದೆ.

ಪ್ರತ್ಯಾಹಾರಸ್ತಥಾ ಧ್ಯಾನಂ
ಪ್ರಾಣಾಯಾಮಶ್ಚ ಧಾರಣಂ|
ತರ್ಕಶ್ಚೈವ ಸಮಾಧಿಶ್ಚ ಷಡಂಗೋ
ಯೋಗ ಉಚ್ಯತೇ ||

ಸಂಸ್ಕೃತ ಸಾಹಿತ್ಯದಲ್ಲಿ ಪತಂಜಲಿಗಳ ಯೋಗ ದರ್ಶನ–ಕಾಲದಿಂದ ಅಷ್ಟಾಂಗ ಯೋಗದ ಪ್ರಚಲನೆಯಿದ್ದಿದೆ. ಯಮನಿಯಮಗಳು ಯೋಗ ಭಾಗಗಳಾಗಿದ್ದುಕೊಂಡಿವೆ. ತೇಜೋಬಿಂದೂಪನಿಷತ್ತಿನಲ್ಲಿ ಪಂಚ ದಶಾಂಗಯೋಗ ಸಿಕ್ಕುತ್ತದೆ. ಇದರಲ್ಲಿ ಯಮನಿಯಮಗಳು ಎರಡು ಯೋಗ ನಾಮಗಳು. ಅಷ್ಟಾಂಗಯೋಗದಿಂದ ಯಮನಿಯಮವನ್ನು ತೆಗೆದುಬಿಟ್ಟರೆ ಷಡಂಗಯೋಗ ಉಳಿದುಕೊಂಡುಬಿಡುತ್ತದೆ. ಸಂಸ್ಕೃತದಲ್ಲಿ ಧ್ಯಾನಬಿಂದೂಪನಿಷತ್ತು, ಯೋಗಚೂಡಾಮಣ್ಯುಪನಿಷತ್ತು ಮತ್ತು ಗೋರಖಪಂಥಿಗಳ ಗೋರಕ್ಷನಾಥ ವಿರಚಿತ ಯೋಗಮಾರ್ತಾಂಡಗಳು ಈ ಮಾತಿಗೆ ಪುಷ್ಟಿ ಕೊಡುತ್ತವೆ. ಇವುಗಳಲ್ಲಿ ತರ್ಕಯೋಗದ ಸ್ಥಳದಲ್ಲಿ ಆಸನ ಯೋಗದ ನಿರೂಪಣೆಯಿದೆ. ಕೇವಲ ಅಮೃತನಾದೋಪನಿಷತ್ತಿನ ಷಡಂಗಗಳು ಬೃಹಸ್ಪತಿಗೆ ಸಮನಾಗಿಯೇ ಇವೆ. ಇದೊಂದೇ ಇಂತಹ ಉಪನಿಷತ್ತು ಸಿಕ್ಕಿರುವುದು. ಕಾಶ್ಮೀರದ ಶೈವಗ್ರಂಥಗಳಲ್ಲಿ ತರ್ಕವನ್ನು ಯೋಗಾಂಗವೆಂದು ಸ್ವೀಕರಿಸಲಾಗಿದೆ. ತಂತ್ರಾಲೋಕ ೧–೧೩, ಮೃಗೇಂದ್ರತಂತ್ರ ಯೋಗಪಾದ ೧–೧೮ ರಲ್ಲಿ ಇದನ್ನು ಉತ್ಕೃಷ್ಟ ಯೋಗಾಂಗವೆಂದೆನ್ನಲಾಗಿದೆ. ಕಾಶ್ಮೀರದ ಶೈವಗ್ರಂಥವಾದ ಮಾಲಿನೀವಿಜಯವೂ ಸಹ 'ತರ್ಕೋ೯ ಯೋಗಾಂಗಮುತ್ತಮಂ' ಎಂಬುದರ ಮೂಲಕ ತರ್ಕದ ಯೋಗತ್ವವನ್ನು ಪುಷ್ಟೀಕರಿಸುತ್ತದೆ. ಇವುಗಳಲ್ಲದೆ ಸ್ವಾಯಂಭುವ ಪುರಾಣದಲ್ಲಿ ಇದರ ಮಹಿಮೆಯನ್ನು ಈ ರೀತಿ ವರ್ಣಿಸಲಾಗಿದೆ.

ಅನೇನ ಲಕ್ಷಯೇದ್ಯೋಗೀ
ಯೋಗಸಿದ್ಧಿಪ್ರವರ್ತಕಂ |
ನಿರೋಧಕಂ ಚ ಯದ್ವಸ್ತು
ಬಹುಧಾ ಸಂವ್ಯವಸ್ಥಿತಂ ||

ದ್ವೀಪಾಂತರದಲ್ಲಿ ಷಡಂಗಯೋಗವೇ ಪ್ರಚಲಿತವಿದೆ. ಬೌದ್ಧಗ್ರಂಥ 'ಸಂಹ್ಯಂಕಮಹಾಯಾನಿಕನ್' ಎಂಬುದರಲ್ಲಿ ಕೂಡ ಷಡಂಗಯೋಗವಿದೆ. ಬೃಹಸ್ಪತಿಯ ಶ್ಲೋಕಗಳು ಹೇಗಿವೆಯೋ ಅಲ್ಲಿಯೂ ಸಹ ಹಾಗೆಯೇ ಇವೆ. 'ಗಣಪತಿ ತತ್ವ' ದಲ್ಲಿಯೂ ಸಹ ಅಲ್ಲಲ್ಲಿ ಕಿಂಚಿತ್ ಪರಿವರ್ತನೆಗಳೊಂದಿಗೆ ಇರುವ ಶ್ಲೋಕಗಳು ಇವೇ. ಟೀಕೆಗಳಲ್ಲಿ ಸ್ವಲ್ಪ ಹೆಚ್ಚು ಭೇಧವಿದೆ. ಆದರೆ ಅದು ನಗಣ್ಯ. ಕವಿಭಾಷೆಯ 'ಅಗಸ್ತ್ಯ ಪರ್ವ' ದಲ್ಲಿಯೂ ಸಹ ಪಂಚಯೋಗಗಳು ಈ ರೀತಿ ಉಲ್ಲೇಖಿಸಲ್ಪಟ್ಟವೆ–ಇನುಂ-ಪಾಯ ತ ಯ ರಿಂ ಧ್ಯಾನ,ಧಾರಣ, ತರ್ಕ, ಪ್ರತ್ಯಹಾರ, ಸಮಾಧಿ, ಯೋಗ.... ನಿಸ್ಸಂದೇಹವಾಗಿ ಇಲ್ಲಿನ ಅಭಿಪ್ರಾಯ ಷಡಂಗಯೋಗವೆಂದೇ ಪ್ರಾಣಾಯಾಮವನ್ನು ಜೋಡಿಸಿಬಿಡುವುದರಿಂದ ಇದು ಷಡಂಗಯೋಗವಾಗಿಬಿಡುವುದು. ಬೃಹಸ್ಪತಿತತ್ತ್ವದಲ್ಲಿ ಯಮ ಮತ್ತು ನಿಯಮಗಳು 'ದಶಶೀಲ' ದೊಳಗೆ ಬರುತ್ತವೆ. ಯಮ ಮತ್ತು ನಿಯಮಕ್ಕೆ 'ದಶಶೀಲ' ದ ಪ್ರಯೋಗವಂತೂ ಎಲ್ಲಿಯೂ ದೊರಕಲ್ಲಿಲ್ಲ. ಕೇವಲ ಕಾಶ್ಮೀರ ಶೈವ ಗ್ರಂಥ ಸ್ವಚ್ಛಂದ ತಂತ್ರದಲ್ಲಿ 'ದಶಶೀಲ' ಕ್ಕೆ 'ದಶವಿಧ ಧರ್ಮ' ಎಂಬ ಶಬ್ದ ಪ್ರಯೋಗವಾಗಿದೆ.

ತಿಬ್ಬತ್ ಅರ್ಥಾತ್ ಭೋಟ್‌ದಲ್ಲಿಯೂ ಕೂಡ ಷಡಂಗಯೋಗ ಪ್ರಾಪ್ತವಾಗುತ್ತದೆ. ತಂಜಾರಿನ ರ್‌ಗ್ಯುದ್ ಅರ್ಥಾತ್ ತಂತ್ರಭಾಗದಲ್ಲಿ ಇದನ್ನು ಕುರಿತ ಅನೇಕ ಗ್ರಂಥಗಳು ಹಾಗೂ ಟೀಕೆಗಳಿವೆ. ಅವುಗಳ ಪೈಕಿ ಉದಾಹರಣಾರ್ಥ ಕೆಲವದರ ಶೀರ್ಷಕಗಳನ್ನು ಇಲ್ಲಿ ಕೊಡಲಾಗುತ್ತದೆ. ಶ್ರೀ

ಕಾಲಚಕ್ರೋಪದೇಶಯೋಗ ಷಡಂಗತಂತ್ರ ಪಂಜಿಕಾನಾಮ, ಷಡಂಗಯೋಗೋಪದೇಶ, ಷಡಂಗಯೋಗಾಲೋಕಕ್ರಮ, ಷಡಂಗಯೋಗ ನಾಮಟೀಕಾ ಇತ್ಯಾದಿ. ಕೇವಲ ತ್ರಿಪಿಟಕದಲ್ಲೇ ಅಲ್ಲ. ಅದಕ್ಕೆ ಹೊರಗೂ ಸಹ ಷಡಂಗಯೋಗದ ಮೇಲೆ ಅನೇಕಾನೇಕ ಗ್ರಂಥಗಳಿವೆ. ಯಥಾ ಷಡಂಗಯೋಗ ವಜ್ರಗಾಥಾ ಮತ್ತು ಅದರ ಮೇಲಿನ ಟೀಕೆ, ಕಾಲಚಕ್ರೋತ್ಪನ್ನದ ಷಡಂಗ ಯೋಗ ಮುಂತಾದವು. ಇವುಗಳ ಶೀರ್ಷಕೆಗಳು ಸಂಸ್ಕೃತ ಶಬ್ದಗಳಲ್ಲಿವೆ. ಕಾಶ್ಮೀರದಲ್ಲಿ ಪ್ರಚಲಿತ ಷಡಂಗಯೋಗವು ಒಂದು ಕಡೆ ಹಿಮಾಲಯ ವನ್ನು ಪಾರುಮಾಡಿ ಭೋಟ್ (ತಿಬ್ಬತ್) ದೇಶ ವನ್ನು ತಲಪಿತು. ಮತ್ತೊಂದು ಕಡೆ ಸಮುದ್ರ ಯಾತ್ರೆ ಕೈಗೊಂಡು ದ್ವೀಪಾಂತರವನ್ನು ಸೇರಿ ತೆಂದು ಹೇಳಲು ಬರುತ್ತದೆ. ಕೇವಲ ಷಡಂಗ ಯೋಗವೇ ಅಲ್ಲ; ಕೆಲವು ಅನ್ಯ ಸ್ಥಲಗಳೂ ಸಹ ಕಾಶ್ಮೀರ ಶೈವಕ್ಕೆ ಹೆಚ್ಚು ಸಮಿಾಪದಲ್ಲಿವೆ. ಉದಾ ಹರಣಾರ್ಥ ಬೃಹಸ್ಪತಿ ತತ್ತ್ವದ ಶ್ಲೋಕ ೭ರಿಂದ ೧೦ ರವರೆಗಿನ ಸದೃಶಸ್ಥಲವು, ಕಾಶ್ಮೀರ ವಿರಚಿತ ನೇತ್ರತಂತ್ರದ ದ್ವಿತೀಯ ಪಟಲದ ೨೦ ರಿಂದ ೨೯ ರವರಗಿನ ಶ್ಲೋಕದ ವರೆಗಿದೆ. ವಿಚಾರದ ಪರಂ ಪರೆಯಷ್ಟೇ ಅಲ್ಲ, ಬದಲು ಬೃಹಸ್ಪತಿಯ ೭ ನೇ ಶ್ಲೋಕದ ಪೂರ್ವಾರ್ಧವು ನೇತ್ರತಂತ್ರದ ೨-೨೦ರ ಉತ್ತರ್ಧವಾಗಿದೆ. 'ಅಪ್ರಮೇಯಮನಿರ್ದೇಶ್ಯ ಮನೌಪಮ್ಯಮನಾಮಯಮಂ' ಹತ್ತು ನಾಡಿಗಳ ಗಣನೆ ಮಾಡುವ ಸಂದರ್ಭದಲ್ಲಿ ಒಂದು ನಾಡಿಯ ಹೆಸರು 'ಯಶಾ' ಎಂದಿದೆ. ಸಾಮಾನ್ಯವಾಗಿ ಇದಕ್ಕೆ ಬದಲು ಪ್ರಚಲನೆಯಲ್ಲಿರುವುದು ಯಶ ಸ್ವಿನೀ ಎಂಬುದು ಸ್ವಚ್ಛಂದತಂತ್ರ ೭। ೧೫-೧೬ ರಲ್ಲಿ 'ಯಶಾ' ವೆಂಬ ಪಾಠಾಂತರವಿದೆ. ಶ್ಲೋಕ ೨೯ರಿಂದ ೩೨ ರವರೆಗೆ ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯದ ಫಲಗಳು ಹೀಗಿವೆ–

> ಸ್ವರ್ಗಂ ಧರ್ಮೇಣ ಗಮನಂ ಜ್ಞಾನೇನ ಮೋಕ್ಷಪದಂ ಸಮಾಸಾದ್ಯ, ವೈರಾಗ್ಯಾತ್-ಪ್ರಕೃತೌ ಲೀನಃ ಐಶ್ವರ್ಯಾಯೇಪ್ರತಿಹತಃ।

ಮೃಗೇಂದ್ರ ತಂತ್ರದ ೧। ೧೦-೨೯ನ್ನು ಕುರಿತ ನಾರಾಯಣ ಕಂಠರ ಟೀಕೆಯಲ್ಲಿ ಸಹ ಇದನ್ನೇ ಈ ಶಬ್ದಗಳಲ್ಲಿ ತಿಳಿಸಲಾಗಿದೆ.—

> ಧರ್ಮಾತ್‌ಸ್ವರ್ಗಃ, ಜ್ಞಾನಾನ್ಮುಕ್ತಿಃ, ವೈರಾಗ್ಯಾತ್ ಪ್ರಕೃತಿಲಯಃ। ಐಶ್ವರ್ಯಾದವಿಘಾತಃ ಃ

ಇದೇ ಪ್ರಕಾರ, ಸ್ವಚ್ಛಂದ ತಂತ್ರದಲ್ಲಿ, ಮನುಷ್ಯರಿಗೆ ಈಶ್ವರ-ಸ್ವರೂಪ-ಶ್ರೀಕಂಠರಿಂದ ಕ್ರಮವಾಗಿ ಜ್ಞಾನ–ಪ್ರಾಪ್ತಿಯುಂಟಾಯಿತೆಂಬ ವಿಚಾರಧಾರೆಯೂ ಸಹ ಸ್ವಲ್ಪ ಅಧಿಕ ವಿಸ್ತಾರ ದಿಂದ ತಿಳಿಯ ಹೇಳಲಾಗಿದೆ. ಕಾಶ್ಮೀರದ ಪ್ರಸಿದ್ಧ ಟೀಕಾಕಾರ ಅಭಿನವಗುಪ್ತರೂ ಸಹ ಇದನ್ನು ಪುಷ್ಟೀಕರಿಸುತ್ತಾರೆ. ಅವರು ಈ ರೀತಿ ಹೇಳು ತ್ತಾರೆ. ಮಾನವನಿಗೆ ಆಧ್ಯಾತ್ಮಿಕ ಜ್ಞಾನದ ಪ್ರಾಪ್ತಿಯಾದುದು ಶ್ರೀಕಂಠರಿಂದ. ಒಮ್ಮೆ ಅವರು ಕೈಲಾಸ ಪರ್ವತದ ಮೇಲೆ ಸುತ್ತಾಡುತ್ತಿರ ಬೇಕಾದರೆ, ಶೈವಾಗಮಗಳ ಲೋಪದಿಂದ ಅಜ್ಞಾ ನಾಂಧಕಾರದಲ್ಲಿ ಮುಳುಗಿದ್ದ ಮಾನವನ ಆಧ್ಯಾ ತ್ಮಿಕ ಶೂನ್ಯತೆಯ ಸ್ಥಿತಿಯನ್ನು ಕಂಡು ಮರುಗಿ ಹೋಗಿದ್ದರು. ಸಮಾಧಿಯೋಗದ ವರ್ಣನೆ ಮಾಡುವ ಸಮಯದಲ್ಲಿ 'ಚತುರ್ಕಲ್ಪನಾ' ಎಂಬ ಶಬ್ದ ಬರುತ್ತದೆ. ಶ್ರೀ ನಾರಾಯಣ ಕಂಠರು ಮೃಗೇಂದ್ರತತ್ವದ ೧।೨-೧೩ ರನ್ನು ಕುರಿತು ಟೀಕೆ ಬರೆಯುತ್ತಾ ಈ ಚತುರ್ಕಲ್ಪನೆಗಳನ್ನು ಈ ರೀತಿ ಸ್ಪಷ್ಟೀಕರಿಸಿದ್ದಾರೆ– ಪ್ರಮೇಯ, ಪ್ರಮಿತಿ ಪ್ರಮಾಣ ಮತ್ತು ಪ್ರಮಾತೃ. ಈ ಪ್ರಕಾರ ಅನೇಕ ಸ್ಥಳಗಳಿಗೆ ಕಾಶ್ಮೀರ ಶೈವಗ್ರಂಥಗಳಿಂದ ಸಹಾಯ ದೊರಕುತ್ತದೆ.

ಯೋಗ, ಯಮ ಮತ್ತು ನಿಯಮಗಳ ವ್ಯಾಖ್ಯೆಮಾಡಿದನಂತರ ಜಾಗ್ರಪದ ಮತ್ತು ತುರ್ಕಪದಗಳ ಮಿಲನದಿಂದ ಸಪ್ತಾಂಗ, ಸಪ್ತಾಗ್ನಿ ಮತ್ತು ಸಪ್ತಾಮೃತಗಳು ಉತ್ಪನ್ನವಾಗುತ್ತವೆ. ಸಪ್ತಾಂಗ, ಸಪ್ತಾಗ್ನಿ ಮತ್ತು ಸಪ್ತಾಮೃತಗಳು ಕ್ರಮವಾಗಿ ಹೀಗಿವೆ.—

ಧರಣೀ ಚ ಭವೇತ್ತೋಯಂ
ತೇಜಸ್ತಥಾ ಚ ಮಾರುತಃ |
ಆಕಾಶೋ ಬುದ್ಧಿಕಾ ಮನಃ
ಸಪ್ತಾಂಗಂ ತು ಶೃಣೂಚ್ಯತೇ ||೬೨||
ಘ್ರಾತಾ ಚ ರಸಯಿತಾ ಚ
ದ್ರಷ್ಟಾ ಸ್ಪ್ರಷ್ಟಾ ತು ಶ್ರೋತಾ ಚ
ಮಂತಾ ಬೋದ್ಧಾ ತಥಾ ಶೃಣು,
ಇತಿ ಸಪ್ತಾಗ್ನಿಃ ಪ್ರೋಚ್ಯತೇ ||೬೩||
ಶಬ್ದಃ ಸ್ಪರ್ಶಶ್ಚ ರೂಪಶ್ಚ
ರಸೋ ಗಂಧಶ್ಚ ಕಥ್ಯತೇ |
ಸಂಕಲ್ಪೋ ಬೋದ್ಧವ್ಯಂ
ತಥಾ ಸಪ್ತಾಮೃತಂ ನಿಗದ್ಯತೇ ||೬೪||

ಇವು ಮೂರೂ ಪರಸ್ಪರ ಸಂಬದ್ಧವಾಗಿವೆ—

| ಸಪ್ತಾಂಗ | ಸಪ್ತಾಗ್ನಿ | ಸಪ್ತಾಮೃತ |
|---|---|---|
| ಧರಣೀ | ಘ್ರಾತಾ | ಗಂಧ |
| ತೋಯ | ರಸಯಿತಾ | ರಸ |
| ತೇಜ | ದ್ರಷ್ಟಾ | ರೂಪ |
| ಮಾರುತ | ಸ್ಪ್ರಷ್ಟಾ | ಸ್ಪರ್ಶ |
| ಆಕಾಶ | ಶ್ರೋತಾ | ಶಬ್ದ |
| ಬುದ್ಧಿ | ಬೋದ್ಧಾ | ಬೋದ್ಧವ್ಯ |
| ಮನ | ಮಂತಾ | ಸಂಕಲ್ಪ |

ಇಲ್ಲಿ ಸಪ್ತವಸ್ತುಗಳು ಸಪ್ತಾಮೃತ.ಸಪ್ತಾಂಗಗಳು ಅವುಗಳಿಗೆ ಆಧಾರ. ಸಪ್ತಾಗ್ನಿಗಳು ಅವುಗಳನ್ನು ಅನುಭವಿಸುವಂಥವು. ಕಾಶ್ಮೀರ-ಮಾಲೆಯಲ್ಲಿ ಪ್ರಕಾಶಿತ ಲೌಗಾಕ್ಷಿಗೃಹ್ಯಸೂತ್ರ ೪೬ (ಭಾಗ ೨–ಪುಟ ೧೫೦) ಕ್ಕಿರುವ ದೇವಪಾಲರ ಭಾಷ್ಯದಲ್ಲಿ ವೈಶ್ವಾನರ ಅಗ್ನಿಗೆ ಸಪ್ತ ಜಿಹ್ವಗಳಿವೆ ಯೆಂದು ತಿಳಿಸಿದೆ- ನಮ್ಮ ಗ್ರಂಥದಲ್ಲಿ ಸಪ್ತಾಗ್ನಿಗಳ ಉಲ್ಲೇಖವಿದೆ ಅರ್ಥಾತ್ ಭೋಕ್ತೃಗಳಿವೆ. ಆದರೆ ಲೌಗಾಕ್ಷಿಯಲ್ಲಿ ಭೋಕ್ತೃವಿನ ಸಾಧನ (ಕರಣ) ಗಳ ವರ್ಣನೆಯಿದೆ—

ಚಕ್ಷುರ್ನಾಸಾ ಚ ಜಿಹ್ವಾ ಚ
ತ್ವಕ್ ಶ್ರೋತ್ರಂ ಚೈವ ಪಂಚಮಮ್ |
ಮನೋ ಬುದ್ಧಿಶ್ಚ ಸಪ್ತೈತಾ
ಜಿಹ್ವಾ ವೈಶ್ವಾನರಾರ್ಚಿಷಃ ||

ಇದಾದನಂತರ ಸಪ್ತ ಸಮಿತ್ತುಗಳ ವರ್ಣನೆಯಿದೆ. ಈ ಸಪ್ತಸಮಿಧೆಗಳು ಪ್ರಯುಕ್ತವಾಗಿರುವುದು ಸಪ್ತಜಿಹ್ವಗಳಿಗಾಗಿ.

ಘ್ರೇಯಂ ಪೇಯ ಚ ದೃಶ್ಯಂಚ
ಸ್ಪೃಶ್ಯಂ ಶ್ರೋತ್ರತವ್ಯಮೇವ ಚ |
ಮಂತವ್ಯಮಥ ಬೋದ್ಧವ್ಯಂ ತಾಃ
ಸಪ್ತ ಸಮಿಧೋ ಮತಾಃ ||

ಈ ಸಪ್ತಸಮಿಧೆಗಳನ್ನು ಬೃಹಸ್ಪತಿಯ ಸಪ್ತಾಂಗಗಳಿಂದ ತುಲನೆ ಮಾಡಬಹುದು. ಯಾವ ರೀತಿ ಸಪ್ತಾಂಗ ಮತ್ತು ಸಪ್ತಾಗ್ನಿಯ ಸಂಬಂಧವು ಉಪಭುಕ್ತ ವಸ್ತು ಮತ್ತು ಉಪಭೋಕ್ತೃವಿನ ಸಂಬಂಧದಂತಿದೆಯೋ, ಸಪ್ತ ಸಮಿತ್ತುಗಳು ಮತ್ತು ಸಪ್ತಜಿಹ್ವಗಳ ಮಧ್ಯೆ ಅದೇ ಸಂಬಂಧವಿದೆ. ಸಪ್ತ ಸಮಿಧೆಗಳು ಇಂಧನದಂತೆ. ಸಪ್ತಜಿಹ್ವಗಳು ಇದನ್ನುಪಭೋಗಿಸುತ್ತವೆ. ಅರ್ಥಾತ್ ಸಪ್ತಜಿಹ್ವಗಳು ಉಪಭೋಕ್ತೃಗಳಾಗಿವೆ.

ಪ್ರಶ್ನೋಪನಿಷತ್ತು ೪|-೮ ಮತ್ತು ೪|-೯ ರಲ್ಲಿಯೂ ಸಹ ಇದೇ ತರಹದ ಸ್ಥಳವಿದೆ. ಆದರೆ ಅಲ್ಲಿ ಸಂಖ್ಯೆಯ ಪ್ರತಿಬಂಧವಿಲ್ಲ. ಸಾಮಾನ್ಯ

ರೂಪದಿಂದ ಸ್ಥಿತಿಯ ನಿರೂಪಣೆಯಿದೆ. ಅವುಗಳ ಬಗ್ಗೆ ವಿಶೇಷ ವರ್ಗೀಕರಣವಾಗಲಿ ಅಥವಾ ನಾಮಕರಣವಾಗಲಿ ಮಾಡಿಲ್ಲ. ಸಂಸ್ಕೃತದಲ್ಲಿ ಸಪ್ತಾಂಗ ಶಬ್ದವು ಅನೇಕ ಉಪನಿಷತ್ತುಗಳಲ್ಲಿ ಪ್ರಾಪ್ತವಾಗುತ್ತದೆ–ಯಥಾನೃಸಿಂಹೋತ್ತರೋಪನಿಷತ್ತು, ರಾಮೋತ್ತರೋಪನಿಷತ್ತು, ವರದೋತ್ತೋತರೋಪನಿಷತ್ತು ಮುಂತಾದವು. ಆದರೆ ಇಲ್ಲಿ ಸಪ್ತಾಂಗಗಳನ್ನೆಣಿಸಿಲ್ಲ. ಅಡ್ಯಾರ್‌ನಿಂದ ಪ್ರಕಾಶಿತ ವೈಷ್ಣವೋಪನಿಷತ್ತು–ಸಂಗ್ರಹದ ನೃಸಿಂಹತಾಪಿನ್ಯುಪನಿಷತ್ತಿನ (ಪುಟ–೧೦೬) ಪ್ರಣವಪಾದ ನಿರೂಪಣೆಯ ಟೀಕೆಯಲ್ಲಿ ಸಪ್ತಾಂಗಗಳಾವುವೆಂದರೆ ಪಂಚಜ್ಞಾನ ಕರ್ಮೇಂದ್ರಿಯಗಳು ಪ್ರಾಣ ಮತ್ತು ಅಂತಃಕರಣ. ಸಪ್ತಾಗ್ನಿ ಮತ್ತು ಸಪ್ತಾಮೃತ ಶಬ್ದಗಳು ಸಂಸ್ಕೃತಕೋಶಗಳಲ್ಲಿಲ್ಲ. ಉಪನಿಷತ್ತುಗಳ ಕೋಶದಲ್ಲಿಯೂ ಸಿಗಲಿಲ್ಲ. ಕವಿಭಾಷೆಯ ಕೋಶದಲ್ಲಿ ಸಪ್ತಾಗ್ನಿಯು, ಸಪ್ತಭುವನ ಎಂಬ ಕವಿ–ಗ್ರಂಥದಿಂದ ಉದ್ಧೃತವಾಗಿದೆ. ಆದರೆ ಅಲ್ಲಿ ಕೂಡ ಇವುಗಳನ್ನೆಣಿಸಿ ಹೇಳಲಿಲ್ಲ. ಕೇವಲ ಕಾಶ್ಮೀರದಲ್ಲಿ ಲೌಗಾಕ್ಷಿ ಗೃಹ್ಯಸೂತ್ರದ ಸಂದರ್ಭವೇ ಇಂದಿನವರೆಗೆ ಉಪಲಬ್ಧವಾಗಿರುವ ಅತ್ಯಂತ ಸಮೀಪದ ಸಂದರ್ಭ. ಹೀಗೆ ಬೃಹಸ್ಪತಿತತ್ತ್ವದಲ್ಲಿ ಕಾಶ್ಮೀರದ ಶೈವ ಗ್ರಂಥಗಳ ಛಾಯೆ ಅಲ್ಲಲ್ಲಿ ಕಂಡುಬರುತ್ತದೆ. ಯೋಗ ಮತ್ತು ಸಾಂಖ್ಯಗಳು ಕಾಶ್ಮೀರಶೈವದಲ್ಲಿ ಕೂಡ ಸಮ್ಮಿಳಿತವಾಗಿವೆ. ಆದರೆ ಕಾಶ್ಮೀರ ಶೈವದ ವಿಶೇಷತೆಯಿರುವುದು ಅದರ 'ತ್ರಿಕ್'ನಲ್ಲಿ. ಬೃಹಸ್ಪತಿ ತತ್ತ್ವವು ಸಾಮಾನ್ಯ ರೂಪದಿಂದ ಮುಖ್ಯ–ಮುಖ್ಯ ತತ್ತ್ವಗಳಿಗೆ ವ್ಯಾಖ್ಯೆ ಮಾಡುತ್ತಾ ಹೊರಟು ಹೋಗಿದೆ. ಯಾವೊಂದು ವಿಶೇಷ ಶೈವಸಿದ್ಧಾಂತವನ್ನು ನಿರೂಪಿಸುವುದು ಅದರ ಉದ್ದೇಶವಾಗಿರಲಿಲ್ಲ. ಅಲ್ಲಲ್ಲಿ ದರ್ಶನಕ್ಕೆ ಸಂಬಂಧಪಟ್ಟ ಶಂಕೆಗಳನ್ನು ಕುರಿತು ವಿಚಾರ ಮಾಡುತ್ತಾ, ಜ್ಞಾನದ ಮೂಲಕ ಶಿವಪದ-ಪ್ರಾಪ್ತಿ ಅಥವಾ ಯೋಗದ ಮೂಲಕ 'ಯೋಗೀಶ್ವರತ್ವ' ಹಾಗೂ ಜೀವನ್ಮುಕ್ತಿ ಪಡೆಯುವುದು ಅದರ ಧ್ಯೇಯ ಮತ್ತು ಲಕ್ಷ್ಯ. ಯೋಗದ್ವಾರಾ ಪ್ರಾಪ್ತವಾಗುವ ಅಷ್ಟೈಶ್ವರ್ಯಗಳ ವರ್ಣನೆ ಎಂಟು ಶ್ಲೋಕಗಳಲ್ಲಿ ಸವಿಸ್ತಾರವಾಗಿ ಬಂದಿದೆ. ಇವುಗಳನ್ನು ಕುರಿತ ಇಷ್ಟೊಂದು ವಿಸ್ತೃತ ವರ್ಣನೆ ಕಾಶ್ಮೀರ ಶೈವದಲ್ಲಿ ಅಪ್ರಾಪ್ಯ. ಸ್ವಚ್ಛಂದತಂತ್ರದ ಮೇಲೆ ಟೀಕೆ ಬರೆಯುತ್ತಾ ಕ್ಷೇಮರಾಜ ಎಂಬುವರು ಸಂಕ್ಷೇಪತಃ ಈ ಅಷ್ಟೈಶ್ವರ್ಯಗಳನ್ನು ಅರ್ಥವಿಸಿದ್ದಾರೆ. ಪುರಾಣಗಳು ಮತ್ತು ಸಾಂಖ್ಯದಲ್ಲಿ ಕೂಡ ಇವುಗಳ ಬಗ್ಗೆ ಇಷ್ಟೊಂದು ದೀರ್ಘ ನಿರೂಪಣೆ ಮಾಡಬೇಕೆಂಬ ಆವಶ್ಯಕತೆ ಕಂಡು ಬರಲಿಲ್ಲ.

ಚೀಣೆಯಾತ್ರಿಕ ಈತ್ಸಿಙ್ ಅವರು ಜಾವಾದಲ್ಲಿ ಅಧ್ಯಯನ ಮಾಡಬಹುದಾದಲ್ಲಿ, ಭೋಟ್ ದೇಶದ ವಿದ್ವಾಂಸರು ವಿದ್ಯಾಭ್ಯಾಸಕ್ಕಾಗಿ ದ್ವೀಪಾಂತರಕ್ಕೆ ಹೋದ ವರ್ಣನೆ ಭೋಟ ದೇಶದ ಇತಿಹಾಸಗಳಲ್ಲಿ ಸಿಕ್ಕಬಹುದಾದ ಪಕ್ಷಕ್ಕೆ,ಕಾಶ್ಮೀರ ಶೈವವು ದ್ವೀಪಾಂತರದ ಶೈವದ ಮೇಲೆ ತುಸು ಪ್ರಭಾವ ಬೀರಿದ್ದರೆ ಅದು ಆಶ್ಚರ್ಯಕರವೇನಲ್ಲ.

ಯೋಗದಿಂದುತ್ಪನ್ನವಾಗುವ 'ಉಪಸರ್ಗಗಳು' ಪತಂಜಲಿಗಳ ಯೋಗ ಸೂತ್ರಗಳವರೆಗಷ್ಟೇ ಸೀಮಿತವಾಗಿಲ್ಲ. ಚೀಣಾದಲ್ಲಿ ಕೂಡ ಯೋಗೋತ್ಪನ್ನ ಉಪಸರ್ಗಗಳ ಮೇಲೆ ಒಂದು ಸಂಪೂರ್ಣ ಪುಸ್ತಕವಿದೆ. ಕಿಜ್ ಶಿಜ್ ಅವರಿಂದ ಲಿಖಿತ ಈ ಪುಸ್ತಕದ ಹೆಸರು 'ಛೇ ಛನ್ ನಿಜ್ ಯಾವೋ'. ಬೃಹಸ್ಪತಿತತ್ತ್ವವು ಈ ಉಪಸರ್ಗಗಳನ್ನು ಮೂರು ವಿಭಾಗಗಳಲ್ಲಿ ವರ್ಗೀಕರಣ ಮಾಡುತ್ತದೆ. ಸತ್ವದ

ಕಾರಣದಿಂದ, ರಜದ ಕಾರಣದಿಂದ ಮತ್ತು ತಮದ ಕಾರಣದಿಂದ ಉತ್ಪನ್ನ ಉಪಸರ್ಗಗಳು. ಯೋಗ ಸೂತ್ರದಲ್ಲಿ ಉಪಸರ್ಗಗಳನ್ನು ಕೇವಲ ಎಣಿಸಿಬಿಡಲಾಗಿದೆ ಅಷ್ಟೆ–ವ್ಯಾಧಿ – ಸ್ತ್ಯಾನ–ಸಂಶಯ–ಪ್ರಮಾದ–ಆಲಸ್ಯ–ಅವಿರತಿಭ್ರಾಂತಿ – ದರ್ಶನಾಲಬ್ಧಭೂಮಿಕತ್ವಾನವಸ್ಥಿತತ್ವಾನಿ ಚಿತ್ತ ವಿಕ್ಷೇ ಪಾಸ್ತೇಽಂತರಾಯಾಃ।

ಲಿಂಗ ಪುರಾಣದ ನವಮ ಅಧ್ಯಾಯದಲ್ಲಿ ದಶಉಪಸರ್ಗಗಳ ಸವಿಸ್ತಾರ ವರ್ಣನೆಯಿದೆ.

ಆಲಸ್ಯಂ ಪ್ರಥಮಂ ಪಶ್ಚಾದ್
ವ್ಯಾಧಿಪೀಡಾ ಪ್ರಜಾಯತೇ।
ಪ್ರಮಾದಃ ಸಂಶಯಸ್ಥಾನೇ
ಚಿತ್ತಸ್ಯೇಹಾ ನವ ಸ್ಥಿತಿಃ॥
ಅಶ್ರದ್ಧಾದರ್ಶನಂ ಭ್ರಾಂತಿರ್ದುಃಖಂ
ಚ ತ್ರಿವಿಧಂ ತತಃ।
ದೌರ್ಮನಸ್ಯಮಯೋಗ್ಯೇಷು
ವಿಷಯೇಷು ಚ ಯೋಗತಾ॥
ದಶದಾಭಿಪ್ರಜಾಯಂತೇ
ಮುನೇರ್ಯೋಗಾಂತರಾಯಕಾಃ।
ಉಪಸರ್ಗಾಃ ಪ್ರವರ್ತಂತೇ
ಸರ್ವೇ ತೇಽಸಿದ್ಧಿಸೂಚಕಾಃ॥

ಈ ಉಪಸರ್ಗಗಳು ಬೃಹಸ್ಪತಿ ತತ್ತ್ವದ ಉಪಸರ್ಗಗಳಿಗಿಂತ ಸಾಕಷ್ಟು ಭಿನ್ನವಾಗಿವೆ. ಈ ಉಪಸರ್ಗಗಳಿಂದ ಬಿಡುಗಡೆ ಹೊಂದುವ ಉಪಾಯವನ್ನು ತಿಳಿಸಿ ಗ್ರಂಥವು ಸಮಾಪ್ತವಾಗಿ ಬಿಡುತ್ತದೆ. ಜ್ಞಾನ ಅಥವಾ ಯೋಗದ ಮೂಲಕ, ಅಷ್ಟೈಶ್ವರ್ಯ ಮತ್ತು ಮೋಕ್ಷ, ಜೀವನ್ಮುಕ್ತಿ ಅಥವಾ ಆತ್ಮಸಿದ್ಧಿಯ ರಹಸ್ಯವನ್ನು ಪಡೆಯುವುದೇ ಅದರ ಲಕ್ಷ್ಯ. ಚೇತನ ಮತ್ತು ಅಚೇತನದ ಸಮ್ಮಿಶ್ರಣದಿಂದ ಆತ್ಮವು ಅಚೇತನ,ಜಡ,ಮಾಯಾಮಯ ಶರೀರದಲ್ಲಿ ಸಿಲುಕಿಕೊಂಡಿರುತ್ತದೆ. ಕರ್ಮಗಳ ಬಂಧನವು ಅದನ್ನು ಪುನರ್ಜನ್ಮದ ಚಕ್ರದಲ್ಲಿ ಸುತ್ತಾಡಿಸುತ್ತಿರುತ್ತದೆ. ಯೋಗದ ಮೂಲಕ ತನ್ನ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡು, ಈಶ್ವರ–ಧ್ಯಾನ ಮಗ್ನನಾಗಿ, ಭಗವತ್ ಕೃಪೆ ಮತ್ತು ಭಗವದ್ಭಕ್ತಿಯಿಂದ ಮಾನವನು ಸತ್ಯತತ್ತ್ವವನ್ನರಿತು ಈ ಜೀವನದಲ್ಲಿಯೇ ಮುಕ್ತಿ ಪಡೆದುಕೊಂಡುಬಿಡುತ್ತಾನೆ. ಅವನಿಗೆ ಶರೀರ–ಜ್ಞಾನದ ಅನುಭವವಾಗುವುದಿಲ್ಲ. ಅಲ್ಲದೆ ಮೃತ್ಯುವಿನ ಅನಂತರವೂ ಸಹ ಅವನು ಶರೀರ (ಅರ್ಥಾತ್ ಪುನರ್ಜನ್ಮ)ವನ್ನು ಅನುಭವಿಸಬೇಕಾಗುವುದಿಲ್ಲ. ಬೃಹಸ್ಪತಿಯು ಕೊನೆಯಲ್ಲಿ, ಮೋಕ್ಷಪ್ರಾಪ್ತಿಯಲ್ಲಿ ಜ್ಞಾನದ, ತದನಂತರ ಯೋಗ ಸಾಧನೆಯ ಮಹತ್ವದ ಪ್ರತಿಪಾದನೆ ಮಾಡುತ್ತದೆ.

ಬೃಹಸ್ಪತಿ ತತ್ತ್ವವು ದ್ವೀಪಾಂತರದ ಶೈವ ಧರ್ಮ–ತತ್ತ್ವಗಳನ್ನು ನಿರೂಪಣೆ ಮಾಡುವುದರ ಜೊತೆ ಜೊತೆಗೆ ರೋಚಕವಿಧಿಯಿಂದ ದೃಷ್ಟಾಂತ ಮತ್ತು ಉಪಮೆಗಳ ಮೂಲಕ ಸಾಮಾನ್ಯ ದಾರ್ಶನಿಕ ಪ್ರಶ್ನೆಗಳಿಗೆ ಸಮಾಧಾನ ನೀಡುತ್ತಾ ಹೊರಟು ಹೋಗುತ್ತದೆ. ವಿಚಾರದ ದೃಷ್ಟಿಯಿಂದ ಕೂಡ ಸುಸಂಬದ್ಧ ಹಾಗೂ ಸಂಘಟಿತವಾಗಿದೆ. ಇದು ಕವಿಭಾಷೆಯ ವಿಚಾರವನ್ನು ಸಹಜರೂಪದಿಂದ ಪ್ರಕಟಗೊಳಿಸುವ ಸಾಮರ್ಥ್ಯಕ್ಕೆ ಒಂದು ಸುಂದರ ನಿದರ್ಶನ.

ಮೂಲ: ಡಾ|| ಸುದರ್ಶನಾದೇವಿ ಸಿಂಘಲ್
ಅನು: ರಾ. ನಾ. ರತನ್

---

# ಕರ್ನಾಟಕ ಚರಿತ್ರೆಯಿಂದ ಕಲಿಯಬಹುದಾದುದೇನು ?

ಮಾನವನ ಸರ್ವಾಪರಾಧಗಳ ಮತ್ತು ಮಾನವಗಣದ ದುರದೃಷ್ಟಕರವಾದ ಹಲವಾರು ಸಮಸ್ಯೆಗಳ ಮತ್ತು ಘಟನೆಗಳ ಸಂಗ್ರಹಕ್ಕಿಂತ ಚರಿತ್ರೆಯು ಅದೆಷ್ಟೋ ಮೇಲ್ಪಟ್ಟದ್ದಾಗಿದೆ, ಎಂದು ಗಿಬ್ಬನ್ನನು ಹೇಳುತ್ತಾನೆ. ಕರ್ಣಾಟಕ ಚರಿತ್ರೆಯ ಮಟ್ಟಿಗೆ ಅದು ಮಾನವನ ಅಪರಾಧ ಮತ್ತು ಆಪತ್ತುಗಳ ಸಮಗ್ರ ವರದಿ ಮಾತ್ರವೇ ಅಲ್ಲ; ಏಕೆಂದರೆ ಹಿಂದಾವ ಕಾಲದಲ್ಲೂ ಈ ನಾಡು ಒಂದೇ ಆಡಳಿತ ಘಟಕದೊಳಗೆ ಒಂದೇ ಪ್ರಾಂತ ವಾಗಿ ಇರದಿದ್ದುದರ ಒಂದು ವೈಶಿಷ್ಟ್ಯವೇ ಚರಿತ್ರ ಕರ್ತರಿಗೆ ಒಂದು ವಿಶೇಷವಾಗಿ ತೋರುತ್ತದೆ.

ಕರ್ಣಾಟಕ ಎಂಬ ಶಬ್ದವು ಸ್ಫೂರ್ತಿ ದಾಯಕವಾಗಿದೆ. ಈ ಹೆಸರನ್ನು ವಿದ್ವಾಂಸರು ಈ ಭೂಪ್ರದೇಶ ಮತ್ತು ಅದರ ಸಾಂಸ್ಕೃತಿಕ ವೈಶಿಷ್ಟ್ಯಗಳಿಗೆ ಅನ್ವಯಿಸಿ ಹೇಳುತ್ತಾರೆ. ಕರ್ಣಾ ಟಕವೆಂಬ ಈ ಹೆಸರು ಚತುರ್ವೇದಗಳಷ್ಟೇ ಪ್ರಾಚೀನವೂ ಆಗಿದೆ; ಮಾತ್ರವಲ್ಲ, ಈ ಹೆಸರಿ ನಿಂದ ಕರೆಯಲ್ಪಟ್ಟ ಭೂಭಾಗವು ಅಂದಿನಿಂದಲೇ ದಕ್ಷಿಣದ ಹೃದಯವೆಂದೇ ಭಾವಿಸಲಾಗಿತ್ತು.

ಈ ವರೆಗೆ ತಿಳಿದು ಬಂದ ಕಳೆದ ೨೦೦೦ ವರ್ಷಗಳ ಚರಿತ್ರೆಯ ಕಾಲದಲ್ಲಿ ಕರ್ಣಾಟಕವು ಎಂದೂ ಒಂದು ಪ್ರಾಂತವಾಗಿ ನಿಶ್ಚಿತ ಗತಿ ಯೊಳಗೆ ಅಡಗಿರಲಿಲ್ಲ. ಈ ಅರ್ಥದಲ್ಲಿ ಕರ್ಣಾ ಟಕವೆಂಬ ರಾಜ್ಯಕ್ಕೆ ಬರೇ ಒಂಭತ್ತು ವರ್ಷಗಳು ಮಾತ್ರವಾಗಿದೆ. ಪೂರ್ವಕಾಲದಲ್ಲಿ ಹಲವಾರು ಕವಿಗಳು ಮತ್ತು ವೀರರು ಹುಟ್ಟಿದ ಈ ಕನ್ನಡ ಭಾಷಾ ಪ್ರದೇಶವು ನರ್ಮದೆಯಿಂದ ದಕ್ಷಿಣಕ್ಕೆ ಆವರಿಸಿತ್ತು. ಈಗ ನಿಶ್ಚಯಿಸಲ್ಪಟ್ಟ ಪ್ರಾಂತದ ವಿಶಾಲತೆಗಿಂತ ಎಷ್ಟೋ ವಿಸ್ತಾರವಾದ ನೆಲದಲ್ಲಿ ಕನ್ನಡಿಗರು ಅಂದೇ ಬಹು ಪ್ರಭಾವಶಾಲಿಗಳಾದ ಜನಾಂಗವಾಗಿ ಬಾಳಿದರು.

ಈ ವಿಶಾಲತೆಯೊಳಗೆ ಹಲವಾರು ಬೇರೆ ಬೇರೆ ರಾಜವಂಶದವರು ಬೇರೆ ಬೇರೆ ಭಾಗಗಳನ್ನು ಆಳಿದ್ದರು. ಅದಕ್ಕನುಸಾರವಾಗಿ ಕರ್ಣಾಟಕ, ವನ್ನು ಕದಂಬ ಕರ್ಣಾಟಕ, ಚಾಳುಕ್ಯ ಕರ್ಣಾ ಟಕ, ಹೊಯ್ಸಳ ಕರ್ಣಾಟಕ ಎಂದು ವಿಭಾಗಿಸ ಬಹುದು. ಅನಂತರ ಈ ಪ್ರಾಂತವು ವಿಜಯನಗರ ಕರ್ಣಾಟಕ, ಇಕ್ಕೇರಿ ಕರ್ಣಾಟಕ, ಮೈಸೂರು ಕರ್ಣಾಟಕ ಎಂದಿತ್ಯಾದಿಯಾಗಿ ಕರೆಯಲ್ಪಟ್ಟಿತು. ವಿಜಯನಗರದಂಥಾ ವಿಶಾಲ ರಾಜ್ಯಕ್ಕೂ ಬಾಹ್ಮನೀ ರಾಜ್ಯದೊಳಗಡಗಿದ ಕರ್ಣಾಟಕ ಭಾಗದ ಮೇಲೆ ಯಾವ ಅಧಿಕಾರವೂ ಇರಲಿಲ್ಲ. ಇತ್ತೀಚೆಗೆ ಎಲ್ಲರಿಗೂ ತಿಳಿದಂತೆ ಈ ಪ್ರಾಂತವು ಬೊಂಬಾಯಿ ಕರ್ಣಾಟಕ,ಹೈದರಾಬಾದು ಕರ್ಣಾ ಟಕ, ಮದ್ರಾಸು ಕರ್ಣಾಟಕ ಎಂದು ಮೊದಲಾಗಿ ವಿಭಾಗವಾಗಿತ್ತು.

ಆದುದರಿಂದ ಇಡೀ ಕರ್ಣಾಟಕದ ಚರಿ ತ್ರೆಯು ನ್ಯಾಯವಾಗಿ ಯಾವಾಗ ಆರಂಭಗೊಂಡಿ ತೆಂದು ಹೇಳುವುದೇ ಪ್ರಯಾಸವಾಗಿದೆ. ಈ ಭೂಭಾಗದ ದೀರ್ಘ ಚರಿತ್ರೆಯ ಬೇರೆ ಬೇರೆ ಮಜಲುಗಳಲ್ಲಿ ಕಂಡುಬರುವ ಬಿಕ್ಕಟ್ಟಾದ ರಾಜ ಕೀಯ ಪರಿಸ್ಥಿತಿಗಳನ್ನು ಒತ್ತಟ್ಟಗಿಟ್ಟರೂ ಅಂದಿನ ಹಲವಾರು ಆಡಳಿತ ಘಟಕಗಳು ಅದೊಂದು 'ಕರ್ಣಾಟಕರಾಜ್ಯ'ವೆಂಬುದರ ನಿರ್ಮಾಣಕ್ಕೆ

ಎಂದೂ ಸಹಾಯಕವಾಗಲಿಲ್ಲವೆಂಬ ಒಂದು ಪಾಠವನ್ನು ನಾವು ಚರಿತ್ರೆಯಿಂದ ಕಲಿಯಬಹುದಾಗಿದೆ. ನಾಡಿನ ಜನತೆ, ಅವರ ಧರ್ಮಶ್ರದ್ಧೆ, ಅವರ ರಾಷ್ಟ್ರೀಯ ಹಾಗೂ ಸಾಂಸ್ಕೃತಿಕ ಭಾವನೆ ಮತ್ತು ತಮ್ಮ ಭಾಷೆ, ಲಲಿತ ಕಲೆ ಇತ್ಯಾದಿಗಳಲ್ಲಿ ಅವರು ಇಟ್ಟ ಆಸಕ್ತಿಯೇ ಮೊದಲಾದುವು ಈ ನಾಡಿನ ಭದ್ರತೆ, ಐಕ್ಯತೆ ಮತ್ತು ಸಾಮಾಜಿಕ ಏಕರೂಪತೆಗಳಿಗೆ ಪೋಷಕವಾದುವೆಂಬುದನ್ನು ಧಾರಾಳವಾಗಿ ಹೇಳಬಹುದು.

ಚರಿತ್ರೆಯು ಜನಾಂಗದ ಏಳಿಗೆ, ಸಾಧನೆ, ಕ್ರಾಂತಿ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪುನರ್ಜೀವನಗಳನ್ನು ಕುರಿತು ಹೇಳುವ ತತ್ತ್ವಶಾಸ್ತ್ರವಾಗಿದೆ. ಈ ಅರ್ಥದಲ್ಲಿ ಕರ್ಣಾಟಕ ಚರಿತ್ರೆಯು ಈ ನಾಡಿನ ಜನಾಂಗವು ತಮ್ಮ ಪ್ರತಿಯೊಂದು ಚಟುವಟಿಕೆಗಳಲ್ಲೂ ಸಾಧಿಸಿದ ಮಹತ್ಕಾರ್ಯಗಳನ್ನು ಕುರಿತು ಧಾರವಾಹಿಯಾಗಿ ನಿರೂಪಿಸಿದ ಉಲ್ಲೇಖವಾಗಿದೆ. ಹಿಂದೂ ದೇಶದ ಚರಿತ್ರೆಯಲ್ಲಿಯೇ ಅಲ್ಲ, ಜಗತ್ತಿನ ಚರಿತ್ರೆಯಲ್ಲಿಯೇ ಈ ರೀತಿ ಹಲವಾರು ರಾಜವಂಶಗಳು ಮತ್ತು ಅಧಿಕಾರಾರೂಢರಾದ ರಾಜಾಧಿರಾಜರು ಏಕಕಾಲದಲ್ಲಿ ಅಧಿಕಾರಕ್ಕೆ ಪರಸ್ಪರ ಹೋರಾಡುತ್ತಿರುವ ಪ್ರಸಂಗವೇ ಕಂಡುಬರುವುದಿಲ್ಲ. ಆದುದರಿಂದ ಕರ್ಣಾಟಕದ ಈ ದೀರ್ಘ ಚರಿತ್ರೆಯು ನೂರಾರು ಚಿಕ್ಕ ಚಿಕ್ಕ ಆಳರಸರು ಮಾತ್ರವಲ್ಲ; ಹಲವಾರು ಶ್ರೇಷ್ಠ ರಾಜಪರಂಪರೆಯಿಂದ ಪೋಷಿಸಲ್ಪಟ್ಟ ಸಣ್ಣ ಪುಟ್ಟ ರಾಜ್ಯಗಳ ಉದ್ಧಾರ, ವೈಭವ ಮತ್ತು ಪತನದ ದುರಂತಕರವಾದ ಪ್ರಕರಣಗಳ ರುದ್ರ ನಾಟಕವೇ ಆಗಿದೆ.

ಕರ್ಣಾಟಕದಲ್ಲಿ ಪರಾಕ್ರಮಿಗಳೂ ದೂರದರ್ಶಿಗಳೂ ಆದ ರಾಜ್ಯತಂತ್ರ ಪ್ರವೀಣರು ಪೂರ್ವದಲ್ಲಿ ಇದ್ದಿದ್ದರೂ ಸಹ ಕೊಲೆ, ಸುಲಿಗೆ, ಮೋಸ, ಅಕೃತ್ಯಗಳ ತಳಹದಿಯ ಮೇಲೆ ಕಟ್ಟಲ್ಪಟ್ಟು ಕೆಲ ಕಾಲ ಬಾಳಿದ ಈ ಪ್ರಸಿದ್ಧ ರಾಷ್ಟ್ರಗಳ ಚರಿತ್ರೆ ಅದೇನೂ ಸ್ಫೂರ್ತಿದಾಯಕವಾಗಿ ತೋರುವುದಿಲ್ಲ.

ಕಳೆದ ಸುಮಾರು ಇಪ್ಪತ್ತು ಶತಮಾನಗಳಿಗೂ ಮೀರಿದ ಈ ದೀರ್ಘಕಾಲದಲ್ಲಿ ಅದೆಷ್ಟು ವೈಭವಪ್ರದವಾದ ಮತ್ತು ಸಾಂಸ್ಕೃತಿಕ ಸಂಪನ್ನತೆಯಿಂದ ಕೂಡಿದ ನಗರಗಳು ಶೋಭಾಯಮಾನವಾಗಿ ಬೆಳಗಿ ಅಂತೆಯೇ ಮಾಯವಾದುವು! ಬನವಾಸಿ, ತಲಕಾಡು, ಬಾದಾಮಿ, ಪುಲಿಗೆರೆ, ಮಾನ್ಯಖೇಟ, ಶ್ರೀರಂಗಪಟ್ಟಣ, ದೋರಸಮುದ್ರ, ಹಂಪೆ ಇತ್ಯಾದಿಗಳು ಬೇರೆ ಬೇರೆ ಕಾಲದಲ್ಲಿ ಅದೆಷ್ಟು ಪ್ರಾಮುಖ್ಯವಾಗಿದ್ದುವು? ಮಯೂರಶರ್ಮ ಕದಂಬ, ದುರ್ವಿನಿತ್ತಗಂಗ, ೨ನೇ ಪುಲಿಕೇಶಿ, ವಿಕ್ರಮಾದಿತ್ಯ, ಜಗದೇಕಮಲ್ಲ, ನೃಪತುಂಗ, ರಾಷ್ಟ್ರಕೂಟ ಕೃಷ್ಣ, ರಾಜರಾಜ ಚೋಳ, ವೀರಬಲ್ಲಾಳ, ಕೃಷ್ಣದೇವರಾಯ, ಇಕ್ಕೇರಿಯ ಕೆಲವು ನಾಯಕರೇ ಮೊದಲಾದವರು ಎಂಥಾ ರಣಧೀರರೂ ಪ್ರಸಿದ್ಧ ಆಡಳಿತಗಾರರೂ ಆಗಿದ್ದರು?

ಸುಮಾರು ಕ್ರಿ. ಶ. 1000 ನೇ ವರ್ಷದವರೆಗೆ ಕರ್ಣಾಟಕದ ಚರಿತ್ರೆ ಮಾತ್ರವಲ್ಲ. ಇಡೀ ಭಾರತದ ಚರಿತ್ರೆಯೇ ಕೇವಲ ಆಳರಸರೊಳಗಿನ ಅಂತಃಕಲಹ, ಅನ್ಯೋನ್ಯ ದ್ವೇಷ ಮತ್ತು ಮಾತ್ಸರ್ಯಗಳನ್ನು ಕುರಿತು ಬರೆದ ಐತಿಹಾಸಿಕ ವರದಿಯಾಗಿತ್ತು. ಜನಾಂಗಗಳೊಳಗಿನ ಈ ಮಾನಸಿಕ ದೌರ್ಬಲ್ಯವೇ ನಮ್ಮ ದೇಶದೊಳಗೆ ವಿದೇಶೀಯ ಸಾಹಸಿಗರ ವಿಜಯಕ್ಕೆ ಕಾರಣವಾಗಿತ್ತು. ಪಶ್ಚಿಮ ಕರಾವಳಿಯ ಮಾರ್ಗವಾಗಿ ಅರಬಿಯರು 1500 ವರ್ಷಗಳಿಗೆ ಹಿಂದೆಯೇ ಭಾರತದೊಳಗೆ ಮೊದಲನೇ ಬಾರಿಗೆ ಪ್ರವೇಶಿಸಿದರು. ಅವರು

ಸ್ಥಳೀಯ ಜನರೊಡನೆ ಬೆರೆತು ತಮಗೆ ಬೇಕಾದ ಹಾಗೆ ಪಕ್ಷ ಬೇಧಗಳನ್ನಿ ಸಾಧಿಸಿ ಅಭಿವೃದ್ಧಿಗೊಂಡರು.

ಕದಂಬರು, ಪಲ್ಲವರು, ಮತ್ತು ರಟ್ಟರಿಗೆ ತಮ್ಮದೇ ಆದ ನೌಕಾಬಲವಿದ್ದುದರಿಂದ ಅವರು ದೂರದೂರದ ದೇಶಗಳ ಜನರೊಡನೆ ವಾಣಿಜ್ಯ ಮತ್ತು ಇತರ ಸಂಬಂಧಗಳನ್ನು ಅಂದು ಬೆಳೆಸಲು ಸಹಾಯಕವಾಯಿತು. ರಣಧೀರನೂ ರಾಜನೀತಿಜ್ಞನೂ ಆದ ಪ್ರಸಿದ್ಧ ಎರಡನೇ ಚಾಳುಕ್ಯ ಪುಲಿಕೇಶಿಯು ಉತ್ತರ ಹಿಂದೂಸ್ಥಾನದ ಹಲವಾರು ರಾಜರುಗಳೊಡನೆ ಅಲ್ಲದೇ ಪರ್ಷಿಯಾ ದೇಶದ ರಾಜನಾಗಿದ್ದ ಖುಸ್ರುವಿನೊಡನೆಯು ರಾಯಭಾರ ಬಾಂಧವ್ಯವನ್ನು ಬೆಳೆಸಿದ್ದನು.

ಹನ್ನೆರಡನೇ ಶತಮಾನದವರೆಗೂ ಕರ್ಣಾಟಕದ ಅರಸರು ವ್ಯವಹಾರ ಚತುರರೂ ಸಾಹಸಿಗಳೂ ಆಗಿದ್ದರು. ಹಲವಾರು ಅದ್ಭುತ ದೇವಾಲಯಗಳನ್ನೂ ಕೋಟೆಗಳನ್ನೂ ಕಟ್ಟಿದರು. ಅವರು ಬಿಟ್ಟು ಹೋದ ಸಾಹಿತ್ಯ ಮತ್ತು ಲಲಿತಕಲೆಗಳ ಅಸಾಧಾರಣ ಪರಂಪರೆಯನ್ನು ನೋಡಿದಾಗ ಯಾರೂ ಬೆರಗಾಗದೆಯೂ ಇರಲಾರರು. ಸಂಗೀತ ಮತ್ತು ವೈದ್ಯಕೀಯ ಶಾಸ್ತ್ರಗಳಲ್ಲದೆ ಸನಾತನ ಧರ್ಮದ ವಿವಿಧ ತತ್ತ್ವ ವ್ಯಾಖ್ಯಾನಗಳೆಲ್ಲಾ ಈ ಕನ್ನಡ ಭೂಮಿಯಲ್ಲಿಯೇ ಉದಯವಾದುವು. ಹೆಂಗಸರ ಪೈಕಿಯೂ ಹಲವು ಲೇಖಕಿಯರೂ, ರಾಜ್ಯತಂತ್ರ ನಿಪುಣೆಯರೂ, ಯುದ್ಧ ಕಲಾವಿದೆಯರೂ ಇದ್ದರು. ಈ ರೀತಿ ಮುಂದಿನ ಪೀಳಿಗೆಗೆ ಅದೆಷ್ಟು ಸಾಂಸ್ಕೃತಿಕ ಸಂಪತ್ತಿನ ಪರಂಪರೆಯನ್ನು ನಮ್ಮ ಹಿರಿಯರು ಬಿಟ್ಟುಹೋಗಿರುವರೆಂಬುದನ್ನು ತುಂಬಾ ಆಲೋಚಿಸಬೇಕಿದೆ.

ಕರ್ಣಾಟಕವು ಇಂದು ಹೆಮ್ಮೆ ಪಡುವಂಥಾ ಮತ, ಧರ್ಮ, ಸಂಸ್ಕೃತಿ, ಲಲಿತಕಲೆ ಇತ್ಯಾದಿಗಳನ್ನು ಉದ್ಧಾರಗೊಳಿಸಲು ಜನರಲ್ಲಿ ಇರತಕ್ಕ ಅಚಲ ಭಕ್ತಿ ಮತ್ತು ಶ್ರದ್ಧೆಗಳನ್ನು ಇಲ್ಲಿ ಕಾಣಬಹುದು. ಜನರು ಸಾಧಿಸಿದ ಅಪೂರ್ವ ಕಾರ್ಯಗಳು, ಅವರ ಧರ್ಮ ಶ್ರದ್ಧೆ, ಒಗ್ಗಟ್ಟು, ಸಾಮಾಜಿಕ ಮತ್ತು ರಾಷ್ಟ್ರೀಯ ಐಕ್ಯತೆಗಳನ್ನು ಕಾಪಾಡಲು ವ್ಯವಹಾರ ನಿಷ್ಠೆ ಇತ್ಯಾದಿ ಗುಣಗಳು ಅವರಲ್ಲಿ ಎಲ್ಲಾ ಕಾಲದಲ್ಲೂ ಧಾರಾಳವಾಗಿ ಇದ್ದುವು.

ಉತ್ತರ ಭಾರತದಲ್ಲೆಲ್ಲಾ ತಮ್ಮ ಪ್ರಭಾವವನ್ನು ಬೀರಿದ್ದ ಶಾತವಾಹನರು ಮತ್ತು ರಟ್ಟರು ಈ ನಾಡಿನಲ್ಲಿಯೇ ಬಳೆದರು. ಅಷ್ಟೇ ಧೀರರಗ್ರಣಿಗಳಾದ ಚಾಳುಕ್ಯ ಮತ್ತು ರಾಷ್ಟ್ರಕೂಟರ ಕನ್ನಡಿಗ ಯೋಧರು ಎಲ್ಲೆಲ್ಲೂ ಹಬ್ಬಿ ಉತ್ತರದ ಪಾಲರೂ ಸೇನರೂ ಮತ್ತಿತರ ಆಳರಸರನ್ನು ತಮ್ಮ ಅಂಕಿತದಲ್ಲಿ ಇಡಬಲ್ಲವರಾದರು. ಸಾಧಾರಣ ಇವರ ಸಮಕಾಲದಲ್ಲಿಯೇ ಕರ್ಣಾಟಕದ ಪೂರ್ವ ಭಾಗದಲ್ಲಿ ಗಂಗರು, ಪಲ್ಲವರು ಮತ್ತು ನೋಳಂಬರೂ; ಪಶ್ಚಿಮ ಭಾಗದಲ್ಲಿ ಕದಂಬ, ಬಾಣ ಮತ್ತು ಅಲೂಪರೂ, ದಕ್ಷಿಣದಲ್ಲಿ ಪೂರ್ವಕಾಲದ ಚೆಂಗಾಳ್ವರು ಮತ್ತು ಕೊಂಗಾಳ್ವರು ಆಳಿದರು. ಈ ನೂರಾರು ರಾಜವಂಶಗಳನ್ನೆಲ್ಲಾ ಒರ್ವನು ಮರೆತನಾದರೆ ನಾಡಿನ ಜನಸಾಮಾನ್ಯರು ತಮ್ಮ ನೆಲದ ಭವಿಷ್ಯದ ಮಟ್ಟಿಗೆ–ಅದರಲ್ಲೂ 'ಕರ್ಣಾಟಕ' ಎಂಬ ಶಬ್ದದಲ್ಲಿ ಅಡಕವಾದ ಧರ್ಮ, ಸಂಸ್ಕೃತಿ ಮತ್ತು ಸಮಾಜ ಎಂಬುದರಲ್ಲಿ ಅವರಿಟ್ಟ ಭಕ್ತಿ ಶ್ರದ್ಧೆಗಳೇ ಪುನಃ ಅವನಿಗೆ ಇನ್ನಷ್ಟು ಮೇಲೆದ್ದು ಕಾಣುತ್ತದೆ.

ರಾಷ್ಟ್ರಕೂಟರಿಂದ ಕಟ್ಟಲ್ಪಟ್ಟ ಎಲ್ಲೋರ ಮತ್ತು ಸತಾರಾ ದೇವಸ್ಥಾನಗಳಲ್ಲದೆ ಮಧ್ಯಭಾರತ ಮತ್ತು ದಕ್ಷಿಣ ಹಿಂದೂಸ್ಥಾನದ ಯಾವ ಭಾಗವನ್ನು ಅಗಿದು ನೋಡಿದರೂ ಗತಕಾಲದ ಕರ್ಣಾಟಕದ ವೈಭವವನ್ನು ಸೂಚಿಸುತ್ತಾ ನೆಲದೊಳಗೆ ಆಳದಲ್ಲಿ ಹೂಳಲ್ಪಟ್ಟ ಮತ್ತು ಈ ವರೆಗೂ

ಯಾವ ಸಂಶೋಧಕನ ಗೋಚರಕ್ಕೂ ಭಾರದ ಪುರಾತನ ಸ್ಮಾರಕ ಅವಶೇಷಗಳು ಅಲ್ಲಲ್ಲಿ ಕಂಡು ಬರುತ್ತಲೇ ಇವೆ.

ಕಾರಿಕಳ ಚೋಳನ ಕಾಲದಿಂದಲೇ ಬಹು ಪ್ರಭಾವಶಾಲಿಗಳಾಗಿದ್ದ ಚೋಳ ರಾಜವಂಶವು ದಕ್ಷಿಣದಲ್ಲಿ ಬಹು ಪುರಾತನವಾದುದಾಗಿದೆ. ಅವರು ತಮ್ಮ ಅಧಿಕಾರ ಪ್ರಭಾವವನ್ನು ಪೂರ್ವ ಭಾರತದಲ್ಲಿ ಅಲ್ಲದೆ ವಿದೇಶೀಯ ನಾಡುಗಳಲ್ಲೂ ದೂರದ ಸಮುದ್ರಗಳಲೆಲ್ಲಾ ಚಲಾಯಿಸಿದ್ದರು. ಅಷ್ಟೇ ಅಲ್ಲ, ಅವರು ತಮ್ಮ ಆಡಳಿತ ಮತ್ತು ಕೌಶಲ್ಯಮುತ್ತು ಶಿಲ್ಪಕಲಾ ನೈಪುಣ್ಯವನ್ನು ದಕ್ಷಿಣ ಕರ್ಣಾಟಕದಲ್ಲಿ ಉಳಿಸಿಹೋದರು. ಅವರ ಪಂಚಾಯಿತ ರಾಜ್ಯಭಾರ ಕ್ರಮುವನ್ನು ಕಂಡು ಬೆರಗುಗೊಂಡ ಜವಾಹರಲಾಲ್ ನೆಹರು ಇವರು ಆ ಆಡಳಿತ ಪದ್ಧತಿಯನ್ನು ನಮ್ಮ ಲೋಕಸಭೆ, ಶಾಸನ ಸಭೆ ಮತ್ತು ಪುರಸಭೆಗಳಲ್ಲೂ ಜಾರಿಗೆ ತಂದುದಾದರೆ ಅದೆಷ್ಟು ಉತ್ತಮವಾದೀತೆಂದು ತಮ್ಮ ಒಂದು ಗ್ರಂಥದಲ್ಲಿ ಬರೆದರು.

ಹೊಯ್ಸಳರು ತಮ್ಮ ರಾಜ್ಯದ ಅಭಿವೃದ್ಧಿಗೆ ಶ್ರಮಿಸಿದ್ದು ಅದೇನೂ ಕಡಿಮಯಾಗಿರಲ್ಲಿಲ್ಲ. ಅವರು ಕೆತ್ತಿ ನಿಲ್ಲಿಸಿದ ಅತ್ಯಾಶ್ಚರ್ಯಕರವಾದ ಕಟ್ಟೋಣಗಳು ಇಂದಿನ ಕರ್ಣಾಟಕಕ್ಕೆ ಹೆಮ್ಮೆಯಂತಿವೆ. ಗೋವೆಯಿಂದೊಡಗೂಡಿದ ವಿಶಾಲ ಸಾಮ್ರಾಜ್ಯವೊಂದರ ಮೇಲೆ ಅವರು ಅಧಿಕಾರವನ್ನು ಚಲಾಯಿಸಿದರು. ಅಂತೆಯೇ ಉತ್ತರದಲ್ಲಿ ಕಳಚೂರಿಗಳೂ ಯಾದವರೂ ಇದ್ದರು, ಅಷ್ಟರಲ್ಲಿ ಉತ್ತರ ಹಿಂದೂಸ್ಥಾನದಿಂದ ಹಾದು ಬಂದ ಮಹ್ಮದೀಯರು ಧಾಳಿ ಬೆಳೆಸಿದುದರಿಂದ ದಕ್ಷಿಣದ ಸ್ಥಿತಿಗತಿಗಳು ಹದಗೆಡುತ್ತಾ ಬಂದುವು.

ಈ ಸಂಧಿಗ್ಧ ಪರಿಸ್ಥಿತಿಯಿಂದ ತೊಡಗಿ ಹಿಂದೂಸ್ಥಾನದ ದುರದೃಷ್ಟಕರವಾದ ಚರಿತ್ರೆಯ ಇನ್ನೊಂದು ಘಟ್ಟವು ಆರಂಭವಾಗುತ್ತದೆನ್ನಬಹುದು. ಆ ಕಾಲದಲ್ಲಿ ನಮ್ಮ ದೇಶದ ಜನರು ಇತರರಲ್ಲಿ ಅವರಿಗಿದ್ದ ವೈಷಮ್ಯವನ್ನು ಸಾಧಿಸುವುದಕೋಸ್ಕರ ಈ ವಿದೇಶೀಯರೊಡನೆ ಸ್ನೇಹವನ್ನು ಬೆಳೆಸುತಿದ್ದುದರಲ್ಲಿದ್ದ ಅಪಾಯವನ್ನು ಮರೆತು ವರ್ತಿಸಿದರು. ಹಾಗಿದ್ದರೂ ರಾಷ್ಟ್ರೀಯ ಐಕ್ಯತೆಯನ್ನು ಕಡೆಗಣಿಸಿ ಸಣ್ಣ ಪುಟ್ಟ ಹಲವಾರು ಅರಸರು ತಮ್ಮ ದರ್ಪ ಅಹಂಭಾವಗಳನ್ನು ಸಾಧಿಸುವುದಕೋಸ್ಕರ ಕೈಗೊಂಡ ಯುದ್ಧಗಳು ಆಯಾ ಕಾಲದಲ್ಲಿ ಅದೊಂದು ಬಗೆಯ ಆಟಗಳಂತೆ ತೋರಿದುವು.

ಹದಿನಾಲ್ಕನೇ ಶತಮಾನವು ಆರಂಭವಾದೊಡನೆ ಮುಂಬರುವ ಘಟನೆಗಳಿಗೆ ದ್ಯೋತಕವೋ ಎಂಬಂತೆ ಕರ್ಣಾಟಕದಲ್ಲಿ ಹಲವು ದುರಂತ ಸನ್ನಿವೇಶಗಳು ಮೇಲಿಂದ ಮೇಲೆ ಬಂದೊದಗಿದುವು. ಮಹಮದೀಯರನ್ನು ಪ್ರತಿಭಟಿಸಿ ಹೋರಾಡುತಿದ್ದ ಹೊಯ್ಸಳ ವೀರಬಲ್ಲಾಳನು ಮಧುರೆಯ ನಾಯಕನ ದ್ರೋಹದಿಂದಾಗಿ ಮಡಿದು ಬಿದ್ದನು. ಯಾದವ ರಾಮಚಂದ್ರನೂ ವಿದೇಶೀಯರೊಡನೆ ಕಾದಾಡಿ ಸೋತುದಲ್ಲದೆ ಅವನ ಅಳಿಯನಾದ ರಾಮದೇವನೂ ಮಹ್ಮದೀಯರಿಂದ ಕೊಲ್ಲಲ್ಪಟ್ಟನು. ವೈಭವದ ನಗರವಾದ ಮಧುರೆಯು ಕೊಳ್ಳೆಹೊಡೆಯಲ್ಪಟ್ಟುದಲ್ಲದೆ ಅಲ್ಲಿಯ ಅರಸನಾದ ಸುಂದರಪಾಂಡ್ಯನೂ ರಣರಂಗದಲ್ಲಿ ಕೊಲ್ಲಲ್ಪಟ್ಟನು. ಅವನ ವಿರೋಧಿಯಾದ ವೀರಪಾಂಡ್ಯನು ದೆವ್ವಗಳನ್ನು ತನ್ನ ದೇಶಕ್ಕೆ ಆಮಂತ್ರಿಸಿ ಅನಂತರ ತನ್ನ ಅತಿಥಿಗಳಿಂದಲೇ ಸಾವನ್ನು ಅಪ್ಪಬೇಕಾಯಿತು. ಹೀಗೆ ಕರ್ಣಾಟಕದ ಅರಸರು ತಮ್ಮ ವಿನಾಶಕ್ಕೆ ತಾವೇ ಕಾರಣರಾದರು.

ಈ ಎಲ್ಲಾ ಘಟನೆಗಳು ಹಿಂದೂಗಳಿಗೆ ತಮ್ಮ ಎಲ್ಲಾ ಶಕ್ತಿ ಸಾಹಸಗಳನ್ನು ಸಂಘಟಿಸಲು

ಸ್ಫೂರ್ತಿಯನ್ನು ಕೊಟ್ಟವು. ಇದರ ಪರಿಣಾಮವಾಗಿ ಚರಿತ್ರಾರ್ಹವಾದ ಆನೆಗೊಂದಿಯಲ್ಲಿ ವೈಭವದಿಂದ ಕೂಡಿದ ಹಂಪೆಯು ರಾಜಧಾನಿಯಾಗಿ ಒಂದು ಮಹಾ ಸಾಮ್ರಾಜ್ಯವನ್ನೇ ಸ್ಥಾಪಿಸಲನುವಾದರು. ಇವರ ಈ ಮಹತ್ಸಾಧನೆಯು ವಿದ್ಯಾರಣ್ಯರೇ ಮೊದಲಾದ ಶ್ರೇಷ್ಠ ವಿದ್ವಾಂಸರ ಆಶೀರ್ವಾದವನ್ನು ಪಡೆಯಿತು. ಹಿಂದೂಸ್ಥಾನದಲ್ಲಿ ದಿನದಿಂದ ದಿನಕ್ಕೆ ಹೆಚ್ಚುತ್ತಿದ್ದ ಮಹ್ಮದೀಯರ ಪ್ರಾಬಲ್ಯಕ್ಕೆ ಈ ಹೊಸ ಸಾಮ್ರಾಜ್ಯವು ತಡೆಹಾಕಿತು. ಕೆಲವೇ ವರ್ಷಗಳಲ್ಲಿ ಎಂದೆಂದಿಗೂ ಮರೆಯಲಾಗದ ಈ ಸಾಮ್ರಾಜ್ಯವು ವೈಭವದ ತುತ್ತತುದಿಗೇರಿತು. ದಕ್ಷಿಣದ ಬಹು ಭಾಗವು ಕೆಲವೇ ಸಮಯದಲ್ಲಿ ಈ ರಾಜ್ಯದೊಳಗೆ ಅಡಗಿತು.

ಖಂಡತುಂಡವಾದ ಹಲವು ಸೀಮೆಗಳನ್ನೆಲ್ಲಾ ಒಂದುಗೂಡಿಸಿ ಕಟ್ಟಲ್ಪಟ್ಟ ಈ ವಿಜಯನಗರ ಸಾಮ್ರಾಜ್ಯವು ಬೇರೆಬೇರೆ ಭಾಷೆಗಳೇ ಮೊದಲಾದ ಪ್ರತಿಬಂಧಗಳಿಗೊಳಗಾದರೂ ಒಂದೇ ಒಂದು ಸಂಯೋಜಿತ ಘಟಕವನ್ನು ಹೇಗೆ ಪ್ರತಿಷ್ಠಾಪಿಸಬಹುದೆಂಬುದನ್ನು ಲೋಕಕ್ಕೆ ತೋರಿಸಿತು. ಕೃಷ್ಣದೇವರಾಯನು ಭಾರತದಲ್ಲಿಯೇ ಅಲ್ಲ, ಏಷ್ಯಾಖಂಡದಲ್ಲಿಯೇ ಅದ್ವಿತೀಯನಾದ ದೊರೆಯೆಂದು ಪ್ರಖ್ಯಾತನಾದನು. 230 ವರ್ಷಗಳವರೆಗೂ ದಕ್ಷಿಣದ ಚರಿತ್ರೆಯೆಂದರೆ ವಿಜಯನಗರದ ರಾಜ್ಯದ ಚರಿತ್ರೆಯಾಗಿತ್ತು. ಆದರೆ 1565 ರಲ್ಲಿ ಬಾಹ್ಮನೀ ರಾಜ್ಯದ ಸುಲ್ತಾನರೆಲ್ಲರೂ ಹಿಂದೂಗಳ ಪ್ರಾಬಲ್ಯವನ್ನು ಅಡಗಿಸುವ ಒಂದೇ ಒಂದು ಧ್ಯೇಯದಿಂದ ಒಗ್ಗಟ್ಟಾದರು. ಇದಕ್ಕೆ ಕಾರಣವಾದರೋ ಬಹು ಕ್ಷುಲ್ಲಕವಾದುದಾಗಿದ್ದು ಚರಿತ್ರೆಯೇ ಇಲ್ಲಿ ಪುನರಾವರ್ತಿತವಾದಂತೆ ತೋರಿತು. ಸುಸಂಘಟಿತವಾಗಿದ್ದ ಮಹ್ಮದೀಯರ ಸೇನಾಬಲವನ್ನು ಕಡೆಗಣಿಸಿದ ವಿಜಯನಗರದ ರಾಜನಾದ ರಾಮರಾಯನು ರಕ್ಕಸ್‌ತಗ್ಗಿ ಯುದ್ಧದಲ್ಲಿ ಶತ್ರುಗಳ ಖಡ್ಗಕ್ಕೆ ಆಹುತಿಯಾದನು.

ಈ ಸಾಮ್ರಾಜ್ಯವು ಮೂರು ಶತಮಾನಗಳವರೆಗೆ ಮಹ್ಮದೀಯರನ್ನು ದಕ್ಷಿಣದಲ್ಲಿ ಮುಂದೊತ್ತಿ ಬರದಂತೆ ತಡೆದು ನಿಲ್ಲಿಸಿತು. ಆದರೆ ಈ ರಾಜ್ಯದೊಳಗಿನ ಅನ್ಯೋನ್ಯ ವೈಷಮ್ಯ, ಅನೈಕ್ಯತೆಗಳು ಜನರನ್ನು ಬಹು ಕಾಲ ಒಗ್ಗಟ್ಟಾಗಿರಿಸಲಿಲ್ಲ. ಇದು ಶತಮಾನಗಳಿಂದ ಭಾರತವು ಅನುಭವಿಸುತ್ತಾ ಬಂದ ದುರದೃಷ್ಟಕರವಾದ ಪರಂಪರೆಯಾಗಿದೆ. ಹಲವಾರು ಸಂದರ್ಭಗಳಲ್ಲಿ ಅನೈಕ್ಯತೆಯೇ ನಮ್ಮ ದೇಶದಲ್ಲಿ ಐಕ್ಯತೆಗಿಂತ ಮೇಲಾಗಿತ್ತು. ಒಂದು ಕಾಲದಲ್ಲಿ ಭಾರತ ಸಂಸ್ಕೃತಿ ಮತ್ತು ಶಿಲ್ಪಕಲಾ ಸಂಪತ್ತಿಗೆ ಕೇಂದ್ರವಾಗಿದ್ದ ಪ್ರಸಿದ್ಧ ಹಂಪೀನಗರದಲ್ಲಿ ವಿಜಯನಗರ ಸಾಮ್ರಾಜ್ಯದ ವೈಭವಾಡಂಬರಗಳು ಇಂದು ಪಾಳುಬಿದ್ದು ನೆಲಸಮವಾಗಿ ಹರಡಿದ್ದು ಕಾಣುತ್ತಿವೆ.

ಆದರೆ ಬಾಹ್ಮನೀ ಸಾಮ್ರಾಜ್ಯವಾದರೋ ಬಹುಕಾಲವೇನೂ ಬಾಳಲಿಲ್ಲ. ಈ ರಾಜ್ಯದ ಬೇರೆಬೇರೆ ಘಟಕಗಳು ವಿನಾಶಕಾರಕ ದುಷ್ಪರಿಣಾಮಗಳಿಗೊಳಗಾಗಿ ಖಂಡತುಂಡವಾಗಿ ಹರಿದು ಹೋದುವು. ಈ ರಾಜ್ಯದ ಸುಲ್ತಾನರು ತಮ್ಮೊಳಗೆಯೇ ಹೋರಾಡುತ್ತಾ ಎಲ್ಲರೂ ಒಬ್ಬರಿಂದೊಬ್ಬರಂತೆ ಪರಸ್ಪರ ಕೊಲೆಗಾಹುತಿಯಾದರು.

ಇದರ ನಂತರ ನಾಯಕರು ಮತ್ತು ಪಾಳೆಯಗಾರರು ಎಲ್ಲೆಲ್ಲೂ ತಲೆಯೆತ್ತಿ ಅನಾಯಕತೆಗೀಡಾದ ದಕ್ಷಿಣದಲ್ಲಿ ಇನ್ನಷ್ಟು ಕ್ಷೋಭೆಯ

ನ್ನುಂಟು ಮಾಡಿದರು. ಹಲವಾರು ಸ್ಥಳಗಳು ರಾಜಕೀಯ ಗೊಂದಲಗಳ ಕೇಂದ್ರವಾದುವು. ಸಾನನನು ತನ್ನ ಸಣ್ಣದಾದ ನಿಯಮಿತ ಕ್ಷೇತ್ರ ದೊಳಗೆ ಬಾಳುತ್ತಾ ಅಧಿಕಾರವನ್ನು ಅಂತಯೇ ಚಲಾಯಿಸಲು ಕೇವಲ ತನ್ನದೇ ಆದ ಸಂಕೀರ್ಣ ವಾತಾವರಣವನ್ನು ಆಗಿಂದಾಗ್ಗೆ ನಿರ್ಮಿಸಿಕೊಳ್ಳು ತ್ತಾನೆ. ವಿಜಯನಗರ ರಾಜ್ಯದ ಕಾಲಕ್ಕೆ ಹಿಂದೆಯೂ ಅನಂತರವೂ ನಮ್ಮ ದೇಶದ ಪರಿ ಸ್ಥಿತಿಯು ಹೀಗೆಯೇ ಇದ್ದಿತು.

ಹೇಗೂ ಕಾಲಾನಂತರ ಮುಹ್ಮದೀಯರು ನಮ್ಮ ದೇಶದ ರಾಜಕೀಯದಲ್ಲಿ ಹಿಂದಕ್ಕೆ ತಳ್ಳ ಲ್ಪಟ್ಟರು. ಆದರೆ ಹಿಂದೂ ಪ್ರಮುಖರ ಪ್ರಾಬಲ್ಯ ದಿಂದ ಹೀಗಾಯಿತೆಂದು ಯಾರಿಗೂ ಹೇಳಲು ಸಾಧ್ಯವಿಲ್ಲ. ಏಕೆಂದರೆ ಅಷ್ಟರಲ್ಲಿ ಪಾಶ್ಚಾತ್ಯರು ವ್ಯಾಪಾರಿಗಳಾಗಿ ಬಂದು ಭಾರತದಲ್ಲಿ ಬೇರೂರಿ ದರು. ಪ್ರಾರಂಭದಲ್ಲಿ ಡಚ್ಚರು ಮತ್ತು ಪೋರ್ಚು ಗೀಸರು ಭಾರತದ ಆಳರಸರೊಳಗೆ ಮನಸ್ತಾಪ ವನ್ನೆಬ್ಬಿಸುವುದರಲ್ಲಿ ಜಯಪ್ರದರಾದರು. ಕಡೆಗೆ ಅಧಿಕಾರಕ್ಕಾಗಿ ಹೋರಾಡಲು ಹಿಂದೂಸ್ಥಾನ ದಲ್ಲಿ ಫ್ರೆಂಚರು ಮತ್ತು ಇಂಗ್ಲಿಷರು ಮಾತ್ರ ಉಳಿದರು. ಹಿಂದೂಸ್ಥಾನವನ್ನು ಹಿಂದೂ ಸ್ಥಾನದ ಜನರ ಸಹಾಯದಿಂದಲೇ ಜಯಿಸುವ ತಂತ್ರವನ್ನು ಫ್ರೆಂಚರು ಮೊದಲ ಬಾರಿಗೆ ಸಾಧಿಸಿ ದರೂ ಈ ಭೇದೋಪಾಯದ ಆಟದಲ್ಲಿ ಬ್ರಿಟಿ ಷರು ಕೆಲವು ವರ್ಷಗಳಲ್ಲಿಯೇ ತಮ್ಮ ವಿರೋಧಿ ಗಳಾದ ಫ್ರೆಂಚರನ್ನು ಹಿಂದಿಕ್ಕಿದರು. ಹೀಗಾಗಿ ಸುಮಾರು ಐವತ್ತು ವರ್ಷಗಳ ಕಾಲಾವಧಿಯ ಲ್ಲಿಯೇ ಭಾರತದ ಇತರ ಭಾಗಗಳಂತೆ ಕರ್ಣಾಟ ಕವೂ ಬ್ರಿಟಿಷರ ಅಧೀನಕ್ಕೊಳಗಾಯಿತು.

ಪಾಶ್ಚಾತ್ಯರು ಈ ರೀತಿ ಒಳನುಗ್ಗಿದಾಗ ನಮ್ಮ ಜನರು ಅವರನ್ನು ಒಗ್ಗಟ್ಟಾಗಿ ಎದುರಿಸಿ ದರೆ? ಎರಡನೇ ಪರದೇಶೀಯನಾದ ಪಶ್ಚಿಮದೇಶ ದವನು ಈ ರೀತಿ ಮುನ್ನುಗ್ಗಿದಾಗ ಮೊದಲು ಬಂದ ಪರದೇಶೀ ಮುಹ್ಮದೀಯನು ಅಷ್ಟರಲ್ಲಿ ದೇಶೀಯನಾದನು. ಇಷ್ಟರಲ್ಲಿ ಹಿಂದೂಗಳೂ ಮಹಮದೀಯರೂ ಒಂದಾಗಿ ಪಾಶ್ಚಾತ್ಯರಿಗೆ ವಿರೋಧವಾಗಿ ಕಾದಿದರು. ಆದರೆ ದೇಶೀಯ ರಾದ ಈ ಹಿಂದೂ ಮುಸ್ಲಿಮರೊಳಗೂ ಪರಸ್ಪರ ಸ್ಪರ್ಧೆಯೂ ಅಧಿಕಾರಕ್ಕಾಗಿ ಪೈಪೋಟಿಯೂ ಇದ್ದೇ ಇದ್ದಿತು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಆಂಗ್ಲೇಯರಿಗೆ ಎದುರಾಗಿ ಖಡ್ಗ ವೆತ್ತಿದಾಗ ಹಿಂದೂಗಳು ಈ ತಂದೆ ಮಗನಿಗೆ ಅವರ ಹೋರಾಟದಲ್ಲಿ ಹೃತ್ಪೂರ್ವಕವಾಗಿ ಸಹ ಕರಿಸಲಿಲ್ಲ. ಈ ತಂದೆ ಮತ್ತು ಮಗನಿಗೆ ತಮ್ಮ ರಾಜ್ಯವನ್ನು ವಿಸ್ತರಿಸುವ ಆಕಾಂಕ್ಷೆಯು ಇದ್ದೇ ಇದ್ದಿತು. ಆದರಂತೆ ಜೀವನದಲ್ಲಿ ಯಾವ ಆಧಾ ರವೂ ಇಲ್ಲದಿದ್ದ ಅವರು ವಿಶಾಲವಾದ ರಾಜ್ಯ ವನ್ನೇ ಸ್ಥಾಪಿಸುವಂತಾದರು.

ಆದರೆ ಟಿಪ್ಪುಸುಲ್ತಾನನು ಹೇಗೂ ದುರ ದೃಷ್ಟಶಾಲಿಯೆಂದೆನಿಸಿದನು. ಇವನು ಮೈಸೂರು ರಾಜವಂಶದವರಿಂದ, ಸ್ಥಳೀಯ ದಳವಾಯಿ ಗಳಿಂದ ಮತ್ತು ಮರಾಠರಿಂದ ಎದುರಿಸಲ್ಪಟ್ಟನು. ಇವರೆಲ್ಲರೂ ಹಿಂದೂಗಳು ಮಾತ್ರವೇ ಅಲ್ಲ; ಆಂಗ್ಲೇಯರ ಮಿತ್ರರೂ ಆಗಿದ್ದರು. ಆದರೆ ಈ ರೀತಿ ಇವರು ವಿದೇಶಿಯರ ಪಕ್ಷವನ್ನು ವಹಿಸಿದ್ದು ನಿಜಕ್ಕೂ ಸರಿಯಾದ ರಾಜನೀತಿಯಾಗಲಿಲ್ಲ. ಪರ್ಷಿಯಾದ ಚಕ್ರವರ್ತಿ, ಟರ್ಕಿಯ ಸುಲ್ತಾನ, ಡೆಲ್ಲಿಯ ಷಾಹ ಅಲಂ, ಮತ್ತು ಹೈದರಾಬಾದಿನ ನೈಜಾಮನ ಸಹಾಯವನ್ನಲ್ಲದೆ ಫ್ರೆಂಚರ ಹಾಗೂ ನೆಪೋಲಿಯನ್ನನ ಮಿತ್ರತ್ವವನ್ನು ಪಡೆಯಲು ಟಿಪ್ಪುವು ಕೈಕೊಂಡ ಅಟ್ಟಹಾಸದ ರಾಜತಂತ್ರ ವೆಲ್ಲವೂ ಬ್ರಿಟಿಷರ ರಾಜಕೀಯ ಕುತಂತ್ರದ ನೈಪುಣ್ಯದ ಎದುರಿಗೆ ಯಾವ ಪ್ರಯೋಜನಕ್ಕೂ ಬಾರದೆ ಹೋಯಿತು.

ಅನಂತರ ಬ್ರಿಟಿಷರನ್ನು ಹೆಜ್ಜೆಯಿಂದ ಹೆಜ್ಜೆಗೆ ಪ್ರತಿಭಟಿಸಲು ಮುಂದೆ ಬಂದವರಲ್ಲಿ ಕಿತ್ತೂರಿನ ರಾಣಿ ಚೆನ್ನಮ್ಮ, ಕೆಳದಿಯ ಸದಾಶಿವ, ಇಕ್ಕೇರಿಯ ಶಿವಪ್ಪ, ಮೈಸೂರಿನ ಚಿಕ್ಕದೇವ, ಸಂಗೊಳ್ಳಿಯ ರಾಯಣ್ಣ, ಸುರಪುರದ ವೆಂಕಟಪ್ಪ, ಕೊಡಗಿನ ವೀರರಾಜ, ಮುಂಡರಗಿಯ ಭೀಮರಾಯ ಇವರೇ ಮೊದಲಾದವರಾಗಿದ್ದರು. ಆದರೆ ದುರದೃಷ್ಟವಶಾತ್ ಈ ಹೋರಾಟಗಾರರಲ್ಲೂ ತಮ್ಮ ದೇಶದ ಸ್ವಾತಂತ್ರ್ಯವನ್ನು ಪಡೆಯುವ ಧ್ಯೇಯಕ್ಕಿಂತ ತಮ್ಮ ಸ್ವಾರ್ಥವನ್ನು ಸಾಧಿಸುವ ಸಲುವಾಗಿಯೇ ಆಸಕ್ತಿಯಿದ್ದಿತು. ಹೀಗಾದುದರಿಂದ ಈ ಎಲ್ಲಾ ಕ್ರಾಂತಿಕಾರರನ್ನು ಅವರವರ ಸ್ಥಳಗಳಲ್ಲಿ ಅವರವರ ವಿರೋಧಿಗಳೇ ಆದ ದೇಶದ್ರೋಹಿಗಳು ಎದುರಿಸಿ ಈ ಚಳವಳಿಗೆ ಮುಟ್ಟುಗೋಲು ಹಾಕಿದರು.

ಒಬ್ಬ ಭಾರತೀಯನಿಗೆ ಪ್ರತಿಯಾಗಿ ಮತ್ತೊಬ್ಬನನ್ನು ಹತ್ತಿಕ್ಕುವುದೇ ಆಂಗ್ಲೇಯರ ಅಂದಿನ ದಿನನಿತ್ಯದ ವ್ಯವಹಾರವಾಗಿದ್ದಿತು. ಹೀಗಾದರೂ 1856ರರ ದಂಗೆಯ ಕಾಲದಲ್ಲಿ ಮತ್ತು ಈಚೆಗೆ ಗಾಂಧೀಜಿಯ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಯ ಕಾಲದಲ್ಲೂ ಕರ್ಣಾಟಕ ರಾಷ್ಟ್ರೀಯವಾದಿಗಳು ಬ್ರಿಟಿಷರ ಅಧಿಕಾರ ಪ್ರಭಾವವನ್ನು ಪ್ರತಿಭಟಿಸುತ್ತಲೇ ಇದ್ದರು.

ಒಂದು ಧ್ಯೇಯಸಾಧನೆಗಾಗಿ ಚಳವಳಿಯನ್ನು ಹೂಡಿ ಹೋರಾಡುವುದು ಒಂದು ಕ್ರಮವಾದರೆ ಆ ಹೋರಾಟದಲ್ಲಿ ಜಯಪ್ರದರಾದಾಗ ತಾವು ಕೈಗೊಂಡ ಸೇವೆಯ ಫಲವನ್ನನುಭವಿಸಲು ಮನುಷ್ಯನು ಸ್ವಾರ್ಥಿಯಾಗುವುದು ಮತ್ತೊಂದು ವೈಚಿತ್ರ್ಯವಾಗಿದೆ. ಈ ಸಂದರ್ಭದಲ್ಲಿ ಅವರು ತಮ್ಮ ವೈಯಕ್ತಿಕ ವಿಶಿಷ್ಟತೆಯನ್ನೂ ರಾಷ್ಟ್ರೀಯ ಸ್ವಾಭಿಮಾನವನ್ನೂ ಕಳೆದುಕೊಳ್ಳುತ್ತಾರೆ. ಕರ್ಣಾಟಕದ ದೀರ್ಘಚರಿತ್ರೆಯು ಈ ವಿಚಾರವನ್ನೂ ವಿಪುಲವಾಗಿ ಪ್ರದರ್ಶಿಸುತ್ತಲೇ ಬಂದಿದೆ.

1956ರರ ವರೆಗೂ ಬರಿಯ ನಾಮಕಾವಸ್ಥೆಯಲ್ಲಿ ಮಾತ್ರ ಒಂದು ಪ್ರಾಂತವಾಗಿದ್ದ ಕರ್ಣಾಟಕದ ಪಾರಮಾರ್ಥಿಕ ವೈಶಿಷ್ಟ್ಯ, ಸಾಂಸ್ಕೃತಿಕ ಪರಂಪರೆ ಮತ್ತು ಅದರ ಸರ್ವಜೀವಾಳವನ್ನು ಕಾಪಾಡಿಕೊಂಡು ಬಂದವರು ಯಾರು? ಅದು ಜನಸಾಮಾನ್ಯರಲ್ಲದೆ ಎಂದಿಗೂ ರಾಜ ಮಹಾರಾಜರೂ ಅಲ್ಲ! ಕನ್ನಡ ಭಾಷೆಯು ಭಾರತದ ಕೆಲವೇ ಪುರಾತನ ಭಾಷೆಗಳಲ್ಲಿ ಒಂದಾಗಿದೆ. ಕರ್ಣಾಟಕದ ಬೇರೆ ಬೇರೆ ಭಾಗಗಳಲ್ಲಿ ಅಧಿಕಾರ ನಡೆಸುತ್ತಿದ್ದ ಪೂರ್ವಕಾಲದ ರಾಜರು ತಾವು ಯಾವುದೇ ಭಾಗಕ್ಕೆ ಸೇರಿದ್ದವರಾಗಿದ್ದರೂ ಕನ್ನಡ ಕಲೆ, ಸಂಸ್ಕೃತಿ, ಸಾಹಿತ್ಯ ಇತ್ಯಾದಿಗಳ ಬೆಳವಣಿಗೆಗೆ ಧಾರಾಳವಾಗಿ ಪ್ರೋತ್ಸಾಹವಿತ್ತರಲ್ಲದೆ ತಾವು ಕರ್ಣಾಟಕ ಅರಸರೆಂದು ಕರೆದುಕೊಳ್ಳಲು ಹೆಮ್ಮೆ ಪಡುತ್ತಿದ್ದರು. ಗೋದಾವರಿಯಿಂದ ಕಾವೇರಿಯ ವರೆಗೂ ಇರುವ ಪ್ರಸಿದ್ಧವಾದ ಮತ್ತು ಜೀವಕ್ಕೆ ಸತ್ತ್ವ ಶಕ್ತಿಯನ್ನೊದಗಿಸಬಲ್ಲ ಹಲವಾರು ಹೊಳೆಗಳು ಜನರ ಆತ್ಮಶಕ್ತಿಯನ್ನೂ ಪಾರಮಾರ್ಥಿಕ ವಿಚಾರ ಪರಂಪರೆಗಳನ್ನೂ ಬಳೆಸಿ ಪೋಷಿಸುತ್ತಲೇ ಬಂದುವು.

ಕನ್ನಡಿಗರಾದ ರಾಮಾನುಜ, ಮಾಧವ, ಬಸವ, ವಿದ್ಯಾರಣ್ಯ ಮೊದಲಾದವರು ಸನಾತನ ಧರ್ಮದ ಉಜ್ಜೀವನಕ್ಕೆ ದ್ಯೋತಕವಾಗಿದ್ದರು. ಶೃಂಗೇರಿ, ಗೋಕರ್ಣ, ಉಡುಪಿ, ಹುಬ್ಬಳ್ಳಿ

ಮೊದಲಾದ ಕ್ಷೇತ್ರಗಳೂ ಯಾತ್ರಾಸ್ಥಳಗಳೂ ಕರ್ನಾಟಕ ಸಂಸ್ಕೃತಿಯ ಕೇಂದ್ರವಾದುವು. ಪಂಪ, ರನ್ನ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶನೇ ಮೊದಲಾದವರ ಕೃತಿಗಳೂ ಎಲ್ಲೆಲ್ಲೂ ಜನಜನಿತವಾಗುತ್ತಾ ಬಂದಿವೆ. ಪುರಂದರದಾಸ, ಕನಕದಾಸ,ವಿಜಯದಾಸ,ಸರ್ವಜ್ಞರೇ ಅಲ್ಲದೆ ಹಲವಾರು ಅಗಣ್ಯದಾಸರೂ ಕೀರ್ತನಕಾರರೂ ಅವರ ಸ್ಫೂರ್ತಿದಾಯಕವಾದ ಮತ್ತು ಭಾವಪ್ರಚೋದಕವಾದ ಕೀರ್ತನೆ ಗಾಯನಗಳಿಂದ ಕನ್ನಡ ಸಂಸ್ಕೃತಿಯು ಸದಾ ಜೀವಂತವಾಗಿರುವಂತೆ ಮಾಡಿದರು. ಹಲವಾರು ವೀರಶೈವ ವಿದ್ವಾಂಸರಿಂದ ಪ್ರಚೋದಿಸಲ್ಪಟ್ಟ ಅವರ ವಿಖ್ಯಾತ ವಚನ ಸಾಹಿತ್ಯವು ಅವರ ಸರಳತೆ ಮತ್ತು ಪಾರಮಾರ್ಥಿಕ ವಿಚಾರ ಪರಿಶೀಲನೆಯ ಕಾರಣದಿಂದ ಜನಸಾಮಾನ್ಯರ ಹೃದಯಕ್ಕೆ ನೇರವಾಗಿ ನಾಟಿ ಬೇರೂರಿದವು. ಸಾಂಗತ್ಯ, ಲಾವಣಿ, ಸುಗ್ಗಿಪದ, ಜೋಗಿಹಾಡು, ಮತ್ತಿತರ ಜಾನಪದ ಹಾಡುಗಳು ಜನಸಾಮಾನ್ಯರಿಗೆ ಬಹುಸರಳ ರೀತಿಯಲ್ಲಿ ಮತ್ತು ಮನಮುಟ್ಟುವಂತೆ ವಿಚಾರ ಧಾರೆಯನ್ನು ನೀಡುತ್ತಾ ಬಂದುವು.

ಭಾರತದ ಬೇರಾವ ಪ್ರಾಂತಗಳೂ ಕರ್ನಾಟಕದಲ್ಲಿ ಹರಡಿರುವಷ್ಟು ಶಿಲ್ಪಕಲಾ ವೈಭವ ಮತ್ತು ಸೌಂದರ್ಯದಿಂದ ಕೂಡಿದ ದೇವಾಲಯಗಳು ಮತ್ತು ಇತ್ತರ ಕಟ್ಟೋಣಗಳಿಂದ ಕೂಡಿರುವುದಿಲ್ಲ. ಕನ್ನಡಿಗ ಶಿಲ್ಪಿಗಳು ಕಲ್ಲುಗಳೊಡನೆ ಹಾಡಿ ಅವನ್ನೂ ಹಾಡಿಸಿದ್ದಾರೆ. ತಮ್ಮ ಸುಂದರವಾದ ವಾಸ್ತುಶಿಲ್ಪ ಕಲಾಕುಸುರಿಗಳಿಂದ ಮೆರೆಯಿಸಲ್ಪಟ್ಟ ಕಟ್ಟೋಣಗಳನ್ನು ಹಲವು ನಿರ್ಮಿಸಿದ್ದಾರೆ. ನೋಟಕರಿಗೆ ನಿರಂತರ ಸಂತೋಷವನ್ನು ಒದಗಿಸುವಂತೆ ಹಲವಾರು ರೂಪು ವೈಯ್ಯಾರಗಳಲ್ಲಿ ಕುಣಿಯುವ ಮತ್ತು ಹಾಡಿನ ಧ್ವನಿಯನ್ನು ಬೀರುವ ಬೇರೆ ಬೇರೆ ವೈಖರಿಗಳಲ್ಲಿ ಕಲ್ಲುಗಳನ್ನು ಕೆತ್ತಿದ್ದಾರೆ.

ಬೇಲೂರು, ಹಳೇಬೀಡು,ಬಾದಾಮಿ ಮತ್ತು ಹಂಪೆಯಿಂದ ಹಿಡಿದು ಆ ಅದ್ಭುತವಾದ ಗೊಮ್ಮಟ ವಿಗ್ರಹ, ಬಿದರೆ, ರಾಯಚೂರು ಮತ್ತು ಗುಲ್ಬರ್ಗಗಳ ಆಡಂಬರ ಭರಿತವಾದ ಕೋಟೆಗಳ ವರೆಗೂ ಇಡೀ ನಾಡು ವಾಸ್ತು ಶಿಲ್ಪ ಸಂಪತ್ತಿನಿಂದ ತುಂಬಿದೆ. ಶಿಲ್ಪಕಲಾ ವಿಶಾರದರಾದ ನಮ್ಮ ಪೂರ್ವಿಕರು ಮುಂದಿನ ಪೀಳಿಗೆಗೆ ಅವರ ಕಲಾ ನೈಪುಣ್ಯದ ವಿಶಿಷ್ಟತೆಯನ್ನು ಅಂತಯೇ ಈ ರೀತಿ ನಾಡಿನ ಉದ್ದಗಲಕ್ಕೂ ಚೆಲ್ಲಾಡಿ ಹೋಗಿರುವರು.

ಈ ಹಿನ್ನೆಲೆಯನ್ನು ಅನುಸರಿಸಿ ಸ್ಫೂರ್ತಿದಾಯಕವಾದ ಕರ್ನಾಟಕವೆಂಬ ಹೆಸರಿನ ಪರಂಪರೆಯು ಕನ್ನಡಿಗರ ಹೃದಯದಲ್ಲಿ ನೆಲೆಸಿತು. ಸ್ಥಳೀಯ ಜನರೊಳಗಿನ ದ್ವೇಷ ವೈಷಮ್ಯಗಳಿಗೂ ವಿದೇಶಿಯರ ಕಿರುಕುಳ ಆಕ್ರಮಣಗಳಿಗೂ ಜಗ್ಗದೆ ನಮ್ಮ ಸಂಸ್ಕೃತಿಯ ಪ್ರವಾಹದ ಹೆದ್ದೆರೆಯು ಸರಾಗವಾಗಿ ಹರಿಯುತ್ತಾ ಬಂದಿತು. ಆ ಪ್ರವಾಹದ ಬುಗ್ಗೆಯು ಎಂದೆಂದಿಗೂ ಆರದೆ ತಿಳಿನೀರನ್ನು ಝುರ ಝುರನೆ ಚೆಲ್ಲುತ್ತಾ ಶತಮಾನ ಪರ್ಯಂತರವಾಗಿ ಉಕ್ಕುತ್ತಾ ಬಂದಿತು.

ಹೀಗಿರಲು ಕರ್ನಾಟಕದ ಈ ಸುದೀರ್ಘ ಇತಿಹಾಸವು ಇಂದಿನ ಜನತೆಗೆ ಏನನ್ನು ಬೋಧಿಸುತ್ತದೆ? ಮುಂದಿನ ಪೀಳಿಗೆಗೆ ಅದಾವ ಪಾಠಗಳನ್ನು ಅದು ಕಲಿಸುತ್ತದೆ? ಈ ವಿಷಯವನ್ನು ಆಲೋಚಿಸಿದರೆ ಈ ನಾಡಿನ ರಾಜಕೀಯ ಚರಿತ್ರೆಯಿಂದ ಕಲಿಯಲು ಸಹಸ್ರಾರು ಪಾಠಗಳು ಇವೆಯೆಂದು ಯಾರಿಗೂ ತೋರಬಹುದು. ಆದರೆ ಈ ಪ್ರಾಂತವು ಕಾಲದಿಂದ ಕಾಲಕ್ಕೆ ಅನುಭವಿಸಿದ ನೂರಾರು ದುರಂತ ಘಟನೆಗಳಿಂದ ಇಂದು ಅಧಿ

ಕಾರಕ್ಕೆಂದು ಹೆಣಗುತ್ತಿರುವ ಜನತೆಯು ಈ ಪಾಠ ಗಳನ್ನು ಯಾವ ದೃಷ್ಟಿಯಿಂದ ಮನಸ್ಸಿಗೆ ತಂದು ಕೊಳ್ಳುವುದೋ ಎಂದು ಹೇಳುವುದೇ ಪ್ರಯಾಸ ವಾಗಿದೆ. ಅಲ್ಲದೆ ಈ ರಾಜಕೀಯ ತಾಕಲಾಟಗ ಳಾದರೋ ಮನಸ್ಸಿಗೆ ಉತ್ಸಾಹವನ್ನು ಹುಟ್ಟಿಸುವ ವಿಷಯಗಳಂತೂ ಅಲ್ಲ. ಏಕೆಂದರೆ ಅಕ್ರಮ, ಅಕೃತ್ಯಗಳಿಂದಲೇ ಆಳರಸರು ತಮ್ಮ ವ್ಯವಹಾರ ವನ್ನು ನಡೆಸುತ್ತಿದ್ದರು. ದ್ರೋಹ, ಮೋಸ, ಅನ್ಯೋನ್ಯ ದ್ವೇಷ, ವೈಷಮ್ಯಗಳೇ ಎಂದೆಂದಿಗೂ ತಾಂಡವವಾಡಿದುವು.

ಆದರೆ ಇವೆಲ್ಲಕ್ಕಿಂತಲೂ ವಿಶೇಷವಾಗಿ ಕರ್ಣಾಟಕವು ಜನಸಾಮಾನ್ಯರಲ್ಲಿ ಹುದುಗಿದ್ದ ಅದ್ಭುತ ತಾತ್ವಿಕ ಧ್ಯೇಯ ಸಿದ್ಧಾಂತಗಳಿಂದ ಪುನೀತವಾಗಿದೆ. ಕನ್ನಡಿಗರು ತಾಳಿದ್ದ ಐಕ್ಯ ತೆಯ ಕನಸು ತಮ್ಮ ಧರ್ಮದಲ್ಲಿ ಅವರು ಇಟ್ಟಂಥಾ ಅಚಲಶ್ರದ್ಧೆ, ಅಕ್ರಮ ಅನ್ಯಾಯ ಗಳನ್ನೆದುರಿಸಲು ಅವರು ಕೈಗೊಂಡ ದೃಢ ಸಂಕಲ್ಪ, ತಮ್ಮ ನಾಡಿನ ಮೇಲೆ ಅವರಿಗಿದ್ದ ಅಸಮಾನ ಪ್ರೇಮ, ತಮ್ಮ ಕಲೆ ಸಂಸ್ಕೃತಿ ಗಳಲ್ಲಿ ಅವರು ತಾಳಿದ್ದ ಆಸಕ್ತಿ ಮತ್ತು ಸ್ವಾಭಾ ವಿಕ ಭಕ್ತಿಯೇ ಮೊದಲಾದುವು ಕರ್ಣಾಟಕದ ಆತ್ಮಸಿದ್ಧಿ ಮತ್ತು ಪಾರಮಾರ್ಥಿಕ ವೈಶಿಷ್ಟ್ಯವನ್ನು ಶತಮಾನ ಪರ್ಯಂತರವೂ ಪೋಷಿಸಿದುವು. ಈ ಅಮೋಘ ಹಾಗೂ ದೈವಿಕ ಪರಂಪರೆ ಯಲ್ಲಿ ಬಳೆದು ಬಂದ ಕರ್ಣಾಟಕದ ಜನತೆಯು ಕಾಲದಿಂದ ಕಾಲಕ್ಕೆ ಸಂದರ್ಭಾನುಸಾರವಾಗಿ ಸಂಭವಿಸಿದ ರಾಜಕೀಯ ಉತ್ಕ್ರಾಂತಿ ಮತ್ತು ಸಾಮಾಜಿಕ ಆಂದೋಲನಗಳಿಂದ ಅತ್ತಿತ್ತ ಸೆಳೆ ದಾಡಲ್ಪಟ್ಟಿದ್ದರೂ ಏಕೀಭಾವ, ಸಮತಾದೃಷ್ಟಿ ಮತ್ತು ಆತ್ಮೀಯತೆಯಿಂದ ಕೂಡಿದ ಜನಾಂಗ ವನ್ನು ಪರಂಪರಾನುಗತವಾಗಿ ಪೋಷಿಸುತ್ತಾ ಬಂದಿದೆಯೆಂಬುದೇ ಒಂದು ಹೆಮ್ಮೆಯ ವಿಷಯ ವಾಗಿದೆ.

ಐ. ಮಾ. ಮುತ್ತಣ್ಣ

---

# ಆಂಧ್ರದಲ್ಲಿ ವೀರಶೈವರು

ಬಸವೇಶ್ವರನಿಗೆ ಮುಂಚೆ ಕರ್ಣಾಟಕದಲ್ಲೂ ಆಂಧ್ರದೇಶದಲ್ಲೂ ವೀರಶೈವ ಮತವು ಪ್ರಚಾರದಲ್ಲಿತ್ತು. ಆಂಧ್ರರು ಮತ್ತು ಕರ್ಣಾಟಕದವರು ಅಕ್ಕಪಕ್ಕದವರಾಗಿ ಸಂಬಂಧವನ್ನು ಬೆಳೆಸಿದ್ದರು. ಇವರಿಬ್ಬರೂ ಕೆಲವು ಶತಮಾನಗಳವರೆಗೆ ಒಂದೇ ಆಧಿಪತ್ಯಕ್ಕೆ ಒಳಪಟ್ಟಿದ್ದರು. ಇಬ್ಬರ ಭಾಷೆಗಳೂ ದ್ರಾವಿಡಸಂಪ್ರದಾಯದವುಗಳು. ಇವರ ಲಿಪಿಗಳು ಬ್ರಾಹ್ಮೀಲಿಪಿಯಿಂದ ಉತ್ಪನ್ನವಾಗಿ ಒಂದೇ ಸಮನಾದ ರೂಪುರೇಖೆಗಳನ್ನು ಹೊಂದಿ ದ್ರಾವಿಡ ಸಂಪ್ರದಾಯವನ್ನನುಸರಿಸಿದವು. ಶೈವೋತ್ಕರ್ಷವು ಎರಡು ಕಡೆಯೂ ಒಂದೇ ಸಮನಾಗಿ ಬೆಳೆಯಿತು. ಶ್ರೀಶೈಲವು ಇವರಿಬ್ಬರಿಗೂ ಪವಿತ್ರವಾದ ಯಾತ್ರಾಸ್ಥಳವಾಯಿತು. ಕರ್ಣಾಟಕದಲ್ಲೂ ಆಂಧ್ರದೇಶದಲ್ಲೂ ವೀರಶೈವ ಗುರುಗಳು ಮಠಗಳನ್ನು ಸ್ಥಾಪಿಸಿದರು. ಈ ಎರಡು ದೇಶಗಳಲ್ಲಿಯೂ ಲಿಂಗಾರಾಧನೆಯು ವಿಶೇಷ ಪ್ರಚಾರದಲ್ಲಿತ್ತು.

ಡಕ್ಕನ್ನಿನಲ್ಲಿ ಕೆಲವು ಕಾಲ ಬೌದ್ಧ ಜೈನ ಧರ್ಮಗಳು ನೆಲೆಸಿದ್ದವು. ಆಗ ಶೈವಮತವೂ ಪ್ರಚಾರದಲ್ಲಿತ್ತು. ಬೌದ್ಧರೂ ಜೈನರೂ ವರ್ಣಾಶ್ರಮುವನ್ನನುಸರಿಸುತ್ತಿರಲಿಲ್ಲವಾದುದರಿಂದ ಅವು ಹೆಚ್ಚು ಪ್ರಚಾರಕ್ಕೆ ಬಂದವು. ಶೈವರು ವೇದಸಂಪ್ರದಾಯಗಳನ್ನನುಸರಿಸುತ್ತಾ ವರ್ಣಾಶ್ರಮ ಧರ್ಮದವರಾಗಿದ್ದರು. ಆಗ ಶ್ರೀ ಶಂಕರಾಚಾರ್ಯರ ಅದ್ವೈತಮತ ಬೌದ್ಧಮತದ ಅವನತಿಗೆ ಕಾರಣವಾಯಿತು. ಆಗ ರಾಜ್ಯಭಾರ ಮಾಡುತ್ತಿದ್ದ ಪಶ್ಚಿಮ ಚಾಳುಕ್ಯರು ಜೈನಧರ್ಮಕ್ಕೆ ಹೆಚ್ಚು ಪ್ರೋತ್ಸಾಹವನ್ನು ಕೊಟ್ಟರು. ಹಾಗೆಯೇ ಪಾಶುಪತ, ಕಾಳಾಮುಖ, ಲಕುಲೀಶ ಶೈವಸಂಪ್ರದಾಯಗಳು ಪ್ರಬಲಸ್ಥಾನವನ್ನು ಪಡೆದವು. ಈ ಸಂಪ್ರದಾಯಗಳಲ್ಲಿದ್ದ ವರ್ಣಾಶ್ರಮುವನ್ನು ಸಡಿಲಿಸಿ ವೀರಶೈವ ಧರ್ಮವು ಕನ್ನಡದ್ದೇ ಆದ ವಿಶಿಷ್ಟ ತತ್ತ್ವ ಮತ್ತು ಸಂಪ್ರದಾಯಗಳನ್ನನುಸರಿಸಿಕೊಂಡು ರಾಜಾಶ್ರಯದಿಂದಲೂ ವಿದ್ಯಾವಂತರೂ ಸಿದ್ಧಪುರುಷರೂ ಆದ ಗುರುಗಳ ಪ್ರಭಾವದಿಂದಲೂ ವಿಶೇಷವಾಗಿ ಪ್ರಸಾರವಾಯಿತು; ಪ್ರಾಬಲ್ಯಕ್ಕೆ ಬಂದಿತು.

ಕಲ್ಯಾಣದ ಚಾಲುಕ್ಯ ಚಕ್ರವರ್ತಿಯ ಸರದಾರನಾಗಿದ್ದ ಬಿಜ್ಜಳನು ತಾನೇ ರಾಜ್ಯದ ಅಧಿಕಾರವನ್ನು ವಹಿಸಿಕೊಂಡು ರಾಜನಾದನು. ಆಗ ಕಾಕತೀಯರು ಉತ್ತರದಲ್ಲೂ ಹೊಯಿಸಳರು ದಕ್ಷಿಣದಲ್ಲೂ ಪ್ರಬಲರಾಗಿದ್ದರು. ಹಿಂದಿನ ರಾಜರಲ್ಲಿ ಪ್ರಬಲನಾಗಿದ್ದ ಬಲದೇವನೆಂಬ ಮಂತ್ರಿಯ ಸೋದರಳಿಯನಾಗಿದ್ದ ದೈವಭಕ್ತನಾದ ಪ್ರಭಾವಶಾಲಿಯಾದ ಬಸವೇಶ್ವರನನ್ನು ತನ್ನ ಮಂತ್ರಿಯನ್ನಾಗಿ ಬಿಜ್ಜಳನು ಆರಿಸಿಕೊಂಡನು. ಬಸವೇಶ್ವರನು ಆಗ ಪ್ರಚಲಿತವಾಗಿದ್ದ ವೀರಶೈವ ಮತದಲ್ಲಿ ವರ್ಣಾಶ್ರಮುವನ್ನು ಖಂಡಿಸಿ ಸಮಾಜ ಸುಧಾರಣೆಗೆ ಸಹಾಯವಾಗುವ ಮಾರ್ಪಾಡುಗಳನ್ನು ಮಾಡಿ ಆಗಮುಗಳಲ್ಲಿ ಕಂಡುಬರುವ ಸರಳ ಮತ್ತು ಶುದ್ಧಸಂಪ್ರದಾಯಗಳನ್ನೂ ತಪಶ್ಚರ್ಯವೇ ಮೊದಲಾದ ಕ್ರಮುಗಳನ್ನೂ ಅನುಸರಿಸಿ ವೀರಶೈವ ಮತದ ಉಚ್ಛ್ರಾಯಸ್ಥಿತಿಗೆ ಕಾರಣನಾದನು. ಈತನು ಸ್ಥಾಪಿಸಿದ ಅನುಭವಮಂಟಪವೆಂಬ ಧರ್ಮಸಂಸ್ಥೆಯಲ್ಲಿದ್ದ ಶರಣಶ್ರೇಷ್ಠರಾದ ಅಲ್ಲಮ

ಪ್ರಭುಗಳೇ ಮೊದಲಾದ ಶರಣಸಂತತಿಯಿಂದ ವೀರಶೈವ ಮತವು ಪ್ರಾಬಲ್ಯಕ್ಕೆ ಬಂದಿತು. ವೀರ ಶೈವ ಧರ್ಮವನ್ನು ಪರಿಣಾಮಕಾರಿಯಾದ ದೇಶ ಭಾಷೆಯಲ್ಲಿ ಪ್ರಚಾರಮಾಡಿದ್ದರಿಂದ ಕರ್ನಾಟಕ ದಲ್ಲಿ ಅನೇಕರು ಈ ಮತವನ್ನವಲಂಬಿಸಿದರು. ಕರ್ನಾಟಕ ಮತ್ತು ಆಂಧ್ರದೇಶದಲ್ಲಿ ಸನ್ನಿವೇಶ ಗಳು ಪ್ರತ್ಯೇಕವಾಗಿದ್ದವು.

ಆಂಧ್ರದೇಶದಲ್ಲಿ ವೀರಶೈವ ಮತಕ್ಕೆ ದೇಶ ಭಾಷೆಯ ಸಾಹಿತ್ಯ ದೊರೆಯಲ್ಲಿಲ್ಲ. ಮತಗ್ರಂಥ ಗಳೆಲ್ಲಾ ಕೇವಲ ಸಂಸ್ಕೃತದಲ್ಲಿದ್ದವು. ಅಲ್ಲಿನ ವೀರ ಶೈವ ಮತವು ವೇದಸಂಪ್ರದಾಯಗಳನ್ನನುಸರಿ ಸಿಕೊಂಡು ಬಂದಿತು. ವರ್ಣಾಶ್ರಮಗಳ ಕಟ್ಟಿ ನಲ್ಲೆ ಬೆಳೆಯಿತು. ಆದರೂ ತಮ್ಮದೇ ಆದ ಒಂದು ವೈಶಿಷ್ಟ್ಯದಿಂದ ವೈದಿಕ ತಾಂತ್ರಿಕ ಸ್ವರೂಪದಲ್ಲಿ ಆಚಾರ್ಯಪುರುಷರಿಂದ ವೀರಶೈವಮತವು ಆಂಧ್ರ ದಲ್ಲಿ ಬೆಳೆದುಬಂದಿತು. ಆಚಾರ್ಯದಲ್ಲಿ ಮೂಲ ಪುರುಷರೆಂದರೆ ರೇವಣಸಿದ್ಧರು. ಇವರನ್ನು ರೇಣುಕಾಚಾರ್ಯರೆಂದು ಕರೆಯುವ ರೂಢಿ ಇದೆ. ಇವರು ವೀರಶೈವಮತಸ್ಥಾಪಕರೆಂದು ಹೆಸರು ಗೊಂಡಿದ್ದಾರೆ. ಇವರು ನಲಗೊಂಡಾ ಜಿಲ್ಲಾ ಕೊಳನುಪಾಕವೆಂಬ ಗ್ರಾಮದಲ್ಲಿ ಸೋಮನಾಥನ ಅನುಗ್ರಹದಿಂದ ಹುಟ್ಟಿದರು. ಅಲ್ಲಿಯೇ ಇದ್ದು ಮಠವನ್ನು ಸ್ಥಾಪಿಸಿದರು. ಅನೇಕರು ಇವರ ಶಿಷ್ಯರಾದರು. ಆ ಗ್ರಾಮದಲ್ಲಿ ಈಗಲೂ ಅನೇಕ ವೀರಶೈವರಿದ್ದಾರೆ. ಕೆಲವು ಕಾಲಾನಂತರ ಕೊಳಮ ಪಾಕದಲ್ಲಿದ್ದ ಮಠವನ್ನು ಬಾಳೆಹೊನ್ನೂರಿಗೆ ಬದಲಾಯಿಸಿದರು. ಈಗಲೂ ಬಾಳೆಹೊನ್ನೂರಿ ನಲ್ಲಿ ರೇಣುಕಪೀಠವೆಂಬ ಹೆಸರಿನಿಂದ ಮಠವು ಪ್ರಸಿದ್ಧವಾಗಿದೆ.

ತಥಾ ರೇವಣಸಿದ್ಧಸ್ಯ ಕುಲ್ಯಪಾಕ
ಪುರೋತ್ತಮೆ |
ಸೋಮಲಿಂಗಾತ್ತು ಜನನಂ ಆವಾಸಃ
ಕದಳೀಪುರೆ ||
(ಸ್ವಯಂಭುವಾಗಮ)

ಅಥ ತ್ರಿಲಿಂಗ ವಿಷಯೆ ಕುಲ್ಯಪಾಕಭಿದಪುರೆ|
ಸೋಮೇಶ್ವರ ಮಹಾಲಿಂಪಾತ್
ಪ್ರಾದುರಾಸಿತ್ಸರೇಣುಕಃ ||
(ಸಿದ್ಧಾಂತ ಶಿಖಾಮಣಿ)

ರೇವಣ ಅಥವಾ ರೇಣುಕರೆಂಬ ಈ ಆಚಾರ್ಯ ಪುರುಷರು ಶಾಸ್ತ್ರಜ್ಞರು, ತಂತ್ರಜ್ಞರು, ತಪಸ್ವಿಗಳು. ಶಿಷ್ಟಾಚಾರಗಳಲ್ಲಿಯೂ ಶೈವಮತ ಪ್ರಕ್ರಿಯೆಗಳಲ್ಲಿಯೂ ನಿಷ್ಣಾತರಾಗಿದ್ದರು. ತಮ್ಮ ಶಿಷ್ಯವರ್ಗದಲ್ಲಿ ಅನುರಾಗವುಳ್ಳವರಾಗಿದ್ದರು. ಆತ್ಮಸಂಯಮದಿಂದ ಸಿದ್ಧಿಯನ್ನು ಹೊಂದಿ ಚೈತನ್ಯಪುರುಷರಾಗಿ ಭಕ್ತರ ಇಷ್ಟಾರ್ಥವನ್ನು ನೆರವೇರಿಸುವವರಾಗಿದ್ದರು. ಮಿಥ್ಯಾದ್ವೈತ, ಶೂನ್ಯಾದ್ವೈತ, ಜೈನ ಬೌದ್ಧ ಲೋಕಾಯಿತಿಕ ಪಕ್ಷಗಳವರನ್ನು ವಾದದಲ್ಲಿ ಖಂಡಿಸಿದ್ದಲ್ಲದೆ ವೇದಾಂತ ಸೂತ್ರಗಳಿಗೆ ವ್ಯಾಖ್ಯಾನವನ್ನು ಬರೆ ದಿದ್ದಾರೆಂದು ಉಲ್ಲೇಖವಿದೆ.[1] ತಮ್ಮ ತ್ಯಾಗ, ಭಕ್ತಿ, ಶ್ರವಣ, ಮನನ, ನಿಧಿಧ್ಯಾಸ ಮೊದಲಾದ ಅಭ್ಯಾಸ ತಪಶ್ಚರ್ಯೆಗಳಿಂದ ನಿರ್ಯಾಣವನ್ನು ಹೊಂದಿದವರೆಂದು ಗೊತ್ತಾಗುತ್ತದೆ. ಇವರು ವೇದದ ನಿಷ್ಣಾತ ಪಂಡಿತರೆಂದು ಹೆಸರುಪಡೆದಿದ್ದ ರಲ್ಲದೆ ವೇದಾಂತ ಗ್ರಂಥಗಳ ಮೇಲೆ ವ್ಯಾಖ್ಯಾನ ವನ್ನು ಬರೆದಿದ್ದರು. ಶ್ರುತಿಗಳ ಆಧಾರದ ಮೇಲೆ ಪ್ರಪಂಚವು ಬ್ರಹ್ಮನ ವಿಸ್ತೃತವಾದ ಶಕ್ತಿಯ ಆವಿ

1. ಈ ರೇವಣಸಿದ್ಧರು ಪುರುಷಸೂಕ್ತಕ್ಕೆ ಶೈವಪರವಾದ ವ್ಯಾಖ್ಯಾನವನ್ನು ಬರೆದಿದ್ದಾರೆಂದು ಮಹಾನಾರಾಯಣೋಪನಿಷತ್ತಿನಿಂದ ವ್ಯಕ್ತಪಡುತ್ತದೆ. ಇವರು ರಚಿಸಿರುವ ಗ್ರಂಥಗಳಾವುವೂ ಇನ್ನೂ ಉಪಲಬ್ಧವಿಲ್ಲ.

ಷ್ಕರಣವೆಂದು ಪ್ರತಿಪಾದಿಸಿ ಬ್ರಹ್ಮನನ್ನು ಸಗುಣ ನೆಂದು ನಿಶ್ಚಯಿಸಿದ್ದಾರೆ. ಈ ವಿವರಗಳನ್ನೆಲ್ಲ ವನ್ನೂ ಶ್ರೀಪತಿಪಂಡಿತರು ತಮ್ಮಶ್ರೀಕರಭಾಷ್ಯ ದಲ್ಲಿ ಉಲ್ಲೇಖಿಸಿದ್ದಾರೆ.

ಆಂಧ್ರದಲ್ಲಿ ವೀರಶೈವ ಮತವನ್ನು ಮಹ ತ್ವದ ಸ್ಥಾನಕ್ಕೆ ತಂದು ಉದ್ಧರಿಸಿದ ಮೂವರು ಮಹಾಪುರುಷರನ್ನು ಪಂಡಿತತ್ರಯರು ಎಂದು ಕರೆಯುವ ವಾಡಿಕೆಯಿದೆ. ಶಿವಲೆಂಕ ಮಂಚಣ್ಣ ಶ್ರೀಪತಿ ಪಂಡಿತ, ಮಲ್ಲಿಕಾರ್ಜುನ ಪಂಡಿತ ಎಂಬುವರೇ ಪಂಡಿತತ್ರಯರು.

ಶಿವಲೆಂಕ ಮಂಚಣ್ಣನು ಜೈನರನ್ನು ಅನೇಕ ವಾದಗಳಲ್ಲಿ ಗೆದ್ದು ಆಂಧ್ರದಲ್ಲಿ ವೀರಶೈವ ಮತ ವನ್ನು ಪ್ರಚಾರ ಮಾಡಿದನು. ಈತನು ಕಾಶಿಗೆ ಹೋಗಿ ಅಲ್ಲಿಯೂ ಬೇರೆ ಸಂಪ್ರದಾಯದವರನ್ನು ವಾದದಲ್ಲಿ ಗೆದ್ದು ಶಿವಸರ್ವೋತ್ಕೃಷ್ಟವನ್ನು ಸಮರ್ಥಿಸಿ ಕಲ್ಯಾಣಕ್ಕೆ ಬಂದು ಬಸವೇಶ್ವರನಿಂದ ಸನ್ಮಾನಿತನಾದನು. ಈತನ ವಿಷಯದಲ್ಲಿ ಕನ್ನಡ ದಲ್ಲಿ ಗ್ರಂಥಗಳು ಹುಟ್ಟವೆ.

### ಶ್ರೀಪತಿ ಪಂಡಿತ

ಈತನು ಕೃಷ್ಣಾನದಿಯ ತೀರದಲ್ಲಿರುವ ಬೆಜವಾಡ (ವಿಜಯವಾಡ)ದಲ್ಲಿ ಜನಿಸಿದನು. ಆರನೇ ಪಶ್ಚಿಮ ಚಾಲುಕ್ಯ ರಾಜನಾದ ವಿಕ್ರಮಾ ದಿತ್ಯನ ಸೇನಾನಾಯಕ ಅನಂತಪಾಲನ ಗುರುವಾ ಗಿದ್ದನು. ಆ ಕಾಲದಲ್ಲಿ (ಕ್ರಿ.ಶ. ೧೧೨೦)ಈತನು ಅನೇಕ ಪವಾಡಗಳನ್ನು ತೋರಿಸಿದನೆಂದು ಪಲ್ಲಿ ಕೇತೆನ ಶಾಸನಗಳಿಂದ ತಿಳಿದುಬರುತ್ತದೆ. ಈತನ ವಂಶೀಯರು ಕೃಷ್ಣಾ ಜಿಲ್ಲಾ ಗುಡಿವಾಡ ತಾಲ್ಲೂಕು ಎಲಕ್ಕೂರು ಗ್ರಾಮದಲ್ಲಿ ಈಗಲೂ ಇದ್ದಾರೆ. ಈತನು ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನವನ್ನು ಬರೆದಿದ್ದಾನೆ. ಶ್ರೀಕರಭಾಷ್ಯವೆಂಬ ದರ್ಶನ ಗ್ರಂಥದಿಂದ ವೀರಶೈವ ಮತವನ್ನು ಪರಿಪುಷ್ಟ ಗೊಳಿಸಿ ಉನ್ನತಸ್ಥಿತಿಗೆ ತಂದವನೆಂದು ಪ್ರಸಿದ್ಧ ನಾಗಿದ್ದಾನೆ.

ರೇಣುಕಾಚಾರ್ಯ (ರೇವಣಸಿದ್ಧ) ಮರುಳ ಸಿದ್ಧ, ಏಕೋರಾಮ, ಪಂಡಿತಾರಾಧ್ಯ, ವಿಶ್ವಾ ರಾಧ್ಯ ಎಂಬುವರು ವೀರಶೈವ ಮತಸ್ಥಾಪನಾ ಚಾರ್ಯರೆಂದು ಹೆಸರುಗೊಂಡಿದ್ದಾರೆ. ರೇಣು ಕರು ರಂಭಾಪುರಿಯ ವೀರಸಿಂಹಾಸನವನ್ನೂ ದಾರುಕರು (ಮರುಳಸಿದ್ಧರು) ಉಜ್ಜಯಿನಿಧರ್ಮ ಸಿಂಹಾಸನವನ್ನೂ, ಏಕೋರಾಮರು ಹಿಮವತ್ ಕೇದಾರದ ವೈರಾಗ್ಯಸಿಂಹಾಸನವನ್ನೂ ಪಂಡಿತಾ ರಾಧ್ಯರು (ಶ್ರೀಪತಿ ಪಂಡಿತರು) ಶ್ರೀಶೈಲದ ಸೂರ್ಯ ಸಿಂಹಾಸನವನ್ನೂ ವಿಶ್ವಾರಾಧ್ಯರು ಕಾಶಿಯ ಜ್ಞಾನ ಸಿಂಹಾಸನವನ್ನೂ ಸ್ಥಾಪಿಸಿದರೆಂಬುದು ನಿರ್ವಿ ವಾದ ವಿಷಯ. ಇವರೆಲ್ಲರೂ ಐತಿಹಾಸಿಕ ಪುರು ಷರೇ ಹೊರತು ಪುರಾಣಪುರುಷರಲ್ಲ. ಈ ಆಚಾ ರ್ಯರು ಬರೆದ ಎಲ್ಲಾ ಗ್ರಂಥಗಳು ಉಪಲಬ್ಧವಿಲ್ಲ ವಾದರೂ ಶ್ರೀಪತಿ ಪಂಡಿತರು ರಚಿಸಿರುವ ಶ್ರೀಕರ ಭಾಷ್ಯ ಒಂದರಿಂದಲೇ ಪಂಚಾಚಾರ್ಯರ ಪ್ರಭಾವ ಮತ್ತು ಉಪದೇಶಗಳನ್ನು ಗ್ರಹಿಸಬ ಹುದು ಮತ್ತು ವೀರಶೈವ ಸಿದ್ಧಾಂತವನ್ನರಿಯ ಬಹುದು.

### ಮಲ್ಲಿಕಾರ್ಜುನ ಪಂಡಿತ

ಈತನು ಬಸವೇಶ್ವರನ ಸಮಕಾಲೀನನು. ಗೋದಾವರಿ ನದೀತೀರದಲ್ಲಿರುವ ಶಿವಕ್ಷೇತ್ರವಾದ ದ್ರಾಕ್ಷಾರಾಮ ಗ್ರಾಮದವನು. ಪಂಡಿತಾರಾಧ್ಯ ಚರಿತ್ರೆಯಲ್ಲಿ ಈತನ ಜೀವನ ಮತ್ತು ಗ್ರಂಥಗಳು ವಿವರಿಸಲ್ಪಟ್ಟವೆ. ಈತನು ತೆಲುಗಿನಲ್ಲಿ ಶಿವತತ್ತ್ವ ಸಾರಂ, ಶ್ರೀಮುಖದರ್ಶನಂ ಎಂಬ ಗ್ರಂಥ ಗಳನ್ನೂ ಕನ್ನಡದಲ್ಲಿ ಸ್ತೋತ್ರಗಳನ್ನೂ ರಚಿಸಿರು

ವನು. ಈತನು ಬಸವೇಶ್ವರನನ್ನು ನೋಡುವುದಕ್ಕೆ ಕಲ್ಯಾಣಕ್ಕೆ ಹೋಗುವಷ್ಟರಲ್ಲಿಯೇ ಬಸವೇಶ್ವರನು ಮರಣಹೊಂದಿದನೆಂದು ಕೇಳಿ ಹಿಂದಿರುಗಿದನು.

### ಪಾಲ್ಕುರಿಕೆ ಸೋಮನಾಥ

ಈತನು ೧೩ ನೇ ಶತಕದ ಆದಿಭಾಗದಲ್ಲಿ ಜೀವಿಸಿದ್ದನು. ಹೈದ್ರಾಬಾದ್-ಓರಂಗಲ್ ಸೆಂಟ್ರಲ್ ರೈಲ್ವೆದಾರಿಯ ಘನಪೂರ್ ಸ್ಟೇಷನ್ನಿಗೆ ಕೆಲವು ಮೈಲಿ ದೂರದಲ್ಲಿರುವ ಪಾಲ್ಕುರಿಕೆ ಗ್ರಾಮದಲ್ಲಿ ಹುಟ್ಟಿದನು. ಈತನಿಗೆ ಆ ಗ್ರಾಮದ ಸೋಮನಾಥದೇವರ ಹೆಸರನ್ನೇ ಇಟ್ಟರು. ಇವನು ಚಿಕ್ಕವನಾಗಿದ್ದಾಗಲಿಂದಲೇ ಪ್ರತಿಭಾಶಾಲಿಯಾಗಿದ್ದನು. ತನ್ನ ತಪಸ್ಸಿನ ಬಲದಿಂದ ಅನೇಕ ಗ್ರಂಥಗಳನ್ನು ರಚಿಸಿದನು. ಇವನ ಉತ್ತಮ ಕೃತಿಗಳಲ್ಲಿ ಬಸವ ಪುರಾಣಮು, ಪಂಡಿತಾರಾಧ್ಯಚರಿತಮು ಎಂಬ ಗ್ರಂಥಗಳು ಜಾನಪದ ತೆಲುಗಿನಲ್ಲಿ ಬರೆಯಲ್ಪಟ್ಟವೆ. ಇವನ ಬಸವ ಪುರಾಣವು ಕನ್ನಡಕ್ಕೂ. ತಮಿಳಿಗೂ ಭಾಷಾಂತರವಾಗಿದೆ. ಇವನು 'ಬಸವರಾಜೀಯಂ' ಎಂಬ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ಇವನು ಕೇವಲ ಪ್ರಸಿದ್ಧವ್ಯಕ್ತಿಯೆಂದು ಮಾತ್ರವಲ್ಲದೆ ಒಂದು ಸಂಸ್ಥೆಯೆಂದು ಹೆಸರುಗೊಂಡಿದ್ದಾನೆ. ಆಂಧ್ರದಲ್ಲಿ ಇವನ ಕಾಲದಲ್ಲಿ ವೀರಶೈವ ಮತವು ವಿಶೇಷ ಪ್ರಚಾರಕ್ಕೆ ಬಂದಿತು.

ಜಿ. ರುದ್ರಪ

# ಶ್ರೀ ಶೈಲದ ಕೆಲವು ಶಾಸನಗಳು

ಪೂರ್ವಘಟ್ಟಗಳ ಸಾಲಿನಲ್ಲಿ ಪ್ರಕೃತಿ ಸೌಂದರ್ಯದಿಂದ ಕೂಡಿರುವ ಸುಕ್ಷೇತ್ರ ಶ್ರೀಶೈಲವು ಅತಿಪ್ರಾಚೀನ ಕಾಲದಿಂದಲೂ ಒಂದು ಪ್ರಖ್ಯಾತ ವಾದ ಶೈವಕ್ಷೇತ್ರ. ಈ ಪುಣ್ಯಕ್ಷೇತ್ರವು ಈಗಿನ ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯಲ್ಲಿರುವ ನಲ್ಲಮಲ ಪರ್ವತ ಶ್ರೇಣಿಯಲ್ಲಿ ಶ್ರೀಗಿರಿ, ಶ್ರೀ ಪರ್ವತ, * ಶ್ರೀಶೈಲ ಎಂಬ ಹೆಸರುಗಳಿಂದ ಪ್ರಸಿದ್ಧವಾಗಿದೆ. ಇತರ ಕೆಲವು ಪುಣ್ಯಕ್ಷೇತ್ರ ಗಳನ್ನು ನಿರ್ದೇಶಿಸುವಾಗ ಆ ಕ್ಷೇತ್ರಗಳು ಶ್ರೀ ಶೈಲದ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದ್ವಾರ ಗಳೆಂದು ಶಾಸನಗಳಲ್ಲಿ ವರ್ಣಿಸಲ್ಪಟ್ಟಿರುವುದ ರಿಂದ ಶ್ರೀಶೈಲವು ಎಷ್ಟು ಶ್ರೇಷ್ಠಸ್ಥಾನವೆಂಬುದು ವ್ಯಕ್ತವಾಗುತ್ತದೆ. ನಮ್ಮ ದೇಶದ ಪವಿತ್ರ ಸ್ಥಾನ ಗಳಲ್ಲಿ ಶ್ರೀಶೈಲವು ಒಂದು ಮುಖ್ಯವಾದ ತೀರ್ಥ ವೆಂದು ಮಹಾಭಾರತದಲ್ಲಿಯೇ ಉಕ್ತವಾಗಿದೆ. ಇಲ್ಲಿನ ಸ್ಥಳಪುರಾಣವು ಗುಪ್ತವಂಶದ ಚಕ್ರವರ್ತಿ ಯಾದ ಚಂದ್ರಗುಪ್ತನ ಮಗಳು ಚಂದ್ರಾವತಿಯು ಶ್ರೀಶೈಲದ ದೇವರಾದ ಶಿವನಲ್ಲಿ ಅತ್ಯಂತ ಅನುರಾಗ ವುಳ್ಳವಳಾಗಿ ಪ್ರತಿನಿತ್ಯವೂ ಆ ದೇವರಿಗೆ ಒಂದು ಮಲ್ಲಿಗೆಯ ಹಾರವನ್ನು ಅರ್ಪಿಸುತ್ತಿದ್ದು ಕೊನೆಗೆ ಆ ದೇವರನ್ನೇ ವರಿಸಿದಳೆಂದು ಹೇಳುತ್ತದೆ. ಈ ಸಂಗತಿಯು ಶ್ರೀಶೈಲದಲ್ಲೇ ಇರುವ ಕ್ರಿ. ಶ. 16 ನೇ ಶತಮಾನದ ಒಂದು ಶಾಸನದಲ್ಲಿಯೂ ಸೂಚಿಸಲ್ಪಟ್ಟಿದೆ. ಆದರೆ ಈ ಐತಿಹ್ಯವು ಕ್ರಿ.ಶ. 12ನೇ ಶತಮಾನದಲ್ಲಿಯೇ ಪ್ರಚಾರದಲ್ಲಿತ್ತೆಂದು ಪಾಲುಕುರಿಕಿ ಸೋಮನಾಥನೆಂಬ ವೀರಶೈವ ಕವಿಯ "ಪಂಡಿತಾರಾಧ್ಯ ಚರಿತ್ರ" ಎಂಬ ತೆಲುಗು ಗ್ರಂಥದಿಂದ ತಿಳಿಯುತ್ತದೆ. ಈ ಗ್ರಂಥದಲ್ಲಿ ರಾಜಕುಮಾರಿ ಚಂದ್ರಾವತಿಯು ಒಂದು ದಿನ ಎಂದಿನಂತೆ ಮಲ್ಲಿಗೆಯ ಹಾರವನ್ನು ದೇವರಿಗೆ ಅರ್ಪಿಸುತ್ತಿದ್ದಾಗ ಪರವಶಳಾಗಿ ದೇವರ ಸನ್ನಿಧಿ ಯಲ್ಲಿ ಹಾಡುತ್ತಾ ನರ್ತನ ಮಾಡುತ್ತಿರುವಾಗ ದೇವರು ಆಕೆಯ ಭಕ್ತಿಗೆ ಮೆಚ್ಚಿ ಆಕೆಗೆ ಪ್ರತ್ಯಕ್ಷ ನಾಗಿ ವರವನ್ನು ಬೇಡಿಕೊಳ್ಳೆಂದು ಹೇಳಿದನೆಂದೂ ಅದಕ್ಕೆ ರಾಜಪುತ್ರಿಯು ತಾನು ಅರ್ಪಿಸುತ್ತಿದ್ದ ಮಲ್ಲಿಗೆಯ ಹಾರವನ್ನು ಸತತವೂ ಸ್ವಾಮಿಯು ಧರಿಸಿಬೇಕೆಂದು ಕೇಳಿಕೊಂಡಳೆಂದೂ, ಸ್ವಾಮಿಯು ಒಲಿದು ಆಕೆಯ ಅಭೀಷ್ಟವನ್ನು ಪೂರ್ತಿಗೊಳಿಸಿದ ನೆಂದೂ, ಅಂದಿನಿಂದ ಶ್ರೀಶೈಲದ ಸ್ವಾಮಿಗೆ ಮಲ್ಲಿಕಾರ್ಜುನ ಎಂಬ ಹೆಸರಾಯಿತೆಂದು ಹೇಳಿದೆ. ಇದೇ 12 ನೇ ಶತಮಾನದಲ್ಲಿ ಬಾಳಿದ ಶಿವಭಕ್ತಾ ಗ್ರಣಿ ಅಕ್ಕಮಹಾದೇವಿಯು ತನ್ನ ಜೀವಿತದ ಕೊನೆಯ ದಿನಗಳಲ್ಲಿ ತನ್ನ ಆರಾಧ್ಯ ದೇವತೆಯಾದ ಶ್ರೀಶೈಲದ ಚೆನ್ನಮಲ್ಲಿಕಾರ್ಜುನನನ್ನು ಪೂಜಿಸಲು ಶ್ರೀಶೈಲಕ್ಕೆ ಹೋಗಿ ಅಲ್ಲಿಯೇ ಕದಳಿವನದಲ್ಲಿ ತಪಸ್ಸು ಮಾಡಿ ಕಡೆಗೆ ಶಿವಯೋಗ ಮಾರ್ಗವಾಗಿ ದೇಹತ್ಯಾಗ ಮಾಡಿದಳೆಂಬುದು ಕನ್ನಡ ಲೋಕಕ್ಕೇ ಸುವಿದಿತವಾಗಿದೆ. ಸಾಹಿತ್ಯದಲ್ಲಿ ಶ್ರೀಶೈಲಕ್ಕೆ ಇದಕ್ಕಿಂತ ಮುಂಚಿನ ಉಲ್ಲೇಖವು ಸುಬಂಧುವಿ ನಿಂದ ವಿರಚಿತವಾದ "ವಾಸವದತ್ತಾ" ಎಂಬ ಸಂಸ್ಕೃತ ಗ್ರಂಥದಲ್ಲಿ ದೊರೆಯುತ್ತದೆ. ಇದರಲ್ಲಿ

---

* ಗುಂಟೂರು ಜಿಲ್ಲೆಯ ನಾಗಾರ್ಜುನ ಕೊಂಡದ ಇಖಾಖು (ಇಕ್ಷ್ವಾಕು) ವಂಶದ ರಾಜರ ಶಾಸನಗಳಲ್ಲಿ ಉಕ್ತ ವಾದ ಶ್ರೀಪರ್ವತವು ಬೌದ್ಧಕ್ಷೇತ್ರವಾದುದರಿಂದ ಈ ಲೇಖನದ ವಿಷಯವಾದ ಶ್ರೀಪರ್ವತವೂ ಆ ಶ್ರೀ ಪರ್ವತವೂ ಬೇರೆ ಬೇರೆ ಎಂದು ತೋರುತ್ತದೆ.

ಶ್ರೀಶೈಲವು ಮಲ್ಲಿಕಾರ್ಜುನ ಶಿವನ ನಿವಾಸಸ್ಥಾನವೆಂದು ಹೇಳಲ್ಪಟ್ಟಿದೆ. ಈ ಸುಬಂಧುವು ಸಂಸ್ಕೃತ "ಕಾದಂಬರೀ" ಕರ್ತನಾದ ಬಾಣಭಟ್ಟನಿಗಿಂತ (ಕ್ರಿ.ಶ. 7ನೇ ಶತಮಾನದ ಪ್ರಾರಂಭ) ಪೂರ್ವದವನು.

ಆದರೆ ಶ್ರೀಶೈಲವನ್ನು ಉಲ್ಲೇಖಿಸುವ ಶಾಸನಗಳಲ್ಲಿ ಕ್ರಿ. ಶ. 5ನೇ ಶತಮಾನದ ತಾಳಗುಂದದಲ್ಲಿರುವ ಕದಂಬ ಕಾಕುಸ್ಥವರ್ಮನ ಶಾಸನವೇ ಮೊದಲನೆಯದು. ಇದರಲ್ಲಿ ಕದಂಬ ರಾಜ್ಯಸ್ಥಾಪಕನಾದ ಮಯೂರಶರ್ಮನು ವಿದ್ಯಾವ್ಯಾಸಂಗಕ್ಕಾಗಿ ಪಲ್ಲವರ ರಾಜಧಾನಿಯಾದ ಕಂಚಿಯಲ್ಲಿದ್ದಾಗ ಪಲ್ಲವ ಅಶ್ವಸಂಸ್ಥೆಯಲ್ಲುಂಟಾದ ಕಲಹದಲ್ಲಿ ಅವಮಾನಿತನಾಗಿ, ತನ್ನ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಬೇಕೆಂಬ ಸಂಕಲ್ಪದಿಂದ ಪಲ್ಲವರ ಅಂತಪಾಲರನ್ನು ಯುದ್ಧದಲ್ಲಿ ಜಯಿಸಿ ಶ್ರೀಪರ್ವತದ (ಶ್ರೀಶೈಲದ) ಸುತ್ತುಮುತ್ತಲಿನ ಘೋರಾರಣ್ಯ ಪ್ರದೇಶವನ್ನು ಆಕ್ರಮಿಸಿಕೊಂಡನೆಂದು ಹೇಳಿದೆ. ಸುಮಾರು ಇದೇ ಕಾಲದ ವಿಷ್ಣುಕುಂಡಿವಂಶದ ರಾಜರ ಶಾಸನಗಳು ಈ ಮನೆತನದ ಅರಸರನ್ನು "ಭಗವತ್ ಶ್ರೀ ಪರ್ವತಸ್ವಾಮಿ ಪಾದಾನುಧ್ಯಾತ" ಎಂದು ವರ್ಣಿಸುತ್ತವೆ. ಇವರ ರಾಜಧಾನಿಯು ಈಗಿನ ಆಂಧ್ರಪ್ರದೇಶದ ಪಶ್ಚಿಮ ಗೋದಾವರಿ ಜಿಲ್ಲೆಯಲ್ಲಿರುವ ದೆಂದುಲೂರು ಆಗಿತ್ತು.

ಕ್ರಿ. ಶ. 8ನೇ ಶತಮಾನದಲ್ಲಿ ಆಳುತ್ತಿದ್ದ ರಾಷ್ಟ್ರಕೂಟ ರಾಜನಾದ ದಂತಿದುರ್ಗನು ಶ್ರೀಶೈಲ ರಾಜ್ಯದ ಅಧಿಪತಿಯನ್ನು ನಿಗ್ರಹಿಸಿ ಅವನ ರಾಜ್ಯವನ್ನು ಸ್ವಾಧೀನಪಡಿಸಿಕೊಂಡನೆಂದು ವೇರೂಳದ (ಎಲ್ಲೋರಾ) ದಶವತಾರ ಗುಹೆಯಲ್ಲಿರುವ ರಾಷ್ಟ್ರಕೂಟ ಶಾಸನವು ಹೇಳುತ್ತದೆ. ಕ್ರಿ. ಶ. 9ನೇ ಮತ್ತು 10ನೇ ಶತಮಾನದ ಶಾಸನಗಳು ಶ್ರೀಶೈಲವು ವಾರಣಾಸಿಯಷ್ಟೇ ಪವಿತ್ರವಾದ ಕ್ಷೇತ್ರವಾಗಿತ್ತೆಂದು ತಿಳಿಸುತ್ತವೆ. ಉದಾಹರಣೆಗೆ ಬಳ್ಳಾರಿ ಜಿಲ್ಲೆಯ ಬಾಗಳಿಯ ರಾಷ್ಟ್ರಕೂಟ ಇಂದ್ರವಲ್ಲಭನ ಶಾಸನವೊಂದರಲ್ಲಿ ಈರೀತಿ ಬರೆದಿದೆ:—

"ಆರಾನುಮೀ ದಾನವನಱದರುಳ್ದೊಡೆ ವಾರಣಾಸಿಯುಂ ಶ್ರೀಪರ್ವತಮುಮಂ ಕವಿಲೆಯುಂ ಕವಿಲೆಯ ಕಱುವುಮನಱದೋರ್ ಪಂಚಮಹಾಪಾತಕಂ".

ಕಡಪ ಜಿಲ್ಲೆಯ ಪ್ರೊದ್ದಟೂರಿನ ಸಮೀಪದಲ್ಲಿರುವ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಶಾಸನದಲ್ಲಿ ಕೆಳಗೆ ಹೇಳಿದ ಶಾಪವಿದೆ:—

"ಇಂತೀ ಸ್ಥಿತಿ ತಪ್ಪಿದೋಂ ಶ್ರೀ ಪರ್ವತಮುಮಂ ವಾರಣಾಸಿಯುಮಂ ಕವಿಲೆಯುಮನಱದ ಪಾಪಂ ಸಾರ್ಗುಂ."

ಕ್ರಿ. ಶ. 11 ನೇ ಶತಮಾನದ ಅನೇಕ ಶಾಸನಗಳು ಶ್ರೀಶೈಲದ ಪ್ರಾಮುಖ್ಯತೆಯನ್ನು ಸೂಚಿಸುತ್ತವೆ. ಇವುಗಳಲ್ಲಿ ಒಂದರಿಂದ ಕೆಲವು ಅಂಶಗಳನ್ನು ಉದಾಹರಣೆಗಾಗಿ ಕೊಟ್ಟಿದೆ. ಕರ್ನೂಲ್ ಜಿಲ್ಲೆಯ ನಂದಿಕೊಟ್ಕೂರ್ ತಾಲ್ಲೂಕಿನ ಕೊತ್ತಪಲ್ಲಿಯೆಂಬ ಗ್ರಾಮದಲ್ಲಿರುವ ಶಾಸನವೊಂದು ಚಾಲುಕ್ಯ ಮಹಾರಾಜನಾದ ತ್ರೈಲೋಕ್ಯಮಲ್ಲದೇವರ "ಪಿರಿಯರಸಿ ಮೈಳಲದೇವಿಯರುಂ ಶ್ರೀ ಬಲ್ಲವರಸರಂ ಶ್ರೀಮನ್ ಮಲ್ಲಿಕಾರ್ಜುನದೇವರ ಸನ್ನಿಧಾನದೋಳ್.... ಶಕವರ್ಷ 980 (ಕ್ರಿ.ಶ. 1057)ನೆಯ ಹೇವಿಳಂಬಿ ಸಂವತ್ಸರದಲ್ಲಿ

ಶ್ರೀಶೈಲ ಪಶ್ಚಿಮ ದ್ವಾರದ ಕೊಳ್ಳದ ಆದಿಸ್ವಯಂಭು ಭೈರವದೇವರ್ಗೆ ಕೆಲವು ಗ್ರಾಮಗಳನ್ನು "ಸರ್ವನಮುಸ್ಯವಾಗಿ"ಬಿಟ್ಟಂತೆ ಹೇಳುತ್ತದೆ. ಈ ಪ್ರಕಾರ ಅನೇಕ ಶಾಸನಗಳು ಶ್ರೀಶೈಲದ ಪ್ರವಿತ್ರತೆಯನ್ನು ಅತಿ ಪ್ರಾಚೀನಕಾಲದಿಂದಲೂ ಸಾರುತ್ತಿದ್ದರೂ ಶ್ರೀಶೈಲದಲ್ಲೇ ಸಿಕ್ಕಿರುವ ಶಾಸನಗಳಲ್ಲೆಲ್ಲಾ ಶ ಕ 1089 (ಕ್ರಿ.ಶ. 1167)ನೆಯ ಪಾಕನಾಡು ಚೋಳರಾಜನಾದ ವೀರರಾಜೇಂದ್ರ ಚೋಳನ ಶಾಸನವೇ ಹಳೆಯದು. ಇದರಲ್ಲಿ "ಪಾಕನಾಂಟಿಯಿಂದುಲೂರಿಪುರಂಗನಾವಲ್ಲಭ" ಇತ್ಯಾದ್ಯನೇಕ ಬಿರುದಾಂಕಿತನಾದ ಈ ರಾಜನು ಶ್ರೀ ಶೈಲದ ಮಲ್ಲಿಕಾರ್ಜುನ ಸ್ವಾಮಿಗೆ ಒಂದು ನಂದಾದೀಪವನ್ನು ಇಡುವುದಕ್ಕೆ ಏರ್ಪಾಡುಮಾಡಿದನೆಂದು ಹೇಳಿದೆ. ಇದಾದ ಮೇಲೆ ಕ್ರಿ.ಶ 14ನೇ ಶತಮಾನದ ಕಾಕತೀಯ ವಂಶದ ರಾಜನಾದ ಪ್ರತಾಪರುದ್ರದೇವನ ಶಾಸನವು ಗಮನಾರ್ಹವಾದುದು. ಶ್ರೀಶೈಲದ ದೇವಸ್ಥಾನದ ಪ್ರಾಂಗಣದಲ್ಲಿ ತೆಲುಗು ಭಾಷೆಯಲ್ಲಿರುವ ಈ ಶಾಸನವು "ಶ್ರೀ ಪರ್ವತ ಶ್ರೀಸ್ವಯಂಭು ಶ್ರೀ ಲಿಂಗ ಚಕ್ರವರ್ತಿ ಶ್ರೀಮಲ್ಲಿಕಾರ್ಜುನ ಮಹಾಲಿಂಗದೇವ"ರ ಕೃಪೆಯಿಂದ "ಕಾಕತೀಯ ಮಹಾರಾಜ"ನು ಓರುಂಗಲ್ ರಾಜಧಾನಿಯಾಗಿಪೃಥ್ವೀರಾಜ್ಯವನ್ನು ಮಾಡುತ್ತಿದ್ದಾಗ ಶಕವರ್ಷ 1235 (ಕಿ ಶ 1313)ರಲ್ಲಿ ದೇವಸ್ಥಾನದ ಆಡಳಿತಕ್ಕೆ ಸಂಬಂಧಪಟ್ಟ ತನಿಖೆಯೊಂದರ ವಿಷಯವನ್ನು ವಿವರಿಸುತ್ತದೆ. ಇದಕ್ಕಾಗಿ ಶ್ರೀ ಶೈಲದ ಕ್ಷೇತ್ರವಾಸಿ ಅಸಂಖ್ಯಾತ ಮಹಾಮಹೇಶ್ವರರು ಗಣಮಠದ ವೀರಭದ್ರದೇವರ ಮುಖಮಂಟಪದಲ್ಲಿ ಒಡ್ಡೋಲಗವಾಗಿ ನೆರೆದಿದ್ದಾಗಿ ಮಲ್ಲಿಕಾರ್ಜುನ ದೇವರ ಅಂಗರಂಗ ಭೋಗಗಳನ್ನು ಅಸಂಖ್ಯಾತರ ಅಪ್ಪಣೆಯ ಪ್ರಕಾರ ನಡೆಸಿಕೊಂಡು ಬರುವುದಾಗಿ ಅರಸಿಮಠದ ಈಶ್ವರಶಿವಾಚಾರ್ಯರೂ, ಆರಾಧ್ಯಪ್ರಗ್ಗಡೆಗಳೂ ಪ್ರತಿಜ್ಞೆ ಮಾಡಿದ ಕ್ರಮವನ್ನು ಕಂಭದ ಮೇಲೆ ಶಾಸನ ರೂಪವಾಗಿ ಕೆತ್ತಿಸಿದರೆಂದು ಹೇಳುತ್ತದೆ. ದೇವಸ್ಥಾನದಲ್ಲಿ ನಡೆಯಬೇಕಾದ ಪೂಜಾದಿಗಳಿಗಾಗಿ ರಾಜರೂ, ಮಂಡಲೇಶ್ವರರೂ, ನಾಯಕರೂ ಇತರ ಭಕ್ತಾದಿಗಳೂ ಮಾನ್ಯವಾಗಿ ಕೊಟ್ಟ ಎಪ್ಪತ್ತು ಗ್ರಾಮಗಳ ಪಟ್ಟಿಯನ್ನು ಈ ಶಾಸನವು ಕೊಡುತ್ತದೆ.

ಕೊಂಡವೀಡಿನ ರೆಡ್ಡಿ ವಂಶದ ರಾಜನಾದ ಅನವೇಮಾ ರೆಡ್ಡಿಯ ಶಾಸನವೊಂದು ಆತನು ಶ್ರೀಶೈಲದ ಮಲ್ಲಿಕಾರ್ಜುನ ಸ್ವಾಮಿಯ ಗೇಹಾಂಗಣದಲ್ಲಿ ಒಂದು ವೀರಮಂಟಪವನ್ನು ತನ್ನ ಅಧಿಕಾರಿ ವರ್ಗಕ್ಕೆ ಸೇರಿದ ಶಿವಭಕ್ತಿಮಾರ್ಗ ರತನಾದ ಮಲ್ಲಯನ ವಿಜ್ಞಾಪನೆಯಂತೆ ಶಕವರ್ಷ 1299 (ಕ್ರಿ. ಶ. 1378) ರಲ್ಲಿ ಕಟ್ಟಿಸಿದನೆಂದು ಹೇಳುತ್ತದೆ. ಈ ವಂಶದ ಅನೇಕ ರಾಜರು ಶ್ರೀಶೈಲದ ಮಲ್ಲಿಕಾರ್ಜುನ ಸ್ವಾಮಿಯ ಭಕ್ತರು. ಅನವೇಮಾ ರೆಡ್ಡಿಯ ತಂದೆ ವೇಮಾರೆಡ್ಡಿಯು ದೇವಸ್ಥಾನದಿಂದ ಬೆಟ್ಟದ ಬುಡದಲ್ಲಿರುವ ಕೃಷ್ಣಾನದಿಯ ಪಾತಾಳಗಂಗೆಯವರೆಗೂ ಮೆಟ್ಟಲುಗಳನ್ನು ಕಟ್ಟಿಸಿದನೆಂದು ಈ ಮನೆತನದ ರಾಜರ ಶಾಸನಗಳು ತಿಳಿಸುತ್ತವೆ:—

"ಶ್ರೀ ಶೈಲಾಗ್ರಾತ್ ಪ್ರಭವತಿ ಪಥಿ
ಹ್ಯಾಪ್ತಪಾತಾಳಗಂಗೇ
ಸೋಪಾನಾನಿ ಪ್ರಮಥ ಪದವೀಂ
ಆರು ರುಕ್ಷುಶ್ಚಕಾರ."

ಹೀಗೆಯೇ ವಿಜಯನಗರದ ಅರಸರೂ ಈ ದೇವರಿಗೆ ಅನೇಕ ಸೇವೆಗಳನ್ನು ಸಲ್ಲಿಸಿರುತ್ತಾರೆ. ದೇವಸ್ಥಾನದಲ್ಲೇ ಇರುವ ವಿಜಯನಗರದ ಇಮ್ಮಡಿ ಹರಿಹರನ ಶಕವರ್ಷ 1326ರ (ಕ್ರಿ.ಶ.1405) ಶಾಸನವೊಂದು ಈ ರಾಜನು ಮಲ್ಲಿಕಾರ್ಜುನ

ಸ್ವಾಮಿಯ ದೇವಸ್ಥಾನದ ಮುಖಮಂಟಪ, ದ್ವಾರಗಳು, ಅತಿಸುಂದರವಾದ ದ್ವಾರತೋರಣಗಳು ಇತ್ಯಾದಿಗಳನ್ನು ಮಾಡಿಸಿದನೆಂದು ಹೇಳುತ್ತದೆ. ಇದೇ ಮನೆತನದ ವಿರೂಪಾಕ್ಷ ಮಹಾರಾಯನು ಶಕ ವರ್ಷ 1388 (ಕ್ರಿ. ಶ. 1465) ರಲ್ಲಿ ತನ್ನ ಪಟ್ಟಾಭಿಷೇಕೋತ್ಸವ ಕಾಲದಲ್ಲಿ ಶಿರುಮಣಾತುಕೂರ್ ಎಂಬ ಗ್ರಾಮವನ್ನು ಮಲ್ಲಿಕಾರ್ಜುನ ಸ್ವಾಮಿಗೆ ದಾನಮಾಡಿದನೆಂದು ಸಂಸ್ಕೃತ ಕನ್ನಡ ಭಾಷೆಯಲ್ಲಿರುವ ಅವನ ತಾಮ್ರ ಶಾಸನವೊಂದು (ಇದು ಶ್ರೀಶೈಲದ ದೇವಸ್ಥಾನದಲ್ಲೇ ಸಿಕ್ಕಿದ್ದು) ತಿಳಿಸುತ್ತದೆ. ಈ ದಾನವನ್ನು ದೇವರ ಪರವಾಗಿ ಶ್ರೀಪರ್ವತ ಮಲ್ಲಿಕಾರ್ಜುನ ಮಹಾದೇವರ ಪಾದಾರ್ಚಕನಾದ ಸಿದ್ಧಭಿಕ್ಷಾಪ್ರವರ್ತಿ ಶ್ರೀಲಿಂಗಚಕ್ರೇಶ್ವರನೆಂಬ ತಪಸ್ವಿಯು ಸ್ವೀಕರಿಸಿ ಮಹಾರಾಜನನ್ನು ಚಿರಂಜೀವಿಯಾಗಿ ಬಾಳೆಂದು ಆಶೀರ್ವದಿಸಿದನು. ಶಕಸಂವತ್ಸರ 1440 (ಕ್ರಿ. ಶ. 1517) ರ ತೆಲುಗು ಶಾಸನವೊಂದರಿಂದ ಸಾಳುವ ಕುಲದ ಪರ್ವತಯ್ಯನೂ ಅವನ ಹೆಂಡತಿಯೂ "ಸಿದ್ಧಭಿಕ್ಷಾವೃತ್ತಿ ಅಯ್ಯಗಾರು" ಅವರ ಶಿಷ್ಯರಾಗಿದ್ದರೆಂದು ತಿಳಿಯುತ್ತದೆ. ಮೇಲಿನ ಶಾಸನದಲ್ಲಿ ಹೇಳಿರುವ ತಪಸ್ವಿಯೂ, ಈ "ಸಿದ್ಧಭಿಕ್ಷಾವೃತ್ತಿ ಅಯ್ಯಗಾರೂ" ಒಬ್ಬರೇ ಎಂದು ತೋರುತ್ತದೆ. ಶಕವರ್ಷ 1507 ನೆಯ (ಕ್ರಿ. ಶ. 1585) ಶ್ರೀ ಶೈಲದಲ್ಲಿರುವ ಸಾರಂಗ ಮಠದ ಮುಂದಿರುವ ಶಾಸನವೊಂದು ಶ್ರೀಶೈಲದಲ್ಲಿ ಐದು ಜಂಗಮ ಮಠಗಳು ಇದ್ದುವೆಂದು ತಿಳಿಸುತ್ತದೆ. ಇವುಗಳಲ್ಲೆಲ್ಲಾ ಶಾಸನಗಳಲ್ಲಿ ಅನೇಕ ಬಾರಿ ಉಕ್ತವಾಗಿರುವ ಸಿದ್ಧಭಿಕ್ಷಾವೃತ್ತಿ ಮಠವೇ ಹೆಚ್ಚು ಪ್ರಾಶಸ್ತ್ಯವನ್ನು ಪಡೆದಿತ್ತೆಂದು ಕಾಣುತ್ತದೆ. ಹರಿಹರ, ವಿರೂಪಾಕ್ಷ ನೃಪತಿಗಳಂತೆಯೇ "ಶ್ರೀ ವೀರ ಪ್ರತಾಪ ಶ್ರೀವೀರ ನರಸಿಂಗರಾಯ ಮಹಾರಾಯರು ಶ್ರೀ ಮಲ್ಲಿಕಾರ್ಜುನ ದೇವರ ಪಾದ ಸೇವೆಯ ಮಾಡುತ್ತಾ ಇಧಾರು" ಎಂದು ದೇವಸ್ಥಾನದ ಗರ್ಭಗೃಹದಲ್ಲಿರುವ ಇನ್ನೊಂದು ಶಾಸನವು ಹೇಳುತ್ತದೆ.

ಇದಾದ ಮೇಲೆ ವಿಜಯನಗರದ ಸಾರ್ವಭೌಮ ಶ್ರೇಷ್ಠನಾದ ಕೃಷ್ಣದೇವರಾಯನ ಶಾಸನವೊಂದು ಮಹತ್ವದ್ದು. ಶಾಲಿವಾಹನ ಶಕ 1438 (ಕ್ರಿ.ಶ 1515) ನೆಯ ಈ ಶಾಸನವು ಕೃಷ್ಣದೇವರಾಯನು ಪೂರ್ವ ದಿಗ್ವಿಜಯದಲ್ಲಿ ಅನೇಕ ಗಿರಿದುರ್ಗ ಸ್ಥಳದುರ್ಗಗಳನ್ನು (ಇವುಗಳ ಹೆಸರುಗಳನ್ನು ಈ ಶಾಸನದಲ್ಲಿಕೊಟ್ಟಿದೆ.) ಏಕಧಾಳಿಯಲ್ಲಿ ಕೈಕೊಂಡು ಅನೇಕ ಪಾತ್ರ ಸಾಮಂತರನ್ನೂ ಮನ್ನೆಯರನ್ನೂ (ಇವರ ಹೆಸರುಗಳನ್ನೂ ಈ ಶಾಸನವು ಹೇಳುತ್ತದೆ) ಜೀವಗ್ರಾಹವಾಗಿ ಹಿಡಿದುಕೊಂಡು ಅವರಿಗೆ ಅಭಯವನ್ನು ಕೊಟ್ಟು ಶ್ರೀಪರ್ವತಕ್ಕೆ ಬಿಜಯ ಮಾಡಿಸಿ ಶ್ರೀಮಲ್ಲಿಕಾರ್ಜುನ ದೇವರ ತೇರಬೀದಿಯ ಶಿಲಾಮಂಟಪಗಳನ್ನು ಕಟ್ಟಿಸಿ ದೇವರ ಮಧ್ಯಾಹ್ನದ ಅವಸರದ ಮಹಾನೈವೇದ್ಯಕ್ಕೆ ಎರಡು ಗ್ರಾಮಗಳನ್ನು ಸಮರ್ಪಿಸಿದರೆಂದು ಹೇಳುತ್ತದೆ.

ರಾಜರು ಮಾತ್ರವೇ ಅಲ್ಲದೆ ಅರಮನೆಯ ಪರಿಹಾರದವರೂ, ರಾಜಬಂಧುಗಳೂ ಶ್ರೀಶೈಲದ ಮಲ್ಲಿಕಾರ್ಜುನ ದೇವರ ಭಕ್ತರಾಗಿದ್ದರೆಂದು ಶಾಸನಗಳಿಂದ ತಿಳಿಯುತ್ತದೆ. ಉದಾಹರಣೆಗೆ ಶಕ ವರ್ಷ 1379 (ಕ್ರಿ. ಶ. 1458)ರ ಶಾಸನವೊಂದು ಪ್ರೌಢದೇವ ಮಹಾರಾಯರ ಅರಮನೆಯ ಓದುವ ಹೊನ್ನಮವ್ವಗಳು ಶ್ರೀ ಮಲ್ಲಿಕಾರ್ಜುನ ದೇವರಿಗೆ ದಿನಕ್ಕೆ ಒಂದು ಅವಸರದ ಹರಿವಾಣದ ನೈವೇದ್ಯದ ಕಟ್ಟಳೆಗೂ ಐವರು ಜಂಗಮರ ಆರೋಗಣೆ ಕಟ್ಟಳೆಗೂ ಕ್ಷೇತ್ರ

ವೊಂದನ್ನು ಸಮರ್ಪಿಸಿದರೆಂದು ತಿಳಿಸುತ್ತದೆ. ಶಕ ವರ್ಷ 1381 (ಕ್ರಿ. ಶ. 1460)ನೆಯ ಶಾಸನ ವೊಂದು ವಿಜಯರಾಯ ಮಹಾರಾಯರ ಮಗಳೂ ಪಾಂಡ್ಯ ಪೆರುಮಾಳ ದೇವನ ಹೆಂಡತಿಯೂ ಆದ ಲಖುಮಾಜೀಆಯಿಯು ದೇವರ ನೈವೇದ್ಯಕ್ಕೂ ಐದುಜನ ಜಂಗಮರ ಆರೋಗಣೆಗೂ ಭೂದಾನ ವನ್ನು ಮಾಡಿದರೆಂದು ತಿಳಿಸುತ್ತದೆ.

ಹೀಗೆ ಧಾರ್ಮಿಕ ಸಾಮಾಜಿಕ ಐತಿಹಾಸಿಕ ಮುಂತಾದ ಉಪಯುಕ್ತವೂ ಗರಿಷ್ಠವೂ ಆದ ಅನೇಕ ವಿಷಯಗಳನ್ನೊಳಕೊಂಡ ಕ್ರಿ.ಶ 12ನೆಯ ಶತಮಾನದಿಂದ 17ನೆಯ ಶತಮಾನದ ವರೆಗಿನ ಸುಮಾರು ಅರುವತ್ತು ಶಾಸನಗಳು ಶ್ರೀಶೈಲ ದಲ್ಲಿವೆ.

ಶ್ರೀ ಶೈಲದಲ್ಲೇ ದೊರೆಯದೇ ಇದ್ದರೂ ಸಹಾ ಈ ಪುಣ್ಯಕ್ಷೇತ್ರಕ್ಕೆ ಸಂಬಂಧಪಟ್ಟ ಇನ್ನೊಂದು ಶಾಸನವನ್ನು ಇಲ್ಲಿ ಕೊಡುವುದು ಉಚಿತವಾಗಿದೆ. ಮುಸಲಿಮಡುಗು (ನಂದಿಕೊಟ್ಕೂರು ತಾಲ್ಲೂಕು, ಕರ್ನೂಲ್ ಜಿಲ್ಲೆ) ಗ್ರಾಮದ ಭೇತೇಶ್ವರ ದೇವಾಲಯದಲ್ಲಿರುವ ಈ ಶಾಸನವು ಈ ರೀತಿ ಇದೆ ;—

ಶ್ರೀ ಓರುಗಂಟ್ಯಂತಿಕ ಮಾಚಿರಾಜುಪಲ್ಲಿಜಃ
ಶ್ರೀಗಿರಿಶೃಂಗನಿವಾಸೀ
ಶ್ರೀ ಪಂಡಿತಾರಾಧ್ಯ ಗೃಹಸ್ಯ ದಾಸೋ
ವಿಭೂತಿ ಗೌರಃ ಶರಣಾಗತೋವಃ

ಅಂದರೆ ಓರುಗಲ್ಲಿನ ಸಮೀಪದ ಮಾಚಿ ರಾಜ ಪಲ್ಲಿಯಲ್ಲಿ ಹುಟ್ಟಿ ಶ್ರೀಶೈಲದ ಪರ್ವತನಿವಾಸಿಯೂ ಪಂಡಿತಾರಾಧ್ಯರ ಮನೆಯ ದಾಸನೂ ಆದ ವಿಭೂತಿ ಗೌರಯನು ನಿಮಗೆ ಶರಣಾಗತನಾಗಿದ್ದಾನೆ ಎಂದು. ವೀರಶೈವ ಮತಸ್ಥಾಪಕರಲ್ಲೊಬ್ಬರಾದ ಪಂಡಿತಾರಾಧ್ಯರು ಶ್ರೀಶೈಲದಲ್ಲಿ ಒಂದು ಮಠವನ್ನು ಸ್ಥಾಪಿಸಿ ಅಲ್ಲಿ ವಾಸಮಾಡುತ್ತಿದ್ದರೆಂದು ಪ್ರತೀತಿಯಿದೆ. ಈ ವಿಷಯವು ಈ ಶಾಸನದಲ್ಲಿ ಸೂಚಿಸಲ್ಪಟ್ಟಿರುವುದು ಗಮನಾರ್ಹವಾಗಿದೆ.

ಎನ್. ಲಕ್ಷ್ಮೀನಾರಾಯಣರಾವ್

---

# ಕನ್ನಡದ ಛಂದಸ್ಸುಗಳು

**(ಜಯಕೀರ್ತಿ—ನಾಗವರ್ಮರ ಕೃತಿ ವಿಚಾರ)**

ಕನ್ನಡದ ಪ್ರಾಚೀನತೆಯ ವಿಚಾರದಲ್ಲಿ ಲೌಕಿಕಗ್ರಂಥರತ್ನಗಳಾದ ವಾಲ್ಮೀಕಿ ರಾಮಾಯಣ, ವ್ಯಾಸಭಾರತ ಮತ್ತು ಇತರ ಪುರಾಣಗಳಲ್ಲೂ, ಚಾರಿತ್ರಿಕಗಳಾದ ಅಶೋಕಮಹಾರಾಜನ ಶಾಸನಾದಿನಗಳಲ್ಲೂ ಹೇಳಿದುದನ್ನು ಬಲ್ಲವರು ಆಗಾಗ ಚರ್ಚಿಸಿ ಬರೆಯುತ್ತಲಿದ್ದಾರೆ. ಕನ್ನಡ–ಕರ್ಣಾಟಕ–ಕರುನಾಡು ಎಂದು ಹೆಸರುಳ್ಳ ಈ ಜನಪದದ ವಿಚಾರದಲ್ಲಿ ಅಪ್ರತ್ಯಕ್ಷವಾಗಿ ಈ ಜನಾಂಗ ಹಾಗೂ ಈ ಜನಾಂಗದ ನುಡಿಯು ಅರ್ಥಾತ್ ಸಾಹಿತ್ಯವು ಅಷ್ಟೇ ಪ್ರಾಚೀನವಿತ್ತೆಂದು ತಿಳಿಯಬರುವುದು. ಇದುವರೆಗೆ ಪ್ರಕಟವಾದುವುಗಳಲ್ಲಿ ಕ್ರಿಸ್ತಾಬ್ದ ಅಯ್ದನೆಯ–ಆರನೆಯ ಶತಕದ ಶಾಸನಗಳೇ ಕನ್ನಡದ ಮೊದಲ ಕೃತಿಗಳಾಗಿವೆ. ಅಲ್ಲಿ ಕೆಲವು ಕನ್ನಡದ ಛಂದಸ್ಸುಗಳಿವೆ. ಆದರೆ, ಹತ್ತನೆಯ ಆಚೀಚಿನ ಕೆಲವು ವರ್ಷಗಳಲ್ಲಿ ಬರೆದಿರುವ ಜಯಕೀರ್ತಿ ಹಾಗೂ ನಾಗವರ್ಮರ ಛಂದೋನುಶಾಸನ ಮತ್ತು ಛಂದೋಂಬುಧಿಗಳಲ್ಲಿ ಹೇಳಿರುವ ಕನ್ನಡದ ಛಂದಸ್ಸುಗಳ ವೈವಿಧ್ಯ ಹಾಗೂ ವೈಶಿಷ್ಟ್ಯಗಳನ್ನು ಪರಿಶೀಲಿಸಿದರೆ, ಅದಾಗಲೇ ಕನ್ನಡದಲ್ಲಿ ಪ್ರರೂಢವಾದ ಹಲವು ಸ್ವತಂತ್ರವಾದ ದ್ರಾವಿಡ ವರ್ಗದ ಛಂದೋವೃತ್ತಗಳು ಕೃತಿಗಳಲ್ಲಿ ಅನೇಕಶಃ ಬಳಕೆಗೊಂಡಿದ್ದುವೆಂದು ತಿಳಿಯುತ್ತದೆ. ಅರ್ಥಾತ್, ಅಂತಹ ಛಂದೋನಿರೂಪಣಗಳು ಪ್ರರೂಢವಾಗಬೇಕಾದರೆ, ಆ ಮೊದಲೇ ಅವುಗಳ ಪ್ರಯೋಗ ಧೋರಣೆ ನಿಶ್ಚಿತ ರೂಪಗಳು ಜನಜನಿತವಿದ್ದುವೆಂದು ತೋರುತ್ತದೆ. ಈ ವಿಷಯದಲ್ಲಿ ಕಾಲವಿಚಾರಾದಿ ಸುದೀರ್ಘ ಚರ್ಚೆಗೆ ಇಲ್ಲಿ ಅವಕಾಶವಿಲ್ಲ. ಪ್ರಕೃತ, ಜಯಕೀರ್ತಿಯ ಸಂಸ್ಕೃತ ಛಂದೋನುಶಾಸನದಲ್ಲಿ ಹೇಳಿದ 'ಕರ್ಣಾಟಕ ವಿಷಯ ಭಾಷಾ ಜಾತ್ಯಧಿಕಾರ'ವೆಂಬ ಏಳನೆಯ ಅಧಿಕಾರದ ಕೆಲವು ಛಂದೋವಿಚಾರಗಳ ಲಘುಪರಿಚಯವನ್ನು ನಾಗವರ್ಮನ ಛಂದೋಂಬುಧಿ ಗ್ರಂಥದ ಉಲ್ಲೇಖದೊಂದಿಗೆ ಬರೆಯುವುದಕ್ಕೆಳಸಿದೆ. ಇವುಗಳ ಬಗ್ಗೆ ಸುವಿಸ್ತಾರವಾದ ವಿಮರ್ಶಾದಿಗಳು ಬೇರೆ ತಿಳಿಯತಕ್ಕುವೆಂದು, ಆ ಬಗ್ಗೆ ಬಲ್ಲವರು ಹೆಚ್ಚು ಬೆಳಕು ನೀಡಬೇಕ್ಕೆಂದು ಬಗೆಯುತ್ತೇನೆ.

"ವಕ್ಷ್ಯೇऽಕ್ಷರ ತ್ರಿಪದ್ಯೇಲಾಕ್ಷರಿಕಾ
ಷಟ್ಪದಿ ಚತುಷ್ಪದಿಕಾಃ।
ಛಂದೋವತಂಸ ಸಂಜ್ಞಾ ಮದನವತೀ
ಗೀತಿಕಾದಿಮಪಿ ಕರ್ಣಾಟೇ ||"

ಅಂದರೆ, ಅಕ್ಷರ, ತ್ರಿಪದಿ, ಏಲಾ, ಅಕ್ಷರಿಕಾ, ಷಟ್ಪದಿ, ಚತುಷ್ಪದಿ, ಛಂದೋವತಂಸ, ಮದನವತಿ, ಗೀತಿಕೆಗಳ ಲಕ್ಷಣವನ್ನು ಮಾತ್ರ ಇಲ್ಲಿ ಜಯಕೀರ್ತಿ ಹೇಳಿದ್ದಾನೆ. ಇವುಗಳಲ್ಲಿ ಹಲವು ವೃತ್ತಗಳು ಯಾವ–ಯಾರ ಕೃತಿಗಳಲ್ಲಿ ಕಾಣುತ್ತವೆಯೆಂದು ಹೇಳಿದ್ದಾನೆ. ಪರಂತು, ಈ ವೃತ್ತಗಳ ಲಕ್ಷಣಗಳನ್ನೊಳಗೊಂಡ ಲಕ್ಷ್ಯಪದ್ಯಗಳನ್ನು ಗ್ರಂಥದಲ್ಲಿ ಒಳಗೆ ಹೇಳುವಾಗ, ಅಕ್ಷರ (5 ತರದವು); ತ್ರಿಪದಿ, ಏಲಾ, ಚತುಷ್ಪದಿಕಾ, ಛಂದೋವತಂಸ, ಷಟ್ಪದಿ, ಅಕ್ಷರಿಕಾ, ಮದನವತಿ, ಗೀತಿಕೆ

ಗಳು ಅನುಕ್ರಮವಾಗಿ ಹೇಳಿವೆ. ಅಂದರೆ ಈ ಮೇಲಣ ಶ್ಲೋಕದಲ್ಲಿ ಹೇಳಿದ ಅನುಕ್ರಮದಲ್ಲಿ ಹೇಳಿಲ್ಲ! ಇದು ವಿಚಾರಣೀಯವಾಗಿದೆ!

ನಾಗವರ್ಮನು ಕನ್ನಡದ ಛಂದೋವೃತ್ತಗಳೆಂದು ಮೊದಲು ಹೇಳಿದ್ದು ಹೀಗಿದೆ.(1–47):

"ಮದನವತಿಯಕ್ಕರಂ ಚೌ|
ಪದಿ ಗೀತಿಕೆಯೇಳೆ ತಿವದಿಯುತ್ಸಾಹಂ ಷ|
ಟ್ಪದಿಯಕ್ಕರಿಕೆ ಕರಂ ಚೆ|
ಲ್ವೊದವಿದ ಛಂದೋವತಂಸಮಬ್ಜದಳಾಕ್ಷೀ ||"

ಆದರೆ, ಛಂದೋಬುಧಿಯ ಪಂಚಮಾಧಿಕಾರದಲ್ಲಿ ಇವನ್ನು ಲಕ್ಷ್ಯ–ಲಕ್ಷಣಪೂರ್ವಕ ಒಂದೊಂದು ಪದ್ಯದಲ್ಲೇ ವಿವರಿಸುವಲ್ಲಿ ಈ ಪದ್ಯದಲ್ಲಿ ಹೇಳಿದ ಅನುಕ್ರಮದಂತೆ ಹೇಳಿಲ್ಲ. ಪರಂತು ಅಯ್ದು ಬಗೆಯ ಅಕ್ಕರಗಳು, ತ್ರಿಪದಿ, ಏಳೆ, ಚೌಪದಿ, ಛಂದೋವತಂಸ, ಅಕ್ಕರಿಕೆ, ಮದನವತಿ ಗೀತಿಕೆ, ಉತ್ಸಾಹ ಮತ್ತು ಷಟ್ಪದಿಗಳನ್ನು ಅನುಕ್ರಮವಾಗಿ ಹೇಳಿದ್ದಾನೆ. ಈ ಕನ್ನಡ ಛಂದೋಂಬುಧಿಯ ಅಡಿಟಿಪ್ಪಣಿಗಳನ್ನು ಪರಿಶೀಲಿಸಿದರೆ, ಈ ಹತ್ತು ಬಗೆಯ ವೃತ್ತಗಳು ಮೊದಲೆಂದ ಅನುಕ್ರಮದಲ್ಲಿರಬೇಕಾಗುತ್ತದೆಯೆಂದು ಊಹಿಸಬರುತ್ತದೆ. ನಾಗವರ್ಮನು ಹೇಳಿದ ಹತ್ತು ಬಗೆಗಳಲ್ಲಿ ಉತ್ಸಾಹವೊಂದನ್ನು ಬಿಟ್ಟು ಉಳಿದ ಒಂಬತ್ತು ಬಗೆಗಳು ಜಯಕೀರ್ತಿಯಲ್ಲಿ ಕಾಣುತ್ತೇವೆ. ಆದರೆ, ಜಯಕೀರ್ತಿಯು 'ಗೀತಿಕಾದಿ'ಯೆಂದುದರಿಂದ ಆತನ ಕಾಲದಲ್ಲಿ 'ಉತ್ಸಾಹ'ವು ಅಷ್ಟು ಪ್ರಚುರವಾಗಿದ್ದಿಲ್ಲವೆಂದೂ, ಇಂತಹ ತರದಲ್ಲಿ ಹಲವಾರು ವೃತ್ತವಿಶೇಷಗಳನ್ನು 'ಚೇಹಾನುಕ್ರಾನ್ಯನೇಕಧಾ' ಎಂದು ಸೂಚಿಸಿದ್ದಾನೆಂದೂ ಕಾಣುತ್ತದೆ.

ಈ ವೃತ್ತಗಳ ಅಂಶಗಳ ಹೆಸರುಗಳಾದರೂ ಒಂದೊಂದು ಭಾಷೆಯ ಗ್ರಂಥಗಳಲ್ಲಿ ಒಂದೊಂದು ತರವಿವೆ. ಜಯಕೀರ್ತಿಯು ರತಿ, ಮದನ, ಶರಗಳೆಂದು ಹೇಳಿದ್ದರೆ ಅವುಗಳಿಗೇನೇ ನಾಗವರ್ಮನು ಬ್ರಹ್ಮ, ವಿಷ್ಣು, ರುದ್ರಗಳೆಂದು ಹೆಸರಿಸಿದ್ದಾನೆ. (ಸಂಗೀತರತ್ನಾಕರದಲ್ಲಿಯೂ ರತಿ, ಮದನ, ಶರಗಳೆಂಬ ಹೆಸರಿದೆ.) ಈ ಗಣಗಳಿಗೆ ಅನುಕ್ರಮವಾಗಿ ಸೂರ್ಯ, ಇಂದ್ರ, ಚಂದ್ರರೆಂದು ತೆಲುಗಿನಲ್ಲಿ ಹೆಸರಿವೆ. ಪರಂತು ತಮಿಳಿನಲ್ಲಿ ಇಂತಹ ಪ್ರತ್ಯೇಕ ನಾಮುಗಳಿರದೆ, ಅಯಾಗಣದ ಮೂಲಗುರುವರ್ಣಗಳ ಮೇರೆಗೆ ಈರಶೈಶೀರ್, ಮೂವಶೈಶೀರ್, ನಾಲಶೈಶೀರ್ ಎಂದು ಹೆಸರಿವೆ. (ಅಶೈ ಅಂದರೆ ಅಂಶ, ಶೀರ್ ಅಂದರೆ ಗಣವೆಂದು ಸ್ಥೂಲಾರ್ಥವಾಗಿದೆ.) ಈ ನಾಲ್ಕು ಬಗೆಯ ಹೆಸರುಗಳಲ್ಲಿ ಯಾವುದು ರೂಢಮೂಲವಾಗಿರಬೇಕೆಂದು ಬಲ್ಲವರು ವಿವೇಚಿಸಬೇಕಾಗಿದೆ. ಆದರೆ ತಮಿಳಿನ ಹೆಸರುಗಳು ನೇರವಾದ ಅರ್ಥವನ್ನು ಸೂಚಿಸುತ್ತವೆ. ಉಳಿದ ಮೂರು ತರದ ಹೆಸರುಗಳು ಬರಲು–ಕಾರಣವಿವರಣವು ಅಲ್ಲೆಲ್ಲಿಯೂ ಹೇಳಲಿಲ್ಲ!ಈ ಬಗೆಯು ಅಗತ್ಯ ಸಂಶೋಧಿಸಬೇಕಾಗಿದೆ!

ತಮಿಳಿನಲ್ಲಿ ಈ ಮೂರು ಗಣಗಳಲ್ಲದೆ, ಇನ್ನೆರಡು ತರದ ಗಣಗಳ ಹೆಸರಿವೆಯೆಂದು ತಿಳಿಯುತ್ತದೆ. "ನೇರಶೈ: ಒಂದು ಹ್ರಸ್ವ ಅಥವಾ ದೀರ್ಘ, ತಾನೇ ಆಗಲಿ ವ್ಯಂಜನ ಸೇರಿಯಾಗಲಿ ಬರುವುದು: ಆ, ಳಿ, ಚೊಲ್, ವಾನ್. ಒಂದು ಹ್ರಸ್ವಗಣದ ಮೊದಲು ಅಂಶವಾಗಿ ಬರುವುದಿಲ್ಲ. ನಿರೈಯಶೈಃ ಎರಡು ಹ್ರಸ್ವ ಅಥವಾ ಹ್ರಸ್ವದೀರ್ಘ ತಾನೇ ಆಗಲಿ ವ್ಯಂಜನ ಸೇರಿಯಾಗಲಿ ಬರುವುದು: ಅಣಿ, ನಿಲಾ, ಕಲಮ್, ಪಡಾಮ್. ಮಾತ್ರಾ ದೃಷ್ಟಿಯಿಂದ ನೇರಶೈ ಅಥವಾ ನಿರೈಯಶೈಗಳಲ್ಲಿ ಹ್ರಸ್ವದೀರ್ಘಗಳುಳ್ಳ ಅಂಶವು ಸಾಮಾನ್ಯವಾಗಿ ಇಲ್ಲವೆಂದು ಕಂಡು, ಇರಕೂಡದೆಂದು ತಿಳಕೊಂಡಿದ್ದೇವೆ. ತಮಿಳಿ

ನಲ್ಲಿ ಇದು ಸರ್ವೇಸಾಧಾರಣ" (ಕನ್ನಡ ಕೈಪಿಡಿ ಪುಟ.155) ಆದರೆ, ಗ್ರೀಕ್ ಸಾಹಿತ್ಯದ ಮೂರು ಗಣ–ಉಪಗಣಗಳ ಹೆಸರು, ಸ್ವರೂಪ, ಗಣ ಪ್ರಸ್ತಾರ ಕ್ರಮಗಳಲ್ಲಿ ಈ ತಮಿಳಿನ ಕ್ರಮಕ್ಕೆ ಕೆಲವು ಸಾಮ್ಯವಾಗಿವೆ. (ಕನ್ನಡ ಛಂದೋವಿಕಾಸ ಡಾ. ಡಿ. ಎಸ್. ಕರ್ಕಿ). ಆದುದರಿಂದ, ಈ ಪ್ರಾಚೀನ ಕ್ರಮದಂತೆ ಕನ್ನಡದಲ್ಲೂ ಕೆಲವು ಅಂಶಗಣಗಳಿದ್ದು, ಬಳಕೆಯಿಲ್ಲದೆ ಮೂಲೆ ಗುಂಪಾಗಿರಬಹುದೇನೋ? ಈ ಬಗ್ಗೆ ವಿದ್ವಾಂಸರು ಪುನಃ ವಿವೇಚಿಸಬೇಕಾಗಿದೆಯೆಂದು ತೋರುವುದಿಲ್ಲವೇ?

ಅಕ್ಕರವೃತ್ತಗಳ ಅಯ್ದು ಬಗೆಯ ಹೆಸರುಗಳು ಕನ್ನಡದ ನಾಗವರ್ಮನ ಛಂದೋಂಬುಧಿಯಲ್ಲಿ, ಸಂಸ್ಕೃತದ ಜಯಕೀರ್ತಿಯ ಛಂದೋನುಶಾಸನದಲ್ಲಿ, ತೆಲುಗಿನ ಅಪ್ಪಾಕವಿಯ ಕೃತಿಯಲ್ಲಿ ಹೇಳಿವೆ. "ನಾಗವರ್ಮನು ಅಯ್ದು ಅಕ್ಕರಗಳನ್ನು ಹೇಳಿರುವನು :—ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿರಿಯಕ್ಕರ. ಇವಕ್ಕೆ ತೆಲುಗಿನಲ್ಲಿ ಕ್ರಮವಾಗಿ ಮಹಾಕ್ಕರ, ಮಧ್ಯಾಕ್ಕರ, ಮಧುರಾಕ್ಕರ, ಅಂತರಕ್ಕರ, ಅಲ್ಪಾಕರ ಎಂದು ಹೆಸರು (ಮಧ್ಯಾಕ್ಕರ ಮಧುರಾಕ್ಕರ ಎಂಬ ಹೆಸರುಗಳು ಹೊಂದಿಕೆಯಿಲ್ಲ)" ವೆಂದು ತಿಳಿಯುತ್ತದೆ. (ಕನ್ನಡ ಕೈಪಿಡಿ. 125) ಇವುಗಳಿಗೆ ಜಯಕೀರ್ತಿಯು ಅನುಕ್ರಮವಾಗಿ ಮಹಾಕ್ಷರ, ಸಮಾನಾಕ್ಷರ, ಮಧ್ಯಮಾಕ್ಷರ, ಅಂತರಾಕ್ಷರ, ಅಲ್ಪಾಕ್ಷರಗಳೆಂದು ಹೆಸರಿಸಿದ್ದಾನೆ. ಆದರೆ ಲಕ್ಷಣ ನಿರೂಪಣದಲ್ಲಿ ಅಲ್ಪಾಕ್ಷರದಿಂದ ಪ್ರಾರಂಭಿಸಿ ಮಹಾಕ್ಷರದನಕ ತಿರುವುಮುರುವಾಗಿ ಹೇಳಿದ್ದಾನೆ? ಇವುಗಳ ಲಕ್ಷಣವಿಸ್ತಾರದಲ್ಲಿ, ಯತಿ ಹಾಗೂ ಗಣವಿಧಾನಗಳಲ್ಲಿ ಈ ಮೂರು ಕೃತಿಗಳಲ್ಲಿ ತುಸ ವ್ಯತ್ಯಾಸವಿದೆ. ಜಯಕೀರ್ತಿಯು ಮಹಾಕ್ಷರದ ಲಕ್ಷಣ ಹೇಳುವಾಗ ಆರು ಸ್ವರಗಣ ಮತ್ತು ಕೊನೆಗೆ ಒಂದು ಬಾಣಗಣ (6 ವಿಷ್ಣು ಮತ್ತು 1 ರುದ್ರಗಣ) ವಿರುವುದನ್ನು 'ಕೇಚಿದಾಹುಃ' ಎಂಬ ಪಾಠಾಂತರವಾಗಿ ಸೂಚಿಸಿದ್ದಾನೆ. ಇದೊಂದು ಅಕ್ಕರದಲ್ಲಿ ಮಾತ್ರ ಇವನು ಯತಿಸೂಚನೆ ಮಾಡಿದ್ದಾನೆ. ತೆಲುಗಿನಲ್ಲಿ ಪ್ರತಿಯೊಂದು ಅಕ್ಕರದಲ್ಲಿ ಯತಿ ವಿಚಾರ ಹೇಳಿದೆ. ಈ ಸಂಗತಿ ವಿವೇಚನೀಯವಿದೆ.

ಇಂತಹ ಉಲ್ಲೇಖವಿಲ್ಲ. ಅದು ಆಗಲೇ ಜನಪ್ರಚುರವಾಗಿದ್ದಿರಬೇಕು. ಇನ್ನು ಚೌಪದಿಯ ವಿಚಾರದಲ್ಲಿ 'ವಿದಿತಾಸೌ ಚೂಡಾಮಣೌ' ಎಂದಿದೆ. ಗೀತೆಯ ವಿಷಯದಲ್ಲಿ 'ನಿಗದಿತಾ ಗೀತಿಕಾಲಂಕಾರೇ ಪ್ರಭುಸೇನೀಯೈಃ' ಎಂದಿದೆ. ಕನ್ನಡದ ಈ ಅಂಶಗಣಘಟಿತ ವೃತ್ತಗಳನ್ನು ಆ ಮೊದಲು ಬಳಸಿದ ಕೃತಿ ಹಾಗೂ ಕೃತಿಕಾರರ ಹೆಸರಾದರೂ ಇಲ್ಲಿ ಹೇಳಿರುವುದರಿಂದ ಇದು ಪ್ರಾಮಾಣಿಕ ಗ್ರಂಥವೆಂದು ತಿಳಿಯಲಡ್ಡಿಯಿಲ್ಲ. ನಾಗವರ್ಮನಂತೆ ಜಯಕೀರ್ತಿಯು ಲಕ್ಷಣ ಪದ್ಯಗಳನ್ನೇ ಲಕ್ಷ್ಯಗಳನ್ನಾಗಿ ಬರೆದಿದ್ದಾನೆ. ಪರಂತು,

ಅಕ್ಷರ ಭೇದಗಳಾದ ಈ ಅಯ್ದು ಅಕ್ಷರವೃತಗಳು ಆ ಮೊದಲು ಯಾರ–ಯಾವ ಕಾವ್ಯದಲ್ಲಿ ಬಳಕೆಗೊಂಡಿದ್ದುವೆಂದು ಜಯಕೀರ್ತಿ ಹೇಳಿದ್ದಾನೆ. ಅಲ್ಪಾಕ್ಷರವು 'ಶೃಂಗಾರ ಪಿಂಡಾದಿ ಕಾವ್ಯೇಷುತತ್ ಸಂಗೀತಂ ಕರ್ಣಾಟಕೇ ಪ್ರಸಿದ್ಧಂ' ಎಂದಿದೆ (ಇಲ್ಲಿಯ ಸಂಗೀತವೆಂದರೆ ಹೇಳಿದೆಯೆಂದಲ್ಲದೆ ಗಾಯನವೆಂಬ ಆಶಯವಲ್ಲ.) ಅಂತರಾಕ್ಷರವು 'ವಿದಿತಮಾರ್ಹತೇ ಕರ್ಣಾಟೇಶ್ವರ ಕಥಾದೌ' ಎಂದಿದೆ. ಮಧ್ಯಮಾಕ್ಷರವು 'ಪ್ರಥಿತಂ ಕರ್ಣಾಟ ಮಾಲತೀ ಮಾಧವ ಪ್ರಭೃತಿ ಕಾವ್ಯೇ' ಎಂದಿದೆ. ಸಮಾನಾಕ್ಷರವು 'ಅಸಗಾಖ್ಯಕವಿನಾಪ್ರತಿಪಾದಿತಂ ನನು ಕರ್ಣಾಟ ಕುಮಾರ ಸಂಭವ ಕಾವ್ಯೇ' ಎಂದಿದೆ. ಕೊನೆಯದಾದ ಮಹಾಕ್ಷರದ ಬಗ್ಗೆ

ಆಯಾಯಾ ಕಾವ್ಯಗಳಿಂದ ಪದ್ಯಗಳನ್ನು ಎತ್ತಿ ಕೊಟ್ಟಿದ್ದರೆ ಜಯಕೀರ್ತಿಯ ಉಪಕಾರ ಇನ್ನೂ ಮಹತ್ತರವಾಗುತ್ತಿತ್ತು ಎಂದು ಹೇಳಬೇಕಾಗಿಲ್ಲ! (ಕ.ಸಾ. ಪರಿಷತ್ಪತ್ರಿಕೆ. 1962 ಜೂನ್)ಅಥವಾ ಆಯಾಯ ಕವಿ-ಕಾವ್ಯಗಳ ಕಾಲ ಹಾಗೂ ಇತರ ವಿಷಯಗಳೂ ಇಲ್ಲಿರುತ್ತಿದ್ದರೆ ಮಹತ್ತನು ವಿಶೇಷ ಉಪಕಾರವಾಗುತ್ತಿತ್ತೆಂದು ಹೇಳಬೇಕಾದೀತು!

ಇದಲ್ಲದೆ ಈ ಜಯಕೀರ್ತಿಯು 'ನಾಗವರ್ಮನಿಗಿಂತ ಈಚಿನವನೆಂದೂ, ಸುಮಾರು ಹನ್ನೊಂದನೆಯ ಶತಮಾನದವನೆಂದೂ ವಿದ್ವಾಂಸರ ತೀರ್ಮಾನ'ವೆಂದು ಹೇಳಲಾಗಿದೆ (ಅದೇ ಪರಿಷತ್ಪತ್ರಿಕೆ.) ನಾಗವರ್ಮನು ಹತ್ತನೆಯ ಶತಮಾನದ ಕೊನೆಯಲ್ಲಿ ಬಾಳಿದವನು. ಜಯಕೀರ್ತಿಯು ಹೆಸರಿಸಿದ ಅಸಗ ಒಂಬತ್ತನೆಯ ಶತಕದ ಪೂರ್ವಾರ್ಧದಲ್ಲಿದ್ದವನು. (ಕನ್ನಡ ಸಾಹಿತ್ಯ ಚರಿತ್ರೆ–ಡಾ.ರಂ.ಶ್ರೀ.ಮುಗಳಿ) ಈ ಮೊದಲೆಂದಂತೆ ನಾಗವರ್ಮನು ಹೇಳಿದ ಅಂಶಗಣಘಟಿತ 'ಉತ್ಸಾಹ' ವೃತ್ತವು ಜಯಕೀರ್ತಿಯಲ್ಲಿರುವುದಿಲ್ಲ. ಜಯಕೀರ್ತಿಯ ಕಾಲಕ್ಕೆ ಅದರ ಬಳಕೆ ಹೆಚ್ಚು ಆಗಿಲ್ಲವೆಂದೂ ಹೇಳಬಹುದು. ಹಾಗಾದರೆ, ಜಯಕೀರ್ತಿಯು ನಾಗವರ್ಮನ ಸರಿಕಾಲದವನೋ, ಅಥವಾ ತುಸ ಹಿಂದಿನ ಕಾಲದವನೋ ಎಂದು ಹೇಳಲೆಡೆಯಿದೆ. ಈ ಬಗ್ಗೆ 'ವಿದ್ವಾಂಸರ ತೀರ್ಮಾನ'ವು ಪುನಃ ಅವಶ್ಯ ವಿಚಾರಣೀಯ-ವಿವೇಚನೀಯವೆನ್ನಬಹುದು! ಇದೀಗ ಜಯಕೀರ್ತಿ ನಾಗವರ್ಮನ ಕೃತಿಗಳ ಒಂದೆರಡು ಪದ್ಯಗಳನ್ನು ಉದಾಹರಿಸಿ ತುಸ ಪರಿಚಯಿಸಬಹುದೆಂದು ಭಾವಿಸುತ್ತೇನೆ. ನಾಗವರ್ಮನು ಕನ್ನಡದ ಛಂದೋವೃತ್ತಗಳನ್ನು ಕುರಿತು ಕನ್ನಡದಲ್ಲಿ ಬರೆದುದು, ಜಯಕೀರ್ತಿಯು ಸಂಸ್ಕೃತ ಛಂದೋವೃತ್ತಗಳನ್ನು ವಿವರಿಸುವುದರೊಂದಿಗೆ, ಕನ್ನಡ ಭಾಷೆಯ ಛಂದೋವೃತ್ತಗಳನ್ನು ಲಕ್ಷ್ಯ–ಲಕ್ಷಣ ಪೂರ್ವಕವಾಗಿಯೂ ಪ್ರಾಚೀನ ಪ್ರಯೋಗಕಾರರ ಹಾಗೂ ಕಾವ್ಯಗಳ ಹೆಸರಿಕೆಯೊಂದಿಗೂ ಉಲ್ಲೇಖಿಸಿದುದು ಬಹಳ ಶ್ಲಾಘ್ಯ. ಹಾಗೂ ಸುಪ್ರಚಾರಕ್ಕೆಡೆಯಾಗಿದೆ. ಕನ್ನಡ ಛಂದೋವಿಚಾರವೂ ವಿಶ್ವಜನತೆಗೆ ತಿಳಿವಂತೆ ಮಾಡಿದ ಕೀರ್ತಿ ಇವನಿಗೆ ಸೇರುತ್ತದೆ. ('ಸಂಸ್ಕೃತದಲ್ಲಿ ಕನ್ನಡದಗ್ರಂಥಗಳು') ಎಂಬ ಲೇಖನದಲ್ಲಿ ಕನ್ನಡದ ವ್ಯಾಕರಣ ಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದ ವಿಚಾರಕ್ಕೆಳಸಿದ್ದೇನೆ. (ಪ್ರಬುದ್ಧ ಕರ್ಣಾಟಕ. ೪೦–೪ ನೋಡಿ) 'ವ್ಯಾಕರಣ ಹಾಗೂ ಛಂದಸ್ಸುಗಳ ವಿಚಾರಗಳು ಪ್ರರೂಢವಾಗಿರುವ ಭಾಷೆಯೇ ಸಜೀವ' ಭಾಷೆಯೆಂದು ಹೇಳ ಬರುತ್ತದೆ. ಆಮೇರೆಗೆ ಕನ್ನಡದ ಛಂದೋವೃತ್ತಗಳನ್ನು ಕುರಿತು ಸಂಸ್ಕೃತದಲ್ಲಿ ಬರೆದ ಜಯಕೀರ್ತಿಯ ಉಪಕಾರ ಅಷ್ಟಿಷ್ಟಲ್ಲ! ನಾಗವರ್ಮನ ಭಾಷಾಭೂಷಣವೂ ಈ ವಿಧದಲ್ಲಿ ಗಮನೀಯವಾಗಿದೆ!

೧) ಅಕ್ಕರಿಕೆಯ ವಿಷಯದಲ್ಲಿ ನಾಗವರ್ಮನು ಹೇಳಿದುದು ಹೀಗಿದೆ:

"ಮರರಿಪು ಬೊಮ್ಮಂ ಮುರರಿಪು ಬೊಮ್ಮಂ
ಮುರರಿಪು ಶೂಲಧರಂ।
ಸನಿಸದೆ ನಿಲ್ಕುಂ ಖರಗಣಮುಕ್ಕುಂ
ಸುರಚಿರ ಮಾತ್ರೆಗಳಿಂ।
ನಿರುಪಮದಿಂದಂ ಪರಿಮಿತಮುಪ್ಪಂ-
ತಿರೆ ಯತಿಯುತು ನಿಯತತೆ।
ಬರೆ ತರಳಾಕ್ಷೀ ಧರೆಯೊಳದೆತ್ತಂ
ಕರಮೆಸೆವಕ್ಕರಿಕೆ॥

ಮೂರನೆಯ ಪಾದದಲ್ಲಿ ಪಾಠಾಂತರಃ ಯತಿರುತುರದೊಳ್, ಯತಿಷಟ್ ಶರದೊಳ್. ಈ ಪಾಠಾಂತರದ ಸಂದೇಹದ ಸ್ಥಾನವನ್ನು ಬಿಟ್ಟರೆ, ಅಕ್ಕರಿಕೆ ಸಮಪಾದ ವೃತ್ತದ ಹಾಗೆ ಕಾಣುತ್ತದೆ. ಮಾತ್ರ

ಗಣಬದ್ಧವಾಗಿಯೂ ತಿರುಗಿದೆ. ಕಡೆಯ ರುದ್ರ ಗಣವನ್ನು ನಾಲ್ಕು ಮತ್ತು ಎರಡು ಎಂದು ಒಡೆದು, ಒಟ್ಟಿನ ಮೇಲೆ ನಾಲ್ಕು ಮಾತ್ರೆಯ ಆರು ಗಣಗಳು, ಕಡೆಯಲ್ಲಿ ಒಂದು ಗುರು ಎಂದು ಹೇಳ ಬಹುದು. ಎರಡೆರಡು ಗಣಕ್ಕೆ ಯತಿ ಮತ್ತು ಒಳಪ್ರಾಸ ಮುಖ್ಯ" ಎಂದು ಹೇಳಲಾಗಿದೆ (ಕನ್ನಡ ಕೈಪಿಡಿ. 131). ಈ ವಿವರಣೆಗಾಗಿ ಇಲ್ಲಿ ಬೇರೆ ಆಧಾರ ಕಾರಣಗಳು ಹೇಳಿಲ್ಲ. ಆದರೆ, ಜಯ ಕೀರ್ತಿಯು ಇದನ್ನು ಕುರಿತು ಇನ್ನೊಂದು ತರ ವಾಗಿ ಹೇಳಿದ್ದಾನೆ.

"ಸ್ಮರರತಿ ಪೂರ್ವಂ ಸ್ಮರರತಿ ಮಧ್ಯಂ
ಸ್ಮರಯುಗ ಗುರುನಿಧನಂ |
ಚರಣ ಚತುಷ್ಕಂ ಸ್ಥಿರತರ ಚತುರು
ತ್ತರಶತಮಾತ್ರಮಿದಂ |
ಕರಿವಸು ಮಾತ್ರಾವಿರಮಣಯುತ್ ಚೇತ್
ಸ್ಫುರತಿ ತದಾಕ್ಷರಿಕಾ|
ಗುರುಪರ ಜಗಣೇತರಗತಿ ಮಾತ್ರಾ
ಧರಗಣ ಭಾಗಧಷಾ" ||

ಅಂದರೆ ಬ್ರಹ್ಮ ವಿಷ್ಣುಗಣ ಪೂರ್ವಕವಾ ಗಿಯೂ, ಬ್ರಹ್ಮ. ವಿಷ್ಣು ಗಣ ಮಧ್ಯಮವಾಗಿಯೂ ಬ್ರಹ್ಮಯುಗಲ ಹಾಗೂ ಕೊನೆಗೊಂದು ಗುರು ವುಳ್ಳ ನಾಲ್ಕುಸಾಲುಗಳಲ್ಲಿ ಒಟ್ಟು ಒಂದುನೂರ ನಾಲ್ಕು ಮಾತ್ರೆಗಳಿವೆ. ಎಂಟನೆಯ ಮಾತ್ರೆಗೆ ಹಾಗೂ ಮತ್ತೊಮ್ಮೆ ಎಂಟನೆಯ ಮಾತ್ರೆಗೆ ಯತಿ (ಮಾತ್ರಾವಿರಾಮ) ಇರಬೇಕೆಂದು ಆಶಯ (ಅಥವಾ ಎಂದು ಇನ್ನೊಂದು ಕ್ರಮವು ನಾಲ್ಕ ನೆಯ ಸಾಲಿನಲ್ಲಿದೆ. ಅಲ್ಲಿ 'ಜಗಣೇತರಗತಿ ಮಾತ್ರಾ' ಯೆಂದರೆ ಅಕ್ಷರವೃತ್ತಕ್ರಮ ಹೇಳಿದೆ.) ಅರ್ಥಾತ್, ಈ ತರದಲ್ಲಿ ಅಂಶಗಣವು ಕಾಲಕ್ರಮೇಣ ಮಾತ್ರಾ ಗಣವಾಗಿ ನಿರೂಪಿತವಾದುದು ವ್ಯಕ್ತವಾಗುತ್ತದೆ.

೨) ಇದಾಗಿ, ಷಟ್ಪದಿಯ ಲಕ್ಷಣವೆಂದು ನಾಗವರ್ಮನು ಹೇಳಿದುದು ಹೀಗಿದೆ:

"ಮಂದರಧರಗಣ |
ಮೊಂದಿರೆ ಕಡೆಯೊಳ್ |
ಕುಂದದೆ ನೆಲಸುಗೆ ಮದನ ಹರಂ" ||

ಅಂದರೆ, ಆರು ವಿಷ್ಣುಗಣ ಹಾಗೂ ಕೊನೆಗೆ ಒಂದು ರುದ್ರಗಣವಿರುವ ಅರ್ಧ ಪದ್ಯ–ಮೂರು ಸಾಲು–ಎಂದು ಆಶಯ. ಆದರೆ ಇದೇ ಲಕ್ಷಣ ವನ್ನು ರೂಪಾಂತರಿಸಿ, ವಿವರಿಸುವ ಜಯ ಕೀರ್ತಿಯ ಪದ್ಯವು ಇದಕ್ಕಿಂತಲೂ ಪ್ರತಿಪಾದ ದಲ್ಲಿ ಎರಡೆರಡು ಮಾತ್ರೆಗಳು ಹೆಚ್ಚಿರುವಂತಿದೆ:

ಸ್ಮರಗಣಃ ಪರಿತೋಽತ್ರ |
ಶರಗಣಃ ಪುರಷಸ್ತು |
ಚರಣಾಂತಯೋಸ್ತದಂತೇ ವಿರಾಮಃ" ||

ನಾಗವರ್ಮನು ಹೇಳಿದಂತೆ ಆರು ವಿಷ್ಣು ಗಣಗಳ ಕೊನೆಗೊಂದು ರುದ್ರಗಣವಿರುವ ಈ ಲಕ್ಷಣವು ಮಾತ್ರಾಗಣನೆಯಲ್ಲಿ ಅದಕ್ಕಿಂತ ಬೇರೆ ಯಾಗಿದೆ. ನಾಗವರ್ಮನು ನಿರೂಪಿಸಿದ ಪದ್ಯವು 'ಶರಷಟ್ಪದಿ' ಯೆಂದೂ, ಜಯಕೀರ್ತಿಯು ನಿರ ವಿಸಿದ ಶ್ಲೋಕವು 'ಕುಸುಮ ಷಟ್ಪದಿ' ಯೆಂದೂ ಕಾಲಾನುಕ್ರಮದಲ್ಲಿ ಹೆಸರಾದುವು. (ಚಂದ್ರ ರಾಜನ ಮದನತಿಲಕ ಹಾಗೂ ಇತರ ಗ್ರಂಥ ಶಾಸನಗಳಲ್ಲಿ ಕಾಣುವ ಷಟ್ಪದಿ ಹಾಗೂ ಷಟ್ಪದ ಗಳ ವಿಚಾರ ಬೇರೆ ವಿದ್ವಾಂಸರು ಚರ್ಚಿಸಿದ್ದಾರೆ. ಸಮಾಲೋಕನ: ಶ್ರೀ. ತೀ. ನಂ. ಶ್ರೀ) ಇವು ಗಳನ್ನು ಕಾಣುವಾಗಣ ಆಶಯವು ಹೀಗೆ ನಿರೂಪಿಸ ಲಾಗಿದೆ: "ಪ್ರಾಚೀನ ಕಾವ್ಯಗಳಲ್ಲಿ ಅಕ್ಕರ, ತಿವದಿಗಳೆರಡೇ ಇದ್ದುವು. ಕವಿರಾಜಮಾರ್ಗದಲ್ಲಿ ಅಕ್ಕರ, ಗೀತಿಕೆ, ತಿವದಿ, ಚೌಪದಿಗಳೆಂಬ ನಾಲ್ಕೇ ಇದ್ದವು." (ಕನ್ನಡ ಛಂದೋವಿಕಾಸ, 125)

ನಾಗವರ್ಮನಲ್ಲಿ ಜಯಕೀರ್ತಿಯು ಹೇಳದ 'ಉತ್ಸಾಹ'ವು ಸೇರಿ ಹತ್ತು ತರದ ಕನ್ನಡ ವೃತ್ತಗಳಾಗಿವೆ. ಅಂದರೆ, ಕಾಲಾನುಸಾರತಃ ಇವುಗಳ ವಿಕಾಸ ಹಾಗೂ ವಿಭೇದಗಳುಂಟಾದುವೆಂದು ತೋರುತ್ತದೆ.

ಈ ಷಟ್ಪದಿಯ ವಿಚಾರವಾಗಿ ವಿಶ್ಲೇಷಣ ರೀತಿಯಿಂದ ಬೇರೆ ತಿಳುಹಿದುದು ಹೀಗಿದೆ: "ಹತ್ತನೆಯ ಶತಮಾನದ ನಾಗವರ್ಮ ಜಯಕೀರ್ತಿಯರ ಕಾಲವು ಷಟ್ಪದಿಯ ಪ್ರಥಮ ಘಟ್ಟ, ಹದಿಮೂರನೆಯ ಶತಕದ ರಾಘವಾಂಕನ ಕಾವ್ಯವು ಎರಡನೆಯ ಘಟ್ಟ, ಕುಮುದೇಂದುವಿನಲ್ಲಿ ಮೂರನೆಯ ಘಟ್ಟ, ಹದಿನಾಲ್ಕನೆಯ ಶತಕದ ಭೀಮಕವಿಯಲ್ಲಿ ನಾಲ್ಕನೆಯ ಘಟ್ಟ ಕಾಣುತ್ತದೆ" (ಕನ್ನಡ ಛಂದೋವಿಕಾಸ. 199)

೩) ಇನ್ನೊಂದಾಗಿ, ಕನ್ನಡ ಭಾಷಾ ವಿಷಯ ವೈಶಿಷ್ಟ್ಯವೊಂದೆಂದು ಈ ಜಯಕೀರ್ತಿಯು ಹೇಳಿದುದು ಹೀಗಿದೆ:

ಆದಿರ್ಗುರು ಪೂರ್ವಶ್ಚೇತ್ |
ಪಾದೋ ಗುರು ಪೂರ್ವ ಶಾಸ್ತ್ರಥಾನ್ಯೇ ಜಾತಾ|
ಪಾದೋ ಲಘು ಪೂರ್ವಶ್ಚೇತ್ |
ಪಾದಿಃ ಶೇಷಾಸ್ತಥೈವ ಭಾಷಾವಿಷಯೇ" ||

ಈ ಬಗೆಯನ್ನು ನಾಗವರ್ಮನು ಕಾವ್ಯಾವಲೋಕನದಲ್ಲಿ ಎತ್ತಿ ಬರೆದಿದ್ದಾನೆ! (ಬೇರೆ ಕನ್ನಡ 'ಛಂದೋ ವ್ಯಾಕರಣ ಗ್ರಂಥಗಳಲ್ಲೂ ಈ ಸಂಗತಿ ಬಂದಿದೆ! ಈ ವಿಷಯ ಕನ್ನಡದ ಸ್ವತ್ವವೊಂದಾಗಿದೆ.

ಕೊನೆ: 'ಶಿಕ್ಷಾ ವ್ಯಾಕರಣಂ ಛಂದಃ' ಇತ್ಯಾದಿ ಷಡಂಗಗಳ ಪ್ರಾಧಾನ್ಯ ಹಾಗೂ ಅವಶ್ಯಕತೆಗಳು ಪ್ರಾಚೀನರ ಕೃತಿಗಳಿಂದ ತಿಳಿಯುತ್ತವೆ. ಛಂದಃ ಪಾದೌತು ವೇದಸ್ಯ....ಮುಖಂ ವ್ಯಾಕರಣಂ ಸ್ಮೃತಂ' ಎಂಬಂತೆ "ವೇದಪುರುಷನಿಗೆ ಛಂದೋಭೇದಗಳೇ ಕಾಲುಗಳು ಹಾಗೂ ವ್ಯಾಕರಣ ವಿವರಣವೇ ಮುಖ'ವೆಂದು ನಾವೂ ಒಪ್ಪಬರುತ್ತದೆ. ಅಂದರೆ, ಸಾಹಿತ್ಯದ ಸಾಗಾಟಕ್ಕೆ ಛಂದೋವಿಚಾರಗಳು ಅವಶ್ಯವಿದ್ದಂತೆ, ಸಾಹಿತ್ಯದ ನಿರೂಪಣೆಗೆ ವ್ಯಾಕರಣ ವಿಚಾರಗಳು ಅತ್ಯವಶ್ಯಕವಾಗಿವೆ. ವ್ಯಾಕರಣದ ಬಗೆಗೆ ನ್ಯಾಸ ಹಾಗೂ ಶಬ್ದಮಣಿದರ್ಪಣಗಳಲ್ಲಿ ಇದಕ್ಕಿಂತಲೂ ಹೆಚ್ಚಿನ–ಮಹತ್ವವಾದ ನಿರೂಪಣೆಯಿದೆ.

"ವ್ಯಾಕರಣಾತ್ಪದಸಿದ್ಧಿಃ |
ಪದ ಸಿದ್ಧೇರರ್ಥ ನಿರ್ಣಯೋ ಭವತಿ |
ಅರ್ಥೇ ತತ್ವಜ್ಞಾನಂ |
ತತ್ವಜ್ಞಾನಾತ್ಪರಂ ಶ್ರೇಯಃ ||"

"ವ್ಯಾಕರಣದಿಂದೆ ಪದಮಾ |
ವ್ಯಾಕರಣದ ಪದದಿನರ್ಥಮರ್ಥದೆ ತತ್ವಾ|
ಲೋಕಂ ತತ್ವಾಲೋಕದಿ |
ನಾಕಾಂಕ್ಷಿಪ ಮುಕ್ತಿಯಕ್ಕುಮದೆ
ಬುಧರ್ಗೆ ಫಲಂ ||"

'ಏಕಃ ಶಬ್ದಃ ಸುಪ್ರಯುಕ್ತಃ
ಸ್ವರ್ಗೇ ಲೋಕೇ ಕಾಮಧುಕ್ ಭವತಿ'

ಎಂಬ ಮಾತಿಗೆ ಇದು ವಿವರಣವಾಗಿದೆ!

ಪ್ರಸ್ತುತ, ಛಂದೋವಿಚಾರವಾಗಿ ಜಯಕೀರ್ತಿಯು ಹೇಳಿದ ವರ್ಣನೆ ಅತ್ಯಂತ ಶ್ರೇಷ್ಠವಾಗಿರುತ್ತದೆ:

"ಛಂದಶ್ಶಾಸ್ತ್ರಂ ವಹಿತ್ರಂ ತ|
ದ್ವಿವಿಕ್ಷೋಃ ಕಾವ್ಯಸಾಗರಂ|
ಛಂದೋಭಾಕ್ ವಾಙ್ಮಯಂ ಸರ್ವಂ |
ನ ಕಿಂಚಿಚ್ಛಂದಸಾ ವಿನಾ ||"

ಸಂಸ್ಕೃತದಲ್ಲಿ ಕನ್ನಡದ ಛಂದೋವೃತ್ತಗಳನ್ನು ಪ್ರಾಥಮಿಕವಾಗಿ ಪ್ರಚುರಿಸಿದ ಕೀರ್ತಿ ಈ ಜಯಕೀರ್ತಿಗೆ ಸಲ್ಲುತ್ತದೆ. ಈ ಮೇರೆಗೆ ಈ ಗ್ರಂಥದ ಬಗ್ಗೆ ಬಲ್ಲವರು ಇನ್ನೂ ಹೆಚ್ಚು ಸಾಧಾರವಾದ ವಿವೇಚನೆಯ ವಿವರಣೆ ಕೈಗೊಳ್ಳಬೇಕಾಗಿ ಹೇಳಬಯಸುತ್ತೇನೆ.

ವಿದ್ವಾನ್ ಕೆ. ವೆಂಕಟರಾಯಾಚಾರ್ಯ

# ಕನ್ನಡದ ಕಬ್ಬಿಗಿತಿಯರು

## (೧೯ ನೆಯ ಶತಮಾನದ ವರೆಗೆ)

"ಪುರುಷವತ್ ಯೋಷಿತೋಽಪಿ ಕವಿ ಭವೇಯುಃ ಸಂಸ್ಕಾರೋ ಹ್ಯಾತ್ಮನಿ ಸಮವೈತಿ, ನ ಸ್ತ್ರೈಣಂ ಪೌರುಷಂ ವಾ ವಿಭಾಗಮಪೇಕ್ಷತೇ. ಶ್ರೂಯಂತೇ ದೃಶ್ಯಂತೇ ಚ ರಾಜಪುತ್ರ್ಯೋ, ಮಹಾಮಾತ್ರ ದುಹಿತರೋ ಗಣಿಕಾಃ ಕೌತುಕಿ ಭಾರ್ಯಾಶ್ಚ ಶಾಸ್ತ್ರಪ್ರಹತಬುದ್ಧಯಃ ಕವಯಶ್ಚ" –ಎಂದರೆ "ಪುರುಷರಂತೆ ಸ್ತ್ರೀಯರೂ ಕವಿಗಳಾಗಬಹುದು; ಸಂಸ್ಕಾರವು ಆತ್ಮನಿಷ್ಠವೇ ಸರಿ; ಗಂಡು ಹೆಣ್ಣೆಂಬ ಭೇದವನ್ನು ಅದು ನೋಡುವುದಿಲ್ಲ; ರಾಜಪುತ್ರಿಯರು, ಮಹಾಮಾತ್ರರ ಪುತ್ರಿಯರು, ಗಣಿಕೆಯರು, ಸಂಸ್ಕೃತರ ಮಡದಿಯರು– ಇವರೆಲ್ಲ ಶಾಸ್ತ್ರಸಂಸ್ಕಾರವುಳ್ಳವರೂ, ಕವಿಗಳೂ ಆಗಿದ್ದುದನ್ನು ಕೇಳಿಬಲ್ಲೆವು, ಕಂಡೂ ಬಲ್ಲೆವು"– ಎಂಬುದು ರಾಜಶೇಖರನ ಮಾತು.

ಈ ಮಾತು ದಿಟವೇ ಇರಬಹುದಾದರೂ ಸಂಸ್ಕೃತ ಸಾಹಿತ್ಯದಲ್ಲಾಗಲಿ, ಬೇರೆ ಯಾವುದೇ ಸಾಹಿತ್ಯದಲ್ಲಾಗಲಿ ಲೇಖಿಕೆಯರ ಸಂಖ್ಯೆ ಕಡಮೆ; ಸಾಧನೆ ಸ್ವಲ್ಪ. ಪ್ರಾಯಶಃ ಆಯಾ ಸಾಹಿತ್ಯಕ್ಕೆ ಅವರ ಕಾಣಿಕೆ ಅಷ್ಟೇನೂ ಗಮನಾರ್ಹವಾದುದಲ್ಲ. ಒಬ್ಬ ಕಾಲಿದಾಸನ, ಪಂಪನ, ಷೇಕ್ಸ್‌ಪಿಯರನ ಪ್ರತಿಭೆ ಪಾಂಡಿತ್ಯಗಳನ್ನು, ಪ್ರಸಿದ್ಧಿಯನ್ನು ಸರಿಗಟ್ಟಬಲ್ಲ ಒಬ್ಬ ಬರೆಹಗಾರ್ತಿಯೂ ಕಾಣಿಸಿಕೊಳ್ಳಲಿಲ್ಲ. ಇದಕ್ಕೆ ನಿಶ್ಚಿತವಾದ ಕಾರಣಗಳನ್ನು ಕೊಡುವುದು ಸಾಧ್ಯವಿಲ್ಲ. ಬಲುಮಟ್ಟಿಗೆ ಸಂಸ್ಕಾರ, ಶಿಕ್ಷಣ, ಸಾಮಾಜಿಕ ಧಾರ್ಮಿಕ ಸ್ಥಾನಮಾನಗಳು ಕಾರಣವಾಗಿರಬಹುದು. ಇಲ್ಲಿ ಎರಡು ಅಭಿಪ್ರಾಯಗಳನ್ನು ಉದ್ಧರಿಸುತ್ತೇವೆ. "ಬಹುಶಃ ಮಹಿಳೆಯರಿಗೆ ಸಾಮಾಜಿಕ ನಿರ್ಬಂಧ, ಪ್ರತಿಕೂಲಗಳು ಹೆಚ್ಚು ಒದಗಿ, ಅವರ ವಿದ್ಯಾಭ್ಯಾಸವನ್ನೂ ಅನುಭವದ ವೈಶಾಲ್ಯವನ್ನೂ ಕುಗ್ಗಿಸುತ್ತಿರಬಹುದು, ಕುಗ್ಗಿಸಿರಬಹುದು. (ಹದಿಬದೆಯ ಧರ್ಮ–ಪೀಠಿಕೆ) "ನಮ್ಮ ನಾಡಿನಲ್ಲಿ ಹೆಂಗಳೆಯರು ಕವಯಿತ್ರಿಯರೂ, ಲೇಖಕಿಯರೂ ಹೆಚ್ಚಾಗಿ ಹಿಂದೆ ಆಗದಿರಲು ಅವರಲ್ಲಿ ಪ್ರತಿಭೆ-ಮೇಧಾಶಕ್ತಿಗಳು ಇರಲಿಲ್ಲವೆಂಬುದಲ್ಲ, ಅವರ ವ್ಯಕ್ತಿತ್ವ ವಿಕಾಸಕ್ಕೆ ಸೌಕರ್ಯಗಳು ದೊರೆಯಲಿಲ್ಲವೆಂಬುದು ಮುಖ್ಯಕಾರಣ" (ಕನ್ನಡ ಸಾಹಿತ್ಯ ಚರಿತ್ರೆ–ಪು. ೩೧೯)

ಈಯೆರಡು ಅಭಿಪ್ರಾಯಗಳನ್ನು ಸಮೀಕರಿಸಿ ವಿಮರ್ಶಿಸಿದರೆ ಇವು ಬಲುಮಟ್ಟಿಗೆ ನಿಜವೆಂದು ಒಪ್ಪಬೇಕಾಗುವುದು. ಈ ಕಾರಣಗಳಿಂದಲೇ ಸ್ತ್ರೀಯರು ಸಾಹಿತ್ಯರಂಗದಲ್ಲಿ ಉತ್ಸಾಹದಿಂದಲೂ ಸಾಮರ್ಥ್ಯದಿಂದಲೂ ಶ್ರಮಿಸುವುದಿರಲಿ, ಒಂದೆರಡು ನಿದರ್ಶನಗಳನ್ನು ಬಿಟ್ಟರೆ ಪ್ರವೇಶಿಸಲೇ ಇಲ್ಲವೆನ್ನಬಹುದು. ಇದನ್ನು ಸಮರ್ಥಿಸಲು ಕನ್ನಡ ಸಾಹಿತ್ಯದಲ್ಲಿಯೇ ಉತ್ತಮ ಸಾಕ್ಷ್ಯವಿದೆ. ವೀರಶೈವಧರ್ಮ ಮತ್ತು ಸಮಾಜದಲ್ಲಿ ಪುರುಷರಿಗಿರುವಂತೆ ಸ್ತ್ರೀಯರಿಗೂ ಸಮಾನಾವಕಾಶ ಮತ್ತು ಮಾನ್ಯತೆಗಳಿದ್ದುದರಿಂದ ಅವರು ಸ್ವತಃ ಸಾಧನೆ ನಡಸಿ, ಸ್ವತಃ ಸಿದ್ಧಿಗಳಿಸಿ ಜ್ಞಾನೋಪದೇಶ ಮಾಡುವ ಮಹಾನುಭಾವೆಯರಾದರು. ತಮ್ಮ ವಿಶಿಷ್ಟ ಜೀವನಾನುಭವ ಶಿವಾ

ನುಭವ ಮತ್ತು ಉಪದೇಶ ಸಾರವನ್ನು ಶಿವಶರಣರಂತೆಯೇ ವಚನರಚನೆಯ ಮೂಲಕ ಧಾರಾಳವಾಗಿ ವ್ಯಕ್ತಪಡಿಸಿದರು. ಇಂಥ ವಚನಗಳಲ್ಲಿ ಹಲವಾರು ಕಾವ್ಯಸ್ಫೂರ್ತಿಯಿಂದಲೇ ಹೊಮ್ಮಿ ಕಾವ್ಯಮಾರ್ಗದಲ್ಲಿಯೇ ನಡೆದಿವೆ. ಕಾವ್ಯಾಲಂಕಾರ ಮಾರ್ಗವು ವಚನಕಾರ್ತಿಯರ ಧರ್ಮಪ್ರಕೃತಿ ಮತ್ತು ಕಾವ್ಯಪ್ರಕೃತಿಗಳನ್ನು ಅಪೂರ್ವ ಸುಂದರವಾಗಿ ಒಂದುಗೂಡಿಸಿದೆ. ಸ್ತ್ರೀಯರಿಗೆ ಈ ತೆರನಾದ ಧಾರ್ಮಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯ ಕಂಡುಬರದ ದಾಸಕೂಟದ ಹರಿದಾಸ ಶ್ರೇಣಿಯಲ್ಲಿ ಒಬ್ಬ ಹರಿದಾಸಿಯೂ ಕಾಣಿಸಿದಂತೆ ತೋರದು; ಪದಗಳನ್ನು ಹಾಡಿ ತನ್ನ ಅನುಭವಗಳನ್ನು ವ್ಯಕ್ತಪಡಿಸಿದಂತೆ ತೋರದು. (ಈ ಭಾಗವತ ಪಂಥದ ಪರೋಕ್ಷಪ್ರಭಾವ ಹೆಳವನಕಟ್ಟೆ ಗಿರಿಯಮ್ಮನ ಮೇಲೆ ಆಗಿರುವಂತೆ ಕಂಡರೂ ಆಕೆ ಸ್ವತಂತ್ರವಾಗಿಯೇ ಸಾಧನೆ ನಡೆಸಿದಳೆಂಬುದು ಆಕೆಯ ಕೃತಿಗಳಿಂದ ತಿಳಿದು ಬರುತ್ತದೆ.)

ಶಿವಶರಣೆಯರೂ ಇನ್ನುಳಿದ ಕಬ್ಬಿಗಿತಿಯರೂ, ತಮ್ಮ ಕೃತಿಗಳಲ್ಲಿ ತಮ್ಮ ಕವಿತ್ವಶಕ್ತಿ, ಸಾಧನೆ, ಸ್ಥಾನಮಾನ, ಸ್ವಾತಂತ್ರ್ಯ ಇತ್ಯಾದಿಗಳ ಮಾತೆತ್ತುವಾಗ ಅವರು ಹೇಗೆ ಪುರುಷ ಪ್ರಾಬಲ್ಯ, ಸಹಜ ದೌರ್ಬಲ್ಯ, ಸಮಯಶೃಂಖಲೆ ಮತ್ತು ಬಾಹ್ಯಪ್ರತಿಕೂಲಗಳನ್ನು ಸಹಿಸಿ, ನಯಭಯಗಳಿಂದ ಸಾಹಿತ್ಯರಂಗದಲ್ಲಿ ಶ್ರಮಿಸಿದ್ದಾರೆಂಬುದು ಸ್ವಲ್ಪಮಟ್ಟಿಗಾದರೂ ತಿಳಿಯುತ್ತದೆ. ತಮ್ಮ ಕಾವ್ಯಶಕ್ತಿಯನ್ನು ಪುರುಷ ಕವಿಗಳು ಹೆಮ್ಮೆ ಹೆಗ್ಗಳಿಕೆಗಳಿಂದ ಉಗ್ಗಡಿಸಿಕೊಂಡರೆ ಸ್ತ್ರೀಕವಿಗಳು ಕೃತಿರಚನೆಗೆ ತಾವು ಅಸಮರ್ಥರೋ ಎನ್ನುವಷ್ಟು ವಿನಯ ಸೌಜನ್ಯಗಳಿಂದ ಅರಿಕೆಮಾಡಿಕೊಳ್ಳುತ್ತಾರೆ. ಅದರಲ್ಲಿಯೂ ಅರಸರ ಅಪೇಕ್ಷೆ ಆಶ್ರಯ ಒತ್ತಾಯ ಇಲ್ಲದಿದ್ದರೆ ಹೊನ್ನಮ್ಮನೂ ಚಲುವಾಂಬೆಯೂ ಕೃತಿರಚನೆಗೆ ತೊಡುಗುತ್ತಿರಲಿಲ್ಲವೆಂದು ತೋರುತ್ತದೆ. ಸುಶಿಕ್ಷಿತರೂ, ಸುಸಂಸ್ಕೃತರೂ, ಪ್ರತಿಭಾವಂತರೂ, ಬಿರುದಾಂಕಿತರೂ ಆಗಿದ್ದು ರಾಜಾಶ್ರಯ, ಪೋಷಣೆ, ಬಾಂಧವ್ಯಗಳನ್ನು ಪಡೆದಿದ್ದು, ದೌರ್ಬಲ್ಯಮೂಲವಾದ ಅಸಾಮರ್ಥ್ಯಶಂಕೆಯೋ, ಪರಿಮಿತ ಜೀವನದೃಷ್ಟಿ–ಕಾವ್ಯದೃಷ್ಟಿಗಳೋ, ಲೋಕಾನುಭವವೈಶಾಲ್ಯಹೀನತೆಯೋ ಬಾಹ್ಯಪರಿಸರದ ಯಾವ ನಿಯಮ ನಿರ್ಬಂಧಗಳೋ ಕನ್ನಡಕಬ್ಬಿಗಿತಿಯರು ಕಾವ್ಯರಚನೆಯಲ್ಲಿ ಮಹದುದ್ಯಮಗಳಿಗೆ ತೊಡಗಲು ಅಂತೂ ಸಾಧ್ಯವಾಗಲಿಲ್ಲ. ಸ್ತ್ರೀಕವಿಗಳ ಒಂದು ಪೂರ್ವಪರಂಪರೆ, ಪ್ರೋತ್ಸಾಹಕ ವಾತಾವರಣ ಇಲ್ಲದೇ ಹೋದುದೂ ಕೂಡ ಒಂದು ಮಹತ್ತ್ವದ ಕೊರತೆಯೆನ್ನಬಹುದು.

ಈ ದೃಷ್ಟಿಯಿಂದ ನೋಡಿದರೆ ಹೃದ್ಯವಾದ ಸಾಹಿತ್ಯಾಂಶ ವಿಪುಲವಾಗಿದ್ದರೂ ಶುದ್ಧಸಾಹಿತ್ಯಕ ರಚನೆಗಳಲ್ಲದ ವಚನವಾಙ್ಮಯವನ್ನೂ ಕಾವ್ಯವ್ಯವಸಾಯವು ಮುಖ್ಯೋದ್ದೇಶವಲ್ಲದ ವಚನಕಾರ್ತಿಯರನ್ನೂ ಹಾಗೆಯೇ ಪದಗಳನ್ನೂ (ಹಾಡು ಅಥವಾ ಕೀರ್ತನೆ) ಪದಕವಯಿತ್ರಿಯರನ್ನೂ ಸಾಹಿತ್ಯ ದೃಷ್ಟಿಯಿಂದ ಬದಿಗಿರಿಸಿದರೆ ಕೆಲವೇ ಕಬ್ಬಿಗಿತಿಯರು ಉಳಿಯುತ್ತಾರೆ. ಇವರ ರಚನೆಗಳಲ್ಲಿ ಒಂದು ಬುದ್ಧಿಕೌಶಲದ ಸಮಸ್ಯಾಪೂರ್ತಿಯ 'ಚತುರ ಕವಿತೆ'; ಇನ್ನೊಂದು ಸತೀಧರ್ಮವನ್ನು ಬೋಧಿಸುವ 'ನೀತಿಕಾವ್ಯ'; ಉಳಿದ ಕೆಲವು ಹರಿಭಕ್ತಿಪ್ರಚಾರದ ವಿವಾಹ ಕಥೆಗಳು ಮತ್ತು ಉಪಾಖ್ಯಾನಗಳು. ಎಲ್ಲವೂ ಪ್ರಮಾಣದಲ್ಲಿ ಲಘುಕೃತಿಗಳು. ಇವು ಸಾಮಾನ್ಯವಾಗಿ ಸಂಪ್ರದಾಯ ಕವಿತೆ ಹಾಕಿಕೊಟ್ಟ ಹಾದಿಯ ಗೆರೆದಾಟಿ ಹೋದವಲ್ಲ; ಸ್ವಾತಂತ್ರ್ಯವನ್ನೂ ನಾವೀನ್ಯವನ್ನೂ ಅಷ್ಟೇನೂ ತೋರಿದವಲ್ಲ; ಕಬ್ಬಿಗಿತಿಯರ ವ್ಯಕ್ತಿತ್ವವನ್ನೂ ಔನ್ನತ್ಯವನ್ನೂ ಹಿರಿದಾಗಿ ಒಡಮೂಡಿಸ್ಸ

ಲ್ಲಿಲ್ಲ. ಕಬ್ಬಿಗಿತಿಯರು ಆರಿಸಿಕೊಂಡ ಗುರಿ ಬಲುಮಟ್ಟಿಗೆ ಸ್ತ್ರೀಯರ ರಂಜನೆ, ಸ್ತ್ರೀಯರ ಏಳಿಗೆ, ಸ್ತ್ರೀಯರ ಶುಭ. ಬಳಸಿಕೊಂಡ ಛಂದಸ್ಸು ಬಲುಮಟ್ಟಿಗೆ ಲಲಿತಲಯಗತಿಯ ಸಾಂಗತ್ಯ.

ಹೀಗೆ ಸ್ತ್ರೀಯರ ಸಾಹಿತ್ಯಕೃತಿಗಳಲ್ಲಿ ಸಾರ್ವತ್ರಿಕತೆ, ಶಾಶ್ವತಾಂಶ, ಉದ್ದಾಮ ವಸ್ತು ಶೈಲಿಗಳು ವಿಶಾಲ ಭಾವನಾಪ್ರಪಂಚ ವಿವಿಧ ರಸೋತ್ಕರ್ಷ ಅಷ್ಟಾಗಿ ಕಂಡುಬಂದಿಲ್ಲ ಎಂದು ಹೇಳಿದರೆ, ಅವುಗಳಲ್ಲಿ ಗುಣೋತ್ಕರ್ಷವಿಲ್ಲವೆಂದು ಅರ್ಥವಲ್ಲ. ಈ ಲಘುಕೃತಿಗಳಲ್ಲಿ ಸ್ತ್ರೀಸಹಜವಾದ ಕೋಮಲಾಂತಃಕರಣ ಅರಳಿ ಪರಿಮಳಿಸಿದೆ. ಸ್ತ್ರೀ ಸಹಜವಾದ ಮಧುರ ಮೋಹನವಾಣಿ ವೀಣೆಯಂತೆ ಇಂಪಾಗಿ ಮಿಡಿದಿದೆ. ಸ್ತ್ರೀಪ್ರಪಂಚದ ಸಾರಸರ್ವಸ್ವವೂ ಹೃದಯಂಗಮವಾಗಿ ಪರಿಸ್ಫುಟಗೊಂಡಿದೆ. ಹೊನ್ನಮ್ಮ ಗಿರಿಯಮ್ಮರ ಕೃತಿಗಳು ಬಹುಕಾಲ ನಿಲ್ಲಬಲ್ಲ ಕೃತಿಗಳು. ಧರ್ಮಪ್ರಕೃತಿ ಮೂಲದಿಂದ ಹೊಮ್ಮಿದ್ದರೂ ಭಾವಗೀತೆಯ ಸ್ಫೂರ್ತಿಯನ್ನೂ ಸತ್ತ್ವವನ್ನೂ ತುಂಬಿಕೊಂಡು ರಸಾರ್ದ್ರವಾಗಿರುವ ಅಕ್ಕಮಹಾದೇವಿಯ ವಚನಗಳು ಕನ್ನಡ ಸಾಹಿತ್ಯದ ಶಾಶ್ವತನಿಧಿ. ಅಕ್ಕಮಹಾದೇವಿ ಮತ್ತು ಇತರ ಶಿವಶರಣೆಯರಲ್ಲಿ ಶೈವಧರ್ಮವೂ ಶಿವಭಕ್ತಿಯೂ, ಚೆಲ್ವಾಂಬೆ ಗಿರಿಯಮ್ಮರಿಗೆ ವೈಷ್ಣವ ಧರ್ಮವೂ ವಿಷ್ಣುಭಕ್ತಿಯೂ ಕಾವ್ಯಸ್ಫೂರ್ತಿಗೆ ಮೂಲವಾದವು. ನಿರ್ಮಲ ಸತೀಧರ್ಮವನ್ನು ಕಾವ್ಯರೂಪದಲ್ಲಿ ಬಿತ್ತರಿಸಲು ಹೊರಟ ಹೊನ್ನಮ್ಮನಿಗೆ ಸ್ತ್ರೀಶುಭಾಕಾಂಕ್ಷೆಯೇ ಕಾವ್ಯಸ್ಫೂರ್ತಿಗೆ ಮೂಲವಾಯಿತು. ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಯ ಬೆಳವಣಿಗೆಯ ದೃಷ್ಟಿಯಿಂದ ಅಕ್ಕಮಹಾದೇವಿ, ಹೊನ್ನಮ್ಮ, ಚೆಲ್ವಾಂಬೆ, ಹೆಳವನಕಟ್ಟೆ ಗಿರಿಯಮ್ಮ ಈ ನಾಲ್ವರು ಗಣನಾರ್ಹರಾದ ಕನ್ನಡ ಕಬ್ಬಿಗಿತಿಯರೆಂದು ಹೇಳಬಹುದು:

### ಆರಂಭಕಾಲದಿಂದ ಹನ್ನೊಂದನೆಯ ಶತಮಾನದ ವರೆಗೆ:

ಸದ್ಯಃ ಕನ್ನಡ ಸಾಹಿತ್ಯದ ಆದಿಗ್ರಂಥವಾದ ಕವಿರಾಜಮಾರ್ಗ (ಸು.೮೫೦)ದಲ್ಲಿ ಪೂರ್ವಿಕರಾಗಿ ಕೆಲವರು ಗದ್ಯ ಮತ್ತು ಪದ್ಯಗ್ರಂಥಕರ್ತರ ಹೆಸರುಗಳನ್ನು ಹೇಳಿದೆ. ಇವರಲ್ಲಿ ಕಬ್ಬಿಗಿತಿಯರು ಯಾರೂ ಇಲ್ಲ. ೯, ೧೦, ೧೧ ನೆಯ ಶತಕಗಳಲ್ಲಿ (ಕಾಲ ನಿಶ್ಚಯವಾಗಿರದ ಕಂತಿ ಎಂಬ ಕಬ್ಬಿಗಿತಿಯನ್ನು ಪರಿಗಣಿಸಿಲ್ಲ.) ಯಾವುದೇ ಸ್ತ್ರೀಕವಿಯ ಹೆಸರಾಗಲಿ, ಅವಳ ಕೃತಿಯ ಹೆಸರಾಗಲಿ ದೊರೆಯುವುದಿಲ್ಲ. ೧೨ನೆಯ ಶತಮಾನದ ಉತ್ತರಾರ್ಧದಲ್ಲಿ ಹಲವರು ಸ್ತ್ರೀವಚನಕಾರರ ಹೆಸರುಗಳು ಅಂಕಿತಗಳು, ವಚನಗಳು, ಕಣ್ಣಿಗೆ ಬೀಳುತ್ತವೆ. ಆದುದರಿಂದ ಕನ್ನಡಸಾಹಿತ್ಯದಲ್ಲಿ ಬಲುಮಟ್ಟಿಗೆ ೧೨ನೆಯ ಶತಕದ ಉತ್ತರಾರ್ಧದಲ್ಲಿ ಕಬ್ಬಿಗಿತಿಯರ ಪ್ರವೇಶವಾಯಿತೆಂದು ಭಾವಿಸಬಹುದು.

(ವಚನಕಾರ್ತಿಯರ ಮತ್ತು ಇತರ ಕಬ್ಬಿಗಿತಿಯರ ಕಾಲಸೂಚನೆಗೆ ಈ ಲೇಖನದಲ್ಲಿ, ಶ್ರೀ ಆರ್.ನರಸಿಂಹಾಚಾರ್ಯರ 'ಕರ್ಣಾಟಕ ಕವಿಚರಿತೆ' ಯನ್ನು ಆಧಾರವಾಗಿ ಇರಿಸಿಕೊಂಡಿದೆ.)

### ಹನ್ನೊಂದನೆಯ ಶತಮಾನ

#### ಕಂತಿ (ಸು. ೧೧೦೦?)

ಜೈನಕವಿ ಕಂತಿ ಕನ್ನಡಸಾಹಿತ್ಯದಲ್ಲಿ ಮೊಟ್ಟಮೊದಲ ಕಬ್ಬಿಗಿತಿಯೆಂಬುದು ಸಾಮಾನ್ಯವಾದ ಗ್ರಹಿಕೆ. ಕವಿಕಾವ್ಯವಿಚಾರ ದೃಷ್ಟಿಯಿಂದ ಈಕೆ ಸಮಸ್ಯಾತ್ಮಕ ವ್ಯಕ್ತಿ. ಈಕೆಯ ಹೆಸರು, ಕಾಲ, ದೇಶ, ರಾಜಾಶ್ರಯ. ಕಾವ್ಯಸಿದ್ಧಿ, ಕೃತಿ– ಈ ಮೊದಲಾದ ಸಂಗತಿಗಳು ಸಂದಿಗ್ಧವಾಗಿದ್ದು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿಗೆ ಎಡೆ

ಮಾಡಿವೆ. ಇನ್ನೂ ನಿರ್ಣಯ ಸಾಧ್ಯವಾಗಿಲ್ಲ. ಕಂತಿಯನ್ನು ಕುರಿತು ಏನನ್ನಾದರೂ ಹೇಳುವುದಕ್ಕಿರುವ ಆಧಾರವೆಂದರೆ ಈ ಮೂರು ಬಾಹ್ಯ ಪ್ರಮಾಣಗಳು: ೧. ಬಾಹುಬಲಿಯ (ಸು.೧೫೬೦) ನಾಗಕುಮಾರಚರಿತೆಯ ಒಂದು ಹೇಳಿಕೆ. ೨. ದೇವಚಂದ್ರನ (೧೮೩೮) ರಾಜಾವಳೀ ಕಥೆಯ ಒಂದು ಹೇಳಿಕೆ. ೩ 'ಕಂತಿ–ಹಂಪನ ಸಮಸ್ಯೆಗಳು' ಎಂಬೊಂದು ಪದ್ಯಸಂಕಲನ.

ಬಾಹುಬಲಿಯ ಉಲ್ಲೇಖದ ಪ್ರಕಾರ ತಿಳಿದು ಬರುವ ಸಾರಾಂಶ : ಈಕೆ ಶ್ರೀವೀರದೋರನ ಸಭೆಗೆ ಮಂಗಳ ಲಕ್ಷ್ಮಿಯೆನಿಸಿದ್ದಳು ಎಂಬುದರಿಂದ ರಾಜಸನ್ಮಾನಿತೆಯಾಗಿರಬಹುದು; 'ಕಂತಿಕೆಯರು' ಎಂಬ ಗೌರವ ಬಹುವಚನವನ್ನು ಹೇಳಿರುವುದರಿಂದ ಕವಿಜನಪೂಜ್ಯಳಾಗಿರಬಹುದು; 'ಅಭಿನವ ವಾಗ್ದೇವಿ' ಎಂದಿರುವುದರಿಂದ (ಇದು ಅವಳ ಬಿರುದೋ ಕವಿಯ ಮೆಚ್ಚುಮಾತೋ ಆಗಿರಬಹುದು) ಘನಪಂಡಿತೆಯಾಗಿರಬಹುದು.

ದೇವಚಂದ್ರನ ಉಲ್ಲೇಖದ ಪ್ರಕಾರ ತಿಳಿದು ಬರುವ ಸಾರಾಂಶ: ಸಾಮಾನ್ಯ ಸ್ತ್ರೀಯಾಗಿದ್ದ ಈಕೆ ಮತಿಪ್ರಕಾಶವನ್ನುಂಟುಮಾಡುವ ಔಷಧಿದ್ರವ್ಯವೆನಿಸಿದ ಜ್ಯೋತಿಷ್ಮತೀತೈಲ ಪಾನಮಾಡಿ ವಿದ್ಯಾವಿಶಾರದೆಯಾದಳು. ಅನಂತರ ಅದರ ಬಲದಿಂದ (ಅಭಿನವ) ಪಂಪನಂಥ ಸಮರ್ಥಕವಿಯ ಪ್ರಶ್ನೆಗಳನ್ನು ಸುಲಭವಾಗಿ ಬಿಡಿಸಬಲ್ಲವಳಾಗಿ ರಾಜಾಸ್ಥಾನದ ಕವಿವರ್ಗದಲ್ಲಿ ಹಿರಿಯ ಮನ್ನಣೆಯನ್ನು ಗಳಿಸಿದಳು.

ಕಂತಿ–ಹಂಪನ ಸಮಸ್ಯೆಗಳು: ಈ ಹೆಸರಿನ ಪದ್ಯಸಂಕಲನ ಗ್ರಂಥವೊಂದು ದೊರೆತು ಅಚ್ಚಾಗಿದೆ. ಇದರಲ್ಲಿ ಶಬ್ದಾರ್ಥ ಚಮತ್ಕಾರಗಳಿರುವ ಕೆಲವು ಸಮಸ್ಯೆಗಳು ಪ್ರಶ್ನೋತ್ತರ ರೂಪದಲ್ಲಿವೆ. ಇಂತಹ ಹಲವು ಕೃತಿಗಳು ಪ್ರಾಯಶಃ ಸಂಸ್ಕೃತದಲ್ಲಿ ಹಲವು ಇವೆಯಾದರೂ ಕನ್ನಡದಲ್ಲಿ ಸದ್ಯಃ ಇದು ಒಂದೇ. ಕಂತಿಯೂ ಹಂಪನೂ ಪರಸ್ಪರ ನಡಸಿದ ಸಮಸ್ಯಾ ಸ್ಪರ್ಧೆಯನ್ನು ಈ ಪದ್ಯಗಳಿಂದ ತಿಳಿಯಬಹುದು. ಈ ಪದ್ಯಗಳಲ್ಲಿ ಕಂತಿಯ ಹೆಮ್ಮೆ ಹೆಗ್ಗಳಿಕೆಗಳೂ, ಆಶುಕವಿತ್ವಶಕ್ತಿಯೂ ಪರಿಸ್ಫುಟಗೊಂಡಿವೆ. ಇಲ್ಲಿ ಕವಿತ್ವದ ಅಭಿವ್ಯಕ್ತಿಗಿಂತ ಬುದ್ಧಿಚಮತ್ಕಾರದ ಪ್ರದರ್ಶನ, ಸಮಯ್ಯಸ್ಫೂರ್ತಿಯ ಜಾಣ್ಮೆ ಮೇಲಾಗಿ ಕಾಣುತ್ತವೆ. ಪದರಚನೆಗೆ ಉಚಿತವಾದ ಸೌಲಭ್ಯ ಪದನ್ಯಾಸದಲ್ಲಿ ಕಾಣುತ್ತದೆ. ಆಪಾತತಃ ಅಸಂಬದ್ಧವೂ ಅಸಾಧ್ಯವೂ ಆಗಿ ತೋರುವ ಕೊನೆಯ ಪಾದದ ಅಭಿಪ್ರಾಯವೊಂದು, ಉಚಿತವಾದ ಮೂರು ಪಾದಗಳನ್ನು ಹಿಂದೆ ಸೇರಿಸುವುದರಿಂದ ಸಂಬದ್ಧವೂ ಸ್ವಾರಸ್ಯವೂ ಆಗಿ ಪರಿಣಮಿಸುತ್ತದೆ. ಯಾವುದಾದರೂ ಸಾಧಾರಣವಾದ ನಾಲ್ಕೈದು ಪದಗಳಿಂದ ಅರ್ಥಸಾಮಂಜಸ್ಯವಿರುವ ಪದ್ಯವೊಂದನ್ನು ರಚಿಸುವುದು, ಮೂಲ ಸಮಸ್ಯೆಯ ಅರ್ಥವೈಪರೀತ್ಯವು ಹೋಗುವಂತೆ ಶಬ್ದವೊಂದನ್ನು ಭಿನ್ನಾರ್ಥದಲ್ಲಿ ಬಳಸಿ ಪದ್ಯವೊಂದನ್ನು ರಚಿಸುವುದು, ನಿರ್ದಿಷ್ಟೋಚ್ಚಾರಣೆಯ ಅಕ್ಷರಗಳನ್ನು ಮಾತ್ರ ಉಪಯೋಗಿಸಿ ಪದ್ಯವೊಂದನ್ನು ರಚಿಸುವುದು, ಅಕ್ರಮ ಶಬ್ದಾನ್ವಯದಿಂದ ಆಗುವ ಅರ್ಥವೈಪರೀತ್ಯವನ್ನು ಕಳೆದು ಕ್ರಮಾನ್ವಯವುಂಟಾಗುವಂತೆ ಪದ್ಯವನ್ನು ಸರಿಪಡಿಸುವುದು, ಒಗಟುಗಳ ಜಾತಿಯ ಪದ್ಯಗಳು– ಈ ಮೊದಲಾದ ಬಂಧಚಮತ್ಕಾರಗಳನ್ನು ಇಲ್ಲಿ ನಿದರ್ಶಿಸಲಾಗಿದೆ. ಹಂಪನು ಹೆಗ್ಗಳಿಕೆಯ ಕಂತಿಯಿಂದ ಹೊಗಳಿಸಿಕೊಳ್ಳುವ ಅಪೇಕ್ಷೆಯಿಂದ ಪಂಥವನ್ನು ಹೂಡಿ ಸತ್ತವನಂತೆ ನಟಿಸಿ ಮಲಗಿದನಂತೆ. ಆಗ ಆಪ್ತವಿಯೋಗದಿಂದ ದುಃಖಭರಿತಳಾದ ಕಂತಿ ಅವನ ಗುಣಾತಿಶಯವನ್ನು ಕಂಠೋಕ್ತವಾಗಿ ಕೀರ್ತಿಸಿದ

ಳಂತೆ. ಥಟ್ಟನೆ ನಾಗಚಂದ್ರನೆದ್ದು ಪಂಥವನು ಗೆದ್ದುದಾಗಿ ಕೂಗಿಕೊಂಡನಂತೆ !

ಈ ವೀರದೋರ ಅಥವಾ ದೋರೆರಾಯ ಯಾರು? ಪಂಪಕವಿ ಯಾರು ? ಹೊಯ್ಸಳಪ್ರಭು ೧ ನೆಯ ಬಲ್ಲಾಳರಾಜನೇ (ಕ್ರಿ.ಶ. ೧೧೦೦–೧೧೦೬) ಆ ದೊರೆಯೆಂದೂ, ಅವನ ಆಸ್ಥಾನಕವಿಯಾಗಿದ್ದಿರಬಹುದಾದ ಅಭಿನವಪಂಪ ನಾಗಚಂದ್ರನೇ ಆ ಕವಿಯೆಂದೂ ಕವಿಚರಿತೆಕಾರರು ಊಹಿಸಿದ್ದಾರೆ. ಹಿಂದೆ ಹೇಳಿದ ೩ ಬಾಹ್ಯಪ್ರಮಾಣಗಳೇ ಅವರಿಗೆ ಆಧಾರ.

ಮೇಲಿನ ೩ ಬಾಹ್ಯಪ್ರಮಾಣಗಳೂ ನಂಬಿಕೆಗೆ ಅರ್ಹವಲ್ಲ ಎಂಬ ಪ್ರತಿವಾದವನ್ನು ಡಾ| ಎ. ವೆಂಕಟಸುಬ್ಬಯ್ಯನವರು ಸವಿಸ್ತರವಾಗಿ ಹೂಡಿದ್ದಾರೆ (ನೋಡಿ: ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ. ಪು. ೨೪೯–೨೫೯) ದೋಷರಹಿತವಾದ ಬೇರೆ ಆಧಾರಗಳು ದೊರೆವವರೆಗೆ ಕಂತಿಯೆಂಬ ಕಬ್ಬಿಗಿತಿಯೇ ಇರಲಿಲ್ಲವೆಂಬ ತಾತ್ಪೂರ್ತಿಕ ನಿರ್ಣಯಕ್ಕೆ ಬಂದು ಮುಟ್ಟಿದ್ದಾರೆ. ಈ ಪ್ರತಿವಾದವನ್ನು ಕವಿಚರಿತೆಕಾರರು ಖಂಡಿಸಿದ್ದಾರೆ. (ಕರ್ಣಾಟಕ ಕವಿಚರಿತ್ರೆ iii ಪೀಠಿಕೆ.) ಡಾ| ರಂ.ಶ್ರೀ. ಮುಗಳಿಯವರು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಆ ಕಬ್ಬಿಗಿತಿಯ ವಿಷಯವನ್ನು ಪ್ರಸ್ತಾವಿಸುವಾಗ ಮತ್ತೆರಡು ಸಂದೇಹಗಳನ್ನು ಜತೆಗೂಡಿಸಿದ್ದಾರೆ. (ಪು. ೧೩೧) ಕೊನೆಗೊಂದು ನಿರ್ಣಯವನ್ನೂ ಸೂಚಿಸಿದ್ದಾರೆ. ಈ ಸಂಬಂಧವಾದ ವಾದ ಪ್ರತಿವಾದಗಳನ್ನೂ ಸಂದೇಹಗಳನ್ನೂ ಸಾಧ್ಯವಾಗುವ ಸಮಾಧಾನಗಳನ್ನೂ ಇಲ್ಲಿ ವಿವರಿಸಲು ಅವಕಾಶವಿಲ್ಲ.

ಈ ವಿಚಾರದಲ್ಲಿ ಸದ್ಯಃ ಇಷ್ಟು ಹೇಳಬಹುದು: ದೇವಚಂದ್ರನ ಹೇಳಿಕೆಗೆ (ಹಂಪುಗನನ್ನೂ ಕಂತಿಯನ್ನೂ–ಕುಂತಿ ಎಂದಿರುವುದು ಲೇಖನ ಸ್ಖಾಲಿತ್ಯವೇ ಇರಬೇಕು– ಒಂದೆಡೆಯಲ್ಲಿ ತಂದು ಹೇಳಿರುವ ಅನಿರ್ದಿಷ್ಟ ಕಾಲಕರ್ತೃಕವಾದ ಮುದ್ರಿತ 'ನೀತಿಸಾರ'ದ ಉಲ್ಲೇಖವನ್ನೂ ಇಲ್ಲಿ ಸೇರಿಸಬಹುದೆಂದು ತೋರುತ್ತದೆ.) ಬಾಹುಬಲಿಯ ಉಲ್ಲೇಖವೂ, ಕಂತಿಹಂಪನ ಸಮಸ್ಯೆಗಳೂ ಒಂದು ಪಕ್ಷ ಆಧಾರವಾಗಿದ್ದು, ಅಪ್ರಮಾಣಿತವೆಂದೂ ತೋರಿ ಅಂಗೀಕಾರಯೋಗ್ಯವೆನಿಸದೇ ಹೋದರೂ, ಬಾಹುಬಲಿಯ ಹೇಳಿಕೆಯನ್ನು ಪ್ರಮಾಣಾರ್ಹವೆಂದು ಸ್ವೀಕರಿಸಲು ಅಡ್ಡಿಯಿಲ್ಲ. ಡಾ| ರಂ.ಶ್ರೀ. ಮುಗಳಿಯವರು ಹೇಳಿರುವ ನಿರ್ಣಯ ಸದ್ಯಃ ಸರಿಯಾದುದು: "೧೬ನೇ ಶತಮಾನಕ್ಕೆ ಮುಂಚೆ ಬಾಹುಬಲಿಗೆ ಪೂರ್ವಿಕಳಾಗಿ ಕಂತಿ(ಕೆ)ಯೆಂಬ ಕವಿಯಿತ್ರಿ ಆಗಿಹೋಗಿರಬಹುದು. ಅಭಿನವಪಂಪ–ದೋರರಾಯ ಇವರ ಹೆಸರಿನ ಸಂಬಂಧ ಚಾರಿತ್ರಕ ಸತ್ಯವಾಗದೇ ಹೋದರೂ ಅವಳ ಅಸ್ತಿತ್ವವೇ ಕಲ್ಪಿತವಾದುದೆನ್ನುವುದು ಸರಿಯಲ್ಲ (ಕನ್ನಡ ಸಾಹಿತ ಚರಿತ್ರೆ ೧೩೦, ೧೩೧.)"

## ಹನ್ನೆರಡನೆಯ ಶತಮಾನ

ವೀರಶೈವ ಧರ್ಮದಲ್ಲಿ ಸ್ತ್ರೀಯರಿಗೆ ಪುರುಷರೊಂದಿಗೆ ಸರ್ವಪ್ರಕಾರವಾದ ಸಮಾನ ಸ್ಥಾನಮಾನಗಳು ದೊರೆತು ಅವರು ತಮ್ಮ ಶ್ರೇಯಸ್ಸಿಗೆ ಸ್ವತಂತ್ರವಾಗಿ ಶ್ರಮಿಸುವುದು ಸಾಧ್ಯವಾಯಿತು. ಸಂಸಾರ ನಿರ್ವಹಣೆಯಲ್ಲಿಯೂ ಪರಮಾರ್ಥ ಸಾಧನೆಯಲ್ಲಿಯೂ ತಮ್ಮ ಸತ್ತ್ವಶಕ್ತಿಯನ್ನೂ ತೋರಲು ಅವಕಾಶವಾಯಿತು. ಈಯೆರಡರ ಆಯ್ಕೆಯಲ್ಲಿಯೂ ಆಚರಣೆಯಲ್ಲಿಯೂ ಅವರಿಗೆ ಬೇಕಾದ ಹಾಗೆ ಸ್ವಾತಂತ್ರವೂ ಸೌಲಭ್ಯವೂ ಸಾಧ್ಯವಾಯಿತು. ವಿವಾಹಿತವಾದರೆ ಪುರುಷರ ಭೋಗ ಸಾಮುಗ್ರಿಯೆನಿಸಬೇಕಾದ, ಗೃಹಕೃತ್ಯನಿರ್ವಹಣದ ತೊತ್ತಾಗಬೇಕಾದ ಆವಶ್ಯಕತೆಯಿರಲಿಲ್ಲ

ಸಾಮಾನ್ಯವಾಗಿ ಸಮರಸದಾಂಪತ್ಯದ ಸೌಭಾಗ್ಯವೇ ಅವರ ಪಾಲಿಗೆ ದೊರೆಯುತ್ತಿತ್ತು. ಪತಿಪತ್ನಿಯರು ಶಿವಭಕ್ತರೂ ಶಿವಾಚಾರನಿಷ್ಠರೂ ಆಗಿ ಸಂಸಾರದಲ್ಲಿ ಆಧ್ಯಾತ್ಮ ಸಾಧನೆಯಲ್ಲಿ ನೆರವಾಗುತ್ತಿದ್ದರು. ದಾಂಪತ್ಯವೆಂದರೆ ಧರ್ಮವಿರುದ್ಧವಾದ ಭೋಗನಿಷಿದ್ಧವಾದ ಶುದ್ಧಜೀವನವೆಂದು ಅವರು ದೃಢವಾಗಿ ನಂಬಿದ್ದರು. ತಪ್ಪೊಪ್ಪಿನ ನಡವಳಿಕೆಯಲ್ಲಿ ಪರಸ್ಪರ ಮಾರ್ಗದರ್ಶನ ಪಡೆಯುತ್ತಿದ್ದರು. ಗಂಡುಹೆಣ್ಣೆಂಬ ಭೇದ ಭಾವ ಅಜ್ಞಾನ ಮೂಲವಾದ್ದು; ದೇಹೋಪಾಧಿಯಿಂದ ಭಿನ್ನತೆಯಲ್ಲದೆ ಆತ್ಮಸ್ವರೂಪದಿಂದಲ್ಲ ಎಂಬುದು ಅವರ ನಿಚ್ಚಟವಾದ ತಿಳಿವಳಿಕೆಯಾಗಿತ್ತು. ಒಂದು ವೇಳೆ ವಿವಾಹಿತರಾಗದೆ ಉಳಿದರೆ, ವಿವಾಹವಾದರೂ ಅದು ವೀರಶೈವಧರ್ಮ ಸಮ್ಮತವಾಗದೆ ಶೈವವ್ರತಭ್ರಷ್ಟರಾಗಬೇಕಾಗಿ ಬಂದರೆ 'ಶರಣಸತಿ ಲಿಂಗಪತಿ' ಭಾವದಿಂದ ಶಿವೋಪಾಸನೆ ಮಾಡುತ್ತಿದ್ದರು. ಅವರಿಗೆ ದೀಕ್ಷೆ ಮತ್ತು ಷಟ್ಸ್ಥಲ ಸಾಧನಾಮಾರ್ಗಗಳು ಕೊಡಲಾದುವು. ಇದರಿಂದ ಅವರು ಸ್ವರೂಪಜ್ಞಾನ ಪಡೆದು ಮೋಕ್ಷಗಾಮಿಗಳಾಗುವ ಅರ್ಹತೆ ಪಡೆದರು.

ಹೀಗೆ ದೊರೆತ ಸ್ವಾತಂತ್ರ್ಯದಿಂದ, ತಿಳಿವಳಿಕೆಯಿಂದ, ಅವಕಾಶಗಳಿಂದ ಸ್ತ್ರೀಯರಲ್ಲಿ ಸ್ವಶಕ್ತಿ ಪರಿಜ್ಞಾನ, ಆತ್ಮವಿಶ್ವಾಸ, ಧರ್ಮಶ್ರದ್ಧೆ, ಶ್ರೇಯಸ್ಸಾಧನೆಗಳು ಪುನಶ್ಚೇತನಗೊಂಡವು. ಶಿವಶರಣರಂತೆ ಕೆಲವು ಶಿವಶರಣೆಯರು ಹಿರಿಯ ಶಿವಶರಣೆಯರ ಆದರ್ಶದ ಉಪದೇಶದ ಹೊಂಬೆಳಗಿನಲ್ಲಿ ದಾರಿನಡೆದು, ಅಧ್ಯಾತ್ಮ ಸಾಧನೆಯಲ್ಲಿ ಉನ್ನತ ಸ್ತರಗಳನ್ನು ಮುಟ್ಟುವುದು ಸಾಧ್ಯವಾಯಿತು. ಈ ಹಾದಿಯೇನೂ ಹೂವಿನ ಹಾಸಿಗೆಯಾಗಿರದೆ ಕೆಲವರ ಮಟ್ಟಿಗಾದರೂ ಮುಳ್ಳುಹಾದಿಯೇ ಆಗಿದ್ದಿತೆಂಬುದು ಅಕ್ಕಮಹಾದೇವಿಯಂತಹ ಶಿವಶರಣೆಯರ ಬದುಕಿನಿಂದ ತಿಳಿಯ ಬಹುದಾಗಿದೆ. ಜೀವನದಲ್ಲಿ ಈ ಶಿವಶರಣೆಯರ ಸ್ಥಾನಮಾನಗಳೇನಿದ್ದರೂ, ಎಂತಹವೇ ಉಪಜೀವನದ ವೃತ್ತಿಗಳನ್ನು ಅವರು ಕೈಗೊಂಡಿದ್ದರೂ, ಬದುಕಿನ ಬಹುಭಾಗವನ್ನು ಬಡತನದ ಬನ್ನಬವಣೆಗಳಲ್ಲಿಯೇ ಕಳೆದಿರಬಹುದಾದರೂ, ಅವರು ತಮ್ಮ ವಚನಗಳಲ್ಲಿ ವ್ಯಕ್ತಪಡಿಸಿರುವ ಉಜ್ವಲ ಶೈವನಿಷ್ಠೆ ನಿರ್ಮಲ ಧರ್ಮಶ್ರದ್ಧೆ, ಸುಸಂಸ್ಕೃತ ಮನೋಧರ್ಮ, ಉನ್ನತ ಅಧ್ಯಾತ್ಮಸಾಧನೆ, ಆಶ್ಚರ್ಯಕರ ಭಕ್ತಿಜ್ಞಾನ ವೈರಾಗ್ಯಗಳು ಕನ್ನಡ ಸಂಸ್ಕೃತಿಯ ಹಿರಿತನದ ಪ್ರತೀಕಗಳಾಗಿವೆ.

ಈ ಶಿವಶರಣೆಯರು ಸಾತ್ತ್ವಿಕರು, ಸಾಧಕರು, ಭಕ್ತಿ ಜ್ಞಾನ ವೈರಾಗ್ಯ ಸಂಪನ್ನರು. ಶಿವಾನುಭವಮಂಟಪದಲ್ಲಿ ನಡೆಯುತ್ತಿದ್ದ ಧಾರ್ಮಿಕ ಚರ್ಚೆಗಳಲ್ಲಿ ಇವರು ಭಾಗವಹಿಸುತ್ತಿದ್ದುದೇ ಅಲ್ಲದೆ ತಮ್ಮ ಗಂಡಂದಿರಿಗೆ ಸಮಯೋಚಿತವಾದ ಸಲಹೆಗಳನ್ನೂ ತತ್ತ್ವೋಪದೇಶವನ್ನೂ ಕೊಟ್ಟು ಮಾರ್ಗದರ್ಶನ ಮಾಡುತ್ತಿದ್ದ ನಿದರ್ಶನಗಳೂ ಇವೆ. ಬಸವಣ್ಣನವರ ಲಿಂಗೈಕ್ಯದ ಸಂದರ್ಭದಲ್ಲಿ, ಶಿವನ ಸರ್ವವ್ಯಾಪ್ತತ್ವವನ್ನು, ಅದರ ಅರಿವು ಮಹಿಮ ಆಳದಿಂದೆತ್ತಿ ಅವರಿಗೆ ಮನವರಿಕೆ ಮಾಡಿದ, ಅವರ ಮುದ್ದುಮಡದಿ ನೀಲಾಂಬಿಕೆ; ಕಾಯಕದಲ್ಲಿ ನಿಷ್ಠೆಯನ್ನೂ ನಿಸ್ಪೃಹತೆಯನ್ನೂ ಶಿವಕೃಪೆ ಶಿವಭಕ್ತಿಗಳಲ್ಲಿ ವಿಶಂಕಾ ಭಾವನೆಯನ್ನೂ ಪತಿ ಆಯ್ದಕ್ಕಿ ಮಾರಯ್ಯನಿಗೆ ಬೋಧಿಸಿದ ನಿಷ್ಠಾಭಕ್ತೆ ಲಕ್ಕಮ್ಮ; ತಾನೇ ಶಿವನೆಂಬ ತನ್ನನ್ನು ತಾನರಿಯಬೇಕೆಂಬ ಅದ್ವೈತಬೋಧೆಯನ್ನು ಪತಿ ಮೋಳಿಗೆಯ ಮಾರಯ್ಯನಿಗೆ ತಿಳಿಸಿದ ತತ್ತ್ವಜ್ಞಾನಿ ರಾಣಿ ಮಹಾದೇವಿ– ಇವರು, ಇಂಥವರು, ಆ ಪಙ್ಕ್ತಿಗೆ ಸೇರಿದವರು. ಲೋಕದ ಕೊಂಕುಡೊಂಕುಗಳನ್ನು ನೋಡಿ ಕೆರಳಿದ ಸಾತ್ತ್ವಿಕಸಂತಾಪದಿಂದ ಲೋಕದ ದುಷ್ಟದೃಷ್ಟಿಗೆ ಗುರಿಯಾಗಿ ಪಾಡುಪಟ್ಟ ಕೆರಳಿದ

ರಾಜಸಂತಾಪದಿಂದ ಮನಸ್ಸು ಉದ್ವಿಗ್ನಗೊಂಡು
ವಚನಗಳನ್ನು ರಚಿಸಿರುವುದೂ ಉಂಟು. ಗುರು
ಲಿಂಗಜಂಗಮಭಕ್ತಿಯನ್ನೂ ಶೈವಧರ್ಮದ
ನಿಯಮ ನಿಷ್ಠೆಯನ್ನೂ ಸ್ವಾನುಷ್ಠಾನ ಮಾಡಿದ
ಮುಕ್ತಜೀವಿ ಲಿಂಗಮ್ಮ, ಶರಣಸತಿ—ಲಿಂಗಪತಿ
ಭಾವದಿಂದ ಉಜ್ವಲವಾಗಿ ಶಿವೋಪಾಸನೆಮಾಡಿದ
ಮತ್ತು ಹಿರಿಯ ಶಿವಶರಣರಿಂದಲೇ ಪ್ರಶಂಸೆಯ
ಪುಷ್ಪವೃಷ್ಟಿಯನ್ನು ಕೊಂಡ ಅಕ್ಕಮಹಾದೇವಿ'
ಶೈವವ್ರತಹೀನತೆ ವ್ರತಭ್ರಷ್ಟತೆಗಳನ್ನು ಕಟುವಾಗಿ
ತೆಗಳಿ ಶೈವವ್ರತದ ಮಹತ್ತ್ವವನ್ನು ಎತ್ತಿಹಿಡಿದ
ರೆಮ್ಮವ್ವೆ, ರೇಚವ್ವೆ, ಸೋಮವ್ವೆ, ವೀರಮ್ಮ,
ಕಾಳವ್ವೆ ii, ಗುಡ್ಡವ್ವೆ, ಕಾಳವ್ವೆ iii, ಮಸಣಮ್ಮ,
ರೇಕಮ್ಮ—ಇವರ ವಚನಗಳಲ್ಲಿ ನಿದರ್ಶನಗಳನ್ನು
ಕಾಣಬಹುದು. ಶರಣಸತಿ–ಲಿಂಗಪತಿ ಭಾವ
ದಿಂದ ಶಿವೋಪಾಸನೆ ಮಾಡುವಲ್ಲಿ ಅಕ್ಕಮಹಾ
ದೇವಿಯ ಆದರ್ಶವನ್ನೆ ಪ್ರತಿಬಿಂಬಿಸಿದ ಸತ್ಯಕ್ಕ
ಮತ್ತು ಕದಿರ ರೆಮ್ಮವ್ವೆ, ಬಸವಣ್ಣನೇ ಪ್ರಾಣಾ
ಧಾರ ವೆಂದೂ ಸರ್ವಸ್ವವೆಂದೂ ನಂಬಿದ್ದು ಅವನ
ಲಿಂಗೈಕ್ಯದಿಂದ ನಲುಗಿಹೋದ ತಂಗಿ ನಾಗ
ಲಾಂಬಿಕೆ, ದ್ವೈತಾದ್ವೈತ ಮೀಮಾಂಸೆಯಲ್ಲಿ ಗುರು
ಅಲ್ಲಮಪ್ರಭುವಿಂದಲೇ ಜ್ಞಾನಪರಿಕ್ಷೆಯನ್ನು
ಕೊಂಡ ವಿಚಾರವಾದಿ ಮುಕ್ತಾಯಕ್ಕ-ಇವರು ಪತಿ
ಪ್ರೇಮದ, ಭ್ರಾತೃವಾತ್ಸಲ್ಯದ ಪರಮಾದರ್ಶ
ವನ್ನು ತೋರಿದ್ದಾರೆ.

ಒಂದುಕಡೆ ಧಾರ್ಮಿಕ ಸಾಮಾಜಿಕ
ಕ್ರಾಂತಿಯ ಫಲವಾಗಿ ದೊರೆತ ಸ್ವಾತಂತ್ರ್ಯದಿಂದ
ಇನ್ನೊಂದುಕಡೆ ಸಾಹಿತ್ಯರಂಗದಲ್ಲಿ ನಡೆದ ಸಾಹಿ
ತ್ಯಕ ಮೌಲ್ಯಗಳ ಪರಿವರ್ತನೆಯ ಫಲವಾಗಿ
ದೊರೆತ ಸೌಲಭ್ಯದಿಂದ ಸ್ತ್ರೀಯರಿಗೆ ಧರ್ಮ
ಮತ್ತು ಸಾಹಿತ್ಯಗಳ ನಿಕಟ ಸಂಪರ್ಕವನ್ನು ಪಡೆ
ಯುವುದು ಸಾಧ್ಯವಾಯಿತು. ಬಲುಮಟ್ಟಿಗೆ
ಪಂಡಿತ ರಂಜನೆಯ ಗ್ರಾಂಥಿಕವೂ ಸಂಪ್ರದಾಯ
ಬದ್ಧವೂ ಆದ ಭಾಷಾಶೈಲಿಗಳ ಗೊಡವೆಯನ್ನು
ಬಿಟ್ಟು ಆಡುಮಾತಿನ 'ವಚನಶೈಲಿ'ಯಲ್ಲಿ ಮನಸ್ಸಿನ
ಭಾವಗಳನ್ನೆಲ್ಲ ಸರಳಸಹಜವಾಗಿ ಪ್ರಕಟಿಸುವ
ಸೌಲಭ್ಯ ವಚನಕಾರ್ತಿಯರಿಗೆ ತುಂಬ ಸಹಕಾರಿ
ಯಾಯಿತು. ವೀರಶೈವಧರ್ಮದ ಸಾರವಿಚಾರ
ವೆಲ್ಲ, ಸಾತ್ತ್ವಿಕ ಸದ್ಭಾವನಗಳೆಲ್ಲ ವಚನಗಳ ರೂಪ
ದಲ್ಲಿ ಹೊರಹೊಮ್ಮಿವೆ. ಆದರೆ ಇವುಗಳಲ್ಲಿ ಎಲ್ಲವೂ
ಅನುಭವದ ಅರಳಾಗಿಯೇ ಸಿಡಿದ ಅನುಭಾವ
ವಾಣಿಯೆನ್ನುವುದು ಅತ್ಯುಕ್ತಿಯಾದೀತು. ಇವು
ಗಳಲ್ಲಿ ಬುದ್ಧಿಪೂರ್ವಕವಾಗಿ ರಚಿಸಿದ ಅಧ್ಯಾತ್ಮ
ವಿಚಾರಲಹರಿಯುಂಟು, ನೀರಸ ಧರ್ಮತತ್ತ್ವಗಳ
ಪ್ರಕ್ರಿಯಾ ಪ್ರಪಂಚವುಂಟು, ಹೇರಳವಾದ ಪುನ
ರುಕ್ತಿಗಳುಂಟು, ಶುಷ್ಕಾನುಕರಣೆಗಳುಂಟು,
ದುರವಗಾಹ್ಯವೂ ದುರ್ಭೋಧ್ಯವೂ ಆದ ಬೆಡಗಿನ
ವಚನಗಳೆಂಬ ಒಗಟುಗಳ ಕಗ್ಗಂಟುಗಳೂ
ಉಂಟು !

ಈ ದೃಷ್ಟಿಯಿಂದ ನೋಡಿದರೆ ವಚನ ಸಾಹಿ
ತ್ಯದಲ್ಲಿ ಮತಧರ್ಮದ ಛಾಂದಸತೆ ತುಂಬಿರುವ
ವಚನಗಳನ್ನು ಕಾವ್ಯಾಂಶವಿರುವ ವಚನಗಳಿಂದ
ಪ್ರತ್ಯೇಕಿಸಿ ಪ್ರತಿಯೊಬ್ಬ ವಚನಕಾರ್ತಿಯ ನೆಲೆ
ಬೆಲೆಗಳನ್ನು ಗುರುತಿಸಬೇಕಾಗುತ್ತದೆ. ಅಕ್ಕಮಹಾ
ದೇವಿಯಲ್ಲಿ ತತ್ತ್ವಜ್ಞಾನವೂ ಕವಿಸ್ವಭಾವವೂ
ಸಮಸಮವಾಗಿ ಮೇಲುಮಟ್ಟದಲ್ಲಿರುವುದು ಕಾಣು
ತ್ತದೆ. ಉಳಿದವರಲ್ಲಿ ಇವು ಈ ಪ್ರಮಾಣದಲ್ಲಿಯೇ
ಇಲ್ಲವಾದರೂ ಯಥೋಚಿತವಾಗಿ ಇವುಗಳ
ಹೊಂದಿಕೆಯುಂಟು. ಗಣನಾರ್ಹವಾದ ಸಂಖ್ಯೆ
ಯಲ್ಲಿ ಒಂದಿಬ್ಬರ ವಚನಗಳು ದೊರೆತಿವೆ
ಯಾದರೂ ಉಳಿದ ಹಲವರ ವಚನಗಳು ಕೇವಲ
ಪ್ರಾತಿನಿಧಿಕವಾಗಿ ಕೇಲವೇ ಕೆಲವು ದೊರೆತಿವೆ.
ಇವುಗಳಿಂದಲೇ ಅವರ ವ್ಯಕ್ತಿತ್ವವನ್ನೂ ಕಾವ್ಯಶಕ್ತಿ
ಯನ್ನೂ ನಿರ್ಧರಿಸುವುದು ಸಾಧ್ಯವಿಲ್ಲ. ಅಲ್ಲದೆ
ಆತ್ಮ ಸಂವಾದಿಯಾದ ವಚನಗಳಿಗಿಂತ ಮತ

ಸಂಬಂಧಿಯಾದವೇ ಹೆಚ್ಚು ಕಾವ್ಯಾಂಶವಿರುವ ವಚನಗಳು ನಿಜವಾಗಿ ಚಿತ್ತಾಕರ್ಷಕವಾಗಿದೆ. ಸೂಕ್ಷ್ಮವಾದ ಜೀವನಾನುಭವಗಳನ್ನೂ ಗಹನವಾದ ಅಧ್ಯಾತ್ಮಿಕ ಅನುಭವಗಳನ್ನು ವ್ಯಕ್ತಪಡಿಸುವುದರಲ್ಲಿ ಸಹಜೋಕ್ತಿಯಿದ್ದು ಹೃದ್ಯವಾಗಿದೆ. ರೂಪಕ, ಉಪಮೆ, ದೃಷ್ಟಾಂತ, ಪ್ರಾಸಾನುಪ್ರಾಸ ಮೊದಲಾದ ಅಕ್ಲಿಷ್ಟ ಅಲಂಕಾರಗಳ ಚೆಲುವಿದೆ. ಬಹುತೇಕ ಅಲಂಕಾರಗಳು ಕವಿಸಮಯಗಳಾಗಿರದೆ, ವ್ಯಕ್ತಿವೈಶಿಷ್ಟ್ಯದಿಂದ ಲೌಕಿಕ ಜೀವನದ ಪರಿಸರದಿಂದ ಹೊಮ್ಮಿ, ಸಹಜತೆ ನವೀನತೆಗಳ ಕಾಂತಿಯಿಂದ ಕೂಡಿ, 'ಮುತ್ತಿನ ಹಾರದಂತೆ' 'ಸ್ಫಟಿಕದ ಶಲಾಕೆಯಂತೆ' ಮಿರುಗುತ್ತವೆ. ಆದರೆ ಎಲ್ಲೆಡೆಗೂ ಇದು ಹೀಗೇ ಇಲ್ಲ. ವ್ಯಕ್ತಿವೈಶಿಷ್ಟ್ಯವುಳ್ಳ ಹಿರಿಯ ಶರಣಶರಣೆಯರ ಪ್ರಭಾವವು ಸಾದೃಶ್ಯ, ಮಾತು, ಅಭಿಪ್ರಾಯ, ಅಲಂಕಾರ ಶೈಲಿ–ಈ ಮೊದಲಾದ ವಿವರಗಳಲ್ಲಿ, ಕಿರಿಯರ ವ್ಯಕ್ತಿತ್ವದ ಮತ್ತು ವಚನರಚನೆಯ ಮೇಲೆ ಆಗಿರುವುದನ್ನು ಕಾಣಬಹುದು.

**ಅಕ್ಕಮಹಾದೇವಿ ಸು ೧೧೬೦.**

ಈಕೆ ವೀರಶೈವಧರ್ಮದ ಅಗ್ರೇಸರರಾದ ಅಲ್ಲಮಪ್ರಭು ಮತ್ತು ಬಸವೇಶ್ವರರ ಸಮಕಾಲೀನಳು. ವೀರಶೈವಧರ್ಮ ಮತ್ತು ಸಾಹಿತ್ಯದ ದೃಷ್ಟಿಯಿಂದ ಈಕೆ ಹೆಸರು ಶಾಶ್ವತವಾಗಿ ಉಳಿಯುವಂಥದು. ಎರಡರಲ್ಲಿಯೂ ಈಕೆಯದು ಬಸವಣ್ಣನವರ ಮಾರ್ಗ ಭಕ್ತಿ ಜ್ಞಾನ ವೈರಾಗ್ಯಗಳ ಕಠೋರ ಸಾಧನೆಯಲ್ಲಿ ವಚನಾಮೃತದ ವಾಗ್ವೈಖರಿಯಲ್ಲಿ ವ್ಯಕ್ತಿವೈಶಿಷ್ಟ್ಯವುಳ್ಳವಳು ಈಕೆ. ಪ್ರಾಚೀನರೂ ಆಧುನಿಕರೂ ಈಕೆಯ ವಚನಗಳ ಸಂದರ್ಭ ವಿಶೇಷಗಳನ್ನು ಸ್ಥೂಲವಾಗಿ ಗುರುತಿಸಿ ಪೃಥಕ್ಕರಿಸಿ, ಸಾಧ್ಯವಾದಂತೆ ಆಕೆಯ ಜೀವನ ಚಿತ್ರವನ್ನು ರಚಿಸಲು ಪ್ರಯತ್ನಿಸಿದ್ದಾರೆ. ಮಹಾದೇವಿ ಅಕ್ಕನ ರಗಳೆ–ಪುರಾಣ–ಸಾಂಗತ್ಯ ಹಿಂದೆ ರಚನೆಯಾಗಿವೆ. ಇವುಗಳಲ್ಲಿ ಈಕೆಯ ಜೀವನವನ್ನು ಕಾವ್ಯಸಹಜವಾದ ಕಲ್ಪಕ ಮಾರ್ಗದಲ್ಲಿಯೋ ಪೌರಾಣಿಕ ಮಾರ್ಗದಲ್ಲಿಯೋ ಶ್ರದ್ಧಾಭಕ್ತಿ ಸಮನ್ವಿತ ವೀರಪೂಜಾಮಾರ್ಗದಲ್ಲಿಯೋ ವಿವರಿಸಿರುವುದು ಕಾಣುತ್ತದೆ. ಇದರಿಂದ ಘಟನೆಗಳ ನಿರೂಪಣೆಯಲ್ಲಿ ಏಕಸೂತ್ರತೆಯಿಲ್ಲದಿರುವುದು ಕಾಣುತ್ತದೆ. ಆಕೆಯ ವಿವಾಹಸಮಸ್ಯೆಯನ್ನೇ ಇದಕ್ಕೆ ಉದಾಹರಣೆಯಾಗಿ ಕೊಡಬಹುದು. ಈಕೆಯ ಆತ್ಮೀಯ ವಚನಗಳು ಅಧಿಕ ಸಂಖ್ಯೆಯಲ್ಲಿ ದೊರೆತ ಹೊರತು ಈಕೆಯ ಜೀವನ ಚಿತ್ರ ನೈಜವಾಗದು, ಕಳೆಗೊಳ್ಳದು. ಈಕೆಯ ಜೀವನವನ್ನು ಕಾವ್ಯರೂಪದಲ್ಲಿ ಮೊದಲು ಬರೆದ ಕವಿ ಹರಿಹರ. ಈತನ ಪ್ರಕಾರ–'ಅಕ್ಕನು ತನಗಿಷ್ಟವಿಲ್ಲವಾದರೂ ಕೌಶಿಕನನ್ನು ಮದುವೆಯಾಗಬೇಕಾಯಿತು; ಅವನು ಅವಳಿಗೆ ಕೊಟ್ಟ ಭಾಷೆಯನ್ನು ಪಾಲಿಸದೆ ಹೋದನು; ಅವಳಿಗೆ ವೈರಾಗ್ಯವುಂಟಾಗಿ ಪರಿವ್ರಾಜಕಳಾಗಿ ಶ್ರೀಶೈಲಕ್ಕೆ ಹೊರಟು ಬಂದು ಚೆನ್ನಮಲ್ಲಿಕಾರ್ಜುನನ ಸಂಗವನ್ನು ಪಡೆದಳು' ಕೆಲವೆಡೆ ಈಕೆ ಕಲ್ಯಾಣದ ಶಿವಾನುಭವ ಮಂಟಪಕ್ಕೆ ಬಂದಳೆಂದೂ ಅಲ್ಲಿ ಇತರ ಶರಣರು ಈಕೆಯನ್ನು ಪರೀಕ್ಷಿಸಿದಂತೆಯೂ ಹೇಳಿದೆ. ಒಟ್ಟಿನಲ್ಲಿ "ಮಹಾದೇವಿ ಅಕ್ಕನ ಜೀವನಚರಿತ್ರೆ ಹೆಣ್ಣಿನ ಗೌರವ ಸಾಧನೆಯ, ಹೆಣ್ಣಿನ ಸ್ವಾತಂತ್ರ್ಯ ಸಾಧನೆಯ, ಹೆಣ್ಣಿನ ಪರಮಾರ್ಥಸಾಧನೆಯ ಒಂದು ಮಹಾಪ್ರಕರಣ"

**ಕೃತಿಗಳು :—** ವಚನಗಳು, ಯೋಗಾಂಗ ತ್ರಿವಿಧಿ, ಸೃಷ್ಟಿಯ ವಚನ, ಅಕ್ಕಗಳ ಪೀಠಿಕೆ ಕರ್ಣಾಟಕ ಕವಿಚರಿತ್ರೆ I–೧೮೮) ಇವುಗಳಲ್ಲಿ ಕೊನೆಯದರ ಹೊರತು ಉಳಿದವು ದೊರೆತು ಅಚ್ಚಾಗಿವೆ. 'ಅಕ್ಕಗಳು ನಿರೂಪಿಸಿದ ಕೊರವಂಜಿ ಎಂಬೊಂದು ಲಘುರಚನೆಯೂ ಈಕೆಯ ಹೆಸರಿನಲ್ಲಿಯೇ ಅಚ್ಚಾಗಿದೆ. ಇದಕ್ಕೆ ವಚನಾರ್ಥವೆಂಬ ಒಂದು ವಿವರಣೆಯೂ ಉಂಟು. ಈಕೆಯ ಕೃತಿ

ಗಳಲ್ಲಿ 'ಚೆನ್ನಮಲ್ಲಿಕಾರ್ಜುನ' ಎಂಬ ಅಂಕಿತವಿರುತ್ತದೆ. (ಮಹಾದೇವಿ ಅಕ್ಕನ ಸಾಂಗತ್ಯ ಎಂಬ ಗ್ರಂಥದಲ್ಲಿ ಈಕೆಯ ಏಳು ವಚನಗಳು ಗಿರಿಮಲ್ಲಿಕಾರ್ಜುನ ಎಂಬ ಅಂಕಿತದೊಡನೆ ದೊರೆಯುವುದು–ಶರಣಸಾಹಿತ್ಯ (I–೩೫೨ ೩೫೩) ೧. ವಚನಗಳು :—ಶಿವಶರಣೆಯರ ಗುಂಪಿನಲ್ಲಿ ಮಹಾದೇವಿ ಅಕ್ಕನದೇ ಅತ್ಯಧಿಕ ಸಂಖ್ಯೆಯ ವಚನಗಳು. ಈಗ ಅಚ್ಚಾಗಿರುವ ವಚನಗಳ ಸಂಖ್ಯೆ ಸುಮಾರು ೨೫೦. ಅಕ್ಕನ ವಚನಗಳಲ್ಲಿ ಹೆಚ್ಚು ಭಾಗ ಸಾಹಿತ್ಯಸೌರಭದಿಂದ ಪರಿಮಳಿಸಿ ಆಕೆಗೆ ಸಾಹಿತ್ಯ ಕ್ಷೇತ್ರದಲ್ಲಿ ಶಾಶ್ವತಸ್ಥಾನವನ್ನು ಕಲ್ಪಿಸಿದೆ. ವಚನಗಳಲ್ಲಿ ಕಂಡುಬರುವ ಈಕೆಯ ಮನೋಧರ್ಮವನ್ನು ಹೀಗೆ. ಸಂಗ್ರಹಿಸಬಹುದು: ಸಾಮಾನ್ಯವಾಗಿ ಪರೋಪದೇಶವಾಗಲಿ ಸಮಾಜವಿಮರ್ಶೆಯಾಗಲಿ ಇಲ್ಲಿ ಅಷ್ಟಾಗಿ ಕಾಣುವುದಿಲ್ಲ. ಆತ್ಮಸಾಧನೆಯ ಹಲವಾರು ಸ್ಥಿತ್ಯಂತರಗಳನ್ನು ಇಲ್ಲಿ ನಾವು ಕಾಣುತ್ತೇವೆ. ಈ ವಚನವೀಣೆಯಲ್ಲಿ ಮಿಡಿಯುವ ಶ್ರುತಿಮೂಲವೆಂದರೆ ಇಷ್ಟದೈವವಾದ ಚೆನ್ನಮಲ್ಲಿಕಾರ್ಜುನನನ್ನು ಪ್ರೇಮಭಾವದಿಂದ ಒಲಿಯುವುದು, ಒಲಿಸುವುದು, ಒಡವೆರೆಯುವುದು, 'ಶರಣಸತಿ–ಲಿಂಗಪತಿ ಎಂಬ ವಿವರವ ನಾನರಿಯೆ' ಎಂಬುದು ಆಕೆಯ ಮಾತಾದರೂ, ಆ 'ವಿವರ'ವನ್ನರಿಯಲು ಆಕೆಯೇ ಇತರರಿಗೆ ಪರಮಾದರ್ಶ, ಪರಮಗುರು. ಈ ಭಾವದಿಂದ ಭಗವದುಪಾಸನೆ ಮಾಡಿದ ಶರಣಶರಣೆಯರಲ್ಲಿ ಯಾರಲ್ಲಿಯೂ ಈಕೆಯ ಸಹಜತೆ ಉತ್ಕಟತೆಗಳು ಕಂಡುಬಂದಿಲ್ಲ. ಅಕ್ಕನ ಭಕ್ತಿ ಬಾಹ್ಯೋಪಚಾರಗಳ ಮೂರ್ತಿನಿಷ್ಠ ಭಕ್ತಿಯಲ್ಲ, ಅನನ್ಯಭಾವದ ಅವಿಚ್ಛಿನ್ನ ಅಂತರಂಗಭಕ್ತಿ. ತಾನು ಶಿವನಾಗುವ, ಶಿವನೇ ತಾನಾಗುವ ಅದ್ವೈತಭಕ್ತಿ, ನಿಷ್ಕಾಮಭಕ್ತಿ. ಶಿವಸಾಕ್ಷಾತ್ಕಾರಕ್ಕಾಗಿ ಪ್ರೇಮೋತ್ಕಂಠಿತವಾಗಿ ತುಡಿದುಕೊಳ್ಳುವ ಆಕೆಯ ಹೃದಯದ ಹಂಬಲಿಕೆ, ಕಂಡಮೇಲೆ ಮೂಡಿರುವ ಶಿವಾನುಭವದ ದಿವ್ಯತೃಪ್ತಿ ಆಕೆಯ ವಚನಗಳಲ್ಲಿ ರಸಾರ್ದ್ರವಾಗಿ ತೆರೆನೊರೆದಿದೆ, ಮಡುಗಟ್ಟಿದೆ. ಭಕ್ತಿ ಜ್ಞಾನ ವೈರಾಗ್ಯಗಳ ಸಾಧನೆಸಿದ್ಧಿಗಳಲ್ಲಿ ಆಕೆ ಬಸವಣ್ಣನವರ ಪ್ರತಿಮೂರ್ತಿ. ತನಗೆ ಗುರುವೆಂದು ತಂದೆಯೆಂದು ಅವರಲ್ಲಿ ಆಕೆಗೆ ಅಪಾರ ಭಕ್ತಿಗೌರವ ಮಾಯೆಯ ಬಂಧನದಿಂದ ಬಿಡಿಸಿಕೊಂಡು ಸಾಂಸಾರಿಕ ಕಷ್ಟಕ್ಲೇಶಗಳನ್ನು ತುಳಿದಿಕ್ಕಿ ಅಧ್ಯಾತ್ಮ ನಿಷ್ಠೆಯ ಕಡೆಗೆ ದಿಟ್ಟ ಹಜ್ಜೆ ಹಾಕುವ ಛಲಗಾರ್ತಿ. ಹಲವು ತೆರೆದ ಕಾಯಕ್ಲೇಶಗಳನ್ನೂ ಲೋಗರ ಕೀಟಲೆ ಕಿರುಕುಳಗಳನ್ನೂ ಶಿವಶರಣರ ಮಾರ್ಮಿಕವಾದ ಪರೀಕ್ಷೆಗಳನ್ನೂ ಆಕೆ ಸಹಿಸುತ್ತಾಳೆ; ಆಕೆಯಾದ್ದರಿಂದ ಸಹಿಸುತ್ತಾಳೆ; ಜಯಿಸುತ್ತಾಳೆ; ಹದಗೊಳ್ಳುತ್ತಾಳೆ. ಬಸವಾದಿ ಹಿರಿಯ ಶರಣರಲ್ಲಿ ಗುರುಭಾವವನ್ನು ತಳೆದು ಅವರ ಕರುಣೆಯ ಕಂದನೆಂದು ಹೇಳಿಕೊಳ್ಳುತ್ತಾಳೆ; ಅವರ ಸಂಗ ಸೌಭಾಗ್ಯಕ್ಕೆ ಹಾರೈಸುತ್ತಾಳೆ. ಅಂತರಂಗಶುದ್ಧಿಯಿಲ್ಲದ ಸಾಮಾನ್ಯಶರಣರನ್ನು ಟೀಕಿಸುತ್ತಾಳೆ, ತಿದ್ದುತ್ತಾಳೆ. ೨ ಯೋಗಾಂಗ ತ್ರಿವಿಧಿ :— ಇದರಲ್ಲಿ ೬೭ ತ್ರಿಪದಿಗಳಿವೆ. ತಾತ್ತ್ವಿಕ ವಿಷಯಗಳ ಜತೆಗೆ ವೈಯಕ್ತಿಕ ಅಂಶಗಳೂ ಇಲ್ಲಿ ಬಂದಿವೆ. ತಾತ್ತ್ವಿಕ ವಿಷಯಗಳಲ್ಲಿ ಬಹುಪಾಲು ಬೆಡಗಿನ ವಚನಗಳ ಧಾಟಿ. ಅರ್ಥವಿವರಣೆ, ವ್ಯಾಖ್ಯಾನಗಳಿಲ್ಲದ ಹೊರತು ಇವು ದುರ್ಬೋಧ್ಯ. ಆದುದರಿಂದ ವಚನಗಳಲ್ಲಿ ವಿಜೃಂಭಿಸಿರುವ ರಸಾರ್ದ್ರತೆ ಭಾವನಾಶಕ್ತಿ ಇಲ್ಲಿ ಲುಪ್ತಗೊಂಡಿದೆ. ಶಬ್ದಶಕ್ತಿಗೆ ಕೊರತೆಯಿಲ್ಲವಾದರೂ ವಚನಗಳ ಓಜಸ್ಸು ತೇಜಸ್ಸು ಇಲ್ಲಿ ಕಾಣುವುದಿಲ್ಲ. ಅಕ್ಕನ ಅನುಭಾವಚಿತ್ರವಾಗಲಿ ಜೀವನಚಿತ್ರವಾಗಲಿ ಈ ಕೃತಿಯಲ್ಲಿ ಅಷ್ಟೇನೂ ವಿಶದಪಡುವುದಿಲ್ಲ. ಆದರೆ ತತ್ತ್ವಜ್ಞಾನ ಗುರುಭಕ್ತಿಗಳು ಚೆನ್ನಾಗಿ ಒಡಮೂಡಿವೆ. ಸಾಂಕೇತಿಮಾರ್ಗದಲ್ಲಿ ತತ್ತ್ವವನ್ನು ನಿರೂಪಿಸುವ ಪರಿಣತಿ ಆಶ್ಚರ್ಯಕರವಾಗಿದೆ. ಇದೇ ಈ

ಕೃತಿಯ ವೈಶಿಷ್ಟ್ಯ. ೩. ಸೃಷ್ಟಿಯ ವಚನ:— ಈ ಸುದೀರ್ಘವಾದ ವಚನ ವೀರಶೈವಧರ್ಮದ ದೃಷ್ಟಿಯಿಂದ ಸೃಷ್ಟಿಕ್ರಮವನ್ನೂ ಲಿಂಗಾಂಗ ಸ್ವರೂಪವನ್ನೂ ಶಾಸ್ತ್ರಪದ್ಧತಿಯಲ್ಲಿ ಸಾಂಕೇತಿಕವಾಗಿ ಪ್ರತಿಪಾದಿಸುತ್ತದೆ. ಇದು ಧಾರ್ಮಿಕ ದೃಷ್ಟಿಯಿಂದ ಮಾತ್ರ ಗಮನಾರ್ಹವಾದ ರಚನೆ. (ಈ ಕೃತಿ ಚೆನ್ನಬಸವ ರಚಿತವೆಂದು ಈಚೆಗೆ ಅಚ್ಚಾಗಿದೆಯಂತೆ– ಕರ್ಣಾಟಕ ಕವಿಚರಿತ್ರೆ I– ಅನು II ೨೩.) ೪. ಅಕ್ಕಗಳು ನಿರೂಪಿಸಿದ ಕೊರವಂಜಿ:— ಇದು ಎಷ್ಟರಮಟ್ಟಿಗೆ ಅಕ್ಕನದೇ ರಚನೆಯೋ ಹೇಳುವುದು ಕಷ್ಟ. ಇದು ಬೆಡಗಿನ ವಚನಗಳ ಧಾಟಿಯಲ್ಲಿಯೆ ಶಿವೈಕನಿಷ್ಠೆಯನ್ನೂ ಯೋಗಸಾಧನೆಯನ್ನೂ ಪ್ರತಿಪಾದಿಸುತ್ತದೆ. ಅಕ್ಕನ ಮತ್ತು ಸಾಹಿತ್ಯದ ದೃಷ್ಟಿಯಿಂದ ಇದು ಗಮನಾರ್ಹವಾದ ರಚನೆಯೇನಲ್ಲ.

ಸಾಹಿತ್ಯದಲ್ಲಿ ಅಕ್ಕನ ಸ್ಥಾನ :— ಅಕ್ಕಮಹಾದೇವಿಯು ಕನ್ನಡ ಕಬ್ಬಿಗಿತಿಯರಲ್ಲಿ ಆದ್ಯತೆಯ ದೃಷ್ಟಿಯಿಂದ ಹೇಗೇ ಇರಲಿ ಯೋಗ್ಯತೆಯ ದೃಷ್ಟಿಯಿಂದಂತೂ ಮೊದಲಿಗಳು. ಈಕೆಯ ವಚನಗಳು ಸತ್ತ್ವಶಾಲಿಯೂ ರಸಾರ್ದ್ರವೂ ಆದ ಸಾಹಿತ್ಯಕೃತಿಗಳು; ಶಿವಾನುಭವದ ಬಳ್ಳಿಯಲ್ಲಿ ಅರಳಿದ ಸುಗಂಧಪುಷ್ಪಗಳು; ಶಿವಪ್ರೇಮದಿಂದ ಉತ್ಕಂಠಿತವಾದ ಹೃದಯದ ಮೂಷೆಯಲ್ಲಿ ಪುಟಗೊಂಡ ಅಪರಂಜಿ ಗಟ್ಟಿಗಳು. ಧರ್ಮದ ತನಿಗಂಪು ಮತ್ತು ಕಾವ್ಯದ ಪೆರ್ಮೆ ಅನ್ಯಾದೃಶವಾಗಿ ಇವುಗಳಲ್ಲಿ ಜತೆಗೂಡಿವೆ. ಇಲ್ಲಿ ಕಂಡುಬರುವ ಭಕ್ತಿಭಾವದ ಲಹರಿ ಕಾವ್ಯವಾಣಿಯ ವಿಲಾಸ ಪ್ರಾಯಶಃ ಬಸವಣ್ಣನವರ ಹೊರತಾಗಿ ಅನ್ಯರಲ್ಲಿ ಕಂಡುಬರುವುದಿಲ್ಲ. ಇದನ್ನು ಕಂಡೇ ಏನೋ 'ಹಿರಿಯ ಶಿವಶರಣರ ಹಲವು ವಚನಗಳಿಗೆ ಈಕೆಯ ಒಂದು ವಚನ ಸಮ' ಎಂದು ಚೆನ್ನಬಸವರಾಜ ದೇವರ ಒಂದು ವಚನದಲ್ಲಿ ಶ್ಲಾಘನೆಯಿದೆ. ಆಕೆಯ ಸಾಹಿತ್ಯಕವಾದ ಹಲವು ವಚನಗಳಲ್ಲಿ ಸಹಜ ಸುಂದರವಾದ ಅಲಂಕಾರಗಳ ಚಿತ್ರಕಲ್ಪನೆಗಳ ಬೆಡಗುಂಟು, ಧ್ವನಿಶಕ್ತಿ ರಮ್ಯತೆಯುಂಟು, ಕವಿಹೃದಯದಿಂದ ಸಹಜವಾಗಿ ಹೊಮ್ಮಿರುವುದರಿಂದ ಹೃದಯ ಸ್ಪರ್ಶಿಯಾಗಿವೆ. ಈ ಗುಣವಿಶೇಷದಿಂದಲೇ ಅವು ಜನಪ್ರಿಯವೂ ಆಗಿವೆ. ಕೆಲವು ವಚನಗಳು ಗಾಯನಯೋಗ್ಯವಾಗಿದ್ದು ಅವುಗಳಿಗೆ ರಾಗಸಂಯೋಜನವೂ ಕಾಣುತ್ತದೆ. ದಿವ್ಯವೂ ಮಧುರವೂ ಆದ ದಾಂಪತ್ಯದ ಸೂಕ್ಷ್ಮವೂ ಅನುಭವಗ್ರಾಹ್ಯವೂ ಆದ ಹಲವು ಸ್ಥಿತ್ಯಂತರಗಳು ಇಲ್ಲಿ ತೆರೆತೆರೆಯಾಗಿ ಹೊಮ್ಮಿವೆ. ಜೀವನಾನುಭವ ಮತ್ತು ಶಿವಾನುಭಾವದ ಸಂಪತ್ತನ್ನು ಮೊಗೆಮೊಗೆದು ಸೂಸಲು ಸಮರ್ಥವಾದ ಶಬ್ದಶಕ್ತಿ ಆಕೆಗಿದೆ. ಒಂದು ಮಾತಿನಲ್ಲಿ ಹೇಳಬಹುದಾದರೆ ಅಕ್ಕಮಹಾದೇವಿ ಕನ್ನಡ ಸಾಹಿತ್ಯದಲ್ಲಿ ನೈಜಕವಿ, ಸಮರ್ಥಕವಿ. ರೂಢಿಯ ಮಹಾಕಾವ್ಯವನ್ನೋ ಲಘುಕಾವ್ಯವನ್ನೋ ರಚಿಸದೇ ಹೋದರೂ, ಕಾವ್ಯರಚನೆ ಆಕೆಯ ಉದ್ದೇಶವಲ್ಲವಾದರೂ, ರಚನೆಯಲ್ಲಿ ಕೆಲಪಾಲು ಸಾಹಿತ್ಯಕವಲ್ಲವಾದರೂ, ತನ್ನ ಕೆಲವು ವಚನಕೃತಿಗಳಿಂದಲೇ ಕನ್ನಡ ಕಬ್ಬಿಗಿತಿಯರಲ್ಲಿ ಆಕೆ ಸರ್ವಶ್ರೇಷ್ಠಳಾಗಿದ್ದಾಳೆ.

### ಲಿಂಗಮ್ಮ (ಸು. ೧೧೬೦)

ಈಕೆ ವಚನಕಾರ ಹಡಪದಪ್ಪಣ್ಣನ ಪತ್ನಿ ಚೆನ್ನಮಲ್ಲೇಶ್ವರನ ಶಿಷ್ಯೆ. ಈಕೆಯ ೧೧೧ ವಚನಗಳು ದೊರೆತು ಅಚ್ಚಾಗಿವೆ. ವಚನಗಳ ಅಂಕಿತ, 'ಅಪ್ಪಣ್ಣಪ್ರಿಯ ಚೆನ್ನಬಸವಣ್ಣ'. ಸಂಸಾರಿಯಾಗಿದ್ದು ಅಧ್ಯಾತ್ಮವನ್ನು ಸಾಧಿಸಿ ಶಿವಾನುಭವ ಸಿದ್ಧಿಯ ಶಿಖರದತ್ತ ತೆರಳಲು ಶಕ್ತಳಾದ ಸಾರ್ಥಕ ಜೀವಿ ಲಿಂಗಮ್ಮ. ಗುರುಕಾರುಣ್ಯದಿಂದ ಶರಣರ ಕೃಪೆಯಿಂದ ತಾನು ಉದ್ಧಾರವಾದೆನೆಂಬ ಕೃತಜ್ಞತಾಭಾವ, ಮನಃಶುದ್ಧಿ ನಿಜಭಕ್ತಿಗಳಿಲ್ಲದವರ ಬಗೆಗೆ ಸಾತ್ತ್ವಿಕಸಂತಾಪ, ಶಿವಾಚಾರಮಾರ್ಗ

ದಲ್ಲಿ ನಿಯಮನಿಷ್ಠೆಗಳ ಶುದ್ಧಜೀವನಸ್ವರೂಪ, ಶಿವಶರಣರ ಮಹಾನುಭಾವತೆ, ಶಿವಾನುಭವ ಸಾಧನೆಯಲ್ಲಿ ಜ್ಞಾನುಭವ ಪ್ರಕಟನೆ—ಇತ್ಯಾದಿ ಸಂಗತಿಗಳನ್ನು, ಜಟಿಲ ಪರಿಭಾಷೆಯನ್ನು ಬಳಸದ ಸುಲಭಶೈಲಿಯಲ್ಲಿ ಈಕೆಯ ವಚನಗಳು ನಿರೂಪಿಸು ತ್ತವೆ. ಲಿಂಗಮ್ಮನ ಗುರುಲಿಂಗ ಜಂಗಮಭಕ್ತಿ ಶಿವಾನುಭವಜ್ಞಾನ ಸಹಜಸುಂದರವಾಗಿ ವಚನ ಗಳಲ್ಲಿ ಪಡಿಮೂಡಿವೆ. ಬೆಡಗಿನ ವಚನಗಳೂ ಸಾಕಷ್ಟು ಸಂಖ್ಯೆಯಲ್ಲಿವೆ.

ಸಾಹಿತ್ಯ ದೃಷ್ಟಿಯಿಂದ ಇಲ್ಲಿ ಎತ್ತಿಹೇಳ ಬಹುದಾದುದೇನಿಲ್ಲ. ಅರ್ಥವ್ಯಕ್ತಿಗುಣ, ಬಳಕೆಯ ಅಲಂಕಾರಗಳು, ಹಿರಿಯರ ಶೈಲಿಯ ಅನುಕರಣೆ ಓದುವಾಗ ಗಮನಕ್ಕೆ ಬರುವಂಶಗಳು.

### ರಾಣಿ ಮಹಾದೇವಿ. (ಸು.೧೧೬೦.)

ಈಕೆ ವಚನಕಾರ ಮೋಳಿಗೆಯ ಮಾರಯ್ಯನ ಪತ್ನಿ. ಅರಸುದಂಪತಿಗಳಾಗಿದ್ದ ಇವರು ರಾಜ್ಯ ಕೋಶಗಳನ್ನು ತ್ಯಜಿಸಿ ವೀರಶೈವ ದೀಕ್ಷೆಯನ್ನು ವಹಿಸಿ ಶಿವಭಕ್ತಸಂಧಾನವನ್ನು ಕೈಗೊಳ್ಳಲು ಕಲ್ಯಾ ಣಕ್ಕೆ ಬಂದು ಅಲ್ಲಿಯೆ ನೆಲಸಿದರೆಂದು ತಿಳಿದುಬರು ತ್ತದೆ. ಈಕೆಯ ೬೯ವಚನಗಳು ಅಚ್ಚಾಗಿವೆ. ಅಂಕಿತ: 'ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ'. ಈಕೆಯ ವಚನಗಳಲ್ಲಿ ತರ್ಕ ಮಟ್ಟಿಗೆ ಜಟಿಲವೂ ಸೂಕ್ಷ್ಮವೂ ಆಗಿರುವ ತಾತ್ತ್ವಿಕ ವಿಷಯ ಸಂಗ್ರಹ ವಿಪುಲವಾಗಿರುವುದರಿಂದ ಈಕೆ ಶಿವಾಚಾರ ಮಾರ್ಗದಲ್ಲಿ ಅರಿತ ನುರಿತ ತತ್ತ್ವ ಜ್ಞಾನಿಯಾಗಿದ್ದಂತೆ ತೋರುತ್ತದೆ. ಶಿವಾನುಭವ ದಲ್ಲಿ ಈಕೆಯದು ಪರೋಪದೇಶ ಸಮರ್ಥವಾದ ಅಧಿಕಾರವಾಣಿ. ಷಟ್‌ಸ್ಥಲಸ್ವರೂಪ, ಭಕ್ತಿ, ಕರ್ಮ ಜ್ಞಾನ ಸ್ವರೂಪ, ಗುರುಲಿಂಗ ಜಂಗಮ ನಿಷ್ಠೆ, ಶಿವಾದ್ವೈತನಿಷ್ಠೆ ಶಿವಪೂಜಾಸ್ವರೂಪ,— ಇತ್ಯಾದಿ ವಿಷಯಗಳನ್ನು ಈಕೆಯ ವಚನಗಳು ಕುರಿತಿವೆ. ಶಿವಾದ್ವೈತಸಾಧನೆಯಲ್ಲಿ ಪತಿಗೆ ಸಮು ಚಿತ ಸಲಹೆಗಳನ್ನಿತ್ತು ಸೂಕ್ತ ಮಾರ್ಗದರ್ಶನ ನೀಡಿರುವುದಕ್ಕೆ ಸಾಕ್ಷ್ಯವಿದೆ. 'ಇವಳ ವಚನಗಳಲ್ಲಿ ಕೆಲವು ಗಂಡನ ವಚನಗಳಿಗೆ ಪ್ರತ್ಯುತ್ತರವಾಗಿವೆ' ಎಂದು ಕವಿಚರಿತೆಕಾರರು ಬರೆದಿದ್ದಾರೆ.

ಮಹಾದೇವಿ ಅಕ್ಕನ ವಚನಗಳಲ್ಲಿ ಆಕೆಯ ಸಾಧನಶೀಲ ಚೇತನದ ಕಳಕಳಿ, ವ್ಯಕ್ತಿಜೀವನದ ವೈಭವ ಪ್ರತಿಬಿಂಬಿಸಿರುವಂತೆ ಇಲ್ಲಿ ಪ್ರತಿಬಿಂಬಿಸಿಲ್ಲ. ಅಕ್ಕನದು ಭಕ್ತಿಮಾರ್ಗ, ಈಕೆಯದು ಜ್ಞಾನ ಮಾರ್ಗ. ಜ್ಞಾನಮಾರ್ಗದಲ್ಲಿ ಈಕೆ ಮುಕ್ತಾಯ ಕ್ಕನನ್ನು ಹೋಲುವಳಾದರೂ ಮುಕ್ತಾಯಕ್ಕ ವಿಚಾರವಾದಿಯಂತೆ ಮಾತನಾಡಿದರೆ ರಾಣಿ ಮಹಾದೇವಿ ದೃಷ್ಟಾನುಭಾವಿಯಂತೆ ಮಾತನಾಡಿದ್ದಾಳೆ. ಇದರಿಂದಾಗಿ ಈಕೆಯ ವಚನಗಳಲ್ಲಿ ಹೃದಯಸ್ಪರ್ಶಿಯಾದ ಭಾವಾಂಶವು ತೀರ ಕಡಿಮೆಯಿದ್ದು, ತತ್ತ್ವಬೋಧೆಯ ಚಿಂತ ನಾಂಶವೇ ತುಂಬಿದ್ದು ಸಾಹಿತ್ಯದೃಷ್ಟಿಯ ಓದು ಗರಿಗೆ ಅವು ಅಷ್ಟೇನೂ ರಂಜಕವಾಗಿಲ್ಲ. ಆದರೂ ಮೇಲಿಂದ ಮೇಲೆ ಕಾಣಿಸಿಕೊಳ್ಳುವ, ತತ್ತ್ವಪುಷ್ಟಿ ಗೆಂದೇ ಬರುವ ಶಬ್ದ ಮತ್ತು ಅರ್ಥಾಲಂಕಾರಗಳು ಆಗಾಗ ಹೃದಯ ತುಷ್ಟಿಯನ್ನೂ ಪೂರೈಸದೇ ಇರು ವುದಿಲ್ಲ. ಇವುಗಳಲ್ಲಿ ಕ್ವಚಿತ್ತಾಗಿ ಅನುಕರಣೆಯಿ ದ್ದರೂ ಸಾಮಾನ್ಯವಾಗಿ ನಾವೀನ್ಯವೂ, ವೈಶಿ ಷ್ಟ್ಯವೂ, ಔಚಿತ್ಯವೂ ಸ್ವಾರಸ್ಯವೂ ಕಂಡು ಬರು ತ್ತದೆ.

### ಅಕ್ಕಮ್ಮ (ಸು. ೧೧೬೦)

ಈಕೆ ವಚನಕಾರ ಆಯ್ದಕ್ಕಿ ಮಾರಯ್ಯನ ಪತ್ನಿ. ಈಕೆಯ ೨೫ ವಚನಗಳು ಶೂನ್ಯಸಂಪಾದ ನೆಯಲ್ಲಿ ಬಂದಿವೆ. ಅಂಕಿತ: 'ಮಾರಯ್ಯಪ್ರಿಯ ಅಮಲೇಶ್ವರಲಿಂಗ'. ಈಕೆಯ ವಚನಗಳಿಂದ ಈಕೆ ಒಳ್ಳೆಯ ಶಿವಾನುಭವಿಯೂ ಶಿವಾಚಾರನಿಷ್ಠಳೂ ಆಗಿದ್ದಂತೆ ತಿಳಿದುಬರುತ್ತದೆ. ಈ ವಿಚಾರದಲ್ಲಿ ಈಕೆಯು ಇವಳಷ್ಟು ಜ್ಞಾನಿಯಲ್ಲದ ಪತಿಗೆ

ಮಾರ್ಗದರ್ಶಕಳಾಗಿದ್ದಂತೆ ತೋರುತ್ತದೆ. ಪತಿಯನ್ನು ಕಾಯಕನಿರ್ವಹಣೆಗೆ ಪ್ರೇರಿಸುವುದು, ಕಾಯಕದಲ್ಲಿ ನಿಸ್ಪೃಹತೆ ನಿಷ್ಠೆಗಳನ್ನು ಬೋಧಿಸುವುದು, ಭಕ್ತಿಯಸ್ವರೂಪ, ದಾಸೋಹಶ್ರದ್ಧೆ, ಸಮರಸದಾಂಪತ್ಯ, ಜೀವನನಿರ್ಲಿಪ್ತತೆ, ಭಾವಶುದ್ಧಿ–ಈ ಮೊದಲಾದ ಭಾವನೆಗಳನ್ನು ಇಲ್ಲಿಯ ವಚನಗಳು ಕುರಿತಿವೆ.

ಈ ವಚನಗಳು ಸಾಹಿತ್ಯ ದೃಷ್ಟಿಯಿಂದ ಅಷ್ಟು ಉತ್ತಮವಲ್ಲದಿದ್ದರೂ ಇವುಗಳಲ್ಲಿ ಅರ್ಥವ್ಯಕ್ತಿಗುಣ ಸ್ಪಷ್ಟವಾಗಿದೆ. ಸುಂದರವೂ ಸುಲಭವೂ ಆದ ದೃಷ್ಟಾಂತಗಳು ಹೃದ್ಯವಾಗಿವೆ. ಕ್ಲಿಷ್ಟಪಾರಿಭಾಷಿಕವೂ ಜಟಿಲ ತಾತ್ತ್ವಿಕವೂ ಆದ ವಿಷಯ ಸರಣಿ ಇಲ್ಲಿ ಇಲ್ಲದಿರುವುದರಿಂದ ವಚನಗಳ ಭಾವ ಹೃದಯಸ್ಪರ್ಶಿಯಾಗಿದೆ.

### ಮುಕ್ತಾಯಕ್ಕ (ಸು. ೧೧೬೦)

ಈಕೆ ಶಿವಶರಣ ಅಜಗಣ್ಣನ ಸೋದರಿ. ಅಜಗಣ್ಣನ ತೀರಿಕೊಂಡಾಗ ಅವನ ಸೋದರಿಗೆ ಅಪಾರ ವ್ಯಥೆಯಾಗಿ ಪ್ರಲಾಪಿಸುವ ಸಮಯದಲ್ಲಿ ಅಲ್ಲಮಪ್ರಭು ಅವಳನ್ನು ಮಹಾಜ್ಞಾನಿಯೆಂದು ತಿಳಿದು ಅವಳನ್ನು ಕುರಿತು ಕೆಲವು ಸಮಧಾನ ವಾಕ್ಯಗಳನ್ನಾಡಿದನು. ಅವರಿಬ್ಬರಿಗೂ ನಡೆದ ಮೇಲುಮಟ್ಟದ ತಾತ್ತ್ವಿಕವಿಷಯಗಳ ಚರ್ಚೆಯಲ್ಲಿ ಮುಕ್ತಾಯಕ್ಕನ ಪ್ರಖರ ಬುದ್ಧಿಶಕ್ತಿ ತರ್ಕನೈಪುಣ್ಯ ಆತ್ಮವಿಶ್ವಾಸ ತತ್ತ್ವಜ್ಞಾನ ಭ್ರಾತೃವಾತ್ಸಲ್ಯದ ಕೋಮಲಾಂತಃಕರಣ ಪರಿಸ್ಫುಟಗೊಂಡಿವೆ.

ಈಕೆಯ ೨೪ ವಚನಗಳು ಶೂನ್ಯಸಂಪಾದನೆಯಲ್ಲಿ ಬಂದಿದೆ. (ಕವಿಚರಿತ್ರೆಕಾರರು ಅಜಗಣ್ಣನದೆಂದು ಉದ್ಧರಿಸಿರುವ ಒಂದು ವಚನ ಈಕೆಯದೇ ಇರಬೇಕು.) ವಚನಗಳ ಅಂಕಿತ:'(ಎನ್ನ) ಅಜಗಣ್ಣ ತಂದೆ' ಅಥವಾ '(ಎನ್ನ) ಅಜಗಣ್ಣ' ಈಕೆಯ ವ್ಯಕ್ತಿತ್ವವನ್ನು ಅಕ್ಕಮಹಾದೇವಿಯ ವ್ಯಕ್ತಿತ್ವದೊಂದಿಗೆಹೋಲಿಸಿ ವಿದ್ವಾಂಸರು ಸಾದೃಶ್ಯವೈದೃಶ್ಯಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಈಕೆಯ ವಚನಗಳಲ್ಲಿ ಹೃದ್ಯವಾದ ಸಾಹಿತ್ಯಾಂಶ ಅಷ್ಟಿಲ್ಲ. ಮುಕ್ತಾಯಕ್ಕನ ತರ್ಕನೈಪುಣ್ಯ ತಾತ್ತ್ವಿಕಜ್ಞಾನ ಮೇಲುಗೈಯಾಗಿ ಕುತೂಹಲ ಜನಕವಾಗಿರುವಂತೆ ವಾಗ್ವಿಲಾಸ ಅಲಂಕಾರ ವೈಖರಿ ಭಾವನಾ ಶಕ್ತಿ ಅಷ್ಟು ಚಿತ್ತಾಕರ್ಷಕವಾಗಿಲ್ಲ. ಒಂದೆರಡು ದೃಷ್ಟಾಂತಗಳು ರಮ್ಯವಾಗಿವೆ. ಆಕೆಯದು ಪ್ರಧಾನವಾಗಿ ತಾರ್ಕಿಕನ ದೃಷ್ಟಿ; ಕವಿಯ ದೃಷ್ಟಿಯಲ್ಲ.

### ಸತ್ಯಕ್ಕ (ಸು. ೧೧೬೦)

ಈಕೆಯ ಸ್ಥಳ ಶಿವಮೊಗ್ಗಾ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಹಿರೇಜಂಬೂರು. ಶಿವಭಕ್ತರ ಮನೆಯಂಗಳವನ್ನು ಗುಡಿಸಿ ಅವರು ನೀಡುತ್ತಿದ್ದ ಧಾನ್ಯದಿಂದ ಜೀವನ ಮಾಡುತ್ತಿದ್ದಳಂತೆ. ಇವಳ ಏಕದೇವತಾನಿಷ್ಠೆಯನ್ನು ನಿದರ್ಶಿಸುವ ಕಥೆಯೊಂದು ಭೈರವೇಶ್ವರ ಕಥಾಸೂತ್ರ ರತ್ನಾಕರದಲ್ಲಿ ಬರುತ್ತದೆ. ಇವಳ ೨೦ ವಚನಗಳು ಅಚ್ಚಾಗಿವೆ. ಅಂಕಿತ: 'ಶಂಭು ಜಕ್ಕೇಶ್ವರಾ'. ಈಕೆಯ ವ್ಯಕ್ತಿತ್ವ ಮತ್ತು ವಚನಗಳ ಮೇಲೆ ಅಕ್ಕಮಹಾದೇವಿಯ ಪ್ರಭಾವ ಮುದ್ರೆಯನ್ನು ಕಾಣಬಹುದು. ಈಕೆಯೂ ಅಕ್ಕಮಹಾದೇವಿಯಂತೆಯೇ ಶರಣಸತಿ–ಲಿಂಗಪತಿ ಭಾವದಿಂದ ಶಿವನೇ ತನ್ನ ದೈವ, ತನ್ನ ಪತಿ, ತನ್ನ ಸರ್ವಸ್ವ ಎಂದು ಭಾವಿಸಿ ಪೂಜಿಸಿದಳು. ನಿಂದಾಸ್ತುತಿಮೂಲವಾದ ಶಿವಭಕ್ತಿ, ಜಂಗಮಭಕ್ತಿ, ಆತ್ಮಾರ್ಪಣಭಾವ, ಶಿವಶರಣ್ಯಭಾವ, ಆತ್ಮಶುದ್ಧಿ ಮೊದಲಾದ ಸತ್ತ್ವಮಯ ಭಾವಗಳು ಈಕೆಯ ವಚನಗಳಲ್ಲಿ ಹರಿಹಾಯ್ದಿವೆ. ಮಾತುಗಳು ಸರಳವೂ ಹೃದ್ಯವೂ ಆಗಿದ್ದು ಕಾವ್ಯದ ಸೊಗಸು ಅಲ್ಲಲ್ಲಿ ಮಿರಿಮಿಂಚುತ್ತದೆ.

### ನೀಲಲೋಚನೆ (ಸು .೧೧೬೦.)

ಈಕೆಯನ್ನು ನೀಲಮ್ಮ ನೀಲಲೋಚನೆ

ಯಮ್ಮ ನೀಲಾಂಬಿಕೆ ಎಂದೂ ಕರೆಯಲಾಗಿದೆ. ಈಕೆ ಬಸವಣ್ಣನವರ ದ್ವಿತೀಯ ಪತ್ನಿ. 'ಸಹಸ್ರ ಗಣನಾಮ'ದಲ್ಲಿ ಈಕೆಯ ಹೆಸರೂ ಬಂದಿದೆ. ಬಸವೇಶ್ವರರು ಕೂಡಲ ಸಂಗಮದಲ್ಲಿ ಲಿಂಗೈಕ್ಯರಾದ ಮೇಲೆ ಈಕೆ ತಾನಿದ್ದೆಡೆಯಲ್ಲಿಯೇ ಕರಸ್ಥಳದ ಇಷ್ಟಲಿಂಗದಲ್ಲಿ ಐಕ್ಯಳಾದಂತೆ ಶೂನ್ಯಸಂಪಾದನೆಯಲ್ಲಿ ಹೇಳಿದೆ.

ಈಕೆಯ ೧೩ ವಚನಗಳು ಶೂನ್ಯ ಸಂಪಾದನೆಯಲ್ಲಿ ಬಂದಿವೆ. ಅಂಕಿತ: 'ಸಂಗಯ್ಯ'. ಈಕೆ ಪ್ರಸಾದ ಸಂಪಾದನೆಯನ್ನೂ ಒಂದು ಕಾಲಜ್ಞಾನವನ್ನೂ ಬರೆದಿರುವಂತೆ ತಿಳಿಯ ಬರುತ್ತದೆ. (ಕರ್ಣಾಟಕ ಕವಿಚರಿತೆ I–೨೦೧.) ಇವು ದೊರೆತಂತೆ ಕಾಣುವುದಿಲ್ಲ. "ನೀಲಮ್ಮನ ಸ್ತೋತ್ರ, ನೀಲಾಂಬಿಕಾ ಪಂಚವಿಂಶತಿ, ನೀಲಮ್ಮನ ತ್ರಿವಿಧಿ ಮೊದಲಾದ ಗ್ರಂಥಗಳು ಇವಳ ಸ್ತುತಿರೂಪವಾಗಿವೆ."– ಎಂದು ಕವಿಚರಿತೆಯಲ್ಲಿ ಹೇಳಿದೆ. ಇವು ಯಾವೂವೂ ಅಚ್ಚಾದಂತೆ ಇಲ್ಲ. ಈಕೆಯ ವಚನಗಳ ಸಾರಾಂಶ : ಬಸವಣ್ಣನವರು ಕೂಡಲ ಸಂಗಮ ಕ್ಷೇತ್ರಕ್ಕೆ ಬಂದು ಐಕ್ಯವಾಗುವ ಮೊದಲು ಪತ್ನಿ ನೀಲಲೋಚನೆಗೆ ಹೇಳಿಕಳುಹಿದ್ದು; ಆಕೆ ತಾನು ಇಷ್ಟಲಿಂಗದಲ್ಲಿಯೇ ಐಕ್ಯವಾಗುವುದಾಗಿ ಅಪ್ಪಣ್ಣನಿಗೆ ಬಿನ್ನವಿಸಿದ್ದು; ಅನಂತರ ಬಸವಣ್ಣನವರ ಲಿಂಗೈಕ್ಯದ ಸುದ್ದಿ ಕೇಳಿ ಪ್ರಲಾಪಿಸುತ್ತಿದ್ದ ಈಕೆಯನ್ನು ಚೆನ್ನಬಸವಣ್ಣನು ಸಮಾಧಾನಗೊಳಿಸಲು, ಈಕೆಯೂ ಲಿಂಗೈಕ್ಯವಾದುದು. ನೀಲಮ್ಮನಿಗೆ ಪತಿಯೂ ಗುರುವೂ ಆಗಿದ್ದ ಬಸವಣ್ಣನವರ ವಿಯೋಗ ದುಃಖ ವಚನಗಳಲ್ಲಿ ಹೃದಯಸ್ಪರ್ಶಿಯಾಗಿ ಮೂಡಿದೆ. ಮಾತು ಸರಳ, ಅರ್ಥ ಸುಲಭ. ಸಹಜಪ್ರಾಸಾನುಪ್ರಾಸದ ಸೊಗಸಿದೆ. ಎತ್ತಿ ಹೇಳಬಹುದಾದ ಹೆಚ್ಚಿನ ಸಾಹಿತ್ಯಾಂಶವೇನೂ ಇಲ್ಲ.

### ಅಕ್ಕ ನಾಗಮ್ಮ (ಸು. ೧೧೬೦)

ನಾಗಾಯಕ್ಕ ನಾಗಲಾಂಬಿಕೆ ಅಕ್ಕನಾಗಲೆ ಎಂದೂ ಈಕೆ ಕರೆಯಲ್ಪಡುತ್ತಾಳೆ. ಈಕೆ ಬಸವಣ್ಣನವರ ಸೋದರಿಯೂ ಚೆನ್ನಬಸವಣ್ಣನ ಮಾತೆಯೂ ಆಗಿದ್ದು, ಬಸವಣ್ಣನವರೊಂದಿಗೆ ಕಲ್ಯಾಣದಲ್ಲಿ ಇರುತ್ತಿದ್ದಳೆಂದು ತಿಳಿದುಬರುತ್ತದೆ. ಶೂನ್ಯಸಂಪಾದನೆಯಲ್ಲಿ ಈಕೆಯ ವಚನಗಳು ದೊರೆಯುತ್ತವೆ. ಅಂಕಿತ: 'ಬಸವಣ್ಣಪ್ರಿಯ ಚೆನ್ನಸಂಗಯ್ಯಾ'.

ಬಸವಣ್ಣ ಚೆನ್ನಬಸವಣ್ಣ ಅಲ್ಲಮಪ್ರಭು ಇವರಲ್ಲಿ ಈಕೆಗೆ ಅಪಾರ ಭಕ್ತಿ ಗೌರವಗಳುಂಟು. ಅವರಿಂದ ತಾನು ಉದ್ಧಾರವಾದೆನೆಂಬ ಕೃತಜ್ಞತಾಭಾವವುಂಟು. ಬಸವಣ್ಣನವರು ಲಿಂಗೈಕ್ಯರಾದಾಗ ಆಕೆಯ ಕರುಣಾರ್ದ್ರವಾದ ಪ್ರಲಾಪ ಇಲ್ಲಿ ಅತ್ಯಂತ ಸಹಜವಾಗಿ ಹೃದಯಸ್ಪರ್ಶಿಯಾಗಿ ರೂಪುಗೊಂಡಿದೆ.

### ಗೊಗ್ಗವ್ವೆ (ಸು. ೧೧೬೦)

'ನಾಸ್ತಿನಾಥ' ಎಂಬ ಅಂಕಿತದಲ್ಲಿ ಈಕೆಯ ೬ ವಚನಗಳು ದೊರೆತು ಅಚ್ಚಾಗಿವೆ. ಶಿವಪೂಜಾನಿಷ್ಠೆ, ಭಕ್ತರ ಜೀವನಮಾರ್ಗ, ಸ್ತ್ರೀಪುರುಷ ವಿಮೋಹ–ಇವನ್ನು ಈ ವಚನಗಳು ಕುರಿತಿವೆ. ಇವುಗಳಲ್ಲಿ ಕಾವ್ಯಶೈಲಿಯ ಸ್ಪಷ್ಟ ಮುದ್ರೆಯಿದೆ.

### ರಾಯಮ್ಮ (ಸು. ೧೧೬೦)

ಈಕೆ ರಾಯಸದ ಮಂಚಣ್ಣನ ಪತ್ನಿ. ೩ ವಚನಗಳು ಅಚ್ಚಾಗಿವೆ. ಅಂಕಿತ: 'ಅಮುಗೇಶ್ವರ ಲಿಂಗ'. ಭವಿಗಳಿಗಲ್ಲದೆ ಲಿಂಗಧಾರಿಗಳಿಗೆ ಪುನರ್ದೀಕ್ಷೆಯಿಲ್ಲವೆಂಬುದೂ, ಜ್ಞಾನದ ಮಹತ್ತ್ವವೂ ಶಿವಶರಣ್ಯಭಾವವೂ ವಚನಗಳ ವಿಷಯ. ಬಳಸುವ ದೃಷ್ಟಾಂತಗಳು ಸ್ವಾರಸ್ಯವಾಗಿಯೂ ಮಾರ್ಮಿಕವಾಗಿಯೂ ಇದ್ದು ಸಾಹಿತ್ಯಶಕ್ತಿ ಸ್ಫುಟವಾಗಿ ಕಾಣುವುದು.

**ರೆಮ್ಮವ್ವೆ (ಸು. ೧೧೬೦)**

ಜೀವನ ವಿವರ ತಿಳಿಯದು. ೨ ವಚನಗಳು ಅಚ್ಚಾಗಿವೆ. ಅಂಕಿತ: 'ಆಚಾರವೇ ಪ್ರಾಣವಾದ ಕಾಮೇಶ್ವರಲಿಂಗ'. ಶೈವಾಚಾರ ನಿಷ್ಠೆಯನ್ನು ಒಂದು ವಚನದಲ್ಲಿಯೂ ಕಪಟವರ್ತನದ ಭರ್ತ್ಸನೆಯನ್ನು ಇನ್ನೊಂದು ವಚನದಲ್ಲಿಯೂ ಮಾರ್ಮಿಕವಾಗಿ ಹೇಳಿದೆ. ಸ್ಪಷ್ಟವಾದ ಮಾತು, ನಿಶಿತವಾದ ಅರ್ಥ.

**ಬೋತಲದೇವಿ (ಸು. ೧೧೬೦)**

ಈಕೆಯ ನಿಜನಾಮ ನಿಜದೇವಿ. ಬೊಂತಾದೇವಿ ಅಥವಾ ಬೊಂತಲದೇವಿಯೆಂದೂ ಈಕೆಯನ್ನು ಕರೆಯಲಾಗುತ್ತದೆ. ರಾಣಿಯಾಗಿದ್ದವಳು ಪದವಿಯನ್ನು ತೊರೆದು ಅಕ್ಕಮಹಾದೇವಿಯಂತೆಯೇ ನಿರ್ವಾಣವಾಗಿ ಕಲ್ಯಾಣದತ್ತ ಹೊರಟಳಂತೆ. ಕಲ್ಯಾಣದ ಕ್ರಾಂತಿಯ ಅನಂತರವೂ ಕಲ್ಯಾಣದಲ್ಲಿಯೇ ನಿಂತಳಂತೆ. ಈಕೆ ಸಹಸ್ರಗಣನಾಮದಲ್ಲಿ ಉಕ್ತಳಾಗಿದ್ದಾಳೆ. ಈಕೆಯ ೨ ವಚನಗಳು ಅಚ್ಚಾಗಿವೆ. ಅಂಕಿತ: 'ಬೀಡಾಡಿ' ('ಬಿಡಾಡಿ'). ಪರಮಾತ್ಮನು ಒಲಿಯಲು ಮೇಲು ಕೀಳೆಂಬ ಜಾತಿಭೇದ ತಡೆಯಾಗದೆಂದೂ, ಪರಮಾತ್ಮನು ಸರ್ವವ್ಯಾಪಿಯೆಂದೂ ಈ ವಚನಗಳ ಸಾರಾಂಶ.

**ಕೆದರಕಾಯಕದ ರೆಮ್ಮವ್ವೆ (ಕದಿರ ರೆಬ್ಬವ್ವೆ) (ಸು. ೧೧೬೦)**

ಈಕೆ ನೆಯ್ಗೆವೃತ್ತಿಯವಳು. ಇವಳ ೩ ವಚನಗಳು, ದೊರೆತಿದ್ದು ೨ ವಚನಗಳು ಅಚ್ಚಾಗಿವೆ. ಅಂಕಿತ: 'ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರಾ' ವೃತ್ತಿನಿರ್ವಹಣಕ್ಕೆ ಶಿವಭಕ್ತಿ ತಲ್ಲೀನತೆಯಿಂದ ತಡೆಯೊಡಗಿತೆಂಬ ಭಾವವೂ, ಶಿವಶರಣ್ಯಭಾವವೂ ವಚನಗಳ ಸಾರಾಂಶ.

**ವೀರಮ್ಮ (ಸು. ೧೧೬೦)**

ವಚನಕಾರ ದಸರಯ್ಯನ ಪತ್ನಿ. ೨ ವಚನಗಳು ಅಚ್ಚಾಗಿವೆ. ಅಂಕಿತ: 'ಗುರುಶಾಂತೇಶ್ವರಾ'. ವ್ರತಹೀನನೊಂದಿಗೆ ಬೆರೆಯಬಾರದು ಎಂದು ಒಂದು ವಚನದಲ್ಲಿಯೂ, ವೀರಶೈವಾಚಾರದ ಪಾದೋದಕ ಪ್ರಸಾದವನ್ನು ಇನ್ನೊಂದು ವಚನದಲ್ಲಿಯೂ ಹೇಳಿದೆ.

**ರೇಚವ್ವೆ (ಸು. ೧೧೬೦)**

ಕಾಳಕೂಟಯ್ಯನ ಪತ್ನಿ. ೧ ವಚನ ಅಚ್ಚಾಗಿದೆ. ಅಂಕಿತ: 'ಕುಂಭೇಶ್ವರಾ'. ಶೈವವ್ರತ ಹೀನನನ್ನು ಬೆರೆಯಬಾರದು ಎಂಬುದು ಇಲ್ಲಿಯ ವಿಷಯ.

**ಕೊಟ್ಟಣದ ಸೋಮವ್ವೆ (ಸು. ೧೧೬೦.)**

ಜೀವನದ ವಿವರ ತಿಳಿಯದು. ದವಸಧಾನ್ಯದ ಕೊಟ್ಟಣದಿಂದ ಹೊಟ್ಟೆ ಹೊರೆಯುತ್ತಿದ್ದಿರಬಹುದು. ೧ ವಚನ ಅಚ್ಚಾಗಿದೆ. ಅಂಕಿತ: 'ನಿರ್ಲಜ್ಜೇಶ್ವರ'. ಶೈವವ್ರತಹೀನನೊಡನೆ ಬೆರೆಯಬಾರದೆಂಬುದನ್ನು ಸ್ಪಷ್ಟೋಕ್ತಿಯಿಂದ ಹೇಳಿದ್ದಾಳೆ.

**ಲಕ್ಷ್ಮಮ್ಮ (ಸು. ೧೧೬೦)**

ಈಕೆ ಬಿಜ್ಜಳನ ಆಸ್ಥಾನದಲ್ಲಿದ್ದ ಕೊಂಡೆಯ ಮಂಚಣ್ಣನ ಪತ್ನಿ. ಪತಿಪತ್ನಿಯರು ಗುಪ್ತಭಕ್ತಿಯಿಂದ ನಡೆಯುತ್ತಿದ್ದರಂತೆ. ೧ ವಚನ ಅಚ್ಚಾಗಿದ್ದು ಅದರಲ್ಲಿ ಶೈವವ್ರತ ನಿಷ್ಠೆಯನ್ನು ಪ್ರತಿಪಾದಿಸಿದೆ. ಅಂಕಿತ: 'ಅಗಜೇಶ್ವರಲಿಂಗ'

**ಕಾಳವ್ವೆ I (ಸು. ೧೧೬೦)**

ಬಾಚಿ ಕಾಯಕದ ಬಸವಪ್ಪನ ಪತ್ನಿ. "ಈಕೆ ಕಗ್ಗಲ್ಲಿನಿಂದ ಹಾಲನ್ನು ಕರೆದು ಈಶ್ವರನಿಗೆ ಉಣಿಸಿದಳಂತೆ". ಅಚ್ಚಾಗಿರುವ ಒಂದು ವಚನದಲ್ಲಿ ಶೈವವ್ರತಹೀನನೊಡನೆ ಬೆರೆಯಬಾರದೆಂದು ಪ್ರತಿಪಾದಿಸಿದೆ. ಅಂಕಿತ: 'ಕರ್ಮಹರ ಕಾಳೇಶ್ವರ'.

**ಕಾಳವ್ವೆ II (ಸು. ೧೧೬೦)**

ಸಿದ್ಧಬುದ್ಧಯ್ಯನ ಪತ್ನಿ. ಅಚ್ಚಾದ ಒಂದು

ವಚನದಲ್ಲಿ ಶೈವವ್ರತ ಭ್ರಷ್ಟನೊಡನೆ ಬೆರೆಯಬಾರದೆಂದು ಹೇಳಿದೆ. ಅಂಕಿತ: 'ಭೀಮೇಶ್ವರ.'

**ಕಾಳವ್ವೆ III (ಸು. ೧೧೮೦)**

ವಚನಕಾರ ಉರಿಲಿಂಗಪೆದ್ದಿಯ ಪತ್ನಿ. ೨ ವಚನ ಅಚ್ಚಾಗಿದೆ. ಅಂಕಿತ: 'ಉರಿಲಿಂಗಪೆದ್ದಿಗಳರಸ'. ವ್ರತದ ಮಹತ್ತ್ವವನ್ನು ಒಂದು ವಚನದಲ್ಲಿಯೂ, ಯಾರು ನಿಜಭಕ್ತರಲ್ಲವೆಂಬುದನ್ನು ಮತ್ತಿನ ವಚನದಲ್ಲಿಯೂ ಸ್ಪಷ್ಟೋಕ್ತಿಯಲ್ಲಿ ಹೇಳಿದೆ.

(ಅ) ಹೆಸರುಗಳು ಮತ್ತು ಅಂಕಿತಗಳು ದೊರೆತಿದ್ದು, ವಚನಗಳು ದೊರೆಯದಿರುವ ಕೆಲವು ವಚನಕಾರ್ತಿಯರ ಉಲ್ಲೇಖವನ್ನು (i) ಕವಿಚರಿತೆಯಿಂದ ಎತ್ತಿ ಇಲ್ಲಿ ಬರೆದಿದೆ: ಕನ್ನಡಿ ಕಾಯಕದ ರೆಮ್ಮವ್ವ (ಅಂಕಿತ: 'ಸದ್ಗುರು ಲಿಂಗ ನಿರಂಗಲಿಂಗ') ಗಂಗಮ್ಮ ('ಗಂಗೇಶ್ವರ ಲಿಂಗ'), ಗಂಗಾಂಬಿಕೆ ('ಗಂಗಾಪ್ರಿಯ ಕೂಡಲಸಂಗಮದೇವ'), ಮಹಾದೇವಿ ('ಮಹಾದೇವ ಜ್ಯೋತಿರ್ಲಿಂಗ'), ಸುವರ್ಣದೇವಿ ('ಸುವರ್ಣಲಿಂಗ') (ii) ಲಿಂಗವಂತರ ಅಮರಕೃತಿಗಳು ಮತ್ತು ಲಿಂಗವಂತ ಕವಿಗಳು—ಎಂಬ ಗ್ರಂಥದಿಂದ ಎತ್ತಿ ಇಲ್ಲಿ ಬರೆದಿದೆ: ಕದಿರು ಕಾಯಕದ ಕಾಳವ್ವೆ (ಅಂಕಿತ: 'ಗುಮ್ಮೇಶ್ವರಾ'), ಶಾಂಭವದೇವಿ—ಸಿಂಹವಿಕ್ರಮ ಚೋಳನ ಮಗಳು ('ಶಾಂಭವೀಲಿಂಗ'), ಸುಂದರನಾಚಿ—ರಾಜೇಂದ್ರಚೋಳನ ಮಗಳು ('ಶ್ರೀ ಗುರು ಸೋಮಲಿಂಗಶರಣಿ ಸೌಂದರಿ'), ವೀರರಾಜೇಂದ್ರನ ಮಗಳು ('ಆಗಮ ಮೋಹಿನಿ') ಕೇತಲದೇವಿ ('ಕುರಂಗೇಶ್ವರಲಿಂಗ').

(ಆ) ವಚನಗಳೂ ಅಂಕಿತಗಳೂ ದೊರೆತಿದ್ದು ವಚನಕಾರರ ಹೆಸರುಗಳು ತಿಳಿಯದ ಗುಂಪಿನಲ್ಲಿ (ಕರ್ಣಾಟಕ ಕವಿಚರಿತೆ I—೫೧೫), ಅಂಕಿತಗಳು ಮಾತ್ರ ದೊರೆತಿದ್ದು ವಚನಕಾರರ ಹೆಸರುಗಳೂ ವಚನಗಳೂ ತಿಳಿಯದ ಗುಂಪಿನಲ್ಲಿ (ಕರ್ಣಾಟಕ ಕವಿಚರಿತೆ I—೫೨೩.) ಮತ್ತೆ ಕೆಲವರು ವಚನಕಾರ್ತಿಯರು ಸೇರಿರಬಹುದೇನೋ ಎಂಬುದು ಮುಂದೆ ವಿಶದಪಡಬೇಕಾಗಿರುವ ವಿಷಯ.

(ಇ) ಪಾಲ್ಕುರಿಕೆ ಸೋಮನಾಥನ (ಕ್ರಿ.ಶ. ಸು. ೧೧೬೫) 'ಸಹಸ್ರಗಣನಾಮ', ಹರಿಹರನ (ಕ್ರಿ.ಶ.ಸು. ೧೧೬೫.) ಲಿಂಗಾರ್ಚನ ರಗಳೆ, ಬಸವಲಿಂಗನ (ಕ್ರಿ.ಶ.ಸು. ೧೬೧೧) ಶಿವಾಧಿಕ್ಯ ಪುರಾಣ, ವಿರಕ್ತ ತೋಂಟದಾರ್ಯನ (ಕ್ರಿ.ಶ. ೧೫೬೦) ಪಾಲ್ಕುರಿಕೆ ಸೋಮೇಶ್ವರ ಪುರಾಣ—ಈ ಮೊದಲಾದ ಗ್ರಂಥಗಳಲ್ಲಿ ಉಕ್ತರಾಗಿರುವ ಶಿವಶರಣೆಯರಲ್ಲಿ ಯಾರಾದರೂ ವಚನರಚನೆ ಮಾಡಿರಬಹುದೇ ಎಂಬುದು ಮುಂದೆ ವಿಶದಪಡಬೇಕಾಗಿರುವ ವಿಷಯ.

**(ಈ) ಬಿಜ್ಜಳದೇವಿ (ಸು. ೧೧೬೦)**

'ಈಕೆ ವಚನಗಳನ್ನು ಬರೆದಿರುವಂತೆ ತಿಳಿಯ ಬರುತ್ತದೆ' ಎಂದು ಕವಿಚರಿತೆಯಲ್ಲಿ ಹೇಳಿದೆ. ಈಕೆಯ ಅಂಕಿತವನ್ನಾಗಲಿ ವಚನವನ್ನಾಗಲಿ ಕೊಟ್ಟಿಲ್ಲ. ಬಿಜ್ಜವ್ವೆ, ಬಿಜ್ಜಮಹಾದೇವಿ ಎಂದೂ ಈಕೆಗೆ ಹೆಸರಿದ್ದು, ಕದಿರಕಾಯಕದ ಅಮ್ಮವ್ವೆಯಿಂದ ಈಕೆ ಅಭಿನ್ನಳು. ಅಮ್ಮವ್ವೆಯನ್ನು ಕುರಿತ ಒಂದು ರಗಳೆಯನ್ನು 'ತ್ರಿಭುವನ ತಾತ' ಎಂಬ ಕವಿ ಬರೆದಿದ್ದಾನೆ. ಈ ಬಿಜ್ಜಳದೇವಿ ಅಥವಾ ಅಮ್ಮವ್ವೆಯ ವಚನಗಳಾವುವೂ ಅಚ್ಚಾಗಿಲ್ಲ.

**ಹದಿಮೂರು ಮತ್ತು ಹದಿನಾಲ್ಕನೆಯ ಶತಮಾನ**

ಸದ್ಯಃ ನಮಗೆ ತಿಳಿದಿರುವಂತೆ ೧೩ ಮತ್ತು ೧೪ನೆಯ ಶತಮಾನಗಳ ಅವಧಿಯಲ್ಲಿ ಯಾವುದೇ ಸ್ತ್ರೀಕವಿಯ ಹೆಸರಾಗಲಿ ಕೃತಿಯಾಗಲಿ ಲಭ್ಯವಿಲ್ಲ.

**ಹದಿನೈದನೆಯ ಶತಮಾನ.**

**ಗುಡ್ಡವ್ವೆ (ಸು. ೧೪೩೦)**

ಈಕೆ ಬತ್ತಲೇಶ್ವರನ ಪತ್ನಿ. ಒಂದು ವಚನ

ಅಚ್ಚಾಗಿದ್ದು, ಚಿತ್ತಶುದ್ಧಿಪೂರ್ವಕವಾದ ವ್ರತ ನಿಷ್ಠೆಯನ್ನು ಇದರಲ್ಲಿ ನಿರೂಪಿಸಿದೆ. ಅಂಕಿತ: 'ನಿಂಬೇಶ್ವರಾ'.

**ಮಸಣಮ್ಮ (ಸು. ೧೫೦೦)**

ಈಕೆ ಎಡೆಮಠದ ನಾಗಿದೇವನ ಪತ್ನಿ. ಇವರು ಕೃಷ್ಣಾತೀರದ ಚಿಮ್ಮಲಿಗಿಯ ಬಳಿ ವಾಸಿಸುತ್ತಿದ್ದರೆಂದೂ ಕಾಂಚಿಪಟ್ಟಣದಿಂದ ಬಂದವರೆಂದೂ ಐತಿಹ್ಯ. ದಂಪತಿಗಳು ಶಿವಯೋಗಿ ನಿಜಗುಣೇಶ್ವರನ ಶಿಷ್ಯರು. 'ನಿಜಗುಣೇಶ್ವರಲಿಂಗ, ಎಂಬ ಅಂಕಿತದಲ್ಲಿ, ಶೈವವ್ರತನಿಷ್ಠೆಯ ಹಿರಿಮೆಯನ್ನು ನಿರೂಪಿಸುವ, ಈಕೆಯ ಒಂದು ವಚನ ಅಚ್ಚಾಗಿದೆ.

**ರೇಕಮ್ಮ (ಸು. ೧೫೦೦)**

ಈಕೆ ರೇವಣಸಿದ್ದಯ್ಯನ ಪತ್ನಿ. 'ಶ್ರೀ ಗುರುಸಿದ್ಧೇಶ್ವರ' ಎಂಬ ಅಂಕಿತದಲ್ಲಿ, ಶೈವಾಚಾರ ನಿಷ್ಠೆಯನ್ನು ಉಗ್ರವಾಗಿ ಪ್ರತಿಪಾದಿಸುವ ಈಕೆಯ ಒಂದು ವಚನ ಅಚ್ಚಾಗಿದೆ.

**ಕಾಲು ಕಣ್ಣಿಯ ಕಾಯಮ್ಮ (ಸು. ೧೫೦೦)**

'ನಿರ್ಭೀತಿ ನಿಜಲಿಂಗದಲ್ಲಿ' ಎಂಬ ಅಂಕಿತದಲ್ಲಿ ಶೈವಾಚಾರ ನಿಷ್ಠೆಯನ್ನು ಉಗ್ರವಾಗಿ ಪ್ರತಿಪಾದಿಸುವ ಈಕೆಯ ಒಂದು ವಚನ ಅಚ್ಚಾಗಿದೆ. ಜೀವನವಿವರ ತಿಳಿಯದು.

ಪೂರ್ವೋಕ್ತರಾದ ಈ ನಾಲ್ವರೂ ವೀರಶೈವಧರ್ಮದ ಶಿವಶರಣೆಯರು.

**ಹದಿನಾರನೆಯ ಶತಮಾನ.**

**ಕಾಲಜ್ಞಾನದ ನೀಲಮ್ಮ (ಸು. ೧೫೪೩)**

ಈಕೆ ಕಾಲಜ್ಞಾನದ ಎಮ್ಮೆ ಬಸವಣ್ಣನ ಸಮಕಾಲೀನಳು. ಒಂದು ಕಾಲಜ್ಞಾನ ಗ್ರಂಥವನ್ನು ಬರೆದಿದ್ದಾಳೆ. ಇದು ದೊರೆತು ಅಚ್ಚಾಗಿರುವಂತೆ ತೋರುತ್ತದೆ. ೧೫೬೫ರಲ್ಲಿ ವಿಜಯನಗರದಲ್ಲಿ ನಡೆದ ತುರುಕರ ಹಾವಳಿಯನ್ನು ಕಣ್ಣಾರೆಕಂಡ ನೀಲಮ್ಮನು ತನ್ನ ಕಾಲಜ್ಞಾನದಲ್ಲಿ ಅದನ್ನು ವಿವರಿಸಿದ್ದಾಳೆ. (ಶರಣ ಸಾಹಿತ್ಯ ೧೧–೪).

**ಹದಿನೇಳನೆಯ ಶತವಾನ**

**ಸಂಚಿಯ ಹೊನ್ನಮ್ಮ (ಸು. ೧೬೮೦)**

೧೬೭೨ ರಿಂದ ೧೭೦೪ ರವರೆಗೆ ಮೈಸೂರರಸರಾಗಿದ್ದ ಚಿಕದೇವರಾಜ ಒಡೆಯರ ಆಶ್ರಯದಲ್ಲಿ ಈಕೆ ಸಂಚಿಯ ಊಳಿಗದವಳಾಗಿದ್ದಳು. ಇವಳ ಪೂರ್ವಸ್ಥಳ ಎಳಂದೂರಾಗಿರಬಹುದೆಂದೂ ಈಕೆ ಚತುರ್ಥವರ್ಣದವಳಿರಬಹುದೆಂದೂ ಕವಿಚರಿತೆಕಾರರು ಊಹಿಸಿದ್ದಾರೆ. ವೇದಮಾರ್ಗ ಪ್ರತಿಷ್ಠಾಪನಾಚಾರ್ಯನೂ ಉಭಯವೇದಾಂತಾಚಾರ್ಯನೂ ಆದ ಅಳಸಿಂಗರಾರ್ಯನು ಇವಳ ಗುರು. ಕನ್ನಡ ಮಿತ್ರವಿಂದಾನಾಟಕದ ಕರ್ತೃ ಸಿಂಗರಾರ್ಯನೇ ಈತನೆಂದು ವಿದ್ವಾಂಸರ ಬಹುಮತದ ಗ್ರಹಿಕೆ. (ಈ ನಾಟಕದ ಕರ್ತೃವಾದ ಕೌಶಿಕ ಸಿಂಗರಾರ್ಯನ ತಂದೆ ಅಳಸಿಂಗರಾರ್ಯನು ಹೊನ್ನಮ್ಮನ ಗುರು ಎಂಬ ಅಭಿಪ್ರಾಯವೂ ಇದೆ. ನೋಡಿ: ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಜೂನ್ ೧೯೪೧). ಈಕೆ ವಿಷ್ಣುಭಕ್ತಳೂ ವೈಷ್ಣವಧರ್ಮ ತತ್ತ್ವಜ್ಞಳೂ ಆಗಿದ್ದಳು. 'ಹದಿಬದೆಯ ಧರ್ಮ' ಎಂಬದು ಇವಳ ಒಂದೇ ಒಂದಾದ ಕೃತಿ.

ಹೊನ್ನಮ್ಮನು ತನ್ನ ರಾಜಭಕ್ತಿ ರಾಜಾಶ್ರಯಗಳನ್ನು ತನ್ನ ಕೃತಿಯಲ್ಲಿ ಕಂಠೋಕ್ತವಾಗಿ ತಿಳಿಸಿರುವಂತೆ ಸ್ವವಿಚಾರದ ವಿವರಗಳನ್ನು ತಿಳಿಸಿಲ್ಲ. ಆದರೆ ಈಕೆಯ ಕಾವ್ಯಾಧಾರದ ಮೇಲೆ ಈಕೆ ರಾಜಾಶ್ರಯವನ್ನು ಪಡೆಯುವ ನೊದಲು ಅಷ್ಟು ಉತ್ತಮ ಸ್ಥಿತಿಯಲ್ಲಿರಲಿಲ್ಲವೆಂದೂ ಪಡೆದ ಮೇಲೆ ತನ್ನ ಬಂಧುಬಾಂಧವರಿಗೆ ಬೇಕಾದ ಸಹಾಯ ಮಾಡುವಷ್ಟು ಉನ್ನತಸ್ಥಿತಿಗೆ ಬಂದಳೆಂದೂ ತಿಳಿಯಬಹುದಾಗಿದೆ. ಚಿಕದೇವರಾಜನ ಆಶ್ರಿತವರ್ಗದಲ್ಲಿದ್ದು, ಅದರಲ್ಲಿಯೂ ಸಂಚಿಯ ಊಳಿಗದಲ್ಲಿದ್ದು, ಪ್ರಭುವಿನಲ್ಲಿಯೂ ಪ್ರಭುಪತಿ

ಎಳವಂದೂರ ದೇವಮ್ಮನಲ್ಲಿಯೂ ಅತಿಶಯಭಕ್ತಿ ಗೌರವಗಳನ್ನುತಳೆದಿದ್ದಳು. ಅವರ ಪ್ರೀತಿವಾತ್ಸಲ್ಯಗಳನ್ನೂ ಆದರಾಭಿಮಾನಗಳನ್ನೂ ಇದಕ್ಕೆ ಪ್ರತಿಫಲವಾಗಿ ಪಡೆದುಕೊಂಡಿದ್ದಳು. ತನ್ನ ಸತ್ತ್ವ ಸಾಮರ್ಥ್ಯಗಳು ಏನೇ ಇದ್ದರೂ ಪ್ರಭುಸೇವೆಯೇ ತನಗೆ ಪರಮಾರ್ಥವೆಂದೂ ಅದನ್ನು ಮೀರಿದ ಬಯಕೆಗಳು ತನಗಿಲ್ಲವೆಂದೂ ತೃಪ್ತಿ ಕೃತಜ್ಞತೆಗಳನ್ನು ಮನಃಪೂರ್ವಕವಾಗಿ ವ್ಯಕ್ತಪಡಿಸಿದ್ದಾಳೆ.

ಹೊನ್ನಮ್ಮನು ಕನ್ನಡ ಸಂಸ್ಕೃತ ಭಾಷಾ ಸಾಹಿತ್ಯಗಳನ್ನು ಶಾಸ್ತ್ರಗ್ರಂಥಗಳನ್ನು ಪುರಾಣೇತಿಹಾಸಗಳನ್ನು ಗುರುಸನ್ನಿಧಿಯಲ್ಲಿ ಕ್ರಮಾಧ್ಯಯನ ಮಾಡಿರಬಹುದಾದ ಪಂಡಿತೆ. ಇದರೊಂದಿಗೆ ದೈವಾಯತ್ತ ಪ್ರತಿಭೆ, ಲೋಕಾನುಭವ ಜತೆಗೂಡಿದ್ದವು. 'ಸರಸಸಾಹಿತ್ಯದ ವರದೇವತೆ' ಎಂದು ಅವಳ ಗುರುವೇ ಮನಮೆಚ್ಚಿ ದೊರೆಯಿದಿರು ಅವಳನ್ನು ಪರಿಪರಿಯಾಗಿ ಹೊಗಳಿದ್ದನು. ದೊರೆಯು ಇವಳ ಸಾಹಿತ್ಯದ ಸವಿಯನ್ನು ಬಯಸಿ ಪಟ್ಟಮಹಿಷಿಯ ಮೂಲಕ ಈಕೆಯನ್ನು ಕೃತಿರಚನೆಗೆ ಪ್ರೇರಿಸಿದನು. ಪಂಡಿತೆಯಾದರೂ ವಿನೀತೆಯಾಗಿದ್ದ ಈಕೆ ಅಂಜುತ್ತ ಅಳುಕುತ್ತ ದೊರೆಯ ಆಶಯವನ್ನು ನೆರವೇರಿಸಲು ಒಪ್ಪಿದಳು. ಚಿಕದೇವರಾಜನ ಆಸ್ಥಾನದ ವಿದ್ವತ್‌ವಾತಾವರಣವು, ಪ್ರಭುವಿನ ಸಾಹಿತ್ಯಪೋಷಣೆಯ ಉದಾರ ಬುದ್ಧಿ, ಸಂಚಿಯೂಳಿಗದ ಹೆಣ್ಣು ಹೊನ್ನಮ್ಮನನ್ನು ಒಳ್ಳೆಯ ಪಂಡಿತೆಯನ್ನಾಗಿಯೂ ಕವಿಯನ್ನಾಗಿಯೂ ಮಾಡಿದ್ದು ಕನ್ನಡಸಾಹಿತ್ಯದಲ್ಲಿ ಒಂದು ಸ್ಮರಣೀಯವಾದ ಘಟನೆ.

ಕಾವ್ಯರಚನೆಗೆ ವಸ್ತುವಿನ ಆಯ್ಕೆಯಲ್ಲಿ ಆಕೆ ಬಯಸಿ ಹೊಸ ಹಾದಿ ಹಿಡಿದಳು. ಪತಿವ್ರತೆಯರ ಧರ್ಮವನ್ನು ನಿರೂಪಿಸುವುದೇ ಇವಳ ಕೃತಿ ಹದಿಬದೆಯ ಧರ್ಮದ ಉದ್ದೇಶ. ಸತಿಯರು ಸತೀಧರ್ಮನಿಷ್ಠರಾಗಿ ಇಹಪರಗಳಲ್ಲಿ ಸುಖ ಸಂತೋಷಗಳನ್ನೂ ಸದ್ಗತಿಯನ್ನೂ ಪಡೆಯಲೆಂಬುದೇ ಇದರ ಪ್ರಯೋಜನ. ಸನಾತನ ಆರ್ಯಸ್ತ್ರೀಯರ, ಆದರ್ಶಸ್ತ್ರೀಯರ ಗುಣಶೀಲಗಳನ್ನೂ ಕರ್ತವ್ಯಗಳನ್ನೂ, ಸಮಾಜ ಮನೆ ವಿದ್ಯೆ ಮೊದಲಾದವುಗಳಲ್ಲಿ ಅವರಿಗೆ ಇರಬೇಕಾದ ಸ್ಥಾನಮಾನಗಳನ್ನೂ ಹೆಣ್ಣಿನ ಕಣ್ಣಿಂದಲೇ ನೋಡಿ ಸಹಜವಾಗಿ ನಿರೂಪಿಸಿದ್ದಾಳೆ. ಸ್ತ್ರೀಧರ್ಮದ ಸರ್ವಸಾಧಾರಣವೂ ಸಾರಭೂತವೂ ಆದ ಜೀವನತತ್ತ್ವಗಳನ್ನು, ಸಂಪ್ರದಾಯದಲ್ಲಿ ಶ್ರೇಷ್ಠವೂ ಆಚರಣಯೋಗ್ಯವೂ ಆದ ಆಚಾರವಿಚಾರಗಳನ್ನು ಇಲ್ಲಿ ಎತ್ತಿ ಹೇಳಿದೆ. ಇದಕ್ಕಾಗಿ ಶಾಸ್ತ್ರಾಧಾರಗಳನ್ನು ನಿದರ್ಶನಗಳನ್ನು ಅನುವಾದಿಸಿದೆ, ಉದ್ಧರಿಸಿದೆ, ವಿಮರ್ಶೆ ಮಾಡಿದೆ. ಆಧುನಿಕಮನೋಧರ್ಮದ ಕೆಲವರಿಗೆ ಇಲ್ಲಿಯ ಹಲವು ಅಭಿಪ್ರಾಯಗಳು ಹಳತಾಗಿಯೂ ಅಹಿತವಾಗಿಯೂ ತೋರಬಹುದು (ನೋಡಿ: ಕ.ಸಾ.ಪ. ಜನವರಿ ೧೯೫೬). ಆದರೆ ತತ್ಕಾಲದ ಸಮಾಜದಲ್ಲಿ ಸ್ತ್ರೀಯರ ಸ್ಥಿತಿಗತಿಗಳು, ಕಾವ್ಯದಲ್ಲಿ ಧರ್ಮ ಮತ್ತು ಆದರ್ಶಗಳ ಪಾತ್ರ, ಹೊನ್ನಮ್ಮನ ಸ್ವಂತ ಸಂಸ್ಕಾರ ಮತ್ತು ಸಂಬಂಧ, ಒಂದೆರಡು ಮಾತು ಮತ್ತು ವಿವರಗಳಲ್ಲಿ ಮಾತ್ರ ಕಾಣುವ ಪೂರ್ವಾಚಾರನಿಷ್ಠೆ, ಶಾಸ್ತ್ರಾನುಶಾಸನದ ಉಗ್ರತೆ, ಈ ಮೊದಲಾದುದನ್ನು ದೃಷ್ಟಿಯಲ್ಲಿರಿಸಿಕೊಂಡು ಹದಿಬದೆಯ ಧರ್ಮವನ್ನು ಸಹಾನುಭೂತಿಯಿಂದ ಪುನರ್ಪರಿಶೀಲಿಸುವುದು ಸಾಧ್ಯ. ಕೆಲವೆಡೆ ಹೊನ್ನಮ್ಮನ ಸ್ವತಂತ್ರವಿಚಾರಧಾರೆ ಸಮಾಜದ ರೂಢಮೂಲ ನಂಬಿಕೆಗಳ ವಿಡಂಬನೆ ಚೆನ್ನಾಗಿಯೇ ಒಡಮೂಡಿದೆ. (ಉದಾ. ೫–೪, ೮, ೧೧)

ಸ್ತ್ರೀಧರ್ಮನಿರೂಪಣೆ ಇಲ್ಲಿಯ ವಸ್ತುವಾದರೂ ಸ್ತ್ರೀಯ ಬಗೆಗೆ ತಾಯಿತಂದೆ, ಅತ್ತೆಮಾವ, ಪತಿ ಹೇಗೆ ನಡೆದುಕೊಳ್ಳಬೇಕೆಂಬ ವಿವೇಚನೆಯೂ

ಇದೆ. ಒಟ್ಟಿನಲ್ಲಿ ಇದು ಸ್ತ್ರೀಧರ್ಮದ ಕೈಪಿಡಿ; ಸ್ತ್ರೀಸ್ವಭಾವದ ಮಣಿಮುಕುರ; ಒಂದು ಸತ್ಕೃತಿ; ಸಾಹಿತ್ಯಕ್ಕೆ ಒಂದು ಶಾಶ್ವತವಾದ ಕೊಡುಗೆ. ಆದರೆ ವೃತ್ತಿಸಂಕೀರ್ಣತೆಯಿಂದಲೂ ಭೌತಿಕ ಮನೋಧರ್ಮದಿಂದಲೂ ನವನಾಗರಿಕತೆಯ ಕೈಗೊಂಬೆಯಾಗಿರುವ ಇಂದಿನ ಸಮಾಜ ಈ ಕೃತಿಯನ್ನು ಉಪೇಕ್ಷಾಬುದ್ಧಿಯಿಂದ ನೋಡಿದರೆ ಅಚ್ಚರಿಯೇನಿಲ್ಲ.

ಇಲ್ಲಿ ಇನ್ನೊಂದು ವಿಚಾರ. ಹೊನ್ನಮ್ಮನು ತನ್ನ ಕೃತಿಯನ್ನು ವ್ಯಾಸಂಗಬಲದಿಂದ ಬರೆದಳೇ ಸ್ವಾನುಭವದಿಂದ ಬರೆದಳೇ ಎಂಬೊಂದು ಸಂದೇಹ ವಿಮರ್ಶೆಯಲ್ಲಿ ಸುಳಿದಿದೆ (ಕನ್ನಡ ಸಾಹಿತ್ಯ ಚರಿತ್ರೆ ೩೧೯). ಇದರೊಂದಿಗೆ ಆಕೆ ಅಂತಃಪುರವರ್ಗವನ್ನು ಸೇರಿ ಸತೀಧರ್ಮವನ್ನು ನಿಷ್ಠೆಯಿಂದ ಆಚರಿಸಿರಬೇಕೆಂದು ಅವಳ ಕಾವ್ಯಸರಣಿಯಲ್ಲಿ ಸೂಚನೆಯಿದೆ ಎಂಬ ಅಭಿಪ್ರಾಯವೂ ವ್ಯಕ್ತವಾಗಿದೆ (ಅದೇ. ಪು.೩೧೯). ಸ್ವಲ್ಪ ಹೆಚ್ಚು ಕಡಮೆ ಇಂಥ ಅಭಿಪ್ರಾಯ ಈ ಹಿಂದೆಯೂ ಕೆಲವೊಮ್ಮೆ ಬಂದಿದೆ. (ಹದಿಬದೆಯ ಧರ್ಮದ ೧೯೩೬ರ ಮುದ್ರಣದ ಪೀಠಿಕೆ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ-ಜೂನ್ ೧೯೪೧). ಈ ಅಭಿಪ್ರಾಯಕ್ಕೆ ವಿರೋಧವು ವ್ಯಕ್ತಪಟ್ಟಿದೆ (ಪ್ರಬುದ್ಧ ಕರ್ಣಾಟಕ ೩೭–೩). ಇವುಗಳ ಸಾರಾಸಾರ ವಿಚಾರವಿಮರ್ಶೆಗೆ ಇಲ್ಲಿ ಎಡೆಯಿಲ್ಲ. ಹೊನ್ನಮ್ಮನು ಚಿಕದೇವರಾಜನ ಅಂತಃಪುರವರ್ಗವನ್ನು ಸೇರಿರಬಹುದು ಅಥವಾ ಇಲ್ಲವೆಂಬುದನ್ನು ಅವಳದೇ ಮಾತುಗಳ ಕಾವ್ಯಾಧಾರದ ಅಂತಃಪ್ರಮಾಣದ ಮೇಲೆ ಊಹಿಸಿ ಮಾತ್ರ ಹೇಳಬೇಕಾಗಿದೆ. ಅವಳು ಹಾಗೆ ಸೇರಿದ್ದ ಪಕ್ಷಕ್ಕೆ ಅವಳ ಸ್ಥಾನಮಾನಗಳ ಕುರಿತು ಕಾವ್ಯದಲ್ಲಿ ವ್ಯಕ್ತಾವ್ಯಕ್ತವಾದ ಸಂಗತಿಗಳೆಷ್ಟೋ ಏನೋ ಹೇಳುವುದು ಕಷ್ಟ. ಈ ಸಿದ್ಧ ಕಾವ್ಯಾಧಾರಗಳು ವಾದಿಪ್ರತಿವಾದಿಗಳಿಬ್ಬರೂ ಅನುಕೂಲವಾಗಿ ಉಪಯೋಗಿಸಿಕೊಳ್ಳುವಂತೆ ಕೇವಲ ಸಂದಿಗ್ಧಗಳಾಗಿವೆ ಎಂಬುದೇ ಈ ಸಮಸ್ಯೆಯ ನಿರ್ಣಯದಲ್ಲಿರುವ ತೊಡಕು. (ಅವೇ ಕಾವ್ಯಾಧಾರಗಳ ವೈಯಕ್ತಿಕ ವಿಶ್ಲೇಷಣದಿಂದ ಅವಳು ಅಂತಃಪುರವರ್ಗಕ್ಕೆ ಸೇರಿರದೆ ಸಂಚಿಯ ಊಳಿಗದವಳಾಗಿಯೇ ಇದ್ದಿರಬೇಕೆಂದು ನನ್ನ ವೈಯಕ್ತಿಕ ಅಭಿಪ್ರಾಯ).

ಸಂಚಿಯ ಹೊನ್ನಮ್ಮ ಕನ್ನಡಕಬ್ಬಿಗಿತಿಯರ ತಲೆವಣಿ, ಆ ಗುಂಪಿನ ಸಮರ್ಥ ಪ್ರತಿನಿಧಿ, ಮರೆಯಲಾಗದ ಹೆಸರು. ಧರ್ಮದ ತನಿಗಂಪು, ಕಾವ್ಯದ ಪೆರ್ಮೆ ಅವಳ ಕೃತಿಯಲ್ಲಿ ಸಮಸಮಾಯೋಗಗೊಂಡಿದೆ. ವಿಷಯ ಎಷ್ಟು ಗಂಭೀರ, ಶೈಲಿ ಅಷ್ಟು ಸರಳ. ಇಲ್ಲಿಯ ಸರಳ ಅರ್ಥಾಲಂಕಾರಗಳು ನೆಟ್ಟನೆ ಎದೆಗೆ ಮುಟ್ಟುವಂತೆ ಸುಂದರ ಶಬ್ದಾಲಂಕಾರಗಳು ತಟ್ಟನೆ ಕಿವಿಗೆ ತಟ್ಟುತ್ತವೆ. ಉಪಮೆ ರೂಪಕ ದೃಷ್ಟಾಂತಗಳು ಹಿತಮಿತವಾಗಿ ಬಂದಿವೆ; ಆದರೆ ಇವು ಹಿರಿಯರಲ್ಲಿ ಬಳಕೆಯಾಗಿ ಬಂದಿರುವ ನಾಣ್ಯಗಳೇ. ಮಾತಿಗೆ ಮಾತು ಮುತ್ತು ಪೋಣಿಸಿದಂತೆ ಹೊಂದಿಕೊಂಡು, ಯಮಕಾನುಪ್ರಾಸಗಳು ಅಪ್ರಯತ್ನವಾಗಿ ಒಂದನ್ನೊಂದು ತೂರಿಬಂದು, ಸುಂದರವಾಗಿ ಪದ್ಯಶಿಲ್ಪ ನಿರ್ಮಿತವಾಗುತ್ತದೆ. ಎಲ್ಲಿಯೂ ಅರ್ಥಕ್ಲೇಶದ ಶಬ್ದಗಳಿಲ್ಲ, ಭಾವಗಳಿಲ್ಲ. ಸಂಸ್ಕೃತ ಕನ್ನಡಗಳ ಹಿತಮಿತಮಿಶ್ರಣದ ಹದ ಕಾವ್ಯಕ್ಕೆ ವಿಶೇಷವಾದ ಚೆಲುವು ತಂದಿದೆ. ದೇಸಿಪದ ಪದ್ಧತಿಯಲ್ಲಿ ನಾವೀನ್ಯ, ಭಾವನಿರೂಪಣೆಯಲ್ಲಿ ಸ್ವಾತಂತ್ರ್ಯ ಎದ್ದು ಕಾಣುತ್ತವೆ. ಒಟ್ಟಿನಲ್ಲಿ ಈ ಕೃತಿ ಸ್ತ್ರೀಕವಿಯ ಲಲಿತ ಕೋಮಲ ಸ್ತ್ರೀಮನೋಧರ್ಮವನ್ನು ನಿಚ್ಚಟವಾಗಿ ಬಿಂಬಿಸುತ್ತದೆ. ಸಾಂಗತ್ಯ ಛಂದಸ್ಸಿನಲ್ಲಿ ಹೊನ್ನಮ್ಮನು ತೋರಿರುವ ನಯ ರುಚಿ ಪ್ರೌಢತೆ, ಶಬ್ದಾಲಂಕಾರ ವೈಖರಿ, ನಾದ ಮಾಧುರ್ಯ ಅರ್ಥಗುರುತ್ವ ಪ್ರಾಯಶಃ ಚಿಲ್ವಾಂಬೆ

ಯಲ್ಲಾಗಲಿ ಗಿರಿಯಮ್ಮನಲ್ಲಾಗಲಿ ಅಷ್ಟಾಗಿ ಕಾಣುವುದಿಲ್ಲ.

ಹದಿಬದೆಯ ಧರ್ಮ ೯ ಸಂಧಿಗಳು ೪೬೮ ಪದ್ಯಗಳು ಇರುವ ಒಂದು ಸಾಂಗತ್ಯಕೃತಿ. ಪ್ರತಿ ಸಂಧಿಯ ವಿಷಯ ವಿವರ ಹೀಗಿದೆ: ದೇವತಾ ಸ್ತುತಿ, ಮೈಸೂರರಸರ ಚರಿತ್ರೆ, ಆಶ್ರಯದಾತರಾದ ಪ್ರಭು ಪ್ರಭುಪತ್ನಿಯರ ಪ್ರಶಂಸೆ, ಕಾವ್ಯ ರಚನೆಗೆ ಪ್ರೇರಣೆ, ಪತಿವ್ರತಾಧರ್ಮದ ಮಹಿಮೆ (ಸಂಧಿ ೧); ಪತಿಪ್ರತೆಯರ ಹಿರಿಮೆ, ಮಾಹಾತ್ಮ್ಯ, ಏಕಪತ್ನಿಯ ಕಥೆಯ ಒಂದು ನಿದರ್ಶನ. (ಸಂಧಿ ೨); ಪತಿಶುಶ್ರೂಷೆ ಮತ್ತು ಪತಿಭಕ್ತಿ, ಪ್ರಾಚೀನರಾದ ಪತಿವ್ರತೆಯರ ಪ್ರಶಂಸೆ (ಸಂಧಿ ೩); ಸಾಧ್ವಿ ಮನೆಯ ಹಿರಿಯರನ್ನು ಆದರಿಸುವ ರೀತಿ, ಮನೆಯ ಹಿರಿಯರು ಸೊಸೆಯನ್ನು ನೋಡಿಕೊಳ್ಳುವ ರೀತಿ, ಮಕ್ಕಳನ್ನು ಸಾಧ್ವಿಯು ಸಲಹುವ ರೀತಿ, ನೆರೆಹೊರೆಯ ಸತಿಯರನ್ನು ಪುರಸ್ಕರಿಸಿ ಅಸತಿಯನ್ನು ದೂರವಿರಿಸುವ ರೀತಿ ಇತ್ಯಾದಿ (ಸಂಧಿ ೪); ಹೆಣ್ಣಿನ ಹೆಚ್ಚುಗಾರಿಕೆ, ತವರು ಮನೆಯವರು ಮಗಳನ್ನು ನೋಡಿಕೊಳ್ಳಬೇಕಾದ ರೀತಿ, ಅವಳ ಸುಖಬಾಳ್ವೆಗೆ ಮಾಡಬೇಕಾದ ಕರ್ತವ್ಯಗಳು (ಸಂಧಿ ೫); ಗಂಡು ಹೆಣ್ಣುಗಳು ಸುಖದಾಂಪತ್ಯ ನಡಸುವ ರೀತಿ (ಸಂಧಿ ೬); ಪತಿಯು ಅಗಲಿಕೆಯಲ್ಲಿ ಪತ್ನಿಯ ವಿರಹತಾಪದ ಚಿತ್ರ (ಸಂಧಿ ೭); ಹೆಣ್ಣಿನ ದಿನಚರಿಯ ಶ್ರೇಯಸ್ಕರವಾದ ಕಾರ್ಯಕಲಾಪಗಳು (ಸಂಧಿ ೮); ಸ್ತ್ರೀಯರು ಆಚರಿಸಬೇಕಾದ ಭಗವದ್ಭಕ್ತಿ, ಸತ್ಕರ್ಮನಿಷ್ಠೆ, ಪುರಾಣಪುಣ್ಯಕಥಾಶ್ರವಣ ಇತ್ಯಾದಿ,ಸಮಾಪ್ತಿವಾಕ್ಯಗಳು (ಸಂಧಿ ೯).

**ಶೃಂಗಾರಮ್ಮ (ಸು. ೧೬೮೫)**

ಈಕೆ ಶ್ರೀವೈಷ್ಣವ ಕವಿ. ತಂದೆ ಚಿಂತಾಮಣಿ ದೇಶಿಕೇಂದ್ರ. ಗುರು ಶ್ರೀನಿವಾಸ ದೇಶಿಕ ಅಥವಾ ಶ್ರೀನಿವಾಸಾಚಾರ್ಯ. 'ಕಂತುಗಿಮ್ಮಡಿರೂಪ ಚಿಕದೇವ ಭೂಪಾಲ ಸಂತವಿಸಿದ ಸಣ್ಣ ಮಗಳು' ಎಂಬುದರಿಂದ ಮೈಸೂರರಸ ಚಿಕದೇವರಾಜನ (೧೬೭೨–೧೭೦೪) ಪೋಷ್ಯವರ್ಗಕ್ಕೆ ಸೇರಿದವಳೆಂದು ತಿಳಿಯುತ್ತದೆ. ಇವಳ ಕೃತಿ ಪದ್ಮಿನೀ ಕಲ್ಯಾಣ. ಇದು ಸಾಂಗತ್ಯದಲ್ಲಿದೆ. ಪದ್ಯಸಂಖ್ಯೆ ೧೪೯. ಇದರಲ್ಲಿ ತಿರುಪತಿ ಶ್ರೀನಿವಾಸದೇವರಿಗೂ ಪದ್ಮಿನಿಗೂ ನಡೆದ ವಿವಾಹ ವರ್ಣನೆಯಿದೆ.

ಇವಿಷ್ಟು ಕವಿಚರಿತೆಕಾರರು ಕೊಟ್ಟಿರುವ ಕವಿಕಾವ್ಯ ವಿಚಾರ. ಪದ್ಮಿನಿಯ ಬಾಲ್ಯವನ್ನು ವಿವರಿಸುವ ೩ ಪದ್ಯಗಳನ್ನು ಆಕೆಯ ಗ್ರಂಥದಿಂದ ಉದಾಹರಿಸಿದ್ದಾರೆ. ಆದರೆ ಈಗ ಈಕೆಯ ಕೃತಿಯ ಹಸ್ತಪ್ರತಿಯಾಗಲಿ ಮುದ್ರಿತ ಪ್ರತಿಯಾಗಲಿ ಕಂಡುಬರುವುದಿಲ್ಲ.

## ಹದಿನೆಂಟನೆಯ ಶತಮಾನ

**ಚೆಲ್ವಾಂಬೆ (ಸು. ೧೭೨೫)**

ಈಕೆಯ ಕೃತಿಗಳಲ್ಲಿ ಈಕೆಯ ಹೆಸರನ್ನು ಚೆಲ್ವಾಜಮ್ಮ ಚೆಲ್ವಮಾಂಬೆ ಎಂದೂ ಹೇಳಿದೆ. ಈಕೆ ಮೈಸೂರು ದೊರೆ ದೊಡ್ಡಕೃಷ್ಣರಾಜನ (ಒಂದನೆಯ ಕೃಷ್ಣರಾಜ ಒಡೆಯರ್೧೭೧೩–೧೭೩೧) ಮಹಿಷಿ. ದಳವಾಯಿ ದೊಡ್ಡೇಂದ್ರನ ತನುಜ ಕಳಿಲೆ ಕಾಂತನೃಪನ ಮಗಳು. ಈಕೆಯ ಕೃತಿಗಳು: ವರನಂದಿಕಲ್ಯಾಣ, ವೇಂಕಟಾಚಲ ಮಾಹಾತ್ಮ್ಯಲಾಲಿಪದ, ಅಲರ್ಮೇಲು ಮಂಗೆ ಲಾಲಿಪದ, ತುಲಾಕಾವೇರೀ ಮಾಹಾತ್ಮ್ಯ ಟೀಕೆ, ಕೃಷ್ಣಕರ್ಣಾಮೃತ ಟೀಕೆ. (ಕರ್ಣಾಟಕ ಕವಿಚರಿತ್ರೆ III–೨೨ ಮತ್ತು ೪೭೨) ಮೊದಲ ಮೂರು ದೊರೆತಿವೆ. (ಓರಿಯಂಟಲ್ ಲೈಬ್ರರಿ, ಮ್ಯಾನುಸ್ಕ್ರಿಪ್ಟ್, ಕೆ. ೮೦.) ಆದರೆ ಇನ್ನೂ ಅಚ್ಚಾಗಿಲ್ಲ. ಉಳಿದವು ನಷ್ಟವೋ ಉಪಲಬ್ಧವೋ ತಿಳಿಯದು. ಈಕೆಯ ಕೃತಿಗಳೆಲ್ಲ ದೊರೆತು ಅಚ್ಚಾದರೆ ಕನ್ನಡ ಸಾಹಿತ್ಯದಲ್ಲಿ ಈಕೆಯ ಕಾಣಿಕೆಯನ್ನೂ ಸ್ಥಾನಮಾನಗಳನ್ನೂ ಸೂಕ್ತವಿಮರ್ಶೆಯಿಂದ ಗುರುತಿಸಬಹುದು. ಆಗ ಈಕೆಯ

ಹೆಸರು ಇತರ ಖ್ಯಾತ ಸ್ತ್ರೀಕವಿಗಳ ಹೆಸರಂತೆ ಒಂದು ಹೆಸರಾಗಿ ನಿಲ್ಲಬಹುದು. ಅವರೆಗೆ ಈಕೆ ಒಂದು ಹೆಸರು ಮಾತ್ರ !

ಕವಿಚರಿತೆಕಾರರು ಈಕೆಯ ನಾಲ್ಕು ಕೃತಿಗಳ ಸ್ಥೂಲಪರಿಚಯವನ್ನು ಕೊಟ್ಟಿದ್ದಾರೆ. (ಕರ್ಣಾಟಕ ಕವಿಚರಿತೆ III–೨೨). ಒಂದೆರಡು ಹೆಚ್ಚಿನ ಅಂಶಗಳನ್ನು ಇವಕ್ಕೆ ಕೂಡಿಸಬಹುದು.

೧. ವರನಂದಿ ಕಲ್ಯಾಣ* :— ೭ ಸಂಧಿ ೮೮೧ ಪದ್ಯಗಳಿರುವ ಒಂದು ಸಾಂಗತ್ಯ ಗ್ರಂಥ. 'ವರ್ಣಕ' ಎಂದು ಕರೆದಿದೆ. ಆದಿಯಲ್ಲಿ ಕವಿಯ ಇಷ್ಟದೈವ, ವೆಂಕಟೇಶನ, ಗುರು ಪರಕಾಲ ಗುರುವಿನ ಹೆಸರು ಬಂದಿದೆ. ಪತಿಯ ಅಪ್ಪಣೆಯಂತೆ ಕೃತಿರಚನೆ ಮಾಡಿದುದಾಗಿ ಹೇಳಿಕೊಂಡಿದ್ದಾಳೆ. ಪರಕಾಲ ಗುರುವಿನ ಅನುಜ್ಞೆಯಂತೆ ತಿರುವೆಂಕಟೇಶನಿಗೂ ಅಲರ್ಮೇಲು ಮಂಗೆಗೂ ಪ್ರಪತ್ತಿಯನ್ನು ಮಾಡಿ, ಅಚ್ಚಗನ್ನಡದ ಇನಿವಾತುಗಳಲ್ಲಿ, ವರ್ಣಕ ಮಾರ್ಗದಲ್ಲಿ ವರ್ಣಸಾನುಸಾರವಾಗಿ ಈ ಕೃತಿಯನ್ನು ಹೇಳುವುದಾಗಿ ಹೇಳಿಕೊಂಡಿದ್ದಾಳೆ. ಆಕೆಗೆ ಶ್ರೀವೈಷ್ಣವ ಧರ್ಮದಲ್ಲಿ ಭಕ್ತಿಶ್ರದ್ಧೆಗಳಿದ್ದುವೆಂದು ಇದರಿಂದ ತಿಳಿಯಬಹುದಾಗಿದೆ. ಇದರ ಕಥೆಯ ಹಂದರ ಹೀಗೆ: ದೆಹಲಿಯ ಬಾದಶಹನಿಗೆ ಮಕ್ಕಳಿರಲಿಲ್ಲ. ಅವನ ಮನೆ ಕಳಾಹೀನವಾಗಿತ್ತು. ದೈವಕೃಪೆಯಿಂದ ಅವನಿಗೆ ಸತ್ಯಭಾಮೆಯೇ ವರನಂದಿಯೆಂಬ ಮಗಳಾಗಿ ಹುಟ್ಟಿದಳು. ಆ ಮಗು ಅಸಾಧಾರಣಶಿಶು; ತಾಯ ಹಾಲನ್ನೊಲ್ಲದೆ ಎಣ್ಣೆಯುಣ್ಣುತ್ತಿತ್ತು! ಒಮ್ಮೆ ಅಶರೀರವಾಣಿಯಾಗಿ ಅದು ಅಲೌಕಿಕ ಶಿಶುವೆಂದೂ ಪರಮಾತ್ಮನನ್ನೇ ಲಗ್ನವಾಗುವಳೆಂದೂ ಬ್ರಾಹ್ಮಣ ಸ್ತ್ರೀಯರಿಂದ ಸ್ತನ್ಯಪಾನ ಮಾಡಿಸಬೇಕೆಂದೂ ಸೂಚಿಸುತ್ತದೆ. ಬಾಲಲೀಲೆಗಳಿಂದ ವರನಂದಿಯು ಬೆಳೆದು ದೊಡ್ಡವಳಾಗಿ ಯೌವನವನ್ನು ಆಲಿಂಗಿಸುತ್ತಾಳೆ. ಒಮ್ಮೆ ಬಾದಷಹನು ದಿಗ್ವಿಜಯ ಸಂದರ್ಭದಲ್ಲಿ ಕನ್ನಡನಾಡಿಗೆ ಬಂದಾಗ ಚೆಲುವ ಚೆನ್ನಿಗರಾಯನ ವಿಗ್ರಹವನ್ನು ಉಪಾಯಾಂತರದಿಂದ ತರಿಸಿಕೊಂಡು ಮಗಳಿಗೆ ಕೊಡುತ್ತಾನೆ. ಆ ವಿಗ್ರಹವೇ ಆಕೆಗೆ ಪತಿಯಾಗುತ್ತದೆ. ಮುಂದೆ ಶ್ರೀರಾಮಾನುಜರ ದಿವ್ಯದೃಷ್ಟಿಗೆ ವಿಗ್ರಹ ದೆಹಲಿಯಲ್ಲಿರುವುದು ಗೋಚರವಾಗಿ ಅವರು ಹಲವುರಾಜರ ದಂಡುಗಳನ್ನು ನಡಸಿಕೊಂಡು ಅಲ್ಲಿಗೆ ಹೊರಡುತ್ತಾರೆ. ಬಾದಷಹನು ಹೆದರಿ ಧನಕನಕಾದಿಗಳನ್ನು ಕೊಡುತ್ತಾನೆ; ಅವರು ಅಲ್ಲಿಯೇ ಕೆಲವು ಪವಾಡಗಳನ್ನು ಮೆರೆಯುತ್ತಾರೆ, ವಿಗ್ರಹವನ್ನು ತಮ್ಮೊಂದಿಗೆ ಕೊಂಡು ತೆರಳುತ್ತಾರೆ. ವರನಂದಿ ಆ ವಿಗ್ರಹವನ್ನೇ ಹಿಂಬಾಲಿಸಿ ಆ ದೇವರನ್ನೇ ಮದುವೆಯಾಗುತ್ತಾಳೆ.

ಈ ಕೃತಿಯ ಪದ್ಯಬಂಧ ಲಲಿತ, ಓಟ ಸರಾಗ. ಕಾವ್ಯಶಕ್ತಿ ಸಂಪ್ರದಾಯ ಶರಣ್ಯವಾದರೂ ಜೀವನಾನುಭವ ಸೀಮಿತವಾದರೂ ಕೆಲವು ವರ್ಣನೆಗಳು ಚೆನ್ನಾಗಿವೆ. ಉದಾಹರಣೆಗೆ ವರನಂದಿಯ ಬಾಲ್ಯ, ಯೌವನ, ವಿರಹಾರ್ತತೆ ಇತ್ಯಾದಿ. ಹೊನ್ನಮ್ಮನ ಪ್ರಭಾವ ತಕ್ಕಮಟ್ಟಿಗೆ ಚೆಲುವಾಂಬೆಯ ಮೇಲೆ ಆಗಿದೆ ಎಂದು ಈ ಕೃತಿಯ ಆಧಾರದ ಮೇಲೆ ಅಭಿಪ್ರಾಯ ಪಡಲಾಗಿದೆ. (ಹದಿಬದೆಯ ಧರ್ಮದ ಪೀಠಿಕೆ.)

೨. ವೇಂಕಟಾಚಲ ಮಾಹಾತ್ಮ್ಯ ಲಾಲಿ ಪದ* :— ಇದರಲ್ಲಿ ೨೦೩ ಲಾಲಿಪದಗಳಿವೆ. ವೇಂಕಟಾಚಲದ ಮಹಿಮೆಯನ್ನು ಯಮುನೆಯ ತೀರದ ಮುನಿಗಳಿಗೆ ಸೂತಮುನಿ ಹೇಳಿದನು. ಹಾಗೆಯೇ ವರಾಹರೂಪಿ ಶ್ರೀವಿಷ್ಣುವು ಭೂದೇವಿಗೆಪುರಾ

ಣೋಕ್ತ ಕಥೆಗಳನ್ನೊರೆದನು. ವೇಂಕಟಾಚಲದ ವೃಷಭಾದ್ರಿ ಶೇಷಾದ್ರಿ ಮೊದಲಾದ ಬೇರೆ ಬೇರೆ ಶಿಖರಗಳಿಗೆ ಸಂಬಂಧಪಟ್ಟ ಹಲವು ಕಥೆಗಳನ್ನು ಲಾಲಿಪದಗಳಾಗಿ ಇಲ್ಲಿ ಹೇಳಿದೆ. ಈ ಪದಗಳಿಗೆ ಗೇಯಾನಕೂಲವಾಗಿ ರಾಗ ಸಂಯೋಜನೆಯೂ ಉಂಟು. ಆದ್ಯಂತ ಪ್ರಾಸವಿರುವ ಚತುಷ್ಪದಿಗಳು ಇವು. ಇವು ಕರ್ಣಮಧುರವಾದ ಲಯಗತಿಯನ್ನು ಹೃದಯಂಗಮವಾದ ಲಲಿತಭಾವನೆಗಳನ್ನು ಒಳಗೊಂಡು ಹೆಂಗಳೆಯರನ್ನು ರಂಜಿಸುವ 'ಪುರಾಣ ಪುಣ್ಯಕಥೆ' ಯಾಗಿದೆ.

೩. ಅಲರ್ಮೇಲು ಮಂಗೆ ಲಾಲಿಪದ* :— ೩೫ ಪದಗಳಿವೆ. ಅಲರ್ಮೇಲು ಮಂಗೆಯ ಸರ್ವಾಂಗಸೌಂದರ್ಯವನ್ನು ಸರ್ವಗುಣಪರಿಪೂರ್ಣತೆಯನ್ನು ಸ್ತುತಿರೂಪದಲ್ಲಿ ಕವಿತೆಯಾಗಿ ರಚಿಸಿದೆ. ಲಕ್ಷ್ಮಿಯ ಸೌಂದರ್ಯವರ್ಣನೆ ಸಾಂಪ್ರದಾಯಕವಾದರೂ ತಕ್ಕಷ್ಟು ಚಮತ್ಕಾರದ ಕಲ್ಪನೆಗಳಿವೆ.

೪. ತುಲಾಕಾವೇರೀ ಮಾಹಾತ್ಮ್ಯ ಟೀಕೆ:– "ಇದು ಆಗ್ನೇಯ ಪುರಾಣೋಕ್ತ ತುಲಾಕಾವೇರಿ ಮಾಹಾತ್ಮ್ಯಕ್ಕೆ ಗದ್ಯರೂಪವಾದ ಕನ್ನಡ ವ್ಯಾಖ್ಯಾನ. ೩೦ ಅಧ್ಯಾಯಗಳಿವೆ. ಇದಕ್ಕೆ ಚೆಲುವಾಂಬಿಕಾವಾಣೀವಿಲಾಸವೆಂದು ಹೆಸರು. ಗ್ರಂಥಾಂತ್ಯದಲ್ಲಿರುವ ಒಂದು ಶ್ಲೋಕದಿಂದ ಚೆಲುವಾಂಬೆಯ ಅಂಕಿತದಲ್ಲಿ ಮೌದ್ಗಲ್ಯ ಗೋತ್ರದ ವೇಂಕಟಾರ್ಯನ ಮಗನಾದ ಶ್ರೀನಿವಾಸನು ಈ ಟೀಕೆಯನ್ನು ಬರೆದಂತೆ ತೋರುತ್ತದೆ". (ಕನ್ನಡ ಕವಿಚರಿತೆ III–೨೫.)

೫. ಕೃಷ್ಣಕರ್ಣಾಮೃತ ಟೀಕೆ :— ಇದರ ಬಗೆಗೆ ವಿವರ ತಿಳಿಯದು.

**ಹೆಳವನಕಟ್ಟೆ ಗಿರಿಯಮ್ಮ** (ಸು. ೧೭೫೦ ಅಥವಾ ೧೭೦೮(?) )
ಬ್ರಾಹ್ಮಣಕವಿ; ಹೆಳವನಕಟ್ಟೆ ರಂಗನಾಥನು ಇಷ್ಟದೈವ. ಆದರೆ ಹರಿಹರರಲ್ಲಿ ಸಮಾನ ಭಕ್ತಿ. ಮೈಸೂರು ಪ್ರಾಂತದ ಹರಿಹರದ ರಾಣಿಬೆನ್ನೂರು ಹುಟ್ಟೂರು. ಹರಿಹರದ ಬಳಿಯ ಕೊಮಾರನಹಳ್ಳಿಯಲ್ಲಿದ್ದಂತೆ ಪ್ರತೀತಿ. ತಂದೆ ಭಿಷ್ಟಪ್ಪ; ಪತಿ ತಿಪ್ಪರಸ. "ವಿವಾಹಿತೆಯಾಗಿದ್ದರೂ ವೈರಾಗ್ಯ ಶೀಲೆಯಾಗಿ ವಿಷ್ಣುಭಕ್ತಿಯಲ್ಲಿ ತನ್ಮಯಳಾಗಿ ಬಾಳಿದಳು" ಈಕೆ ಪರಮ ವೈರಾಗ್ಯನಿಧಿಯೂ ದೈವಸಾಕ್ಷಾತ್ಕಾರ ಪಡೆದ ಉಜ್ವಲ ದೈವಭಕ್ತಳೂ ಆಗಿದ್ದಂತೆ ದೈವಾಂಶ ಸಂಭೂತೆಯಾಗಿ ಹಲವು ಪವಾಡ ಕಾರ್ಯಗಳನ್ನು ಮೆರೆದಂತೆ ಇವಳ ವಿಷಯವಾಗಿ ಜನಸಾಮಾನ್ಯರಲ್ಲಿ ಪ್ರಚಾರವಾಗಿರುವ ಹಲವು ಕಥೆಗಳಿಂದ ತಿಳಿದುಬರುತ್ತದೆ. ಗ್ರಂಥಗಳು :— ಚಂದ್ರಹಾಸನ ಕಥೆ, ಸೀತಾಕಲ್ಯಾಣ, ಉದ್ದಾಳಿಕನ ಕಥೆ, ಹಾಡುಗಳು ಅಥವಾ ಕೀರ್ತನೆಗಳು. (ಬ್ರಹ್ಮಕೊರವಂಜಿ, ಗಜೇಂದ್ರಮೋಕ್ಷ, ಗಿಳಿಪಾರಿಜಾತ ಮುಂತಾದುವನ್ನೂ ಇವಳೇ ಬರೆದಿರಬಹುದೆಂದು ಕೆಲವರ ಊಹೆ.) ಈಕೆಯ ಮೂರು ಕೃತಿಗಳೂ ಕೆಲವು ಕೀರ್ತನೆಗಳೂ ದೊರೆತಿದ್ದು ಸೀತಾಕಲ್ಯಾಣವೊಂದನ್ನುಳಿದು ಉಳಿದುವೆಲ್ಲ ಅಚ್ಚಾಗಿದೆ.

ಈಕೆಯ ಕೃತಿಗಳಲ್ಲಿ ಹೆಳವನಕಟ್ಟೆ ರಂಗನಾಥನ ಅಂಕಿತವಿರುತ್ತದೆ. ಈಕೆಗೆ ಪ್ರಾಯಶಃ ಗುರುಮುಖದಿಂದ ಕ್ರಮವಾಗಿ ವಿದ್ಯಾಭ್ಯಾಸವಾಗಿರಲಾರದು. ಆದರೆ ಪೂರ್ವಕಾವ್ಯಗಳ ಪುರಾಣೇತಿಹಾಸಗಳ ಒಳ್ಳೆಯ ಪರಿಚಯವಿದ್ದಂತೆ ತೋರುತ್ತದೆ. ಇವಳ ಕಾವ್ಯಶಕ್ತಿ ನೈಸರ್ಗಿಕವೂ ಪ್ರಾಸಾದಿಕವೂ ಆಗಿದ್ದು ಭಾಗವತ ಕವಿಗಳಲ್ಲಿ ಕೆಲಮಟ್ಟಿಗೆ ಕುಮಾರವ್ಯಾಸನನ್ನು ನೆನಪಿಗೆ ತರು

ತ್ತಾಳೆ. "ಈಕೆಯ ಕೃತಿಗಳಲ್ಲಿ ಶುದ್ಧ ದೇಸಿಯ ಸರಳ ಸೌಂದರ್ಯವೂ ನಿರ್ವ್ಯಾಜವಾದ ಭಾವನಾ ಶಕ್ತಿಯೂ ಇದೆ" ಎಂಬುದು ದಿಟ. ಈಕೆ ಸೌಜನ್ಯ ಶಾಲಿಯಾದ ಕವಿ. ಕೃತಿರಚನೋದ್ದೇಶ ಪ್ರೌಢರಿಗೆ ರಮ್ಯಕಾವ್ಯಕಥನವಲ್ಲ; ಜನಸಾಮಾನ್ಯರಿಗೆ, ಅದ ರಲ್ಲಿಯೂ ಸ್ತ್ರೀಸಮುದಾಯಕ್ಕೆ ಭಕ್ತಿ ಮಾರ್ಗ ಪ್ರೇರಣ, ಸ್ವಕರ್ಮ ಖಂಡನ. ಈಕೆ ಕನ್ನಡ ಕಬ್ಬಿಗಿತಿಯರಲ್ಲಿ ಅಗ್ರ ಪಙ್ಕ್ತಿಯ ಭಕ್ತಕವಿ, ಸಮರ್ಥಕವಿ.

೧. ಚಂದ್ರಹಾಸನ ಕಥೆ :— ಇದು ಒಂದು ಜನಪ್ರಿಯ ಸಾಂಗತ್ಯಗ್ರಂಥ. ಇದರಲ್ಲಿ ೪ಸಂಧಿ ಗಳು ೩೫೫ ಪದ್ಯಗಳಿವೆ (ಕರ್ಣಾಟಕ ಕವಿಚರಿತೆ– ೫ ಸಂಧಿಗಳು, ೪೨೨ ಅಥವಾ ೪೩೧ ಪದ್ಯಗಳು) ಜೈಮಿನಿಭಾರತದ ಚಂದ್ರಹಾಸೋಪಾಖ್ಯಾನವೇ ಇದರ ಮೂಲ. ಅಲ್ಲಿಯ ಉಕ್ತಿಗಳನ್ನೂ ಭಾವನೆ ಗಳನ್ನೂ ಇಲ್ಲಿ ಹಿತಮಿತವಾಗಿ ಬಳಸಿಕೊಂಡಿದೆ. ಇದೊಂದು ಸರಳ ಸುಂದರ ಲಘುಕೃತಿ. ಕಥೆಯ ಹರವು ಸರಳ,ಓಟಸಲೀಲ, ಮಾತು ಲಲಿತ ಹಾಗೂ ರಸಮಯ ವರ್ಣನೆಗಳು ಚಿಕ್ಕವಾದರೂ ಚೊಕ್ಕ ವಾಗಿವೆ. ವಸ್ತು ಧಾರ್ಮಿಕವಾದರೂ ನಿರೂಪಣೆ ಕಾವ್ಯಮಯ. ಅರ್ಥಸೌಲಭ್ಯವಿರುವ ಸರಳ ಗನ್ನಡದ ಲಲಿತಕಾವ್ಯ ಇದು. ಸಂಕ್ಷೇಪವಾಗಿ ಕಥಾವಸ್ತು ಹೀಗಿದೆ: ಚಂದ್ರಹಾಸನು ಹುಟ್ಟಿದ ಹೊಸದರಲ್ಲಿಯೇ ತಾಯಿತಂದೆಗಳು ತೀರಿ ಕೊಂಡರು. ದಾಸಿ ಹಾಗೂ ಕೇರಿಯ ಹೆಂಗಳ ಕರುಣೆಯ ಕಂದನಾಗಿ ಹೇಗೋ ಕಷ್ಟದಲ್ಲಿ ಬೆಳೆ ದನು. ಕುಂತಳರಾಜ್ಯದ ಮಂತ್ರಿ ದುಷ್ಟಬುದ್ಧಿಯು ಈ ಅನಾಥ ಬಾಲಕನೇ ಮುಂದೆ ರಾಜ್ಯದ ಪ್ರಭು ವಾಗುವನೆಂಬುದನ್ನು ಬ್ರಾಹ್ಮಣ ಮುಖದಿಂದ ಕೇಳಿ ಅಸೂಯೆಗೊಂಡನು. ಚಂದ್ರಹಾಸನ ಕೊಲೆಗೆ ಅವನು ನಡೆಸಿದ ಪ್ರಯತ್ನಗಳೆಲ್ಲ ವಿಧಿ ವಿಲಾಸದಿಂದ ವಿಫಲವಾದವು. ಕೊನೆಗೆ ತನ್ನ ತಪ್ಪಿನಿಂದಲೇ ಅಚಾತುರ್ಯ ನಡೆದು ಸತ್ತ ಮಗ ನೊಡನೆ ತಾನೂ ಸತ್ತು ಚಂದ್ರಹಾಸನ ದಯೆ ದೈವ ಭಕ್ತಿಗಳ ಫಲವಾಗಿ ಬದುಕಿ ಬುದ್ಧಿಗಲಿತನು. ದೈವ ಭಕ್ತಿಯ ಹಿರಿಮೆ, ದೈವಶಕ್ತಿಯ ಮಹಿಮೆಯನ್ನು, ಹರಿಭಕ್ತನಾದ ಚಂದ್ರಹಾಸನ ದೃಷ್ಟಾಂತ ಕಥೆಯ ಮೂಲಕ ಜನಸಾಮಾನ್ಯರಿಗೆ ಪ್ರತಿಪಾದಿಸುವುದೇ ಈ ಕೃತಿಯ ಉದ್ದೇಶ.

೨. ಉದ್ದಾಳಿಕನ ಕಥೆ :— ಇದು ಇನ್ನೊಂದು ಜನಪ್ರಿಯವಾದ ಸಾಂಗತ್ಯಗ್ರಂಥ. ಪದ್ಯಸಂಖ್ಯೆ ೪೪೭. ಈ ಕಥೆಗೆ ರಾಮಾಯಣದ ಉತ್ತರಖಂಡ ಮೂಲವಾಗಿರುವಂತೆ ತೋರುತ್ತದೆ(?) ಈಗ ಹತ್ತಿ ಪ್ಪತ್ತು ವರ್ಷಗಳ ಹಿಂದೆ ಅಲ್ಲಲ್ಲಿ ಯಾರಾದ ರೊಬ್ಬರ ಮನೆಯಲ್ಲಿ ಹೆಂಗುಸರು ಗುಂಪುಗೂಡಿ ಈ ಕಥೆಯನ್ನು ಓದಿ ಓದಿಸಿ ಕೇಳುತ್ತಿದ್ದ ನೆನಪು ನನ ಗುಂಟು. ಅದು ಕಾಲಕ್ಷೇಪಕ್ಕೂ ಪುಣ್ಯಾರ್ಜನೆಗೂ ದಾರಿಯೆಂದು ಅವರು ಭಾವಿಸಿದ್ದರು. ಏಕೆಂದರೆ ಇಲ್ಲಿಯ ಕಥಾವಸ್ತು ಸ್ತ್ರೀಯರಿಗೆ ತುಂಬ ಆತ್ಮೀಯ ನಿರೂಪಣೆಯ ರೀತಿ ಸುಲಭವೇದ್ಯ ಮತ್ತು ಹೃದ್ಯ. ಸಾಂಸಾರಿಕ ಸುಖದುಃಖಗಳಿಂದ ಹದಗೊಂಡ ಸುಸಂಸ್ಕೃತ ಸ್ತ್ರೀಹೃದಯದ ಕೋಮಲಾಂತಃ ಕರಣ ಈ ಕಾವ್ಯದ ತುಂಬ ಆರಳಿ ಪರಿಮಳಿಸಿದೆ. ಕವಿಯು ಇಲ್ಲಿ ಸ್ತ್ರೀತ್ವದ ಸಾರಸರ್ವಸ್ವವನ್ನು ಹೃದಯ ಸ್ಪರ್ಶಿಯಾಗುವಂತೆ ತೆರೆದು ತೋರಿ ದ್ದಾಳೆ. ಇಲ್ಲಿಯ ವ್ಯಕ್ತಿಲೋಕ ಅತಿ ಸರಳ ಸ್ವಭಾವದ್ದು, ನಿತ್ಯ ಸಾಧಾರಣವಾದ್ದು. 'ಚಂದ್ರ ಹಾಸನ ಕಥೆ'ಗಿಂತ ಇಲ್ಲಿಯ ಕಾವ್ಯಗುಣ ಉತ್ತಮ ವಾದ್ದು, ಕಥೆ ಸ್ವಾರಸ್ಯವಾದ್ದು, ವರ್ಣನೆಗಳು ಚಿತ್ರವತ್ತಾದ್ದು. ಉಳಿದಂತೆಲ್ಲ ಚಂದ್ರಹಾಸನ ಕಥೆ ಯಂತೆಯೇ. ಸಾಂಗತ್ಯದ ಸವಿಸೊಗಸು ಇಲ್ಲಿ ಸೊಂಪಾಗಿ ಹರಡಿದೆ. ಸಾಮಾನ್ಯ ಸ್ತ್ರೀಪ್ರತೀಕ ವಾದ ಚಂದನಾವತಿಯ ಗರ್ಭಿಣೀ ಸಹಜವಾದ ಬಯಕೆ, ಅವಳ ಅರಣ್ಯರೋದನ, ಅವಳ ಮುಗು

ವಿನ ಬಾಲಲೀಲೆ, ಮದುವೆಯ ಸಮಾರಂಭ– ಇವೆಲ್ಲ ಸಹಜ ಸುಂದರವೂ ರಸಾರ್ದ್ರವೂ ಆಗಿದ್ದು ಗಿರಿಯಮ್ಮನ ಲೋಕಾನುಭವದ ನೈಜಚಿತ್ರಗಳಾಗಿವೆ. ಕಥೆಯ ಹಂದರ ಹೀಗೆ:—ಅಯೋಧ್ಯೆಯಲ್ಲಿ ರಘುಮಹಾರಾಜನು ಆಳುತ್ತಿದ್ದನು. ಇಲ್ಲಿಯೇ ಉದ್ದಾಳಿಕನೆಂಬ ಬ್ರಾಹ್ಮಣ ಒಬ್ಬನಿದ್ದನು. ಈತನು ಬ್ರಹ್ಮಚರ್ಯದಲ್ಲಿದ್ದು ದೀರ್ಘ ತಪಸ್ಸನ್ನು ಆಚರಿಸಿದನು. ಪುತ್ರನಿಂದ ಸಂತಾನ ಬೆಳೆಯದೆ, ಇವನ ಪಿತೃಗಳು ಸದ್ಗತಿಯಿಲ್ಲದೆ, ನರಕದಲ್ಲಿ ನರಳಬೇಕಾಯಿತು. ಆದ್ದರಿಂದ ಉದ್ದಾಳಿಕನು ಮದುವೆಯಾಗ ಬೇಕಾಯಿತು. ಆದರೆ ಮುದುಕನಿಗೆ ಹೆಣ್ಣು ಕೊಡುವವರು ಯಾರು? ತಾನೇ ಸತ್ಯಲೋಕಕ್ಕೆ ತೆರಳಿ ಬ್ರಹ್ಮನನ್ನು ಪ್ರಶ್ನಿಸಿದನು. ರಘುರಾಜಪುತ್ರಿ ಚಂದ್ರಾವತಿಯೇ ಇವನ ಭಾವಿ ಪತ್ನಿಯೆಂದೂ ಪುತ್ರೋದಯವಾದ ಏಳುವರ್ಷಗಳಿಗೆ ಅವಳು ಗೋಚರವಾಗುವಳೆಂದೂ ತಿಳಿದುಬಂತು. ಒಂದು ದಿನ ಚಂದ್ರಾವತಿ ಸಖೀಸಹಿತೆಯಾಗಿ ಉದ್ದಾಳಿಕನ ಆಶ್ರಮದೆಡೆಯ ಸರಸ್ಸಿಗೆ ಬಂದಳು. ಆ ವೇಳೆಗೆ ಗಗನಗಾಮಿನಿಯಾಗಿದ್ದ ರಂಭೆಯನ್ನು ನೋಡಿ ಋಷಿಗೆ ಇಂದ್ರಿಯಕ್ಷರಣೆಯಾಗಿ ವಿಧಿವಿಲಾಸದಿಂದ ಅದು ಚಂದ್ರಾವತಿಯ ಗರ್ಭವನ್ನು ಸೇರಿತು. ಕನ್ಯೆ ಚಂದ್ರಾವತಿ ಗರ್ಭಿಣಿಯೆಂದು ಸ್ವಲ್ಪ ಕಾಲದಲ್ಲಿಯೇ ತಿಳಿದ ತಾಯಿತಂದೆಗಳು ಭಯಗೊಂಡರು. ಲೋಕಾಪವಾದ ಭೀತಿಯಿಂದ ಅವಳನ್ನು ಕಟುಕರ ಕೈಗೊಪ್ಪಿಸಿ ಕೊಲೆಮಾಡಬೇಕೆಂದು ರಾಜಾಜ್ಞೆಯನ್ನು ಮಾಡಲಾಯಿತು. ಕಟುಕರು ಅವಳಲ್ಲಿ ಕರುಣೆಗೊಂಡು ಕೊಲ್ಲದೆ ಬಿಟ್ಟರು. ಆಕೆ ಹೇಗೋ ಮುನಿಯೊಬ್ಬನ ಆಶ್ರಮದಲ್ಲಿ ಸ್ವಲ್ಪ ದಿನಗಳಿದ್ದು ಒಂದು ಗಂಡುಮಗುವನ್ನು ಹಡೆದಳು. ಉದ್ದಾಳಿಕನ ಪಿತೃಗಳೇನೋ ಸ್ವರ್ಗವನ್ನು ಸೇರಿದರು. ಆದರೆ ಇತ್ತ ಚಂದ್ರಾವತಿ ಹೆದರಿ ಆ ರಾತ್ರಿಯೇ ನದಿಯಲ್ಲಿ ಮಗುವನ್ನು ತೇಲಿಬಿಟ್ಟಳು. ವಿಧಿಸಂಕಲ್ಪದಂತೆ ಮಗು ಮರುದಂಡೆಯತ್ತಣ ಉದ್ದಾಳಿಕನ ಕೈಸೇರಿತು. ಆ ಮಗುವನ್ನು ಆತನು ತನ್ನದೆಂದೇ ಗುರುತಿಸಿ ಅದನ್ನು ಏಳುವರ್ಷ ಬೆಳೆಸಿದನು. ಚಂದ್ರಾವತಿ ಅಲ್ಲಲ್ಲಿ ಅಲೆಯುತ್ತ ಅನಾಥ ಸ್ಥಿತಿಯಲ್ಲಿ ಅದೇ ಆಶ್ರಮಕ್ಕೆ ಬಂದು ಸೇರಿದಳು. ಮಗನನ್ನು ಗುರುತಿಸಿ ಹರ್ಷಿಸಿದಳು. ಆದರೆ ತಂದೆಯ ಭಯದಿಂದಾಗಿ ಬಾಲಕನು ಆಕೆಯನ್ನು ಆಶ್ರಮದಲ್ಲಿರಗೊಡಲಿಲ್ಲ. ಮುನಿಗೆ ಮಗನಿಂದ ವಿಷಯ ತಿಳಿದ ಮೇಲೆ, ಹಾಗೆ ಬಂದು ಹೋದವಳು ರಂಭೆಯೆಂದೇ ಭಾವಿಸಿ ಮುನಿವೃಂದದೊಡನೆ ತನ್ನ ಪೂರ್ವಸಂಗತಿಯನ್ನೆಲ್ಲ ಹೇಳಿಕೊಂಡನು. ಚಂದ್ರಾವತಿಯನ್ನೇ ಪ್ರತ್ಯೇಕವಾಗಿ ಮುನಿಗಳು ಪ್ರಶ್ನಿಸಲಾಗಿ ಇಬ್ಬರ ಹೇಳಿಕೆಗಳೂ ಸರಿಹೊಂದಿಕೊಂಡವು. ಅವರ ಪ್ರಯತ್ನ ಫಲಿಸಿ ರಾಜಧಾನಿಯಿಂದ ರಾಜರಾಣಿಯರೂ ಬಂದರು; ಮಗಳನ್ನು ಗುರುತಿಸಿ ಹರ್ಷಿಸಿದರು. ದೇವತೆಗಳು ಪ್ರತ್ಯಕ್ಷರಾಗಿ ಉದ್ದಾಳಿಕನಿಗೆ ದೀರ್ಘಾಯುಷ್ಯವನ್ನೂ ಯೌವನವನ್ನೂ ಅನುಗ್ರಹಿಸಿದರು. ಮದುವೆಯ ಮಂಗಳ ಜರುಗಿತು. ಉದ್ದಾಳಿಕನು ಪತ್ನೀಪುತ್ರರೊಡಗೂಡಿ ಆನಂದಿಸಿದನು.

'ಪುತ್ರನಿಲ್ಲದೆ ಸದ್ಗತಿಯಿಲ್ಲ' ಎಂಬ ಶ್ರುತಿತತ್ತ್ವವನ್ನು ಜನಸಾಮಾನ್ಯರಿಗೆ ಸಾರುವುದೇ ಈ ಕಥೆಯ ಉದ್ದೇಶ.

ಸೀತಾಕಲ್ಯಾಣ* :— ಇದರಲ್ಲಿ ಹಾಡಿನ ಮಟ್ಟಿನ ೮೭ ಪದ್ಯಗಳಿವೆ. ಪ್ರತಿಪದ್ಯವೂ ಜಯ ಜಯಾ ಎಂಬ ಮಾತಿನಿಂದ ಮುಗಿಯುತ್ತದೆ. ಇದರಲ್ಲಿ ಸೀತಾರಾಮರ ವಿವಾಹ ಪ್ರಸಂಗವನ್ನು ವರ್ಣಿಸಿದೆ. ಅದರಲ್ಲಿಯೂ ಮದುವೆಯ ೪ ದಿವಸ

ಗಳಲ್ಲಿ ಮದುವಣಿಗನಾದ ಶ್ರೀರಾಮನು ಮದುವಣಿಗಿತ್ತಿ ಸೀತೆಗೆ ಅರಿಸಿನೆಣ್ಣೆ ಮಾಡುವ ಪ್ರಸಂಗ ಇಲ್ಲಿ ಉಕ್ತವಾಗಿದೆ. ರಾಮನಿಗೆ ಅರಿಸಿನೆಣ್ಣೆ ಮಾಡಲು ಕೌಸಲ್ಯೆ ಕೇರಿಕೇರಿಯ ಮುತ್ತೈದೆಯರನ್ನು ಆಹ್ವಾನಿಸಿದ್ದು, ಸೀತೆಯು ರಾಮನ ಪಾದಗಳಿಗೆ ಅರಿಸಿನ ಹಚ್ಚುವ ಮುಚ್ಚಟೆ—ಇಂಥ ಕಡೆ ಗಿರಿಯಮ್ಮ ತಾನೇ ಕಂಡಿರಬಹುದಾದ ಆಧುನಿಕವೂ ಆತ್ಮೀಯವೂ ಆದ ವಿವಾಹದ ಚಿತ್ರವನ್ನು ಕೊಡುತ್ತಾಳೆ. ವಸ್ತು ಯಾವುದೇ ಇರಲಿ, ವರ್ಣನೆ ಯಾವುದೇ ಇರಲಿ, ತನ್ನ ವ್ಯಕ್ತಿವೈಶಿಷ್ಟ್ಯದ ಸ್ವಾನುಭವ ಸಂಪತ್ತಿಯ ಬಣ್ಣವನ್ನು ತುಂಬಿಸಿ, ಓದುಗರು ಅವುಗಳನ್ನು ಆತ್ಮೀಯತೆಯಿಂದ ಅನುಭವಿಸುವಂತೆ ಮಾಡುವ ಕವಿಪ್ರಕೃತಿ ಗಿರಿಯಮ್ಮನಿಗೆ ವಿಶೇಷ.

ಒಟ್ಟಿನಲ್ಲಿ ಕಾವ್ಯದೃಷ್ಟಿಯಿಂದ ಮಹತ್ತ್ವವಾದುದನ್ನು ಇಲ್ಲಿ ಕಾಣದೇ ಹೋದರೂ ಕವಿಯ ಸ್ತ್ರೀಸಹಜ ಕೋಮಲ, ಮನೋಧರ್ಮ, ದೈವಭಕ್ತಿ ಪ್ರೇರಿತವಾದ ಆಶುಕವಿವಾಣಿಯನ್ನು ಇಲ್ಲಿಯೂ ಕಾಣಬಹುದು. ಹೆಂಗಸರು ಹಬ್ಬಹರಿದಿನಗಳಲ್ಲಿ ಹಾಡಿಕೊಳ್ಳಲಿ, ಹಾಡಿ ಕೇಳಿಸಲಿ, ಪುಣ್ಯಸಂಪಾದನೆ ಮಾಡಲಿ ಎಂಬುದು ಕವಿಯ ಉದ್ದೇಶವೆಂದು ಹೇಳಬಹುದು.

ಹಾಡುಗಳು ಅಥವಾ ಕೀರ್ತನೆಗಳು :—

ಈಕೆ ರಚಿಸಿರಬಹುದಾದ ಕೀರ್ತನೆಗಳ ಸಂಖ್ಯೆ ಎಷ್ಟೆಂದು ತಿಳಿಯದು. ಕೆಲವು ದೊರೆತು ಅಚ್ಚಾಗಿವೆ. ಇವೆಲ್ಲ ಬಹುಮಟ್ಟಿಗೆ ಅಪ್ರಯತ್ನವಾಗಿ ಸಮಯಸ್ಫೂರ್ತಿಯಿಂದ ಹುಟ್ಟಿಬಂದ ಭಾವಗೀತೆಗಳನ್ನುವಂತಿವೆ. ರಾಗ ಸಂಯೋಜನವೂ ಉಂಟು. ಇಲ್ಲಿಯೂ ವಸ್ತು ಹರಿಭಕ್ತಿಯೇ ಆದರೆ ಅಲ್ಲಲ್ಲಿ ಹರಭಕ್ತಿಯೂ ವಸ್ತುವಾಗಿರುವುದುಂಟು. ಎಲ್ಲದೈವಗಳಲ್ಲಿಯೂ ಜಡಚೇತನಗಳಲ್ಲಿಯೂ ಗಿರಿಯಮ್ಮನು ಹೆಳವನಕಟ್ಟೆ ರಂಗಯ್ಯನನ್ನೇ ಕಾಣುತ್ತಾಳೆ. ಪರಮಾತ್ಮನಲ್ಲಿ ಆತ್ಮಾರ್ಪಣ, ಅವನ ದರ್ಶನಾನಂದ, ಕಲ್ಯಾಣಗುಣಸಂಕಥನ ನಾಮಸ್ಮರಣೆ, ಮೊದಲಾದವು ಈ ಕೀರ್ತನೆಗಳ ವಿವರ. ಅಲ್ಲಲ್ಲಿ ಸುಖದುಃಖಾನುಭವವಿಶೇಷಗಳೂ ವ್ಯಕ್ತವಾಗಿವೆ. ಕೆಲವು ಸಂದರ್ಭವಿಶೇಷಗಳಲ್ಲಿ, ತೀರ್ಥಯಾತ್ರಾ ಸಂದರ್ಭದಲ್ಲಿ, ಹೇಳಿದ ಹಲವು ಹಾಡುಗಳೂ ಉಂಟು. ಇಲ್ಲೆಲ್ಲ ಅವಳ ಹರಿಭಕ್ತಿಯಿಂದ ಆರ್ದ್ರವಾದಹೃದಯ, ಸ್ತ್ರೀಸಹಜ ಕೋಮಲಾಂತಃಕರಣ, ಕವಿಪ್ರಕೃತಿ ಇವುಗಳನ್ನು ನಾವು ಕಾಣಬಹುದು. ಇಲ್ಲಿಯ ಕೆಲವು ಕೀರ್ತನೆಗಳಲ್ಲಿ ಬೇರೆ ಬೇರೆ ಅಂಕಿತಗಳೂ ಇವೆ. ಕೆಲವು ಕೀರ್ತನೆಗಳು ಪ್ರೌಢವಾಗಿಯೂ ಇವೆ.

### ಮಹಾಲಕ್ಷ್ಮಿ (ಸು. ೧೭೫೦)

ಶ್ರೀರಾಮಪಟ್ಟಾಭಿಷೇಕವೆಂಬ ಗ್ರಂಥ ಮೊದಲೆರಡು ಬಾರಿ ಎಂದರೆ ೧೮೯೭, ೧೯೩೪ರಲ್ಲಿ ಪ್ರಕಟವಾದಾಗ ಮಹಾಲಕ್ಷ್ಮಿಯೆಂಬಾಕೆಯ ಹೆಸರಿನಲ್ಲಿ ಪ್ರಕಟವಾಯಿತು. ಈ ಕಾವ್ಯದ ಸಂಶೋಧಕರು ಇದು ಸ್ತ್ರೀಕವಿ ರಚಿತವಾದ್ದೆಂದೇ ಭಾವಿಸಿ ಪೀಠಿಕೆಯನ್ನೂ ಬರೆದರು. ಮೊದಲು ಕವಿಚರಿತೆಕಾರರು ಕೂಡ ಹೀಗೆಯೇ ಭ್ರಾಂತಿಪಟ್ಟು ೧೮ನೆಯ ಶತಕದ ಕವಿಗಳ ಸಾಲಿನಲ್ಲಿ ಈ ಹೆಸರನ್ನು ಸೇರಿಸಿದರು. ಆದರೆ ಮುಂದೆ ಈ ಗ್ರಂಥವು ೧೯ನೆಯ ಶತಕದ ಮುದ್ದಣನೆಂಬ ಆಧುನಿಕ ಕವಿ ರಚಿಸಿದ್ದೆಂದೂ ಆತನು ಕಾರಣಾಂತರಗಳಿಂದ ಇದನ್ನು ತನ್ನ ತಾಯಿಯ ಹೆಸರಿನಲ್ಲಿ ಬರೆದು ಪ್ರಸಿದ್ಧಿಸಲು ಯತ್ನಿಸಿದನೆಂದೂ (ಸಂಧಿ ೫ ಪದ್ಯ ೯೭ ಖಚಿತವಾಯಿತು. (ಹೀಗಿದ್ದರೂ ಇದು ಸ್ತ್ರೀಕವಿಕೃತವೆಂದೇ ಕೆಲವರು ಇನ್ನೂ ಭಾವಿಸಿದ್ದಾರೆ) ಆದುದರಿಂದ ಕವಿಕಾವ್ಯವಿಚಾರ ಅಪ್ರಸ್ತುತ.

## ಹತ್ತೊಂಬತ್ತನೆಯ ಶತಮಾನ

### ಸಿ. ಆರ್. ಚೆಲ್ಲಮ್ಮ (ಸು. ೧೯೦೦)

ಈಕೆ ಬ್ರಾಹ್ಮಣ ಕವಿ. ಕೃಷ್ಣಾ ಜಿಲ್ಲೆಯ ಇಕ್ಷುಗ್ರಾಮ (ಚೆಱುಕುಪಲ್ಲಿ?) ಎಂಬ ಸಣ್ಣ ಗ್ರಾಮದಲ್ಲಿ ಇರುತ್ತಿದ್ದ ಯೆಲ್ಲಾಪ್ರಗಡದ ವಂಶದ ಆಂಧ್ರ ಆರುವೇಲು ನಿಯೋಗಿಗಳ ಮನೆತನದಲ್ಲಿ ಹುಟ್ಟಿದ ರಾಮಯ್ಯ ಮತ್ತು ಸೀತಮ್ಮ ಎಂಬ ದಂಪತಿಗಳಿಗೆ ಈಕೆ ಮಗಳೆಂದೂ, ತಂದೆಯಾದ ರಾಮಯ್ಯನು ಉಪಜೀವನಕ್ಕಾಗಿ ಕರ್ಣಾಟಕದಲ್ಲಿ ಬಂದು ನೆಲೆಸಿದ ಮೇಲೆ ಇಲ್ಲಿಯೇ ತಾನು ಹುಟ್ಟಿದುದಾಗಿಯೂ, ಮೈಸೂರು ಮಹಾರಾಣಿ ಬಾಲಿಕಾ ಪಾಠಶಾಲೆಯಲ್ಲಿ ತಾನು ಉಪಾಧ್ಯಾಯಿನಿಯಾಗಿ 'ಶ್ರೀಹರಿಕಥಾಮೃತ ಭೂತಿ'ಯನ್ನು ಅನುಭವಿಸಿದ ಫಲವಾಗಿ ರುಕ್ಮಿಣೀ ಪರಿಣಯವೆಂಬ ಕಾವ್ಯವನ್ನು ತಾನು ರಚಿಸಿದುದಾಗಿಯೂ ಆ ಕೃತಿಯಲ್ಲಿ ಸ್ವವಿಚಾರವನ್ನು ಹೇಳಿಕೊಂಡಿದ್ದಾಳೆ. ಗ್ರಂಥಗಳು :— ರುಕ್ಮಿಣಿಯ ಪರಿಣಯ, ಪಾರಿಜಾತಾಪಹರಣ, ರಾಜಕಲಾನಿಧಿ, ವೈರಾಗ್ಯ ಮಂಜರಿ, ದ್ವಾದಶಮಂಜರೀ ಸ್ತೋತ್ರ, ಗೀತಿಕಾ ಲಹರಿ (ಕರ್ಣಾಟಕದ ಕವಿಚರಿತೆIII) ಇವುಗಳಲ್ಲಿ ಮೊದಲೆರಡು ಪ್ರಕಟವಾಗಿಬ್ದು ದೊರೆಯುತ್ತವೆ.

ರುಕ್ಮಿಣೀ ಪರಿಣಯ :—೫ ಆಶ್ವಾಸಗಳಿರುವ ಭಾಮಿನಿಷಟ್ಪದಿಕಾವ್ಯ. ೧೯೫೫ರಲ್ಲಿ ಮೈಸೂರಿನಲ್ಲಿ ಅಚ್ಚಾಗಿದೆ. ಕೃಷ್ಣರುಕ್ಮಿಣಿಯರ ವಿವಾಹ ಪ್ರಸಂಗವನ್ನು ಕುರಿತಿದೆ. ಕಥೆಯ ಗತಿಯಲ್ಲಿ ಚುರುಕಿದೆ. ವರ್ಣನೆಯಲ್ಲಿ ಗಾಂಭೀರ್ಯವಿದೆ. ಕೃಷ್ಣನಿಗಾಗಿ ಹಂಬಲಿಸುತ್ತಿದ್ದ ರುಕ್ಮಿಣಿಯ ವರ್ಣನೆ ಸ್ವಲ್ಪ ಹೃದ್ಯವಾಗಿದೆ. ಆದರೆ ಸಾಮಾನ್ಯವಾಗಿ ಅಲಂಕಾರ ರಮ್ಯತೆ, ಕಲ್ಪನಾಸಂಪತ್ತಿ ಕಾಣುವುದಿಲ್ಲ. ನಿರಾಡಂಬರವಾದ ಸಹಜೋಕ್ತಿ ಕೆಲವೆಡೆ ಚೆನ್ನಾಗಿದೆ. ಆಧುನಿಕ ಶಬ್ದಪ್ರಯೋಗಗಳಿವೆ. ಷಟ್ಪದಿಗಳ ರಚನೆಯಲ್ಲಿ ಶೈಥಿಲ್ಯವಿಲ್ಲದಿದ್ದರೂ ಪ್ರೌಢತೆಯಿಲ್ಲ, ಲಕ್ಷಣಾನ್ವಿತವಾಗಿದ್ದರೂ ಕೃತಕತೆಯಿದೆ. ಶೈಲಿ ಲಲಿತವೂ ಸುಲಭವೂ ಆಗಿದೆ. ಈ ಪುಟ್ಟಕಾವ್ಯದ ಬಗೆಗೆ ಕವಿಗೆ ತುಂಬ ಅಭಿಮಾನವಿದೆ.; ಕಾವ್ಯರಚನೆಯಲ್ಲಿ ಉತ್ಸಾಹವುಂಟೆಂದು ತಿಳಿಯಲವಕಾಶವಿದೆ. ಇದನ್ನು ಚಾಮುಂಡೇಶ್ವರಿಗೆ ಅರ್ಪಿಸಿದ್ದಾಳೆ.

ಪಾರಿಜಾತಾಪಹರಣ * :— ಇದು ೫ ಅಂಕಗಳಿರುವ ಒಂದು ನಾಟಕ. ೧೯೫೬ರಲ್ಲಿ ಮೈಸೂರಿನಲ್ಲಿ ಮುದ್ರಿತವಾಗಿದೆ. ನಾರದನು ಸ್ವರ್ಗದಿಂದ ತಂದು ಕೊಟ್ಟ ಪಾರಿಜಾತ ಪುಷ್ಪಕ್ಕಾಗಿ ಕೃಷ್ಣಸತಿಯರಾದ ರುಕ್ಮಿಣಿ ಸತ್ಯಭಾಮೆಯರಲ್ಲಿ ನಡೆಯುವ ಕಲಹ ಮತ್ತು ಸಮಾಧಾನದಲ್ಲಿ ಪರ್ಯವಸಾನ ಇಲ್ಲಿಯ ವಸ್ತು. ಕವಿ ವ್ಯಾಸರ ಹರಿವಂಶದಿಂದ ವಸ್ತುವನ್ನು ಆರಿಸಿಕೊಂಡು ನಾಟಕ ರೂಪದಲ್ಲಿ ಬರೆದಿರುವಂತೆ ಕವಿಯ ಅರಿಕೆ. ನಾಟಕದ ವಸ್ತು ನಿರೂಪಣೆಯ ರೀತಿ ಆದ್ಯಂತಗಳು ಹಳೆಯ ಸಂಸ್ಕೃತ ನಾಟಕಗಳ ಅಚ್ಚು. ಆದರೆ ಇದು ತಂತ್ರದಲ್ಲಿ ಅಲ್ಲದೆ ತಿರುಳಿನಲ್ಲಿ ಅಲ್ಲ. ಭಾಷೆ ಬಸವಪ್ಪ ಶಾಸ್ತ್ರಿಗಳ ಕನ್ನಡ ಶಾಕುಂತಲವನ್ನು ಕೆಲಮಟ್ಟಿಗೆ ನೆನಪಿಗೆ ತರುತ್ತದೆ. ಹಾಡಿಗೂ ಪದ್ಯಕ್ಕೂ ರಾಗ ನಿರ್ದೇಶನವಿದೆ. ಎಷ್ಟೋ ಕಡೆ ಹಾಡಿನ ಧಾಟಿಯಲ್ಲೇ ಸಂವಾದ ಜರುಗುತ್ತದೆ. ದೃಶ್ಯಗಳಲ್ಲಿ ನಾಟಕೀಯತೆಯಾಗಲಿ ಸನ್ನಿವೇಶಗಳಲ್ಲಿ ಸಹಜತೆಯಾಗಲಿ ಸಂಭಾಷಣೆಯಲ್ಲಿ ಗಾಂಭೀರ್ಯವಾಗಲಿ ಉಲ್ಲೇಖನಾರ್ಹವಲ್ಲ.

### ಮೇಲುಕೋಟೆ ರಾಜಮ್ಮ (ಸು. ೧೯೦೦)

ಈಕೆ ಮಾಧ್ವಳು. ಗ್ರಂಥಗಳು :—ದೂರ್ವಾಸ ಚರಿತ್ರೆ, ಅನಂತಪದ್ಮನಾಭ ಕಥೆ (ಹಾಡು.) ಇವು ಈಗ ದೊರೆಯುವುದಿಲ್ಲ.

**ವೆಂಕಟಲಕ್ಷ್ಮಮ್ಮ (ಸು. ೧೯೦೦)**

ಈಕೆ ಶ್ರೀವೈಷ್ಣವಳು. ಸ್ಥಳ—ಎಣ್ಣೆ ಹೊಳೆಕೊಪ್ಪಲು. ಗ್ರಂಥ—ಕೃಷ್ಣಪಾರಿಜಾತ. ಇದು ಈಗ ದೊರೆಯುವುದಿಲ್ಲ.

**ಸಿ. ಎಸ್. ಕಾಮಾಕ್ಷೀ ಅಮ್ಮಾ (ಸು. ೧೯೦೦)**

ಕವಿಕಾವ್ಯ ವಿವರ ತಿಳಿಯದು. ಗ್ರಂಥ—ಚಂದ್ರಾವಳೀ ವಿಲಾಸ ನಾಟಕ (೧೮೯೮).

**ಕ್ಯಾಂಬೆಲ್ (ಮಿಸೆಸ್) (ಸು. ೧೯೦೦)**

ಕವಿಕಾವ್ಯ ವಿವರ ತಿಳಿಯದು. ಗ್ರಂಥ—ದಿನದ ರೊಟ್ಟಿ (೧೮೫೭).

**ಕಿಬ್ಬಚ್ಚಲ ಮಂಜಮ್ಮ (ಸು. ೧೯೦೦)**

ಕವಿಕಾವ್ಯ ವಿವರ ತಿಳಿಯದು. ಗ್ರಂಥ—ವೇದಾಂತ ತತ್ತ್ವಸಾರ (೧೮೮೬).

**ವೆಂಕಟಸುಬ್ಬಮ್ಮ (ಸು. ೧೯೦೦)**

ಶೂದ್ರಳು, ಕೊಡಗು ಪ್ರಾಂತದವಳು ; ಹಾಡುಗಳನ್ನು ಬರೆದಿದ್ದಾಳೆ. (ಕರ್ಣಾಟಕ ಕವಿ ಚರಿತೆ III—೨೪೪) (ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶದ ಪು. ೧೬೦ ರಲ್ಲಿ ಕೊಟ್ಟಿರುವ ವಿವರ ಈ ಕವಿಯದೇ ಇರಟಹುದು. ಅದರ ಪ್ರಕಾರ: ಸ್ಥಳ—ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ. ಶೀಘ್ರ ಕವಿಯಿತ್ರಿ. ಸು. ೧೮೮೪ ರಲ್ಲಿ ಪ್ರಚಾರದಲ್ಲಿದ್ದ 'ಸುದರ್ಶನ' ಮಾಸ ಪತ್ರಿಕೆಯಲ್ಲಿ ದೇವರ ನಾಮುಗಳು ಪ್ರಕಟವಾಗಿವೆ. ಜನನ ಸು. ೧೮೬೦).

**ಶಾಂತಿಬಾಯಿ (ಸು. ೧೯೦೦)**

ಬ್ರಾಹ್ಮಣಿತಿ. ಉತ್ತರ ಕನ್ನಡ ಪ್ರಾಂತದವಳು. ಹಾಡುಗಳನ್ನು ಬರೆದಿದ್ದಾಳೆ. (ಕವಿ ಚರಿತೆ III) (ಸಿರಿಗನ್ನಡ ಗ್ರ‌ಂಥಕರ್ತರ ಚರಿತ್ರ ಕೋಶದ ಪು. ೧೭೮ ರಲ್ಲಿ ಕೊಟ್ಟಿರುವ ವಿವರ ಈ ಕವಿಯದೇ ಇರಬಹುದು. ಅದರ ಪ್ರಕಾರ: ತವರು ಶಿವಮೊಗ್ಗ ಜಿಲ್ಲೆಯ ಸಾಗರದ ಕೊಪ್ಪ; ಗಂಡನ ಮನೆ ಭಟಕಳ. ಕಲೆಗಳಲ್ಲಿ ಆಸಕ್ತಿ. ಅಧ್ಯಾತ್ಮದ ಕಡೆಗೆ ಒಲವು. ಗ್ರಂಥ—ಈಕೆಯ ಪುಣ್ಯ ಚರಿತ್ರೆಯನ್ನೊಳಗೊಂಡ 'ಅಭಂಗಗಳು ಮತ್ತು ಪದಗಳು' ೧೯೨೮ ರಲ್ಲಿ ಅಚ್ಚಾಗಿವೆ. ಜನನ. ೧೮೬೦ ; ಮರಣ. ೧೯೦೧.)

**ಹಾಡಿನ ರಂಗಮ್ಮ (ಸು. ೧೯೦೦)**

ಮಾಧ್ವಳು; ಸ್ಥಳ-ನಂಜನಗೂಡು. ಹಾಡುಗಳನ್ನು ಬರೆದಿದ್ದಾಳೆ.

**ಟಿ. ವಿ. ವೆಂಕಟಾಚಲಶಾಸ್ತ್ರೀ**

ಈ ಲೇಖನವನ್ನು ಸಿದ್ಧಪಡಿಸಲು ನನಗೆ ಹಲವು ವಿಧವಾಗಿ ನೆರವಾಗಿರುವ ಶ್ರೀಯುತರಾದ ಡಾ|| ಎಚ್. ಎನ್. ಎಲ್. ಶಾಸ್ತ್ರೀ, ಎನ್. ಬಸವಾರಾಧ್ಯ ಡಾ|| ಎಂ. ಚಿದಾನಂದಮೂರ್ತಿ, ಕೆ. ರಾಘವೇಂದ್ರರಾವ್, ಎನ್. ಸೂರ್ಯನಾರಾಯಣ ಇವರಿಗೂ, ನನಗಾಗಿ ಕೆಲವು ಕೃತಿಗಳ ಹಸ್ತಪ್ರತಿಗಳನ್ನು ನೋಡಿಕೊಳ್ಳಲು ಶ್ರೀ ಎಂ. ಚಿದಾನಂದಮೂರ್ತಿ ಅವರಿಗೆ ಅವಕಾಶವಿತ್ತ ಮೈಸೂರು ಪ್ರಾಚ್ಯಕೋಶಾಗಾರದ ಮುಖ್ಯಾಧಿಕಾರಿಗಳಾದ ಶ್ರೀ ಎಚ್. ದೇವೀರಪ್ಪ ಅವರಿಗೂ ನಾನು ಕೃತಜ್ಞತಾ ಪೂರ್ವಕವಾಗಿ ವಂದನೆಗಳನ್ನು ಸಲ್ಲಿಸುತ್ತೇನೆ. * ಈ ಗುರುತಿನ ಗ್ರಂಥಗಳ ವಿವರ ಶ್ರೀ ಎಂ. ಚಿದಾನಂದಮೂರ್ತಿಗಳದು.

# ಪಂಪಭಾರತದಲ್ಲಿಯ ಸೂರ್ಯೋದಯ ಸೂರ್ಯಾಸ್ತಗಳು

'ಪಸರಿಪ ಕನ್ನಡಕ್ಕೊಡೆಯನೊರ್ವನೆ ಪಂಪನಾವಗಂ' ಎಂಬ ಪ್ರಸಿದ್ಧಿ ಪಡೆದ ಪಂಪ ಮಹಾಕವಿಯ ಭಾರತ ಕಾವ್ಯಾಂಬರದಲ್ಲಿಯ ಸೂರ್ಯೋದಯ ಅಸ್ತಮಾನಗಳು ಸಚೇತನ ಸಜೀವಗಳಾಗಿವೆ. ಮಹಾಕಾವ್ಯದ ಅಷ್ಟಾದಶ ವರ್ಣನೆಗಳ ಶಿಷ್ಟಾಚಾರ ಪರಿಪಾಲನೆಗಾಗಿ ಬಂದ ಪೂರಕ ವರ್ಣನೆಗಳಲ್ಲ. ಕಾವ್ಯದ ಕಥಾಸಂದರ್ಭ ಸಮನ್ವಯವಾಗಿ ಬಂದ ಪರಿಣಾಮ ಪ್ರೇರಕಗಳಾಗಿವೆ. ಕರ್ಣನ ಪಡೆಮಾತಿನೊಳು ಪುದಿದು ಕರ್ಣರಸಾಯನಮಾದ ಮಹಾಭಾರತ ಕಥಾಕರ್ಷಕ ಕರ್ಣನ ಜನಕನಾಗಿ, ಸಜೀವ ಪಾತ್ರವಾಡಿದ್ದಾನೆ ಸೂರ್ಯ. ಆದುದರಿಂದ ಅವನ ಉದಯಾಸ್ತಮಾನಗಳು ಪ್ರಭಾವ ಪರಿಪೂರ್ಣವಾದವುಗಳು. ಕಥಾಪಾತ್ರಗಳ ಜಯ ಅಪಜಯ ಉನ್ನತಿ ಅವನತಿಗಳಿಗನುಸಾರವಾಗಿಯೂ, ಕೆಲವು ಸಲ ಭವಿಷ್ಯದ ಶುಭಾಶುಭಗಳ ವಿವರಣಾತ್ಮಕವಾಗಿಯೂ ಸೂರ್ಯ ಉದಯಾಸ್ತಮಾನಗಳಾಗುತ್ತವೆ. ಅಲ್ಲದೆ ಅಷ್ಟಾದಶ ಅಕ್ಷೋಹಿಣಿ ಸೇನೆಯನ್ನೊಳಗೊಂಡು ಅಷ್ಟಾದಶ ದಿನಗಳ ವರೆಗೆ ನಡೆದ ಕುರುಕ್ಷೇತ್ರ ಯುದ್ಧದ ಅನುದಿನದ ಆರಂಭ ಹಾಗೂ ಮುಕ್ತಾಯಗಳ ಸೂಚಕವಾಗಿಯೂ ಸೂರ್ಯನ ಮೂಡುವಿಕೆ–ಮುಳುಗುವಿಕೆಗಳಾಗುತ್ತವೆ. 'ಬೆಳಗುವೆನಿಲ್ಲಿ ಲೌಕಿಕಮಂ' ಎಂದು ಹೇಳಿದ ಪಂಪನು ಈ ವರ್ಣನೆಗಳಲ್ಲಿಯೂ ಲೌಕಿಕತೆಯ ಎರಕ ಹೊಯ್ದಿರುವದರಿಂದ ಕಾವ್ಯದ ಕಥೆಯ ಸಮಷ್ಟಿ ಸೌಂದರ್ಯ ಪೋಷಕಗಳಾಗಿವೆ. ಮಹಾಭಾರತ ಗೊಂಡಾರಣ್ಯದ ಪ್ರತಿ ಗಿಡ ಗಂಟೆ ಪಶುಪಕ್ಷಿ ಮೊದಲಾದವುಗಳ ಬಾಳ್ವೆ ಬೆಳವಣಿಗೆಗಳಿಗೆ ಪಂಪಕವಿಯ ಸೂರ್ಯೋದಯದ ಪ್ರಕಾಶ, ಅಸ್ತಮಾನದ ಅಂಧಕಾರಗಳು ಅತ್ಯಾವಶ್ಯಕವಾಗಿ ನಿಂತಿವೆ. ಕವಿಕುಲಗುರು ಕಾಳಿದಾಸನ ಶಾಕುಂತಲ ನಾಟಕದಲ್ಲಿ ಪ್ರಕೃತಿಯೂ ಪ್ರಮುಖಪಾತ್ರವನ್ನಾಡಿದಂತೆ ಕನ್ನಡ ಕವಿಕುಲಗುರು ಪಂಪನ ಮಹಾಭಾರತದಲ್ಲಿ ಕಥೆ ಇತಿಹಾಸದಲ್ಲಿ ಸೂರ್ಯನದು ಪ್ರಮುಖ ಪಾತ್ರವಿದೆ.

ಈ ಪ್ರಮುಖ ಪಾತ್ರದ ಮಹತ್ವವನ್ನು ನೋಡುವಾಗ ಘಟನೆಗಳ ಬೆಳಕಿನಲ್ಲಿ ನೋಡುವುದಕ್ಕಿಂತ ಪ್ರತ್ಯೇಕವಾಗಿ ಪಾತ್ರಗಳಿಗೆ ಸಂಬಂಧಿಸಿ ನೋಡಿದುದಾದರೆ ಅಂತರ್ಯದ ಸೌಂದರ್ಯ ಸಂದರ್ಭದ ಗಾಂಭೀರ್ಯ ಹೆಚ್ಚು ಎದ್ದು ತೋರುವುವು. ಸೂರ್ಯನ ಮಗ ಕರ್ಣನು ಮಹಾಭಾರತದ ಪಾತ್ರಗಳಿಗೆಲ್ಲ ಸಂಬಂಧಿಕನು, ಅಂತೆಯೇ ಕರ್ಣನಿಗೆ ಸಂಬಂಧಿಸಿ ಬಂದವುಗಳು ಅತ್ಯಂತ ರಸಸಿದ್ಧಿ ಪಡೆದವುಗಳಾಗಿವೆ.

**ಕರ್ಣನಿಗೆ ಸಂಬಂಧಿಸಿದ ಸೂರ್ಯ ಉದಯಾಸ್ತಗಳು.**

ತರುಣಿಯಾದ ಕುಂತಿಯು ದುರ್ವಾಸರಿಂದ ಪಡೆದ ಮಂತ್ರ ಪರೀಕ್ಷೆಗಾಗಿ ತರಣಿಯನ್ನು ಪ್ರಾರ್ಥಿಸಿ ಪ್ರತ್ಯಕ್ಷಪಡಿಸಿಕೊಳ್ಳುತ್ತಾಳೆ. ಆಗ ನಭೋಭಾಗದಿಂದ ಭೂಭಾಗಕ್ಕೆ ಇಳಿದು ಬಂದ ತರಣಿ ಕಾವ್ಯದಲ್ಲಿಯೂ ಪ್ರಥಮವಾಗಿ ಇಳಿದು ಬರುತ್ತಾನೆ.

ಸಮ್ಮುಖದಲ್ಲಿದ್ದ ಸೂರ್ಯನೊಡನೆ ಮಾತನಾಡದೆ ಲಜ್ಜಾಭರಿತಳಾಗಿ ಎದೆಗುಂದುತ್ತಾಳೆ ಕುಂತಿ. ಕರೆಸಿದ ಕಾರಣವನ್ನು ಕುಂತಿಯಿಂದ ಕೇಳಬೇಕೆಂಬ ಸೂರ್ಯನ ಆಶೆ ಪೂರೈಸಲಿಲ್ಲ. ಕುಂತಿಯ ಮುನ್ನಿನ ಮನೋಗತವನ್ನರಿತು

ಈಗಿನ ಅವಳ ಮನಸ್ಸಿನ ವಿರುದ್ಧವಾಗಿ ತನ್ನ ಶಕ್ತಿ ಸಮನ್ವಿತ ಸುತನನ್ನಿತ್ತನು. ಸೂಕ್ಷ್ಮ ದೃಷ್ಟಿಯಿಂದ ಈ ಪ್ರಸಂಗವನ್ನು ಪ್ರರೀಕ್ಷಿಸಿದಾಗ ಕರ್ಣನ ಭವಿಷ್ಯದ ದುರಂತದಲ್ಲಿ ಆದಿತ್ಯನೂ ಪಾಲುಗಾರನಾಗುತ್ತಾನೆ.

ಪಡೆದದ್ದನ್ನು ಪರೀಕ್ಷಿಸಿ, ಪ್ರಯೋಗಿಸಿ ನೋಡಬೇಕೆಂಬ ಕುತೂಹಲ ಕುಂತಿಗೆ ಮೂಡಿ ಸೂರ್ಯನನ್ನು ಪ್ರಾರ್ಥಿಸಿ ಪ್ರತ್ಯಕ್ಷ ಮಾಡಿಕೊಂಡಾಗ ಆ ಕುತೂಹಲವು ಭಯಾನಕವಾಗಿ ಪರಿಣಮಿಸಿತು. ಮಗನ ಪಡೆಯಬೇಕೆಂಬ ಮಮತೆ ಮಾಯವಾಯಿತು. ಅವಳ ಪ್ರಸ್ತುತ ಅಭೀಷ್ಟದಂತೆ ಸೂರ್ಯನು ಸುತನನ್ನೀಯದಿದ್ದರೆ ಕರ್ಣನ ಜನನವಾಗುತ್ತಿರಲಿಲ್ಲ. ವಿಧಿಯ ಬಂಧನದಗ್ನಿಗೆ ಬೆಂದು ಇಂಧನವಾಗುತಿರಲ್ಲಿಲ್ಲ ಕರ್ಣ. ಇದಲ್ಲದೆ ಅಭಿಮಾನಧನನಾದ ಸುಯೋಧನನ ವಲಕ್ಕೆ ಸೆಲೆಯಾದಗುತ್ತಿರಲಿಲ್ಲ. ಆ ಛಲಪ್ರವಾಹದ ಹುಚ್ಚುಹೊಳೆಯ ಕುರುಕ್ಷೇತ್ರ ಯುದ್ಧದಲ್ಲಿ ಕೌರವರು ಕೊಚ್ಚಿಕೊಂಡು ಹೋಗುತ್ತಿರಲಿಲ್ಲ. ಪಾಂಡವರೂ ಪಡಬಾರದ ಪರಿತಾಪಗಳನ್ನು ಪಡುತ್ತಿರಲಿಲ್ಲ.

> ಇಂತು ಸುಯೋಧನಂ ನಿನಗೆ ಮಾಡಿದ
> ರಾಜ್ಯವಿಭೂತಿಗುಂತೆ ಮು |
> ಯ್ಯಾಂತಿರದರ್ ಗುಣಾರ್ಣವನಿನಸ್ತ
> ಮಯಕ್ಕಿದು ಸಾಲ್ಗುಮಾಗಳೆಂ ||
> ಬಂತೆವೊಲಂದು ಮುಂದಣಿದು ತನ್ನ
> ಮಗಂಗೆ ಸಮಂತು ಬುದ್ಧಿವೇ |
> ಳ್ವಂತೆವೊಲತ್ತಲಸ್ತಗಿರಿಯಂ
> ಮರೆಗೊಂಡುದು ಸೂರ್ಯಮಂಡಲಂ. || ೨-೮೬

ಪಿತಾಮಹ ಗಾಂಗೇಯನ ನೇತೃತ್ವದಲ್ಲಿ ಗುರು ದ್ರೋಣಾಚಾರ್ಯರ ಶಿಷ್ಯರೆಲ್ಲರ ನಡೆದ ಧನುರ್ವಿದ್ಯಾ ಪರೀಕ್ಷೆಯಲ್ಲಿ ಅರ್ಜುನನ ಮೆರಗಿನಿಂದ ದುರ್ಯೋಧನ ಕೊರಗಿ ಮರುಗುತ್ತಿರುವಾಗ ಅವನ ಪ್ರಾಣವಾಗಿ ಬರುತ್ತಾನೆ ಕರ್ಣ. ಸೆಣಸುವುದಿದ್ದರೊ ಮುನಿಸು ಬಿಟ್ಟು ಮುಂದಕ್ಕೆ ಬಾ,ಎಂದು ಅರಿಗನನ್ನು ಆಹ್ವಾನಿಸಿ ಮೂದಲಿಕೆಯಿಂದಿರಿಯುತ್ತಾನೆ. ಕುಲಜನೊಡನೆ ಕುಲಹೀನನ ಕಲಹವೆ ಎಂದು ಕುಲಪುರೋಹಿತ ದ್ರೋಣಾಚಾರ್ಯರು ಕರ್ಣನ ಕುಲವೆತ್ತಾಡಲು,ದುರ್ಯೋಧನನ ಜೋಲುಬಿದ್ದ ನಾಲಗೆ "ಬೀರಮೇ ಕುಲಮಲ್ಲದೆ ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ" ಎಂಬ ಕುಲದ ನಿರ್ಣಯವನ್ನೀಯುತ್ತಿದೆ. ಕರ್ಣನನ್ನು ಕುಲಜನನ್ನಾಗಿಯೂ ಇಳಾಧಿಪತಿಯನ್ನಾಗಿಯೂ ಮಾಡುವೆನೆಂದು ಅವನಿಗೆ ಅಂಗ ರಾಜ್ಯ ಪಟ್ಟವನ್ನು ಕಟ್ಟುತ್ತಾನೆ ದುರ್ಯೋಧನ. ಈ ಸಮಯದಲ್ಲಿ ಸಹಜವಾಗಿ ಸೂರ್ಯಾಸ್ತವಾಗುತ್ತಿದೆ. ನಿತ್ಯದಂತೆ ಮೂಡಿದ ಸೂರ್ಯ ಮುಳುಗಲೇ ಬೇಕು. ತನ್ನ ಕರ್ತವ್ಯವನ್ನು ಮುಗಿಸಿ ಮುಳುಗುವ ದಿನಪನಿಗೆ ಅನುಪಮವಾದ ಕಲ್ಪನೆಯನ್ನು ಕವಿ ಕೊಟ್ಟಿದ್ದಾನೆ.

ನಿತ್ಯನಿಯಮದಂತೆ ಅಂಬರದಿಂದ ಅಪರವಾರ್ಧಿಗಿಳಿದ ಆದಿತ್ಯನು ತನುಜನ ಕಲ್ಯಾಣಕ್ಕಾಗಿ ಬಂದಿರುವನೆಂದು ಕವಿ ಎತ್ತಿತೋರಿಸಿದ್ದಾನೆ. ಸುಯೋಧನ ಕಟ್ಟಿದ ಅಂಗಪಟ್ಟ ಸರ್ವಸ್ವವೆಂದು ಗರ್ವಪಟ್ಟುಕೊಳ್ಳಬೇಡ. ನೀನು ಕಟ್ಟಿಕೊಳ್ಳುತ್ತಿರುವುದು ಐಶ್ವರ್ಯದ ಪಟ್ಟವಲ್ಲ, ನಿನ್ನನ್ನು ಕಟ್ಟಿ ಒಯ್ಯುವ ಚಟ್ಟ ಎಂದು ಸೂರ್ಯ ಸಾರಿ ಹೇಳುತ್ತಿದ್ದಾನೆ. ಕರ್ಣನ ಆಶಾಕ್ಷೀರ ನಿರಾಶಾಕ್ಷೀರವಾಗುವುದೆಂಬ ಸೂಚನೆಯನ್ನಿತ್ತಿದ್ದಾನೆ. ಮುಂದೆ ಕರ್ಣನಿಗೆ ಹುಟ್ಟಿನ ಗುಟ್ಟು ತಿಳಿದರೂ ಕಟ್ಟಿಕೊಂಡ ಪಟ್ಟದ ಹಟಕ್ಕಾಗಿ ಕಟ್ಟುಬಿದ್ದು ಬಾರದ ಬನ್ನದ ಬನಕ್ಕಾಗಿ ಹೋಗುತ್ತಿದ್ದಾನೆ ಕರ್ಣ. ಸೂರ್ಯನ ಅಸ್ತಮಾನವು ಕರ್ಣನ ಭವಿಷ್ಯದ ಅವಸಾನವನ್ನು ಅರುಹಿ ಸಾರ್ಥಕವಾಗಿದೆ, ಸತ್ವಯುತವಾಗಿದೆ.

ಲೌಕಿಕ ಜೀವನದಲ್ಲಿ ಗೆಳೆಯರು ಕೊಡುವ ಗೌರವಕ್ಕೆ ಒಳಗಾಗಿ ಅವರ ಪರವಾಗಿ ಅನ್ಯ

ರೊಡನೆ ಹೊಡೆದಾಡಿ ಪ್ರಾಣಕೊಡುವ ಪ್ರಸಂಗ ಗಳನ್ನು ಯಾವ ತಂದೆಯೂ ಪುರಸ್ಕರಿಸಲಾರನು. ಪ್ರತಿಬಂಧಕೋಪಾಯವಾಗಿ ಮುನ್ನೆಚ್ಚರಿಕೆಯನ್ನೀ ಯುತ್ತಾನೆ. ಆ ತಂದೆಯ ಕಾರ್ಯವನ್ನು ಕವಿ ರವಿಯಿಂದ ಇಲ್ಲಿ ಮಾಡಿಸಿದ್ದಾನೆ. ತಂದೆ ಕಂದಂ ಗಳ ಬಂಧುರ ಬಾಂಧವ್ಯದ ಬೆಸುಗೆಯನ್ನು ಬೆಸೆದಿದ್ದಾನೆ. ವಿಶ್ವವ್ಯಾಪಾರದಲ್ಲಿ ರವಿ ಕಾಣ ದ್ದನ್ನು ಕವಿ ಕಾಣುವನೆಂಬ ಹೇಳಿಕೆ ಇದ್ದರೂ ರವಿಯ ಜೀವನದರ್ಶನವನ್ನು ಕವಿ ಕಂಡಿದ್ದಾನೆ.

ಒಪ್ಪಿಸಿದೆಂ ಕೆಯ್ಯೆಡೆಯೆಂ |
ದಪ್ಪೈಸಿದ ನಿನ್ನ ಮಗನನೀಗಳೆ ನಿನಗೆಂ||
ದಪ್ಪೈಸಿಗಂಗೆ ಪೋಪುದು|
ಮೊಪ್ಪುವ ನಿಜಬಿಂಬದೊಳ್ ಗಣಿಂದಂ ದಿನಪ ||
೯. ೨೬

ಪೊಱಮಟ್ಟು ಬರಲ್ ತನ್ನಡಿ |
ಗೆಱಗಿದ ನಿಜಸುತನಕ್ಕಱುಂ ಪರಸಿ ಮನಂ ||
ಮಱುಗಿ ರವಿ ನುಡಿದನೆನ್ನುಮ |
ನುಬಿದೆ ಮರುಳ್ಮಗನೆ
ಹರಿಗೆ ತವಕವಚತುನಿತ್ತೈ ೯. ೨೨

ಪಾಂಡವಪ್ರೇಮಿ ಕೃಷ್ಣನು ಸಂಧಿಗಾಗಿ ಸುಯೋಧನನಲ್ಲಿಗೆ ಬಂದು ಅವಮಾನ ಹೊಂದು ತ್ತಾನೆ. ಆಗ ಕರ್ಣನನ್ನು ಕಂಡು ಅವನ ಕುಲ, ಬಲ,ಶೀಲ ಬಾಂಧವ್ಯಗಳ ಮೇಲ್ಮೆಯನ್ನು ಅರುಹು ತ್ತಾನೆ. ಪಾಂಡವರನ್ನು ಕೂಡಿಕೊಂಡು ಮಹಾ ರಾಜನಾಗಿ ಮೆರೆಯಲು ತಮ್ಮ ಪಕ್ಷಕ್ಕೆ ಬಾ ಎಂದೂ ಹೇಳುತ್ತಾನೆ. ಆದರೆ ಕೃಷ್ಣನ ಭೇದೋಪಾಯಕ್ಕೆ ಬೆದರದ, ಬಗ್ಗದ, ಕರ್ಣನು ತಾನುಂಡ ಒಡೆಯನ ಉಪ್ಪಿಗಾಗಿ, ತಾನು ಹಿಡಿದ ಸತ್ಯವ್ರತಕ್ಕಾಗಿ ಬಾಳಿ ಬದುಕನ್ನು ಸಾರ್ಥಕಗೊಳಿಸಿಕೊಳ್ಳುವೆನೆಂದು ಹೇಳುವನು. ನಿರುಪಾಯನಾದ ಕೃಷ್ಣನು ಕುಂತಿ ಯನ್ನು ಕರ್ಣನಲ್ಲಿಗೆ ಕಳಿಸುತ್ತಾನೆ. ತೊಟ್ಟ ಬಾಣ ತೊಡದೆ ಮಕ್ಕಳೈವರನ್ನೂ ತಲೆಗಾಯುವ ವರವನ್ನು ಪಡೆಯುವ ಪ್ರಮೇಯವನ್ನು ಕುಂತಿಗೆ ಬೋಧಿಸುತ್ತಾನೆ. ಪಂಚಪಾಂಡವರು ಕುಂತಿಯ ಮಕ್ಕಳಾದರೆ ಕರ್ಣನು ದಿನಪನ ಸುತ ನಲ್ಲವೆ ! ಕುಂತಿಗೆ ತನ್ನ ಮಕ್ಕಳೈವರಲ್ಲಿರುವಷ್ಟು ವಾತ್ಸಲ್ಯ ಸೂರ್ಯದೇವನಿಗೂ ನಿಜ ತನುಜನ ಮೇಲಿದೆ. ತನ್ನ ಸುತರ ಸುರಕ್ಷತೆಗಾಗಿ ಬಂದ ಕುಂತಿಗೆ ಪುರುಗಣೆಯನ್ನು ಕೊಡದಿರೆಂದು ಸೂರ್ಯ ತನ್ನ ಸುತನ ಸುರಕ್ಷತೆಗಾಗಿ ತಿಳಿಹೇಳುವ ಸಂದರ್ಭ ಸತ್ವಯುತವಾಗಿದೆ. ಅನಂತ ಕಿರಣನಿಗೆ ಅರ್ಘ್ಯ ವನ್ನು ಕೊಡುವುದಕ್ಕಾಗಿ ನದಿಯ ದಡದಲ್ಲಿ ಕರ್ಣ ನಿಂತಾಗ ನಿಸರ್ಗದ ನಿತ್ಯ ನಿಯಮದಂತೆ ಅನಂತ ಕಿರಣನು ಮೈವೆತ್ತು ಬರುತ್ತಿದ್ದಾನೆ. ಆದರೆ ಕವಿಯು ಕಂಡ ಸೂರ್ಯ ನಿಸರ್ಗ ನಿಯಮದಂತೆ ಮೂಡಿ ಬಂದು ಬುವಿಗೆ ಬೆಳಕನ್ನೀಯುವಂತೆ ಅದೇ ನಿಸರ್ಗ ನಿಯಮ ಬಂಧಿತನಾದ ತಂದೆ ಸೂರ್ಯನು ಪಾಂಡವರೈವರ ಪ್ರಾಣರಕ್ಷಣೆಗಾಗಿ ಬಂದ ಕುಂತಿಗೆ ಮಾತುಕೊಟ್ಟು ಮರುಳಾಗದಿರು ಮಗನೆ ಎಂದು ಬುದ್ಧಿಹೇಳಿ ಬಾಳಬೆಳಗಲು ಬಂದವನು ಆಗಿದ್ದಾನೆ. ಈ ಸೂರ್ಯಾಗಮನ ಸಂದರ್ಭ ದಿಂದ ಕಾವ್ಯಕ್ಕೆ ಕಳೆ ಏರಿದೆ. ಕಥಾ ಪಾತ್ರಧಾರಿ ಕರ್ಣನ ಜೀವನ ಮಾತೆಗೆ ಕೊಟ್ಟ ಮಾತಿನ ಸಂಕಟದಲ್ಲಿ ಸಿಲುಕಿ ಕೊನೆಗೊಳ್ಳುತ್ತಿದೆ ಎಂಬು ದನ್ನು ಪೂರ್ವಭಾವಿಯಾಗಿ ಸೂಚಿಸುತ್ತಿದೆ. ಲೌಕಿಕತೆಯ ಜೊತೆಯಲ್ಲಿ ಭವಿಷ್ಯದ ಭವ್ಯಚಿತ್ರ ವನ್ನು ತೋರಿಸುತ್ತದೆ.

ದಿವಿಜಾಧೀಶನ ಕೊಟ್ಟ ಶಕ್ತಿಯನದಂ|
ಕರ್ಣಂ ನರಂಗೆಂದು ಬೈ |
ಯಿತ್ತವನಿಂದಿಂದಱಿವೆಯ್ದವಂದೊಡದ
ಱಿಂದಿಂದಾತನಂ ಕೊಂದನಿ ||
ನ್ನಿವನಂ ಕೊಲ್ವುದು ಮೊಗ್ಗದರ್ಕಱಲವೇ
ಡೆಂಬನ್ನಮತ್ತೇಱಿದಂ |
ರವಿ ಪೂರ್ವಾಚಲಮಂ ನಿಜಾತ್ಮಜನ ಗೆಲ್ದು
ಗ್ರಾಜಿಯಂ ನೋೞ್ಪವೋಲ್ || ೧೨-೧೬

ಕೌರವ ಪಾಂಡವರ ಮತ್ಸರದ ಕಾಳ್ಗಿಚ್ಚು ಕುರುಕ್ಷೇತ್ರ ಯುದ್ಧವಾಗಿ ಪ್ರಜ್ವಲಿಸತೊಡಗಿದೆ. ಮಹಾಕಡುಗಲಿಯಾದ ಘಟೋತ್ಕಚನು ಕರ್ಣನಿ

ಗೆದುರಾಗಿ ನಿಂತಿದ್ದಾನೆ. ಹಗಲಿರುಳಿನ ಹೊತ್ತರಿಯದೆ ಸತತವಾಗಿ ಯುದ್ಧ ನಡೆದಿದೆ. ಇರುಳಲ್ಲಿ ಅರಿಗಳೊಡನೆ ಇರಿದಾಡುವದೆಂತು ಎಂದು ಧರ್ಮರಾಜ ಹೆದರಿದ್ದಾನೆ. ಇರುಳಲ್ಲಿಯೇ ಎದುರಾಳಿಗಳನ್ನು ಇರಿಯುವ ಆಳ್ತನ ರಕ್ಕಸರಲ್ಲಿ ಉಂಟೆಂದು ಹಿಡಿಂಬಾಸುತನನ್ನು ಕರ್ಣನಿಗೆದುರಾಗಿ ಕೃಷ್ಣ ನಿಲ್ಲಿಸಿದ್ದಾನೆ. ಆದರೆ ಕರ್ಣನೇನು ಸಾಮಾನ್ಯನೇ! ಇನತನಯನ ಬಾಣಾಘಾತದಿಂದ ಘಟೋತ್ಕಚನು ನೆಲಕ್ಕುರುಳುವಾಗ ಆತನ ಜಡದೇಹದ ಹೊಡೆತದಿಂದ ಒಂದು ಅಕ್ಷೋಹಿಣಿ ಸೇನೆ ಸಂಹಾರವಾಯಿತಂತೆ!

ತನ್ನ ಶಕ್ತ್ಯಾಯುಧದಿಂದ ಹಿಡಿಂಬಾಸುತನ ಮರಣವನ್ನುಂಟುಮಾಡಿದ, ಹಾಗೂ ಕೌರವ ಅರಸನಿಗೆ ಆನಂದವನ್ನಿತ್ತ, ಮಗ ಕರ್ಣನ ಮಹಾ ಪರಾಕ್ರಮವನ್ನು ಕಣ್ಣಾರೆ ಕಾಣಲೆಂದು ರವಿ ಬಂದನಂತೆ. ಯಾವ ತಂದೆಯು ಮಗನ ಅಪ್ರತಿಮ ಜಯವನ್ನು ನೋಡಿ ಆನಂದಪಡಲಾರ. ಈ ಸೂರ್ಯೋದಯದಲ್ಲಿ ಕೇವಲ ಲೌಕಿಕತೆಯಲ್ಲದೆ ಮಗನ ಅಭ್ಯುದಯ, ಶೌರ್ಯೋನ್ನತಿ, ಸೂಚಕವಾಗಿಯೂ ಇದೆ. ಸೂರ್ಯನು ನಮ್ಮ ದೃಷ್ಟಿಯಿಂದ ಅಲೌಕಿಕನಾದರೂ,ಸುತ ಪಿತರ ಸ ಷ್ಟಿಯ ಸಂಬಂಧವು ಲೌಕಿಕನನ್ನಾಗಿ ಮಾಡಿದೆ.

ಇನ್ನಿನಿಸನಿರ್ದೊಡಾಜಿಯೊ।
ಳೆನ್ನ ತನೂಜನುಮುನಟ್ಟಿಪಂ ನರನದ॥
ನಿನಾನ್ನೋಡಲಾಱೆನೆಂಬವೊ।
ಲನ್ನೆಗಮಸ್ತಾಚಳಸ್ಥನಾದಂ ದಿನಪಂ ೧೨-೮೮

ಸತ್ಕುಲದಲ್ಲಿ ಜನಿಸಿದ್ದರೂ ಸೂತನಾದನು. ಸಮರ್ಥಗುರುವಿನಿಂದ ವಿದ್ಯೆ ಪಡೆದಿದ್ದರೂ ಶಾಪದಾರಿಯಾದ ಸ್ವಶಕ್ತಿ ಸಾಮರ್ಥನಾಗಿದ್ದರೂ ಹೆತ್ತ ಮಾತೆಗೆ ಮಾತು ಕೊಟ್ಟು ಕೈಕಟ್ಟಿಕೊಂಡ ಮಗ ಕರ್ಣನು ಯುದ್ಧಭೂಮಿಯಲ್ಲಿ ರಥ ಸಾರಥಿಗಳಿಂದ ವಂಚಿಸಿಕೊಂಡು ಅಸಹಾಯಕನಾಗಿ ನಿಂತಾಗ ಅನ್ಯಾಯದಿಂದ ಅರ್ಜುನ ಬಾಣಮಳೆಯಲ್ಲಿ ಮುಳುಗಿ ಹೋಗುವ ಕನಿಕರ ದೃಶ್ಯವನ್ನು ಕಣ್ಮುಚ್ಚ ನೋಡಲಾರೆನೆಂದು ಸೂರ್ಯನ್ ಅಸ್ತಂಗತನಾದನಂತೆ. ಸೃಷ್ಟಿಯ ಸಹಜತೆಯ ಸೂರ್ಯಾಂತದಲ್ಲಿ ಕವಿಯು ಕನಿಕರದ ಕಡಲನ್ನು ಸೃಷ್ಟಿಸಿ ಕಥಾಸಂದರ್ಭಕ್ಕೆ ಶಕ್ತಿಯನ್ನಿತ್ತಿದ್ದಾನೆ. ಕರ್ಣನು ಭವಿಷ್ಯವರಿಯದೆ ದಾನಮಾಡುವಾಗ ತಾಯಿಗೆ ವಚನ ಕೊಡುವಾಗ ಸೂರ್ಯನಾಗಮಿಸಿ ಹಾಗೆ ಮಾಡದಿರು ಮರುಳ್ಮಗನೆ ಎಂದು ಹೇಳಿದರೂ ಯಾವುದನ್ನೂ ಬಗೆಯದುದಕ್ಕಾಗಿ ತನ್ನ ಪ್ರಾಣವನ್ನೇ ತೆತ್ತ ದಾನಶೂರ ಮಗನ ದುರಂತ ಸಾವನ್ನು ನೋಡುವ ಸಾಹಸ ಯಾವನಿಗಾದೀತು? ಅದರಲ್ಲಿಯೂ ಅನ್ಯಾಯದಿಂದ ಅರಿಗನು ಅಸಹಾಯಕನಾದ ಕರ್ಣನ ಮೇಲೆ ಬಾಣ ಎಸೆದು ಪ್ರಾಣಹರಣ ಮಾಡುವ ಸನ್ನಿವೇಶ ತಂದೆಯಾದ ಸೂರ್ಯನಿಗೆ ಕಳವಳವನ್ನೀಯದಿರಬಹುದೇ! ಹಂಸತೂಲಿಕಾತಲ್ಪದ ಮೇಲೆ ಮಲಗಬೇಕಾದ ಮಗನು ತಾಯಿಯ ತಪ್ಪಿನಿಂದ ಅವಳ ಕೈಯಿಂದಲೇ ಹೊಳೆಯಲ್ಲಿ ಬಿದ್ದು ತೆಪ್ಪದ ಮೇಲೆ ಪವಡಿಸಿ ತೇಲುತ್ತ ಹೋಗಿ ರಾಧೇಯನ ವಶವಾಗಿ, ಬಳೆದು ದುರ್ಯೋಧನನ ಬಾಳಿನ ಬೆಳಕಾಗಿದ್ದವನು, ಸ್ವಾಮಿಹಿತ, ಸಹೋದರರ ಸಂರಕ್ಷಣೆಗಳ ದ್ವಂದ್ವದ ದಾವಾಗ್ನಿಯ ದಳ್ಳುರಿಯಲ್ಲಿ ದಹಿಸಿ ಹೋಗುವ ದಾರುಣಾವಸ್ಥೆಯನ್ನು ಕಾಣುವುದು ಕಮಲಬಾಂಧವನಿಗೆ ಬೇಡವಾಗಿದೆ.

ಕವಿಯು ಇಲ್ಲಿ ಕಾವ್ಯಸತ್ಯದಲ್ಲಿ ಲೋಕಸತ್ಯವನ್ನು ಕೀಲಿಸಿದ್ದಾನೆ. ಸೂರ್ಯಕರ್ಣರ ಇರುವಂತೆ ಭೂಮ್ಯಾಕಾಶಗಳಷ್ಟು ಅಂತರವಾದರೂ ತಂದೆ ಮಕ್ಕಳ ಸಂಬಧವು ಕರುಳು ತೊಡಕಾದುದು, ನಿರಂತರವಾದುದು ಈ ಸೂರ್ಯಾಸ್ತವು ಮಹತೆಯಲ್ಲಿಯೂ ಮಾನವತೆಯನ್ನು ಮೇಳವಿಸಿ ಮಾರ್ಮಿ

ತವಾಗಿದೆ. ನೆಲಮುಗಿಲುಗಳಂತರವನ್ನು ತೊಡೆದು ಹಾಕಿದೆ.

> ಪಟಯಿಂಗೆಯನುಡುಗಿ ರಥಮಂ |
> ಪೆಱವನನೆಸಗಲ್ಕೆವೇೞ್ಕು ಸುತಶೋಕದ ಪೊಂ ||
> ಪುೞಿಯೊಳ್ ಮೆಯ್ಮಱಿಯದೆ ನೀ |
> ರಿೞಿವಂತೆವೊಲಿೞಿದನಪರಜಳಧಿಗೆ ದಿನಪಂ ||
> [೧೨-೨೨೦]

ಸೂತನ ಸಹವಾಸ ಅಪಮಾನವೆಂದು ಶಲ್ಯ ಸಾರಥಿತನ ಬಿಟ್ಟು ರಥವಿಳಿದು ಹೊರಟು ಹೋಗಿದ್ದಾನೆ. ಪೊಡವಿಯೂ ಕೂಡ ಮುನ್ನಿನ ಸೇಡನ್ನು ಈಡೇರಿಸಿಕೊಳ್ಳುವದಕ್ಕಾಗಿ ರಥದ ಚಕ್ರಗಳನ್ನು ಒಳಗೆ ಎಳೆದುಕೊಳ್ಳತೊಡಗಿದೆ. ಮೆಯ್ಗೆ ಮರೆ ಇಲ್ಲದೆ ಬಿಲ್ಲುಬಾಣಗಳಿಲ್ಲದೆ ಅಸಹಾಯನಾಗಿ ಎತ್ತುತಿರುವ ಕರ್ಣನ ಮೇಲೆ ಅರ್ಜುನನ ಬಾಣ ಪ್ರಯೋಗ ಸಾಗಿದೆ. ಕಪಟ ಕೃಷ್ಣನ ಪ್ರೇರಣೆಯಿಂದಾಗಿ. ಕರ್ಣನು ಅಣ್ಣನೆಂದು ಕಣ್ಣರಿಯದೆ ಕರುಳರಿತಿದ್ದರೂ ಬಾಣಮಳೆಗರೆದು ಕರ್ಣನ ಪ್ರಾಣ ಸೆಳೆದುಕೊಂಡ ಸಂದರ್ಭ ಸೂರ್ಯನ ಖೇದದ ಮನದ ಗಾಯದ ಮೇಲೆ ಬರೆ ಕೊಟ್ಟಂತಾಗಿದೆ; ಕಳವಳದ ಹುಣ್ಣನ್ನು ಕಂಬಿಯು ಕೀಲಿಸಿದಂತಾಗಿದೆ.

ತನ್ನ ಕೀರ್ತಿಯ ಧ್ವಜವಾದ ಸುತನೆ ಸತ್ತು ಹೋದ ಮೇಲೆ ಇನ್ನೇಕೆ ಧ್ವಜವೆಂದು ಸೂರ್ಯನು ತನ್ನ ರಥದ ಧ್ವಜವನ್ನು ಇಳಿಸಿ ಸುತನ ಶೋಕದಿಂದ ಎಚ್ಚರ ತಪ್ಪಿದವನಾಗಿ ಕಣ್ಣೀರ ಕಡಲಕ್ಕಿಳಿಯುವಂತೆ ಪಶ್ಚಿಮಗಡಲಕ್ಕಿಳಿದ ಚಿತ್ರ ಭಾವಪೂರ್ಣವಾಗಿದೆ ಅಪ್ರತಿಮ ವೀರನಾದ ಮಗ ವಿನಾಕಾರಣನಾಗಿ ಅಸಹಾಯ ಸ್ಥಿತಿಯಲ್ಲಿದ್ದಾಗ ವೈರಿಯಿಂದ ಕೊಲ್ಲಲ್ಪಟ್ಟರೆ ಯಾವ ಕರುಳು ಕಳವಳ ಪಡಲಾರದಿದ್ದೀತು? ಈ ಲೌಕಿಕ ಜೀವನದ ವ್ಯಾಪಾರವನ್ನು ಕವಿ ಈ ಸಂದರ್ಭದಲ್ಲಿ ಒಳ್ಳೆಯ ಕಲಾವಂತಿಕೆಯಿಂದ ಹೆಣೆದಿದ್ದಾನೆ. ಕವಿಯೂ ಮಾನವ ಜೀವಿ. ಅವನ ರಾಜಧರ್ಮವು ಮನವನ್ನು ಕಥಾನಾಯಕ ಅರ್ಜುನನ ಕಡೆಗೆ ಎಳೆಯುತ್ತಿದ್ದರೂ ಮನೋಧರ್ಮವು ಕರ್ಣನ ಕಡೆಗೆ ಸೆಳೆಯುತ್ತಿದೆ. ಬೇಡದ ಮಗುವಾಗಿ ಮೂಡಿಬಂದು ಕೊನೆಯಲ್ಲಿ ಕೌರವ ಪಾಂಡವ ಕಲಹದ ಕಾಳ್ಗಿಚ್ಚಿನಲ್ಲಿ ಬಾಡಿ ಹೋದ ಕರ್ಣನ ಕನಿಕರ ಸ್ಥಿತಿ, ಕವಿಯ ಕೋಮಲ ಹೃದಯವನ್ನು ನೊಂದಿಸಿದೆ. ಅಂತೆಯೇ ಕರ್ಣನ ಜೀವನವು ನಂದಾದೀವಿಗೆಯಾಗಿ ಕಾವ್ಯದಲ್ಲಿ ಬೆಳಗಬೇಕಾದರೆ ನೊಂದ ಹೃದಯದಿಂದ ಕವಿ ತೈಲವನ್ನೀಯುತ್ತಿದ್ದಾನೆ.

ಕರ್ಣಕಿರಣಾರ್ಣವರಿರ್ವರು ತಂದೆ ಮಕ್ಕಳಾದುದರಿಂದ ರವಿನಂದನನ ಪ್ರತಿ ಘಟನೆಯಲ್ಲಿಯೂ ರವಿಯು ಸಮಾಹಿತನಾಗಿದ್ದಾನೆ. ಕರ್ಣನ ಹರುಷದಲ್ಲಿ ಸಮಭಾಗಿಯಾದಾಗ ಅಂಬರಾರೋಹಣ ಅವನತಿಯಲ್ಲಿ ಅಂಬರಾರೋಹಣ ಆಗುತ್ತಾನೆ. ಸುಖದುಃಖಗಳಲ್ಲಿ ಭವಿಷ್ಯದ ಹಿತಾಹಿತಗಳನ್ನು ಶುಭಾಶುಭಗಳನ್ನು ತನ್ನ ಉದಯಾಸ್ತಮಾನಗಳಿಂದ ಸೂಚಿಸುತ್ತಾನೆ. ಕರ್ಣನ ಜನನ ತಾಯಿಗೆ ಕೊಡುವ ವಚನ, ಪಟ್ಟಬಂಧನ, ಮರಣ ಮೊದಲಾದ ಘಟನೆಗಳಲ್ಲೆಲ್ಲ ಉದಯಾಸ್ತಗಳಿಂದ ಉಪಸ್ಥಿತನಾಗಿರುತ್ತಾನೆ.

> ದಿನಕರನುಮಿಂದ್ರನುಂ ನಿಜ |
> ತನಯರ ದೆಸೆಗೞಿಗಿದೆೞಕದಿಂ ಗೆಲವಿನ ಮಾ ||
> ತನೆ ನುಡಿಯೆ ನುಡಿದ ಜಗಳವು |
> ದಿನಿಸಾನುಂ ತ್ರಿಪುರಹರನ ಕಿವಿಗೆಯ್ದುವುದುಂ ||
> [೧೨-೧೪೨]

ಈ ಸೂರ್ಯೋಪಸ್ಥಿತ ಈ ಸಂದರ್ಭವು ಸುತಪಿತರ ಮೈತ್ರಿಯನ್ನು ಮೂರ್ತಿಗೊಳಿಸುತ್ತದೆ. ಪಾರ್ಥ ಕರ್ಣರಿರ್ವರಿಗೂ ಯುದ್ಧ ನಡೆದಿದೆ.

ನೋಡಲು ಭೂಭಾಗದ ಜನವೆಲ್ಲಾ ಒಡಗೂಡಿ ನಿಂತಿದೆ ಕುರುಕ್ಷೇತ್ರ ರಣಾಂಗಣದಲ್ಲಿ. ಆದರಂತೆ ಆಕಾಶದಲ್ಲಿಯೂ ದೇವತೆಗಳು, ದೇವೇಂದ್ರ, ಮುನೀಂದ್ರ, ನಾರದ, ದಿವಸೇಂದ್ರ, ಮೊದಲಾದವರು ನೆರೆದಿದ್ದಾರೆ. ಕರ್ಣ ಗೆದೆಯುವನೆಂದು ತಂದೆ ಕಿರಣಾರ್ಣವನ ಚೀತ್ಕಾರ. ಪುತ್ರ ನರೇಂದ್ರ ಗೆದೆಯುವನೆಂದು ದೇವೇಂದ್ರನ ಪೂತ್ಕಾರ ನಡೆದು ಕದನವಾಗಿ ಮಾರ್ಪಟ್ಟು ಶಿವನಲ್ಲಿಗೆ ದೂರು ಹೋಗುತ್ತದೆ. ತನ್ನ ಭಕ್ತನೆಂಬ ವಾತ್ಸಲ್ಯದಿಂದಲೋ ಅಥವಾ ತ್ರಿಕಾಲಜ್ಞಾನಿಯಾದುದರಿಂದಲೋ ಶಿವನು ದೇವೇಂದ್ರನ ಅಭಿಪ್ರಾಯ ಪಕ್ಷಕ್ಕೆ ಹೊಂದಿಕೊಂಡನು. ಅಲ್ಲದೆಯೇ ಸೂರ್ಯನ ಉತ್ಸಾಹಕ್ಕೆ ತಣ್ಣೀರೆರಚಿದನು. ನನ್ನನ್ನು ಗೆದ್ದ ನರೇಂದ್ರನನ್ನು ಕರ್ಣ ಗೆದಿಯುವನೆಂದು ಹೇಳಬೇಕಾದರೆ ಸೂರ್ಯನೇ ನಿನಗೆ ಮಂಕು ಹಿಡಿದಿದೆ. ಹಗಲಿನಲ್ಲಿಯೇ ನಿನಗೆ ಕತ್ತಲೆ ಆವರಿಸಿದೆ ಎಂದನು ಶಿವನು.

### ಪಾರ್ಥನಿಗೆ ಸಂಬಂಧಿಸಿದ ಸೂರ್ಯೋದಯ ಸೂರ್ಯಾಸ್ತಗಳು.

ಕಿರೀಟಿಯು ಕಥಾನಾಯಕನೂ ಕರ್ಣನ ಸಹೋದರನೂ ಕರ್ಣನ ಪ್ರಾಣಾಪಹರಣನೂ ಆದುದರಿಂದ ಸೂರ್ಯನ ಸಂಬಂಧ ಉಂಟಾಗಬೇಕಾದುದು ಸಮಂಜಸವೂ ಸ್ವಾಭಾವಿಕವೂ ಆಗಿದೆ. ಕಿರೀಟಿಯ ನಲಿವು, ನೋವು, ಗೆಲವು ಸೋಲುಗಳಿಗನುಸಾರವಾಗಿ ಸೂರ್ಯನ ಉದಯಾಸ್ತಮಾನಗಳಾಗುತ್ತವೆ. ಅಂತ್ಯದಲ್ಲಿ ಸಾಮ್ರಾಜ್ಯ ಪಟ್ಟಬಂಧಿತನಾಗಿ ಸಿಂಹಾಸನಾರೋಹಿತನಾಗುವುದರಿಂದ ಉದಯಮಾನಗಳೇ ಅಧಿಕ. ಅಸ್ತಮಾನಗಳು ಒಂದೆರಡು ಬಂದದ್ದಾದರೂ ವಿರೋಧಿ ನಾಯಕರ ಅಧಃಪತನಕ್ಕಾಗಿದ್ದು ಅದರೊಂದಿಗೆ ಕಿರೀಟಿಯ ಉದಯವನ್ನೂ ಸೂಚಿಸುತ್ತವೆ. ಕರ್ಣನ ಜೀವನದಲ್ಲಿ ಹಾಸು– ಹೊಕ್ಕು ಬರುವಂತೆ ಇಲ್ಲಿ ಬರಲಾರವು.

> ಪುದಿದ ತಮಂ ಪದೀಯು ಕಿರಣಾಳಿಯು
> ನಾನದವೋಲೆ ನಿನ್ನನಾ
> ವದಟರುಮಾನರೆನ್ನುದಯಮಭ್ಯುದಯಂ
> ನಿನಗೆಂದು ಕನ್ನೆಯಂ ||
> ಪದೆದೊಡಗೊಂಡು ಪೋಗಿರದಿರೆಂದು
> ಗುಣಾರ್ಣವ ಭೂಭುಜರಿಗೆ ಕ|
> ಟ್ಟದಿರೊಳೆ ಬಟ್ಟೆದೋಱುವವೊಲಂದೊಗೆದಂ
> ಕಮಲೈಕಬಾಂಧವಂ || [೪-೧೧೧]

ದ್ವಾರಕೆಗೆ ಬಂದ ಅರ್ಜುನನು ಸುಭದ್ರೆಯ ಸೌಂದರ್ಯದ ಸೆರೆಯಾಳಾಗಿದ್ದಾನೆ. ಕಾಮದ ಕಾವಿನಿಂದ ದೇಹ ದಹಿಸತೊಡಗಿದೆ. ಹೊರಳಿ ಹೊರಳಿ ಮಲಗಿದರೂ ಮರಳಿ ಮರಳಿ ಸುಭದ್ರೆಯ ಚಿತ್ರ ಕಣ್ಮುಂದೆ ಕಟ್ಟುತ್ತದೆ. ಬೆಳಗಿನ ಕೊನೆಯ ಗಳಿಗೆಯ ಸ್ವಪ್ನದಲ್ಲಿ ಸುಭದ್ರೆಯನ್ನು ಸಂಧಿಸಿದಂತಾಗುತ್ತದೆ. ಆ ಸಮಯದಲ್ಲಿ ಸೂರ್ಯೋದಯವಾಗುತ್ತದೆ. ಕತ್ತಲೆಯು ನನ್ನ ಕಿರಣಕ್ಕೆ ಹೆದರಿ ಹರಿದು ಹೋಗುವಂತೆ ನಿನ್ನ ಶೌರ್ಯಕ್ಕೂ ವಿರೋಧಿಗಳು ಬೆದರಿ ಕಾಲಿಗೆ ಬುದ್ಧಿ ಹೇಳುತ್ತಾರೆ. ನಿನ್ನನ್ನು ಪರಾಭವಗೊಳಿಸುವ ಪರಾಕ್ರಮಿಯು ಇನ್ನಾರಿಲ್ಲ. ನಿನ್ನ ಹಂಬಲದ ಹವಳ, ನೆನಕೆಯ ನವನೀತ, ಕನಸಿನ ಕೆಳದಿ, ಆದ ಸುಭದ್ರೆಯನ್ನು ಒಡಗೂಡಿ ಹೊರಟು ಹೋಗು. ನನ್ನುದಯವೇ ನಿನ್ನಭ್ಯುದಯವೆನ್ನುವಂತೆ ಸೂರ್ಯನು ಉದಯಿಸಿ ಬಂದನಂತೆ.

ಬಲರಾಮನ ಬಯಕೆಯಂತೆ ದುರ್ಯೋಧನನ ಧರ್ಮಪತ್ನಿಯಾಗಲಿರುವ ಸುಭದ್ರೆಯು ಕೃಷ್ಣನ ಕಪಟತನದಿಂದ ಅರ್ಜುನನ ಅರ್ಧಾಂಗಿಯಾಗುವಳೆಂಬ ನಿರ್ಧಾರ ಈ ಉದಯದಲ್ಲಿದೆ. ಅಲ್ಲದೆ, ಮನದಲ್ಲಿ ಅಂಕುರಿಸಿದ ಕಾಮಾಗ್ನಿ ಜ್ವಾಲೆಯನ್ನು ಶಮನಗೊಳಿಸಿಕೊಳ್ಳುವನೆಂಬ ಅರ್ಥವೂ ಇದೆ. ಮತ್ತು ಅರ್ಜುನನ ಅತಿಶಯ ಪರಾಕ್ರಮ

ವರ್ಣನೆಯೂ ಇದೆ. ಕಥಾನಾಯಕನ ಪಾತ್ರ ನಿರೂಪಣೆಯಲ್ಲಿ ಸೂರ್ಯೋದಯದ ಪಾತ್ರ ಸಂದರ್ಭೋಚಿತವಾಗಿದೆ.

> ಆ ಸಮರ ಮುಖದೊಳಿಸೆವರಿ |
> ಕೇಸರಿಯ ವಿರೋಧಿರುಧಿರಜಲನಿಧಿವೊಲ್ ಸಂ ||
> ಧ್ಯಾ ಸಮಯಮೆಸೆಯೆ ತಟತಟ|
> ನೇಸಱ್ ಮೂಡುವುದುಮೊಡ್ಡಣಕ್ಕೆಱ್ತಂದರ್ ||
> [೧೧-೬]

ಪಾಂಡವರಲ್ಲಿ ಪಟ್ಟಗಟ್ಟಿಕೊಂಡ ಪ್ರಥಮ ವೀರ ಶ್ವೇತನು ಭೀಷ್ಮಾಚಾರ್ಯನಿಂದ ರಣರಂಗದಲ್ಲಿ ಮಡಿದಿದ್ದಾನೆ. ಮುಂದಿನ ಪಟ್ಟವನ್ನು ಯಾರಿಗೆ ಕಟ್ಟಬೇಕೆಂದು ಧರ್ಮನಂದನನು ಮುಕುಂದನೊಡನೆ ವಿಚಾರ ಮಾಡಿ ದ್ರುಪದನಂದನನಿಗೆ ಕಟ್ಟುತ್ತಾನೆ. ಆಗ ಸೂರ್ಯೋದಯವಾಗುತ್ತದೆ. ಆ ಉದಯ ಕಾಲದ ರುಚಿಯ ಸಮೂಹವು ಅರಿಗನಿಂದಳಿಯುವ ವಿರೋಧಿ ನಾಯಕರ ರಕ್ತಸಾಗರದಂತಿತ್ತೆಂದು ಕವಿ ವರ್ಣಿಸಿದ್ದಾನೆ. ಮುಂದಾಗುವ ಯುದ್ಧದ ಪರಿಣಾಮವನ್ನು ಇಂದಿನ ಈ ಸೂರ್ಯೋದಯ ನಿರ್ಣಯಿಸುತ್ತದೆ. ಅಸಂಖ್ಯಾತ ಸೇನೆ ಎಲ್ಲವೂ ನಾಶವಾಗಲಿದೆ. ೌರವರಲ್ಲಿ ಪಟ್ಟಧಾರಿಯಾಗಿ ನಿಂತ ಸಿಂಧೋದ್ಭವನನ್ನು ಅರ್ಜುನ ಸೋಲಿಸುತ್ತಿದ್ದಾನೆ. ತತ್ಸಮರ ಸೇನಾ ಸಂಹಾರಿತ ರುಧಿರ ಸಾಗರ ಭರಿತವಾಗಿದೆ. ಈ ಸೂರ್ಯೋದಯ.

> ನೆರೆದ ವಿರೋಧಿನಾಯಕನಾಹವದೊಳ್
> ತಱಿದೊಟ್ಟಿಲೊಂದಿದೊ |
> ಡ್ಡುರುಳ್ಕಿನಮಾ ಗುಣಾರ್ಣವನಡುರ್ತಿಱಿದಲ್ಲಿ
> ಸಿಡಿಲ್ದ ನೆತ್ತರೊಳ್ ||
> ಪೊರೆದು ನಿರಂತರಂ ಪೊಲಸು ನಾಱುವ
> ಮೆಯ್ಯನೆ ಕರ್ಚಲೆಂದು ಚಿ |
> ಚ್ಚರಮಪರಾಂಬುರಾಶಿಗಿಱಿವಂತಿಱಿದಂ
> ಕಮಳೈಕಬಾಂಧವಂ || [೧೧-೫೧]

ಅರ್ಜುನನು ಅನೇಕ ಕೌರವ ಸೇನಾನಾಯಕರ ದೇಹದಿಂದ ರಕ್ತದ ಕಾರಂಜಿಗಳನ್ನು ಚಿಮ್ಮಿಸಿ ಸಂಹರಿಸ ತೊಡಗಿದ್ದಾನೆ. ಸಾಯುವ ಮುನ್ನ ಸೇನಾನಾಯಕರಿಂದ ಪುಟಿಯುವ, ರಕ್ತವನ್ನು ಕಂಡು ಮದೋನ್ಮತ್ತ ಗಜದಂತಾಗಿ ಮತ್ತೆ ಮತ್ತೆ ವೈರಿಗಳ ಕತ್ತನ್ನು ಕಿತ್ತುಕೊಳ್ಳತೊಡಗಿದ್ದಾನೆ. ಅರ್ಜುನನ ಶಕ್ತಿಸಾಮರ್ಥ್ಯ ಅಪ್ರತಿಮವಾಗಿತ್ತೆಂದು ತೋರಿಸಿಕೊಡುವ ಇಲ್ಲಿಯ ಸೂರ್ಯಾಸ್ತವು ಅತಿ ಔಚಿತ್ಯಪೂರ್ಣವಾಗಿದೆ. ಅರಿಗನ ಅರಿಗಳ ರಕ್ತದ ಸಿಡಿತದಿಂದ ತೊಯ್ದು ಹೊಲಸು ನಾರುತ್ತಿರುವ ಶರೀರವನ್ನು ತೊಳೆದುಕೊಳ್ಳಲು ಸಾಗರಕ್ಕೆ ಸೂರ್ಯನು ಹೋದನೆಂದು ಚಿತ್ರಿತವಾಗುತ್ತದೆ. ಇಲ್ಲಿ ಕವಿಯ ಕಲ್ಪನಾಸೃಷ್ಟಿ ಪುಷ್ಟಿಗೊಂಡಿದೆ. ಈ ಸೂರ್ಯಾಸ್ತವು ಮುನ್ಸೂಚನೆಯಾಗಿರದೆ ಗತವೃತ್ತಾಂತನಿವೇದಕವಾಗಿದೆ.

> ಅದಟಂ ಸಿಂಧುತನೂಭವಂ ವಿಜಯನೊಳ್
> ಮಾರ್ಕೊಂಡಣಂ ಕಾದಲಾ |
> ಱದೆ ಬೆಂಬಿಱಿಲ್ದೊಡೆ ಕಾದಲೆಂದು ಬೆಸನಂ
> ಪೂಣ್ದಂ ಗಡಂ ದ್ರೋಣನಂ ||
> ತದುವಂ ನೋಡುವೆನೆಂದು ಕಣ್ ತಣಿವಿನಂ
> ನೋಡಲ್ಕೆ ಬರ್ಪಂತೆ ಬಂ |
> ದುದಯಾದ್ರೀಂದ್ರಮನೇಱಿ ಭಾನು ಪೊಱಮಟ್ಟೊ
> ಡ್ಡಿತ್ತನೀಕಾರ್ಣವಂ ||
> [೧೧-೫]

ಗಾಂಗೇಯನು ವಿಜಯನಿಂದ ಅಪಜಯ ಪಡೆದನು. ಆ ಅಪಜಯದ ಕಲಂಕವನ್ನು ಕಳೆಯುವೆನೆಂದು ಕುಂಭೋದ್ಭವನು ಪ್ರತಿಜ್ಞೆಗೈದು ಯುದ್ಧಕ್ಕೆ ಸಿದ್ಧನಾಗಿದ್ದಾನೆ. ಧನುರ್ವಿದ್ಯೆಯಲ್ಲಿ ಬಲಶಾಲಿಗಳಾದ ಗುರುಶಿಷ್ಯರಿರ್ವರಲ್ಲಿ ಯುದ್ಧ ನಡೆಯಲಿದೆ. ಗುರುವಾದ ದ್ರೋಣನಿಂದ ಚಾಪವಿದ್ಯೆಯನ್ನು ಅಭ್ಯಸಿಸಿದ ಅರ್ಜುನನು ಬಿಲ್ಲೋಜ ದ್ರೋಣನನ್ನು ಹೇಗೆ ಬಲಹೀನಗೊಳಿಸುವನು, ಹಾಗೂ ತನ್ನ ಶಿಷ್ಯನಿಂದಲೇ ದ್ರೋಣ ಪಡೆಯುವ ಅಪಜಯದ ಕಾರಣವಾದರೂ ಏನು, ಎಂಬಿವುಗಳನ್ನು ನೋಡಲು ಸೂರ್ಯನು ಉದಯಿಸಿ ಬಂದನಂತೆ. ಇಲ್ಲಿ ಯಾರ ಉನ್ನತಿ, ಅವನತಿಗಾಗಿ ರವಿ

ಬರದೆ ಅರಿಕೇಸರಿ, ಶರಕೇಸರಿಗಳ, ಸಮರಶ್ರೀ ನಿರೀಕ್ಷಣಾಪೇಕ್ಷಿಗನಾಗಿ ಮಾತ್ರ ಬಂದಿದ್ದಾನೆಂದು ಹೇಳಬಹುದು. ಆದರೂ ಸೃಷ್ಟಿ ಸೃಜಿಸಿದಂದಿನಿಂದ ಲೋಕೈಕ ಚಾಕ್ಷಿತನಾದ ಸೂರ್ಯನ ಸಾಕ್ಷಿಯಲ್ಲಿ ಅದೆಷ್ಟೋ ಸಮರಗಳಾಗಿ ಹೋಗಿವೆ. ಅವುಗಳ ಸಮರ ಸಂಪತ್ತಿಗಿಂತಲೂ ಮಿಗಿಲೆಂದು ಬಗೆದು ಬಂದು ಪ್ರಸ್ತುತ ಪ್ರಸಂಗದ ಪ್ರೇಕ್ಷಕನಾದುದು, ಅರಿಕೇಸರಿ, ಶರಕೇಸರಿಗಳ ಪರಮ ಪರಾಕ್ರಮತೆಯನ್ನು ಪ್ರದರ್ಶಿಸುವುದೆಂದು ಕಂಡು ಬರುವುದು.

> "ಆಗಳ್ ಮಾರ್ತಾಂಡಂ ಪ್ರಚಂಡ ಮಾರ್ತಾಂಡನ
> ಶರನಿಕರ ಸ್ಫುರಿತ ಕಿರಣಂಗಳ್ ಕವಿಯೆ ತನ್ನ
> ಕಿರಣಂಗಳ್ ಮಸುಳ್ದು ಪರಜಳನಿಧಿಗಿೞಿದಂ"
> [೧೧-೬೧೪]

ದ್ರೋಣನು ಧರ್ಮನೊಂದಿಗೆ ಕಾದುತ್ತಿದ್ದಾನೆ. ತನ್ನ ಬಾಣವೃಷ್ಟಿಯಿಂದ ಧರ್ಮನನ್ನು ನಿಸ್ತೇಜಗೊಳಿಸುತ್ತಿರಲು ಅರ್ಜುನನು ಶರವೇಗದಿಂದ ಮಧ್ಯೆ ಬಂದು, ದ್ರೋಣನ ಸುತ್ತಲೂ ಬಾಣಗಳನ್ನೆಸೆದು ಕತ್ತಲೆ ಕೆಡವಿ ಅವನನ್ನು ಮುತ್ತಿ ತಮ್ಮಣ್ಣನನ್ನು ಕಾಯುವನು. ಆಗ ಸೂರ್ಯಾಸ್ತ ಮಾನವಾಗುತ್ತದೆ.

ಈ ಸೂರ್ಯಾಸ್ತದಲ್ಲಿಯೂ ಅರ್ಜುನನ ನಿರ್ಜಿತ ಪಾತ್ರ ನಿರೂಪಣೆ ಇದೆ. ಅರ್ಜುನನ ಬಾಣಗಳೆಲ್ಲಾ ಲೋಕದ ಎಲ್ಲೆಡೆಯಲ್ಲೂ ಪಸರಿಸಲು, ಸೂರ್ಯನು ತನ್ನ ಕಿರಣಗಳು ಅರ್ಜುನನ ಬಾಣಗಳನ್ನು ಭೇದಿಸಿ ಲೋಕಕ್ಕೆ ಬೆಳಕನ್ನೀಯಲಾರದೆಂದು ಭಾವಿಸಿ ಅಸ್ತಂಗತನಾದನಂತೆ. ಇದರ ಅಂತರಾರ್ಥವೆಂದರೆ ಅನುಪಮಾತ್ತನದಿಂದ ಅರ್ಜುನನು ದ್ರೋಣನೊಡನೆ ಕಾದಾಡಿ ತನ್ನ ಹಿರಿಯಣ್ಣನನ್ನು ಪಾರುಮಾಡಿದನೆಂದಿದೆ. ಆದರೆ ಅರ್ಜುನನ ಬಾಣಗಳಿಂದ ಕವಿದ ಕತ್ತಲೆಯ ಮುಂದೆ ದ್ರೋಣನ ಪ್ರಾಣಕ್ಕೂ ಕವಿಯುವದೆಂಬುದರ ಸೂಚನೆಯಾಗಿಯೂ ಸೂರ್ಯಾಸ್ತವಾಗಿದೆ ಎಂದು ಹೇಳಬಹುದು. ದ್ರೋಣನ ಅವನತಿಯ ದ್ಯೋತಕನಾಗಿ ಸೂರ್ಯಾಸ್ತವಾಗಿದ್ದರೂ ಕಥಾನಾಯಕ ಪಾರ್ಥನ ಪಾತ್ರ ಮಹೋನ್ನತಿಯ ಪ್ರತೀಕವಾಗಿದೆ. ಇದೇ ಸಿದ್ಧಿಸಾಧನೆಯ ಸಂಕೇತವಾಗಿ ಇನ್ನೊಂದು ಸೂರ್ಯಾಸ್ತದ ವರ್ಣನೆಯನ್ನು ಕಾಣಬಹುದು.

> ಧರಣೀಸುತನಱಿದಂ ದಿ |
> ಕ್ಕರಿ ಕೆಡೆದುದು ನರಶರಂಗಳಿಂ ಭುವನಮುಮಿ ||
> ನ್ನುರಿಯುದಿರದಾದನಡಂಗುವೆ |
> ನಿರದೆಂಬವೊಲರ್ಕನಪಜಳನಿಧಿಗಿೞಿದಂ ||
> [೧೧-೮೨]

ಈ ಸೂರ್ಯಾಸ್ತದಿಂದ ಮಾರ್ತಾಂಡನು ಪ್ರಳಯ ಕಾಲದ ಭೈರವನೂ ಕದನ ಕಂಠೀರವನೂ ಭಗದತ್ತ ಹಾಗೂ ದಿಗ್ಗಜಧ್ವಂಸಕನೂ ಆಗಿದ್ದಾನೆ. ಅರ್ಜುನನ ಕೆಚ್ಚಿನ ಕಿಚ್ಚಿನಿಂದ ವಿಶ್ವವೇ ಭಸ್ಮವಾಗುವ ಪೂರ್ವ ತಾನು ಪಾರಾಗಬೇಕೆಂದು ಪಗಲೊಡೆಯನು ಪ್ರಯತ್ನಪಟ್ಟು ಪಶ್ಚಿಮ ಸಾಗರಕ್ಕಿಳಿದನಂತೆ. ಪ್ರಪಂಚವನ್ನೇ ಸುಟ್ಟುಹಾಕುವ ಉಷ್ಣಾಂಶು ಸೂರ್ಯನು ಅರ್ಜುನನ ಆವೇಶಕ್ಕೆ ಅಂಜಿದ್ದಾನೆ ಎನ್ನುವುದರಲ್ಲಿ ಅರ್ಜುನನ ಧೀರತನ ಸಾಕಾರಮೂರ್ತಿಯಾಗಿ ನಿಂತಿದೆ. ಕಾಳಗ ಕೋಲಾಹಲನಾದ ಅರಿಕೇಸರಿಯು ಶರಕೇಸರಿಯಾಗಿ ಎದುರಿಗೆ ಬರುವ ಎದುರಾಳಿಗಳನ್ನೆಲ್ಲ ಕೊಂದು, ಪರ್ದಿಂಗೆ ಬಿರ್ದಿಕ್ಕುವ ಪರಮೋನ್ನತ ಸಾಹಸೈಕ ಶಕ್ತಿಶಾಲಿಯಾಗಿದ್ದಾನೆ. ನಿಜವಾಗಿಯೂ ಕವಿಯ ಪ್ರತಿಭಾಪರಾಕಾಷ್ಠತೆಯ ಪ್ರದರ್ಶನವಾಗಿದೆ. ಈ ಉತ್ಪ್ರೇಕ್ಷಾವರ್ಣನೆ. ಈ ಒಂದು ಸೂರ್ಯಾಸ್ತದಿಂದ ಅರ್ಜುನನ ಪಾತ್ರ ವಿಚಾರಿಸಿದಷ್ಟು ಉನ್ನತ ಶೈಲ ಶಿಖರಂಗಳನೇರುತ್ತಿದೆ.

ತನ್ನ ಮಗ ಅಭಿಮನ್ಯುವನ್ನು ಅಧರ್ಮ ಯುದ್ಧದಿಂದ ಕೊಂದ ಸೈಂಧವನ ಶಿರಚ್ಛೇದನ

ಗೊಳಿಸುವೆನು ನಾಳೆ ಸೂರ್ಯಾಸ್ತ ಸಂದುವದ ರೊಳಗಾಗಿ ಎಂಬ ಕಠೋರ ಪ್ರತಿಜ್ಞಾ ಬದ್ಧನಾದ ಅರ್ಜುನನು ಚಡಪಡಿಸತೊಡಗಿದಾಗ ಸೂರ್ಯೋ ದಯವಾಗುತ್ತದೆ.

> ತನ್ನ ಸುತನಱಲೊಳರ್ಜುನ |
> ನೆನ್ನುದಯಮನೆಯ್ದೆ ಪಾರ್ದು
> ಪಗೆವರ ಬೇರೊಳ್ ||
> ಬೆನ್ನೀರನೆಱೆಯದಿರನದ |
> ನಾನ್ನೋಡುವೆನೆಂಬ ತೆಱದಿನಿನನುದಯಿಸಿದಂ ||
> [೧೧-೧೩೨]

ತನ್ನ ಕರುಳಬಳ್ಳಿಯನ್ನು ಅನ್ಯಾಯದಿಂದ ತೊತ್ತಳದುಳಿದು ನಾಶಮಾಡಿದ ಮದೋನ್ಮತ್ತ ತುರಂಗ ಸೈಂಧವನನ್ನು ಕದನ ಕಂಠೀರವಾ ರ್ಜುನನು ತಂದು ಆತನ ಮೆಯ್ಯ ವಾರಿಧಿಯಿಂದ ತನ್ನ ಶೋಕ ಕೃಶಾನುವನ್ನಾರಿಸಿಕೊಳ್ಳಲು ಕಾತುರ ನಾಗಿ ಕಾಯತೊಡಗಿದ್ದಾನೆ. ಸೂರ್ಯೋ ದಯಕ್ಕೆ ಅರ್ಜುನನ ಆತುರ ಹಾಗೂ ಪೂಣ್ದ ಪ್ರತಿಜ್ಞಾ ಪೂರ್ಣತೆಗಳಿಗಾಗಿ ಸೂರ್ಯನುದಯಿ ಸಿದನಂತೆ! ಅಪಾರ ಅರ್ಥ ಸಂಪತ್ತಾತ್ಮಕವಾಗಿದೆ. ಈ ಸೂರ್ಯೋದಯ!! ಅರ್ಜುನನು ನುಡಿದು ದನ್ನು ಈಡೇರಿಸಿಕೊಂಡೇ ತೀರುವದರಿಂದ ಸೈಂಧ ವನ ಶಿರಚ್ಛೇದನವಾಗುವ, ವೈರಿಯ ವಂಶವಲ್ಲ ರಿಯ ಮೂಲೋಚ್ಚಾಟನೆ ಮೊದಲಾದ ಭೀಕರತೆ ಗಳಿಂದೊಡಗೂಡಿದ ಸಂದರ್ಭ ಸೌಂದರ್ಯಾ ಪೇಕ್ಷಿತನಾಗಿ ಸೂರ್ಯನೂ ಮೂಡಿಬಂದನೆಂದೆನ್ನು ವದರಲ್ಲಿ ಸನ್ನಿವೇಶದ ಸ್ವಾರಸ್ಯ ಸಂಪೂರ್ಣವಾಗಿ ವಿದಿತವಾಗುತ್ತದೆ. "ಎನ್ನುದಯಮನ್ನೆದೆ ಪಾರ್ದು ಪಗೆವರ ಬೇರೊಳ್ ಬೆನ್ನೀರನೆರೆಯದಿರನು" ಎಂಬ ಶಬ್ದಚಿತ್ರ ಜೀವಕಳೆಯಿಂದ ತುಂಬಿ ತುಳುಕುತ್ತಿದೆ. "ಪಾರ್ದು" ಎಂಬ ಶಬ್ದ ಪ್ರಯೋಗ ಅಭಿಮನ್ಯುವಿನ ಮರಣ ಶೋಕಾನಲ ನಾದ ಅರ್ಜುನನು ವೈರಿಯ ಬಳಗ ಬಳ್ಳಿಯ ಬೇರಿಗೆ ಬಿಸಿನೀರನೆರೆಯಬೇಕೆಂದು ಕುದಿದು ಸೂರ್ಯೋದಯದ ಸಮಯ ಸುಮುಹೂರ್ತ ಕ್ಕಾಗಿ ನಿಂತ ರೌದ್ರಸನ್ನಿವೇಶವನ್ನು ಸೂಚಿಸು ತ್ತಿದೆ. "ಪಗೆವರ ಬೇರೊಳ್ ಬೆನ್ನೀರನೆಱೆಯ ದಿರನ್" ಎಂಬುದಂತೂ ಅರ್ಜುನನಪ್ರತಿ ಸಾಹಸ ಸಾಮರ್ಥ್ಯಗಳ ಸಜೀವ ಚಿತ್ರವಾಗಿದೆ. ಒಟ್ಟಿನಲ್ಲಿ ಈ ಸೂರ್ಯೋದಯವು ಅಂದಿನ ಯುದ್ಧದ ಪ್ರಾರಂಭವನ್ನು, ಜಯದ್ರಥನ ಮರಣವನ್ನು, ಅರ್ಜುನನ ವಿರಾಡ್ರೂಪದರ್ಶನವನ್ನು, ಪುತ್ರ ನಿಮಿತ್ತ ಉಂಟಾದ ಶೋಕಾನಲವನ್ನು ಮುಂತಾದ ಸಂಗತಿ ಸೂಚನಾರ್ಥಕವಾಗಿದೆ ಈ ಸೂರ್ಯೋ ದಯ.

> ತೆಗೆನೆಱೆದೂಱೆಕೊಂಡಿಸೆ ಶಿರಂ
> ಪರಿದತ್ತು ವಿಯತ್ತಳಂಬರಂ |
> ನೆಗೆದೊಡೆ ರಾಹು ಬಾಯ್ದೆಱೆದು ನುಂಗಲೆ
> ಬಂದಪುದೆಂಬ ಶಂಕೆಯಿಂ ||
> ದಗಿದು ದಿನೇಶನಸ್ತಗಿರಿಯುಂ ಮ
> ಱೆಗೊಂಡನಮೋಘಮೆಂಬ ಮಾ
> ತುಗಳ ನೆಗೞ್ತೆಯುಂ ಪಡೆದನಾಹವ ದೊಳ್ ಪರ
> ಸೈನ್ಯ ಭೈರವಂ [೧೧-೧೫೪]

ಇಲ್ಲಿಯೂ ಮೇಲಿನ ಅರ್ಥವೇ ಹೊತಿದ್ದರೂ ಲೌಕಿಕತೆ ಇದೆ. ಅರ್ಜುನನ ಮಗನಾದ ಅಭಿ ಮನ್ಯುವನ್ನು ಮೋಸದಿಂದ ಜಯದ್ರಥ ಕೊಂದಿ ದ್ದಾನೆ. ಮೋಸದಿಂದ ಕೊಂದವನನ್ನು ನಾಳಿನ ಸೂರ್ಯಾಸ್ತದೊಳಗಾಗಿ ಕೊಂದು ಕೂಗಿಡುವೆ ನೆಂದು ಪಾರ್ಥ ಪಣತೊಟ್ಟಿದ್ದಾನೆ. ಪ್ರತಿಜ್ಞೆ ಯಂತೆ ನಿನ್ನ ಸಾಕ್ಷಿಯಾಗಿ ಸೈಂಧವನ ಶಿರಚ್ಛೇದಿಸಿ ದ್ದೇನೆಂದು ಸೂರ್ಯನಿಗೆ ತೋರಿಸುವ ಹಾಗೆ ಆಕಾಶಕ್ಕೆ ಹಾರಿಸಿದಾಗ ರಾಹುವೇ ತನ್ನನ್ನು ನುಂಗಲು, ಬಂದನೆಂದು ಬಗೆದ ಭಾಸ್ಕರ ಓಡಿ ಹೋಗಿ ಮುಳುಗುಬೆಟ್ಟದ ಮರೆಯಲ್ಲಿ ಅಡಗಿದ ನಂತೆ.

ಪ್ರಳಯ ಕಾಲ ಸ್ವರೂಪನಂತಾಗಿ ಅರ್ಜು ನನ ಆಟೋಪ ಅರಿಗಳ ಮೇಲೆ ನಡೆದಿದೆ. ಪ್ರತಿಜ್ಞೆ

ಗೈದುದನ್ನು ಪೂರ್ಣಗೊಳಿಸತೊಡಗಿದ್ದಾನೆ. ಮೂಲೋಕಗಳ ಗಂಡನೆಂಬ ಬಿರುದಿನಂತೆ ಪ್ರಚಂಡನಾಗಿದ್ದಾನೆ. ಅವನ ಅತಿಶಯ ಶೌರ್ಯದ ಸಂಕೇತವಾಗಿ ಬರುವ ಈ ಸೂರ್ಯಾಸ್ತಗಳು ಪಾರ್ಥನ ಪೌರುಷ ಪಾತ್ರವನ್ನು ನಿಚ್ಚಳವಾಗಿ ಕೊಡುವವು. ಸೂರ್ಯನೂ ಸೈಂಧವನ ಶಿರಸ್ಸನ್ನು ಕಂಡು ತನ್ನ ವೈರಿ ರಾಹುವೇ ಬಂದನೆಂದು ಭಯಪಟ್ಟು ಅಡಗಿದನೆಂದ ಮೇಲೆ ಲೋಕದಲ್ಲಿ ಬಾಳುವ ಜನ ಜಂಗುಳಿಯು ಭ್ರಮಿತ ಭಾವನೆಯಿಂದ ಹಗ್ಗವನ್ನೇ ಹಾವೆಂದು ಬಗೆದು ಬೆದರಿಬೆಚ್ಚುವಲ್ಲಿ ಯಾವ ಅತಿಶಯೋಕ್ತಿ ಇದೆ! ಲೌಕಿಕ ಸತ್ಯದ ತತ್ವವನ್ನು ಎತ್ತಿ ತೋರುವದಕ್ಕೆ ಸಹಾಯಕಾರಿಯಾಗಿದೆ ಈ ಸೂರ್ಯಾಸ್ತ.

ಒಟ್ಟಿನಲ್ಲಿ ಹೇಳುವದಾದರೆ ಸೂರ್ಯ ಉದಯಾಸ್ತಮಾನದ ವರ್ಣನೆಗಳು ಔಚಿತ್ಯ ಪೂರ್ಣವಾಗಿ ಬಂದು ಕಥಾಪಾತ್ರ ಪರಿಪೋಷಣಾ ಪ್ರೇರಕ, ಪೋಷಕಗಳಾಗಿ ನಿಲ್ಲುತ್ತವೆ. ಇಲ್ಲಿ ಅರ್ಜುನನ ಪ್ರತಿಜಯವನ್ನು ಸೂಚಿಸುವದರಲ್ಲಿಯೂ ಅವನ ಸಾಮರ್ಥ್ಯದ ಸಾಕಾರ ಮೂರ್ತಿಯನ್ನು ಕೆತ್ತುವಲ್ಲಿಯೂ ಸೂರ್ಯನ ಪಾತ್ರ ಸತ್ಪ್ರೇರಿತ, ಸತ್ಪ್ರಭಾವಿತವಾಗಿದೆ.

> ಇಂದೆನ್ನ ಮಗನನರ್ಜುನ |
> ನೊಂದುಷ್ಠಿತಳ್ವಿಲ್ಲದಱವಿವನಂ ಏೞಂ ಕಾ |
> ಯೆಂದು [ಸುರಪತಿ]ಯ ಕಾಲ್ಗೆಡಿ |
> ವಂದವುನಿಱಿಸಿದುವು ಪಸರಿಪಿನಕಿರಣಂಗಳ್ ||
> [೧೨-೧೦೮]

ಈ ಸೂರ್ಯೋದಯವು ಅರ್ಜುನನಿಗೆ ಸಂಬಂಧಿಸುವುದಕ್ಕಿಂತಲೂ ಕರ್ಣತರಣಿಯರ ಆತ್ಮೀಯ ಕರುಳಪ್ಪಿಗೆಗೆ ಹೆಚ್ಚಾಗಿ ಸಂಬಂಧಿಸಿದ್ದರೂ ಅರ್ಜುನನ ದುರಂಧರತೆಯ ಚಿತ್ರವನ್ನು ಎತ್ತಿ ತೋರಿಸಬೇಕಾದಾಗ ಅತಿಯಥೋಚಿತವಾಗುತ್ತದೆ. ಕರ್ಣನಿಗೂ, ಅರ್ಜುನನಿಗೂ ಇಂದು ಯುದ್ಧ ನಡೆಯಲಿದೆ. ಇಂದ್ರದೇವಾ! ನಿನ್ನ ಮಗ ನನ್ನ ಮಗನನ್ನು ಕೊಲ್ಲುವನು. ಹೇಗಾದರೂ ಮಾಡಿ ಈ ಪ್ರಸಂಗದಿಂದ ನನ್ನ ಪುತ್ರನನ್ನು ಸಂರಕ್ಷಿಸು ಎಂದು ಸೂರ್ಯ ಕಿರಣಗಳು ಇಂದ್ರನ ಕಾಲ ಹಿಡಿಯುವಂತೆ ಮೂಡಿ ಬಂದು ಪ್ರಪಂಚದಲ್ಲಿ ಪಸರಿಸಿದಂತಿವೆ. ಎಂದ ಮೇಲೆ ಅರ್ಜುನನ ಅಪರಿಮಿತ ಶೌರ್ಯದಿಂದ ಸೂರ್ಯನೂ ಧೈರ್ಯಹೀನನಾಗಿ ಇಂದ್ರನಲ್ಲಿ ಕೈಂಕರ್ಯವುಳ್ಳವನಾಗಿದ್ದುದರಿಂದ ವಿದ್ವಿಷ್ಟವಿದ್ರಾವಣನ ವಿರಾಡ್ರೂಪ ವ್ಯಕ್ತವಾಗುತ್ತದೆ.

ವಿಜಯನು ಕೌರವ ಕುಲ ಸಂಹಾರಕನೂ ಪಾಂಡವ ಪ್ರತಾಪ ಧ್ವಜಾರೋಹಕನೂ, ವೈರಿಮದೇಭಸಿಂಧುರನೂ, ಎಂದು ಮೂರ್ತಿ ಚಿತ್ರಿಸುವಲ್ಲಿ ಸೂರ್ಯ ಉದಯಾಸ್ತಗಳು ಮಹತ್ವದ ಪಾತ್ರ ವಹಿಸುವವು. ಆದರೆ ಕರ್ಣನ ಜೀವನದ ಹಂತ ಹಂತಗಳಲ್ಲಿ ಬರುವಂತೆ ಅರ್ಜುನನ ಜೀವದ ಜೀವನಾಗಿ ಬರಲಾರ. ಕಥಾನಾಯಕನಾದುದರಿಂದ ಮಾತ್ರ ಅರ್ಜುನನ ಗೆಲವು ಒಲವುಗಳಾಗಿ ಸೂರ್ಯ ಬರುವನೆಂದು ಹೇಳಬಹುದು.

**ಭೀಮಸೇನನಿಗೆ ಸಂಬಂಧಿಸಿದ ಸೂರ್ಯ, ಉದಯಾಸ್ತಗಳು**

ವಾಯುಸುತನು, ಈ ಭಾರತ ರಣಾಂಗಣದಲ್ಲಿ ಬಕ, ಕೀಚಕ, ಹಿಡಿಂಬ ದುಶ್ಶಾಸನ, ದುರ್ಯೋಧನ, ಮೊದಲಾದವರನ್ನೆಲ್ಲ, ಯಮಸದನಕ್ಕಟ್ಟುವ ಜಟ್ಟಿ. ಅವನಿಗೆ ಪೂರ್ಣ ಪ್ರತಿಜ್ಞೆಗಳನ್ನೆಲ್ಲ ಪೂರೈಸಿ ದ್ರೌಪದಿಯ ಕಣ್ಣೀರಿನ ಕಡಲಿನ ಕಾಳ್ಕಿಚ್ಚನ್ನಾರಿಸಬೇಕಾಗಿದೆ. ಅಗ್ನಿಪುತ್ರಿಯಾದ ದ್ರೌಪದಿಯಂತೂ ತನಗವಮಾನ ಪಡಿಸಿದ, ಅಣಕವಾಡಿದ, ಪ್ರತಿಪಕ್ಷದ ಪರಾಕ್ರಮಿಗಳನ್ನೆಲ್ಲ ತನ್ನ ಒಡಲ ವಡವಾಗ್ನಿಯಲ್ಲಿ ಬೈತಿಟ್ಟು ಉರಿಯತೊಡಗಿದ್ದಾಳೆ. ಇವಳ ಉರಿಯಿಂದ ಉರಿದೆದ್ದ ಗಾಳಿಯ ಮಗ ಭೀಮ

ಗೂಳಿಯ ಗುಡಿಗಿನಂತೆ, ಆರ್ಭಟಿಸುತ್ತ, ಕಾಲ್ಕೆದರುತ್ತ, ಯುದ್ಧಭೂಮಿಯಲ್ಲಿ ಕೆಂಗಣ್ಣನಾಗಿ ನಿಂತಿದ್ದಾನೆ. ಅಗ್ನಿಪುತ್ರಿಯ ಅಪೇಕ್ಷೆಗೆ, ವಾಯುಪುತ್ರನ ಪುರಸ್ಕಾರ ದೊರೆತಾಗ, ಅಳಿಯದೆ ಉಳಿಯದು ಎದುರಾಳಿ ಬಳಗ. ಈ ಸಂದರ್ಭ ಸಾರ್ಥಕತೆಗಾಗಿ, ಸೂರ್ಯ ಉದಯಾಸ್ತಗಳು ಸಹಾಯಕ ಸಾಧನಗಳಾಗಿವೆ.

"ಎಂದು ನುಡಿಯಲಿರ್ಪನ್ನೆಗಂ ಕೋಕನದ ಬಾಂಧವನುದಯಾಚಳ ಶಿಖರಶೇಖರನಾದಂ" [೩-೧೧ವ]

ರಾಜಧಾನಿಯನ್ನಗಲಿ ಹೊರಟ ಪಾಂಡವರು, ವಾರಣಾವತದ ಅರಗಿನ ಮನೆಯ ಉರಿಯಿಂದೆ ಕರಗದೆ ಪಾರಾಗಿ ಹಿಂಡಿಂಬಾ ಎಂಬ ಭಯಂಕರ ವನವನ್ನು ಪ್ರವೇಶಿಸುತ್ತಾರೆ. ಮಾರ್ಗಾಯಾಸದಿಂದ ತೊಳಲಿ, ಬಳಲಿದ ಸಹೋದರರು, ವಿಶ್ರಾಂತಿಯನ್ನು ಪಡೆಯಲೆಂದು ಮಲಗಲು ಹೇಳಿ ಅವರ ರಕ್ಷಣೆಗಾಗಿ ಭೀಮನು ಜಾಗರೂಕತೆಯಿಂದ ಎಚ್ಚತ್ತಿದ್ದು ಇರುಳನ್ನು ಕಳೆಯುತ್ತಾನೆ. ಆ ವನಾಧಿಪ ಹಿಡಿಂಬಾರಕ್ಕಸನು ಇವರನ್ನು ತಿಂದು ತೇಗಬೇಕೆಂದು ಬಯಸುತ್ತಾನೆ. ಇವರನ್ನೆಲ್ಲಾ ಅಡಿಗೆ ಮಾಡುವಿಯಂತೆ ನೋಡು ಬಾ ಎಂದು ತನ್ನ ತಂಗಿ ಹಿಡಿಂಬೆಯನ್ನು ಕರೆದುಕೊಂಡು ಬರುವನು. ಆಗ ಸಹಜವಾಗಿ ಸೂರ್ಯೋದಯವಾಗುವದು. ಈ ಸೂರ್ಯೋದಯದಲ್ಲಿ ಸಂದರ್ಭಾರ್ಥ ಸಮನ್ವಯವಾಗಿದೆ. ಪಾಂಡವರನ್ನು ಸಂಹರಿಸಿ ಅವರ ದೇಹದ ಮಾಂಸ ಸೇವಿಸಬೇಕೆಂದು ಬಂದ ರಕ್ಕಸನೆ, ಭೀಮನಿಂದ ಇಕ್ಕಿರಿಸಿಕೊಂಡು ಕೊನೆಯುಸಿರನ್ನೆಳೆಯುತ್ತಾನೆ. ಅವರನ್ನು ಅಡಿಗೆ ಮಾಡಿ ತನ್ನೊಡಲ ಗಡಿಗೆ ತುಂಬಿಸಿಕೊಳ್ಳ ಬಂದ ಹಿಡಿಂಬೆ ಭೀಮನ ಮೋಹಾಂಗಿನಿಯಾಗುತ್ತಾಳೆ. ನಶಿಸಿ ಹೋಗಬೇಕಾದ ಪಾಂಡುವರು ಜಯಿಸಿ ಹಿಡಿಂಬೆಯ ಅತಿಥಿಗಳಾಗಿ ಆದರ ಸತ್ಕಾರ ಪಡೆಯುವರೆಂಬ ಪೂರ್ವಪೀಠಿಕೆಯನ್ನು ಈ ಸೂರ್ಯೋದಯ ಸೂಚಿಸುತ್ತದೆ.

ತುಂಬಿದ ರಕ್ತತೆಯಿಂ ನಿಜ|
ಬಿಂಬಂ ವಾರುಣಿಯನೊಸೆದು ಸೇವಿಸೆ ನಾಣ್ಗೆ ||
ಟ್ಟಂಬೋಲ್ ತೇಜಂ ಮಸುಳ್ವಿನ |
ಮಂಬರಮಂ ಬಿಸುಟನಾಗಳಂಬುಜ ಮಿತ್ರಂ ||
[೩-೨೨]

ಹಿಡಿಂಬಿಯ ಅತಿಥಿಗಳಾದ ಪಾಂಡವರು ಹಿಡಿಂಬಪುರ ಬಿಟ್ಟು ಏಕಚಕ್ರಪುರದಲ್ಲಿ ನೆಲಸಿ ನೆಮ್ಮದಿಯಾಗಿದ್ದರು. ಒಮ್ಮೆ ಬ್ರಾಹ್ಮಣ ಕುಟುಂಬವೊಂದು ಕರುಳು ಕೊರೆಯುವಂತೆ ಹುಯ್ಯಲಿಡತೊಡಗಿದೆ. ಅಳುವ, ಚೀರುವ, ಈ ಸ್ಥಿತಿಯು ಕುಂತಿಯ ಹೆಂಗರುಳನ್ನು ತಟ್ಟಿತು. ಸಮಾಚಾರ ಅರಿಯುವೆನೆಂದು ಬಂದು ಬ್ರಾಹ್ಮಣನ ಮುಖಾಂತರ ಬಕಾಸುರನ ಭೀಕರಾಶಾ ವಿವೇಕವನಾಲಿಸಿದಳು. ಎರಡು ಕೋಣಗಳ ಬಂಡಿಯಲ್ಲಿ ಹನ್ನೆರಡು ಕಂಡುಗ ಅನ್ನವನ್ನು ಹೇರಿ ಒಯ್ದು ಒಪ್ಪಿಸಲು ಸಿದ್ಧನಿದ್ದರೂ ಬಂಡಿಯನ್ನು ಹೊಡೆದುಕೊಂಡು ಹೋದವನೂ ಆ ಬಕಾಸುರನ ಬಾಯಲ್ಲಿ ಬೀಳಬೇಕಾದುದರಿಂದ ಭಯಾನಕನಾಗಿದ್ದಾನೆ. ತನ್ನ ಈ ಪಾಳಿ ತಪ್ಪಿದರೆ ಊರನ್ನೇ ತಿನ್ನುವನಂತೆ ಬಕ. ಇದನ್ನು ಕೇಳಿದ ಕುಂತಿಯು ತನ್ನ ಮಗ ಕಾಳಗ ಕೋಳಾಹಳ ಭೀಮನನ್ನು ಶಕಟಚಾಲಕನನ್ನಾಗಿ ಕಳಿಸುವ ವಚನಕೊಡುವಳು. ಆ ಪಟ್ಟಣದ ಜನರಿಗೆ ಪರಿಪರಿಯಾಗಿ ಕಾಡುತ್ತಿರುವ ಬಕಾಸುರನ ಅಂತ್ಯ ಭೀಮನಿಂದ ಮುಗಿಯಲಿದೆ. ಆ ಬಕನ ಅವಸಾನವನ್ನು ಇಂದಿನ ಸೂರ್ಯಾಸ್ತ ಸೂಚಿಸುತ್ತದೆ. ಅಲ್ಲದೆ ಭೀಮನ ಭೀಕರತೆಯನ್ನು ಭವ್ಯಗೊಳಿಸುತ್ತದೆ. ಬಕಾಸುರನ "ಕಾರ ಪೇರೊಡಲು" ಎಷ್ಟೊಂದು ಕುಟುಂಬಗಳನ್ನು ತಿಂದು ತೇಗಿದೆಯೊ! ಆದರ ನಾಚಿಗೇಡಿ ಕಾರ್ಯವನ್ನು 'ನಾಣ್ಗೆಟ್ಟಂಬೋಲ್'

ಎಂಬ ಶಬ್ದ ಸೂಚಿಸುವಂತೆ ತೋರುವದು.

> ಓಡೆ ತಮೋಬಳಮಾಗಿದ |
> ಳ್ಕಾಡೆ ನಿಶಾಚಲಬಲಂ ರಥಾಂಗ ಯುಗಂಗಳ್ ||
> ಕೂಡೆ ಬಗೆಕೂಡೆ ನೇಸಱಿಂ |
> ಮೂಡಿದುದು ಬಕಂಗೆ ಮಿೞ್ತು ಮೂಡುವ ತೆಱದಿಂ||
> [೩-೨೭]

ಇಲ್ಲಿ ಬಕಭೀಮರ ಮಧ್ಯೆ ಘೋರಕಾಳಗ ನೆಸಗಲಿದೆ. ಆಗಸನು ಬೀಸಿ ಬೀಸಿ ಬಟ್ಟೆ ಒಗೆಯುವಂತೆ ಭೀಮನು ಬಕಾಸುರನನ್ನು ಬಂಡೆಗಲ್ಲಿಗೆ ಅಪ್ಪಳಿಸಲಿದ್ದಾನೆ. ಭೀಮಸೇನನಲ್ಲಿರುವ ಶಕ್ತಿಯ ಆಧಿಕ್ಯದರ್ಶನ ಹಾಗು ಮುಂದಿನ ಕಾಳಗದಲ್ಲಿ ಜಯಪಡೆಯುವ ಶುಭಸೂಚನೆಗಳು ಸೂರ್ಯೋದಯದಲ್ಲಿದ್ದರೂ, ವಿಶೇಷವಾಗಿ ಬಕನಿಗೆ ಮೃತ್ಯು ಮೂಡುವ ಭವಿಷ್ಯೋಕ್ತಿಯು ಮಾತ್ರ ಮುಖ್ಯವಾಗಿದೆ. ಬಕನಿಗೆ ಅಪಜಯವಾದರೆ ಭೀಮನಿಗಂ ೞ ಜಯಪ್ರಾಪ್ತಿಯಲ್ಲವೆ ? ಸೂರ್ಯೋದಯವಾಗುವಾಗ ಕತ್ತಲೆ ಬಿಡುವದು, ನಿಶಾಚರರು ಅಡಗುವದು ನಡೆದಿದೆ. ಅದರಂತೆ ಇರುಳಲ್ಲಿಯೇ ವಿಶೇಷವಾಗಿ ಅಳ್ತನವುಳ್ಳ ವೈರಿಯಾದ ಬಕನು ಭೀಮನ ಗೆಲವಿನಲ್ಲಿ ಸೋಲಲಿದ್ದಾನೆ. ಆದುದರಿಂದ ತಮೋಬಲ ಓಡುವುದರಲ್ಲಿಯೂ, ನಿಶಾಚರ ಬಲ ಅಳ್ಕಾಡುವದರಲ್ಲಿಯೂ, ಒಳ್ಳೇ ಔಚಿತ್ಯ ಪೂರ್ಣವಾದ ಅರ್ಥವಿದೆ. ಬಂಡಿ ಅನ್ನ ತಂದವನನ್ನು ನುಂಗಿ ನೀರು ಕುಡಿಯಬೇಕೆಂಬ ಬಕನ ಎಣಿಕೆ ಕುಣಿಕೆಯೊಡೆದು ಕೊನೆಯಲ್ಲಿ ತಿಣಕುವದೆಂದು ಮುನ್ಸೂಚನೆಗೆ ಈ ಸೂರ್ಯೋದಯ ಬಂದುದು ಸುತ್ತ್ಯವಾಗಿದೆ.

> ಅಂತಳವಿಗೞಿಯೆ ಕೊರ್ವಿದ ಕೀಚಕನ ಮನ
> ಮೆಲ್ಲನೊಂದಿರುಳೊಳೆ ಸಾಹಸ ಭೀಮನುದ್ದಾಮ
> ಕೋಪದವದಹನಜ್ವಾಲಾ ಸಹಸ್ರಂಗಳಿನಳ್ಕಿ
> ಮೆಳ್ಕಿದಂತಪ್ಪುದುಂ ನೇಸಱ್ ಮೂಡಿದುದಾ
> ಗಳ್"
> [೮-೮೦ವ

ಪಾಂಡವರು ಅಜ್ಞಾತವಾಸದ ವರ್ಷವನ್ನು ಕಳೆಯಲು ವೇಷ, ಉದ್ಯೋಗ, ನಾಮಾಂತರರಾಗಿ ವಿರಾಟನ ಅರಮನೆಯಲ್ಲಿದ್ದಾರೆ. ವಿರಾಟನ ಮಹಾದೇವಿಯ ಸಹೋದರ ಕೀಚಕನು ದ್ರೌಪದಿಯ ರೂಪ ಲಾವಣ್ಯಕ್ಕೆ ಮನಸೋತು ಬಾಣಸಿಗ ಭೀಮನಿಂದ ಪರಾಭವಗೊಂಡು ಮರಣಹೊಂದಿದ್ದಾನೆ. ಕೀಚಕನ ತಮ್ಮಂದಿರೆಲ್ಲರೂ ಡಾಮರ ಡಾಕಿನಿಯಾದ ದ್ರೌಪದಿಯನ್ನು, ಕೊಂದು ಕೀಚಕನೊಡನೆ ಅಗ್ನಿಗಾಹುತಿ ಮಾಡುವೆವೆಂದು ತಮ್ಮ ತಮ್ಮಲ್ಲಿಯೇ ಮಾತನಾಡುತ್ತ ಹೋಗುವದನ್ನು ಕೇಳಿದ ಭೀಮನು ಅತ್ಯಂತ ಆವೇಶದಿಂದ ಅವರೊಡನೆ ಹೋರಾಡಿ ಕೊಂದು ಬೀಸಾಡಿದ್ದಾನೆ. ಒಂಟಿಗನಾದ ಭೀಮನು ನೂರಾರು ಬಂಟರನ್ನು ಕೊಂದು ದ್ರೌಪತಿಯ ಕಂಟಕ ಕಳೆದಿದ್ದಾನೆ. ಇಷ್ಟರಲ್ಲಿಯೇ ಸೂರ್ಯೋದಯವಾಗುತ್ತದೆ. ಇದು ಸಹಜ ಸೂರ್ಯೋದಯವಾಗಿರದೆ ಭೀಮನು ಮುನ್ನಿನ ರಾತ್ರಿ ವೈರಿಗಳನ್ನು ಸಂಹರಿಸಿದ ಜಯ ವೈಭವದ ಗತವೃತ್ತಾಂತ ವಿವರಣಾತ್ಮಕವಾಗಿದೆ. ಮತ್ತು ವಿರೋಧಿಗಳನ್ನು ಕೊಂದುದರಿಂದ ಮುಂದೆ ಇವನ ಮಾರ್ಗ ನಿಷ್ಕಂಟಕವಾಗಿದೆ. ಎಂಬ ಸೂಚನೆಯೂ ಇದೆ.

ವಾಯುಪುತ್ರನು ವಿಜಯನ ಸಹೋದರ. ಪಾಂಡವರು ಪಡೆದ ಜಯದಲ್ಲಿ ಅವನದೂ ಅತಿ ಮುಖ್ಯ ಪಾತ್ರವಿದೆ. ಕುರುಕ್ಷೇತ್ರ ಯುದ್ಧ ನಡೆಯುವವರೆಗೂ ತಮ್ಮದುರಿಗೆದ್ದು ನಿಂತ ವಿರೋಧಿಗಳಲ್ಲಿ ಹೆಚ್ಚಾಗಿ ಭೀಮನೆ ಹೋರಾಡಿ ಜಯ ಪಡೆಯುವನು. ಆದರೆ ಪ್ರತಿಜ್ಞಾ ಬದ್ಧರಾಗಿ ದುಶ್ಶಾಸನ, ದುರ್ಯೋಧನರನ್ನು ಕೊಂದು ಕೂಗಿಟ್ಟು ದ್ರೌಪದಿಯ ಪಣ ಪೂರ್ಣಗೊಳಿಸಿದ ಪ್ರಸಂಗದಲ್ಲಿ ಸೂರ್ಯ, ಉದಯಾಸ್ತಗಳ ಅವಶ್ಯಕತೆ ಪ್ರಮುಖವಾಗಿ ತೋರಿದರೂ ಅಲ್ಲಿ ಬಾರದಕಾರಣ ತಿಳಿಯದಾಗಿದೆ.

ಕುರುಕ್ಷೇತ್ರ ಯುದ್ಧದ ಮೊದಲನೆಯ ದಿನ ಕೊನೆಗೊಂಡಿದೆ. ಪಾಂಡವರ ಪ್ರಥಮಪಟ್ಟಧಾರಿ ಶ್ವೇತ, ಗಾಂಗೇಯನಿಂದ ಸೋತಿದ್ದಾನೆ.

ಶ್ವೇತನ ಬೀರಮುನುಪಮಾ |
ತೀತಮನೀ ಧರೆಗೆ ನೆಗಱ ನೆಗಳ್ದುದನಿದನಾಂ ||
ಪಾತಾಳಕ್ಕಱಿಪುವೆನೆಂ |
ಬೀ ತೆಱದೊಳೆ ದಿನಪನಪರಜಲನಿಧಿಗಿೞಿದಂ ||
(೧೦-೧೨೪)

ಉರಿಗೊಂಡು ನಡೆದ ಯುದ್ಧ ಶ್ವೇತನ ಮರಣದಿಂದ ಆರಿದೆ. ಯುದ್ಧ ಮುಕ್ತಾಯವಾಯಿತೆಂದು ಸೂರ್ಯಾಸ್ತ ಸೂಚಿಸುತ್ತಿದೆ. ಅದರಂತೆ ಶ್ವೇತನ ಸೋಲು ಮರಣಗಳನ್ನು ಸೂಚಿಸುತ್ತದೆ. ಆವರೇನು? ಗಾಂಗೇಯ ಆಯುಧ ಬಿಸುಟು ಶ್ವೇತನ ಮುಂಪೆ ಕೈಮುಗಿದುಕೊಂಡು ನಿಂತಾಗ ರಣರಂಗದಲ್ಲಿ ಹೇಡಿಯಂತೆ ಕೈಮುಗಿಯಬೇಕೇ ಆಯುಧಗಳಿಂದ ಅರಿಗಳನ್ನು ಇರಿದು ಅವರಿಂದ ಕೈಮುಗಿಸಿಕೊಳ್ಳಬೇಕಾದುದು ವೀರೆದುರಾಳಿಯಾದ ನಿನ್ನ ಧರ್ಮವೆಂದು ತಿಳಿಸಿ, ಭೀಷ್ಮನನ್ನು ಕೆರಳಿಸಿ ಕೇಸರಿಯನ್ನಾಗಿ ಮಾಡಿ ತನ್ನ ತಲೆಯನ್ನು ಅವನ ಬಾಣಗಳಿಗೆಣೆಯಾಗಿ ಕೊಡುತ್ತಾನೆ, ಧರ್ಮವೀರ ಶ್ವೇತ. ಎಂದಮೇಲೆ ಶ್ವೇತನು ಸಾಮಾನ್ಯ ಶೂರನಲ್ಲವೆಂದೂ ಧರ್ಮಯುದ್ಧದಲ್ಲಿ ಗಣ್ಯನೆಂದೂ, ಲೋಕದ ಜನವೆಲ್ಲ ಹೊಗಳದೆ ಹೇಗಿದ್ದೀತು! ಇದನ್ನೇ ತಾನೂ ಪಾತಾಳಲೋಕದಲ್ಲಿ ತಿಳಿಸುವೆನೆಂದು ಸೂರ್ಯನು ಆಕಾಶ ಬಿಟ್ಟು ಕೆಳಗಿಳಿದನಂತೆ. ನಿಜವಾಗಿಯೂ ಇಲ್ಲಿಯ ಸೂರ್ಯಾಸ್ತವು ಶ್ವೇತನ ಅತಿಶಯ ಪರಾಕ್ರಮ, ಧರ್ಮಯುದ್ಧದ ಕ್ರಮ ತಿಳಿಸುವುದರಲ್ಲಿ, ಸಂಪೂರ್ಣ ಸಾರ್ಥಕತೆಯನ್ನು ಸಾಧಿಸಿದೆ. ಇದರೊಂದಿಗೆ ಇಂದಿನ ಯುದ್ಧದ ಮುಕ್ತಾಯ ಗಾಂಗೇಯನ ಗೆಲವು, ಶ್ವೇತನ ಸಾತ್ವಿಕ ಸೋಲು, ಹಾಗೂ ಅವನಲ್ಲಿರುವ ಗುಣಮೌಲ್ಯಗಳನ್ನೂ ಎತ್ತಿ ಹೇಳುತ್ತದೆ.

ಅಭಿಮನ್ಯು ಪ್ರತಿಪಕ್ಷದವರು ರಚಿಸಿದ ಚಕ್ರವ್ಯೂಹವನ್ನು ಪ್ರವೇಶಿಸಿ ಅನೇಕ ಸೇನಾನಾಯಕರನ್ನು ಆಹುತಿಗೊಂಡಿದ್ದಾನೆ. ಈತನ ಈ ಅಜೇಯ ಸಾಮರ್ಥ್ಯ ಕಂಡು ಕೌರವರಾಜನು ಕಳಾಹೀನ ವದನನಾಗಿ ಕರ್ಣ, ಸೈಂಧವರ ಮುಖ ನೋಡಿದಾಗ, ಅವರು ಧರ್ಮಯುದ್ಧವನ್ನು ಬಿಟ್ಟು ಅಭಿಮನ್ಯುವಿನ ಕರಗಳನ್ನು ಕಪಟತನದಿಂದಕತ್ತರಿಸುವರು. ಆಗಲೂ ಗಾಯಗೊಂಡ ಕೇಸರಿಯಾಗಿ ವೈರಿಗಳನ್ನು ಸೀಳುವದಕ್ಕಾಗಿ ಅವರ ಮೇಲೆ ಎರಗಲು, ಹಿಂದೆ ನಿಂತು ಬಾಣ ಪ್ರಯೋಗಿಸಿ ಕದನ ಕಂಠೀರವನನ್ನು ಕೊಲ್ಲುವರು. ಸಿಂಹದ ಮರಿ ಮೋಸದ ಬಲೆಯಲ್ಲಿ ಬಿದ್ದು ಚಿತ್ರಹಿಂಸೆಗೊಳಗಾದ, ಹೃದಯವಿದ್ರಾವಕ ವಾರ್ತೆ ಕೇಳಿ ಧರ್ಮಸುತ ಶೋಕಿಸುವನು. ಆಗ ಸೂರ್ಯಾಸ್ತವಾಗುತ್ತದೆ.

ಅಭಿಮನ್ಯು ಮರಣವಾರ್ತಾ |
ಪ್ರಭೂತ ಶೋಕಾಗ್ನಿ ಧರ್ಮತನಯನನಿರದಃ ||
ದಭಿಭವಿಸಿ ತನ್ನಳುರ್ದಂ |
ತೆ ಭಾಸ್ಕರಂ ಕೆಂಕಮಾದನಸ್ತಾಚಲದೊಳ್ ||
(೧೧-೧೦೬)

ಅಭಿಮನ್ಯುವಿನ ಮರಣದ ಅನಂತರ ಇಂದಿನ ದಿನದ ಯುದ್ಧ ಮುಗಿದಿದೆ. ಇದರ ಸೂಚನೆಯನ್ನು ಸೂಚ್ಯವಾಗಿ ಸೂರ್ಯಾಸ್ತವು ಸೂಚಿಸುತ್ತದೆ. ಪಾರ್ಥಾತ್ಮಜನನ್ನು ಯುದ್ಧಕ್ಕೆ ಧರ್ಮರಾಯನು ಕೇಳಿದಾಗ ಒಮ್ಮೆಲೇ ಒಪ್ಪುತ್ತಾನೆ. ಆದರೆ ಎಳೆಯ ಮಗನನ್ನು ಯುದ್ಧಭೂಮಿಗೆ ಕಳಿಸಲು ಧರ್ಮರಾಯನ ಕರುಳು ತಡೆಗಟ್ಟಿದಾಗ ಆಹವಾಸಕ್ತ ಅಭಿಮನ್ಯು ನಿಲ್ಲದೆ ಕಡುಗಲಿಯಾಗಿ ಕಾದಿ, ಕೌರವರ ಸೇನಾಸಂಹಾರಸಿಂಹನಾಗಿದ್ದಾನೆಂದೂ, ಹನ್ನೆರಡು ವರ್ಷದ ಬಾಲಕ, ರಣಶಕ್ತಿ ಸಂಪಾಕದನಾಗಿದ್ದಾನೆಂದೂ, ನೋಡಿ ನಲಿಯುತ್ತಿದ್ದ ಧರ್ಮಜನ ಕಣ್ಣು ಕ್ಷಣಾರ್ಧದಲ್ಲಿಯೇ ತನ್ನ ವಂಶ

ವಲ್ಲರಿಯನ್ನು ಕುಹಕ ಕಪಟತನದಿಂದ ಕೌರವರು ಕತ್ತರಿಸಿದುದನ್ನು ಕಂಡಾಗ ಎಷ್ಟೊಂದು ಸಂಕಟ ವಾಗಿರಲಿಕ್ಕಿಲ್ಲ! ಶೋಕಮಿಕ್ಕಿ ಉಕ್ಕಿರಲಿಕ್ಕಿಲ್ಲ! ಆದರೆ ಇದು ಬರೀ ಶೋಕವಷ್ಟೇ ಅಲ್ಲ 'ಶೋಕಾಗ್ನಿ'. ಆತನ ಶೋಕಾಗ್ನಿಯಿಂದ ಅರ್ಕನೂ ಅರುಣನಾಗಿ ಅಪರವಾರ್ಧಿಗಿಳಿದನಂತೆ! ಸಹಜ ವಾದ ಸೂರ್ಯಾಸ್ತವಿದ್ದರೂ ಅದರಲ್ಲಿ ಧರ್ಮ ನಂದನನಿಗುಂಟಾದ ದಾರುಣ ದುಃಖದ ಹಿನ್ನೆಲೆ ಯಲ್ಲಿ ವ್ಯಕ್ತವಾಗುವ ಅಭಿಮನ್ಯುವಿನ ಮೇಲಣ, ಪ್ರೇಮ ಹಾಗು ಅಭಿಮನ್ಯುವಿನ ಅಪ್ರತಿಮ ಪತಾಪತೇಜ ಮೊದಲಾದವುಗಳನ್ನು ಅತಿ ಮೂರ್ತಿ ಮತ್ತಾಗಿ ಚಿತ್ರಿಸುತ್ತದೆ ಈ ಸೂರ್ಯಾಸ್ತವು.

ಇತ್ತ ಪಾರ್ಥ ಹಾಗು ಭೀಷ್ಮರ ನಡುವೆ ಭೀಮಾಕಾರವಾಗಿ ಯುದ್ಧ ನಡೆದಿದೆ. ಅರ್ಜುನನು ಅಪ್ರತಿಮವಾಗಿ ಭೀಷ್ಮನ ಮೇಲೆ ಬಾಣವನ್ನೆಸೆಯ ತೊಡಗಿದ್ದಾನೆ. ಅಲ್ಲದೆ ಕೌರವ ಕಿರುಕುಳ ಸೇನೆ ಎಲ್ಲವೂ ಸಂಹಾರವಾಗ ತೊಡಗಿದೆ. ಇದನ್ನೆಲ್ಲ ಕಣ್ಣಾರೆ ಕಂಡು ಖಿನ್ನಮನಸ್ಕನಾದ ಸುಯೋಧನ ಭೀಷ್ಮನತ್ತ ಸಾರಿ, ಅಜ್ಜಾ! ಗೋವಳಿಗನಾದ ಕೃಷ್ಣನನ್ನು, ಬೃಹನ್ನಳೆ ಅರ್ಜುನನ್ನು ಸಾರಥಿಯ ನ್ನಾಗಿ ಮಾಡಿಕೊಂಡು ನಿಮ್ಮನ್ನು ಲೆಕ್ಕಿಸದೆ, ಅವಿ ರತವಾಗಿ ಬಾಣಮಳೆಗರೆಯುತ್ತಿರುವಾಗ ನೀವು ಪಾಂಡವರಲ್ಲಿಟ್ಟ ನೆಂಟತನವನ್ನೇ ನಂಬಿ ಔಪ ಚಾರಿಕ ಯುದ್ಧ ನಡೆಸಿದ್ದೀರಲ್ಲಾ! ಜೋಳದ ಪಾಳಿ ಯನು ಬಗೆಯಲಿಲ್ಲ. ಉಂಡುಪ್ಪಿನ ಋಣ ತೀರಿ ಸಲಿಲ್ಲ! ಎಂದು ಅಣಕವಾಡಿ ಮುದಿಕೇಸರಿಯಲ್ಲಿ ರೋಷದ ಮದ್ದನ್ನು ತುಂಬಿದನು. ಆ ಮದ್ದು ಸ್ಫೋಟವಾಗುವಂತೆ ಭೀಷ್ಮನು ಅರ್ಜುನನ ಮೇಲೆ ಆವೇಶದ ಬಾಣ ಎಸೆದು ಅವನ ರಥವನ್ನು ಎಂಟು ಗಾವುದ ಹಿಂದೆ ಸರಿಸುವುದಲ್ಲದೆ, ಹರಿಯ ಎದೆಗೂ ಬಾಣಬಿಟ್ಟು ಅವನನ್ನು ನೋಯಿಸಿದನು. ಎಂದೂ ಯಾವ ಯುದ್ಧದಲ್ಲಿಯೂ, ಇಂಥ ನೋವನ್ನು ಅನು ಭವಿಸದ ಕೃಷ್ಣನುಕೋಪೋದ್ರೇಕನಾಗಿ ತನ್ನ ಚಕ್ರ ದಿಂದ ಭೀಷ್ಮನಿಗೆ ಇಕ್ಕಿದನು. ಇಷ್ಟರಲ್ಲಿಸೂರ್ಯಾ ಸ್ತವಾಗುತ್ತದೆ

> ಎನ್ನುಮಸುರಾರಿಯು ಹಿಡಿ।
> ವುನ್ನತ ಕರಚಕ್ರಮೆಂದು ಭೀಷ್ಮಂ ತಱಿಗುಂ॥
> ಮುನ್ನಮುಡಂಗುವೆನೆಂಬವೊ।
> ಲನ್ನೆಗಮಸ್ತಾಚಳಸ್ಥನಾದಂದಿನಪಂ॥
>
> (೧೧-೨೪)

ನಿತ್ಯದಂತೆ ಗತಿ ಮುಗಿದಾಗ ಮುಳುಗ ಬೇಕಾದ ಸೂರ್ಯನು ಈಗಲೂ ಮುಳುಗಿದ್ದಾನೆ ಆದರೆ ಕಾವ್ಯದಲ್ಲಿ ಅದಕ್ಕೊಂದು ಅದ್ಭುತ ಕಾರಣ ವಿದೆ. ಕರ್ತವ್ಯ ತೀರುವ ಮುನ್ನ ಸ್ವಸಂರಕ್ಷಣಾಕಾರ ನಾಗಿ ಅಸ್ತಾಚಳಸ್ಥನಾಗಿದ್ದಾನೆ. ಭೀಷ್ಮನ ಮುಯ್ಯಿ ತೀರಿಸುವದಕ್ಕಾಗಿ ಕೃಷ್ಣನು ತನ್ನ ಚಕ್ರದಿಂದಭೀಷ್ಮ ನಿಗೆ ಹೊಡೆದನಷ್ಟೇ! ಅದರ ಪ್ರತಿ ಮುಯ್ಯಿಗಾಗಿ ಕೃಷ್ಣನಿಗೆ ಭೀಷ್ಮನು ಏಟು ಕೊಟ್ಟೇ ತೀರುವನ್ನು ಕೋಪಾವೇಶಭರಿತ ಭೀಷ್ಮ ಕೃಷ್ಣನಿಗೆ ಹೊಡೆಯು ವಾಗ ಕೃಷ್ಣನ ಕೈಯಲ್ಲಿರುವ ಚಕ್ರ ತಾನೇ ಎಂದು ತಿಳಿದು ಹೊಡೆದಾನೆಂದು ಭಾವಿಸಿ ಭಯಪಟ್ಟು ಭಾಸ್ಕರನು ಮುಳುಗಿದನಂತೆ. ಎಂಥ ಅತ್ಯದ್ಭುತ ವಾದ ಕಲ್ಪನೆ ಇದು! ಈ ಕಲ್ಪನೆಯಲ್ಲಿ ಅರಿಗನ ಅಣಕಿನಿಂದುರಿದೆದ್ದ ಮುದಿಕೇಸರಿ ಭೀಷ್ಮನ ಶೌರ್ಯದ ಚಿತ್ರ ಅತಿ ಸಜೀವವಾಗಿದೆ. ಕೃಷ್ಣನ ಚಕ್ರದ ಹೊಡೆತದಿಂದ ಕೆಣಕಲ್ಪಟ್ಟ ಫಣಿಯಂತಿ ರುವ ಭೀಷ್ಮನು ಕೃಷ್ಣನನ್ನು ಕಚ್ಚದಿರಲಾರನೆಂಬ ಧ್ವನಿ ಇದೆ. ಭೀಷ್ಮನ ಪಾತ್ರವನ್ನು ಭೀಕರಗೊಳಿ ಸುವಂತೆ ಮುಂದೆ ಪಾರ್ಥನಿಂದ ಮರಣವೂ ಕಟ್ಟಿಟ್ಟದ್ದೆಂಬ ಭವಿಷ್ಯವೂ ಇದೆ. ಅಲ್ಲದೆ ಆ ದಿನದ ಯುದ್ಧ ಮುಗಿದುದರ ಸೂಚನೆಯೂ ಇದೆ.

ಕುರುಕುಲ ಭಾನು ದುರ್ಯೋಧನನು ಭೀಮ ರಾಹುವಿನಿಂದ ಪರಾಭವಗೊಂಡು ಪರ್ಯಾವ

ಸಾನನಾಗಿದ್ದಾನೆ. ನೆಲಕ್ಕಾಗಿ ಇಱಿಯದೆ ಚಲಕ್ಕಾಗಿ ಕೊನೆಯುಸಿರಿರುವ ವರೆಗೂ ಹೋರಾಡಿ ಅಭಿಮಾನಧನನಾದ ಸುಯೋಧನನ ಮರಣದಲ್ಲಿ ಮಹಾನುಭಾವತೆಯನ್ನು ಮನಗಾಣುತ್ತೇವೆ. ಅವನ ಪೂರ್ವದ ಉದ್ಧಟತನ ಉಳಿದು ಅಳಿಯುವಾಗ ಉದಾತ್ತನಾಗುತ್ತಾನೆ. ಉದಾತ್ತನ ಮರಣಕ್ಕಾಗಿ ಓದುಗರಾದ ನಾವು ಉದಾಸೀನರಾಗುತ್ತೇವೆ.

ಮಗನಱಲೊಳ್ ಕರಂ ಮಱುಗುತಿರ್ಪಿನಮೆನ್ನ
ತನೂಜನಾಳ್ಧನಾ||
ಮಿಗಮಱಿವಾಗೆ ಶೋಕರಸಮಿರ್ಮಡಿಸಿತ್ತು
ಜಳಪ್ರವೇಶ ಮಿ ||
ಲ್ಲಿಗೆ ಪದನೆಂದು ನಿಶ್ಚಯಿಸಿ ವಾರಿಜನಾಥನ
ನಾಥನಾಗಿ ತೊ |
ಟ್ಟಗೆ ಮುಱುಪಂತೆವೊಲ್ ಮುಱುಗಿದಂ ಕಡು
ಕೆಯ್ದುಪರಾಂಬು ರಾಶಿಯೊಳ್ ||
(೧೩-೧೦೩)

ಸೂರ್ಯದೇವನು ತನ್ನ ತನುಜ ಕರ್ಣನ ಮರಣದಿಂದಲೇ ಶೋಕಸಂತಪ್ತನಾಗಿದ್ದಾನೆ. ಕರ್ತವ್ಯಚ್ಯುತನಾಗಬಾರದೆಂದು ಹೇಗೋ ಸಹಿಸಿಕೊಂಡು ಲೌಕಿಕರಂತೆ ಕಾರ್ಯತತ್ಪರನಾಗಿ ಮೂಡು ಮುಳುಗುಗಳ ಮಾರ್ಗಮಧ್ಯದಲ್ಲಿ ಬಾಳರಥ ನೂಕತೊಡಗಿದ್ದಾನೆ. ಕರ್ತವ್ಯನಿರ್ವಹಣೆಗಾಗಿ ಮೂಡಿದ ಸೂರ್ಯನು ತನ್ನ ಸುತನ ಸ್ವಾಮಿ ಸುಯೋಧನನ ಕೇಡನ್ನು ನೋಡಿ ಕಣ್ಣೀರ ಕೋಡಿ ಹೆಚ್ಚಾಗಿ ಸಹಿಸಲಸಾಧ್ಯವಾಗಿ ಹೊಮ್ಮತೊಡಗಿದೆ. ಅಲೌಕಿಕನಾದರೂ ಕವಿ ಲೌಕಿಕ ಗಣತಿಯಲ್ಲಿ ಸೂರ್ಯನನ್ನು ಸೇರಿಸಿದ್ದಾನೆ. ಸುತನ ಸ್ವಾಮಿಯ ಜಯವನ್ನಾದರೂ ಕಾಣಬೇಕೆಂದು ಕಾತುರಪಡುವ ಸೂರ್ಯನು ಮತ್ತೆ ಸುಯೋಧನನ ಸಾವನ್ನೇ ಸಾಕ್ಷಿಯಿಂದ ಕಾಣುತ್ತಿದ್ದಾನೆ. ಮಗನ ಜೀವದ ಇನ್ನೊಂದು ಒಡಲಾದ ಒಡೆಯ ಸುಯೋಧನನ ಸುಖ ಸಂತೃಪ್ತಿಗಳು ತನ್ನ ಸುಖ ಸಂತೃಪ್ತಿಗಳೆಂದು ಸಹಿಸಿಕೊಂಡ ಸೂರ್ಯನಿಗೆ ಸುಯೋಧನನ ಸಾವು ಸಹಿಸಲು ಅಸಾಧ್ಯವಾದ ಸಂಕಟವನ್ನಿತ್ತಿದೆ. ಈ ಶೋಕದ ಕೋಡಿಯಿಂದ ಏಳದವನಾಗಿ ಮುಳುಗುತ್ತಾನೆ. ಈ ಸೂರ್ಯಾಸ್ತವು ಕರ್ಣ ಸುಯೋಧನ, ಸೂರ್ಯರ ಸಂಬಂಧದ ಲೌಕಿಕದ ಸುಮಧುರ ಸಮ್ಮಿಲನದ ಸಂಕೇತವಾಗಿದೆ. ಈ ಕಾರಣದಿಂದ ಸೂರ್ಯಾಸ್ತದ ಸಂದರ್ಭ ಮಹಾಭಾರತದ ರಕ್ತಸಂಬಂಧಾತ್ಮಕವಾಗಿದೆ. ಪಂಪನ ಭಾರತದ ಪ್ರಭಾವಪೂರ್ಣ ಪಾತ್ರಗಳ ಪಂಕ್ತಿಯಲ್ಲಿ ಈ ಸೂರ್ಯದೇವನಿಗೂ ಒಂದು ಸ್ಥಾನವಿದೆ.

ಕುರುಕುಲಾಂಬರಭಾನುವಿನ ಅವಸಾನವನ್ನು ಸೂಚಿಸುವ ಈ ಕಾವ್ಯಾಂಬರಭಾನುವಿನ ಅಸ್ತಮಾನವು ಇಂದಿನ ದಿನದ ಯುದ್ಧವನ್ನೂ ಅಲ್ಲದೆ ಕುರುಕ್ಷೇತ್ರ ಯುದ್ಧಮುಕ್ತಾಯವನ್ನು ಸೂಚಿಸುತ್ತದೆ. ಕೌರವಕುಲತಿಲಕನೊಬ್ಬನ ಮರಣವನ್ನು ಮೂಲವಾಗಿ ಸೂಚಿಸುತ್ತಿದ್ದರೂ, ಕೌರವ ಕುಲ ಪರಿಸಮಾಪ್ತಿಯನ್ನು ಸೂಚ್ಯವಾಗಿ ಸೂಚಿಸುತ್ತದೆ.

ಮಹಾಭಾರತದ ಕಥಾ ವ್ಯಕ್ತಿಗಳ ವೈಯಕ್ತಿಕ ವಿಜಯ ಅಪಜಯಗಳಿಗನುಸಾರವಾಗಿ ಸೂರ್ಯನ ಪಾತ್ರ ಸಂದರ್ಭ ಸೌಂದರ್ಯ ಸಹಾಯವಾಗಿ ಬಂದಂತೆ ಕೆಲವುಸಲ ಸಾಮೂಹಿಕವಾಗಿ ಬಂದು ಸಂಗ್ರಾಮ ಸಂಪತ್ತನ್ನು ಅಧಿಕಗೊಳಿಸುತ್ತದೆ. ಕುರುಕ್ಷೇತ್ರಯುದ್ಧ ಪ್ರಾರಂಭವಾಗಲಿದೆ. ನಾಳಿನ ದಿನ ಮುಂಜಾನೆ ನಡೆಯುವ ಯುದ್ಧಕ್ಕಾಗಿ ಪಾಂಡವಕೌರವ ವೀರಾಧಿವೀರರೆಲ್ಲರೂ ತಮ್ಮ ಆಯುಧಗಳನ್ನು ಮಸೆದುಕೊಳ್ಳುವಾಗ ಹೊಮ್ಮುವ ಕೆಂಗಿಡಿಗಳು, ಸಾಣೆಯ ಮುಂದೆ ಇಟ್ಟಂಗಿಯನ್ನು ಹಿಡಿದರೆ ಚಿಮ್ಮುವ ಅರುಣ ಪ್ರಕಾಶವನ್ನು ಹೋಲುತ್ತಿದ್ದುವಂತೆ. ಶ್ವೇತಗಾಂಗೇಯರ ನೇತೃತ್ವದಲ್ಲಿ ನಡೆಯುವ ಸಮರಕ್ಕೆ ಶಸ್ತ್ರಾಸ್ತ್ರಗಳು ಇಷ್ಟೊಂದು, ಹದನವಾಗುತ್ತಿರುವಾಗ ಎಷ್ಟೊಂದ

ಅದ್ಭುತಾಕಾರದಲ್ಲಿ ಯುದ್ಧನಡೆಯುವುದೆಂಬ
ಕಲ್ಪನೆಯನ್ನು ಈ ಕೆಳಗಿನ ಸೂರ್ಯಾಸ್ತದಿಂದ
ಅರಿಯಬಹುದು.

ಪಗೆ ಸುಗಿವನ್ನೆಗಂ ಮಸೆವ ವೀರ
ಭಟರ್ಕಳ ರೌದ್ರಮಪ್ಪ ಕೆ|
ಯ್ದುಗಳಿನಗುರ್ವಿನದ್ಭುತದಿನುರ್ವಿದ
ಕೆಂಗಿಡಿಗಳ್ ಪಳಂಚಿ ತೊ||
ಟ್ಟಗೆ ಕೊಳೆ ಪಾಯ್ದುವೋಲ್ ಪೊಳೆವ
ಸಂಜೆಯ ಕೆಂಪದು ಸಾಣೆಗೊಡ್ಡಿದಿ|
ಟ್ಟಗೆಯ ರಜಂಬೊಲೆಂಬಿನೆಗಮಸ್ತ
ಮಯಕ್ಕೆಳಿದಂ ದಿವಾಕರಂ||
(೧೦-೩೫)

ವೈರಿಗಳು ಅಂಜುವಂತೆ ತಿಕ್ಕಿದ ಆಯುಧ
ಗಳಿಂದ ಹೊರಹೊಮ್ಮಿದ ಕೆಂಗಿಡಿಗಳಂತೆ
ಸೂರ್ಯಾಸ್ತದ ಸಂಜೆಯಲ್ಲಿ ಸಾಣೆಗೆ ಹಿಡಿದ
ಇಟ್ಟಂಗಿಯಿಂದ ಉಂಟಾಗುವ ಅರುಣತೆ ಇದೆ
ಎನ್ನುವುದರಿಂದ ಭೀಕರ ಯುದ್ಧದ ವಿಶೇಷ ಚಿತ್ರ
ವನ್ನು ಕೊಡುತ್ತದೆ.

ಲೋಕೈಕ ಚಕ್ಷು ನವ ಕಮ|
ಲಾಕರ ಬಾಂಧವಗನೇಕ ದಿತಿಸುತ ಸಮರಾ||
ನೀಕ ಭಯಂಕರನೆರಡುಮ|
ನೀಕಂಗಳನಡರೆ ನೋಡುವಂತುದಯಿಸಿದಂ||
(೧೦-೫೧)

ಯುದ್ಧಾಯುಧಗಳಿಂದ ಸಿದ್ಧರಾಗಿ ಶ್ವೇತ
ಭೀಷ್ಮರು ರಣರಂಗದಲ್ಲಿ ಎದುರಾಗಿ ನಿಂತು ಕಾದು
ವಾಗ ಸೂರ್ಯೋದಯವಾಗುವದು. "ಎರಡು
ಮನೀಕಂಗಳನಡರೆ ನೋಡುವಂತೆ" ಉದಯಿಸಿ
ದನಂತೆ. ಈ ಪೂರ್ವದ ದೈತ್ಯ ದಾನವರ ಮುಂತಾದ
ಯುದ್ಧಗಳನ್ನು ಕಂಡ ಈ ಸೂರ್ಯನು ಈ
ಉಭಯಸೇನಾಸಾಮರ್ಥ್ಯಶ್ರೀಯನ್ನು ನೋಡಬೇ
ಕೆಂದು ಉದಯಿಸಿ ಬಂದನೆಂದು ವರ್ಣಿತನಾಗ
ಬೇಕಾದರೆ ಜರುಗಲಿರುವ ಯುದ್ಧ ರೌದ್ರತೆಯ
ಚಿತ್ರವನ್ನು ಎತ್ತಿ ತೋರಿಸುತ್ತಿದೆ. "ಲೋಕೈಕ
ಚಕ್ಷು" ಎನ್ನುವ ಸೂರ್ಯನ ವಿಶೇಷಣ ಅಪರಿಮಿ
ತಾರ್ಥ ಭರಿತವಾಗಿ ಪ್ರಸ್ತುತ ಪ್ರಸಂಗದ ಸಮರ
ಸೌಂದರ್ಯಾಭಿವ್ಯಕ್ತನೆಗೆ ಸಹಾಯಕವಾಗಿದೆ.
ಮತ್ತು ಯುದ್ಧಾರಂಭವನ್ನು ಅರುಹುತ್ತಲಿದೆ
ಈ ಸೂರ್ಯೋದಯವು.

ಕವಿದೆರೆಡುಂ ಪತಾಕಿನಿಗಳಾಗಡುಮೆನ್ನನೆ
ಸಕ್ಕಿಮಾಡಿ ಕಾ|
ದುವುದಱಿನಿಲ್ಲಿ ಸತ್ತರಸುಮಕ್ಕಳ
ಪಾಪಮಿದೆಲ್ಲಮೆನ್ನನೆ||
ಯ್ದುವುದುಪವಾಸದಿಂ ಜಪದಿ
ನಾನದನೋಡಿಸಿ ಶುದ್ಧನಪ್ಪೆನಂ||
ಬವೊಲಪರಾಂಬುರಾಶಿಗಿೞಿದಂ
ನಳಿನೀವರ ಜೀವಿತೇಶ್ವರಂ||
(೧೨-೩೩)

ದ್ರುಪದ, ಶತಾನೀಕ, ಶತಚಂದ್ರ, ಕೈಕಯ, ಕುಂತಿ
ಭೋಜ ಮೊದಲಾದ ಅರಸುಗುವರರೆಲ್ಲ ಅಳಿ
ದಿದ್ದಾರೆ. ದ್ರೋಣಾಚಾರ್ಯನು ಎಡೆಬಿಡದೆ ಹೆಣ
ಗಳ ಬಣವೆಯನ್ನೊಟ್ಟುತ್ತಿರುವನು. ಆಗ ಕಪಟ
ನಾಟಕ ಚಾಲಕ ಕೃಷ್ಣನು ಯಮನಂದನನಿಂದ ಅಶ್ವ
ತ್ಥಾಮಗಜಮರಣವೃತ್ತಾಂತವನ್ನು ಉಚ್ಚರಿಸಿ
ಸುವನು. ಇದನ್ನಾಲಿಸಿದ ಆಚಾರ್ಯ ದ್ರೋಣ
ಆಯುಧ ಬಿಸುಟು ಶೋಕಾಕುಲನಾಗಿ ನಿಂತಾಗ
ದೃಷ್ಟದ್ಯುಮ್ನನು ದ್ರೋಣನ ತಲೆಗೂದಲ್ಪಿಡಿದು
ರುಂಡವನ್ನು ಕತ್ತರಿಸುವನು. ತಂದೆಯ ಮರಣ
ನಿಮಿತ್ತ ಮುನಿದೆದ್ದ ಅಶ್ವತ್ಥಾಮನು ಭೂವಲಯ
ದಲ್ಲಿ ಅಪಾಂಡವರನ್ನಾಗಿ ಮಾಡುವೆನೆಂದು ಶಪ
ತಸ್ಥನಾಗಿ ಶರಗಳನ್ನೆಸೆಯುತ್ತಾ ರಣರಂಗದಲ್ಲಿಯ
ಸೇನೆಯನ್ನೆಲ್ಲ ಕುರಿಗಳಂತೆ ತರಿದು ಹಾಕತೊಡ
ಗಿದ್ದಾನೆ. ಈ ಪ್ರಳಯಾಶ್ವತ್ಥಾಮನ ಅನಾಹುತ
ತಪ್ಪಿಸುವುದಕ್ಕಾಗಿ ಕೃಷ್ಣನು ನಾರಾಯಣಾಸ್ತ್ರ
ದಿಂದ ಅಶ್ವತ್ಥಾಮನನ್ನು ಇರಿಯುವನು. ಆಗ
ಸೂರ್ಯಾಸ್ತವಾಗಲು ಯುದ್ಧ ಮುಗಿಯುವುದು.

ಇಲ್ಲಿಯ ಸೂರ್ಯಾಸ್ತದ ವೈಶಿಷ್ಟ್ಯವೆಂದರೆ

ಆ ದಿನದ ಯುದ್ಧದ ಮುಕ್ತಾಯ, ಅನಂತ ಅರಸು ಮಕ್ಕಳೆಲ್ಲ ಅಂತಕಾಧೀನರಾಗಿ ರಣರಂಗವೆಲ್ಲ, ರುಧಿರಸಾಗರವಾಗಿದೆ ಎಂಬುದು, ಸೂರ್ಯನ ಸಮಕ್ಷನದಲ್ಲಿಯೇ ಇನಿತು ಭಯಾನಕ ಅನಾಹುತ ನಡೆದಿರುವದರಿಂದ ಅದನ್ನು ನೋಡಿದ ತನಗೂ ಪಾಪಬರುವದೆಂದು ಜಪ ತಪ ಮುತ್ತು ಉಪವಾಸಗಳಿಂದ ಪಾಪ ಪರಿಹಾರ ಮಾಡಿಕೊಳ್ಳಲು ಸಾಗರಕ್ಕಿಳಿದನಂತೆ. "ಶುದ್ಧನಪ್ಪೆನು" ಎಂದು ಅಪರಾಂಬುರಾಶಿಗಿಳಿದ ನಳಿನೀವರನ ಪ್ರಸಂಗವು ರಣರಂಗದ ಸಮಗ್ರಚಿತ್ರವನ್ನು ಕಣ್ಮುಂದೆ ಕಟ್ಟುತ್ತದೆ. ಅದರಂತೆ ಅಲೌಕಿಕನಾದ ಸೂರ್ಯನೂ ಪಾಪಕರ್ಮದ ನಿವಾರಣೆಗಾಗಿ ಜಪ, ತಪ, ಉಪವಾಸಗಳನ್ನಾಶ್ರಯಿಸಿ ಲೌಕಿಕನಾಗಿದ್ದಾನೆ. ದ್ರೋಣಾಚಾರ್ಯನ ಮರಣ ಸಮಾಚಾರ ನಿವೇದಾತ್ಮಕವೂ ಆಗಿದೆ. ಮೇಗಂ ಬಗೆವೊಡೆ ಒದೆಹಿತಮಾಗದ ಜೈನಧರ್ಮದ ಕವಿ ಪಂಪನ ಮನೋಧರ್ಮವನ್ನು ಅರಿಯಬಹುದಾಗಿದೆ ಈ ಸೂರ್ಯಾಸ್ತದಲ್ಲಿ.

ಸ್ಥಿತಪ್ರಜ್ಞನಾದ ಮಹಾಕವಿ ಪಂಪನು, ಕಥೆಯ ಪಾತ್ರ, ಹಾಗು ಘಟನೆಗಳ ಘನತೆಗಾಗಿ, ಸೂರ್ಯನ ಉದಯಾಸ್ತಮಾನಗಳನ್ನುಪಯೋಗಿಸಿ, ಸೌಂದರ್ಯ ಶ್ರೀಮಂತಿಕೆಯನ್ನಧಿಕಗೊಳಿಸಿದಂತೆ ಕೆಲವೊಂದು ಸನ್ನಿವೇಶಗಳಲ್ಲಿ ಕಾವ್ಯಸೌಂದರ್ಯ ದೃಷ್ಟಿಯಿಂದಲೂ ಮನೋಹರವಾಗಿ ಬಳಸಿದ್ದಾನೆ. ಆ ಸೂರ್ಯ–ಉದಯಾಸ್ತಮಾನಗಳ ಉತ್ಪ್ರೇಕ್ಷೆ, ಉಪಮೆಗಳಲ್ಲಿ ಕವಿಯ ಕಲ್ಪನಾ ವಿಲಾಸ ವಿಕಾಸಗಳನ್ನರಿಯಬಹುದಾಗಿದೆ.

"ದಿನಕರ ಬಿಂಬಾಂಬುಜಮಂಬರಸರೋವರದಿಂ
ಪತ್ತುವಿಡುವುದುಂ
[೩-೩೩ವ]

ಸೂರ್ಯಾಸ್ತ ಸೂಚನೆಯನ್ನು ಇಷ್ಟೊಂದು ಅಲಂಕಾರಿಕವಾಗಿ ಹೇಳುತ್ತಾನೆ. ಸೂರ್ಯಕಮಲನು ಆಕಾಶ ಸರೋವರದಿಂದ ಕೆಳಗಿಳಿದನು ಎಂಬ ರೂಪಕದ ಶ್ರೀಮಂತಿಕೆಯಲ್ಲಿ ಸೌಂದರ್ಯ ತುಂಬಿ ಸೂಸುತ್ತಿದೆ. ಈ ಸೂರ್ಯಾಸ್ತವನ್ನು ಕಾವ ಸೌಂದರ್ಯ ದೃಷ್ಟಿಯಿಂದ ಉಪಯೋಗಿಸಿರುವನೆ ವಿನಃ ಪಾತ್ರಗಳ ದೃಷ್ಟಿಯಿಂದಲ್ಲ. ಏಕಚಕ್ರಪುರದಿಂದ ಪ್ರಯಾಣ ಬೆಳಸಿದ ಪಾಂಡವರು ಯಮುನಾ ನದಿಯ ದಡವನ್ನು ತಲುಪಿದಾಗ ಸಂಜೆಯಾಯಿತೆಂಬ ಸೂಚನೆಗಾಗಿ ಈ ಸೂರ್ಯಾಸ್ತವನ್ನುಪಯೋಗಿಸಿದ್ದಾನೆ.

ಮಾರ್ತಾಂಡೋದಯಮೆ ನಿಜೋದಯಮಾಗೆ
ಪಯಣಂಬೋಗಿ
[೩-೩೫ವ]

ಇರುಳುಗಳೆದು ಮುಂಜಾವಿನಲ್ಲಿ ಮುಂದಕ್ಕೆ ಪಾಂಡವರು ಪ್ರಯಾಣ ಬೆಳಸಿದರೆಂದು ಹೇಳಬೇಕಾದರೂ ಕವಿಯು ಸೂರ್ಯೋದಯವನ್ನು ಸೂಚಿಸುತ್ತಾನೆ. ಮುಂದೆ ಅಂಗದರ್ಪಣನೆಂಬ ರಾಕ್ಷಸನನ್ನು ಜಯಿಸಲಿರುವುದರಿಂದ ಪಾಂಡವರ ಅಭ್ಯುದಯ ಪ್ರತೀಕವಾಗಿದೆ ಈ ಸೂರ್ಯೋದಯ. ಹೀಗೆ ಚಿಕ್ಕಚಿಕ್ಕಘಟನೆಗಳಲ್ಲಿಯೂ ಕೂಡ ಸೂರ್ಯನ ಉದಯಾಸ್ತಗಳ ಪಾತ್ರವನ್ನು ಕವಿ ಚಿತ್ರಿಸಿರುತ್ತಾನೆ. ಆದರೆ ಇವು ಸೌಂದರ್ಯ ಸಂದರ್ಭದ ಪುಷ್ಟಿಯನ್ನೀಯಲಾರವು.

ಕವಿತಾಗುಣಾರ್ಣವ ಎಂಬ ಬಿರುದಾಂಕಿತನಾದ ಮಹಾಕವಿ ಪಂಪನು ಕಾವ್ಯಸೌಂದರ್ಯದ ಸಮಷ್ಟಿಯನ್ನು ಬಲ್ಲವನು. ತನ್ನ ಪ್ರತಿಭಾ ಪರಿಪೂರ್ಣತೆಯ ಪ್ರಭಾವದಿಂದ ನಿಸರ್ಗಮನೋಹರ ಮನಮೋಹಕತೆಗಳ ಚಿತ್ರವನ್ನು ರಸವತ್ತಾಗಿ ಚಿತ್ರಿಸಬಲ್ಲನು

ನಿನಗಿನಿಸಪ್ಪೊಡಂ ಮನದೊಳೋವದ ಕಱ್ತಲೆ
ಯೆಂಬ ಪಾಪಕ।
ರ್ಮನ ಮಱಿಗಳ್ ಕರಂ ಪಲವುಮುಮಂ
ಸೆರೆಗೆಯ್ದು ವಿವೆಂದು ತಮ್ಮನ ॥
ಣ್ಪಿನೊಳವನೊಪ್ಪಿಪಂತೆ ಮುಗುಳೊಳ್

ಮಱಿಸುಂದಿದ ತುಂಬಿ ಪಾಱಿ ಕೋ |
ಕನದ ಕುಲಂಗಳುಳ್ಳಲದುರ್ವೆಂಬಿನಮುಂದೊ
ಗೆದಂ ದಿವಾಕರಂ ||
[೨-೮೪]

ಪುಷ್ಪಪರಾಗದ ಪ್ರೇಮದಿಂದ ಮೊಗ್ಗೆಗಳಲ್ಲಿ ಮೈಮರೆತು ಭ್ರಮರಗಳು ಮಲಗಿವೆ. ಸೂರ್ಯಾಸ್ತವಾದೊಡನೆ ಕಮಲಗಳು ಮುಚ್ಚಿಕೊಳ್ಳಲು ವಾಸನಾಸಕ್ತ ಭ್ರಮರಗಳು ಅಲ್ಲಿ ಸಿಕ್ಕಿ ಕೊಂಡು ಸೂರ್ಯೋದಯವಾಗಲು ಕಮಲಗಳು ಅರಳಿದಾಗ ಅಲ್ಲಿಂದ ಹಾರಿಹೋಗುವವು. ಈ ಸಂದರ್ಭದ ಸುತ್ತ ಹೆಣೆದ ಉತ್ಪ್ರೇಕ್ಷೆ ಕಾವ್ಯಸೌಂದರ್ಯದ ಮಡುವಾಗಿದೆ. ಸೂರ್ಯನ ಸ್ನೇಹಿತೆಯರಾದ ಕಮಲಗಳು ಅವನ ವಿರೋಧಿಯಾದ ಕತ್ತಲೆಯ ಮರಿದುಂಬಿಗಳನ್ನು ಬಂಧಿಸಿ ನಿನಗೆ ಇವನ್ನು ಒಪ್ಪಿಸುವೆವು ಸ್ವೀಕರಿಸು ಎಂದು ಹೇಳಿದುವಂತೆ. ಕವಿಸಮಯ ಲೋಕದಲ್ಲಿ ಆಜನ್ಮ ವೈರಿಗಳಾದ ಪ್ರಕಾಶ, ತಮಗಳ ವೈಷಮ್ಯವನ್ನರಿತ ಸೂರ್ಯನ ಸಖಿಯರಾದ ಕಮಲಿನಿಯರು ಬಂಡುಣಬಂದ ದುಂಬಿ ಹಿಂಡನ್ನು ಹಿಡಿದು ಬಂಧಿಸಿದ್ದಾರೆ. ಕವಿಯ ಕಲ್ಪನಾಚಾತುರ್ಯವು ಪ್ರಕೃತಿಯ ಸೌಂದರ್ಯ ವರ್ಣನಾಸಾಗರವಾಗಿದೆ.

ನವನಳಿನೀವನಂಗಳ ಪರಾಗರಜಂಗಳ
ನುಂಡು ಮುನ್ನಮಂ |
ತವನೆ ವಿಯತ್ತಳ ಭ್ರಮಣ ವಿಹ್ವಲನಾಗಿ
ಬಱಲ್ದು ಕಾಱುವಂ ||
ತೆವೊಲಿರೆ ಕೆಂಪು ತತ್ಕಮಳ ಕಾನನ
ಕಂಟಕ ಲಗ್ನ ಪಾದನಾ |
ದವೊಲುಡುಗುತ್ತು ಮಾತ್ಮ ಕರಮಂ ರವಿ
ಪೊರ್ದಿದನಸ್ತಶೈಲಮಂ ||
[೪-೪೬]

ಸೂರ್ಯನು ಅದೇ ತಾನೆ ಅರಳಿದ ಕಮಲದ ಪರಾಗ ಸೇವಿಸಿ ಲೋಕದಸುತ್ತೆಲ್ಲ ಸುತ್ತುವರಿದು ಪ್ರಯಾಣ ಬಳಲಿಕೆಯಿಂದ ಕಾರಿಕೊಂಡ ಹಾಗೆ ಸಂಧ್ಯಾಕಾಲದ ಕೆಂಪುಕಾಂತಿ ಇತ್ತು. ಕಮಲದ ಮೇಲಿರುವ ಮುಳ್ಳುಗಳು ತನ್ನ ಕಾಲುಗಳಿಗೆ ನಟ್ಟಿರುವುದರಿಂದ ಪಾದಗಳನ್ನು ಸೇದುಕೊಳ್ಳುವಂತೆ ಕಿರಣಗಳನ್ನು ಎಳೆದುಕೊಳ್ಳುತ್ತಾ ಅಸ್ತಂಗತನಾದನು. ಈ ಸೂರ್ಯಾಸ್ತವು ಸೂರ್ಯನಿಗಿರುವ ಕಮಲೈಕಬಾಂಧವ್ಯ ನಳಿನೀವರ ಜೀವಿತೇಶ, ಮೊದಲಾದ ಬಿರುದುಗಳಿಗೆ ಬರೆದ ಟೀಕೆಯಂತಿದೆ. ಮೂಡಿದೊಡನೆ ಅದೇ ಆಗ ಅರಳಿದ ಕಮಲದ ಪರಾಗವನ್ನು ಹೀರಿದ್ದಾನೆ. ಕಮಲದ ಮುಳ್ಳು ಕಾಲಿಗೆ ನೋವನ್ನುಂಟು ಮಾಡಲು ಮುಳಿದಿದ್ದಾನೆ. ಪ್ರವಾಸ ಪ್ರಯಾಸದಿಂದ ಕಮಲದ ಪರಾಗವನ್ನೇ ಕಾರಿಕೊಂಡಿದ್ದಾನೆ. ಒಟ್ಟಿನಲ್ಲಿ ಸೂರ್ಯ ವ್ಯವಹಾರದ ಕೇಂದ್ರಸ್ಥಲ ಕಮಲವಾಗಿ ಕವಿ ಸಮಯ ಪ್ರಪಂಚದ ತತ್ವವನ್ನು ಪ್ರತಿಪಾದಿಸುತ್ತದೆ ಈ ಸೂರ್ಯಾಸ್ತವು.

ಸಂಸ್ಕೃತಕ್ಕೆ ವಾಲ್ಮೀಕಿಯು ಆದಿ ಕವಿಯಾದಂತೆ ಕನ್ನಡದ ಕವಿಕುಲಗುರು ಮಹಾಕವಿ ಪಂಪನು ಕನ್ನಡಕ್ಕೆ ಆದಿಕವಿ. ಪಂಪನ ಕಾವ್ಯ ಕಥನಕಲೆ ನ ಭೂತೋ ನ ಭವಿಷ್ಯತೀಯಾದುದು. ಇಂತಹ ವಿಶಿಷ್ಟ ಕಲೆಯಿಂದ ಕೂಡಿದ ವಿಕ್ರಮಾರ್ಜನ ವಿಜಯ ಕಾವ್ಯದಲ್ಲಿ ಸೂರ್ಯನ ಉದಯಾಸ್ತಗಳನ್ನು ಸಜೀವ ಪಾತ್ರದಂತೆ ಚಿತ್ರಿಸಿದ್ದಾನೆ. ಕಥಾಪಾತ್ರ, ಘಟನೆ, ಕಾವ್ಯಸೌಂದರ್ಯ, ಯುದ್ಧದ ಆರಂಭ–ಮುಕ್ತಾಯಗಳಿಗೆ ಸಂಬಂಧಿಸಿ ನಿರೂಪಿಸಿದ್ದಾನೆ. 'ಬೆಳೆಯ ಸಿರಿ ಮೊಳಕೆಯಲ್ಲಿ' ಕಾಣುವಂತೆ ಕಥಾಪಾತ್ರಗಳ ಉನ್ನತಿ–ಅವನತಿಗಳನ್ನು ಮುಂಚಿತವಾಗಿ ಸೂರ್ಯನ ಉದಯಾಸ್ತಗಳಲ್ಲಿಯೇ ಕಾಣುತ್ತೇವೆ. ಈ ಒಂದು ವಿಶಿಷ್ಟಸಿದ್ಧಿ ಕನ್ನಡದ ಅನ್ಯಕವಿಗಳಲ್ಲಿ ಪ್ರಾಯಶಃ ದೊರೆಯಲಾರದು. ಸಂಸ್ಕೃತ ಕವಿ ಕಾಳಿದಾಸನ ಅಭಿಜ್ಞಾನ ಶಾಕುಂತಲನಾಟಕದಲ್ಲಿ ನಿರ್ವಹಿಸಿದ

ಪ್ರ ಕೃ ತಿ ಯ ಪಾತ್ರವನ್ನು ಪಂಪಕವಿ ವಿಕ್ರಮಾ
ರ್ಜನ ವಿಜಯದಲ್ಲಿ ಸೂರ್ಯದೇವನು ನಿರ್ವಹಿ
ಸುತ್ತಾನೆ. ಈ ಕಾವ್ಯದ ಕೊನೆಯಲ್ಲಿ ಸಮ್ರಾಟ
ವಚನ ಸ್ವೀಕಾರ ಕೈಕೊಳ್ಳಬೇಕಾದವರು ಪಾಂಡ
ವರು. ಪಾರ್ಥನು ಸಿಂಹಾಸನಾರೋಹಕನು ಆದುದ
ರಿಂದ ಸಾಮಾನ್ಯವಾಗಿ ಪಾಂಡವರಿಗೆ, ವಿಶೇಷವಾಗಿ
ಅರ್ಜುನನಿಗೆ ಸಂಬಂಧಿಸಿದ ಸೂರ್ಯೋದಯ
ವರ್ಣನೆಗಳು ಅಧಿಕಪ್ರಮಾಣದಲ್ಲಿ ಬರುತ್ತವೆ.
ಅಧಿಕಾರಾಸನ ವಿಹೀನರಾದ ಹನ್ನೊಂದಕ್ಷೋಹಿಣಿ
ಸೈನ್ಯ, ನೂರೊಂದು ಜನ ಸಹೋದರರು ಸಂಹಾರ
ರಾದ ಕೌರವರಿಗೆ ಸಂಬಂಧಿಸಿದ ಸೂರ್ಯಾಸ್ತ
ಮಾನ ವರ್ಣನೆಗಳು ಹೆಚ್ಚಾಗಿ ಬರುವುದು ಸಹಜವೇ
ಸರಿ. ಕರ್ಣನ ಗಣತಿ, ಕೌರವಗಡಣದಲ್ಲಿದ್ದರೂ
ಸೂರ್ಯನ ಸಂಬಂಧ ಅಧಿಕವಾದುದಕ್ಕೆ ಕರ್ಣ,
ಹೊಂಗಿರಣರ ಜನ್ಯ ಜನಕ ಬಾಂಧವ್ಯವೇ ಮೂಲಾ
ಧಾರ. ಅಲ್ಲದೆ ಕವಿಯ ರಾಜಧರ್ಮ ಅರ್ಜುನ
ನಲ್ಲಿದ್ದರೂ, ಮನೋಧರ್ಮ, ದುರಂತ ವ್ಯಕ್ತಿ
ಕರ್ಣನ ಕಡೆಗಿದೆ. ಅಂತೆಯೇ "ಕರ್ಣಂಗೊಡ್ಡಿತ್ತು
ದಲ್ ಭಾರತಂ, ಕರ್ಣನ ಪಡೆಮಾತಿನೊಳ್
ಪುದಿದು ಕರ್ಣರಸಾಯನಮಲ್ತೆ ಭಾರತಂ,
ಒಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ,
ನನ್ನಿಯೊಳಿನತನಯಂ" ಎಂದು ಹೊಗಳಿ ಕರ್ಣ
ನನ್ನು ಕೃತಾರ್ಥಗೊಳಿಸಿ ಕವಿಯೂ ಕೃತಾರ್ಥ
ನಾಗಿದ್ದಾನೆ.

ಒಟ್ಟಿನಲ್ಲಿ ಕಥಾನಾಯಕ ಅರ್ಜುನನ ಪಾತ್ರ
ದಲ್ಲಿ ತಕ್ಕಮಟ್ಟಿಗಿದ್ದರೆ, ಚಾಗದ ನನ್ನಿಯ ಕಲಿತನ
ದಾಗರವಾದ, ತನ್ನ ಪುತ್ರ ಕರ್ಣನ ಪಾತ್ರದಲ್ಲಿ
ಪ್ರಾಣನಾಗಿ ಬರುತ್ತಾನೆ ಸೂರ್ಯನು. ಭೀಮ,
ಭೀಷ್ಮ, ಶ್ವೇತ, ದುರ್ಯೋಧನ ಮೊದಲಾದ
ನಾಯಕರ ಪಾತ್ರಗಳಲ್ಲಿಯೂ ಸೂರ್ಯನ ಸುಳಿ
ದಾಟವಿದೆ. ವಾಸ್ತವ ಲೋಕದ ಅಲೌಕಿಕ
ಸೂರ್ಯನು ಕಾವ್ಯಲೋಕದ ಲೌಕಿಕ ಚೌಕಟ್ಟಿನಲ್ಲಿ
ಕುಳಿತಿದ್ದಾನೆ. ಔಚಿತ್ಯ ಪೂರ್ಣವಾದ
ಸೂರ್ಯೋದಯ, ಸೂರ್ಯಾಸ್ತಗಳು ಅಧಿಕವಾಗಿ
ಅಪವಾದವಾಗಿರುವ ಒಂದೆರಡು ಸೂರ್ಯ ಉದ
ಯಾಸ್ತಗಳು ಕಾವ್ಯಸೌಂದರ್ಯದ ಸೆಲೆಗಳಾಗಿ
ಸಮಸ್ತಸಾರ್ಥಕಾತ್ಮಕವಾಗಿವೆ. ಆದುದರಿಂದ
ಕಾವ್ಯಸತ್ಯ– ಲೋಕಸತ್ಯಗಳ ತರಗಳನ್ನು ತಳ್ಕಿಕ್ಕಿ
ಲೋಕಪೂಜ್ಯನಾಗಿದ್ದಾನೆ ಮಹಾಕವಿ ಪಂಪನು.

—ಸಂಗಮನಾಥ ಜಿ. ಹಂಡಿ

# ಗೌರವಾಚಾರ್ಯ ಬಸವಣ್ಣಕೃತ
# 'ಕಲ್ಯಾಣ ಶತಕ'

ಹರಿಹರ ಕವಿಯ ಪಂಪಾಶತಕ ಮತ್ತು ರಕ್ಷಾಶತಕಗಳ ಅನಂತರ ಪುಲಿಗೆರೆಯ ಸೋಮನ ಸೋಮೇಶ್ವರ ಶತಕವು ಕರ್ಣಾಟಕ ವಿಷಯದಲ್ಲಿ ಬಹುಪ್ರಸಿದ್ಧಿ ಹೊಂದಿದೆ. ಜನಸಾಮಾನ್ಯರ ಗ್ರಾಹ್ಯಕ್ಕೆ ನೀತಿಯನ್ನು ಬಹುಚಮತ್ಕಾರವಾಗಿ ಇಂಪಾಗಿ ತನ್ನ ಶತಕದಲ್ಲಿ ಅಳವಡಿಸಿ ಕೊಂಡಿರುವುದೇ ಇದಕ್ಕೆ ಕಾರಣವಿರಬಹುದು.

ಪ್ರಕೃತ 'ಕಲ್ಯಾಣ ಶತಕ' ಎಂಬ ಒಂದು ಕೃತಿಯು ದೊರೆತಿದೆ. ಹರಿಹರ ಕವಿಯ ಶತಕಗಳ ಅನಂತರ ಕಲ್ಯಾಣ ಶತಕವೇ ಮುಖ್ಯವಾದುದು ಎನ್ನಬಹುದು. ಇದರ ಕರ್ತೃ 'ಗೌರವಾಚಾರ್ಯ ಬಸವಣ್ಣ, ಈತನು ಪಂಪಾಶತಕ ರಕ್ಷಾಶತಕಗಳನ್ನು ನೋಡಿದ್ದಾನೆ.

> ಶಿವನಂ ಶ್ರೀ ಶಿವಭಕ್ತರಂ ಪೊಗಳ್ದ ಪುಣ್ಯಂ
> ಚೆತ್ತ ಸಜಿಹ್ವೆಯಂ
> ಭವಿಯಂ ಪಾಮರದೈವಮಂ ಪೊಗಳೆ ಪಾಪಂ ಬ
> ರ್ಕುವೆಂತೆಂದೆನಲ್
> ನವಕರ್ಪೂರಪಟೀರ ಕುಂಕುಮಮನಂಗಕಣ್ಪು
> ಗೆಯ್ದುದ್ದುರ್ವೇಣ್|
> ತವೆದುರ್ಗಂಧ ಮನಾನಲೇನೆಸಗುವೋ ಕಲ್ಯಾಣ
> ದೇವಾಗ್ರಣೀ ||
> ಭುವಿಯೊಳ್ ಭೂತಹಿತಾರ್ಥವಾಗಿ ಪಿರಿದೊಳ್ಪ
> ತಾಡಲೇಂ ಪಾಪಮ
> ಲ್ತು ವಿಲಾಸಂದಳೆದಾತ್ಮರಕ್ಷಣ ನಿಮಿತ್ತಂ
> ಕ್ಷುದ್ರದುರ್ಮರ್ತ್ಯರಂ|
> ನವಕಂದರ್ಪ ಸುರೇಂದ್ರ ದಿವಸಿಂಧೂ
> ಪೇಂದ್ರ ಭೋಗೀಂದ್ರರೆಂ
> ದು ವಿಚಾರಂಗಳೆದೊಳ್ಪನೇ ಕುಕವಿಯುಕ್ಕುಂ
> ಕಲ್ಯಾಣ ದೇವಾಗ್ರಣೀ ||

ಎಂದು ಕೃತಿಕಾರನು ತನ್ನ ಉದ್ದೇಶವನ್ನು ತಿಳಿಸಿದ್ದಾನೆ. ನಮಗೆ ದೊರೆತ ಓಲೆಗರಿಯ ಪ್ರತಿಯಲ್ಲಿ ಮೊದಲ ೬ ಗರಿಗಳು ಇಲ್ಲದ ಪ್ರಯುಕ್ತ ಶತಕದ ಮೊದಲ ೧೬ ವೃತ್ತಗಳು ಉಪಲಬ್ಧವಾಗಿಲ್ಲ. ಅಲ್ಲದೆ ಮಧ್ಯದಲ್ಲಿಯೂ ಒಂದು ಗರಿಯು (೨೮ನೇಗರಿ) ಅರ್ಧಕ್ಕೆ ಮುರಿದು ಹೋಗಿರುವುದರಿಂದ ಎರಡು ವೃತ್ತಗಳು ಒಂದೊಂದೂ ಅರ್ಧ ಭಾಗವಷ್ಟೇ ತಿಳಿದುಬರುತ್ತದೆ. ಒಟ್ಟಿನಲ್ಲಿ ಶತಕದ ೧೦೮ ವೃತ್ತಗಳಲ್ಲಿ ೮೯ ವೃತ್ತಗಳು ದೊರೆತಂತಾಯಿತು. ಕೊನೆಯಲ್ಲಿ ಎರಡು ಕಂದ ಪದ್ಯಗಳು ಇವೆ.

ಶ್ರೀ. ಸಿ. ಮಹಾದೇವಪ್ಪನವರಿಗೆ ಲಭಿಸಿದ 'ಕಲ್ಯಾಣ ಶತಕ' ಪ್ರತಿಯಿಂದ ಈ ಕವಿಯ ವಂಶ ವಿವರ ಲಭಿಸಿದೆ.

ಮುತತೂರಿನ ಗಂಗಾಧರನ ಮಗ ಗಂಗಾಧರದೇವ,ಗಂಗಾಧರದೇವನ ಮಗ ಗೌರಪಾರ್ಯ, ಗೌರಪಾರ್ಯನ ಮಗ ಗೌರಪಾಚಾರ್ಯ ಬಸವಣ್ಣ. ಈತನೇ ಈ ಶತಕದ ಕರ್ತೃ. ಈತನು ಶ್ರೀ ಮದಜಿತಮೂರ್ತಿಯ ಶಿಷ್ಯ. ಈತನಿಗೆ ಬಸವಾಂಕ, ವೃಷಾಂಕ ಎಂಬ ಹೆಸರುಗಳಿವೆ.

ಈ ಶತಕದಲ್ಲಿ, ಕಲ್ಯಾಣೇಶ್ವರ, ಕಲ್ಯಾಣ ದೇವಾಗ್ರಣೀ, ಮತ್ತು ಕಲ್ಯಾಣೇಶ ಎಂದು ಮೂದೆರನಾದ ಅಂಕಿತಗಳಿರುವುದೆಂದು"* ತಿಳಿದು ಬಂದಿದೆ. ನಮಗೆ ದೊರೆತ ಪ್ರತಿಯಲ್ಲಿ ಶತಕಾಂತ್ಯದಲ್ಲಿ 'ಗೌರವಾಚಾರ್ಯ ಬಸವಣ್ಣ' ಎಂದು

ಹೆಸರು ಸ್ಪಷ್ಟವಾಗಿದೆ. ಅಲ್ಲದೆ ಶತಕದಲ್ಲಿ 'ಕಲ್ಯಾಣ ದೇವಾಗ್ರಣೀ' ಎಂಬ ಒಂದೇ ಅಂಕಿತವಿದೆ.

ಕವಿಯು ಮೊದಮೊದಲಲ್ಲಿ ಶಿವನ ಹೆಚ್ಚಳವನ್ನು ಶಿವನ ಸಾಮರ್ಥ್ಯವನ್ನು ಕೊಂಡಾಡಿ ಶಿವನೇ ಪರಮದೈವವೆಂದು ತಿಳಿಸುತ್ತಾನೆ.

ನಡುಗಿದನಿಂದ್ರನಂಜಿದನಹಸ್ಪತಿ ನಾಡೆ
ವಿರಂಚಿ ಶೋಕವಂ
ತೊಡಗಿದನಿಂದು ಸಂದೆಗಕೆ ಸಂದನಮರ್ತ್ಯ
ಚಯು ನಡೆಗೆಟ್ಟುದೆಂದು ಬಾ।
ಯ್ವಿಡುತೆನಗೆಂತು ಮಾಳ್ಪನಕಟಾ
ಅಕಟಾ ಯೆನುತಿರ್ಪ ಕೃಷ್ಣನಂ
ಕೆಡಪಿದ ಕಾಲಕೂಟಮನೆ ತಾಳ್ದನೆ
ಧೂರ್ಜಟಿ ಕಲ್ಯಾಣ ದೇವಾಗ್ರಣೀ ॥

ದುರ್ಜನರ ಅವಗುಣವನ್ನು ಅವರಿಂದ ಸಜ್ಜನರಿಗೆ ಆಗುವ ಹಿಂಸೆಯನ್ನು ಲಕ್ಷ್ಯಪೂರ್ವಕವಾಗಿ ನಿರೂಪಿಸುತ್ತಾನೆ.

ಸುಲಭಸರ್ವನೃತ ಭಾಷಣಸರ್ವಮನ
ಲೇರ್ಸಿವರೆಲ್ಲರ್ಗೆ ದು
ಷ್ಕಲುಷಾತ್ಮರ್ಕಪಟಜ್ಞರೆನ್ನಯುಮನಂತೇ
ಬಾಧಿಪಲೋರ್ಕದೊಳ್ ।
ಕಲಕೀರೋದ್ಭವರಾಳ ಚಾರುಪಿಕನಿಂ
ಸೌಖ್ಯಂ ವಲಂ ಗೂಗೆಕೊ
ತ್ತ್ರಳ ತೇಳ್ವಾವುಗಳಿಂದೆ ಬಾಧೆವಡೆ
ವೋಲ್ಕಲ್ಯಾಣದೇವಾಗ್ರಣೀ ॥
ರವಿಯುಂ ಚಂದ್ರಮನಂ ಸುದರ್ಪಣಮನಂಭೋ
ಜಾತಮಂ ಘೂಕಕಾ
ಕ ವಿಲುಪ್ತಾಕ್ಷಿಕ ದದುರ್ರಂಗಳಿವು ಸಾದುರ್ಂ
ಪೊರ್ದಿರ್ಕೈಕೊಂಡು ಮು।
ಟ್ಟ ವಿಲಾಸ ಪ್ರವಿನೋದ ಸಮ್ಮದಮುದಂ
ಬೆತ್ತಿರ್ಪವೇ ಅಂತೆಕ
ಷ್ಟವಿದರ್ಕಳ್ ಸುಜನರ್ಕಳಿಂದೆ ಸುಖಿಸರ್
ಕಲ್ಯಾಣದೇವಾಗ್ರಣೀ ॥

ಕವಿಯು ವಚನಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸ ಮಾಡಿರುವಂತೆ ತೋರಿಬರುತ್ತದೆ. ಸಕಳೇಶಮಾದರಸನ ಒಂದು ವಚನವು ಈ ಕವಿಯ ಕೃಯಲ್ಲಿ ಮಹಾಸ್ರಗ್ಧರಾವೃತ್ತವಾಗಿ ರಂಜಿಸುತ್ತದೆ. ಆದರೆ ಅದರಲ್ಲಿ ಸಕಳೇಶ್ವರರ ಅಂಕಿತವಿಲ್ಲ.

ಜನಮೆಲ್ಲಂ ಮೆಚ್ಚೆ ಶುದ್ಧಂ ಮನಮದು ಪಿರಿದುಂ
ಮೆಚ್ಚಲೇಂ ಶುದ್ಧನಲ್ತೇ
ಧನಮೊಂದಲ್ನಿಸ್ಪೃಹತ್ವಂ ದೊರಕದು ಧನ
ಮಿಲ್ಲಾಗಿರಲ್ನಿಸ್ಪೃಹತ್ವಂ ।
ಮನೆಮಾತಿಂ ಜಾಣ್ಮೆಯುಂಟಲ್ಲದೆ ನಡೆಯೊಳಿ
ಜಾಣಿಲ್ಲ ವೇಷಂ ಘನಂ ನೆ
ಟ್ಟನೆ ಭಾಷಾಹೀನನೇಕಾಂತ ಕ್ಷತದುರಿತನಂ ಕಾಯು
ಕಲ್ಯಾಣದೇವಾಗ್ರಣೀ ॥

ಜೀವನು ತನ್ನ ಪ್ರಾಯಮದದಿಂದ ಆವುದನ್ನೂ ಲೆಕ್ಕಿಸನು. ಈತನು ಹೇಗೆ ಸಲ್ಲದ ಕಾರ್ಯಗಳನ್ನು ಚರಿಸದ ಆಚರಣೆಗಳನ್ನೂ ಮಾಡುವನೊ ಹಾಗೆ ಈತನು ಮೂಢನೂ ಕ್ರೂರಿಯೂ ಮತ್ತು ಭ್ರಷ್ಟನೂ ಆಗಿರುತ್ತಾನೆ. ಇಂತಹವನನ್ನು (ನನ್ನನ್ನು) ಕೃಪೆಮಾಡಿ ಪೊರೆವುದೆಂದು ಕವಿ ಶರಣಾಗತನಾಗಿ ಬೇಡಿಕೊಳ್ಳುತ್ತಾನೆ.

ಪರನಿಂದಾತುರ ಮಾನಸಂ ಪರವಧೂಸಂಭೋಗೆ
ಚೇಷ್ಟಾಪರಂ ।
ಪರವಿತ್ತಾಪಹಾರಾಧಿಕಂ ಪರವಿಪತ್ಪ್ರಭೇ
ಮುಚಿತತ್ಪರಂ ॥
ಪರಸೌಭಾಗ್ಯ ವಿಧಾರಿತಂ ಪರಗುಣ ಪ್ರದ್ವೇಷಿ
ಪಾಪಾಪರಂ ।
ಪರಪೀಡಾ ವ್ಯಸನಾಂಗಿಯುಂ ಪೊರೆವುದೆನ್ನಂ
ಕಲ್ಯಾಣದೇವಾಗ್ರಣೀ ॥
ಶಠನಂ ಸತ್ಯವಿರೋಧಿಯುಂ ಶಮದಮಾದಿ
ಜ್ಞಾನ ವಿಧ್ವಂಸಕ ।
ವರ್ಣಠನಂ ಮತ್ಸರ ಬಂಧನಂ ಮುಪಿತದು
ರ್ವಾಪಾರ ಸಂಪನ್ನನಂ ॥
ಲುಠಿತಾಮೋದನಸತ್ಯ ಶುದ್ಧಮನನಂ ನಿರ್ಲ
ಜ್ಜನಂ ದುಷ್ಕ್ರಿಯಾ।
ಮಠನಂ ಮಾನವ ಜಂತುವಂ ಪೊರವುದೆನ್ನಂ
ಕಲ್ಯಾಣದೇವಾಗ್ರಣೀ ॥

ಕವಿಯು ತನ್ನ ಶತಕವಲ್ಲಿ ಭಕ್ತಿಜ್ಞಾನ ವೈರಾಗ್ಯಗಳನ್ನು ತಿಳಿಸಿದ್ದರೂ ಅವನ ಒಲುಮೆಯು

ಶೃಂಗಾರಕ್ಕೇ ಸೆಳೆದೊಯ್ಯುತ್ತದೆ. ಕ್ರಮೇಣ ಅದು ಮರೆಯಾದಂತೆ ಅದಕ್ಕೆ ಹೇಸಿ ಗುರುಕಾರುಣ್ಯಕ್ಕೆ ಜೀವನು ಹಾತೊರೆಯುತ್ತಾನೆ.

ಮುನಿಯಲ್ಕೇಹಮನಾಂತು ಕಾಲ್ಗೆರಗಿ ನಲ್ಮಾ
ತಾಡಿ ಸಂತೈಸಿ ಲೇ
ಸಿನ ಮೇಲಾಣೆಯನಿಟ್ಟು ಬಟ್ಟ ಮೊಲೆ ಬೆಸ್ಕೊ
ಳ್ಳೊಡವಂತಪ್ಪ ಜು|
ಮ್ಮನೆ ರೋಮಾಂಚನವೇಳೆ ಬಲ್ಸುಸಿಲ
ನೊರ್ಕಂ ನೂಸಿ ಕೂರ್ತಿರ್ಪ ಕಾ
ಮಿನಿಯೊಳ್ಬೆರ್ಚದೆಯುಂ ತ್ವದಂಘ್ರಿಯೊಳ್ನಿ
ಲಿಸು ನೀಂ ಕಲ್ಯಾಣದೇವಗ್ರಾಣೀ ||
ಕಾಣುತ ನೋಡಿ ನೋಡಿ ತಣಿವೆಯ್ದದೆ
ಮುದ್ದಿಸಿ ಮುದ್ದಿಸುತ್ತ ಮುಂ
ಜಾಣೆಯೊಳಪ್ಪಿಯಪ್ಪಿ ಕಲೆಯುಂಟುತೆ ಚುಂಬಿಸಿ
ಚುಂಬಿಸುತ್ತೆ ನಾಣ್|
ದಾಣಮದುರ್ಕಿಯುರ್ಕಿ ಪರಿಯಲ್ ಸುನಿ
ವೋಲ್ ಸಲೆಸಂದು ಕೂಡುವಾ
ಜಾಣೆಯೊಳ್ಮ ಹೊಂದಿ ಶಿವನಂ ಮರೆದೆಂ
ಕಲ್ಯಾಣ ದೇವಾಗ್ರಣೀ ||
ಕನ್ನಡಿಯಲ್ಲಿ ತೀವಿ ಪರಿರಂಜಿಸುತೊಪ್ಪಿರೆ
ದಿವ್ಯಮೌಕ್ತಿಕಂ
ರನ್ನಮನಪ್ಪಿ ವಜ್ರಹತಿಯಿಂ ನವನೀಲವು
ದೊಪ್ಪಿ ಪದ್ಮರಾ|
ಗಂ ನೆಲೆಯಾಗೆ ಸತ್ಕುವಲಯಾತದೊಳಿಂತಿರೆ
ಪಂಚರತ್ನಮಂ
ಚನ್ನನೆ ತಾಳ್ವಳಂ ಬಯಸಿ ನೊಂದೆನೆಲಾ ಗುರು
ಕಲ್ಯಾಣದೇವಾಗ್ರಣೀ ||

(ಸುಮಾರು ೧೩ ವೃತ್ತಗಳಲ್ಲಿ ಸಂಸಾರ ಹೇಯಸ್ಥಲವನ್ನು ವಿವರಿಸಿದ್ದಾನೆ.) ಮನುಷ್ಯನ ಮುಖ್ಯಗುರಿಗೆ ಗುರುಕಾರುಣ್ಯವೇ ಪ್ರಧಾನ. ಹಾಗೆ ಕಾರುಣ್ಯವನ್ನು ಪಡೆದ ಶಿಷ್ಯನು ಭಕ್ತನಾಗಿ, ನಿಜವಾದ ವಿರಾಗಿಯಾಗುತ್ತಾನೆ. ವೀರಶೈವ ಮಾರ್ಗಾವಲಂಬಿಯಾದ ಜೀವಿಯು :—

ಇರೆ ತನು ಮೂರರೊಳ್ ತ್ರಿವಿಧ ಲಿಂಗವು
ನಾಂತು ಶರೀರ ವಾಙ್ಮನಂ
ಬೆರಸುತೆ ಮೂರವಸ್ಥೆಯೊಳಗಂ ಗುರುಲಿಂಗ
ಜಂಗಮಾರ್ಚನಾ|
ಚರಣೆಯೊಳ್ ಹೊಂದಿ ಭಕ್ತಿಪರನಾಗಿ
ಪಾದೋದಕ ಸುಪ್ರಸಾದದೊಳ್
ಪರಿಣತನಾಗಿ ಲಿಂಗಕಲೆಯೊಳ್ಭರಿತಂ
ಕಲ್ಯಾಣದೇವಾಗ್ರಣೀ ||
ಸ್ಥಿರಲಿಂಗ ಜ್ಯೋತಿಯುಂ ಮೇಲೆ ಶಿವನಾಣತಿ
ಯೊಳ್ನಂಬಿ ಸದ್ಭಕ್ತಿ ಪ
ಸರಿಸಲ್ವೈರಾಗ್ಯ ತೈಲಂಗೆರೆಯುತೆ ರುಚಿರ
ಜ್ಞಾನದಿವ್ಯ ಪ್ರಕಾಶೋ|
ತ್ಕರಮಾಗಲೀವ ಭಾವೋತ್ಕಟಮೆನಿಪ ತಮಂ
ಪೋಗ ಮಂತ್ರಾದಿರಾಜ್ಯ
ವರಜಿಹ್ವಾಪೀಠದೊಳ್ಕ್ಯಾರ್ತಿಸೆವುದೇ ವಿಲಸ
ನ್ಮುಕ್ತಿ ಕಲ್ಯಾಣದೇವಾಗ್ರಣೀ ||
ತನುವಂ ಶ್ರೀಗುರು ಸೇವೆಗಿತ್ತು ಮನಮಂಚ್ಚೆ
ಲಿಂಗದಲ್ಲಿಟ್ಟು ಪಾ
ಧನವಂ ಜಂಗಮಕಿತ್ತು ಷಟ್ಸ್ಥಲಮನಂ
ಗೊಂಡು ಲಸನ್ಮಾನ ಸ
ಜ್ಜನವೃತ್ತಿತ್ಕರ ಶಾಂತಿ ಸದ್ಗುಣದಯಾ
ದಾಕ್ಷಿಣ್ಯ ಸದ್ಭಾವ ಸ|
ದ್ವಿನಯಾಲಾಪ ಸುಶೀಲ ಧರ್ಮ ನಿಜ ನಿಷ್ಠಾ
ಭಕ್ತಿಯುಂ ನೆಮ್ಮಿನಿಂ
ದನೆ ದಾಸೋಹಿಯೆನಿಪ್ಪನಾತನೆ ಶಿವಂ
ಕಲ್ಯಾಣದೇವಾಗ್ರಣೀ ||

ಇದೇ ಮೊದಲಾದ ಹನ್ನೊಂದು ವೃತ್ತಗಳಲ್ಲಿ ವೀರಶೈವ ಧರ್ಮದ ಸಾರವನ್ನು ಬಹು ಸುಲಭವಾದ ಶೈಲಿಯಲ್ಲಿಯೂ, ಅರ್ಥಗರ್ಭಿತವಾಗಿಯೂ ವಿವರಿಸಿದ್ದಾನೆ. ಇವನು ಉದ್ದಾಮ ಪಂಡಿತನೂ ಅಹುದು. ಕವಿತಾ ಚಾಣಾಕ್ಷನೂ ಅಹುದು. ಈ ಶತಕದಲ್ಲಿರುವ ವೃತ್ತಗಳು ಅನಾಯಾಸವಾಗಿ ರಚಿತಗೊಂಡಿವೆ. ಇವನ ಕವಿತಾ ಸಾಮರ್ಥ್ಯವು ಇದರಿಂದ ವ್ಯಕ್ತವಾಗುತ್ತದೆ. ಕನ್ನಡದೊಡನೆ ಅಂದವಾಗಿ ಸಂಸ್ಕೃತವನ್ನು ಬೆರಸಿ ಶಬ್ದಮಯವಾಗಿ ತನ್ನ ಶತಕವನ್ನು ರಚಿಸಿರುತ್ತಾನೆ. ಏನೇ ಆದರೂ ಇದು ಕಾವ್ಯವಲ್ಲ, ಇವನ ಕವಿತಾ ಪ್ರೌಢಿಮೆಯನ್ನು ತೋರಿಸುವ ಸಾಧನವಾಗಿದೆ. ಈ ಶತಕ ಇವನ ಶೃಂಗಾರ ಪ್ರಾಧಾನ್ಯ ವೃತಗಳನ್ನು ನೋಡಿದರೆ ಈತನು ತನ್ನ ನೈಜ ಜೀವನದಲ್ಲಿ ಅನುಭವಿಸಿದ ರಸಿಕ ಜೀವನವನ್ನೇ

ವಿವರಿಸುವಂತೆ ಭಾಸವಾಗುತ್ತದೆ.

ಈ ಶತಕದಲ್ಲಿ ಮೂರು ವೃತ್ತಗಳು ಪಂಚಪಾದಿಗಳಾಗಿವೆ. ಇದು ಸಾಮಾನ್ಯವಾಗಿ ಇರಬಹುದಾದ ಅಂಶವೂ ಆಗಿದೆ. ಆದರೂ ಶತಕವು ಉತ್ತಮವಾಗಿದೆ. ಮಹಾಕವಿ ಹರಿಹರನ ಮತವನ್ನೇ ಇಲ್ಲಿ ಕಾಣಬಹುದಾದರೂ ಈ ಕವಿಯು ಭಕ್ತಿರಸವನ್ನು ಪ್ರಧಾನವಾಗಿ ಇಟ್ಟುಕೊಂಡಿಲ್ಲ. ಈತನು ರಸಿಕನೂ ಶೃಂಗಾರಪ್ರಿಯನೂ ಮತ್ತು ಅಮಿತ ಭಾಷಿಯೂ ಆಗಿರುವುದನ್ನು ಈ ಕೃತಿಯಿಂದ ತಿಳಿಯಬಹುದು.

ಜಿ. ಎ. ಶಿವಲಿಂಗಯ್ಯ

---

# ಪುರಾಣಗಳ ಅಲಂಕಾರ ಶೈಲಿ

ಭಾರತೀಯ ಸಾಹಿತ್ಯದಲ್ಲಿ ಸಾಮಾನ್ಯ ಹೇಳಿಕೆಯಲ್ಲಿಯೂ ಆಲಂಕಾರಿಕ ಭಾಷೆಯನ್ನು ಉಪಯೋಗಿಸುವ ಒಂದುಕಾಲವಿತ್ತು. ಆ ಕಾಲದಲ್ಲಿ ಮುಖ್ಯವಾಗಿ ಪುರಾಣಗಳ ಕಥನಕೃತಿ ಅಲಂಕಾರಗಳ ಪ್ರಯೋಗದಿಂದ ಚಮತ್ಕಾರ ಪೂರ್ಣವಾಯಿತು. ಅಲಂಕಾರವು ಭಾಷೆಯ ಸೌಂದರ್ಯವನ್ನು ಹೆಚ್ಚಿಸುವುದು. ಪುರಾಣಗಳು ಶುದ್ಧ ಇತಿಹಾಸ ಗ್ರಂಥಗಳಲ್ಲ. ಆದುದರಿಂದ ಪುರಾಣಕಾರರು ಭಾಷಾಲಾಲಿತ್ಯದೊಡನೆ ಚರಿತ್ರಚಿತ್ರಣದಲ್ಲಿ ಆಶ್ಚರ್ಯಜನಕವಾದ ಚಮತ್ಕಾರಗಳ ಕಡೆಗೂ ಲಕ್ಷ್ಯವನ್ನಿಟ್ಟರು. ಈ ಎರಡು ಲಕ್ಷ್ಯಗಳ ಪೂರ್ತಿಗಾಗಿ ಅವರು ಅಲಂಕಾರಗಳನ್ನಾಶ್ರಯಿಸುವುದು ಅನಿವಾರ್ಯವಾಯಿತು.

ಕೆಲವು ಸಂದರ್ಭಗಳಲ್ಲವರು ಪ್ರಾಕೃತಿಕ ತತ್ವಗಳಿಗೆ ವ್ಯಕ್ತಿತ್ವವನ್ನು ಪ್ರಧಾನಮಾಡಿ ಓರ್ವ ಜೀವಿತ ವ್ಯಕ್ತಿಯಂತೆ ಅವನ್ನು ಚಿತ್ರಿಸಿರುವುದೂ ನಮಗೆ ಕಂಡುಬರುತ್ತದೆ. ಇಂತಹ ಸಂದರ್ಭದಲ್ಲಿ ಕಲ್ಪನೆಯೊಡನೆ ಅದಕ್ಕವರು ಪ್ರಭಾವಕ ರೂಪವನ್ನು ಕೊಡುವುದಕ್ಕೂ ಪ್ರಯತ್ನಿಸಿರುವುದುಂಟು. ಇದಕ್ಕೆ ಮೇಘದೂತ, ಚಂದ್ರದೂತ ಹಂಸದೂತ ಮೊದಲಾದ ಕೃತಿಗಳೇ ಉದಾಹರಣೆಗಳಾಗಿವೆ. ಪುರಾಣಕಾರರ ಅಭಿಪ್ರಾಯ ಎಂದೂ ಜನತೆಗೆ ಭ್ರಮೆಯನ್ನುಂಟುಮಾಡಬೇಕೆಂದಿರಲಿಲ್ಲ. ಅವರು ಕಲ್ಪನೆಯ ಹಾರಾಟದಲ್ಲಿ ರಸದ ನದಿಯನ್ನು ಹರಿಸಿದರು; ಅಲಂಕಾರಗಳ ಮಳೆಯನ್ನು ಸುರಿದರು. ಹಾಗೂ ಭಾಷೆಯ ವ್ಯಂಜನಶಕ್ತಿಗೆ ವೇಗವನ್ನು ಕೊಟ್ಟರು. ಆದುದರಿಂದಲೇ ನಮ್ಮ ಪ್ರಾಕೃತ ಸಂಸ್ಕೃತ ಅಪಭ್ರಂಶ ತಮಿಳು ಕನ್ನಡ ಮೊದಲಾದ ಭಾರತೀಯಭಾಷೆಗಳ ಪ್ರತಿಯೊಂದು ಸಾಹಿತ್ಯ ಪ್ರಪಂಚದ ಸಮೃದ್ಧ ಸಾಹಿತ್ಯದಲ್ಲಿ ವೈಶಿಷ್ಟ್ಯಪೂರ್ಣವಾದ ಸ್ಥಾನವನ್ನು ಗಳಿಸಿರುವುದು ಕಂಡುಬರುತ್ತದೆ. ಇದು ನಿಜವಾಗಿ ನಮಗೆ ಹೆಮ್ಮೆಯನ್ನುಂಟುಮಾಡುವ ಮಾತು.

ಪುರಾಣಗಳಲ್ಲಿ ವಾನರವಂಶ ರಾಕ್ಷಸವಂಶ ನಾಗವಂಶ ಮೊದಲಾದ ಹಲವುವಂಶಗಳ ವರ್ಣನೆಯು ವಿಶೇಷವಾಗಿ ಬರುತ್ತದೆ. ಈ ಎಲ್ಲಾ ವಂಶಗಳು ವಿದ್ಯೆರೂಪು ಮೊದಲಾದುವುಗಳಲ್ಲಿ ಸಾಮಾನ್ಯ ವಂಶಗಳ ಅಪೇಕ್ಷೆಯಿಂದ ತುಂಬಾ ಮುಂದುವರಿದಿದ್ದುವು. ಜೈನಪುರಾಣಗಳಲ್ಲಿ ಈ ವಂಶಜರಿಗೆ ವಿದ್ಯಾಧರರೆಂದು ಹೆಸರಿಸಿರುವ. ವಿದ್ಯಾಧರರಲ್ಲಿ ಅನೇಕ ಜಾತಿಗಳಿದ್ದುವು. ಈ ಜಾತಿಗಳು ಭೌತಿಕ ವಿಜ್ಞಾನದಲ್ಲಿ ಬಹಳ ಮುಂದುವರಿದಿದ್ದುವು. ಈ ಜಾತಿಗಳೇ ವಿಮಾನಗಳ ಆವಿಷ್ಕಾರವನ್ನು ಮಾಡಿದ್ದುವು. ಪುಷ್ಪಕ ವಿಮಾನವು ಆ ಕಾಲದ ಸರ್ವಾಧಿಕ ಶಕ್ತಿಶಾಲಿ ಹಾಗೂ ತೀವ್ರಗಾಮಿ ವಿಮಾನವಾಗಿತ್ತು. ಇದು ಜಾತಿಯ ಪ್ರಮುಖ ವ್ಯಕ್ತಿಗಳ ಬಳಿಯಲ್ಲಿಯೇ ಇರುತ್ತಿತ್ತು. ಈ ವಿಮಾನಗಳ ವೈಶಿಷ್ಟ್ಯವೆಂದರೆ ಇವು ಇದ್ದಿಲು, ನೀರು ಮೊದಲಾದುವುಗಳಿಲ್ಲದೆ ಆಣವಿಕಶಕ್ತಿಯ ಮೂಲಕ ಯಂತ್ರಗಳ ಪ್ರಯೋಗದಿಂದಲೇ ನಡೆಯುತ್ತಿದ್ದುವು. ವಿದ್ಯಾಧರರ ಪ್ರಯೋಗಶಾಲೆಗಳೂ ಇದ್ದುವು. ಅವುಗಳಲ್ಲಿ ವಿಮಾನಗಳೂ ಯುದ್ಧೋಪಯೋಗಿ ಶಸ್ತ್ರಾಸ್ತ್ರಗಳೂ ನಿರ್ಮಿಸಲ್ಪಡುತ್ತಿದ್ದುವು. ಆದರೆ ಈ ನಿರ್ಮಾಣ ವಿಧಿಯನ್ನವರು ಗುಪ್ತವಾಗಿಡುತ್ತಿದ್ದರು. ಅಂತಹ ಸಮೃದ್ಧ ಹಾಗೂ ವಿಜ್ಞಾನ ಪ್ರಧಾನವಾದ

ಜಾತಿಯ ಸಂಬಂಧದಲ್ಲಿಂದು ಸಾಮಾನ್ಯ ಜನರಲ್ಲಿ ಅದ್ಭುತವಾದ ಕಲ್ಪನೆಗಳು ಪ್ರಚಾರದಲ್ಲಿವೆ.

ಶಿಲೆಗಳಿಂದ ಸೇತುವೆಯನ್ನು ನಿರ್ಮಿಸುವ ಶಕ್ತಿಯುಳ್ಳ ನಲ, ನೀಲ ಮೊದಲಾದವರನ್ನು ಕಪಿಗಳೆಂದು ಹೇಳಿರುವುದು ಹಾಗು ಹೇಳುವುದು ತುಂಬಾ ಆಶ್ಚರ್ಯ. ಇದೇ ಪ್ರಕಾರ ವಿದ್ಯಾಧರರ ಅರಸನಾದ ಪವನಂಜಯನ ಮಗ ಶಕ್ತಿಶಾಲಿ ಹನುಮಂತನನ್ನು ಪವನ ಅಂದರೆ ಗಾಳಿಯ ಮಗನೆಂದೂ ಬಾಲವುಳ್ಳ ಕಪಿಯೆಂದೂ ಹೇಳಿರುವುದು ಹಾಗೂ ಹೇಳುವುದು ಅದ್ಭುತದ ಮಾತು. ವಾಸ್ತವವಾಗಿ ವಾನರ, ರಾಕ್ಷಸ, ನಾಗ ಮೊದಲಾದುವು ವಂಶಗಳ ಹೆಸರು. ಇಂದೂ ಕೆಲವು ಜಾತಿಗಳು ಇಂತಹ ಅಪನಸವಾದ ಹೆಸರುಗಳಿಂದಲೇ ಸಂಬೋಧಿಸಲ್ಪಡುವುವು. ದಕ್ಷಿಣ ಕನ್ನಡಜಿಲ್ಲೆಯಲ್ಲಿ ಪಾಳೇಗಾರರಾಗಿ ಆಳಿದ ಚೌಟರು ನಾಗವಂಶಕ್ಕೆ ಸೇರಿದವರೆಂದು ವಿದ್ವಾಂಸರ ಅಭಿಪ್ರಾಯ.

ರಾವಣನು ದೊಡ್ಡ ವಿದ್ವಾಂಸನೂ ಧರ್ಮನಿಷ್ಠನೂ ವೀರನೂ ಆಗಿದ್ದನು. ಅಂತಹವನನ್ನು ಜನರು ದಶಾನನ, ದಶಮುಖ, ದಶಕಂಠ ಮೊದಲಾದ ವಿಕೃತ ಹೆಸರುಗಳಿಂದ ಹೆಸರಿಸಿ ಅವನಮೇಲೆ ಅನೇಕ ದೋಷಗಳನ್ನು ಆರೋಪಿಸಿರುವುದುಂಟು. ವಿಧಿನಿಯೋಗಕ್ಕೊಳಗಾಗಿ ಅವನು ಸೀತೆಯನ್ನು ಅಪಹರಿಸಿ ಲೋಕಾಪವಾದಕ್ಕೆ ಪಾತ್ರನಾದುದೇನೋ ನಿಜ. ಆದರೆ ಅವನ ಆ ಒಂದು ಅಪರಾಧಕ್ಕಾಗಿ ಅವನಲ್ಲಿದ್ದ ವಿಶಿಷ್ಟಗುಣಗಳನ್ನು ಮರೆತುಬಿಡುವುದು ಯಾವಧರ್ಮ? ಅಥವಾ ಎಷ್ಟು ದೊಡ್ಡ ಅಪರಾಧ! ಮನುಷ್ಯನಲ್ಲಿದ್ದ ಒಂದು ದೋಷಕ್ಕಾಗಿ ಅವನಲ್ಲಿದ್ದ ಬೇರೆ ವಿಶಿಷ್ಟ ಗುಣಗಳನ್ನು ಕಡೆಗಣಿಸುವುದು ಮಾನವ ಧರ್ಮವಲ್ಲ. ರಾವಣನಿಗೆ ಹತ್ತುಮುಖ ಹಾಗೂ ಹತ್ತುತಲೆಗಳನ್ನು ಕಲ್ಪಿಸುವುದು ಎಷ್ಟೊಂದು ಹಾಸ್ಯಾಸ್ಪದವಾದ ವಿಷಯ. ಹಾಗಿದ್ದರೆ ರಾವಣನ ಬೇರೆ ಬೇರೆ ಮುಖಗಳಲ್ಲಿ ಏಕಕಾಲದಲ್ಲಿ ವಿಷಾದ, ಚಿಂತೆ, ಹರ್ಷ ಮೊದಲಾದ ಬೇರೆ ಬೇರೆ ಭಾವಗಳ ದೃಷ್ಟಿಗೋಚರವಾಗುತ್ತಿದ್ದಿರಬಹುದೆಂದೂ ನಾವು ಒಪ್ಪಬೇಕಾಗುವುದು. ಏಕೆಂದರೆ ಅವನಿಗೆ ಹತ್ತು ತಲೆಗಳಿದ್ದುದರಿಂದ ಒಂದೇ ಕಾಲದಲ್ಲಿ ಅವುಗಳಲ್ಲಿ ಬೇರೆಬೇರೆ ವಿಚಾರಗಳು ಹೊಳೆಯುವುದು ಸ್ವಾಭಾವಿಕ.

ಜೈನ ಪುರಾಣಗಳಲ್ಲಿ ರಾವಣನನ್ನು ದಶಾನನ ದಶಕಂಠ ಮೊದಲಾದ ಹೆಸರುಗಳಿಂದ ಹೆಸರಿಸುವುದಕ್ಕೆ ಬೇರೆಯೇ ಕಾರಣವನ್ನು ಹೇಳಿದ್ದಾರೆ. ಆ ಕಾರಣ ಹೀಗಿದೆ. ರಾವಣನು ಬಾಲಕನಾಗಿದ್ದಾಗ ಅವನ ಕಂಠದಲ್ಲಿ ಒಂದು ರತ್ನಹಾರವು ತೊಡಿಸಲ್ಪಟ್ಟಿತ್ತು. ಆ ಹಾರದಲ್ಲಿ ಹತ್ತು ರತ್ನಗಳಿದ್ದು ಅವನು ರತ್ನಗಳ ಕಡೆಗೆ ಮುಖವನ್ನು ತಿರುಗಿಸುವಾಗ ಎಲ್ಲಾ ರತ್ನಗಳಲ್ಲಿ ಅವನ ಮುಖದ ಪ್ರತಿಬಿಂಬವು ಮೂಡುತ್ತಿತ್ತು. ಅದನ್ನು ಕಂಡು ಜನರು ಪ್ರೀತಿಯಿಂದ ಅವನನ್ನು ದಶಾನನ ದಶಕಂಠ ಮೊದಲಾದ ಪರ್ಯಾಯ ಶಬ್ದಗಳಿಂದ ಹೆಸರಿಸಿದರು. ರೂಢಿಯಲ್ಲಿ ಇಂತಹ ಶಬ್ದಗಳು ಹಲವಿವೆ. ಉದಾಹರಣೆಗಾಗಿ–ನಾವು ಸಿಂಹವನ್ನು ಪಂಚಾನನವೆಂದು ಕರೆಯುವುದುಂಟು. ಈ ಪಂಚಾನನ ಶಬ್ದಕ್ಕೆ ನಾವು ಐದು ಮುಖಗಳುಳ್ಳದು ಎಂಬರ್ಥವನ್ನು ಮಾಡದೆ ಐದು ದಿಕ್ಕುಗಳಿಂದಲೂ ಸತರ್ಕವಾಗುಳ್ಳದು ಎಂಬರ್ಥವನ್ನು ಮಾಡುತ್ತೇವೆ. ಹಾಗೆಯೇ ರಾವಣನೂ ಹತ್ತು ದಿಕ್ಕುಗಳಿಂದಲೂ ವೈರಿಗಳಿಂದ ಸತರ್ಕನಾಗಿದ್ದವನೆಂದು ಏಕೆ ಅರ್ಥಮಾಡಬಾರದು? ಹಾಗಿಲ್ಲದೆ ನಿಜವಾಗಿ ರಾವಣನಿಗೆ ಹತ್ತು ತಲೆ ಹಾಗೂ ಹತ್ತು ಮುಖಗಳಿರುತ್ತಿದ್ದರೆ ಮಲಗುವುದು, ಮಾತಾಡುವುದು ಮೊದಲಾದ ಅವನ ಕಾಯಿಕ ವ್ಯವಹಾರವು ಹೇಗೆ ನಡೆಯುತ್ತಿತ್ತು? ರಾವಣನ ಸಂಬಂಧದಲ್ಲಿ ಕೆಲವು ವರ್ಷಗಳ ಮೊದಲು 'ಮಹಾತ್ಮಾ

ರಾವಣ' ಎಂಬ ಶೀರ್ಷಕೆಯಿಂದ ಆರಾದಿಂದ ಪ್ರಕಟವಾಗುತ್ತಿರುವ 'ಜೈನ ಸಿದ್ಧಾಂತ ಭಾಸ್ಕರ' ದಲ್ಲಿ ನಾನೊಂದು ಲೇಖವನ್ನು ಬರೆದಿದ್ದೆ. ವಿಶೇಷ ಜಿಜ್ಞಾಸುಗಳು ಒಂದಾವರ್ತಿ ಆ ಲೇಖನ ವನ್ನು ಅವಶ್ಯ ಓದಬೇಕು. ಪ್ರಾಯಃ ಇದರ ಕನ್ನಡ ಅನುವಾದವೂ ಪ್ರಕಟವಾಗಿರಬೇಕು. ಮೂಲ ಲೇಖ ಹಿಂದಿ ಭಾಷೆಯಲ್ಲಿದೆ

ಒಂದುಮಾತು. ರಾಮ:ರಾವಣರ ಯುದ್ಧಕ್ಕೆ ಸೀತಾಪಹರಣದೊಡನೆ ಬೇರೆ ಕಾರಣವೂ ಇತ್ತು. ಆ ಕಾಲದಲ್ಲಿ ದಕ್ಷಿಣದಲ್ಲಿ ರಾಕ್ಷಸ ವಂಶವು ಪ್ರಬಲ ವಾಗಿದ್ದು ರಾವಣನು ಆ ವಂಶದ ನಾಯಕ ನಾಗಿದ್ದ. ರಾಕ್ಷಸರು ವೈದಿಕ ಸಂಸ್ಕೃತಿಗೆ ವಿರು ದ್ಧವಾಗಿದ್ದು ದಕ್ಷಿಣದಲ್ಲಿ ನಡೆಯುತ್ತಿದ್ದ ವೈದಿಕ ಯಜ್ಞಯಾಗಾದಿಗಳಿಗೆ ಪದೇ ಪದೇ ವಿಘ್ನವನ್ನುಂ ಟುಮಾಡುತ್ತಿದ್ದರು. ಇದು ವೈದಿಕ ಸಂಸ್ಕೃ ತಿಯ ಪಕ್ಷಪಾತಿಗಳಿಗೆ ಅಸಹ್ಯವಾಗಿತ್ತು. ಆದು ದರಿಂದ ವೈದಿಕ ಮಹರ್ಷಿ ವಿಶ್ವಾಮಿತ್ರನು ಈ ರಾಕ್ಷಸ ವಂಶದ ನಿರ್ಮೂಲನಕ್ಕಾಗಿ ಮಹಾರಾಜ ದಶರಥನಿಂದ ರಾಮಲಕ್ಷ್ಮಣರನ್ನು ಕೇಳಬೇ ಕಾಯಿತು. ಮಹರ್ಷಿ ವಿಶ್ವಾಮಿತ್ರನೇ ಯುದ್ಧ ಕಲೆಯಲ್ಲಿ ರಾಜಕುಮಾರರಾದ ರಾಮಲಕ್ಷ್ಮಣ ರನ್ನು ತಯಾರು ಮಾಡಿದನು.

ಆ ಕಡೆ ವಾನರ ಯಕ್ಷವಂಶಗಳು ರಾವ ಣನ ಆತಂಕದಿಂದ ತುಂಬಾ ಪೀಡಿತನಾಗಿದ್ದುವು. ಅವು ರಾವಣನ ಪೀಡೆಯಿಂದ ಮುಕ್ತಿಯನ್ನು ಹೊಂದುವುದಕೋಸ್ಕರ ಆತುರಗೊಂಡಿದ್ದುವು. ಆದರೆ ಸುಗ್ರೀವ ಮತ್ತು ವಾಲಿಯ ಗೃಹಕಲಹವೇ ಮೊದಲಾದ ಕೆಲವು ಕಾರಣಗಳು ಇದಕ್ಕೆ ಅಡ್ಡಿ ಯಾಗಿದ್ದುವು. ಆಗ ರಾಕ್ಷಸವಂಶವು ರಾವಣ ನೇತೃತ್ವದಲ್ಲಿ ವಿಶೇಷ ಸಂಘಟಿತವಾಗಿದ್ದು ಅದು ವಾನರ ಮತ್ತು ಯಕ್ಷವಂಶವನ್ನು ಪೀಡಿಸುತ್ತಾ ಇತ್ತು. ರಾಮಲಕ್ಷ್ಮಣರು ತಮ್ಮ ವನವಾಸದ ಉಪಯೋಗವನ್ನು ರಾಕ್ಷಸ ವಂಶದ ನಿರ್ಮೂಲ ನಕ್ಕಾಗಿ ಮಾಡಿಕೊಳ್ಳಬೇಕೆಂದು ಯೋಚಿಸಿದರು. ಇದೇ ಸಂದರ್ಭದಲ್ಲಿವರು ರಾವಣನ ತಂಗಿಯಾದ ಸೂರ್ಪನಖಿಯ ಮೂಗನ್ನು ಕತ್ತರಿಸಿದರು. ಇದಕ್ಕೆ ಕಾರಣ ಏನೇ ಇರಲಿ, ಅಂತೂ ಈ ಘಟನೆಯು ರಾಕ್ಷಸನರೇಶ ರಾವಣನನ್ನು ಎಚ್ಚರಿಸಿತು.

ರಾವಣನು ತನ್ನ ತಂಗಿಯ ಅಪಮಾನದ ಸೇಡನ್ನು ಸೀತಾಪಹರಣದ ಮೂಲಕ ತೀರಿ ಸಿದನು. ರಾಮರಾವಣರ ಯುದ್ಧಕ್ಕೆ ಇದೇ ಸೀತಾ ಪಹರಣ ನಾಂದಿಯಾಯಿತು. ಪ್ರಾಯಃ ರಾಮ ಲಕ್ಷ್ಮಣರು ಈ ಪ್ರಕಾರವಾದ ಘಟನೆಯು ನಡೆಯಬಹುದೆಂದು ಯೋಚಿಸಿರಲಿಲ್ಲ. ಈ ಘಟ ನೆಯು ನಡೆದ ಮೇಲೆ ಇದಕ್ಕೆ ಪ್ರತೀಕಾರವನ್ನು ಹುಡುಕಬೇಕಾಯಿತು. ಸುಗ್ರೀವನ ಪ್ರತಿದ್ವಂದ್ವಿ ಯಾದ ವಾಲಿಯನ್ನು ಕೊಂದು ರಾಮಲಕ್ಷ್ಮಣರು ರಾಕ್ಷಸರ ಅತ್ಯಾಚಾರದಿಂದ ಪೀಡಿತರಾಗಿ ಅಸಂ ತುಷ್ಟರಾದ ವಾನರ ಯಕ್ಷವಂಶಗಳೊಡನೆ ರಾಜ ನೈತಿಕ ಸಂಧಿಯನ್ನು ಮಾಡಿ ಮಿತ್ರತ್ವವನ್ನು ಬೆಳೆಸಿ ಕೊಂಡರು.

ರಾಜನೀತಿಪಟು ರಾಮನು ರಾವಣನಿಂದ ಅಸಂತುಷ್ಟನಾದ ಅವನ ತಮ್ಮ ವಿಭೀಷಣನನ್ನು. ತನ್ನಕಡೆಗೆ ಎಳಕೊಂಡನು. ಇದು ರಾಮನ ರಾಜನೈತಿಕ ವಿಚಕ್ಷಣೆಯಾಗಿತ್ತು. ವಸ್ತುತಃ ಇದೇ ರಾವಣನ ಪರಾಜಯವಾಗಿತ್ತು. ಈ ಘಟನೆಯಿಂದ ರಾವಣನ ಸೇನೆಯ ಮನೋಬಲವು ಕುಂದಿ ರಾಮನ ಸೇನೆಯ ಮನೋಬಲವು ಹೆಚ್ಚಿತು. ಯುದ್ಧದಲ್ಲಿ ರಾವಣನು ಸಂಹರಿಸಲ್ಪಟ್ಟನು. ಇದರಿಂದ ರಾಕ್ಷಸ ಸಂಸ್ಕೃತಿಯು ಪರಾಜಿತವಾಗಿ ಕ್ರಮವಾಗಿ ಅದರ ಪ್ರಭಾವವು ಲುಪ್ತವಾಯಿತು. ಆಗ ಮನೋವೈಜ್ಞಾನಿಕ ಪ್ರಭಾವವನ್ನು ಬೀರಿ ಇಲ್ಲಿಯ ಜನತೆಯ ಮನಸ್ಸಿನಲ್ಲಿ ರಾಕ್ಷಸ ಸಂಸ್ಕೃತಿ

ಹಾಗೂ ರಾವಣನ ಸಂಬಂಧದಲ್ಲಿ ಘೃಣೆಯ ಬೀಜವು ಬಿತ್ತಲ್ಪಟ್ಟಿತು. ಜನತೆಯ ಮನಸ್ಸಿನಲ್ಲಿ ರಾಕ್ಷಸ ಸಂಸ್ಕೃತಿಯ ವಿಷಯದಲ್ಲಿ ಆದರ ಭಾವವು ಕಡಮೆಯಾದುದರಿಂದ ಸಂಸ್ಕೃತಿ ಸರ್ವಥಾ ಲುಪ್ತವಾಯಿತು.

ಈ ಸಂದರ್ಭದಲ್ಲಿ ನಾವು ಮಹಾಭಾರತದ ಒಂದು ಉದಾರಣೆಯನ್ನೂ ತೆಗೆದುಕೊಳ್ಳಬಹುದು. ಅಭಿಮನ್ಯುವಿನ ಮಗನಾದ ಪರೀಕ್ಷಿತನನ್ನು ನಾಗರಾಜ ತಕ್ಷಕನು ಕಡಿದನು. ಇದರಿಂದಾಗಿ ಪರೀಕ್ಷಿತನು ಸತ್ತ. ತಂದೆಯ ಮೃತ್ಯುವಿನ ಸೇಡನ್ನು ಮಗನಾದ ಜನಮೇಜಯನು ನಾಗಯಜ್ಞವನ್ನು ಮಾಡಿ ತೀರಿಸಿಕೊಂಡನು. ಈ ಯಜ್ಞದಲ್ಲಿ ಸಾವಿರಾರು ನಾಗರು ಕೊಲ್ಲಲ್ಪಟ್ಟರು. ಈ ಘಟನೆಯನ್ನು ಜನರು ಬೇರೆ ರೂಪದಲ್ಲಿ ತೆಗೆದುಕೊಳ್ಳುತ್ತಾರೆ. ಅವರು ಘಟನೆಯಲ್ಲಿ ವರ್ಣಿಸಲ್ಪಟ್ಟ ನಾಗರನ್ನು ಸರ್ಪವೆಂಬರ್ಥದಲ್ಲಿ ತೆಗೆದುಕೊಂಡಿರುವುದುಂಟು. ವಸ್ತುತಃ ಹಾಗಿರಲಿಲ್ಲ. ನಾಗ ಮನುಷ್ಯರ ಒಂದು ಜಾತಿಯ ಹೆಸರು. ಈ ಜಾತಿ ಆಕಾಲದಲ್ಲಿ ಭಾರತದ ಸಮೃದ್ಧ ಜಾತಿಗಳಲ್ಲೊಂದಾಗಿತ್ತು. ನಾಗರು ಬಹಳ ರೂಪವಂತರು. ಅರ್ಜುನನು ನಾಗರಾಜಕುಮಾರಿಯಾದ ಉಲೂಪಿಯನ್ನು ಮದುವೆಯಾಗಿದ್ದನು. ಹಸ್ತಿನಾಪುರ, ನಾಗಪುರ, ಶ್ರಾವಸ್ತಿ ವಾರಣಾಸಿ ಇವು ಆ ಕಾಲದಲ್ಲಿ ನಾಗ ಜಾತಿಯ ಕೇಂದ್ರಗಳಾಗಿದ್ದವು. ತಕ್ಷಕ ಆ ಕಾಲದ ನಾಗಜಾತಿಯ ಅರಸನು. ಅವನು ಪರೀಕ್ಷಿತನನ್ನು ಕೊಂದಿದ್ದನು. ಇದಕ್ಕಾಗಿ ಜನಮೇಜಯನು ನಾಗಜಾತಿಯ ವಿನಾಶಕ್ಕಾಗಿ ಸೊಂಟಕಟ್ಟಿದನು. ಇದರಿಂದ ನಾಗಜಾತಿಯ ಪ್ರಭಾವವು ತುಂಬಾ ಕಡಿಮೆಯಾಯಿತು. ಈ ಯುದ್ಧದಲ್ಲಿ ಅನೇಕ ನಾಗಯೋಧರು ಕೊಲ್ಲಲ್ಪಟ್ಟರು. ನಾಗಜಾತಿಯ ಕೇಂದ್ರಗಳು ತಮ್ಮ ಪ್ರಭಾವವನ್ನು ಕಳಕೊಂಡವು.

ಇಂತಹ ಇನ್ನೂ ಅನೇಕ ಘಟನೆಗಳು ಪುರಾಣಗಳಲ್ಲಿ ಸಿಗುವುವು. ಇವು ಇಂದು ಅಲಂಕಾರ ಹಾಗೂ ವರ್ಣನ ಶೈಲಿಯ ಕಾರಣ ತಮ್ಮ ಮೂಲರೂಪವನ್ನು ತೊರೆದು, ವಿಕೃತರೂಪದಲ್ಲಿ ತೆಗೆದುಕೊಳ್ಳಲ್ಪಡುತ್ತಿವೆ. ಅಗಸ್ತ್ಯ ಋಷಿಯ ಮೂಲಕ ವಿಂಧ್ಯಗಿರಿಯ ಉಲ್ಲಂಘನೆ ಒಂದೇ ಬೊಗಸೆಯಲ್ಲಿ ಸಮುದ್ರವನ್ನು ಶೋಷಣಮಾಡುವುದು. ಪಾಂಡವರ ಹಾಗೂ ಕರ್ಣನ ಜನಕರ ಸಂಬಂಧವಾದ ಅದ್ಭುತ ಮಾನ್ಯತೆ ಮೊದಲಾದುವುಗಳು ಇಂತಹವುಗಳೇ ಆಗಿವೆ. ಇವುಗಳನ್ನು ಯಥಾರ್ಥರೂಪದಲ್ಲಿ ಅರಿಯುವುದಕ್ಕೋಸ್ಕರ ನಾವು ಪ್ರಯತ್ನಿಸಬೇಕು. ಈ ಸಣ್ಣಲೇಖದಲ್ಲಿ ಪುರಾಣಗಳಲ್ಲಿ ಬರುವ ಎಲ್ಲಾ ಆಲಂಕಾರಿಕ ಘಟನೆಗಳನ್ನು ತೋರಿಸಲು ಸಾಧ್ಯವಿಲ್ಲ. ಇಲ್ಲಿ ಕೆಲವು ಘಟನೆಗಳನ್ನು ತೋರಿಸಲಾಗಿದೆ. ಈ ವಿಷಯದಲ್ಲಿ ಒಂದು ದೊಡ್ಡ ಗ್ರಂಥವನ್ನೇ ಬರೆಯಬಹುದು. ಸಾವಕಾಶ ವಿದ್ವಾಂಸರು ಈ ಕಡೆಗೆ ಅವಶ್ಯ ಲಕ್ಷ್ಯಕೊಡಬೇಕು.

ಕೆ. ಭುಜಬಲಶಾಸ್ತ್ರೀ

---

# ಕನ್ನಡದಲ್ಲಿ ಅಲಂಕಾರ ಗ್ರಂಥಗಳು

ಶ್ರೀಯವರ 'ಕನ್ನಡಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯವೇ ಪ್ರೇರಕ-ಪೋಷಕ-ಗುರು' ಎಂಬ ಸೂತ್ರವನ್ನು ಪೂರ್ಣಪ್ರಮಾಣದಲ್ಲಿ ಸಮರ್ಥಿಸು ವಂತಿವೆ ನಮ್ಮ ಅಲಂಕಾರ ಗ್ರಂಥಗಳು. ಕಾವ್ಯದ ಜೀವಾಳವನ್ನೇ ತೆರೆದು ತೋರಿದ ಸಂಸ್ಕೃತ ಕಾವ್ಯಮೀಮಾಂಸೆಯನ್ನು ಮೊದಲು ಎಲ್ಲರೂ ಮೂಲರೂಪದಲ್ಲಿ ನೋಡುತ್ತಿದ್ದರಾಗಿ, ಅದಕ್ಕೆ ಕೇವಲ ಕನ್ನಡಿ ಹಿಡಿದ ಕನ್ನಡಿಗರೂ ಅಭಿನಂದನಾ ರ್ಹರೇ. ಆದರೆ ಸಂಸ್ಕೃತವು ದೇಶಭಾಷೆಗಳಲ್ಲಿ ಬದುಕಬೇಕಾಗಿರುವ ಇಂದು ಅದರ ಅಪೂರ್ವ ಸಂಪತ್ತನ್ನೆಲ್ಲ ಕನ್ನಡಿಸಿಕೊಂಡು ಮುನ್ನಡೆಯ ಬೇಕಿದೆ. ಅದರಿಂದ ಇಲ್ಲಿ ನಿಂತು ಒಂದು ಹಿನ್ನೋಟ ಬೀರೋಣ.

ದಂಡಿಯ ಕಾವ್ಯಾದರ್ಶವನ್ನಾಧರಿಸಿ ನೃಪತುಂಗಾನುಮತವಾದ ಶ್ರೀವಿಜಯನ 'ಕವಿರಾಜಮಾರ್ಗ'ವು ನಿಜಕ್ಕೂ ಕವಿಗಳಿಗೆ ಮಾರ್ಗದೋರುವಂಥದು. ಗುಣ-ದೋಷ-ಅಲಂ ಕಾರಗಳ ನಿರೂಪಣೆಯೊಡನೆ ಅಲ್ಲಲ್ಲಿ ಕಾಣುವ ಸ್ವತಂತ್ರ-ವ್ಯತ್ಯಸ್ತ ಪದಗಳು ಮಾರ್ಗಕಾರನ ಪರಿಣತಪ್ರಜ್ಞೆಗೆ ಸಾಕ್ಷಿಯಾಗಿವೆ. ಅವನ ಕಾವ್ಯಸ್ವರೂಪವನ್ನು ಕುರಿತು 'ಕೇಳ್ದೊಲವೊಗೆದಿರೆ ಹೃದಯದೊಳೆ ತಾಳ್ದ ಮಣಿಹಾರಂಬೊಲ್ ಸೊಗಯಿಸುವ ವಚನ ವಿರಚನೆ ನೆಗಳ್ಗುಂ' ಎನ್ನು ವುದೂ ಕಾವ್ಯಮಯ! 'ಕಿರಿದರೊಳ್ ಪಿರಿದರ್ಥ ಮನರಿಪಲ್ ನೆರೆವಾತಂ ನಿಪುಣಂ' ಎಂಬುದು ಧ್ವನಿ ಯನ್ನು ನೆನೆಯಿಸುವುದಿಲ್ಲವೆ ?

ಪಾಪಮಿದು ಪುಣ್ಯಮಿದು, ಹಿತ
ರೂಪಮಿದಹಿತ ಪ್ರಕಾರಮಿದು,
ಸುಖಮಿದು ದುಃಖೋಪಾತ್ತಮಿದೆಂದರಿಪುಗುಂ (೧,೧೮)

ಎಂದು ಕಾವ್ಯಪ್ರಯೋಜನವನ್ನು ಘಂಟಾ ಘೋಷಗೈದಿರುವುದು ಭಾರತೀಯ ಪರಂಪರೆಗನು ಸಾರವಾಗಿದೆ. ಒತ್ತಕ್ಕರ ಸಂಧಿ ಮುಂತಾದುವು 'ಕೂಸಿನ ತಲೆಯೊಳ್ ಬೆಣ್ಪೊರೆಯನಿಟ್ಟವೋಲ್' ಎಂದುಪಮಿಸುವಲ್ಲಿ ಕವಿಯ ಸ್ವಾನುಭವವು ಸುಂದರವಾಗಿ ಸೇರಿಕೊಂಡಿದೆ. ದಂಡಿ ಅಷ್ಟರಸ ಗಳನ್ನಷ್ಟೇ ಹೇಳಿದ್ದರೂ, ಮಾರ್ಗಕಾರನನ್ನು ಮೊದಲು ಮಾಡಿಕೊಂಡು ಕನ್ನಡಿಗರೆಲ್ಲ ನವರಸ ಗಳನ್ನೊಪ್ಪಿ ಚಿತ್ರಿಸಿರುವುದು ಗಮನಾರ್ಹ ಅಂಶ ವಾಗಿದೆ. ಅಲಂಕಾರ ಪಂಥದ ಈ ಗ್ರಂಥಾಂತ್ಯಕ್ಕೆ 'ಧ್ವನಿಯೆಂಬುದಳಂಕಾರ' ಎಂದು ಸ್ವತಂತ್ರವಾಗಿ ಬಂದಿರುವ ಪದ್ಯ ನೋಡಿದರೆ ಸಹೃದಯರಿಂದ ಕಾವ್ಯಶಾಸ್ತ್ರದಲ್ಲಿ ಪ್ರತ್ಯೇಕ ಸ್ಥಾನಪಡೆಯಲು ಹವಣಿಸುತ್ತಿದ್ದ ಧ್ವನಿತತ್ವವನ್ನು ಮಾರ್ಗಕಾರನು ಸ್ವಂತ ಬುದ್ಧಿಯಿಂದ ಅಲಂಕಾರಮಾಲಿಕೆಗೆ ಸೇರಿಸುವ ಪ್ರಯತ್ನಮಾಡಿದಂತಿದೆ (ಮುಗಳಿ).

ಕರ್ನಾಟಕ ಲಕ್ಷಣ ಶಿಕ್ಷಾಚಾರ್ಯನಾದ ಎರಡನೆಯ ನಾಗವರ್ಮನ 'ಕಾವ್ಯಾವಲೋಕನ'ವು (೧೧೫೦) ಇನ್ನೂ ಹೆಚ್ಚು ವಿಷಯಗಳನ್ನು ಶಾಸ್ತ್ರೀ ಯವಾಗಿ ಒಳಗೊಂಡಿರುವುದರಿಂದ, ಇಂದಿಗೂ ನಮಗೆ ಪ್ರಮಾಣ ಗ್ರಂಥವೆನಿಸಿದೆ. ಗುಣ-ದೋಷ ರೀತಿ-ರಸ-ಅಲಂಕಾರ-ಕವಿಸಮಯಗಳನ್ನು ಕಂದ ಗಳಲ್ಲಿ ಸೂತ್ರಿಸಿ ಹಳಗನ್ನಡ ವೃತ್ತಗಳನ್ನುದಾಹರಿ ಸಲಾಗಿದೆ. ಇಲ್ಲಿ ಪ್ರಾಚೀನರ ಅಭಿಪ್ರಾಯಗಳನ್ನು ಸಂಯೋಜಿಸುವ ಕೌಶಲ ನಾಗವರ್ಮನಲ್ಲಿ ವಿಶೇಷ ವಾಗಿದೆ. 'ಕಾವ್ಯಶೋಭಾರಕಂಗಳಾರ್ಪ ಧರ್ಮಂ'

ಎಂಬ ಗುಣಗಳ ಸಾಮಾನ್ಯ ಲಕ್ಷಣ ವಾಮನನಂತಿದ್ದರೂ, ವಿವರ ದಂಡಿಯನ್ನನುಸರಿಸಿವೆ. ಭಾಮಹನಂತೆಯೇ ದಕ್ಷಿಣೋತ್ತರ ಮಾರ್ಗವಿಭೇದವು 'ಗತಾನುಗತಿಕಂ' ಎಂದಿದ್ದರೂ, 'ಒಲ್ದಾದರಿಪರ್ ಕೆಲಬರ್'' ಎಂಬುದನ್ನು ಸೇರಿಸಿದೆ. ಗುಣಪ್ರಕರಣದಲ್ಲೇ ಅಲಂಕಾರಗಳನ್ನು ರುದ್ರಟನ ಮತದಂತೆ ನಿರವಿಸಿದೆ. ರೀತಿಯ ವಿಚಾರದಲ್ಲಿ ಮತ್ತೆ ವಾಮನ–ರುದ್ರಟರ ಸಮನ್ವಯ ಕಾಣುತ್ತದೆ. ಆದರೆ

ರೀತಿ ವಿನೂತವಸ್ತು ಕೃತಿಗೊಪ್ಪುವ ಮೆಯ್
ರಸಭಾವವೃತ್ತಿ ನಿ
ರ್ಣಿತಿಯೆ ಜೀವಂ ಅಂತದರಿನನ್ವಿತನಪ್ಪ
ಕವೀಶ್ವರಂ ಬುಧ
ವ್ರಾತವೊರಲ್ದು ಬಿಚ್ಚಳಿಸಿ ನಚ್ಚುವಳಂಕೃತಿ
ಕೂಡದಿರ್ದೊಡಂ
ರೀತಿಯೊಳೊಂದೆ ಪೇಳ್ವುದು ರಸಂಬಡೆ
ಬಂಧುರ ಕಾವ್ಯಬಂಧಮಂ (೭೮೦)

ಎಂಬಲ್ಲಿ ವಾಮನನ 'ರೀತಿರಾತ್ಮಾ ಕಾವ್ಯಸ್ಯ' ಎನ್ನುವುದನ್ನು ತಿದ್ದಿ ರೀತಿಯು ಕಾವ್ಯದ ಶರೀರ-ರಸವೇ ಜೀವ–ಅದರಿಂದ (ಪಂಡಿತಪ್ರಿಯ ಅಲಂಕಾರಗಳಿಲ್ಲದಿದ್ದರೂ ಸರಿ) ರೀತಿಯನ್ನನುಲಕ್ಷಿಸಿ ರಸವುಕ್ಕುವಂತೆ ಕಾವ್ಯ ರಚಿಸಬೇಕೆಂದಿದೆ. ಭಾರತೀಯ ಕಾವ್ಯ ಮೀಮಾಂಸೆಯಲ್ಲೇ ಇದು ಹೊಸ ವಿಚಾರ! ನಾಗವರ್ಮನು ಇಲ್ಲಿ ರೀತಿ–ರಸ–ಅಲಂಕಾರಗಳ ಸ್ಥಾನವನ್ನು ಸರಿಯಾಗಿ ನಿರ್ದೇಶಿಸಿದ್ದಾನಲ್ಲವೇ? 'ಕಾಳ್ಪುರಮಾಗೆ ಕಾವ್ಯರಸಂ.... ಪೇಳ್ವುದು ಸತ್ಕಾವ್ಯಮಂ ಪೂಮಾಲೆಯನಿಂಬಿನಿಂ ಸಮೆದವೋಲ್' ಎಂಬೆಡೆಗಳಲ್ಲಿ ತನ್ನ ರಸಜ್ಞತೆ ದೋರಿದ ನಾಗವರ್ಮ ನಿರ್ದುಷ್ಟ ಶಾಸ್ತ್ರಕಾರನೂ ಆಗಿದ್ದರಿಂದ, ಸಂಸ್ಕೃತದಲ್ಲಿ ಸಹ ಅಷ್ಟಾಗಿ ಇಲ್ಲದ ಕವಿಸಮಯವನ್ನು ರಾಜಶೇಖರನಿಂದ ವಿಸ್ತರಿಸಿ ಕಾವ್ಯಾವಲೋಕನವನ್ನು ಪೂರ್ಣಗೊಳಿಸಿದ್ದಾನೆ.



ಇದೇಕಾಲಕ್ಕೆ ಉದಯಾದಿತ್ಯ ದೊರೆ ದಂಡಿಯನ್ನನುಸರಿಸಿ ೭೨ ಪದ್ಯಗಳಲ್ಲೊರೆದ ಅಲಂಕೃತಿ ರೀತಿಯ ವಿಷಯದಲ್ಲಿ ನಾಗವರ್ಮನ ಪ್ರಭಾವ ತೋರುತ್ತದೆ.

'ರಸಮೆ ಮೊದಲ್ ಕವಿತೆಗೆ' ಎಂದರೂ 'ಶೃಂಗಾರ ರತ್ನಾಕರ'ದಲ್ಲಿ ಕವಿಕಾಮನು (೧೨೦೦) ವಿಶೇಷವಾಗಿ ಶೃಂಗಾರರಸವನ್ನೇ ಪ್ರತಿಪಾದಿಸಿದ್ದಾನೆ. ರಸಭಾವಗಳು ಪೂರ್ವಾರ್ಧದಲ್ಲೇ ಮುಗಿದು ಉತ್ತರಾರ್ಧವು ನಾಯಕ–ನಾಯಿಕಾ ಪ್ರಭೇದಗಳನ್ನು ತಿಳಿಸುತ್ತದೆ. ಸಂಸ್ಕೃತದ ನೆರವು ಪಡೆದೂ ಬೇರೆ ವಿಸ್ತರಿಸುವುದರಿಂದ, ರಸಗಳನ್ನು ವಾಕ್–ನೇಪಥ–ಕ್ರಿಯಾತ್ಮಕವೆಂದು ವಿಭಾಗಿಸುವಂಥ ವೈಚಿತ್ರ್ಯ ಇಲ್ಲಿವೆ.

ಹಿರಿಯೂರಿಗೆ ಪ್ರಭುವಾಗಿದ್ದ ಮಾಧವನು (೧೫೦೦) ಕನ್ನಡಿಗರ ಮೇಲೆ ಮೊದಲಿನಿಂದಲೂ ಪ್ರಭಾವ ಬೀರಿದ 'ದಂಡ್ಯಳಂಕಾರ' (ಕಾವ್ಯಾದರ್ಶ) ವನ್ನು ಹದವಾಗಿ ಭಾಷಾಂತರಿಸಿದ್ದಾನೆ.

ಸಂಸ್ಕೃತದಲ್ಲಿ ಶಿಖರಕ್ಕೇರಿದ ರಸ–ಧ್ವನಿಗಳನ್ನು, 'ಕನ್ನಡದೊಳಾರ್ಯರಾ ಎಂಬಿನಂ ಚಂದದೆ ಬಿಚ್ಚಳಿಸಿದ' ಶ್ರೇಯಸ್ಸು ಕವಿ ಸಾಳ್ವನಿಗೆ (೧೫೫೦) ಸಲ್ಲಬೇಕು. 'ರಸಮಿಲ್ಲದ ಕಾವ್ಯಂ ನೀರಸಂ ಅದರಿಂ ಕೃತಿಗೆ ರಸಮೆ ಸಾರಂ' ಎಂದು ಇವನೂ 'ರಸರತ್ನಾಕರ'ದಲ್ಲಿ ರಸ–ಭಾವ–ನಾಯಕ–ನಾಯಿಕಾ ವಿಚಾರಗಳನ್ನು ಪ್ರಸ್ತಾಪಿಸಿದ್ದಾನೆ; ಶೃಂಗಾರ ದೃಷ್ಟಿಯ ಒಲವು ಇಲ್ಲೂ ಇದೆ. ಸೂತ್ರವೃತ್ತಿಯ ಬಳಿಕ ಹಳಗನ್ನಡ ಪದ್ಯ ಉದಾಹೃತವಾಗಿವೆ. ಸಾಳ್ವನು ಸಂಸ್ಕೃತದ ಅಮೃತಾನಂದೀಯ–ರಸ

ಕಳಿಕೆ-ಪ್ರತಾಪರುದ್ರೀಯ-(ವಿಶೇಷತಃ)ಕಾವ್ಯಾನುಶಾಸನ, ಹಾಗೂ ಕಾವ್ಯಾವಲೋಕನ–ಶೃಂಗಾರ ರತ್ನಾಕರಗಳಿಗೆ ಋಣಿಯಾಗಿದ್ದಾನೆ.

ಧ್ವನಿಪ್ರಕ್ರಿಯೆಯನ್ನು ಕುರಿತು ಇವನು ಬರೆದ ಗ್ರಂಥವೇ 'ಶಾರದಾವಿಲಾಸ'. ಸದ್ಯಕ್ಕೆ ಇದರ 'ಧ್ವನಿವ್ಯಂಗ್ಯ ವಿವರಣ' ಎಂಬ ೨ನೆಯ ಪ್ರಕರಣವಷ್ಟೇ ಸಿಕ್ಕಿದ್ದು, ಇದರಲ್ಲಿ ಕಾವ್ಯಾನುಶಾಸನದೊಡನೆ ಕಾವ್ಯಪ್ರಕಾಶವನ್ನೂ ಆಧರಿಸಿ ಉತ್ತಮಾಧಮಕಾವ್ಯ–ವಾಚ್ಯ ಲಕ್ಷ್ಯ ವ್ಯಂಗ್ಯ ಮುಂತಾದುವನ್ನು ವಿವರಿಸಿದೆ. ಸಾಳ್ವನು ಸಂಸ್ಕೃತ ಮೂಲವನ್ನು ಅನುವಾದಿಸುವ ರೀತಿಗೆ ಈ ಪ್ರಸಿದ್ಧ ಪದ್ಯವನ್ನವಲೋಕಿಸಬಹುದು—

ಮೂಲ : ಪಶ್ಯ ನಿಶ್ಚಲ ನಿಷ್ಪಂದಾ ಬಿಸಿನೀಪತ್ರೇ
ರಾಜತೇ ಬಲಾಕಾ
ನಿರ್ಮಲ ಮರಕತಭಾಜನ ಪರಿಸ್ಥಿತಾ ಶಂಖ
ಶುಕ್ತಿರಿವ । (ಗಾಥಾಸಪ್ತಶತಿ)

ಕನ್ನಡರೂಪ: ಎಲೆ ಎಲೆ ನೋಡ ತಾವರೆಯ
ಪತ್ರದೊಳೊಂದು ಬಳಾಕಪಕ್ಷಿನಿ
ಶ್ಚಲಿತ ನಿಜಾಂಗನಾಗಿ ಪೊಸಪಚ್ಚೆಯ
ಭಾಜನದಲ್ಲಿ ಶಂಖಮು
ಜ್ವಲಿಸುವ ಮಾಳ್ಕೆಯಿಂ ತೊಳಗುವಂದ
ಮಿದತಿ ಮನೋಜ್ಞಮಾಯ್ತು ನಿ
ರ್ಮಲತರ ಶೈತ್ಯಸಾರ ಜಲಪೂರಿತಮಪ್ಪ
ಸರೋಜಷಂಡದೊಳ್ । (೧೨)

(ಸ್ವಾಳನು ರಸರತ್ನಾಕರದಲ್ಲಿ ಗಣೇಶ್ವರಾಗ್ನಿಕೃತ 'ಸಾಹಿತ್ಯ ಸಂಜೀವನ'ವನ್ನುಲ್ಲೇಖಿಸಿ ಒಂದೆರಡು ಸೂತ್ರಗಳನ್ನು ಉದ್ಧರಿಸುತ್ತಾನೆ. ಅವನಿಗೆ ಮುಂಚೆ ಇದ್ದ ಈ ಕೃತಿ ನಮಗೆ ಉಪಲಬ್ಧವಾಗಿಲ್ಲ.)

'ನವರಸಾಲಂಕಾರ'ವು (೧೬೦೦) ತಿಮ್ಮನಿಂದ ಸಂಕಲಿತವಾಗಿದೆ; ಎಂದರೆ ಇದರಲ್ಲಿನ ಸೂತ್ರ–ವೃತಿ–ಉದಾಹರಣೆಗಳೆಲ್ಲ ನಾಗವರ್ಮ–ಕಾಮ–ಸಾಳ್ವ ಅಮೃತಾನಂದಿ–ಸಿಂಗಭೂಪಾಲರಿಂದ ತೆಗೆದುಕೊಂಡುವು.

ಚಿಕದೇವರಾಜನ ಆಪ್ತಸಚಿವ ತಿರುಮಲಾಚಾರ್ಯನು ತನ್ನ 'ಅಪ್ರತಿಮವೀರಚರಿತ'ವೆಂಬ ಅಲಂಕೃತಿಗೂ ದೊರೆಯನ್ನೇ ನಾಯಕನನ್ನಾಗಿಸಿಕೊಂಡಿದ್ದಾನೆ; ಅದರಿಂದ ಇಲ್ಲಿನ ಲಕ್ಷ್ಯಪದ್ಯಗಳೆಲ್ಲ ಚಿಕ್ಕದೇವರಾಜನನ್ನೇ ಕುರಿತುವು. ಈ ವಿಷಯೈಕ್ಯದ ನಿರ್ಬಂಧದ ಮೂಲಕ ಕೆಲವು ಸಲ ಅವು ಸ್ಪಷ್ಟವೂ ಸಮರ್ಪಕವೂ ಆಗಿರುವುದಿಲ್ಲ. ಅಭ್ಯಾಸಿಗಳಿಗೆ ಸುಕರವೂ ಆಗಿಲ್ಲ' (ಮುಗಳಿ) ಕಾವ್ಯಲಕ್ಷಣ-ಗುಣ-ರೀತಿಗಳು ಮಮ್ಮಟ-ವಾಮನ-ವಿದ್ಯಾನಾಥರನ್ನೂ, ಮುಖ್ಯವಾದ ಅರ್ಥಾಲಂಕಾರ ಅಪ್ಪಯ್ಯದೀಕ್ಷಿತನ ಕುವಲಯಾನಂದವನ್ನೂ ಅನುಸರಿಸಿವೆ. ಸಂಸ್ಕೃತ ಸೂತ್ರಗಳನ್ನೇ ಉದ್ಧರಿಸಿ ಕನ್ನಡವೃತ್ತಿ–ಉದಾಹರಣೆ ಕೊಡುವುದಿಲ್ಲಿನ ಕ್ರಮವಾಗಿದೆ. ಪರ್ಯಾಯೋಕ್ತಂತು ಗವ್ಯಾಸ್ಯ ವಚೋಭಂಗ್ಯಂತರಾಶ್ರಯಂ| ಪೇಳತಕ್ಕರ್ಥಮಂ ಪ್ರಕಾಶಮಾಗಿ ಪೇಳದೆ ಪೆರತೊಂದು ತೆರದೊಳಂದಮಾಗಿ ಪೇಳೆಯದು ಪರ್ಯಾಯೋಕ್ತಂ.

'ಕುವಲಯಾನಂದ'ದಲ್ಲಿ ಅರ್ಥಾಲಂಕಾರಗಳನ್ನು ವ್ಯವಸ್ಥೆಗೊಳಿಸಿದ ಅಪ್ಪಯ್ಯದೀಕ್ಷಿತನೇ ತನ್ನ 'ಚಿತ್ರಮೀಮಾಂಸೆ'ಯಲ್ಲಿ ಧ್ವನಿ-ವ್ಯಂಗ್ಯ-ಶಬ್ದ ಚಿತ್ರಗಳನ್ನೊರೆದಿದ್ದನು. ಇವೆರಡನ್ನೂ 'ಕರ್ಣಾಟಕ ಕುವಲಯಾನಂದ'ದಲ್ಲಿ ಷಟ್ಪದೀರೂಪದಿಂದ ಸಂಗ್ರಹಿಸಿದವನು ತೊರಗಲ್ ಸೀಮೆಯ ಜಾಯಗೊಂಡ ದೇಸಾಯಿ (೧೬೩೪). ಗದ್ಯವಿವರಣೆಯೊಡನೆ ಷಟ್ಪದಿ ಕಾವ್ಯಗಳ ಉದಾಹರಣೆ ಇಲ್ಲಿವೆ.

ನಾಯಿಕಾ ವಿಷಯಕವಾದ ಭಾನುದತ್ತನ 'ರಸಮಂಜರಿ'ಯನ್ನೂ ಇವನು ಇದೇ ರೀತಿ ಕನ್ನಡಿಸಿದ್ದಾನೆ.

ಮುಮ್ಮಡಿ ಕೃಷ್ಣರಾಜ ಒಡೆಯರ ಕುಮಾರಿಯ ರನ್ನು ವರಿಸಿ ಅಳಿಯನಾದ ಲಿಂಗರಾಜ (೧೮೫೦) "ನರಪತಿಚರಿತ"ವೆಂಬ ಅಲಂಕಾರ ಗ್ರಂಥ ರಚಿಸಿದ್ದಾನೆ. ಕೈಹಿಡಿದವರು ಕವಿತಾಸತಿಯ ಹೆಚ್ಚಳವನ್ನು ಪ್ರಶ್ನಿಸಲು ಅಲಂಕಾರಗಳಿಗೆ ಕುವಲಯಾನಂದದಂತೆ ಲಕ್ಷಣ ಹೇಳಿ, ಮಾವನನ್ನು ಕುರಿತ ಲಕ್ಷ್ಯವಿತ್ತಿದ್ದಾನೆ.

(ಕವಿಚರಿತೆಯಲ್ಲುಕ್ತವಾದ, ರಸಚಂದ್ರಿಕೆ ರಸರತ್ನ ಸಮುಚ್ಚಯ ಮೊದಲಾದುವಿನ್ನೂ ಅನುಪಲಬ್ಧವಾಗುಳಿದಿವೆ.)

ಈ ಸಾವಿರ ವರುಷಗಳ ಹಳಗನ್ನಡದ ಘಟ್ಟವನ್ನು ದಾಟಿ ಬಂದರೆ ನಮಗೆ ಗೋಚರಿಸುವುದು ಇಂದಿನವರ ಕೃಷಿ:

ಹಿಂದಿನ ಗ್ರಂಥಗಳನ್ನಾಧರಿಸಿ ಚಾವಲಿ ರಾಮಸ್ವಾಮಿಶಾಸ್ತ್ರಿ ರಚಿಸಿದ 'ಕರ್ನಾಟಕ ಛಂದೋಲಂಕಾರ ಸಾಹಿತ್ಯ ಲಕ್ಷಣ ಸಂಗ್ರಹ' ಎಂಬ ಕೈಪಿಡಿಯಲ್ಲಿ (೧೮೮೫)ವಿದ್ಯಾರ್ಥಿಗಳಿಗೋಸ್ಕರ ಕಾವ್ಯ-ನಾಟಕ ವಿಷಯಗಳನ್ನೆಲ್ಲ ಟಿಪ್ಪಣಿಸಿದೆ. (ಇದರಲ್ಲಿಯ ಉದಾಹರಣ ಪದ್ಯ ಒಂದನ್ನು 'ಅಲಂಕಾರ ರತ್ನಾವಳಿ'ಯಿಂದ ಎತ್ತಿಕೊಂಡಿದೆ– ಈ ಕೃತಿಯು ನಮಗೆ ದೊರೆತಿಲ್ಲ.) ಇಂಥದೇ ಇನ್ನೊಂದು ಕೈಪಿಡಿ ಮೈಸೂರು ವಿಶ್ವವಿದ್ಯಾಲಯದವರದು; ಅಡಕವಾದರೂ ಸಮಗ್ರವಾಗಿ ಕೃಷ್ಣಶಾಸ್ತ್ರಿಗಳಿಂದ ಬರೆಯಲ್ಪಟ್ಟ ಇದರ ಅಲಂಕಾರ ವಿಭಾಗವು ಇಂದಿನ ಅಲಂಕಾರ ಗ್ರಂಥಗಳಿಗೆ ಅಲಂಕಾರ ಪ್ರಾಯವಾಗಿದೆ.

ಕುವಲಯಾನಂದಕ್ಕೆ ಮೂಲವಾದ ಜಯದೇವನ 'ಚಂದ್ರಾಲೋಕವು ಕನ್ನಡದಲ್ಲಿ ಮೂರುಸಲ ಅವತರಿಸಿದೆ. ಅದರ ಅಲಂಕಾರಗಳನ್ನು ೨೦೦ ಕಂದಗಳಲ್ಲಿಳಿಸಿ 'ಅಲಂಕಾರಚಂದ್ರಿಕೆ' ಎಂಬ ಟೀಕೆಯೊಡನೆ, ಶೃಂಗಾರೋದಾಹರಣೆಗಳಿಗೆ ಪರ್ಯಾಯ ಪದ್ಯರಚಿಸಿ ಕೊಟ್ಟವರು ಸಿದ್ಧಾಂತಿ ಶಿವಶಂಕರ ಶಾಸ್ತ್ರಿ (೧೮೯೨); ಕನ್ನಡ ಅಲಂಕಾರ ವಿದ್ಯಾರ್ಥಿಗಳು ಅಲಂಕಾರವಿದ್ಯಾರ್ಥಿಗಳೇ ಆದರೆಂದು ಅಕ್ಕಲೇ ಲಕ್ಷ್ಮೀನರಸಿಂಹಶಾಸ್ತ್ರಿಯವರು ಅದನ್ನು ಗದ್ಯವಿವರಣೆಯಿಂದ ಸುಲಭಿಸಿ, ಸದುದಾಹರಣೆಗಳನ್ನೇ ಪುದುಂಗೊಳಿಸಿ ಕೊಟ್ಟರು (೧೯೦೫) ಈಚೆಗೆ ಚಂದ್ರಾಲೋಕವನ್ನು ಪುನಃ ಕನ್ನಡ ಪ್ರಭಾ ವ್ಯಾಖ್ಯೆಯೊಡನೆ ಹೊರತಂದವರು ಮೈಸೂರಿನ ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ಟರು.

ಎಮ್. ಎ. ರಾಮಾನುಜಯ್ಯಂಗಾರ್ಯರ 'ಕವಿಸಮಯ' ಓಡ್ಲಮನೆ ಆತ್ಮಾರಾಮಶಾಸ್ತ್ರಿಗಳ 'ನಾಟಕ ಕಲೆ' ಹಾಸನ ನರಸಿಂಹಶಾಸ್ತ್ರಿಗಳ 'ಸಾಹಿತ್ಯಾಲಂಕಾರ' ಮೊದಲಾದವು ಈ ಶತಮಾನದ ಆಂಭಕ್ಕೆ ಬಂದ ಕೆಲ ಬಿಡಿ ಪುಸ್ತಕಗಳು. (ಪರಿಷತ್‌ಪತ್ರಿಕೆಯಲ್ಲಿ ಕರ್ಪೂರ ಶ್ರೀನಿವಾಸ ರಾಯರು ಬರೆದ 'ಸಾಹಿತ್ಯಶಾಸ್ತ್ರ' ವಿಚಾರದ ಲೇಖನ ಮಾಲೆಯು ಒಂದು ಪುಸ್ತಕವಾಗುವಂಥದು.)

ಕಾಣೆಯವರ 'ಅಲಂಕಾರ ಶಾಸ್ತ್ರದ ಚರಿತ್ರೆ' ಯನ್ನು ಕೌಲಗಿ ಶೇಷಾಚಾರ್ಯರು ಭಾಷಾಂತರಿಸಿದ ಬಳಿಕ, ಇತ್ತೀಚೆಗೆ ರಸ–ಧ್ವನಿಗಳ ದೃಷ್ಟಿಯಿಂದ ಸಮಗ್ರ, ಭಾರತೀಯ ಕಾವ್ಯಮೀಮಾಂಸೆ' ಯನ್ನೇ ಪರಿಚಯಿಸಿಕೊಡುವ ಉದ್ಗ್ರಂಥವನ್ನಿತ್ತಿದ್ದಾರೆ ತೀ.ನಂ.ಶ್ರೀ.

ಡಾ|ಕೆ.ಕೃಷ್ಣಮೂರ್ತಿಯವರು ಭಾಮಹನ ಕಾವ್ಯಾಲಂಕಾರವನ್ನು, ಕಾವ್ಯಾದರ್ಶದೊಡನೆಯೂ, ಅನಂದವರ್ಧನನ ಧ್ವನ್ಯಾಲೋಕವನ್ನು ಲೋಚನಸಾರದೊಡನೆಯೂ, ಮಮ್ಮಟನ ಕ್ಯಾಪ್ರಕಾಶನನ್ನು ಟಿಪ್ಪಣಿಗಳೊಡನೆಯೂ ಪರಿವರ್ತಿಸಿ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ನಾಟಕ ಲಕ್ಷಣವನ್ನು ವಿವರಿಸುವ ಧನಂಜಯನ ದಶರೂಪಕ'ವು ವ್ಯಾಖ್ಯಾನ ಸಹಿತ ಕೆ.ವಿ.ಸುಬ್ಬಣ್ಣನವರಿಂದ ಕನ್ನಡಿಸಲ್ಪಟ್ಟದೆ.

ಸಂಸ್ಕೃತ ಸಂಪದವಿಂತು ಸೋನೆಯಂ ತಿಳಿಯುತ್ತಿರುವಾಗ ವಿರಳವಾಗಿ, ಪಾಶ್ಚಾತ್ಯದಲ್ಲಿ ಅಗ್ರಗಣ್ಯನಾದ ಅರಿಸ್ಟಾಟಲ್‌ನ ಕಾವ್ಯಮೀಮಾಂಸೆಯನ್ನು ಕನ್ನಡಕ್ಕೆ ತಂದಿದ್ದಾರೆ ಜಿ. ಬಾಲಸುಬ್ರಹ್ಮಣ್ಯಂ.

ಇದೀಗ ಕನ್ನಡದಲ್ಲಿ ಪ್ರತಿಫಲಿಸಿದ ಕಾವ್ಯಮೀಮಾಂಸೆ. ನಮ್ಮ ಹಿಂದಿನವರು ಹಾಕಿಕೊಟ್ಟ ದಾರಿಯಲ್ಲೇ ಕನ್ನಡಕ್ಕೆ ಇನ್ನೂ ಬಾರದಿರುವ ಗ್ರಂಥಗಳನ್ನು ನೇರ್ಪಡಿಸಿಕೊಂಡು, ಅಳಿದುಳಿದ ಕೊರತೆಯನ್ನು ತುಂಬುವ ಯತ್ನ ಆಧುನಿಕರಲ್ಲಿ ಕಾಣುತ್ತದೆ. (ಕೆ.ವಿ.ಸುಬ್ಬಣ್ಣನವರಿಂದ ಭರತನ ನಾಟ್ಯಶಾಸ್ತ್ರ, ಮೈಸೂರು ವಿಶ್ವವಿದ್ಯಾಲಯದಿಂದ 'ಪಾಶ್ಚಾತ್ಯಕಾವ್ಯ ಮೀಮಾಂಸೆ' ಬರಲಿವೆ.) ಸ್ವತಂತ್ರ ಗ್ರಂಥರಚನೆಗೆ ಮೂಲಸಾಮಗ್ರಿಯನ್ನೊದಗಿಸುವ ದಿಶೆಯಲ್ಲಿ ನಾವಿನ್ನೂ ಮಾಡಬೇಕಾದ ಕೆಲಸ ವಿಪುಲವಾಗಿದೆ. 'ಬೆಳೆ ಏನೊ ಬೇಕಾದಷ್ಟಿದೆ, ಕೊಯ್ಯುವವರೇ ಕಡಿಮೆ' ಎಂದವರೂ ಶ್ರೀ!

ಎಚ್.ಜಿ. ಲೋಕೂರ್



# ಕಾಳಿದಾಸನು ಶಕುಂತಳೆಯನ್ನು ಚಿತ್ರಿಸಿರುವ ರೀತಿ

ಕವಿಕುಲಗುರು ಕಾಳಿದಾಸನು ಭರತ ಖಂಡದ ಕವಿಗಳಲ್ಲೆಲ್ಲಾ ಶ್ರೇಷ್ಠನಾಗಿರುವುದು ಮಾತ್ರವಲ್ಲದೆ, ಪ್ರಖ್ಯಾತ ವಿಶ್ವಕವಿಗಳ ಪಂಕ್ತಿಯಲ್ಲಿ ಕೂಡ ಸೇರಿದ್ದಾನೆ. ಆಗಲೇ ಸುಮಾರು ೧೫೦೦ ವರ್ಷಗಳು ಕಳೆದರೂ, ಅವನ ಕಾವ್ಯಗಳು ಇಂದಿಗೂ ಜನಪ್ರಿಯವಾಗಿರುವುದೇ ಸಾಕ್ಷಿ. ಅಂತೆಯೇ ಅವನ ನಾಟಕಗಳೂ ಸಹ ಪ್ರಖ್ಯಾತವಾಗಿವೆ. ಅವನ ನಾಟಕಗಳಲ್ಲೆಲ್ಲಾ "ಅಭಿಜ್ಞಾನ ಶಾಕುಂತಲ"ವು ಕಾಳಿದಾಸನ ಮಹೋನ್ನತ ಪ್ರತಿಭೆಯ ಪ್ರತೀಕವಾಗಿದೆ. "ಕಾವ್ಯೇಷು ನಾಟಕಂ ರಮ್ಯಂ ತೇಷು ರಮ್ಯಾ ಶಕುಂತಲಾ" ಎಂಬ ಮಾತು ಸತ್ಯ. ಕಾವ್ಯಗಳಲ್ಲೆಲ್ಲಾ ನಾಟಕವು ಕಲಿತವರಿಗೆ ಮಾತ್ರವಲ್ಲದೆ, ಕಲಿಯದವರಿಗೂ ಕಾಮಧೇನುವಿದ್ದಂತೆ. "ಶಾಕುಂತಲ" ನಾಟಕವು ಭಾರತದಲ್ಲಿ ಮಾತ್ರವಲ್ಲದೆ ಇಡೀ ಪ್ರಪಂಚದಲ್ಲಿಯೇ ಪ್ರಖ್ಯಾತವಾಗಿದೆ.

ನಾಟಕದ ಕಥಾವಸ್ತು ಮಹಾಭಾರತದ್ದು. ಕವಿ ಕಥಾವಸ್ತುವನ್ನು ಮಹಾಭಾರತದ ಶಕುಂತಲೋಪಾಖ್ಯಾನದಿಂದ ತೆಗೆದುಕೊಂಡಿದ್ದರೂ ಕಲ್ಲಿನಿಂದ ಕೂಡಿದ ಚಿನ್ನವನ್ನು ವಿವಿಧ ಹಂತದಲ್ಲಿ ಶೋಧಿಸಿ, ಅದರಿಂದ ಮಹೋನ್ನತವಾದ ವಿಗ್ರಹವನ್ನು ಕಡೆಯುವಂತೆ ತನ್ನ ಪ್ರತಿಭೆಯ ಬಲದಿಂದ ಉತ್ತಮ ವಸ್ತುವನ್ನು ನಿರ್ಮಿಸಿದ್ದಾನೆ. ರಾಷ್ಟ್ರಕವಿ ಕುವೆಂಪುರವರು ತಮ್ಮ "ವಿಭೂತಿ ಪೂಜೆ"ಯಲ್ಲಿ ರನ್ನನನ್ನು ಕುರಿತು ಹೇಳಿರುವಂತೆ "ತಾಮ್ರವನ್ನು ಯಾರು ಬೇಕಾದರೂ ಅಂಗಡಿಯಿಂದ ತರಬಹುದು. ಆದರೆ ಅದಕ್ಕೆ ನವ್ಯವಾದ ವಿದ್ಯುತ್ ಚೇತನವನ್ನು ಕೊಡುವುದು ಮುಖ್ಯ" ಎಂದಿದ್ದಾರೆ. ಈ ಮಾತು ಕಾಳಿದಾಸನಿಗೂ ಅನ್ವಯಿಸುವುದು ಸಮಂಜಸವಾಗಿದೆ. ಋಷಿಕವಿಯು ಶಕುಂತಳೆಯ ಪಾತ್ರವನ್ನು ಮೂಲಕಥೆಗಿಂತಲೂ ನಾಟಕದಲ್ಲಿ ಉತ್ತಮ ಪಡಿಸಿದ್ದಾನೆ ಎಂಬುದನ್ನು ಕೂಲಂಕಷವಾಗಿ ನೋಡುವ ಮುನ್ನ ಮಹಾಭಾರತದಲ್ಲಿನ ಕಥೆಯನ್ನು ಪರಿಶೀಲಿಸೋಣ.

ಹಸ್ತಿನಾಪುರದ ಪುರುವಂಶದ ರಾಜ ದುಷ್ಯಂತನು ಬೇಟೆಗೆಂದು ಸೈನ್ಯ ಸಮೇತನಾಗಿ ಹೋಗಿ ಕಾಡಿನಲ್ಲಿ ಜಿಂಕೆಯೊಂದನ್ನು ಕಂಡು ಅದರ ಬೆನ್ನುಹತ್ತಿ ಬಹುದೂರ ಬಂದು ಕಣ್ವರ ಆಶ್ರಮವನ್ನು ತಲಪಿದನು. ಕಣ್ವರ ದರ್ಶನವನ್ನು ಪಡೆಯಲು ಆಶ್ರಮದಲ್ಲಿ ಯಾರೆಂದು ವಿಚಾರಿಸಲಾಗಿ, ಯೌವನದಿಂದ ಕೂಡಿದ ಪುತ್ತಳಿಯಂತಿದ್ದ ಆಶ್ರಮಕನ್ಯೆಯರು, ರಾಜನನ್ನು ಸ್ವಾಗತಿಸಿ ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿದರು. ಅನಂತರ ರಾಜನ ಆಕಸ್ಮಿಕ ಬರುವಿಕೆಗೆ ಕಾರಣವೇನೆಂದು ವಿಚಾರಿಸಿದರು. ಕಣ್ವರಿಗೆ ಸೇವೆಯನ್ನು ಸಲ್ಲಿಸೋಣವೆಂದು ಬಂದೆ ಎಂಬುದಾಗಿ ರಾಜನು ಹೇಳಲು ಕಣ್ವರು ಹಣ್ಣುಹಂಪಲು ತರಲು ಹೋಗಿದ್ದಾರೆ, ಇಷ್ಟರಲ್ಲೇ ಬರುವರು ಅನಂತರ ಕಾಣಬಹುದು ಎಂದರು. ಸವಿನುಡಿಯನ್ನಾಲಿಸಿದ ನಿರಾಭರಣ ಸುಂದರಿಯಾದ ಆ ರೂಪಿನ ಗಾಡಿಯನ್ನು ನೋಡಿ ಮನಸೋತು 'ನೀನು ಯಾರು? ಕಾಡಿನಲ್ಲಿ ಯಾಕೆ ಇದ್ದೀಯೆ? ನಿನ್ನನ್ನು ನೋಡಿ ನನ್ನ ಮನ ಕರಗಿತು' ಎಂದನು. ಅದಕ್ಕೆ ಶಕುಂತಳೆ ಧೈರ್ಯವಾಗಿ "ನಾನು ಕಣ್ವರ ಮಗಳು" ಎಂದಳು. ಅಲ್ಲದೆ

ರಾಜನ ಮರುಪ್ರಶ್ನೆಗಳಿಗೆ ತನ್ನ ಪೂರ್ವವೃತ್ತಾಂತ ವನ್ನು ಅವಳೇ ಹೇಳಿದಳು. ರಾಜಪುತ್ರಿಯೆಂದು ತಿಳಿದ ಮೇಲೆ ದುಷ್ಯಂತ ಆಸೆ ತೋರಿಸಿ ಗಾಂಧರ್ವ ಪದ್ಧತಿಯಲ್ಲಿ ಮದುವೆಯಾಗೆಂದು ಕೇಳಿದನು. ಹಣ್ಣು ತರಲು ಹೋಗಿರುವ ನನ್ನ ತಂದೆ ಬರಲಿ; ಅವರು ನನ್ನನ್ನು ನಿನಗೆ ಕೊಡುತ್ತಾರೆ ಎಂದು ಉತ್ತರಿಸಿದಳು. ಕಾಮಾತುರನಾದ ರಾಜನು ಗಾಂಧರ್ವ ವಿವಾಹದ ಉದಾಹರಣೆ ಹೇಳಿ ಅವಳನ್ನು ಒಪ್ಪಿಸಿದನು. ಶಕುಂತಳೆ ಅದಕ್ಕೆ ಪ್ರತಿಯಾಗಿ ತನ್ನಲ್ಲಿ ಜನಿಸುವ ಕುಮಾರನಿಗೆ ಯುವರಾಜ ಪಟ್ಟಕಟ್ಟುವಂತೆ ಮಾತುಕೊಟ್ಟರೆ ಮಾತ್ರ ಸಾಧ್ಯವೆಂದು ಹೇಳಿದಳು. ದುಷ್ಯಂತನು ತುರ್ತಾಗಿ ಮುಂದಾಲೋಚನೆಯಿಲ್ಲದೆ ಅವಳ ನ್ಯಾಯಮಕ್ಕೆ ಒಪ್ಪಿ ಮದುವೆಯಾದನು. ಕಣ್ವರು ಬಂದರೆ ಏನು ಮಾಡುವರೋ ಎಂದು ಅಂಜಿ ರಾಜ್ಯಕ್ಕೆ ಹಿಂತಿರುಗಿದ ಮೇಲೆ ಕರೆಸಿಕೊಳ್ಳುತ್ತೇನೆಂದು ಹೇಳಿ ಹೊರಟು ಹೋದನು. ಕಣ್ವರು ಹಿಂತಿರುಗಿದ ಮೇಲೆ ದಿವ್ಯಜ್ಞಾನದಿಂದ ನಡೆದ ಕಾರ್ಯದ ಅರಿವಾಯಿತು. ಮಗಳಿಗೆ ಆಶೀರ್ವದಿಸಿ ಚಕ್ರವರ್ತಿ ಪುತ್ರನನ್ನು ಪಡೆ ಎಂದು ಹರಸಿದರು. ಆಶ್ರಮದಲ್ಲೇ ಶಕುಂತಳೆ ಮಗನನ್ನು ಹೆತ್ತಳು. ಅವಳ ಮಗನೇ ಸರ್ವದಮನ. ಅಲ್ಲಿಯೇ ೧೨ ವರ್ಷಗಳು ಕಳೆದವು. ರಾಜನಿಂದ ಉತ್ತರವಿಲ್ಲ. ಯುವರಾಜ ಪಟ್ಟಕ್ಕೆ ಕಾಲ ಸಮೀಪಿಸಿತೆಂದು ದುಷ್ಯಂತನಲ್ಲಿಗೆ ಶಕುಂತಳೆಯನ್ನು ಮಗನೊಡನೆ ಕಳುಹಿಸಿದರು. ದುಷ್ಯಂತನ ಆಸ್ಥಾನವನ್ನು ತಲುಪಿ, ಹಿಂದೆ ನುಡಿದಂತೆ ಮಗನಿಗೆ ಪಟ್ಟಕಟ್ಟುವಂತೆ ರಾಜನನ್ನು ಕೇಳಿಕೊಂಡಳು. ದುಷ್ಯಂತನು ತಿಳಿದೂ ತಿಳಿಯದವನಂತೆ ನಟಿಸಿ, ಅನಾಗರಿಕರಂತೆ ದೂರಿ ಅವಳನ್ನು ತಿರಸ್ಕರಿಸಿದನು. ಅವಮಾನಿತಳಾದ ಶಕುಂತಳೆ ತತ್ವ ಹೇಳಿದಳು; ವಾದಮಾಡಿದಳು; ಕೊನೆಗೆ ಭಯಂಕರ ಕೋಪಗೊಂಡು, "ನಿನ್ನ ತಲೆ ಸಾವಿರಹೋಳಾಗಲಿ" ಎಂದು ಶಪಿಸಿದಳು. ಕೊನೆಗೆ ಮಗುವನ್ನು ಅಲ್ಲೇ ಬಿಟ್ಟು ಆಶ್ರಮಕ್ಕೆ ಹಿಂತಿರುಗಿದಳು. ಅಷ್ಟರಲ್ಲೇ ಅಶರೀರವಾಣಿ "ದುಷ್ಯಂತ! ಶಕುಂತಳೆಯನ್ನು ತಿರಸ್ಕರಿಸಬೇಡ, ಮಗನನ್ನು ಕರೆದುಕೋ? ಶಕುಂತಳೆ ಹೇಳಿದುದು ಸತ್ಯ ನೀನೇ ಅವಳ ಪತಿ" ಎಂದಿತು. ಆಗ ದುಷ್ಯಂತನು "ಲೋಕನಿಂದನೆಯಿಂದ ದೂರವಾದೆ" ಎಂದು ತಿಳಿದು ಅವರನ್ನು ಕರೆದುಕೊಂಡು ರಾಜ್ಯದಲ್ಲಿ ಸುಖದಿಂದಿದ್ದನು. ಮುಂದೆ ಮಗನಿಗೆ ಪಟ್ಟ ಕಟ್ಟಿದನು.

ಮೂಲಕಥೆಯಲ್ಲಿ ದುಷ್ಯಂತನ ಪಾತ್ರ ಮುಖ್ಯವಲ್ಲದಿದ್ದರೂ ಶಕುಂತಳೆಯು ವರ್ತಿಸಿದ ರೀತಿಯನ್ನು ಪ್ರತಿಹಂತದಲ್ಲೂ ತಿಳಿದೆವು. ಇಂತಹ ಕಲ್ಮಷದಿಂದ ಕೂಡಿದ ಚಿನ್ನದ ಅದುರು ಕಾಳಿದಾಸನ ಪ್ರತಿಭೆಯ ಮೂಸೆಯಲ್ಲಿ ಬೆಂದು ಸ್ವಚ್ಛವಾದ ಮಿಸುನಿಯಂತೆ ಮಿನುಗುತ್ತಿದೆ.

"ಶಾಕುಂತಲ ನಾಟಕ"ದ ನಾಯಕಿ ಶಕುಂತಳೆ. ಶಕುಂತಳೆಯ ಪಾತ್ರದ ಪ್ರಾಧಾನ್ಯತೆಯನ್ನು ನಾಟಕಕ್ಕಿಟ್ಟಿರುವ ಹೆಸರೇ ಸೂಚಿಸುತ್ತದೆ. ಕಣ್ವರ ಕಣ್ಣಿನಂತಿದ್ದ, ಆಶ್ರಮದ ಲತೆಯ ಅಂಗದಂತಿದ್ದ ಮುಗ್ಧೆ ಶಕುಂತಳೆಯ ಪ್ರಣಯದ ಆರಂಭ ಬೆಳವಣಿಗೆ ಮತ್ತು ಪರಿಣಾಮವೇ ನಾಟಕದ ಸಾರ. ಕವಿ ಪತ್ರಿಯೊಂದು ಪಾತ್ರಕ್ಕೂ ಸಮಾನ ಸ್ಥಾನ ಕೊಟ್ಟಿದ್ದರೂ ಶಕುಂತಳೆಯ ಚಿತ್ರವು ಇಳಿವಯಸ್ಸಿನ ಅನುಭವ ತುಂಬಿದ ಕಾಳಿದಾಸನ ಪ್ರತಿಭೆಯಿಂದ ಪರಿಪಕ್ವವಾಗಿದೆ. ನಾಟಕದ ಮೊದಲನೇ ಅಂಕದಲ್ಲಿ ದುಷ್ಯಂತನು ಜಿಂಕೆಯನ್ನು ಅಟ್ಟಿಸಿಕೊಂಡು ಬಂದು ಕೊಲ್ಲಲು ಯತ್ನಿಸಿದಾಗ ಋಷಿಕುಮಾರರು ಆಶ್ರಮದ ಜಿಂಕೆಯನ್ನು ರಾಜರು ಕೊಲ್ಲಬಾರದು ಎಂದಾಗಲೇ ಕವಿ ಶಕುಂತಳೆಯ ಪಾತ್ರಕ್ಕೆ ನಾಂದಿ ಹಾಕಿದಂತಿದೆ. ಆಶ್ರಮದ ಜಿಂಕೆ ಎಂಬ ಮಾತಿನಲ್ಲಿ ಧ್ವನಿ ಅಡಕವಾಗಿದೆ. ಆಶ್ರಮಕ್ಕೆ

ಹೋಗಿ ಕಣ್ವರ ಆತಿಥ್ಯವನ್ನು ಸ್ವೀಕರಿಸು ಹೋಗು ಎಂದಾಗ ಅವರು ಆಶ್ರಮದಲ್ಲಿದಾರೆಯೇ ಎಂದು ವಿಚಾರಿಸಲು "ಅವರು ಶಕುಂತಳೆಯ ಪ್ರತಿಕೂಲ ದೈವಶಮನಾರ್ಥವಾಗಿ ಸೋಮತೀರ್ಥಕ್ಕೆ ಹೊಗಿದ್ದಾರೆ; ಅವರ ಮಗಳು ಶಕುಂತಳೆ ಅತಿಥಿ ಸತ್ಕಾರ ಮಾಡುವಳು" ಎಂದರು. ಅವರಿಬ್ಬರ ಸಮಾಗಮಕ್ಕೆ ಕವಿ ಸಹಜವಾದ ಸನ್ನಿವೇಶವನ್ನು ದೊರಕಿಸಿದ್ದಾನೆ. ಸಖಿಯರ ಜೊತೆಯಲ್ಲಿ ಆಶ್ರಮದ ತರುಲತೆಗಳಿಗೆ ಶಕುಂತಳೆಯು ನೀರೆರೆಯುವ ಚಿತ್ರ ಚೆನ್ನಾಗಿ ಕಣ್ಣಿಗೆ ಕಟ್ಟುವಂತಿದೆ. ಆಶ್ರಮದ ತರುಲತೆಗಳು ಆಕೆಗೆ ಸಹೋದರಿಯರಿದ್ದಂತೆ. ಅವಳು ಪ್ರಕೃತಿಯ ಒಂದು ಅಂಗವಾಗಿದ್ದಾಳೆ. ಅವಳ ಪಾತ್ರದ ಪುಷ್ಟಿಗೆ ಪುಷ್ಪದ ಹಿಂದಿನ ಎಸಳಿನಂತಿದ್ದ-ಪ್ರಿಯಂವದೆ ಮತ್ತು ಅನಸೂಯೆಯರು ಸಹಾಯ ಮಾಡುವರು. ಸಹಜವಾಗಿ ಸಕಾಲದಲ್ಲಿ ಹೊರಹೊಮ್ಮುವ ಯೌವನದ ಚಿಹ್ನೆಗಳಿಗೆ ಪ್ರಿಯಂವದೆ ಹೊರಗಿನ ಪ್ರೇರಕ ಶಕ್ತಿಯಾಗಿದ್ದಾಳೆ. ಎಷ್ಟೇ ಲಜ್ಜೆಯಿಂದ ಅದುಮಿ ಹಿಡಿದಿದ್ದರೂ ಶಕುಂತಳೆಯ ಭಾವವು ಹೊರಗಿನ ಪ್ರೇರಣೆಯಿಂದ ಅಭಿವ್ಯಕ್ತಗೊಳ್ಳುತ್ತದೆ. ಕಾಳಿದಾಸನು ಶೃಂಗಾರ ಪ್ರಿಯನೂ ಹೌದು ಎಂಬುದನ್ನು ಅಲ್ಲಲ್ಲೇ ಔಚಿತ್ಯವರಿತು ಚಿತ್ರಿಸಿದ್ದಾನೆ. ಗಿಡಗಳಿಗೆ ನೀರೆರೆಯುವಾಗ ಎಲೌ "ಅನಸೂಯೆ ಈ ಪ್ರಿಯಂವದೆಯು ಬಿಗಿಯಾಗಿ ಕಟ್ಟಿದ ವಲ್ಕಲದಿಂದ ನನ್ನ ಎದೆಯು ಬಿರಿಯುತ್ತಿರುವುದು" ಎನ್ನುವ ಮಾತು ಧ್ವನಿಪೂರ್ಣವಾಗಿದೆ. ಸಹಜ ಯೌವನವನ್ನು ಬಿಚ್ಚಿ ಹೇಳಲು ನಾಚಿಕೆಯಿಂದ ಪ್ರಿಯಂವದೆಯನ್ನು ದೂರುವುದು ಉಚಿತವಾದುದು. ಇಲ್ಲಿ ಕವಿ ಅವಳ ಯೌವನಾವಸ್ಥೆಯನ್ನು ಮಾನಸಿಕ ದೃಷ್ಟಿಯಿಂದ ನೋಡಿರುವುದು ಗಮನಾರ್ಹವಾದುದು. 'ಹರೆಯದವಳ ಮನಸ್ಸು ಹರಿಯುವ ನದಿಯಿದ್ದಂತೆ' ಎಂದು ಕವಿ ತಿಳಿಸಿದ್ದಾನೆ. ಎಳೆಯ ಮಾವಿನ ಮರವನ್ನು ಆಶ್ರಯಿಸಿದ ವನಜ್ಯೋತ್ಸ್ನೆಯೆಂಬ ನವಮಲ್ಲಿಕಾಲತೆಯನ್ನು ಶಕುಂತಳೆ ನಿಂತು ನೋಡಲು; ಪ್ರಿಯಂವದೆ "ಅಂತಯೇ ನಿನ್ನ ಶರೀರವೂ ಯೋಗ್ಯವಾದವನನ್ನು ಸೇರಲೆಂದು ಎಳಸುವುದೇ" ಎಂದು ಪ್ರಚೋದಿಸುವಳು. ತಾಪಸಿಯಂತೆ ವಲ್ಕಲ ಧರಿಸಿದ್ದರೂ ಅವಳ ನಿರಾಭರಣ ಸೌಂದರ್ಯ ರಾಜನನ್ನು ಮುಗ್ಧನನ್ನಾಗಿ ಮಾಡುವುದು ಸಹಜವೇ. ಆಕೆಯ ತುಟಿಗಳು 'ತಳಿರ್ಗಳಿಗೆ ಸಾಟಿ' ಎಂದು ರಾಜನು ಹೇಳುವುದು ಅವಳ ಸೌಂದರ್ಯಕ್ಕೆ ಪೂರಕ. ಶಕುಂತಳೆ ನಿಜಕ್ಕೂ ನಡೆವ ಲತೆಯೆಂದರೆ ತಪ್ಪಾಗಲಾರದು. ಶಕುಂತಳೆ ದುಷ್ಯಂತರ ಸಮಾಗಮಕ್ಕೆ ತುಂಬಿಯನ್ನು ತಂದಿರುವುದು ಕವಿಯ ಜಾಣ್ಮೆಯನ್ನು ತೋರಿಸುವುದಲ್ಲದೆ ಸಹಜತೆಯನ್ನೂ ಮೂಡಿಸಿದೆ. ಭಾರತದ ಕಥೆಯಲ್ಲಾದರೆ ಯಾರ ಮಧ್ಯಸ್ಥಿಕೆಯೂ ಇಲ್ಲದೆ ಆಧುನಿಕ ಕಾಲೇಜು ತರುಣಿಯಂತೆ ಶಕುಂತಳೆಯೂ ರಾಜನೊಡನೆ ಮಾತನಾಡುವಳು. ಭಾರತೀಯ ಸಂಪ್ರದಾಯಕ್ಕೆ ಅನುಸಾರವಾಗಿ ಕನ್ಯೆಯಾದವಳು ಈ ರೀತಿ ನೇರವಾಗಿ ಯೌವನಸ್ಥರೊಡನೆ ಮಾತನಾಡುವುದು ನೀತಿಬಾಹಿರವಾದುದೆಂದು ಕವಿ ಈ ಘಟನೆಯನ್ನು ಚಿತ್ರಿಸಿ ಪಾತ್ರಕ್ಕೆ ಮೆರಗು ತಂದಿದ್ದಾನೆ. ಅಂತೆಯೇ ಶಕುಂತಳೆ ಅಥಿತಿ ಸತ್ಕಾರ, ದೇವರಪೂಜೆ, ಆಶ್ರಮದ ಪ್ರಾಣಿ ಹಾಗೂ ತರುಲತೆಗಳನ್ನು ಎಚ್ಚರವಾಗಿ ನೋಡಿಕೊಳ್ಳುವುದರಲ್ಲಿ ನಿಪುಣಳು. ಆದರೂ ತಪೋವನಕ್ಕೆ ವಿರೋಧಿಯಾದ ಚಿತ್ತವಿಕಾರಕ್ಕೊಳಗಾದಳು. ಅದು ಅವಳ ತಪ್ಪಲ್ಲ. ಪ್ರವೇಶಮಾಡಲು ಹೊಂಚು ಹಾಕುತ್ತಿದ್ದ ಯೌವನದ ತಪ್ಪು. ತನ್ನ ಪೂರ್ವಕಥೆಯನ್ನು ಭಾರತದ ಮೂಲದಲ್ಲಿರುವಂತೆ ತಾನೇ ಹೇಳುವುದಿಲ್ಲ. ನಾಟಕದಲ್ಲಿ ಕವಿ ಇದನ್ನು ಸಖಿಯರ ಬಾಯಿಂದ ಹೇಳಿಸಿರುವುದು ಶಕುಂತಳೆಯ ಪಾತ್ರಕ್ಕೆ ಪೂರಕವಾಗಿದೆ. ಶಕುಂ

ತಳೆ ಮಿತಭಾಷಿಣಿ. ಸುಸಂಸ್ಕೃತ ಸ್ತ್ರೀಯಂತೆ ಲಜ್ಜೆಯಿಂದಲೂ ತಾಳ್ಮೆಯಿಂದಲೂ ಇರುವುದಲ್ಲದೆ ಹಿರಿಯರ ಸೇವೆ ಮಾಡುವಳು. "ಆಕಾಶದಲ್ಲಿ ಮೋಡದ ಮಧ್ಯೆ ಇರಬೇಕಾದ ಮಿಂಚೇ ಭೂಮಿಗೆ ಇಳಿದು ಬಂದಿದೆಯೋ" ಎನ್ನುವಂತ್ತಿದ್ದಳು ಎಂಬುದಾಗಿ ದುಷ್ಯಂತನ ಬಾಯಿಂದಲೇ ಕವಿ ಹೇಳಿಸಿದ್ದಾನೆ. ಶಕುಂತಳೆಯು ಲಜ್ಜೆಯಿಂದ ಅಲ್ಲಿಂದೆದ್ದು ಹೋಗಲು ಪ್ರಯತ್ನಿಸಿದಾಗ ಸಖಿಯರು ಗಿಡಗಳಿಗೆ ನೀರೆರೆಯುವ ಸಾಲವಿದೆಯೆಂದು ಆಕೆಯನ್ನು ಎಳೆತಂದಾಗ, ದುಷ್ಯಂತನು ಕರುಣೆಯಿಂದ ಮುಂದೆ ಬಂದು ತನ್ನ ಉಂಗುರವನ್ನು ಅವಳಿಗೆ ತೊಡಿಸಲೆಂದೇ ಸಖಿಯರ ಕೈಗೆ ಕೊಡುವನು. ಯಾವುದನ್ನು ಪರೋಕ್ಷವಾಗಿ ಕೊಡಲು ಹೋದನೋ ಅದು ವಿಳಾಸ ತಪ್ಪಾದ ಪತ್ರದಂತೆ ಅವನಿಗೆ ಹಿಂತಿರುಗಿತು. ಉಂಗುರದ ಈ ಘಟನೆ ಶಕುಂತಳೆಯ ದೃಷ್ಟಿಯಿಂದ ಅಶುಭ ಸೂಚನೆಯಾದಂತಿದೆ. ಕಾಡಾನೆಯ ಬರುವಿಕೆಯಿಂದ ಆಶ್ರಮ ನಿವಾಸಿಗಳಿಗೆ ತೊಂದರೆ ಎಂದರಿತು ಎಲ್ಲರೂ ಆಶ್ರಮಕ್ಕೆ ಓಡಿಹೋಗುವರು. ತೆರೆಯ ಹಿಂದಿನಿಂದ "ಕಾಡಾನೆ ನುಗ್ಗುತ್ತಿದೆ; ಆಶ್ರಮದ ಎಲ್ಲಾ ಪ್ರಾಣಿಗಳನ್ನೂ ಎಚ್ಚರದಿಂದ ನೋಡಿಕೊಳ್ಳಿ ?" ಎಂಬ ಸೂಚನೆಯನ್ನು ಕವಿ ತಂದಿರುವುದು ಧ್ವನಿಪೂರ್ಣವಾಗಿದೆ. ದುಷ್ಯಂತನೆಂಬ ಮದಿಸಿದ ಆನೆ ಕಾಡನ್ನು ಮಾತ್ರವೇ ಅಲ್ಲ, ಮುಗ್ಧ ಆಶ್ರಮಕನ್ಯೆಯ ಮನೋಭೂಮಿಯನ್ನೆಲ್ಲಾ ಉಲ್ಲೋಲಕಲ್ಲೋಲ ಮಾಡಿತು ಎಂದು ಕವಿ ಸೂಚಿಸಿದಂತಿದೆ. ತನ್ನ ಮನಃ ಪ್ರಿಯನನ್ನು ಮತ್ತೊಮ್ಮೆ ನೋಡಲೆಳಸಿದ ಶಕುಂತಳೆಯ ಮನದ ಒಲವರಿತು ಕವಿ ಇಲ್ಲಿ ನೈಜವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಕುಶಾಗ್ರವು ಕಾಲಿಗೆ ಚುಚ್ಚಿತೆಂದೂ; ಗೋರಂಟಿಯ ಮರದ ಟೊಂಗೆಗೆ ವಲ್ಕಲದ ಸೆರಗು ಸಿಕ್ಕಿತೆಂದೂ ಅದರ ನೆಪದಲ್ಲಿ ಶಕುಂತಳೆ ದುಷ್ಯಂತನನ್ನು ಹಿಂತಿರುಗಿ ನೋಡುವಳು. ಕಾಳಿದಾಸನು ಯೌವನ ಸ್ತ್ರೀಯರ ಮನೋಭೂಮಿಯ ವಿಕಾರಗಳನ್ನು ಎಷ್ಟು ಚೆನ್ನಾಗಿ ಅರಿತಿದ್ದಾನೆ ಎಂದು ತಿಳಿಯಬಹುದು. ಇಂತಹ ನೈಜ ಚಿತ್ರ ಕಲ್ಪಿಸುವುದು ಸಾಮಾನ್ಯ ಕವಿಯಿಂದ ಸಾಧ್ಯವಿಲ್ಲ. ಸುಮ್ಮನೇ ತಿರುಗಿ ನೋಡಿದ್ದರೆ ಶಕುಂತಳೆಯ ಪಾತ್ರದ ಗಾಂಭೀರ್ಯಕ್ಕೆ ಧಕ್ಕೆ ಬರುತಿತ್ತು. ದೇಹ ಮುಂದೆಸಾಗಿದ್ದರೂ ಮನಸ್ಸು ಮಾತ್ರ ಹಿಂದಕ್ಕೆ ಹೋಗುತ್ತಿದೆ. ಈ ಆರಂಭ ಪ್ರಣಯದಲ್ಲಿ ಎಷ್ಟು ತೀವ್ರತೆಯಿದೆ ಎಂಬುದನ್ನು ಕವಿ ಅಭಿವ್ಯಕ್ತಗೊಳಿಸಿದ್ದಾನೆ. ಅವೆರಡು ಹೃದಯಗಳೂ 'ನನ್ನೊಳಗೆ ನೀನು, ನಿನ್ನೊಳಗೆ ನಾನು' ಎನ್ನುವಂತಿದೆ. ಮೂಲ ಕಥೆಯಲ್ಲಿರುವಂತೆ ನಾಟಕದಲ್ಲಿ ಶಕುಂತಳೆ ದುಷ್ಯಂತನೊಡನೆ ಯಾವರೀತಿಯ ವಾಣಿಜ್ಯ ಒಪ್ಪಂದವನ್ನೂ ಮಾಡಿಕೊಂಡಂತೆ ಕಾಣುವುದಿಲ್ಲ. ಇದರಿಂದ ಕಥಾನಾಯಕಿಯ ಘನತೆ ಹೆಚ್ಚಿದೆ. ಕಾಳಿದಾಸನ ಔಚಿತ್ಯ ಜ್ಞಾನವೂ ಅಭಿವ್ಯಕ್ತವಾಗಿದೆ.

ಮೂರನೇ ಅಂಕದಲ್ಲಿ ಶಕುಂಳೆಯ ವಿರಹ ತಾಪದಿಂದ ಬೆಂದು ಹೋಗುವ ಚಿತ್ರ, ಸಖಿಯರು ತಾವರೆ ಎಲೆಯಿಂದ ತಂಗಾಳಿ ಬೀಸುವುದರಿಂದಲೇ ವೇದ್ಯವಾಗುತ್ತದೆ. ಆದರೂ ಆಕೆ ವಿರಹವೇದನೆಯ ಕಾರಣವನ್ನು ಹೇಳಲಾರಳು. ಸಖಿಯರ ಒತ್ತಾಯಕ್ಕೆ ಬಾಯಿ ಬಿಡುವಳು. ಹೆಂಗಸರು ತಮ್ಮ ಮನೋಗತವನ್ನು ತಿಳಿಸುವುದರಲ್ಲಿ ಹೆಂಗಸರೊಡನೆಯೂ ಲಜ್ಜೆಯಿಂದ ಹಿಂಜರಿಯುವರು ಎಂಬುದನ್ನು ಲೋಕದಲ್ಲಿ ಕಾಣಬಹುದು. ಅವಳ ಮನೋಗತವನ್ನು ರಾಜನಿಗೆ ಹೇಳುವಷ್ಟರಲ್ಲಿ ಕಾಕತಾಳನ್ಯಾಯದಂತೆ ಆ ಸಮಯಕ್ಕೆ ಅವನೇ ಅಲ್ಲಿ ಬರುವನು. ಸಖಿಯರು ಶಕುಂತಳೆಯನ್ನು ದುಷ್ಯಂತನ ವಶಕ್ಕೆ ಬಿಟ್ಟು ಅಲ್ಲಿಂದ

ಹೊರಟರು. ಲಜ್ಜೆಯಿಂದ ಅಲ್ಲಿಂದೆದ್ದು ಹೋಗಲು ಶಕುಂತಳೆ ಹವಣಿಸಲು ದುಷ್ಯಂತ ಕೈಹಿಡಿದು ಎಳೆದು ನಿಲ್ಲಿಸಿದನು. ದುಷ್ಯಂತ ದೂರದಲ್ಲಿದ್ದಾಗ ಆಕೆಗೆ ನೋಡುವ ಕುತೂಹಲ, ಹತ್ತಿರ ಬಂದಾಗ ದೂರಹೋಗುವ ಅಭಿನಯ. ತಾನು ಮದನನ ತಾಪಕ್ಕೆ ಒಳಗಾಗಿದ್ದರೂ ಸ್ವತಂತ್ರಳಲ್ಲ ಎನ್ನುವಳು. ಕೆಲವು ವೇಳೆ ಬಾಹ್ಯಶಕ್ತಿಯಿಂದಲೂ ಪ್ರೀತಿಯನ್ನು ಬಂಧಿಸಲು ಅಶಕ್ಯವೆನ್ನುವುದು ಗೊತ್ತಾಗುವುದು. ದುಷ್ಯಂತನು ಹಿಂದೆ ಅನೇಕ ಋಷಿಗಳು ಗಾಂಧರ್ವ ವಿವಾಹವನ್ನು ಮಾಡಿಕೊಂಡಿದ್ದರೆಂದು ಹೇಳಿದ ಮೇಲೆ, ಶಕುಂತಳೆ ಒಪ್ಪಿದಳು. ಇದಾದನಂತರ ದುಷ್ಯಂತ ತನ್ನ ಉಂಗುರವನ್ನು ಶಕುಂತಳೆಯ ಬೆರಳಿಗಿಟ್ಟು, ಅದರಲ್ಲಿರುವ ಅಕ್ಷರಗಳನ್ನು (ಎಣಿಸು) ಓದುವುದರೊಳಗಾಗಿ ತನ್ನ ರಾಜಧಾನಿಗೆ ಕರೆದುಕೊಳ್ಳುವುದಾಗಿ ಹೇಳಿ ಹೊರಟು ಹೋದನು. ಈ ಉಂಗುರದ ಪ್ರಸಂಗ ಮೂಲ ಕಥೆಯಲ್ಲಿಲ್ಲ. ಇಲ್ಲಿ ಶಕುಂತಳೆಯ ಜೊತೆಯಲ್ಲೇ ಉಂಗುರದ ಕಥೆಯೂ ಸಾಗುತ್ತದೆ. ಅದರ ನಿಮಿತ್ತ ಶಕುಂತಳೆ ಪಡಬಾರದ ಕಷ್ಟ ಅನುಭವಿಸಬೇಕಾಗುತ್ತದೆ. ಆದರೆ ಕೊನೆಗೆ ಅದರಿಂದಲೇ ಕಷ್ಟ ಪರಿಹಾರವಾಗುತ್ತದೆ. ವಿವಾಹವಾದ ಸ್ವಲ್ಪಕಾಲದಲ್ಲಿ ತನ್ನಿಂದ ದೂರವಾದ ಪ್ರಿಯನನ್ನು ನೆನೆದು ಆವನ ಚಿಂತೆಯಲ್ಲಿ ತಲ್ಲೀನಳಾಗಿರುವಾಗ, ತಾಪಸಿಗಳಾದ, ಕೋಪಿಸಿಕೊಳ್ಳುವುದರಲ್ಲಿ ಅಗ್ರಗಣ್ಯರಾದ ದೂರ್ವಾಸರು ಬಂದು ಕೂಗಿದರೂ ಮೈಮರೆತ ಶಕುಂತಳೆಗೆ ಕೇಳಿಸದೆ ಆಶ್ರಮ ಧರ್ಮವನ್ನು ಮರೆತು ಅವಳು ಅತಿಥಿ ಸತ್ಕಾರ ಮಾಡಲಿಲ್ಲ. ಚೈತ್ರಮಾಸದಲ್ಲಿ ಇದ್ದಕ್ಕಿದ್ದಂತೆ ಬರಸಿಡಿಲೆರಗುವಂತೆ ದೂರ್ವಾಸರು ಶಾಪವನ್ನು ಕೊಟ್ಟರು. ತನ್ನ ಮನದನ್ನನನ್ನು ಹೊಸದರಲ್ಲಿ ಮನಸಾರೆ ಪ್ರೀತಿಸಿದ್ದಕ್ಕೆ ಆ ಮುಗ್ಧೆಗೆ ಇಂತಹ ಶಿಕ್ಷೆಯೇ?– "ಯಾರನ್ನು ಕುರಿತು ಯೋಚಿಸುವೆಯೋ ಆವನು ನಿನ್ನನ್ನು ಮರೆಯಲಿ" ಎಂದು ಋಷಿ ಶಾಪಿಸುವನು. ಈ ಸನ್ನಿವೇಶದಲ್ಲಿ ಎಂತಹವರಿಗೂ ಶಕುಂತಳೆಯ ಬಗೆಗೆ ಸಹಾನುಭೂತಿ ಉಂಟಾಗುವುದು. ಮೂಲ ಕಥೆಯಲ್ಲಿಲ್ಲದಿದ್ದರೂ ಕವಿ ಋಷಿ ಶಾಪವನ್ನು ಸೃಷ್ಟಿಸಿರುವುದು ಶಕುಂತಳೆ ಚಾರಿತ್ರ್ಯದ ದೃಷ್ಟಿಯಿಂದ ಉಚಿತವಾಗಿದೆ. ಹೊಸ ಪ್ರಣಯದಲ್ಲಿ ರಭಸವಿದ್ದರೂ ಅದು ಧರ್ಮಕ್ಕೆ ವಿರೋಧವಾಗಬಾರದು ಎಂಬುದೇ ಕವಿಯ ಆಶಯ. "Haste is waste" ಎನ್ನುವಂತೆ ಅದು ಶಾಶ್ವತವಾದದ್ದಲ್ಲ ಧರ್ಮದ ತಳಹದಿಯ ಮೇಲೆ ಪ್ರೇಮವು ತನ್ನ ಚಿರ ಸೌಧವನ್ನು ನಿರ್ಮಿಸಬೇಕು. ಎಂಬುದನ್ನು ಇಲ್ಲಿ ಕವಿ ಸಾರಿದ್ದಾನೆ. ಇಂತಹ ಪ್ರೇಮದಿಂದ ತನಗೆ ಮಾತ್ರವೇ ಅಲ್ಲದೆ ಸುತ್ತಿನ ಪರಿಸರಣ (ಸಮಾಜ)ಕ್ಕೂ ಕಲ್ಯಾಣವಾಗುವುದು. ಹಾಗಲ್ಲದೆ ಪ್ರೇಮವಾಹಿನಿ ರಭಸದಿಂದ ನುಗ್ಗಿ ತನ್ನ ಗತಿಯನ್ನೂ ಬದಲಿಸಿದರೆ ಗುರಿ ಸೇರುವುದಿಲ್ಲ. ಇದರಿಂದ ಕವಿ ಶಕುಂತಳೆಯ ಪ್ರಣಯದಲ್ಲಿನ ಕಲ್ಮಷವನ್ನು ಜರಡಿ ಹಿಡಿಯಲೆಂದೇ ಮೂಲದಲ್ಲಿಲ್ಲದಿದ್ದರೂ ದೂರ್ವಾಸರ ಪಾತ್ರವನ್ನು ಕಲ್ಪಿಸಿದ್ದಾನೆ. ದೂರ್ವಾಸರ ಶಾಪ ದುಷ್ಯಂತ ಮತ್ತು ಶಕುಂತಳೆ ಇಬ್ಬರನ್ನೂ ಸತ್ಯದ ಪುಟಕ್ಕೆ ಹಾಕಿ, ತ್ಯಾಗದಿಂದ ಕೂಡಿದ ಪ್ರೇಮ ಅಮರವಾದುದು ಎಂದು ಚಿತ್ರಿಸಿದ್ದಾನೆ. ಇದರಲ್ಲಿ ವಿಶ್ವವ್ಯಾಪಕ ತತ್ತ್ವವಿದೆ ಮತ್ತು ಸರ್ವಕಾಲಕ್ಕೂ ಸರ್ವರಿಗೂ ಈ ಸೂತ್ರ ಅನ್ವಯಿಸುವಂತಹದು. ಆದ್ದರಿಂದ ಶಕುಂತಳೆಯ ಭವಿಷ್ಯದ ಭದ್ರಜೀವನಕ್ಕೆ ದೂರ್ವಾಸರ ಶಾಪ ವಜ್ರ ಕವಚದಂತಾಯ್ತು. ಶಾಪವಿಲ್ಲದಿದ್ದರೆ ಅವಳ ಪ್ರೇಮದಲ್ಲಿ ಶುಭವಿರುತ್ತಿರಲಿಲ್ಲ. ದುಷ್ಯಂತ ಬಹಳ ದಿನಗಳಾಗಿದ್ದರೂ ಶಕುಂತಳೆಯನ್ನು ಕರೆದೊಯ್ಯಲಿಲ್ಲ. ಕಣ್ವರು

ವಿವಾಹವಾದ ಹೆಣ್ಣುಮಗಳನ್ನು ಬಹಳ ಕಾಲ ಮನೆಯಲ್ಲಿ ಇಟ್ಟುಕೊಳ್ಳುವುದು ಯೋಗ್ಯವಲ್ಲೆಂದು "ಕೊಟ್ಟ ಹೆಣ್ಣು ಕುಲಕ್ಕೆ ಹೊರಗು" ಎಂಬಂತೆ ದುಷ್ಯಂತನಲ್ಲಿಗೆ ಕಳುಹಿಸಲು ಅಣಿಮಾಡಿದರು. ಇಲ್ಲಿ ಕವಿ ಭಾರತೀಯ ಸಂಪ್ರದಾಯಕ್ಕೆ ಅನುಸಾರವಾಗಿ ಲೌಕಿಕ ವ್ಯವಹಾರವನ್ನು ಚಿತ್ರಿಸಿದ್ದಾನೆ. ಶಕುಂತಳೆ ತವರುಮನೆಯಿಂದ ಹೊರಡುವ ಮುನ್ನ ಕಣ್ವರಿಗೆ ನಮಸ್ಕರಿಸುವಳು. ಆಗ ತಂದೆಯಾದವನು ಮಗಳಿಗೆ ಅವಶ್ಯವಾಗಿ ಹೇಳಬೇಕಾದ ಬುದ್ಧಿವಾದವನ್ನು ಹೇಳಿದನು. ಈ ಸನ್ನಿವೇಶ ತುಂಬಾ ಸಹಜವಾದುದು. "ಯಯಾತಿಗೆ ಶರ್ಮಿಷ್ಟೆಯಂತೆ ಪತಿಗೆ ಹಿತಳಾಗು ಮತ್ತು ಚಕ್ರವರ್ತಿ ಪುತ್ರನ ಪಡೆಯೆಂದರು." ಒಂದು ಕಡೆ ದೂರ್ವಾಸನ ಶಾಪ ಮೇಲೆ ಆವರಿಸಿದ್ದರೆ ಮತ್ತೊಂದು ಕಡೆ ಕಣ್ವರ ಆಶೀರ್ವಾದ ಒಳಗೇ ಶಾಪವನ್ನು ಭೇದಿಸುತ್ತದೆ. ತಪಸ್ವಿನಿ ಗೌತಮಿ ಹೇಳಿದಂತೆ ಅವರ ಮಾತು ಶಕುಂತಳೆಗೆ ಕೇವಲ ಆಶೀರ್ವಾದ ಮಾತ್ರವೇ ಅಲ್ಲದೆ ವರವೂ ಹೌದು ಎನ್ನುವ ಮಾತು ಗಮನಿಸಬೇಕಾದುದು. ಶಕುಂತಳೆ ಆಶ್ರಮದಿಂದ ಹೊರಡುವ ಸನ್ನಿವೇಶನಿಜಕ್ಕೂ ಕರುಣಾಜನಕವಾದುದು. ಈ ದೃಶ್ಯವನ್ನು ನಾಲ್ಕನೆಯ ಅಂಕದಲ್ಲಿ ಕಾಣುತ್ತೇವೆ. ಅದಕ್ಕೆ ಈ ನಾಟಕದಲ್ಲಿ ನಾಲ್ಕನೇ ಅಂಕ ತುಂಬಾ ಮುಖ್ಯವಾದುದು ಎಂಬ ಪ್ರತೀತಿಯಿದೆ. ಶಕುಂತಳೆಯ ಕಣ್ಣೀರು ಒಂದೊಂದು ಸಂದರ್ಭದಲ್ಲಿ ಒಂದೊಂದು ಸಂಕೇತವನ್ನು ಸೂಚಿಸುತ್ತದೆ. ತಪೋವನದ ತರುಲತೆಗಳಿಗೆಲ್ಲಾ ಹೋಗಿ ಬರುವೆನೆಂದು ಹೇಳುವಳು. ಮಾನವನಿಗೂ ಪ್ರಕೃತಿಗೂ ನಿಕಟ ಸಂಬಂಧವಿದೆ ಎಂಬುದನ್ನು ಋಷಿ ಕವಿ ಕಾಳಿದಾಸನು ಶಕುಂತಳೆಗೂ ಆಶ್ರಮ ನವಿಲು ಜಿಂಕೆ ಮತ್ತು ಅಲ್ಲಿನ ತರುಲತೆಗಳಿಗೂ ಇದ್ದ ಅನ್ಯೋನ್ಯ ಬಾಂಧವ್ಯದ ಮೂಲಕ ನಿರೂಪಿಸಿದ್ದಾನೆ. ಇಂತಹ ಮಾನವ–ಪ್ರಕೃತಿಯ ಪರಸ್ಪರ ಸಂಬಂಧವನ್ನು ಮತ್ತಾವ ಕವಿಯೂ ಚಿತ್ರಿಸಿಲ್ಲ. ಕವಿ ಸಸ್ಯ ಮತ್ತು ಪ್ರಾಣಿಗಳಿಂದ ಮಾತನಾಡಿಸಿದ್ದರೆ ನಾಟಕದ ಅಂದವೇ ಕೆಡುತ್ತಿತ್ತು. ಶಕುಂತಳೆಯ ಅಗಲುವಿಕೆಯಿಂದ ತರುಲತೆಗಳೆಲ್ಲಾ ಕಣ್ಣೀರಿಡುವಂತೆ ತಮ್ಮ ಎಲೆಗಳನ್ನು ಉದರಿಸುತ್ತವೆ. ಜಿಂಕೆ ಗರುಕೆಯನ್ನು ಮೇಯುವುದನ್ನು ನಿಲ್ಲಿಸುತ್ತದೆ. ನವಿಲು ಕುಣಿಯಲಿಲ್ಲ. ತನ್ನ ಕೂಸಿನಂತಿದ್ದ ಜಿಂಕೆ ಹಿಂದಿನಿಂದ ಆಕೆಯ ಸೀರೆಯ ಸೆರಗನ್ನು ಎಳೆಯಿತು. ಕವಿ ಇಲ್ಲಿ ಹೆಚ್ಚು ಅಲೌಕಿಕತೆಗೆ ಅವಕಾಶ ಕೊಡದೆ ಪ್ರಕೃತಿಯನ್ನು ಪ್ರಕೃತಿಯನ್ನಾಗಿಯೇ ಉಳಿಸಿಕೊಂಡು ಈರೀತಿ ಸಹಜವಾಗಿ ಚಿತ್ರಿಸಿರುವುದು ಉಚಿತವಾಗಿದೆ. ಇಂತಹ ಪರಿಜ್ಞಾನವು ಕಾಳಿದಾಸನಲ್ಲದೆ ಮತ್ತಾರಿಗೆ ತಾನೇ ಸಾಧ್ಯ? ಋಷಿಪುತ್ರಿಯರ ಜೊತೆಯಲ್ಲಿ ಆಶ್ರಮದಲ್ಲಿ ಬೆಳೆದ ಪ್ರಾಣಿಗಳೂ ಹಾಗೂ ಸಸ್ಯಗಳು ಆಕೆಯ ಅಗಲುವಿಕೆಯಿಂದ ನೋವನ್ನು ಅನುಭವಿಸಿದುದು ಸೂಕ್ತವೇ. ವನಜ್ಯೋತ್ಸ್ನ ಎಂಬ ಹೂವಿನ ಬಳ್ಳಿಗೂ ಹೋಗಿ ಬರುವೆನೆಂದು ಋಷಿಪುತ್ರಿ ಹೇಳುವಳು. ಶಕುಂತಳೆಯನ್ನು ಬೀಳ್ಕೊಡಲು ಸಮೀಪದ ಜಲಾಶಯದ ವರೆವಿಗೂ ಕಣ್ವರು ಹೋಗುವರು. ಕವಿಯ ಲೌಕಿಕ ಅನುಭವ ಎಷ್ಟು ಪರಿಪಕ್ವವಾದದು ಎಂಬುದನ್ನು ಚಾಚೂ ತಪ್ಪದಂತೆ ಪ್ರತಿ ಹಂತದಲ್ಲಿಯೂ ಕಾಣಬಹುದು. ಕೊನೆಯದಾಗಿ ಕಣ್ವರ ಮೂಲಕ ಹೇಳುವ ಮಾತುಗಳು ನಾಟಕದ ನಾಲ್ಕನೇ ಅಂಕದಲ್ಲೇ ಮುಖ್ಯವಾದುವು. ಇಲ್ಲಿ ಕವಿ ಕಣ್ವರ ಮೂಲಕ ಶಕುಂತಳೆಗೆ ಮಾತ್ರವಲ್ಲದೆ, ಇಡೀ ಸ್ತ್ರೀಯರ ಜಾತಿಗೇ ಅನ್ವಯಿಸುವಂತೆ ಸರ್ವಕಾಲಿಕವಾದ ಬುದ್ಧಿವಾದವನ್ನು ಗಂಭೀರವಾಗಿ ಹೇಳಿದ್ದಾನೆ. ಇಂತಹ ಪ್ರತಿಭೆಯೇ ಕಾಳಿ

ದಾಸನನ್ನು ಕವಿಗಳ ಪಂಕ್ತಿಗೆ ಏರಿಸಿದೆ ಎಂಬುದನ್ನು ನಾವು ತಿಳಿಯಬಹುದು. "ಎಲೌ ಮಗಳೆ" ಗಂಡನ ಮನೆಯಲ್ಲಿ ಹಿರಿಯರ ಸೇವೆ ಮಾಡು, ಸವತಿಯರಲ್ಲಿ ಗೆಳತಿಯಾಗಿರು, ಪತಿಗೆ ವಿರುದ್ಧವಾಗಿ ನಡೆದು ಬೇಸರಪಡಿಸಬೇಡ. ಪರಿಜನರನ್ನು ಚೆನ್ನಾಗಿ ಸಲಹು. ಭಾಗ್ಯದೆ ಬಾಗಿರು. ಹಾಗಿದ್ದಲ್ಲಿ ಕಿರಿಯವಳಾಗಿದ್ದರೂ ಗೃಹಿಣಿಯಾಗುವೆ" ಎಂದರು. ಅಂದಿಗಿಂತ ಇಂದು ಇಂತಹ ಉಪದೇಶವು ಸಮಾಜಕ್ಕೆ ಅವಶ್ಯಕವಾಗಿದೆ. ಈ ಮಾತನ್ನೇ ಕವಿಯತ್ರಿ ಹೊನ್ನಮ್ಮನೂ ಹದಿಬದೆಯ ಧರ್ಮದಲ್ಲಿ ಒತ್ತಿಹೇಳಿದ್ದಾಳೆ. ಭಾರತೀಯ ಸ್ತ್ರೀ ಎಷ್ಟೇ ಸುಸಂಸ್ಕೃತಳಾಗಿದ್ದರೂ ಇಂತಹ ನಡತೆಯಲ್ಲಿ ಜಡತನವಿದ್ದರೆ ಸಾಧ್ವಿಯೆನಿಸಿಕೊಳ್ಳಲಾರಳು ಎಂಬುದು ಮತವಿರಬಹುದು. ಶಕುಂತಳೆಯನ್ನು ಅಗಲಿದ ಆಶ್ರಮ ಶೂನವಾಯಿತು. ಹುಟ್ಟಿದೂರಿನ ಋಣ ತೀರಿತೆಂದು ಹೆಣ್ಣು ಗಂಡನ ಮನೆಗೆ ಹೋಗಲೇಬೇಕು. ಅದು ಅನಿವಾರ್ಯ. ಶಕುಂತಳೆಯ ಸಖಿಯರು ಆಕೆ ಹೊರಡುವಾಗ ಉಂಗುರವನ್ನು ರಾಜನಿಗೆ ತೋರಿಸುವಂತೆ ನೆನಪಿಗೆ ತಂದರು. ಆದರೆ ದೂರ್ವಾಸರ ಶಾಪವನ್ನು ಅರಿತ ಅವರು ಶಕುಂತಳೆಗೆ ತಿಳಿಸಲಿಲ್ಲ. ಕಣ್ವಾಶ್ರಮದಲ್ಲಿ ಶಪಿಸಿದ ದೂರ್ವಾಸನನ್ನು ಪ್ರಾರ್ಥಿಸಿ ಶಕುಂತಲೆ ಹೇಡಿ ಆಗದಂತೆ ಶಾಪಪಡೆದ ಸಖಿಯರಾದ ಪ್ರಿಯಂವದೆ ಅನುಸೂಯೆ ಎಂದು ಕವಿ ಹೇಳಿದ್ದಾನೆ. ಐದನೆಯ ಅಂಕದಲ್ಲಿ ಶಕುಂತಳೆ ದುಷ್ಯಂತನ ಅರಮನೆಯನ್ನು ಸೇರಿದಳು. ಅದಕ್ಕೆ ಮುಂಚೆ ಮಾತುಕೊಟ್ಟಂತೆ ಪತಿಯು ಕರೆದು ಕೊಂಡು ಹೋಗಲು ಬಾರದ್ದರಿಂದ ಏನೊ ಎಂತೊ ಎಂದು ಗಾಬರಿಯಿಂದ ಕೂಡಿದ್ದಳು. ಹೃದಯದ ಅಂತರಾಳದಲ್ಲಿ ಕೇಡಿನ ಮುನ್ಸೂಚನೆಯಂತೆ ಹೆದರಿಕೆಉಂಟಾಗಿತ್ತು. ಅದು ಈಗ ನಿಜವಾಯ್ತು. ಬಲಗಣ್ಣು ಅದುರಿದ್ದು ಸತ್ಯವಾಯಿತು. ಇವು ಪ್ರತಿಯೊಬ್ಬರ ಜೀವನದಲ್ಲೂ ಸಹಜವೇ. ಆದರೂ ನಡೆದ ಮೇಲೆ ಮಾತ್ರ ನಂಬುತ್ತೇವೆ. ಋಷಿಯ ಶಾಪದಿಂದ ದುಷ್ಯಂತನು ತಾನು ಮದುವೆಯಾಗಿರುವುದು ಸುಳ್ಳೆಂದು ಶಕುಂತಳೆಯನ್ನು ತಿರಸ್ಕರಿಸಿದನು. ಇದು ಅವಳಿಗೆ ಅನಿರೀಕ್ಷಿತ. ಬರಸಿಡಿಲೆರಗಿದಂತಾಯ್ತು. ಮುಗ್ಧಳೂ ಅಚಲೆಯೂ ಆದ ಆವಳ ಹೃದಯಕ್ಕೆ ಇದರಿಂದ ಎಷ್ಟು ನೋವಾಗಿರಬೇಕು? "[illegible]ವೆಯಲ್ಲೇ ಸಂದೇಹವಾದ ಮೇಲೆ ಬಹುದೂರ ಹತ್ತಿದ್ದ ಅವಳ ಆಸೆ ಇನ್ನೆಲ್ಲಿ". ಆದರೂ ಸಾವಧಾನವಾಗಿ ದೈನ್ಯದಿಂದ ರಾಜನನ್ನು ಬೇಡಿಕೊಂಡಳು. ಆದರೆ ಮಹಾಭಾರತದಲ್ಲಿನ ಶಕುಂತಳೆಯೇ ಬೇರೆ. ಅಲ್ಲಿ ಅವಳು ಗಂಡುಬೀರಿಯಂತೆ ಆಸ್ಥಾನದಲ್ಲೇ ರಾಜನ ವಿರುದ್ಧ ವಾಕ್‌ಯುದ್ಧ ಮಾಡುವಳು. ರಾಜನನ್ನು ಶಪಿಸುವಳು. ಆದರೆ ಕಾಳಿದಾಸನು ಸ್ತ್ರೀಗೆ ಲಜ್ಜೆ ಹಾಗೂ ಶೀಲವೇ ಮುಖ್ಯ 'ಸ್ತ್ರೀ' ಸರ್ವಂಸಹೆ ಎಂಬುದನ್ನು ಗಮನದಲ್ಲಿಟ್ಟು ಚಿತ್ರಿಸಿದ್ದಾನೆ. ಇಲ್ಲಿನ ಶಕುಂತಳೆ ಮೌನವಾಗಿದ್ದರೂ ಮಾತನಾಡಿದಂತೆ. ಮಾತನಾಡಿದರೂ ಮೌನವಾಗಿದ್ದಂತೆ. ಕೋಪ ನೆತ್ತಿಗೇರಿದರೂ ಅದಕ್ಕೆ ತಾಳ್ಮೆಯ ಕಡಿವಾಣ ಹಾಕುತ್ತಾಳೆ. ಇಂತಹ ಸಹನೆಯ ಸನ್ನಿವೇಶ ಮತ್ತಾವ ಸಾಹಿತ್ಯದಲ್ಲೂ ಇಲ್ಲ. ರಾಮಾಯಣದಲ್ಲಿನ ಸೀತೆ ಇಂತಹ ಸಹನೆಯುಳ್ಳವಳು. ಸ್ತ್ರೀಗೆ ಸೌಂದರ್ಯವೇ ಚರಮ ಲಕ್ಷ್ಯವಲ್ಲ. ಸಹನೆ, ಲಜ್ಜೆ, ತಪಸ್ಸು ಮುಖ್ಯ. ಕುಮಾರಸಂಭವದಲ್ಲೂ ಪಾರ್ವತಿ ರೂಪು ಯೌವನದಿಂದ ಕೂಡಿದ್ದರೂ ತಪಸ್ವಿನಿಯಾದ ಅವಳನ್ನು ಈಶ್ವರನು ಕಿರುಗಣ್ಣಿನಲ್ಲೂ ನೋಡಲಿಲ್ಲ. ಆಗ ಅವಳು ತನ್ನ ಸೌಂದರ್ಯವನ್ನು ತಾನೇ ಹಳಿದಳು. ತಪಸ್ಸಿಂದ ತಾಪಿದ್ದಲ್ಲಿಗೇ ಶಿವನನ್ನು ಕರೆತರುವ ಸಂಕಲ್ಪ ಮಾಡಿದಳು. ಅಂತೆಯೇ ಶಕುಂತಳೆಯ

ಸ್ಥಿತಿ ಮೂಲಕಥೆಯಲ್ಲಿರುವಂತೆ ಮಗುವನ್ನು ಬಿಟ್ಟು ತೌರಿಗೆ ಹಿಂತಿರುಗಲಿಲ್ಲ. ಒಂದು ವೇಳೆ ಗಂಡ ತಿರಸ್ಕರಿಸಿದರೂ ಹೆಣ್ಣು ತೌರಿಗೆ ಹಿಂತಿರುಗುವುದು ಸರಿಯಲ್ಲ. ಹೇಗಾದರೂ ಒಲಿಸಿಕೊಳ್ಳುವುದು ಸರಿ ಎಂಬುದನ್ನು ಇಲ್ಲಿ ಕವಿ ಚಿತ್ರಿಸಿದ್ದಾನೆ. ಆದ್ದರಿಂದ ಕಾಳಿದಾಸನ ಶಕುಂತಳೆ ತೌರಿಗೆ ಹಿಂತಿರುಗಲಿಲ್ಲ. ಗಂಡನೇ ತಿರಸ್ಕರಿಸಿದ ಮೇಲೆ ತಂದೆ ಕಣ್ವರಿಗೆ ಮುಖ ತೋರಿಸುವುದು ಹೇಗೆ? ಎಂದು ಉತ್ತರರಾಮಾಯಣದ ಸೀತೆಯಂತೆ ಭೂದೇವಿಗೆ ತನ್ನನ್ನು ಸೇರಿಸಿಕೊಳ್ಳುವಂತೆ ಬಾಯ್ದೆರೆಯಲು ಕೇಳಿದಳು. ನ್ಯಾಯವನ್ನು ಪಡೆಯಲು ದುರದೃಷ್ಟಕ್ಕೆ ಉಂಗುರ ಬೇರೆ ಕಳೆದು ಹೋಗಿದೆ. ಕಷ್ಟಗಳು ಆಕೆಗೆ ಶತ್ರು ಸೈನಿಕರಂತೆ ಒಂದರ ಹಿಂದೆ ಒಂದು ಸಾಲಾಗಿ ಬಂದವು. ವಿಧಿಯ ಕೈವಾಡ ಬೇರೆ ಇದೆ. ಸಹಾಯಕ್ಕೆ ಸಖಿಯರಾದರೂ ಇಲ್ಲ. ದುಷ್ಯಂತ ಕೊಟ್ಟ ಉಂಗುರವು ಶಕುಂತಳೆಯ ಬೆರಳಿಗೆ ಸಡಿಲವಾಗಿ ಉದುರಿ ಹೋಗಿರಬೇಕು. ವಿಧಿ ಇಷ್ಟೆಲ್ಲ ಆಟ ವಾಡಿಸಿತು. ಕವಿಯ ತಂತ್ರವೂ ಅಭಿವ್ಯಕ್ತವಾಗುತ್ತಿದೆ. ಕಷ್ಟಗಳು ಬರುವುದು ಮುಂದಿನ ಸುಖಕ್ಕೆ. ಸಂಜೆಯಾಗುವುದರಲ್ಲಿ ಬೆಳಗಾಗುವ ಭರವಸೆಯಿದೆ. ಜೀವನದಲ್ಲಿ ಕಷ್ಟಗಳು ಹಗಲು ರಾತ್ರಿಯಂತೆ ಸರಿಸಮ ಎಂಬುದನ್ನು ಕವಿ ಸಾರಿದ್ದಾನೆ. "ಮುಖದಲ್ಲಿ ಮಧು ಹೃದಯದಲ್ಲಿ ವಿಷಧರಿಸಿರುವ ಈತನ ಕೈ ಸೇರಿದುದಕ್ಕೆ ನಾನು ಚೆನ್ನಾಗಿ ಸ್ವಚ್ಛಂದಚಾರಿಣಿಯಾದೆನು" ಎಂದು ಮುಖ ತಗ್ಗಿಸಿ ಕಣ್ಣೀರಿಟ್ಟಳು. ಈ ಸಮಯದಲ್ಲಿ ಎಂತಹ ಸ್ತ್ರೀಗೂ ಸಹನೆ ಮೀರಿ ಕೋಪ ಬರದಿರಲಾರದು. ಕಾಳಿದಾಸನ ಶಕುಂತಳೆ ಸಂಯಮದ ಗಣಿ. ಮೌನದಲ್ಲೇ ಪ್ರತಿಭಟನೆ ಎದ್ದು ಕಾಣುತ್ತದೆ. ಆಕೆಯನ್ನು ಎಲ್ಲರೂ ಕೈ ಬಿಟ್ಟರು. 'ಕೆಟ್ಟವಗೆ ಕೆಳೆಯಿಲ್ಲ' ಎಂಬಂತಾಯ್ತು. ತನ್ನ ತಾಯಿಯಾದ ಮೇನಕೆ ಬೆಳಕಿನ ರೀತಿಯಲ್ಲಿ ಬಂದು ಅವಳನ್ನು ಕರೆದೊಯ್ದಳು. ಇಲ್ಲಿ ಕವಿ ಸ್ವಲ್ಪ ಅಲೌಕಿಕ ಘಟನೆಯನ್ನು ತಂದಿದ್ದಾನೆ. ಬರೀ ಲೋಕ ಸತ್ಯವನ್ನೇ ನಕಲುಮಾಡಿ ಹೇಳಬೇಕೆಂಬ ನಿಯಮವೇನೂ ಕವಿಗಿಲ್ಲ. ಕಲ್ಪನೆಯೂ ಅಗತ್ಯ. ಆದರೆ ಬರೀ ಕಲ್ಪನೆಯಲ್ಲೇ ಸತ್ಯವನ್ನು ಹುಡುಕುವುದು ಕುರಿಯು ಕಬ್ಬಿನ ಗೆಣ್ಣಿನೊಳಗಣ ರಸವನ್ನು ಮರೆತು ಗರಿಯನ್ನು ಮೇದಂತೆ. ಕೊನೆಗೆ ಬೆಸ್ತನಿಂದ ಉಂಗುರ ಪತ್ತೆಯಾದ ಮೇಲೆ ರಾಜ ಶಕುಂತಳೆಯನ್ನು ನೆನಪಿಗೆ ತಂದುಕೊಂಡನು. ಆದರಿಂದ ಬೆಸ್ತನಿಗೆ ಬಹುಮಾನ. ಹಿಂದೆ ತೊಂದರೆ ಉಂಟುಮಾಡಿ ಈಗ ಅದೇ ಉಂಗುರದಿಂದ ಶಕುಂತಳೆಗೆ ಸಹಾಯ. ಉಂಗುರದ ಮಹಿಮೆ ಅಗಾಧವಾದುದು. ಇದರಿಂದ ಇಬ್ಬರಲ್ಲೂ ಪಶ್ಚಾತ್ತಾಪ, ನಿಷ್ಕಾಮಪ್ರೇಮ, ಏಕಾಗ್ರತೆ, ತ್ಯಾಗ ಪ್ರಬಲವಾದುವು. ಮಂಕಾದ ಪ್ರಣಯ ಜ್ಯೋತಿಯನ್ನು ಉಂಗುರ ಕಿಡಿ ಕೆಡವಿ ಪ್ರಜ್ವಲಿಸುವಂತೆ ಮಾಡಿತು. ಆಗ ರಾಜನು ಮೂಸೆಯಲ್ಲಿ ಬೆಂದ ಮಿಸುನಿಯಂತೆ ಹೊಳೆದನು. ಹೆಣ್ಣು ಗಂಡಿನ ಸತ್ವ ಗೊತ್ತಾಗುವುದು ಒಬ್ಬರನ್ನೊಬ್ಬರು ಅಗಲಿದಾಗ. ಸಾಧ್ವಿ ಶಕುಂತಳೆ ಪ್ರಿಯನನ್ನು ಅಗಲಿದರೂ ಅವನ ಬಗ್ಗೆ ಕೇಡನ್ನು ಎಣಿಸಿದವಳಲ್ಲ. ತಾನು ಸೊರಗಿದರೂ ಅವನ ಸುಖ ಬಯಸಿದಳು.

ಶಕುಂತಳೆಯನ್ನು ಪುನಃ ಹೇಮಕೂಟದಲ್ಲಿ ತನ್ನ ಮಗನೊಡನೆ ಇರುವುದನ್ನು ಕಾಣುತ್ತೇವೆ. ರಾಜನೂ ಉಂಗುರದ ಅಭಿಜ್ಞಾನದಿಂದ ತನ ಮನದನ್ನೆಯನ್ನು ಕಾಣಲು ಕಾತುರನಾಗಿದ್ದಾನೆ. ಸದಾ ಅವಳ ಧ್ಯಾನದಲ್ಲೇ ಇದ್ದಾನೆ. ಈ ಕಡೆ ಶಕುಂತಳೆಯ ಪ್ರೀತಿ ಆಗಲೇ ತನ್ನ ಪ್ರಿಯನಿಂದ ತಿರುಗಿ ತನ್ನ ಕರುಳಕುಡಿಯಾದ ಸರ್ವದಮನನ ಕಡೆ ತಿರುಗಿದೆ. ಮಾನಸಿಕವಾಗಿ ಹೆಂಡತಿ ಮ

ವಿನ ತಾಯಿಯಾದ ಮೇಲೆ ಪ್ರೀತಿಯನ್ನು ತನ್ನ ಮಗುವಿನತ್ತ ತಿರುಗಿಸುವುದು ಸಹಜವಾಗಿದೆ. ಎಂದ ಮಾತ್ರಕ್ಕೆ ತನ್ನ ಗಂಡನನ್ನು ಬದಿಗೊತ್ತಿದ್ದಾಳೆ ಎಂದರ್ಥವಲ್ಲ. ಕವಿ ತಾಯಿ ಹೃದಯದ ಒಳತೋಟಿಯನ್ನು ಇಲ್ಲಿ ಚೆನ್ನಾಗಿ ಅರಿತು ಚಿತ್ರಿಸಿದಂತೆ ಕಾಣುತ್ತದೆ. ಏಳನೇ ಅಂಕದಲ್ಲಿ ದುಷ್ಯಂತ ಇಂದ್ರನ ಆಸ್ಥಾನದಿಂದ ಗೌರವಿಸಲ್ಪಟ್ಟು ಹಿಂತಿರುಗುವಾಗ ಮಾರೀಚಾಶ್ರಮಕ್ಕೆ ಬಂದನು. ದುಷ್ಯಂತನನ್ನು ನೋಡಿದ ಕೂಡಲೇ ಶಕುಂತಳೆಯ ಕಣ್ಣು ಮುಂದೆ ಹಿಂದಿನ ನೆನಪೆಲ್ಲಾ ಚಲನ ಚಿತ್ರದಂತೆ ಬಂದು ಸರಿಯಿತು. ಇಲ್ಲಿನ ಶಕುಂತಳೆ ಮೊದಲನೇ ಅಂಕದಲ್ಲಿ ಕಂಡ ತರುಣಿ ಶಕುಂತಳೆಯಲ್ಲ, ರೂಪು ಯೌವನಕ್ಕೆ ಬದಲಾಗಿ ನಾರು ಸೀರೆಯುಟ್ಟು ವ್ರತ ನಿಯಮಗಳಿಂದ ಕೃಶಳಾಗಿ ಬೇಸಿಗೆಯಲ್ಲಿ ಬತ್ತಿದ ನದಿಯಂತೆ ಕಾಣುತ್ತಿದ್ದಾಳೆ. ಈಗ ಅವಳಿಗೆ ನಗೆಯಿಲ್ಲ, ಸಂತೋಷವಿಲ್ಲ. ಸುಖದಲ್ಲಿನ ನಗೆಯೇ ನಗೆ. ಕಷ್ಟ ಬಂದಾದ ಮೇಲೆ ಇನ್ನೆಲ್ಲಿಯನಗೆ! ಆ ತಾಪಸಿಯ ಸೊರಗಿದ ಚಿತ್ರ ದುಷ್ಯಂತನ ಮನ ಕರಗಿಸಿತು. ಆದರೂ ಆಕೆಯ ತೇಜಸ್ಸು ಮಾತ್ರ ಕುಂದಿರಲಿಲ್ಲ. ನಿಶ್ಚಲವಾದ ಮನಸ್ಸಿನಿಂದ ಮುಖ ಕಂಗೊಳಿಸುತ್ತಿತ್ತು. ವಿನಯಶೀಲಗಳಿಂದ ಬಾಗಿ ಕ್ಷಮಾವಂತಳಾಗಿದ್ದಳು. ರಾಜನನ್ನು ಕಂಡೊಡನೆ ಕಣ್ಣೀರಿಡುವಳು. ಹಿಂದಿನ ಘಟನೆಯ ಸುದ್ದಿಯನ್ನೇ ಎತ್ತಲಿಲ್ಲ. ಅದು ಶಕುಂತಳೆಯ ಪಾತ್ರದ ಘನತೆಗೆ ಉಚಿತವಾದುದು. ರಾಜನೇ ಅವಳ ಗುಳಿ ಬಿದ್ದಿದ್ದ ಕಣ್ಣಿನಲ್ಲಿ ತಂಗಿದ್ದ ಕಣ್ಣೀರನ್ನು ಒರಸಲು ಹೋದಾಗ ಅವನ ಕೈಲಿದ್ದ ಅಭಿಜ್ಞಾನದ ಉಂಗುರವನ್ನು ನೋಡಿದೊಡನೆ ಅದರಿಂದುಂಟಾದ ಕಷ್ಟದ ನೆನಪು ಬಂತು. ದುಷ್ಯಂತನೇ ಅದನ್ನು ಶಕುಂತಳೆಯ ಬೆರಳಿಗಿಡಲು ಪ್ರಯತ್ನಿಸಿದಾಗ "ಅದರಲ್ಲಿ ನನಗೆ ವಿಶ್ವಾಸವಿಲ್ಲ ಎಂದಳು" ಆ ತಪಸ್ವಿನಿ ಸಾಧ್ವಿ ಶಕುಂತಲೆ. ಲೋಕಾನುಭವದ ದೃಷ್ಟಿಯಿಂದ ಒಮ್ಮೆ ಸುಡುವ ಹಾಲಿನಿಂದ ಬಾಯಿ ಸುಟ್ಟುಕೊಂಡ ಬೆಕ್ಕು ಮತ್ತೊಮ್ಮೆ ತಣ್ಣನೆಯ ಹಾಲು ಕೊಟ್ಟರೂ ಹಿಂದಿನ ಅನುಭವವನ್ನು ಮರೆಯುವ ತನಕ ಅದನ್ನು ತಿರಸ್ಕರಿಸುವುದು ಸಹಜವಾದುದು. ಕವಿ ಮನಶಾಸ್ತ್ರದ ಕೀಲಿ ಕೈಯಿಂದ ಶಕುಂತಳೆಯ ಅಂತರಂಗದ ಭಾವನೆಗಳನ್ನು ವಿವಿಧ ಹಂತಗಳಲ್ಲಿ ತೆರೆದು ತೋರಿಸಿದ್ದಾನೆ. ತಪಸ್ಸಿನಿಂದ ಕರ್ಮ ಕ್ಷಯಿಸಿದ ಮೇಲೆ ವಿಧಿಯ ನಿಯಮದಂತೆ ಆಕೆ ಪುನಃ ತನ್ನ ಪತಿಯನ್ನು ಸೇರುವಳು. ಪುಷ್ಪವು ಫಲದಲ್ಲಿ ಸಮಾಪ್ತಿಗೊಂಡಂತಾಯ್ತು ಅವಳ ಜೀವನವು ಕಡೆಯಲ್ಲಿ. ಆಂಗ್ಲ ಕವಿ ಗಯಟೆಯೂ ಇದನ್ನೇ ನುಡಿದ. ಮಾರೀಚ ಮುನಿಗಳಿಂದ ಶಾಪದ ವಿಚಾರವನ್ನು ತಿಳಿದ ಮೇಲೆ ಇಬ್ಬರಿಗೂ ಸಮಾಧಾನವಾಯಿತು. "ಇದರಲ್ಲಿ ಆರ್ಯ ಪುತ್ರನ ತಪ್ಪೇನಿಲ್ಲ; ಇದೆಲ್ಲವೂ ನನ್ನ ಕರ್ಮ" ಎನ್ನುವ ಶಕುಂತಳೆಯ ಮಾತಿನಲ್ಲಿ ಎಷ್ಟು ಸೌಜನ್ಯ ತುಂಬಿದೆ ಎಂಬುದನ್ನು ಕಾಣಬಹುದು. ಇದು ಆ ಸಾಧ್ವಿಯ ಸ್ವಭಾವಕ್ಕೆ ಯೋಗ್ಯವಾದುದೇ. ಅಂತೂ 'ಬೇಳೆಯಂತೆ' ಎರಡಾಗಿದ್ದ ಅವರ ಜೀವನವು ಕಾಳಿನಂತೆ ಪುನಃ ಒಂದಾಯ್ತು. ಕಣ್ವರ ಆಶೀರ್ವಾದವು ಫಲಿಸಿತು. ಪಶ್ಚಾತ್ತಾಪಕ್ಕೆ ಮಿಗಿಲಾದ ಶಿಕ್ಷೆ ಇನ್ನಿಲ್ಲ. "Repentance is the highest punishment" ಎನ್ನುವ ತತ್ತ್ವವನ್ನು ಕವಿ ಸೂಚಿಸಿದಂತಿದೆ ಈ ಸನ್ನಿವೇಶದಲ್ಲಿ.

ದುಷ್ಯಂತನೊಡನೆ ಹಸ್ತಿನಾಪುರಕ್ಕೆ ತಿರುಗಿದ ಶಕುಂತಳೆ ಹಿರಿಯ ರಾಣಿಯಾಗಿದ್ದ ಹಂಸಪದಿಕೆಯೊಡನೆ ಪ್ರೀತಿ ಗೌರವದಿಂದಿರುವಳು. ಅರಮನೆಯಲ್ಲಿ ತನಗಿನ್ನು ಸ್ಥಾನ ಗೌರವವಿಲ್ಲೆಂದು ಭಾವಿಸಿದ್ದ ಹಂಸಪದಿಕೆಯ ಊಹೆ ಸುಳ್ಳಾ

ಯಿತು. ಕಣ್ವರ ಆಶ್ರಮಕ್ಕೆ ಹೋಗಿ ಬರಲು ಹೊರಟಾಗ ಹಂಸಪದಿಕೆಯೂ ಜೊತೆಯಲ್ಲಿಯೇ ಬರಲು ಆಸೆಯನ್ನು ವ್ಯಕ್ತಪಡಿಸಿದಳು. ಆದರಂತೆ ಶಕುಂತಳೆ ಅಕ್ಕನ ಜೊತೆಯಲ್ಲಿಯೇ ಕಣ್ವರ ಆಶ್ರಮಕ್ಕೆ ಹಿಂತಿರುಗಿ ತನ್ನ ಸಖಿಯರನ್ನು ಕಂಡು ಬಹಳವಾಗಿ ಹಿಗ್ಗಿದಳು. ಆಶ್ರಮದ ಸಸ್ಯ ಪ್ರಾಣಿಗಳಿಗೆಲ್ಲಾ ಹೋದ ಪ್ರಾಣ ಬಂದಂತಾಯ್ತು. ಮರೆತಿದ್ದ ಜಿಂಕೆ ತಡವಾಗಿ ಹತ್ತಿರ ಬಂದು ಶಕುಂತಳೆಯ ಕೈ ನೆಕ್ಕಿ ಗುರುತಿಸಿತು. ವನಜ್ಯೋತ್ಸ್ನೆಯನ್ನು ಮಾತನಾಡಿಸಿದಳು. ಮತ್ತೊಮ್ಮೆ ತನ್ನ ಪ್ರಿಯನ ಜೊತೆ ಬಂದಿದ್ದ ಮಗ ಸರ್ವದಮನುನು ತಾತನಾದ ಕಣ್ವರಿಗೆ ನಮಸ್ಕರಿಸಿದನು. ಎಲ್ಲರೂ ಅವನನ್ನು ಹೊತ್ತು ಮೆರೆದರು. ಶಿಲ್ಪಿಯ ಕೈಲಿ ನೂರಾರು ಏಟುತಿಂದು ವಿಗ್ರಹ ಚೆಲುವಾದಂತೆ, ವಿಧಿಯ ಕೈವಾಡದಿಂದಲೋ ಇಲ್ಲವೇ ಸನ್ನಿವೇಶ ಮಹಿಮೆಯಿಂದಲೋ ಏರುಪೇರುಂಟಾದ ಅವಳ ಜೀವನವು ಹಸನಾಯ್ತು. ಹೋರಾಟವಿಲ್ಲದ ಜೀವನದಲ್ಲಿ ಹುರುಳಿಲ್ಲ. ಸುಖದ ಮೌಲ್ಯ ಗೊತ್ತಾಗುವುದು ಸುಖದಿಂದಿದ್ದಾಗಲಲ್ಲ. ಕಷ್ಟ ಬಂದಾಗ ಎಂಬುದನ್ನೂ ಕವಿ ಕಾಳಿದಾಸನು ಶಕುಂತಳೆಯ ಪಾತ್ರದ ಮೂಲಕ ಅಭಿವ್ಯಕ್ತಗೊಳಿಸಿರುವುದು ಅದ್ಭುತವಾದುದು. ಕವಿಯ ಪ್ರತಿಭೆಯ ಬೇರಿನಿಂದ ಎಂದೆಂದಿಗೂ ಬಾಡದ ಶಕುಂತಳೆಯೆಂಬ ಸುಂದರ ಸೃಷ್ಟಿಯಾಗಿದೆ ಎಂಬುದನ್ನು ನಾವಿಲ್ಲಿ ಅರಿಯಬಹುದು. ಆದ್ದರಿಂದಲೇ ಕಾಳಿದಾಸನ 'ಶಾಕುಂತಲ' ನಾಟಕ ವಿಶ್ವದ ಅನೇಕ ಭಾಷೆಗಳಲ್ಲಿ ಪ್ರಕಟವಾಗಿ ಜಗದ ಜನರ ಮನಸ್ಸನ್ನು ವಿಸ್ಮಯಗೊಳಿಸಿದೆ. ಆಂಗ್ಲ ಕವಿ ಷೇಕ್ಸ್‌ಪಿಯರ್‌ನಿಗಿಂತ ಸುಮಾರು ಸಾವಿರ ವರ್ಷಗಳ ಹಿಂದೆಯೇ ಇಂತಹ ಅತ್ಯುತ್ತಮ ನಾಟಕವನ್ನು ಬರೆದು ಕೀರ್ತಿಯ ಉತ್ತುಂಗ ಶಿಖರವನ್ನೇರಿದ ಕವಿ ಕುಲಗುರು ಕಾಳಿದಾಸನು ಸದಾ ಪೂಜ್ಯನೇ ಸರಿ!

ಮಹೇಶ್ವರಪ್ಪ

---

# ರಸಿಕಧೀರ ವಿರಾಗಶೀಲ ಭರ್ತೃಹರಿಕವಿ

ಭರ್ತೃಹರಿಯು ಮಹಾಯೋಗೀಂದ್ರನು ಸುಭಾಷಿತ ತ್ರಿಶತಿಕರ್ತಾರನು. ಶ್ರೇಷ್ಠ ಮಾರ್ಗ ಕವಿ. ಸಕಲ ಶಾಸ್ತ್ರಾರ್ಥಸಾರಜ್ಞನು. ಇವನ ಜೀವಿತ ಕಾಲವು ಕ್ರಿ.ಶ. ೬೫೧. ಕಡಲಾಚೆಯ ಭಾಷೆಗೆ ತರ್ಜುಮೆ ಆಗಿರುವ ಸಂಸ್ಕೃತ ಗ್ರಂಥಗಳಲ್ಲಿ ಬಹುಶಃ ಮೊದಲನೆಯದೆಂದರೆ ಭರ್ತೃಹರಿಯ ಶತಕ–ಎಂದೂ, ಡಚ್ ಭಾಷೆಗೆ ಕ್ರಿ.ಶ. ೧೬೫೧ರಲ್ಲಿ ಪ್ರಥಮವಾಗಿ ಅಬ್ರಹಾಂ ರೋಗರ್ ಅವರಿಂದ ಈ ಭರ್ತೃಹರಿಯ ಕೃತಿ ಪರಿವರ್ತನವಾಗಿದೆಯೆಂದೂ ವಿದ್ವಾಂಸರ ಅಭಿಮತವಿದೆ. ನಿಜಕ್ಕೂ ಇದು ಗಮನಾರ್ಹ ವಿಷಯ! ಕನ್ನಡ ಭಾಷೆಗೆ ಅಭಿನವ ಕವಿ ಕಾಳಿದಾಸ ಶ್ರೀಬಸವಪ್ಪ ಶಾಸ್ತ್ರಿಗಳಿಂದ ಸುಂದರವೂ ಸಮರ್ಥವೂ ಆದ ಅನುವಾದ ಒದಗಿದೆ. ಶ್ರೀ ದೊಡ್ಡಬೆಲೆ ನಾರಾಯಣ ಶಾಸ್ತ್ರಿಗಳವರಿಂದ ಪ್ರತಿಪದ ಟೀಕೆ-ತಾತ್ಪರ್ಯವನ್ನೊಳಗೊಂಡ ಈ ಸುಭಾಷಿತ ಗ್ರಂಥವು ಕನ್ನಡಕ್ಕೆ ಲಭಿಸಿದೆ. ಇತ್ತೀಚೆಗೆ ಕವಿ ಶ್ರೀ ಎಸ್. ವಿ. ಪರಮೇಶ್ವರ ಭಟ್ಟರವರೂ ಕನ್ನಡ ಪದ್ಯಾನುವಾದವನ್ನು ಒದಗಿಸಿದ್ದಾರೆ. ಭರ್ತೃಹರಿಯನ್ನು ಕುರಿತ ಲೇಖನ ಸಾಹಿತ್ಯವಂತೂ ವಿಪುಲವಾಗಿದೆ. ಕಾಳಿದಾಸನಂತೆ ಭರ್ತೃಹರಿಯೂ ಜನತಾ ಪ್ರಿಯನೆಂಬುದು ಸುಪ್ರಸಿದ್ಧ ಸಂಗತಿ.

ಭರ್ತೃಹರಿಯು ಸರಸಕವಿ, ಲೋಕಾನುಭವಿ, ಧ್ಯಾನಯೋಗಿ, ನಿರ್ಮಲ ಹೃದಯಿ, ಸ್ವಾವಲಂಬನಪಟು, ವಿಡಂಬನಪ್ರಿಯ, ರಸಿಕಧೀರ, ವಿರಾಗಶೀಲ ಎಂಬುದನ್ನು ಅವನ ವೈರಾಗ್ಯ ಶತಕದ ಆಧಾರದಿಂದ ಸಹೃದಯರಿಗೆ ಮನಗಾಣಿಸುವುದು ಈ ಲೇಖನದ ಉದ್ದೇಶ.

ಸಾ ರಮ್ಯಾ ನಗರೀ ಮಹಾನ್ ಸಃ ನೃಪತಿಃ
ಸಾಮಂತಚಕ್ರಂ ಚ ತತ್ಪಾ
ರ್ಶ್ವೇ ತಸ್ಯ ಚ ಸಾವಿದ್ಧಗ ಪರಿಷತ್ ತಾಃ
ಚಂದ್ರ ಬಿಂಬಾನನಾಃ ಉ ||
ದ್ವೃತ್ತಃ ಸಚ ರಾಜಪುತ್ರ ನಿವಹಃ ತೇ
ವಂದಿನಃ ತಾಃ ಕಥಾಃ ಸರ್ವಂ
ಯಸ್ಯವಶಾತ್ ಅಗಾತ್ ಸ್ಮೃತಿಪಥಂ
ಕಾಲಾಯ ತಸ್ಮೈನಮಃ ||

ಆ ರಮಣೀಯವಾದ ನಗರ, ಶ್ರೇಷ್ಠನಾದ ರಾಜ, ಸಾಮಂತರ ಸಮುದಾಯ, ಪಂಡಿತರ ಸಭೆ, ಆ ಚಂದ್ರಮುಖಿಯರು, ರಾಜಕುಮಾರರು, ಸ್ತುತಿಪಾಠಕರು, ಆ ಕಥೆಗಳು–ಸರ್ವವೂ ಯಾವ ಕಾಲಾಧೀನ ಕಾರಣದಿಂದ ಸ್ಮೃತಿಪಥವನ್ನು ಹೊಂದಿತೋ ಅಂತಹ ಕಾಲಪುರುಷನಿಗೆ ನಮಸ್ಕಾರ

"ರಜನಿ ದಿವಸಾ ಲೋಲಯನ್ ದ್ವಾ
ವಿವಕ್ಷಾ ಕಾಲಃ ಕಲ್ಯೋ
ಭುವನ ಫಲಕೆ ಕ್ರೀಡತಿ ಪ್ರಾಣಿಶಾರ್ಲೈ"

ಕಾಲಪುರುಷನೆಂಬ ಪಗಡೆಯ ಆಟಗಾರನು ಭುವನವೆಂಬ ಕ್ರೀಡಾಫಲಕದ ಮೇಲೆ ಹಗಲು ರಾತ್ರಿಗಳೆಂಬ ದಾಳಗಳನ್ನು ಪ್ರಾಣಿಗಳೆಂಬ ಕಾಯಿಗಳಿಂದ ಆಟವಾಡುತ್ತಾನೆ.

ಭತೃಹರಿಯ ವರ್ಣನಾ ವೈಖರಿ, ಸರಸ ರಚನೆ, ಗಂಭೀರ ಕಪಿತ್ವದ ನಿದರ್ಶನದಂತಿದೆ ಈ ಕಾಲ ಮಹಿಮಾವರ್ಣನ ಪದ್ಯಗಳು

"ಗಂಗಾತೀರೆ ಹಿಮಗಿರಿ ಶಿಲಾಬದ್ಧಪ ದ್ಮಾಸನಸ್ಯ
ಬ್ರಹ್ಮಧ್ಯಾನಾಭ್ಯಸನ ವಿಧಿನಾ ಯೋಗ

ನಿದ್ರಾಂಗತಸ್ಯ ||
ಕಿಂತೈರ್ಭಾವ್ಯಂ ಮಮ ಸುದಿವಸೈರ್ಯತ್ರತೇ
ನಿರ್ವಿಶಂಕಾಃ
ಕಂಡೂಯಂತೇ ಜರಠ ಹರಿಣಾಸ್ವಾಂಗ
ಮಂಗೇ ಮದಿಯೇ ||

"ಗಂಗೆಯ ದಡದಲಿ ಹಿಮಗಿರಿಯೆಡೆಯಲಿ
ಪದ್ಮಾಸನದಲಿ ಕುಳಿತಿರಲು
ಹೊಂಗಿದು ಪರಮಾನಂದ ಸುಷುಪ್ತಿಗೆ
ಬಾಹ್ಯಜ್ಞಾನವ ಮರೆತಿರಲು
ಮೈಯಿಗೆ ಮೈಯನು ಜೋಡಿಸಿ ತೀಡುತ
ಮುದಿವೆಣ್ ಜಿಂಕೆಯು ಹದುಳಗೊಳೆ
ಭಂಗವ ಕಾಣದ ಗಾಢ ಸಮಾಧಿಯ
ನೀಡುವ ಸುದಿವಸ ನನಗೆಂದು ?"

"ಪಾತಾಳಂ ಆವಿಶಸಿ ಯಾಸಿ ನಭೋ
ವಿಲಂಘ್ಯ ದಿಙ್ಮಂಡಲಂ ಭ್ರಮಸಿ
ಮಾನಸ ಚಾಪಲೇನ! ಭ್ರಾಂತ್ಯಾಪಿ ಜಾತು
ವಿಮಲಕಥಮಾತ್ಮ ನೀನಂ
ನ ಬ್ರಹ್ಮ ಸಂಸ್ಮರಸಿ ನಿರ್ವೃತಿಮೇಷಿಯೇನ||

"ಪಾತಾಳಕೆ ಮುಳುಗುವೆ, ನಭಕೇರುವೆ
ವಿಶ್ವವ ನಲೆಯುವೆ ಎಲೆ ಮನವೆ,
ಎಂತೈ ಮರೆತುದು ನೀಂ ಪ್ರಿಯಸಖನನು
ವಿಶ್ವೇಶ್ವರನನು ವಿಮಲನನು"

ಭರ್ತೃಹರಿಯು ನಿರ್ಮಲ ಹೃದಯಿ, ಧ್ಯಾನ ಯೋಗಿ ಎಂಬುದನ್ನು ಈ ಶತಕ ಪದ್ಯಗಳು ಪರಿಣಾಮಯುತವಾಗಿ ಬಿಂಬಿಸಿವೆ.

ನ ನಟಾ ನ ವಿಟಾ ನ ಗಾಯಕಾ
ನ ಪರದ್ರೋಹ ನಿಬದ್ಧ ಬುದ್ಧಯಃ |
ನೃಪಸದ್ಮನಿ ನಾಮ ಕೇವಯಂ ಕುಚ
ಭಾರಾನಮಿತ ನ ಯೋಷಿತಃ ||

ನಾವು ನಟರಲ್ಲ, ವಿಟರಲ್ಲ, ಗಾಯಕರಲ್ಲ, ಇತರ ದ್ರೋಹದಲ್ಲಿ ಮನಸ್ಸು ಮಾಡಿದವರಲ್ಲ. ಸ್ತನಗಳ ಭಾರದಿಂದ ಮುಂದೆ ಬಾಗಿದ ಕಾಮಿನಿಯರೂ ಅಲ್ಲ. ಸಮ್ರಾಟರ ಸ್ಥಾನದಲ್ಲಿ ನಮ್ಮದು ಏನು ಪಾತ್ರ ?ಭರ್ತೃಹರಿಯ ಧೀರಗಂಭೀರ ನಿಲವನ್ನು, ಸ್ವಾವಲಂಬನ ಪ್ರವೃತ್ತಿಯನ್ನು, ಲೋಕ ವಿಡಂಬನೆಯನ್ನು ಮನಗಾಣಲು ಇದೊಂದೇ ನುಡಿ ಸಾಕು !

ಭರ್ತೃಹರಿಯ ವೈರಾಗ್ಯ ಶತಕವು ಕೇವಲ ವಿರಕ್ತನ ಕೃತಿಯಲ್ಲ. ರಸಿಕಧೀರನ ಗಂಭೀರ ನಿಲುವನ್ನು ಕಾಣಿಸುವ ಸತ್ಕೃತಿ. ಜೀವನಾನುಭವದಿಂದ ಹೊಮ್ಮಿದ ನೀತಿ ಸಂಗತಿಗಳು ಸಮುಚಿತ ಸೌಂದರ್ಯ ಪ್ರಕಾರಗಳಿಂದ ಹೃದ್ಯವಾಗಿವೆ. ಶೃಂಗಾರ ಶತಕವಿರಲಿ, ವೈರಾಗ್ಯ ಶತಕದಲ್ಲಿಯೂ ರಸಿಕ ಜೀವನವನ್ನು ಭೃರ್ತಹರಿಯು ವಿರೋಧಿಸಿಲ್ಲ—ಎಂಬುದು ಮನನೀಯ ಸಂಗತಿ.

"ಅಗ್ರೇಗೀತಂ ಸರಸ ಕವಯಃ ಪಾರ್ಶ್ವತೋ
ದಕ್ಷಿಣಾತ್ಯಾಃ
ಪೃಷ್ಠೇ ಲೀಲಾವಲಯರಣಿತಂ
ಚಾಮರಗ್ರಾಹಿಣೀನಾಂ ||
ಯದ್ಯಸ್ತ್ಯೇವಂ ಕುರುಭವ ರಸಾಸ್ವಾದನೇ
ಲಂಪಟತ್ವಂ
ನೋ ಚೇಚ್ಚೇತಃ ಪ್ರವಿಶಸಹಸಾ ನಿರ್ವಿಕಲ್ಪೇ
ಸಯಾಧೌ" ||

ಮುಂಬಳಿಯ ಮೃದುಗೀತ ಎಡಬಲದ ರಸಗೀತ
ದಾಕ್ಷಿಣಾತ್ಯ ಕವಿಪುಂಗವರ ಸೊಗಸು
ಹಿಂಬಳಿಯಲೊಪ್ಪುತಿಹ ಚಾಮರದ ಚೆಲುವೆಯರ
ಹೊಂಬಳೆಯ ತುದಿಗೈಯ ಕುಲುಕಿನುಲುಹು
ಇಂಬಾಗಲೀಪರಿಯ ಸಂಸಾರಸಂಪದವು
ಭವರಸದ ಸಂಗವಲಿ ಮನನ ಮಾಡು
ತುಂಬದಿರಲಿಂತಿದುವೆ, ಹೇ ಮನವೆ, ನೀ ಮುಳುಗು
ನಿರ್ವಿಕಲ್ಪದ ಗಾಢಸಂಪದದಲಿ

ಇಷ್ಟೇ ಅಲ್ಲ, ಲೌಕಿಕ ಸುಖಗಳ ಅಶಾಶ್ವತತೆಯನ್ನು ಬಣ್ಣಿಸುವಾಗಲೂ

"ಕಂಠಾ ಶ್ಲೇಷೋಪಗೂಢ ತದಂಪಿಚ
ನ ಚಿರಂ ಮತ್ರಿಯಾಭಿಃ"

ನಲ್ಲೆಯರು ಕೊಟ್ಟ ಕಂಠಾಲಿಂಗನ ಸುಖವೂ ಶಾಶ್ವತವಲ್ಲ ಎಂದು ಅನುಭವದ ನುಡಿ ಆಡಿದ್ದಾನೆ.

ಇಹದ ಬದುಕಿನ ಬಂಧನದಿಂದ ಬಿಡುಗಡೆಗಾಗಿ ಪರಮಾತ್ಮನನ್ನು ಸ್ಮರಿಸದೆ ವ್ಯರ್ಥವಾಗಿ ಬಾಳನ್ನು ಕಳೆದ ಬಗೆಗೆ ಪಶ್ಚಾತ್ತಾಪಪಡುವ ಸಂದರ್ಭದಲ್ಲಿಯೂ

"ನಾರೀ ಪೀನಪಯೋಧರೋರುಯುಗಳಂ
ಸ್ವಪ್ನೇಪಿನಾಲಿಂಗಿತಂ"

ಕಾಮಿನಿಯರ ತುಂಬಿದ ಸ್ತನಗಳನ್ನೂ ತೊಡೆಯನ್ನೂ ಕನಸಿನ ಸ್ಥಿತಿಯಲ್ಲಾದರೂ ಅಪ್ಪಿಕೊಳ್ಳಲಿಲ್ಲ—ಎಂದೂ

"ಕಾಂತಾಕೋಮಲ ಪಲ್ಲವಾಧರರಸಃ
ಪೀತೋ ನ ಚಂದ್ರೋದಯೇ"

ಬೆಳುದಿಂಗಳ ಸಮಯದಲ್ಲಿ ಚೆಲುವೆಯರ ಕೋಮಲವಾದ ತುಟಿಗಳ ಅಮೃತಪಾನ ಮಾಡಲಿಲ್ಲ—ಎಂದು ಭರ್ತೃಹರಿಯು ತನ್ನ ರಸಿಕತೆಯ ಪರಾಕಾಷ್ಠೆಯನ್ನು ಕಾಣಿಸಿದ್ದಾನೆ.

ಚಂಚಲವಾದ ಮನಸ್ಸಿನ ಸ್ವರೂಪವಿವೇಚನೆಯ ಸಂದರ್ಭದಲ್ಲಿಯೂ

"ಕೋಪೋಪಾಹಿತ ಬಾಷ್ಪಬಿಂದು ತರಲಂ
ರಮ್ಯಂ ಪ್ರಿಯಾಯಾ ಮುಖಂ"

ಪ್ರಣಯ ಕಲಹದಿಂದ ಸಂತಸದ ಕಣ್ಣೀರು ತುಂಬಿದ ಪ್ರಿಯತಮೆಯ ಮುಖವು ರಮಣೀಯ.

ಇಂತಹ ನುಡಿಗಳಲ್ಲಿ ವಿರಾಗಶೀಲ ಭರ್ತೃಹರಿಯಲ್ಲಿ ನೆಲೆಗೊಂಡಿರುವ ರಸಿಕತೆಯ ಮನೋಧರ್ಮ ಉಜ್ವಲವಾಗಿ ಕಾಣುತ್ತಿದೆ. ಶೃಂಗಾರ ಶತಕದ ಕರ್ತೃವಾಗಿರುವುದಲ್ಲದೆ ವೈರಾಗ್ಯ ಶತಕದಲ್ಲಿಯೂ ಶೃಂಗಾರ ದರ್ಶನವನ್ನು ಕಾಣಿಸಿರುವುದರಿಂದ ಭರ್ತೃಹರಿಯು ಸಹಜವಾಗಿ ವಿರಕ್ತನಲ್ಲ, ವೈರಾಗ್ಯ ಶತಕವು ವಿರಕ್ತನ ಕೃತಿಯಲ್ಲ ಎಂಬುದನ್ನು ಚೆನ್ನಾಗಿ ದೃಢಪಡಿಸುತ್ತಿದೆ.

"ಏಕೋ ರಾಗಿಷು ರಾಜತೇ ಪ್ರಿಯತಮಾ
ದೇಹಾರ್ಧಹಾರೀಹರೋ
ನೀರಾಗೇಷು ಜನೋ ವಿಮುಕ್ತ
ಲಲನಾಸಂಗೋ ನಯಸ್ಮಾತ್ಪರಃ"

ಕಾಮಿಗಳಲ್ಲಿ ಮೊದಲಿಗ ಈಶ್ವರ. ವಿರಾಗಿಗಳಲ್ಲೂ ಈತನೇ ಶ್ರೇಷ್ಠನು. ತನ್ನ ಪಾರ್ವತಿಯನ್ನು ದೇಹದ ಅರ್ಧಭಾಗದಲ್ಲೇ ಧರಿಸಿ "ಅರ್ಧನಾರೀಶ್ವರ" ಎಂದು ಹೆಸರಾಗಿ ಪ್ರಣಯಿಗಳಲ್ಲಿ ಪ್ರಧಾನನಾಗಿದ್ದಾನೆ. ರಸಿಕಧೀರನೂ ವಿರಾಗಶೀಲನೂ ಆದ ಭರ್ತೃಹರಿಯು ರಸಿಕತೆ ವೈರಾಗ್ಯಗಳಲ್ಲಿ ಶ್ರೇಷ್ಠನಾದ ಈಶ್ವರನ ಪರಮಭಕ್ತನಾಗಿರುವುದರಲ್ಲಿ ಅರ್ಥವಿದೆ. ಈ ಸಂಗತಿಯನ್ನು ಗುರುತಿಸಿ ಈ ಕವಿಯ ಕಾವ್ಯವನ್ನು ಅಧ್ಯಯನ ಮಾಡುವುದರಲ್ಲಿ ಆನಂದವಿದೆ. ಸಮೃದ್ಧವಾದ ಶೃಂಗಾರ ಜೀವನ, ಇಲ್ಲವೇ ಪಾವನವಾದ ವೈರಾಗ್ಯ ಜೀವನ—ಯಾವುದೇ ಆಗಲಿ ಹೃದಯ ತುಂಬಿ ಬಾಳಬೇಕೆಂಬುದೇ ಭರ್ತೃಹರಿಯ ಬದುಕಿನ ಸೂತ್ರ; ಸಾರ, ಸಂದೇಶ.

ಭರ್ತೃಹರಿಯ ಕಾವ್ಯಶೈಲಿ :—

"ಗಂಗಾತರಂಗ ಹಿಮಶೀಕರ ಶೀತಲಾನಿ
ವಿದ್ಯಾಧರಾಧ್ಯುಷಿತ ಚಾರು ಶಿಲಾತಲಾನಿ।
ಸ್ಥಾನಾನಿ ಕಿಂ ಹಿಮವತಃ ಪ್ರಲಯಂ ಗತಾನಿ
ಯತ್ಸಾವಮಾನ ಪರಪಿಂಡರತಾ ಮನುಷ್ಯಾಃ।"

"ಭೋಗಾಸ್ತುಂಗ ತರಂಗಭಂಗ ಚಪಲಾಃ
ಪ್ರಾಣಾಃ ಕ್ಷಣಧ್ವಂಸಿನಃ"

"ಧನ್ಯಾನಾಂ ಗಿರಿಕಂದರೇ ನಿವಸತಾಂ
ಜ್ಯೋತಿಃ ಪರಂಧ್ಯಾಯತಾ"

ಭರ್ತೃಹರಿಯ ಭಾವ–ಭಾಷಾಸೌಷ್ಠವವನ್ನೂ ಮಂಜುಳ ಶೈಲಿಯನ್ನೂ ಈ ನುಡಿಗಳು ಚೆಲುವಾಗಿ

ಮನಗಾಣಿಸಿವೆ.

"ಸ್ತನೌ ಮಾಂಸಗ್ರಂಥೀ ಕನಕಕಲಶಾ
ಇತ್ಯುಪಮಿತಾ"

ಎಂಬೆಡೆ ವಾಸ್ತವತೆ–ಕವಿಕಲ್ಪನೆಗಿರುವ ಅಂತರ ವನ್ನೂ,

"ಆಶಾನಾಮನದೀ ಮನೋರಥ ಜಲಾ
ತೃಷ್ಣಾತರಂಗಾಕುಲಾ"

ಎಂಬ ಪದ್ಯದಲ್ಲಿ ಸಾವಯವ ರೂಪಕಾಲಂಕಾರ ವನ್ನೂ ನಾವು ಕಾಣಬಹುದು.

"ತಾರುಣ್ಯಂ ಗತಮೇವ ನಿಷ್ಫಲಮಹೋ
ಶೂನ್ಯಾಲಯೇ ದೀಪವತ್"

"ಮನಸಿಜ ಪರಿತುಷ್ಟೇ ಕೋರ್ಥವಾನ್
ಕೋ ದರಿದ್ರಃ"

"ಚಲಾಚಲೇಚ ಸಂಸಾರೇ ಧರ್ಮ ಏಕೋ ಹಿ
ನಿಶ್ಚಲಃ"

"ವೈರಾಗ್ಯಮೇವಾಭಯಂ"
"ವೈರಾಗ್ಯಂ ಅಸ್ತಿ ಕಿಮತಃ ಪರಮರ್ಥನೀಯಂ"
"ಅನಾವರ್ತೀ ಕಾಲೋವ್ರಜತಿ"
"ಕಾಲಾಯ ತಸ್ಮೈನಮಃ"
"ಜೀರ್ಣಮ್ ಅಂಗೇ ಸುಭಾಷಿತಂ"
"ಕಾವ್ಯೇಷು ರಮ್ಯಾಃ ಕಥಾಃ"

ಭರ್ತೃಹರಿಯ ದೃಷ್ಟಿ–ಧೋರಣೆ, ಶೀಲ–ಶೈಲಿ ಯನ್ನು ಸೂತ್ರಪ್ರಾಯವಾದ ಈ ನುಡಿಗಳು ಸ್ಫುಟವಾಗಿ ಕಾಣಿಸಿವೆ.

ಉನ್ನತವಾದ ಲೋಕಾನುಭವ, ಬಾಳಿನ ಸೂಕ್ಷ್ಮನೋಟ, ಸಂವೇದನೆ, ಬಾಲಚಂದ್ರಶೇಖರ ನಲ್ಲಿ ಪರಮಭಕ್ತಿ, ಲೋಕದ ದುರಾಚಾರದಿಂದ ದೂರವಾಗಲು ಶಿವನಲ್ಲಿ ನಿವೇದನೆ, ಗಂಗೆಯ ದಡದಲ್ಲಿ ಪದ್ಮಾಸನಸ್ಥಿತನಾಗಿ ಶಿವಧ್ಯಾನಮಾಡುವ ಉತ್ಕಟೇಚ್ಛೆ, ನೆಲವನ್ನೇ ಹಾಸಿಗೆಯಾಗಿ, ಆಕಾಶ ವನ್ನೇ ಉಡಿಗೆಯಾಗಿ ಮಾಡಿಕೊಂಡು ಸ್ವಾತ್ಮ ಸಂತೋಷಿಯಾಗಿ ಬಾಳುವ ಭೂಮಾಕಾಂಕ್ಷೆ— ಭರ್ತೃಹರಿಯ ಆತ್ಮನಿಷ್ಠವಾದ ಈ ಶತಕ ಪದ್ಯ ಗಳಲ್ಲಿ ಕಂಡು ಬಂದಿದೆ.

"The Vairagya Sataka is not the work of an ascetic or inelastic mind. It gives expression to the passionate pain of an idealist, whose inborn belief in the goodness of the world is shattered by the sense of its hollowness and wickedness"

ಭರ್ತೃಹರಿಯ ವೈರಾಗ್ಯ ಶತಕವು ವಿರಾ ಗಿಯ ಕೃತಿಯಲ್ಲ; ಸ್ಥಿತಿಸ್ಥಾಪಕವಲ್ಲದ ಮನೋ ಧರ್ಮದಿಂದ ಹೊಮ್ಮಿದುದಲ್ಲ. ಅದು ಆದರ್ಶ ವಾದಿಯ ರಾಗಭಾವಗಳ ಅತ್ಯುತ್ಕಟ ವೇದನೆಗೆ ಅಭಿವ್ಯಕ್ತಿ ಕೊಟ್ಟಿರುವ ಕೃತಿ. ಜಗತ್ತಿನ ಲೇಸಿನಲ್ಲಿ ಕವಿಗಿದ್ದ ಹುಟ್ಟು ನಂಬಿಕೆ, ಅದರ ಹುರುಳಿಲ್ಲದ ದುರಾಚರಣೆಯಿಂದ ಚೂರು ಚೂರಾಗಿರುವ ಸ್ಥಿತಿ ಯನ್ನು ಮನಗಾಣಿಸುವ ಕೃತಿ.

ಪ್ರೊ ಫೆ ಸ ರ್ ಎಸ್. ಕೆ. ಡೆ. ಅವರ ಈ ಮಾತು ಯಥಾರ್ಥವಾಗಿದೆ. ಮಹನೀಯರ ಈ ಮಾ ತಿ ನ ಸತ್ಯವನ್ನು ಸಹೃದಯರಲ್ಲಿ ತಂದು ಕೊಡುವುದೇ ನನ್ನ ಈ ಅಭ್ಯಾಸ ಪೂರ್ಣ ಲೇಖನದ ಮೂಲೋದ್ದೇಶ.

ಚ. ಸುಂದರೇಶನ್, ಎಂ. ಎ.

# ಸಾಹಿತ್ಯದ ಸ್ವರೂಪ ಮತ್ತು ಪ್ರಯೋಜನ

ಮಾತುಗಳಲ್ಲಿ ಅಥವಾ ಬರವಣಿಗೆಯಲ್ಲಿ ಜೀವನದ ಸ್ವಾರಸ್ಯವನ್ನು ಚಿತ್ರಿಸುವ ಕಲೆಯನ್ನು ಸಾಹಿತ್ಯವೆಂದು ಕರೆಯಬಹುದು. ಸಾಹಿತ್ಯವೆಂದರೆ ಬರವಣಿಗೆಯಲ್ಲಿರುವುದು ಮಾತ್ರವಲ್ಲ; ಬಾಯಿಂದ ಹಾಡಿದ ಹಾಡು ಮತ್ತು ಹೇಳಿದ ಕಥೆಗಳೂ ಸಾಹಿತ್ಯವೇ. ರಂಗಮಂಟಪದ ಮೇಲೆ ಅಭಿನಯಿಸಲ್ಪಡುವ ನಾಟಕವೂ ಸಾಹಿತ್ಯವೇ. ಕಥೆಗಳು ಮೊದಲು ಹೇಳಲ್ಪಡುತ್ತವೆ. ಕವನಗಳು ಮೊದಲು ಹಾಡಲ್ಪಡುತ್ತವೆ. ಆಮೇಲೆ ಅವುಗಳಲ್ಲಿ ಕೆಲವು ಬರೆದಿಡಲ್ಪಡುತ್ತವೆ. ಬಹಳ ಹಿಂದಿನ ಕಾಲದಲ್ಲಿ ಹೇಳಲ್ಪಡುತ್ತಿದ್ದ ಕಥೆಗಳು ಮತ್ತು ಹಾಡಲ್ಪಡುತ್ತಿದ್ದ ಕವನಗಳೇ ಹೆಚ್ಚು. ಬರೆಯುವ ಕಲೆ ಹುಟ್ಟಿ ಬೆಳೆಯುವುದಕ್ಕೆ ಮುನ್ನ ಹೇಳಿದ್ದು ಮತ್ತು ಹಾಡಿದ್ದು ಮಾತ್ರವೇ ಸಾಹಿತ್ಯವಾಗಿತ್ತು. ಈಗ ಬಹುಮಟ್ಟಿಗೂ ಬರೆಯಲ್ಪಟ್ಟಿರುವುದೇ ಸಾಹಿತ್ಯವೆನ್ನಿಸಿಕೊಳ್ಳುತ್ತದೆ. ಏಕೆಂದರೆ ಹೇಳಿದ್ದು ಮತ್ತು ಹಾಡಿದ್ದು ಬಹಳ ದೂರ ಹೋಗಲಾರದು. ಬಹಳ ಜನರನ್ನು ಸೇರಲಾರದು. ಬಹಳ ದಿವಸ ಬಾಳಲಾರದು. ಒಂದು ವೇಳೆ ಉಳಿದರೂ ಬದಲಾವಣೆಗಳನ್ನು ಹೊಂದುತ್ತಲೇ ಹೋಗುತ್ತದೆ. ಅಲ್ಲದೆ ಹೇಳಲ್ಪಡುತ್ತಿರುವ ಮತ್ತು ಹಾಡಲ್ಪಡುತ್ತಿರುವ ಸಾಹಿತ್ಯ ಕೃತಿಗಳು ನಿಜವಾಗಿಯೂ ಉತ್ತಮ ದರ್ಜೆಯವುಗಳಾದರೆ ಅವು ಬಹು ಬೇಗನೆ ಬರೆದಿಡಲ್ಪಡುತ್ತವೆ. ಬರವಣಿಗೆಯಲ್ಲಿರುವ ಸಾಹಿತ್ಯ ಎಲ್ಲಿಗಾದರೂ ಹೋಗುವುದು, ಎಷ್ಟು ಜನರನ್ನಾದರೂ ತಲುಪುವುದು, ಎಷ್ಟು ಕಾಲವಾದರೂ ಇರುವುದು. ಹಾಗೆ ಬರೆದಿಡಲ್ಪಟ್ಟ ಸಾಹಿತ್ಯದಲ್ಲಿ ಉತ್ತಮವಾದ ಕೃತಿಗಳು ಕೋಟ್ಯಂತರ ಜನರಿಂದ ಓದಲ್ಪಡುತ್ತವೆ ಮತ್ತು ಶತಮಾನಗಳಾದರೂ ಬದಲಾವಣೆಗಳನ್ನು ಹೊಂದದೆ ಶಾಶ್ವತವಾಗಿ ಉಳಿಯುತ್ತವೆ.

ಜೀವನದ ವಸ್ತು ಎಷ್ಟು ವಿಶಾಲವಾದದ್ದೋ ಸಾಹಿತ್ಯದ ವಸ್ತುವೂ ಅಷ್ಟೇ ವಿಶಾಲವಾದುದು. ಜೀವನಕ್ಕೆ ಸಂಬಂಧಪಟ್ಟ ಯಾವ ವಸ್ತುವಾಗಲಿ, ಯಾವ ವಿಷಯವಾಗಲಿ, ಯಾವ ಸಮಸ್ಯೆಯಾಗಲಿ, ಸಾಹಿತ್ಯ ಅದನ್ನು ಅಳವಡಿಸಿಕೊಳ್ಳುವುದು. ಒಂದೇ ವಸ್ತು ಅಥವಾ ವಿಷಯ ಸಾಹಿತ್ಯವಾಗಬಹುದು, ಅಥವಾ ಶಾಸ್ತ್ರವಾಗಬಹುದು. ಎರಡು ಮತ್ತು ಎರಡು ಎಂಬುದು ಶಾಸ್ತ್ರವಾದರೆ ಎರಡು ಕಾಗೆಗಳು ಒಂದು ಮರದ ಮೇಲಿದ್ದವು; ಅಲ್ಲಿ ಅವುಗಳಿಗೆ ಕೊಂಚ ಆಹಾರ ದೊರಕಿತು; ಅದನ್ನು ಇತರರಿಗೂ ಕೊಟ್ಟು ತಾವೂ ತಿನ್ನಬೇಕೆಂದು ಅವು 'ಕಾಕಾ' ಎಂದು ಕೂಗಿದವು; ಆ ಆಹ್ವಾನವನ್ನು ಕೇಳಿ ಹಸಿದಿದ್ದ ಮತ್ತೆರಡು ಕಾಗೆಗಳು ಅಲ್ಲಿಗೆ ಬಂದವು; ನಾಲ್ಕು ಕಾಗೆಗಳು ಒಟ್ಟಿಗೇ ಸೇರಿ ಆ ಆಹಾರವನ್ನು ಭುಂಜಿಸಿದುವು ಎಂಬುದು ಸಾಹಿತ್ಯವಾಗುತ್ತದೆ. ಗಾಂಧೀಜಿ ೨ನೇ ಅಕ್ಟೋಬರ್ 1869ನೆಯ ಇಸವಿಯಲ್ಲಿ ಹುಟ್ಟಿದರು ಎಂಬುದು ಚರಿತ್ರೆಗೆ ಸಂಬಂಧಪಟ್ಟ ವಿಷಯವಾದರೆ, ಮಹಾಪುರುಷರು ಹುಟ್ಟುವುದು ಯಾವುದೋ ನಿಮಿತ್ತವಾಗಿ ಕಷ್ಟ ಕಾರ್ಪಣ್ಯ, ಭಯ ಭೀತಿ, ಅನೀತಿ ಮತ್ತು ಅಧರ್ಮಗಳಲ್ಲಿ ಸಿಲುಕಿ ತೊಳಲುತ್ತಿರುವ ಜನತೆಯನ್ನು ಉದ್ಧಾರ ಮಾಡಲೋಸುಗ ಮಹಾತ್ಮರು

ಆಗಿಂದ್ದಾಗ್ಗೆ ಭಗವಂತನ ಇಚ್ಛೆಯಂತೆ ಈ ಭೂಮಿಯಲ್ಲಿ ಅವತರಿಸುತ್ತಾರೆ. ಅಂಥವರಲ್ಲಿ ಮಹಾತ್ಮ ಗಾಂಧಿ ಒಬ್ಬರು. ಅವರು ೨ನೇ ಅಕ್ಟೋಬರ್ 1869ನೆಯ ಇಸವಿಯಲ್ಲಿ ಭಾರತ ಮಾತೆಯನ್ನು ದಾಸ್ಯದಿಂದ ಬಿಡುಗಡೆ ಮಾಡಲು ಜನ್ಮತಾಳಿದರು ಎಂಬುದು ಉತ್ತಮ ಸಾಹಿತ್ಯವಾಗುತ್ತದೆ.

ಜೀವನವಿಲ್ಲದೆ ಸಾಹಿತ್ಯವಿಲ್ಲ. ಆದರೆ ಜೀವನದ ಎಲ್ಲ ವಿಷಯಗಳನ್ನೂ ಸಾಹಿತ್ಯವು ತನ್ನ ಗಣನೆಗೆ ತಂದುಕೊಳ್ಳುವುದಿಲ್ಲ. ಜೀವನದಲ್ಲಿ ಸ್ವಾರಸ್ಯವಾದುದನ್ನು ಅಥವಾ ಅರ್ಥಗರ್ಭಿತವಾದುದನ್ನು ಸಾಹಿತ್ಯದ ಕಡತಕ್ಕೆ ಸಿಕ್ಕುವುದನ್ನು ಅದು ಅರಗಿಸಿಕೊಳ್ಳುತ್ತದೆ.

ಸಾಹಿತ್ಯದಿಂದಾಗುವ ಉಪಯೋಗವನ್ನು ರೂಪಾಯಿ ಮತ್ತು ಪೈಸೆಗಳಿಂದ ಅಳೆಯಲಾಗುವುದಿಲ್ಲ. ಸಾಹಿತ್ಯದ ಪರಿಣಾಮವು ಜನರ ಮೇಲೆ ಆಗುತ್ತದೆ. ಆ ಪರಿಣಾಮವನ್ನು ನಿಖರವಾಗಿ ಇಷ್ಟೇ ಎಂದು ಹೇಳಲಾಗುವುದಿಲ್ಲ. ಅಲ್ಲದೆ ಹಲವು ಸಾಹಿತ್ಯ ಕೃತಿಗಳು ಹಲವು ವಿಧವಾದ ಪರಿಣಾಮವನ್ನು ಹಲವು ಹಂತಗಳಲ್ಲಿ ಹಲವು ಜನರ ಮೇಲೆ ಬೀರುತ್ತವೆ. ಆರ್ಥಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ಸನ್ನಿವೇಶಗಳು ಮತ್ತು ಇವುಗಳಲ್ಲಾಗುವ ಬದಲಾವಣೆಗಳು ಸಾಹಿತ್ಯ ಕೃತಿಗಳ ಹುಟ್ಟುವಿಕೆಯ ಮೇಲೂ ಅವುಗಳು ಅಭ್ಯಾಸಿಸಲ್ಪಡುವುದರ ಮೇಲೂ ಹಳೆಯ ಮತ್ತು ಹೊಸ ಸಾಹಿತ್ಯ ಕೃತಿಗಳನ್ನು ಜನರು ಸ್ವೀಕರಿಸುವ ರೀತಿಯ ಮೇಲೂ ಪರಿಣಾಮವನ್ನುಂಟುಮಾಡುತ್ತವೆ. ಸಾಹಿತ್ಯಕೃತಿಗಳೂ ನಮ್ಮ ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ವಿಚಾರಗಳ ಮೇಲೆ ಪ್ರಭಾವವನ್ನು ಬೀರುತ್ತವೆ. ಸಮಾಜ ಕೊಲೆಪಾತಕಿಗಳನ್ನು ಹುಟ್ಟಿಸುತ್ತದೆ ಎಂಬ ಮಾತಿನಲ್ಲಿರುವ ಸತ್ಯ, ಸಮಾಜವು ತನ್ನ ಯೋಗ್ಯತೆಗೆ ತಕ್ಕದಾದ ಸಾಹಿತಿಯನ್ನು ಹುಟ್ಟಿಸುತ್ತದೆ ಎಂಬುದರಲ್ಲೂ ಇದೆ. ಅಂತೆಯೇ ಸಾಹಿತ್ಯವೂ ತನ್ನ ಯೋಗ್ಯತೆಗೆ ತಕ್ಕದಾದ ಸಮಾಜವನ್ನು ನಿರ್ಮಿಸುತ್ತದೆ. ಆದರೆ ಒಂದು ರೀತಿಯ ಸಮಾಜ ಎರಡು ಬಗೆಯ ಸಾಹಿತಿಗಳನ್ನು ಕೊಡಬಲ್ಲದು. ಒಂದು ಬಗೆಯ ಸಾಹಿತಿ ಸಮಾಜದ ಒಳ್ಳೆಯದು ಮತ್ತು ಕೆಟ್ಟುದನ್ನು ತನ್ನ ಕೃತಿಯಲ್ಲಿ ಚಿತ್ರಿಸುತ್ತಾನೆ. ಸಮಾಜದ ನೇರ ಮತ್ತು ಡೊಂಕುಗಳನ್ನು ಸಂತೋಷದಿಂದ ಒಪ್ಪಿಕೊಳ್ಳುತ್ತಾನೆ. ಸಮಾಜದ ಪ್ರವಾಹದಲ್ಲಿ ತಾನೂ ಒಬ್ಬನಾಗುತ್ತಾನೆ. ಸಮಾಜದ ಗುಣದೋಷ ವಿಮರ್ಶೆಯನ್ನು ಮಾಡುವ ಗೊಡವೆಗೆ ಅವನು ಹೋಗುವುದಿಲ್ಲ. ಮತ್ತೊಂದು ಬಗೆಯ ಸಾಹಿತಿ ಸಮಾಜದಲ್ಲಿದ್ದರೂ ಅದನ್ನು ದೂರದಿಂದ ನೋಡುವವನಂತೆ ನೋಡಿ ಒಳ್ಳೆಯದು ಮತ್ತೂ ಒಳ್ಳೆಯದಾಗಬೇಕು ಕೆಟ್ಟುದ್ದು ಒಳ್ಳೆಯದಾಗಬೇಕು. ಎಂಬ ಆಸೆಯನ್ನು ತನ್ನ ಕೃತಿಗಳಲ್ಲಿ ಮೂಡಿಸುತ್ತಾನೆ. ಅವನ ಕೃತಿಗಳಲ್ಲಿ ಜೀವನದ ವಿಮರ್ಶೆ ಇರುತ್ತದೆ. ಅವನು ಸುಂದರವಾದ ಕನಸುಗಳನ್ನು ಕಾಣುತ್ತಾನೆ. ಮತ್ತು ಆ ಕನಸುಗಳು ಕಾರ್ಯಗತವಾಗಬೇಕೆಂದು ಆಶಿಸುತ್ತಾನೆ. ಅವನ ಕನಸಿಗೂ ವಾಸ್ತವತೆಗೂ ಅಜಗಜಾಂತರ ವ್ಯತ್ಯಾಸವಿರುವುದರಿಂದ ಅವನು ಯಾವಾಗಲೂ ತನ್ನ ವೈಯಕ್ತಿಕ ಜೀವನವು ಸುಖಮಯವಾಗಿದ್ದರೂ ಅಸುಖಿಯಾಗಿರುತ್ತಾನೆ. ಈ ತೆರನಾದ ಸಾಹಿತಿಗಳಿಂದ ಬಂದ ಸಾಹಿತ್ಯ ಸುಸಂಸ್ಕೃತವಾದ ಓದುಗರ ಮೇಲೆ ಮಹತ್ವದ ಪರಿಣಾಮವನ್ನುಂಟು ಮಾಡುತ್ತದೆ. ಕ್ರಾಂತಿಕಹಳೆಯಾಗುತ್ತದೆ. ಒಂದು ಜೀವಂತ ಪ್ರವಾಹವಾಗಿ ಪರಿಣಮಿಸುತ್ತದೆ.

"ರವಿ ಕಾಣದ್ದನ್ನು ಕವಿ ಕಂಡ" ಎಂಬ ನಾಣ್ಣುಡಿಯಂತೆ ವಾಸ್ತವವಾಗಿಯೂ ಜೀವನದಲ್ಲಿ

ನಾವು ಕಾಣುವಷ್ಟು ವೈಚಿತ್ರ್ಯ ಮತ್ತು ವೈವಿಧ್ಯಗಳನ್ನು ನಾವು ಅನೇಕ ವೇಳೆ ಸಾಹಿತ್ಯದಲ್ಲಿ ಕಾಣಲಾರೆವು. ಸಾಹಿತ್ಯದಲ್ಲಿ ಅಳವಡಿಸಿಕೊಳ್ಳಲ್ಪಡುವ ವಸ್ತುವಿನಲ್ಲಿ ಒಂದು ಆಯ್ಕೆ ಇದೆ, ಒಂದು ನಮೂನೆ ಇದೆ, ಒಂದು ಉದ್ದೇಶವಿದೆ. ಉತ್ತಮ ಸಾಹಿತ್ಯದಲ್ಲಿ ಕಾರಣ ಕಾರ್ಯಗಳ ಒಂದು ಸಂಬಂಧವಿದೆ ನ್ಯಾಯಾನ್ಯಾಯಗಳ ತುಲನವಿದೆ. ಕವಿತಾ ನ್ಯಾಯವಿದೆ. ಜೀವನದಲ್ಲಿ ಒಳ್ಳೆಯವನು ಕಷ್ಟಪಡಬಹುದು. ಕೆಟ್ಟವನು ಸುಖವಾಗಿರಬಹುದು. ಆದರೆ ಉತ್ತಮ ಸಾಹಿತ್ಯವು ತರ್ಕಬದ್ಧವಾಗಿರುತ್ತದೆ. ಒಳ್ಳೆಯದಕ್ಕೆ ಗೆಲವನ್ನೂ, ಕೆಟ್ಟದಕ್ಕೆ ಸೋಲನ್ನೂ ಸೂಚಿಸುತ್ತದೆ. ಆದರೆ ಒಳ್ಳೆಯದು ಮತ್ತು ಕೆಟ್ಟದು ಯಾವುದೆಂಬುದನ್ನು ಸಾಹಿತಿ ಬಹು ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸುವುದರಿಂದ ಸಾಮಾನ್ಯ ಜನರಿಗೆ ಸಾಹಿತ್ಯದಲ್ಲಿ ನ್ಯಾಯಾನಾಯ್ಯಾಗಳ ತುಲನ ಗೋಚರವಾಗದಿರಬಹುದು. ಸೂಕ್ಷ್ಮದೃಷ್ಟಿಯಿಂದ ನೋಡಿದರೆ ಉತ್ತಮ ಸಾಹಿತ್ಯದಲ್ಲಿ ಒಂದು ನೀತಿಯ ವ್ಯವಸ್ಥೆ ಸ್ಪಷ್ಟವಾಗಿ ತೋರಿಬರುತ್ತದೆ. ಒಳ್ಳೆಯವನು ದುಃಖವನ್ನನುಭವಿಸ ಬೇಕಾಗಿ ಬಂದರೆ ಅವನಲ್ಲಿ ಸಾಮಾನ್ಯರ ಕಣ್ಣಿಗೆ ಕಾಣಿಸದ ಯಾವುದೋ ಅಲ್ಪ ದೋಷ ಇದ್ದೇ ಇರುತ್ತದೆ. ಈ ಸಣ್ಣ ದೋಷವೇ ದುರಂತ ದೋಷವಾಗಿ ಪರಿಣಮಿಸಿ ಒಂದು ಕೊಡ ಹಾಲಿಗೆ ಒಂದು ಹನಿ ವಿಷವನ್ನಿಟ್ಟಂತೆ ಆಗುತ್ತದೆ.

ಉತ್ತಮ ಸಾಹಿತ್ಯ ಕೃತಿಗಳು ವ್ಯಕ್ತಿಗಳನ್ನು ಮತ್ತು ಇಡಿ ಮಾನವ ಜನಾಂಗವನ್ನು ಉದ್ಧಾರ ಮಾಡುವ ಶಕ್ತಿಯನ್ನು ಪಡೆದಿರುತ್ತವೆ. ಒಂದೇ ಔಷಧಿ ಎಲ್ಲ ರೋಗಿಗಳಿಗೂ ಉಪಯೋಗವಾಗುವುದಿಲ್ಲ. ಅಂತೆಯೇ ಒಂದೇ ಸಾಹಿತ್ಯ ಕೃತಿ ಎಲ್ಲಾ ಜನಾಂಗಗಳಿಗೂ ಒಂದೇ ಜನಾಂಗದ ಎಲ್ಲ ಜನರಿಗೂ ಒಂದೇ ರೀತಿಯ ಆಕರ್ಷಣೆಯನ್ನು ಬೀರಲಾರದು ಮತ್ತು ಒಂದೇ ರೀತಿಯ ಉಪಯೋಗವನ್ನು ದೊರಕಿಸಿ ಕೊಡಲಾರದು. ಹಲವಾರು ಓದುಗರಿಗೆ ಹಲವಾರು ಅವಸರಗಳಿರುತ್ತವೆ ಸಮಸ್ಯೆಗಳಿರುತ್ತವೆ. ಆ ಅವಸರಗಳಿಗೆ ಮತ್ತು ಸಮಸ್ಯೆಗಳಿಗೆ ಬೇಕಾದ ಪರಿಹಾರ ಮತ್ತು ಉತ್ತರಗಳು ದೊರೆತಾಗ ಆ ವ್ಯಕ್ತಿ ಆ ಕೃತಿಯನ್ನು ಮಹದ್‌ಕೃತಿ, ತನ್ನ ಜೀವನಕ್ಕೆ ಬೆಳಕನ್ನು ಕೊಟ್ಟ ಕೃತಿ ಎಂದು ಗೌರವಿಸುತ್ತಾನೆ. ಹೀಗೆಂದ ಮಾತ್ರಕ್ಕೆ ಎಲ್ಲರಿಂದಲೂ ಮನ್ನಣೆಯನ್ನು ಪಡೆಯಬಲ್ಲ, ಎಲ್ಲರ ಮೇಲೂ ಪರಿಣಾಮವನ್ನು ಬೀರಬಲ್ಲ, ಸಾಹಿತ್ಯ ಕೃತಿಗಳು ಇಲ್ಲವೆಂದಲ್ಲ ಇವೆ. ಆದರೆ ಅವೂಕೂಡ ಹಲವಾರು ವ್ಯಕ್ತಿಗಳ ಮೇಲೆ ಅವರವರ ಅವಸರಗಳಿದ್ದಂತೆ ಹಲವಾರು ಬಗೆಯಲ್ಲಿ ಮತ್ತು ಹಲವಾರು ಮಟ್ಟದಲ್ಲಿ ಪರಿಣಾಮವನ್ನುಂಟು ಮಾಡುತ್ತವೆ.

ಉತ್ತಮ ಸಾಹಿತ್ಯಕೃತಿ, ದುಃಖವನ್ನು ಅನುಭವಿಸುವುದಕ್ಕೆ ಬೇಕಾದ ಸ್ಥೈರ್ಯವನ್ನೂ, ಅದನ್ನು ಎದುರಿಸಲು ಬೇಕಾದ ಧೈರ್ಯವನ್ನೂ ಕೊಡಬಲ್ಲದು. ಒಳ್ಳೆಯದು ಮತ್ತು ಕೆಟ್ಟದ್ದನ್ನು ಜೀವನದಲ್ಲಿ ಗುರುತಿಸುವ ಶಕ್ತಿಯನ್ನು ಕೊಡಬಲ್ಲದು. ಓದುಗನ ಜ್ಞಾನ ಮತ್ತು ವಿವೇಕವನ್ನು ವೃದ್ಧಿಸಬಲ್ಲದು. ಸಮಸ್ಯೆಗಳ ಮಡುವಿನಲ್ಲಿದ್ದಾಗ ಸರಿಯಾದ ತೀರ್ಮಾನವನ್ನು ತೆಗೆದುಕೊಳ್ಳುವ ಸಾಮರ್ಥ್ಯವನ್ನು ಕೊಡಬಲ್ಲದು. ಜೀವನದ ಮೌಲ್ಯಗಳ ಪರಿಚಯವನ್ನು ಮಾಡಿಕೊಟ್ಟು ಸಲ್ಲದ್ದಕ್ಕೆ ಆಸೆಪಡುವುದನ್ನೂ, ಒಳ್ಳೆಯದನ್ನು ತಿರಸ್ಕರಿಸುವುದನ್ನೂ ತಪ್ಪಿಸಿ ಓದುಗನ ನಂದಾದೀವಿಗೆಯಾಗಬಹುದು ಮತ್ತು ಬದುಕನ್ನು ಸುಖಮಯವಾಗಿಯೂ, ಸಂದರವಾದುದಾಗಿಯೂ, ಉಪಯುಕ್ತವಾದುದಾಗಿಯೂ ಮಾಡಬಲ್ಲದು. ಇಷ್ಟೆಲ್ಲಾ ಒಳ್ಳೆಯದು ಉತ್ತಮ ಸಾಹಿತ್ಯದಿಂದ

ಆದರೆ ಇಷ್ಟೇ ಬಗೆಯ ಕೆಡುಕು ಕೆಟ್ಟ ಸಾಹಿತ್ಯ ದಿಂದ ಅಶಿಕ್ಷಿತ ಮತ್ತು ಅಸಂಸ್ಕೃತ ಓದುಗರ ಮೇಲೆ ಆಗುತ್ತದೆ. ಆದುದರಿಂದ ಅನುಭವಿಗಳ ಕೈಲಿ ಉತ್ತಮ ಸಾಹಿತ್ಯಕೃತಿಗಳನ್ನೇ ಕೊಡು ವುದು ಲೇಸು.

ಒಂದು ಸಾಹಿತ್ಯ ಕೃತಿಯ ವಸ್ತು ನಿಜವಾ ದುದಾಗಿರಬಹುದು. ಅದನ್ನು ಜೀವನದಲ್ಲಿ ನಾವು ನೋಡಬಹುದು. ಆದರೆ ತಿಳಿವಳಿಕೆಯಿಲ್ಲದ, ಸಂಶಯವಿಲ್ಲದ, ವಿಮರ್ಶಾತ್ಮಕ ಶಕ್ತಿಯಿಲ್ಲದ ಅಸಂಸ್ಕೃತ ಓದುಗನ ಮೇಲೆ ಅದು ದುಷ್ಪರಿಣಾ ಮವನ್ನುಂಟು ಮಾಡಬಹುದು. ಅವನಲ್ಲಿ ಹುದು ಗಿರುವ ವಾಸನೆಗಳನ್ನು ಕೆರಳಿಸಬಹುದು. ಮತ್ತು ಅಂತಹ ಕೃತಿಯನ್ನು ಓದುವವನು ಅಶ್ಲೀಲ ಸ್ವಭಾವದವನಾದರೆ ಚಿತ್ರಿತವಾಗಿರುವ ಅಶುದ್ಧ ಜೀವನದಿಂದ ಮತ್ತೂ ಹೆಚ್ಚಿನ ಕೆಟ್ಟಜೀವನಕ್ಕೆ ಸ್ಫೂರ್ತಿಯನ್ನು ಪಡೆಯಬಹುದು; ತಾನೊಬ್ಬನೇ ಕೆಟ್ಟವನಲ್ಲ, ತನ್ನಂತೆಯೇ ಅನೇಕರು ಕೆಟ್ಟವರಿ ದ್ದಾರೆ; ಸಾಹಿತ್ಯ ಕೃತಿಯಲ್ಲಿ ಚಿತ್ರಿಸಿರುವಂತೆ ಇತರರನೇಕರು ತನ್ನಂತೆಯೇ ಇರುವುದರಿಂದ ತನ್ನ ನಡೆನುಡಿಗಳು ಸಾಮಾನ್ಯಾನುಭವದುವು, ಅವು ಕೆಟ್ಟವಾಗಿರಲಾರವು ಎಂಬ ಆಲೋಚನಾ ಸರಣಿಗೆ ಆಸ್ಪದಕೊಡಬಹುದು. ಅವನ ದುಷ್ಕೃ ತ್ಯಕ್ಕೆ ಪುಷ್ಟೀಕರಣ ಕೊಡಬಹುದು. ಈರೀತಿ ಆದರೆ ಸಾಹಿತ್ಯದಿಂದ ಸಮಾಜಕ್ಕೆ ಘೋರವಾದ ಕೆಡುಕುಂಟಾಗುತ್ತದೆ. ಆದುದರಿಂದ ಜನಜೀವನ ವನ್ನು ಸಮತೂಕವಾಗಿ ಮತ್ತು ಸಂಪೂರ್ಣವಾಗಿ ನೋಡುವ ಶಕ್ತಿಯುಳ್ಳ ಸಾಹಿತ್ಯಗಳಿಂದ ಬರೆಯ ಲ್ಪಟ್ಟಿರುವ ಉತ್ತಮ ಕೃತಿಗಳನ್ನು ಮಾತ್ರ ಜನ ಸಾಮಾನ್ಯರು ಓದುವುದು ಕ್ಷೇಮಕರವಾದುದು.

ಎಸ್. ಎನ್. ಶಾಂತವೀರಪ್ಪ

# ಭಾರತೀಯ ಶೈವದರ್ಶನದಲ್ಲಿ ಶಿವ

ಭಾರತದ ದರ್ಶನಗಳ ಗುರಿ ಮೋಕ್ಷ. ಆದುದರಿಂದ ಅವನ್ನು ಮೋಕ್ಷಶಾಸ್ತ್ರಗಳೆಂದು ಕರೆಯಬಹುದು. ಮೋಕ್ಷವು ನಮ್ಮ ತತ್ತ್ವಜ್ಞಾನಗಳಲ್ಲಿ ಪರಮ ತತ್ತ್ವ. ಅದೇ ಪರಮ ಸತ್ಯ. ಪ್ರತಿಯೊಂದು ದರ್ಶನವೂ ತನ್ನದೇ ಆದ ವಿಶಿಷ್ಟ ಮೋಕ್ಷೋಪಾಯವನ್ನು ಹೇಳುತ್ತದೆ. ಸೃಷ್ಟಿಕ್ರಮ, ಮರಣೋತ್ತರ ಜೀವನ, ಮಾನಸ ಪ್ರಕ್ರಿಯೆ, ಅತಿಭೌತ ವಿಚಾರ, ದೇವತಾ ಶಾಸ್ತ್ರ, ಉಪಾಸನಾ ವಿಧಾನ, ಆಚಾರ ನೀತಿ, ಮತಧರ್ಮ ಚಿಹ್ನ, ಬಂಧ–ಮೋಕ್ಷಗಳ ವಿವರಣೆ ಮುಂತಾದುವು ಅದಕ್ಕೆ ಅಂಗಗಳಾಗಿ ಬರುತ್ತವೆ. ನಾಸ್ತಿಕ ದರ್ಶನಗಳಲ್ಲಿ ಮಾತ್ರ ಪರಲೋಕ, ಪುನರ್ಜನ್ಮ, ಪರಮೇಶ್ವರರ ಬಗ್ಗೆ ಅಶ್ರದ್ಧೆಯಿರುತ್ತದೆ.

ಆಸ್ತಿಕ ದರ್ಶನಗಳಲ್ಲಿ ಉಪಾಸನಾಮಾರ್ಗವನ್ನು ಹೇಳುವಾಗ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಒಬ್ಬರ ಸರ್ವೋತ್ತಮತೆಯನ್ನು ಉಲ್ಲೇಖಿಸಲಾಗುತ್ತದೆ. ಔಪನಿಷಧಿಕರು ಬ್ರಹ್ಮನನ್ನೂ ವೈಷ್ಣವರು ವಿಷ್ಣುವನ್ನೂ ಶೈವರು ಶಿವನನ್ನೂ ಪರಬ್ರಹ್ಮನ ಅಥವಾ ಪರಮೇಶ್ವರನ ಪಟ್ಟಕ್ಕೇರಿಸುತ್ತಾರೆ. ಅಂಥ ಸರ್ವೋತ್ತಮ ತತ್ತ್ವದ ಸಾನ್ನಿಧ್ಯ, ಸಾರೂಪ್ಯ ಅಥವಾ ಸಾಯುಜ್ಯವು ಮುಮುಕ್ಷುವಿನ ದೃಷ್ಟಿಯಿಂದ ಮೋಕ್ಷವೆನ್ನಿಸುತ್ತದೆ. ಈ ಬ್ರಹ್ಮ–ವಿಷ್ಣು–ಮಹೇಶ್ವರರು ಆರ್ಯರು ಭಾರತಕ್ಕೆ ಬರುವ ಮೊದಲೇ ಇಲ್ಲಿಯ ಹಾಲುಮತದ ಮೂರು ಪರಂಪರೆಗಳ ಆರ್ಯಾಧ್ಯದೈವಗಳಾಗಿದ್ದವೆಂದು ಶ್ರೀ ಶಂ. ಬಾ. ಜೋಶಿಗಳು ಇತ್ತೀಚೆಗೆ ಪ್ರಕಟವಾದ ಅವರ "ಹಾಲುಮತದರ್ಶನ"ದಲ್ಲಿ ವಿವರಿಸಲು ಯತ್ನಿಸಿದ್ದಾರೆ. ಹಾಲು, ನೀರು, ದ್ರವ, ರಸಗಳೆಲ್ಲವೂ ಜಲತತ್ತ್ವವನ್ನು ಸೃಷ್ಟಿಮೂಲವೆಂದು ತಿಳಿದಿದ್ದ ಆರ್ಯೇತರರಲ್ಲಿ ಏಕಾರ್ಥಕ ಪ್ರತೀಕಗಳೆಂದು ತೋರಿಸಲು ಅವರು ಹೊರಟದ್ದುಂಟು.

ಭಾರತೀಯ ಸಂಸ್ಕೃತಿಯಲ್ಲಿ ಶಿವ, ಶುಭ, ಮಂಗಲ ಎಂಬ ಗುಣವಾಚಕಗಳು ಅತ್ಯುಚ್ಚಸ್ಥಾನವನ್ನು ಪಡೆದಿವೆ. ಶಿವದೈವವು ಭಾರತದ ಅತ್ಯಾದಿವಾಸಿಗಳ ಕಾಲದಿಂದಲೂ ಆರಾಧಿಸಲ್ಪಡುತ್ತ ಬಂದಿದೆ ಎಂದು ದೇಶ–ವಿದೇಶಗಳ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಶಿವನ ಸೃಷ್ಟಿಕರ್ತೃತ್ವವನ್ನು ಲಿಂಗಪೂಜೆಯು ಪ್ರಧಾನವಾಗಿ ಎತ್ತಿ ತೋರಿಸುತ್ತದೆ. ವೀರಶೈವ ಮತಧರ್ಮವು ಶೈವಮತಧರ್ಮದ ಒಂದು ಶಾಖೆ. ಕಾಳಿದಾಸನ ಕುಮಾರಸಂಭವವನ್ನೋದಿದರೆ ಗಂಗೆ–ಗೌರೀಶಂಕರಗಳಿಂದೊಡಗೂಡಿದ ಹಿಮಾಲಯ ಪರ್ವತವೇ ಶಿವಮೂರ್ತಿಯ ವಿವಿಧ ಕಲ್ಪನೆಗಳಿಗೆ ಎಡೆಗೊಟ್ಟಿರಬೇಕು ಎನ್ನಿಸುತ್ತದೆ. ಕೈಲಾಸವು ಹಿಮಾಲಯದ ಅಂಗ; ಪಾರ್ವತಿಯು ಹಿಮಾಲಯಪುತ್ರಿ–ಶಿವನು ಕೈಲಾಸಪತಿ, ಪಾರ್ವತೀಪತಿ, ಹಿಮಾಲಯದ ಅಳಿಯ. ಈ ಮಾವ, ಅಳಿಯ, ಮಾವನ ಮಗಳು ಪರ್ವತಮೂಲವುಳ್ಳವರು. ಪರ್ವತವು ವೇದದಲ್ಲಿ ಮೇಘಸಂಕೇತ; ಮೇಘವು ಜಲಾಶ್ರಯ. ಆಕಾಶಗಂಗೆ–ಆಕಾಶಲಿಂಗಗಳ ಉಲ್ಲೇಖವಿಲ್ಲಿ ಸ್ಮರಣೀಯ. ಶಿವನು ಗಂಗಾಧರ, ಗೌರೀ (ಶಿಖರದ)ವರ. ಜಲವು ರುದ್ರನ ಶಿವಮುಖಕ್ಕೆ ಸೂಚಕ; ಅಗ್ನಿಯು ಶಿವನ ರುದ್ರ

ಮುಖಕ್ಕೆ ಸೂಚಕ. ವೇದಾಂತದಂತೆ ಜಲವು ಅಗ್ನಿಜ. ಅಗ್ನಿಯು ಶಿವನ ರೇತಸ್ಸು; ಪುರಾಣದಂತೆ ಅದು ಜಲಸ್ಥ. ಜಲವು ಜಡ; ಜಡಸೃಷ್ಟಿಯ ಮೂಲ ದ್ರವ್ಯ ಅದೆನ್ನಲು ಪೃಥ್ವಿಯು ಜಲಜವೆಂಬ ವೇದಾಂತ ಮತ ಸಾಕು. ಅದು ಶಿವನ ಶಕ್ತಿ; ಶಕ್ತಿಗೂ ಶಕ್ತಿವಂತನಿಗೂ ಭೇದವಿಲ್ಲ. ಶಿವನು ಅರ್ಧನಾರೀಶ್ವರ: ಅರ್ಧ ನೀರು, ಅರ್ಧ ಬೆಂಕಿ, ಉಸಿರಾಡುವ ಪ್ರತಿಯೊಂದು ಜೀವಿಗೂ ನೀರು–ಬೆಂಕಿಗಳು ಅತ್ಯಗತ್ಯ. ಭೂಗರ್ಭದಲ್ಲಿ ಅವೆರಡೂ ಬೆರೆತೇ ಇವೆ; ಲಾವಾರಸವೇ ಆ ಬೆರಕೆ. ಜ್ವಾಲಾಮುಖಿಗಳ ಮುಖಗಳು ಇದನ್ನೆತ್ತಿ ತೋರಿಸುತ್ತವೆ. ಪರ್ವತಗಳ ಲಿಂಗಾಕೃತಿ ಸುವೇದ್ಯ. ಪರ್ವತಗಳು ಭೂಧರರು, ಭೂಭಾರವನ್ನು ಹೊತ್ತಿರುವಂಥವು–ಭೂಮಿಯ ಆಧಾರ ಸ್ತಂಭಗಳು. ಭೂಮಿಯ ಪೀಠ ಅಥವಾ ಯೋನಿ; ಪರ್ವತವು ಮೂರ್ತಿ ಅಥವಾ ಲಿಂಗ—ಆಕಾಶವು ಯೋನಿಯಾದರೆ ಮೇಘವು ಲಿಂಗ. ಪರ್ವತ ಭೂಮಿಗಳು ಮತ್ತು ಆಕಾಶ ಮೇಘಗಳು ಅವಿನಾಭಾವಿಗಳು, ಅನ್ಯವಚ್ಛೇದ್ಯಗಳು. ಸಸ್ಯ–ಪ್ರಾಣಿಗಳು ಆಕಾಶ ಭೂಸೃಷ್ಟಿಯಾದರೆ, ಜ್ಯೋತಿರ್ಗೋಲಗಳು ಆಕಾಶ ಸೃಷ್ಟಿಗಳು. ಈ ಸೃಷ್ಟಿಗಳೆರಡರ ಶರೀರಗಳೂ ಜಡ (lifeless); ಶಿವ ಸ್ವರೂಪದ ಚೇತನೆಯ ಆವರಣ. ಆವೃತ್ತಿಗುಣವುಳ್ಳದ್ದು ಆವರಣ; ಅದು ಚೇತನೆಯನ್ನು ಶರೀರರೂಪದಿಂದ ಆವರಿಸಿರುತ್ತದೆ. ಶರೀರವು ಯೋನಿ, ಚೇತನಾರೂಪದ ಆತ್ಮವು ಲಿಂಗ. ಶರೀರವು ಜಲದಂತೆ ಚಲ; ಆತ್ಮವು ಅಚಲ, ಸ್ಥಾಣು, ಸರ್ವಾವರಣಾಂತರ್ಯಾಮಿ. ಶರೀರ–ಆತ್ಮಗಳೊಂದೆಂದು ತಿಳಿದಿರುವುದು ಜೀವಾತ್ಮಸ್ಥಿತಿ. ಜೀವ–ಜಡಗಳೊಂದೆಂಬ ಅನುಭವ ಬರುವುದು ಶಿವಸ್ಥಿತಿ. ಜೀವ–ದೇಹಗಳ ಮದುವೆಯಿಂದ ಬಂಧ; ಜೀವೋತ್ತಮ (=ಶಿವ) ಜಡೋತ್ತಮೆ (=ಶಕ್ತಿ)ಯರ ಮದುವೆ ಮೋಕ್ಷ (ಜಡ–ಜೀವಾದ್ವೈತ=ಶರೀರ–ಶಿವಾದ್ವೈತ)!

ಜಡದೃಷ್ಟಿಯುಳ್ಳವನು ಬದ್ಧ, ಭವಿ; ಶಿವದೃಷ್ಟಿಯುಳ್ಳವನು ಮುಕ್ತ, ಸ್ವತಂತ್ರ. ಅದರಿಂದಲೇ ಶಕ್ತಿ ಶಿವಾಧೀನ–ಆವರಣವು ಆವೃತಾಧೀನ (ಮುಕ್ತನಲ್ಲ).

ಶಿವನ ಇನ್ನೊಂದು ಹೆಸರಾದ 'ಹರ'ಎಂಬ ಪದಕ್ಕೆ ನೀರು, ಬೆಳಕು ಎಂಬ ಅರ್ಥಗಳಿರುವುದು ಯಾಸ್ಕಸಿದ್ಧ. ಆತನ ರುದ್ರ ಎಂಬ ಹೆಸರಿನ ಮೂಲವು ಕೂಗುವವ (Roarer) ಅಥವಾ ಗರ್ಜಿಸುವವ ಎಂದಿರುವುದನ್ನು ಜೋಗಜಲಪಾತದ 'ರೋರರ್'ಎಂಬ ಪಾತದೊಡನೆ ಹೋಲಿಸಿದರೆ ಶಿವನ ಜಲ ಸಂಬಂಧ ಇನ್ನಷ್ಟು ಸ್ಪಷ್ಟವಾಗುತ್ತದೆ; ಮುಸಲಧಾರೆಯ ಮಳೆಯಲ್ಲೂ ಗರ್ಜಿತವಿರುವುದು ಸುವಿದಿತ; ಗುಡುಗಂತೂ ಮೇಘಗರ್ಜಿತ. 'ಯಾರಲ್ಲಿ ಎಲ್ಲವೂ ಇವೆಯೋ ಅವ ಶಿವ' ಎಂಬುದು ಶಿವನ ಸರ್ವಧಾರಿತ್ವವನ್ನು ಸಾರುವ ವ್ಯುತ್ಪತ್ತಿ. ಮೇಘ, ನೀರು, ವಿಷಗಳೆಲ್ಲವೂ ನೀಲ; ಅವುಗಳಿಂದ ಅವ ನೀಲಕಂಠ. ಶಿವವೆಂದರೆ ಯೋಗಕ್ಷೇಮ, ಅಭಿವೃದ್ಧಿ, ಪರಮಾನಂದ, ಮುಕ್ತಿ ಮುಂತಾದ ಅರ್ಥಗಳಾಗುವುದಲ್ಲದೆ, ನೀರೆಂದೂ ಆಗುತ್ತದೆ.

ತಮಿಳಿನಲ್ಲಿ 'ಅಳಕಂ' ಎಂದರೆ ನೀರು. ಗಂಗಾಧರ ಹೊತ್ತ ಗಂಗೆಯ ಮೂಲನಾಮ ಅಲಕನಂದೆ ಎಂದು. ಅಲಕನಂದೆ ಹಿಮಾಲಯದಲ್ಲಿ ಹುಟ್ಟಿ ಗಂಗೆಯನ್ನು ಸೇರುವ ನದಿಯೆಂದು ಮಹಾಭಾರತದ ಹೇಳಿಕೆ. ಅಲಕೆ ಕುಬೇರನ ರಾಜಧಾನಿ. ಕುಬೇರನು ಶಿವನ ಸ್ನೇಹಿತ. ಸಂಸ್ಕೃತ "ಅಲಕಕ್ಕೆ" ಕುರುಳೆಂಬ ಅರ್ಥವಿದ್ದರೂ ಅದರ "ಅಲಗರ್ದ"ಕ್ಕೆ "ಜಲನಾಗ" ಎಂಬ ಅರ್ಥವಿರುವುದು. 'ಅಲ' (ಅಲಕ) ಎಂಬುದು ಮೂಲತಃ

ಜಲವಾಚಕವಾಗಿರಬೇಕೆಂಬುದನ್ನು ಸೂಚಿಸುತ್ತದೆ. ಗಂಗಾಧರನು ಜಲಧರ, ಜಲಜನಕ, ರುದ್ರಸ್ವರದ ವಿದ್ಯುದ್ ದೃಷ್ಟಿಯ ವಾತೇರಿತ ಮೇಘದ ಅಧಿಷ್ಠಾನ ದೇವತೆ ಎಂಬುದು ರುದ್ರ–ಶಿವನ ವ್ಯಕ್ತಿತ್ವವಿಕಾಸದ ಒಂದು ಘಟ್ಟ.

ರುದ್ರ–ಶಿವನು ಅಥವಾ ಶಿವ ಆರ್ಯಪೂರ್ವದ ಭಾರತೀಯ (ದ್ರಾವಿಡ) ದೇವತೆಯೆಂದು ಕೆಲವರೆಂದುದುಂಟು. ದ್ರಾವಿಡರು ಭಾರತಕ್ಕೆ ಬರುವ ಮೊದಲು ಏಶಿಯದ ವಾಯುವ್ಯ ಮತ್ತು ಉತ್ತರ ದಿಕ್ಕುಗಳ ಗಡಿಯ ಆ ಈ ಸ್ಥಳದಲ್ಲಿದ್ದರೆಂದು ಕೆಲವರ ಮತ. ಈ ಎರಡು ಅಭಿಪ್ರಾಯಗಳಿಂದ ಆರ್ಯ–ದ್ರಾವಿಡ ಸಂಪರ್ಕವು ಭಾರತದಲ್ಲಿ ಮಾತ್ರ ನಡೆಯಿತೆಂಬ ತೀರ್ಪು ಭಂಗವಾಗುತ್ತದೆ. ಅವರಿವರ ದೇವರುಗಳೂ ಮಾತುಗಳೂ ಅವರಿಬ್ಬರೂ ಭಾರತವನ್ನು ಹೊಗುವ ಮೊದಲೇ ಅಲ್ಲಿ ಇಲ್ಲಿ ಏಕೀಕೃತವಾಗಿರಬಹುದಾಗುತ್ತದೆ. ದ್ರಾವಿಡ ಕೋಲ (ನೀಗ್ರೋ)–ಮುಂಡರ ಸಂಪರ್ಕಗಳೂ ಹಾಗೇ ಅವರು ಭಾರತವನ್ನು ಪ್ರವೇಶಿಸುವ ಮೊದಲೇ ಆಫ್ರಿಕ–ಏಶಿಯಗಳ ಆ ಈ ಭಾಗಗಳಲ್ಲಿ ಐದಾರು ಸಾವಿರ ವರ್ಷಗಳ ಹಿಂದಿನ ಅವಧಿಗಳಲ್ಲಿ ನಡೆದಿರುವ ಸಂಭವವಿದೆ. ಆದುದರಿಂದ ಕೆಲವೊಮ್ಮೆ ಒಂದು ಪದಗಳು ಈ ನಾಲ್ಕು ಕುಲಗಳ ಜನರ ಒಂದಲ್ಲ ಒಂದು ಭಾಷೆಯಲ್ಲಿ ಅಥವಾ ಉಪಭಾಷೆಯಲ್ಲಿ ಅಲ್ಪಸ್ವಲ್ಪ ವ್ಯತ್ಯಸ್ತವಾದ ರೂಪದಲ್ಲಿ ಮತ್ತು ಅರ್ಥದಲ್ಲಿ ಬಳಕೆಯಲ್ಲಿರುವುದು ಕಂಡುಬಂದರೆ, ಅದು ಐತಿಹಾಸಿಕವಾಗಿ ಮೊಟ್ಟ ಮೊದಲು ಯಾರ ಭಾಷೆಯಲ್ಲಿತ್ತು? ಎಂಬುದನ್ನು ಇಂದು ಯಾರು ನಿಃಸಂದೇಹವಾಗಿ ಹೇಳಲಾರರು. ಶಿವಪದವು ಅಂಥ ಪದಗಳ ವರ್ಗಕ್ಕೆ ಸೇರಿದ್ದು.

ಋಗ್ವೇದ–ಅಥರ್ವಣ ವೇದಗಳಲ್ಲಿ ರುದ್ರ ಪದವನ್ನು ಅಶ್ವಿನೀ ದೇವತೆಗಳು, ಅಗ್ನಿ, ಇಂದ್ರ, ಮಿತ್ರ, ವರುಣ ಮತ್ತು ಸ್ವಷ ಎಂಬ ದೇವತೆಗಳಿಗೆ ವಿಶೇಷಣವನ್ನಾಗಿ ಬಳಸಿದುದು ಕಂಡುಬರುತ್ತದೆ. ಇದನ್ನು ನೋಡಿದರೆ ಮೊದಲು ವಿಶೇಷಣವಾಗಿದ್ದ ರುದ್ರನು ಕಾಲಾಂತರದಲ್ಲಿ ವಿಶೇಷ್ಯತೆಯನ್ನು ಹೊಂದಿ God of tempests ಬಿರುಸಾಗಿ ಮಳೆ ಮೋಡಗಳನ್ನು ಹೊತ್ತು ಬೀಸುವ ನಿಸರ್ಗ ಶಕ್ತಿಯ ಅಧಿದೇವನಾಗಿ ಮಾರ್ಪಟ್ಟಿರಬೇಕೆನ್ನಿಸುತ್ತದೆ. ಈ ವಿಧ್ವಂಸಕ ದೇವತೆಯ ಪ್ರಸನ್ನ ಮುಖವೇ 'ಶಿವ' (Benevolent) ಅಥವಾ ಶುಭ. ಅವನಿಗೆ ಉರಿಸುವ, ತಣಿಸುವ ಗುಣಗಳೆರಡೂ ಅಂದೇ ಪ್ರಸಿದ್ಧವಾಗಿದ್ದಂತೆ ತೋರುತ್ತದೆ. ತಣಿಸುವ ಔಷಧಗಳನ್ನು ಕೊಡುವಾಗ ಆತನು "ಜಲಾಷಭೇಷಜನು". ವೇದದಲ್ಲಿ ಶಿವನ ಪದವು ಕೇವಲ ವಿಶೇಷಣವಾಗಿದೆ. ಪುರಾಣದಲ್ಲಿ ಅದು ಪ್ರಸಿದ್ಧ ಅಂಕಿತನಾಮ. ವೈದಿಕ ರುದ್ರನು ಅಂತರಿಕ್ಷದ ಜಲಸಂಪರ್ಕವಿದ್ದರೂ ಹೆಚ್ಚಾಗಿ ಬೆಂಕಿ, ಬೆಳಕು, ವಿದ್ಯುತ್ತು, ಮೇಘ, ಗುಡುಗುಗಳ ಪ್ರಭಾವದಿಂದ ವಿಧ್ವಂಸಕತೆಯನ್ನು ಪ್ರಧಾನವಾಗಿ ಪ್ರದರ್ಶಿಸಿದರೆ, ಪುರಾಣ ಶಿವನು ಭೂಲೋಕದಲ್ಲಿರುವ ನದಿ, ಗುಡ್ಡ, ಬೆಟ್ಟ, ನೀರು, ನೆಲ, ಶಿಖರ, ನಾಗ ಮುಂತಾದವುಗಳ ಪ್ರಭಾವದಿಂದ ಭಯಂಕರವಾಗಿರುವ ತನ್ನ ಆಕಾರವನ್ನು ಮರೆಯಿಸುವಷ್ಟು ಭಕ್ತದಯಾಪರತೆಯನ್ನು ಪ್ರದರ್ಶಿಸುತ್ತಾನೆ. ಈ ಉಷ್ಣ–ಶೀತ ಮೂರ್ತಿಗಳ ಬೆರಕೆ–ಎರಕಗಳು ಪೂರ್ಣವಾದುದು ಪುರಾಣಗಳಲ್ಲಿ.

ಉಪಲಬ್ಧ ಮಹಾಪುರಾಣಗಳ ಪ್ರಾಚೀನತಮವಾದ ಭಾಗಗಳಲ್ಲಿ ಒಂದು ಕ್ರಿ. ಪೂ. ೩





ನೆಯ ಶತಮಾನಕ್ಕಿಂತ ಹಿಂದಿನದೆಂದು ಹೇಳುವ ಧೈರ್ಯ ಈವರೆಗೆ ಯಾರಿಗೂ ಬಂದಿಲ್ಲವಾದರೂ ಆವುಗಳಲ್ಲಿಯ ದೇವ–ಧರ್ಮ ವಿಚಾರಗಳಲ್ಲೆಷ್ಟೋ ವೇದಪೂರ್ವಕಾಲದಿಂದಲೂ ಮುಖಾಮುಖಿಯಾಗಿ ಗುರು–ಶಿಷ್ಯ ಪರಂಪರೆಗಳ ಮೂಲಕ ನಡೆದು ಬಂದಂಥವೆಂದು ಹಲ–ಕೆಲ ಸಂಶೋಧಕರು ನಂಬುತ್ತಾರೆ. ಒಮ್ಮೆ ಮತಾಂತರ ಹೊಂದಿ, ಭಾರತೀಯ ಆರ್ಯರ ಆದಿಕಾಲದಲ್ಲಿ (ಸುಮಾರು ಕ್ರಿ. ಪೂ. ೨೦೦೦ ವರ್ಷಗಳ ಹಿಂದೆ) ರುದ್ರತ್ವಹೊಂದಿರಬಹುದಾದ ಆರ್ಯೇತರ ದೇವತೆ ಆರ್ಯಸಹಜವಾದ ಅಂತರಿಕ್ಷ ತೇಜಸ್ಸಿನ ಗುಣಗಳಿಂದ ತುಂಬಿ ರುದ್ರಾಕ್ಷನಾಗಿ ಕಂಗೊಳಿಸಿದರೂ ಆರ್ಯರ ದೇವಾಧಿದೇವನಾದ ಇಂದ್ರನಿಗೆ ಸಮಾನನಾಗಲಾರದಾದನು. ವಿಷ್ಣುವಿನಂತೆ ಅಥವಾ ಪ್ರಜಾಪತಿ ಬ್ರಹ್ಮನಂತೆ ಇವನು ಗೌಣಸ್ಥಾನವನ್ನು ಅಲಂಕರಿಸಬೇಕಾಯಿತು. ಆದರೆ ಕಾಲಹೋದ ಹಾಗೆ ಆರ್ಯಸಂಸ್ಕೃತಿಯು ಆರ್ಯಪೂರ್ವ ಭಾರತೀಯರ (ನೀಗ್ರೋ–ಮುಂಡ–ದ್ರಾವಿಡ ಅಥವಾ ಕಂದಮಿಳ) ಸಂಸ್ಕೃತಿಯ ಅನೇಕಾಂಶಗಳನ್ನು ಹೀರಿಕೊಂಡು ಅದರ ಗತಪ್ರಭಾವಕ್ಕೆ ವಶವಾಗುತ್ತ ಹೋದ ಹಾಗೆ, ಹತಪ್ರಭರಾಗಿ ಅಲ್ಲಿಯ ವರೆಗೆ ಅಜ್ಞಾತ ಅಲ್ಪಜ್ಞಾತರಾಗಿ ವೈದಿಕ ದೇವತಾರಾಜ್ಯದಲ್ಲಿ ವಾಸಿಸುತ್ತಿದ್ದ ಹರಿ–ಹರ ಬ್ರಹ್ಮರು ಪುನಃ ಸಿಂಹಾಸನಾರೂಢರಾದರು. ಆಗ ಸರ್ವೋತ್ತಮತೆಯ ಸ್ಪರ್ಧೆ ಆರಂಭವಾದದುರಿಂದ ತ್ರಿಮೂರ್ತಿಗಳು ಕಾರ್ಯಕ್ಷೇತ್ರ ಭೇದವನ್ನು ಕಲ್ಪಿಸಿಕೊಂಡು ಸ್ಥಿತಿ–ಲಯ–ಸೃಷ್ಟಿಕರ್ತರಾಗಿ ಆಡಳಿತ ನಡೆಸತೊಡಗಿದರು. ಮೂರು ಮೂರ್ತಿಗಳಲ್ಲಿ ತತ್ತ್ವಜ್ಞಾನಿಗಳ ರಾಜ್ಯಕ್ಕೆ ಬ್ರಹ್ಮ ಸೇರಿ ಹೋದುದರಿಂದ ಜನಪ್ರಿಯ ಪೂಜೆಗಳನ್ನು ಪಡೆಯಲು ಅವನು ಸ್ಪರ್ಧಿಸದೆ ದೂರ ಉಳಿದನು. ಭಾರತದಲ್ಲಿ ಬ್ರಹ್ಮ ದೇವಾಲಯಗಳು ಅತ್ಯಂತ ವಿರಳವಾಗಲು ಅದೇ ಕಾರಣ. ಆದರೆ ಹರಿ–ಹರರ ಅನುಯಾಯಿಗಳು ಆಗ ಈಗ ತಮ್ಮ ತಮ್ಮ ನಾಯಕ ದೇವತೆಯೇ ಸರ್ವೋತ್ತಮವೆಂದು ಸಾಧಿಸಿದ್ದೂ ಎಷ್ಟೋಸಲ ರಾಜಿಮಾಡಿಕೊಂಡು ಅವರಿಬ್ಬರ ಸಮಾನತೆಯನ್ನೋ ಐಕ್ಯವನ್ನೋ ಒಪ್ಪಿಕೊಂಡದ್ದೂ ತಿಳಿದು ಬರುತ್ತದೆ. ಅವರ ಮೇಲುಕೀಳುತನಗಳನ್ನು ನಂಬಿ, ಆಡಿ, ಬರೆದು, ಅರೆದು, ಒರೆದು ನಿರ್ಲಜ್ಜಕೇಕೆಗಳನ್ನು ಹಾಕುವವರೂ ಈಗ ಇದ್ದಾರೆ. ಹರಿದ್ವಾರ–ಹರದ್ವಾರ, ಹರಿಕಥೆ–ಹರಕಥೆಗಳ ಸ್ಪರ್ಧಾಲುತ್ವದ ಪ್ರಸಾರ ಈಗಲೂ ನಡೆಯುತ್ತಿರುವುದು ಅನುಭವಸಿದ್ಧ. ದಾಸಪಕ್ಷಪಾತ–ಶರಣಪಕ್ಷಪಾತಗಳು ಸಾಹಿತ್ಯ ವಿಮರ್ಶೆಯಲ್ಲೂ ಉದ್ಭವಿಸಿವೆ! ಸಾಹಿತ್ಯವು ಜೀವನದ ಪ್ರತಿಬಿಂಬವಲ್ಲವೇ? ಹುಡುಗರ ಪದ್ಯಗಳು ಇದಕ್ಕೆ ದೃಷ್ಟಾಂತ ನೀಡುತಿಲ್ಲವೇ? Texts give contexts!

ಮೂಲತಃ ಶಿವಗುಣ ಸಂಪನ್ನನಾದ ದೇವತೆಯು ಆರ್ಯೀಕೃತನಾದಾಗ ರುದ್ರನಾಗಿ, ಅನಂತರ ರುದ್ರ–ಶಿವನಾಗಿ ಆಮೇಲೆ ವಿಷ್ಣುಮಿತ್ರನಾಗಿ ಬಳಿಕ ವಿಷ್ಣುಶತ್ರುವಾಗಿ ಭಾರತೀಯರ ಕೆಲಗುಂಪುಗಳಿಗೆ ಕಾಣಿಸುತ್ತ ಬಂದುದು ವೇದಕಾಲದಿಂದ ಹಿಡಿದು ಇಂದಿನ ಕಾಲದ ವರೆಗಿನ ವಿಶಾಲ–ವಿವಿಧ ವಾಙ್ಮಯ ಪ್ರಪಂಚವನ್ನು ವೈನತೇಯ ದೃಷ್ಟಿಯಿಂದ ಅವಲೋಕಿಸಿದರೆ ಸ್ಪಷ್ಟವಾಗುತ್ತದೆ. ಹಾಗೇ ವಿಷ್ಣುವಾದರೂ (ಅಥವಾ ಬ್ರಹ್ಮನಾದರೂ) ಮೂಲತಃ ಶಿವ–ಶಾಂತಗುಣಗಳಿಂದೊಡಗೂಡಿದ್ದು, ಸಾವಿರಾರು ವರ್ಷಗಳಲ್ಲಿ ಸಂಮಿಶ್ರವಾದ ವಿವಿಧ ಸಂಸ್ಕೃತಿ ಪ್ರವಾಹಗಳಲ್ಲಿ ಹೊಕ್ಕು ಹೊರಟು, ಅದೇ ಮೇರೆಗೆ ವಿಷ್ಣು–ನಾರಾಯಣ–ವಾಸುದೇವ ಕೃಷ್ಣ–ವಿಟ್ಠಲನಾಗಿ,

ಶಿವಮಿತ್ರನಾಗಿ, ಬಳಿಕ ಶಿವಶತ್ರುವಾಗಿ ಭಾರತೀಯರ ಕೆಲಗುಂಪುಗಳಿಗೆ ಕಾಣಿಸಿದ್ದೂ ಸುಪ್ರಸಿದ್ಧ. ಸಾಹಿತ್ಯ–ಸಂಗೀತ–ಚಿತ್ರ–ಶಿಲ್ಪಕೃತಿಗಳಲ್ಲಿ ವಿಷ್ಣು ಪ್ರಾಧಾನ್ಯ–ಶಿವ ಪ್ರಾಧಾನ್ಯಗಳ ನಿದರ್ಶನಗಳು ಹೇರಳವಾಗಿ ಸಿಕ್ಕುವುದರಿಂದ ವೈಷ್ಣವ ಶೈವ ಪರಂಪರೆಗಳ ಐತಿಹಾಸಿಕ ದೀರ್ಘತೆ ಆಶ್ಚರ್ಯಪಡಿಸುವಂತಿದೆ. ಮತ್ತೆ ರುದ್ರನತ್ತ ಕಣ್ಣು ಹೊರಳಿಸೋಣ:

ವೇದಗಳಲ್ಲಿ ರುದ್ರರ ಸಂಖ್ಯೆ ೧೧. ವಾಯು ಪುರಾಣದಂತೆ ಅಜೈಕಪಾತ್, ಅಹಿರ್ಬುಧ್ನ್ಯ, ಹರ, ನಿರ್‌ಋತ, ಈಶ್ವರ, ಭುವನ, ಅಂಗಾರಕ, ಅರ್ಧಕೇತು, ಮೃತ್ಯು, ಸರ್ಪ, ಕಪಾಲಿ–ಎಂಬಿವೇ ಅವರ ಹೆಸರುಗಳು. ಶಿವನ ೮ ರೂಪಗಳಲ್ಲಿ ರುದ್ರ ರೂಪವೊಂದೆಂದು ವಿಷ್ಣುಪುರಾಣ ಹೇಳಿದೆ. ರುದ್ರ ಎಂದು ಒಂದು ಜನವರ್ಗಕ್ಕೂ ಹೆಸರಿತ್ತಂತೆ. ವಿಷ್ಣುಪುರಾಣದಲ್ಲಿ ಅಜೈಕಪಾತ್, ಅಹಿರ್ಬುಧ್ನ್ಯ, ತ್ವಷ್ಟೃ, ರುದ್ರ, ಹರ, ಬಹುರೂಪ, ತ್ರ್ಯಂಬಕ, ವೃಷಾಕಪಿ, ಶಂಭು, ಕಪರ್ದಿ, ರೈವತರು ಏಕಾದಶ ರುದ್ರರು. ಮಹಾಭಾರತದ ಪ್ರಕಾರ ಮೃಗವ್ಯಾಧ, ಸರ್ಪ, ನಿಋತಿ, ಅಜೈಕಪಾತ್, ಅಹಿರ್ಬುಧ್ನ್ಯ, ಪಿನಾಕಿ, ದಹನ, ಈಶ್ವರ, ಕಪಾಲಿ, ಸ್ಥಾಣು, ಭಗ–ಎಂಬಿವೇ ಆ ರುದ್ರ ನಾಮಗಳು. ಅಗ್ನಿ, ಶರ್ವ, ಸರ್ವ, ಪಶುಪತಿ, ಉಗ್ರ ಅಶನಿ, ಭವ, ಮಹಾದೇವ, ಈಶಾನ, ಮೃಗವ್ಯಾಧ, ಘೋರ, ತ್ರಿಕಾಂಡಿ (ತ್ರಿಶೂಲಿ), ಶತಶೀರ್ಷ, ಸಹಸ್ರಾಕ್ಷ, ಮಹಸ್ ಎಂಬಿವು ರುದ್ರ–ಶಿವನ ನಾಮಾಂತರಗಳಂತೆ. ಈ ನಾಮಗಳೆಲ್ಲ ಮೊದಲು ವಿಶೇಷಣಗಳಾಗಿದ್ದಿರಬೇಕು. ಅವನ್ನು ವಿವಿಧ ದೇವತೆಗಳಿಗೆ ಅನ್ವಯಿಸಿ ಹೇಳಿರಬೇಕು. ಇಂಥ ಪಟ್ಟಿಗಳಲ್ಲಿ ಒಂದು ದೇವತೆಗೆ ವಿಶಿಷ್ಟವಾದ ವಿಶೇಷಣಗಳಲ್ಲದೆ ನಾಲ್ಕಾರು ದೇವತೆಗಳಿಗೆ ಸಾಧಾರಣವಾದ ವಿಶೇಷಣಗಳೂ ಬರುತ್ತವೆ: ಒಂದು ಸ್ವತಂತ್ರ ದೇವತೆಯ ನಾಮವೂ ವ್ಯುತ್ಪತ್ತಿಯನ್ನಾಧರಿಸಿ ಇತರ ಪ್ರತ್ಯೇಕ ದೇವತೆಯ ವಿಶೇಷಣವಾದ ಅಂಶವೂ ಕಂಡುಬರುತ್ತದೆ. ಕ್ರಿ. ಪೂ. ೫೦೦೦ ವರ್ಷಗಳಿಂದ ದೇವರ ಹಾಗೂ ಅವರ ವಿಶೇಷಣಗಳ ಏಕೀಕರಣ, ಅನೇಕೀಕರಣ, ನಾಮುಕರಣ, ಮತ್ತು ನಾಮುಗಳ ವಿಶೇಷಣಕರಣ ಕಲ್ಪಿಸಲಾರದಷ್ಟು ಸಂಭವಿಸಿದ್ದಕ್ಕೆ ಮೇಲಿನ ಪಟ್ಟಿಯೊಂದು ತಕ್ಕ ದೃಷ್ಟಾಂತ.

ಪುರಾಣೋಕ್ತವಾದ ಶಿವಮೂರ್ತಿಯ ವರ್ಣನೆ ಜನಜನಿತ. ಕೃಷ್ಣವರ್ಣ (ಕಾಲ), ಕಾಲರೂಪ, ಕಾಲೀಪತಿ, ಲಿಂಗ ಸಂಕೇತ, ಅರ್ಧನಾರೀಶ್ವರ, ತ್ರ್ಯಂಬಕ (ಮೂರುಕಣ್ಣುಗಳು ಭೂತ, ವರ್ತಮಾನ, ಭವಿಷ್ಯತ್ಕಾಲಗಳನ್ನು ಸೂಚಿಸುತ್ತವೆ), ಚಂದ್ರಶೇಖರ (ಬಿದಿಗೆಯ ಚಂದ್ರನ ಆಕೃತಿ ಹಣೆಗಣ್ಣ ಮೇಲಿದ್ದು ತಿಂಗಳ ಪ್ರಕಾರ ಕಾಲವನ್ನು ಅಳೆಯುವುದಂತೆ), ನಾಗಕಂಠ (ನಾಗವು ವರ್ಷದ ಸಂಕೇತವಂತೆ), ಕಪಾಲ ಮಾಲಾಧರ, ಸರ್ಪಭೂಷಣ (ಈ ಸರ್ಪಗಳು ಯುಗಗಳ ಅನವರತವಾದ ಪರಿವರ್ತನ–ಆವೃತ್ತಿಗಳನ್ನು ಸೂಚಿಸುತ್ತವೆ), ಜಟಾಧರ, ಗಂಗಾಧರ, ನೀಲಕಂಠ (Having a dark-blue (neck, ತ್ರಿಶೂಲಧರ (ಪಿನಾಕಧರ), ಢಮರುಧರ, ಪ್ರಥಮಗಣ ಸೇವಿತ, ಮದ್ಯಪ ಮತ್ತು ನಟರಾಜ (ತಾಂಡವಮುಗ್ನ) ಅವನು ಮಹಾತಪಸ್ವಿ, ಕಾಮಾರಿ, ಭಸ್ಮಧಾರಿ, ರುದ್ರಾಕ್ಷಮಾಲಾಧರ, ತ್ರಿಪುರಾಂತಕ, ಕೈಲಾಸವಾಸ, ಕಾಶೀವಿಶ್ವನಾಥ, ಸಾವಿರದೆಂಟು ಹೆಸರುಗಳನ್ನುಳ್ಳವನು! ಪ್ರಲಯ ಕಾಲದಲ್ಲಿ ಬ್ರಹ್ಮ–ವಿಷ್ಣು ಸಮೇತವಾದ ಇಡಿ ವಿಶ್ವವನ್ನು ಸುಡುವವನು!

ಈಶ್ವರನ ಮೈಯನ್ನು ಸುತ್ತಿಕೊಂಡಿರುವ ನಾಗಗಳು ಸತತ ಸುತ್ತುವ ಯುಗಮಾಲಿಗಳನ್ನಲ್ಲದೆ, ವಿವಿಧ ಮಾನವ ಕುಲಗಳ (Races) ಉದಯಾಸ್ತಗಳನ್ನೂ ಸಂಕೇತಿಸುವುವಂತೆ. ಡಾರ್ವಿನ್ನನ ವಿಕಾಸವಾದದ ಕಾಲಪರಿಣಾಮುವನ್ನು ನೆನೆಸಿದರೆ Age of Reptiles ಆವಿರ್ಭಾವದಿಂದ ಆರಂಭವಾದ ಜೀವವಿಕಾಸಕ್ರಮವು ಹಾವು-ಹರಣೆಗಳ ಮಟ್ಟವನ್ನು ಮುಟ್ಟಿದಾಗ ಈಶ್ವರನ ಯುಗ ಆರಂಭವಾಯ್ತೆನ್ನಬಹುದೇ? ಸಾಧ್ಯವಿಲ್ಲ. ಅಂದಿನ ನಾಗಯುಗದಲ್ಲಿರುವಂತೆ ಇಂದೂ ನಾಗಗಳಿವೆ. ಅಲ್ಲದೆ ಆವಿರ್ಭಾವದಿಂದ ಮನುಷ್ಯನವರೆಗಿನ ವಿಕಾಸಯುಗಗಳು ಅಸಂಖ್ಯವಾಗಿ ಬಂದು ಹೋಗುತ್ತವೆ ಎನ್ನುವುದು ಸರ್ಪ ಸಂಕೇತ. ಆವಿರ್ಭಾವದ ಹಿಂದೆ ಮತ್ತು ಮಾನವನ ಮುಂದೆ ಬೇರೆ ಬೇರೆ ಯುಗಗಳು ಆಗಿರಬಹುದು, ಬರಬಹುದು! Revolution ಚಕ್ರಾರ ಪಂಕ್ತಿರಿವ ಗಚ್ಛತಿ—ಎಂಬುದೇ ವಿಶ್ವದ ಪ್ರಗತಿಕ್ರಮವಲ್ಲದೆ, ಗನೆಯ ಮೆಟ್ಟಲಿನಿಂದ ಅನಂತ ಮೆಟ್ಟಲುಗಳನ್ನೇರುತ್ತ ಹೋಗುವ (ಮಾನವ) ಜೀವಿಯ ಪ್ರಗತಿಯ ಕಲ್ಪನೆಗೆ ಅರ್ಥವಿದೆಯೇ? ಅಂಥ ಕಲ್ಪನೆಗೆ ಲಿಂಗ (ಕಾರಣ ಸಮರ್ಥನೆ) ಇಲ್ಲ. ಶಿವಲಿಂಗವು ಸೂಚಿಸುವುದು ವೃತ್ತಗತಿಯನ್ನು—ಬೇಕಾದರೆ ಅಂಡಾಕೃತಿಯ ದೀರ್ಘವೃತ್ತಗತಿಯನ್ನೆಂದು ತಿದ್ದಿಕೊಳ್ಳಬಹುದು! ಬ್ರಹ್ಮಾಂಡ ಇರುವುದು ಹಾಗೇ ಅಲ್ಲವೇ? ಶಿವನ ತ್ರಿಶೂಲದ ಮೂರು ಮೊನೆಗಳು ಅವನ ಸೃಷ್ಟಿ-ಸ್ಥಿತಿ-ಲಯ ಕರ್ತೃತ್ವವನ್ನು ಕ್ರಾಂತಿಗತಿಯಿಂದಲೇ ಸೂಚಿಸುವುವೆಂದು ಕೆಲವರೆಂಬುದು ಈ ದೃಷ್ಟಿಯಿಂದಲೇ. ವಿಷ್ಣುವಿನ ದಶಾವತಾರದ ಪ್ರಖ್ಯಾತಿ ಶಿವನಿಗಿಲ್ಲವಾದರೂ ಕೆಲ ಪುರಾಣಗಳಲ್ಲಿ ಅದಕ್ಕೂ ಹೆಚ್ಚು ಸಂಖ್ಯೆಯ ರೂಪಗಳನ್ನು ಶಿವನಿಗೆ ಹೇಳಿದ್ದುಂಟು. ವೀರಭದ್ರ, ಖಂಡೋಬಾ ಮತ್ತು ಲಜನ ಭೈರವರು ಈಶ್ವರ ರೂಪಗಳೆಂದು ಹೇಳುವ ರೂಢಿಯಿದೆ. ಹಾಗೇ ಭೀಮ-ಹನುಮರು ರುದ್ರಾವತಾರಗಳೆಂಬ ಪರಂಪರೆಯೂ ಸುಪ್ರಸಿದ್ಧ. ಬ್ರಹ್ಮಾಂಡವನ್ನು ಸುಟ್ಟು ಬೂದಿ ಮಾಡಿ, ಆ ಬೂದಿಯನ್ನು ಮೈಗೆ ಬಳಿದು ಕೊಳ್ಳುವ ಶಿವನ ಪರಾಕ್ರಮದ ಕಲ್ಪನೆ ಮಹಾಕವಿಗಳವಲ್ಲ, ಬ್ರಹ್ಮ ಕವಿಗೆಸಾಧ್ಯ, ರುದ್ರ ಕವಿಗೊಬ್ಬನಿಗೆ ಮಾತ್ರ ಶಕ್ಯ!

ಶಿವನ ರುದ್ರಸ್ವರೂಪವನ್ನೂ ರುದ್ರನ ಶಿವಸ್ವರೂಪವನ್ನೂ ಅರ್ಥಮಾಡಿಕೊಂಡ ದಾರ್ಶನಿಕ ಕವಿ ಭಾರತದ ವಿವಿಧ ಕುಲಗಳ ಸಂಮಿಶ್ರಣ ಮುಗಿದ ಮೇಲೆ ಹುಟ್ಟಿದವನಾಗಿರಬೇಕು. ರುದ್ರನು ಅಧೃಷ್ಯನು, ಶಿವನು ಅಭಿಗಮ್ಯನು; ರುದ್ರ-ಶಿವನು ಸಮುದ್ರದಂತೆ ಯಾದೋರತ್ನಗಳಂತಹ ಗುಣಗಳಿಂದ ತುಂಬಿದ ವಿಚಿತ್ರ ವ್ಯಕ್ತಿತ್ವ ಸಂಪನ್ನನು. ನಿರಂಕುಶ ಪ್ರಭುತ್ವ ಮತ್ತು ಪ್ರಜಾಪ್ರಭುತ್ವಗಳೆರಡನ್ನೂ ಸಮನ್ವಯಿಸಿ ನಡೆಸುವ ಆಡಳಿತದ ದುರೂಹ್ಯ ಸ್ವರೂಪದಂತಿದೆ ಆತನ ರುದ್ರಶಿವತ್ವ! ಅವನು ಪಂಚ (ಐದು) ಆನನ (ಮುಖ)ಗಳನ್ನುಳ್ಳವನ್ನಾಗಿ ಪ್ರಪಂಚವನ್ನೇ ಪ್ರತಿನಿಧಿಸುತ್ತಾನೆ. ಪಂಚಭೂತಗಳು, ಮನಸ್ಸು, ಅಹಂಕಾರ, ಪ್ರಕೃತಿ (matter)ಗಳೂ ಅವನ ಎಂಟು ಮೂರ್ತಿಗಳು; ಅಥವಾ ಕಾಳಿದಾಸ ಹೇಳಿದಂತೆ ಪಂಚಭೂತಗಳು ಸೂರ್ಯ, ಚಂದ್ರ ಮತ್ತು ಯಜ್ಞ ಮಾಡುವ ಹೋತಾರ ಎಂಬ ಎಂಟು ಅವನ ಲಿಂಗಗಳು, ವಿಗ್ರಹಗಳು, ಪ್ರತೀಕಗಳು, ಪ್ರಕಟ ಸ್ವರೂಪಗಳು. ಅಂದರೆ ಭವವು ಅಭವನ ವ್ಯಕ್ತರೂಪ, ಅಭವನು ಭವದ ಅವ್ಯಕ್ತರೂಪ-ಎಂದ ಹಾಗಾಯ್ತು. ಸೃಷ್ಟಿ-ಸ್ಥಿತಿ-ಲಯಗಳೆಲ್ಲವೂ ಆತನ ರೂಪಾಂತರೀಕರಣದ ಲೀಲೆ. ಒಬ್ಬನೇ ಒಬ್ಬ ನಟನು ಪ್ರತಿದಿನವೂ ಬೇರೆಯ ವೇಷ ಧರಿಸಿ ರಂಗದ ಮೇಲೆ ಬಂದರೆ ಹೇಗೋ ಹಾಗೇ ಅಚಲನಾದ ಶಿವನ ಚಲತ್ಕಾರ್ಯರೂಪದ ಕಾಯಕವು ಅವನ ನಟರಾಜತ್ವವನ್ನು ಬೊಟ್ಟು ಮಾಡಿ ತೋರಿಸುತ್ತದೆ.

ಬಿ. ಎಚ್. ಶ್ರೀಧರ

# ಹರಿಹರನ ಗದ್ಯ

ಜಗತ್ತಿನ ಸಾರಸ್ವತ ಪ್ರಪಂಚದಲ್ಲಿ ಮೊದಲು ಪದ್ಯ ನಂತರ ಗದ್ಯ. ಬರೆದಿದ್ದು ಕಂಠಪಾಠಕ್ಕೆ ಅನುಕೂಲವಾಗಿರಬೇಕು ಎಂದು ಭಾವಿಸಿದಾಗ ಅಂತಹ ಬರೆಹ ಪದ್ಯವೇ ಆಗಬೇಕಾದ್ದು ಅನಿವಾರ್ಯವಾಯಿತು. ಆದರೂ ಪದ್ಯವಿದ್ದರೂ ಜೊತೆಜೊತೆಯಲ್ಲಿಯೇ ಗದ್ಯದ ಬೆಳವಣಿಗೆಯೂ ಆಯಿತು. ಕನ್ನಡದಲ್ಲಿ ಗದ್ಯಸಾಹಿತ್ಯವೂ ಪದ್ಯಸಾಹಿತ್ಯದಷ್ಟೇ ಪ್ರಾಚೀನವಾದ್ದು. ಕನ್ನಡ ಸಾಹಿತ್ಯದ ಗದ್ಯದ ಇತಿಹಾಸವನ್ನು ನಾವು ಹಲ್ಮಿಡಿಯ ಶಾಸನದಿಂದಲೇ ಆರಂಭಿಸಬಹುದು. ಭಾಷೆ ಸಂಸ್ಕೃತ ಭೂಯಿಷ್ಠವಾಗಿದ್ದರೂ, ಅದರಲ್ಲಿನ ಗದ್ಯದ ಸೌಂದರ್ಯ ನಿಜಕ್ಕೂ ಹೃದ್ಯವಾಗಿದೆ. ನೃಪತುಂಗನ ಬಳಿಗೆ ಬರುವಷ್ಟರಲ್ಲಿ ನಾಲ್ಕಾರು ಗದ್ಯಕವಿಗಳು ಬೆಳಗಿ ಮರೆಯಾಗಿರುವುದನ್ನು ಆತನ ಕವಿರಾಜಮಾರ್ಗದಿಂದಲೇ ಅರಿಯುತ್ತೇವೆ. ಅಷ್ಟು ಖಚಿತವಾಗಿ ನೃಪತುಂಗನು ಗದ್ಯಕವಿಗಳ ಹೆಸರನ್ನು ಹೆಸರಿಸುವುದನ್ನು ಕಂಡಾಗ ಗದ್ಯ ಆಕಾಲಕ್ಕಾಗಲೇ ಮೈತುಂಬಿ ಬೆಳೆದಿದ್ದಂತೆ ತೋರುತ್ತದೆ. ದುರದೃಷ್ಟವಶಾತ್ ಈ ಗದ್ಯ ಕವಿಗಳ ರಚನೆ ಅಜ್ಞಾತವಾದ್ದರಿಂದ ಗದ್ಯದ ಶೈಲಿ ಸ್ವಲ್ಪ ಕಾಲ ಅಲ್ಲಿಯೇ ನಿಲ್ಲಬೇಕಾಯಿತು.

ಅನಂತರ ನಮಗೆ ಕನ್ನಡ ಗದ್ಯದ ಆದಿಗ್ರಂಥ, ಅಗ್ರಗ್ರಂಥವಾದ ವಡ್ಡಾರಾಧನೆ ಸಿಗುತ್ತದೆ. ಅದರಲ್ಲಿನ ಗದ್ಯ ಸರಳ ಸುಂದರವಾಗಿ ಮನೋಜ್ಞವಾಗಿದೆ. ಅನಾವಶ್ಯಕವಾದ ಪಾಂಡಿತ್ಯವಿಲ್ಲ. ದೇಸಿಯ ಮಾತುಗಳು ಹೆಚ್ಚಾಗಿವೆ. ಅಚ್ಚ ಕನ್ನಡದ ಕಡೆ ಒಲವಿದ್ದರೂ ಸಂಸ್ಕೃತದ ಮೇಲಿನ ದ್ವೇಷವಿಲ್ಲ. ಸಂಸ್ಕೃತ ಮತ್ತು ಕನ್ನಡಗಳ ಸುಂದರ ಸಮನ್ವಯವನ್ನು ಅಲ್ಲಿ ಕಾಣುತ್ತೇವೆ. ಇದರ ಪ್ರಮುಖ ಗುಣವೆಂದರೆ ಸಾಹಿತ್ಯ ಸೌಂದರ್ಯಕ್ಕಿಂತಲೂ, ಮಿಗಿಲಾಗಿ ಭಾಷೆ ಹಾಗೂ ಕಥಾಸೌಂದರ್ಯ ದೃಷ್ಟಿಗಳಿಂದ ವಡ್ಡಾರಾಧನೆ ಅಪೂರ್ವ ಕೃತಿಯಾಗಿರುವುದು

ವಡ್ಡಾರಾಧನೆಯ ಅನಂತರ ನಮಗೆ ದೊರೆಯುವ ಗದ್ಯಕೃತಿಯೆಂದರೆ ಚಾವುಂಡರಾಯ ಪುರಾಣ. ಅಲ್ಲಲ್ಲಿ ಒಂದೊಂದು ಪದ್ಯ ಗೋಚರಿಸಿದರೂ ಕಥೆಯೆಲ್ಲಾ ಗದ್ಯದಲ್ಲಿಯೇ ಸಾಗುತ್ತದೆ. ಇಲ್ಲಿನ ಗದ್ಯ ಶಾಸ್ತ್ರದ ಪಂಜರದಲ್ಲಿ ಸಿಲುಕಿದ ಪಕ್ಷಿಯಂತಾಗಿದೆ. ಆದರೂ ಇದೂ ಸಹ ಆ ಕಾಲದ ಗದ್ಯವನ್ನು ತಿಳಿಯುವುದರಲ್ಲಿ ನಮಗೆ ಸ್ವಲ್ಪ ಮಟ್ಟಿಗೆ ಸಹಾಯ ನೀಡುತ್ತದೆ. ಮತ್ತು ಇದೇ ಶತಮಾನದಲ್ಲಿದ್ದ ಒಂದನೆಯ ನಾಗವರ್ಮ ತನ್ನ ಕೃತಿ ಕಾದಂಬರಿಯನ್ನು ಬಾಣನಂತೆ ಗದ್ಯದಲ್ಲಿಯೇ ಅನುವಾದಿಸಿದ್ದರೆ ನಮಗೆ ಅತ್ಯಪೂರ್ವವಾದ ಆ ಕಾಲದ ಗದ್ಯಗ್ರಂಥವೊಂದು ದೊರೆಯುತ್ತಿತ್ತು. ಆದರೆ ನಾಗವರ್ಮ ಹಾಗೆ ಮಾಡದೆ ಕಾದಂಬರಿಯನ್ನು ಚಂಪೂಕೃತಿಯಾಗಿಸಿದ್ದು ಗದ್ಯ ಪ್ರಪಂಚಕ್ಕೆ ಸ್ವಲ್ಪ ಮಟ್ಟಿಗೆ ನಷ್ಟವಾದಂತೆಯೇ ಸರಿ.

ಇದೇ ಶತಮಾನಗಳಲ್ಲಿ ಬರುವ ಚಂಪೂ ಕೃತಿಗಳಲ್ಲಿ ಗದ್ಯ ಮಿಂಚಿ ಮರೆಯಾಗುತ್ತಿತ್ತು. ಹೀಗೆ ಇಣಕಿ ನೋಡುತ್ತಿದ್ದ ಗದ್ಯವೋ ಕನ್ನಡ ಕಾವ್ಯದಲ್ಲಿ ಬಂದಿರುವುರಿಂದ ಅದನ್ನು ಕನ್ನಡ ಗದ್ಯವೆನ್ನಬೇಕು–ಅಷ್ಟೆ. ದೀರ್ಘವಾದ ಸಂಸ್ಕೃತ

ಸಮಾಸಗಳ ಕೊನೆಯಲ್ಲಿ ಒಂದು ಕನ್ನಡ ಪ್ರತ್ಯಯ. ಆದರೆ ಪಂಪನ ಕೃತಿಗಳಲ್ಲಿ ಗದ್ಯ ಹಿತಮಿತವಾಗಿ, ಸರಸಸುಂದರವಾಗಿ ರೂಪುದೋರಿದ ವಾಣಿ. ಅನಂತರ ದುರ್ಗಸಿಂಹನ ಪಂಚತಂತ್ರದಲ್ಲಿ ಚಂಪೂ ವಿನ ಮಧ್ಯೆ ಶಕ್ತಿವತ್ತಾದ ಗದ್ಯಶೈಲಿಯನ್ನು ಕಾಣುತ್ತೇವೆ. ಔಚಿತ್ಯದ ಎಲ್ಲೆಯನ್ನು ಮೀರದೆ ಸಂಸ್ಕೃತ ಮತ್ತು ಕನ್ನಡ ಪದ್ಯಗಳ ಸಮ ಜೋಡಣೆ ಈತನ ಗದ್ಯದಲ್ಲಿದೆ.

ಈ ಶತಮಾನವನ್ನು ಉತ್ಕ್ರಮಣಿಸಿದ ಕೂಡಲೇ ವಚನಕಾರರು ನಮಗೆ ಸಿಗುತ್ತಾರೆ. ಗದ್ಯವು ಲಯಬದ್ಧಗದ್ಯವಾದದ್ದು ಇವರ ಕಾಲ ದಲ್ಲಿಯೇ. ಇವರು ತಮ್ಮ ಆಧ್ಯಾತ್ಮಿಕ ಅನುಭವ ಗಳನ್ನೂ, ನಿರೂಪಣೆ ಮಾಡುವುದಕ್ಕೆ ಈ ಲಯ ಬದ್ಧವಾದ ಗದ್ಯವನ್ನು ಮಾಧ್ಯಮವಾಗಿ ಮಾಡಿ ಕೊಂಡರು.

ಇಷ್ಟನ್ನು ಬಿಟ್ಟರೆ ಕನ್ನಡ ಗದ್ಯಸಾಹಿತ್ಯ ದೃಷ್ಟಿಯಿಂದ, ಹೇಳಿಕೊಳ್ಳುವಂತಹ ಸಾಧನೆ ಯೇನೂ ನಡೆದಿರಲಿಲ್ಲ. ಮಹಾಕವಿ ಹರಿಹರನು ಮೊಟ್ಟಮೊದಲನೇ ಸಾರಿ ಕನ್ನಡ ಗದ್ಯವನ್ನು ಕಾವ್ಯದ ಮಟ್ಟಕ್ಕೇರಿಸಿದನು. ಹರಿಹರನ ಭಕ್ತಿ ಒಮ್ಮೊಮ್ಮೆ ತುಂಬಿ ಹರಿಯುವ ಗಂಗಾ ಪ್ರವಾಹ ದಂತೆ, ಗಂಭೀರವಾಗಿ ಒಮ್ಮೊಮ್ಮೆ ಆಂತರಿಕ ಭಾವಾವೇಶದಿಂದ ಭೋರ್ಗರೆಯುತ್ತಾ, ಮೇಲಿ ನಿಂದ ಧುಮುಕಿ, ಕೆಳಗಿನಿಂದ ಚಿಮ್ಮಿ ವಿವಿಧ ರೂಪದಲ್ಲಿ ಹಬ್ಬಿಹರಡುವಂತಹದು. ಈ ವಿವಿಧ ರೂಪದಲ್ಲಿ ಒಂದು ರೂಪವಾಗಿ ಅವನ ಗದ್ಯವನ್ನು ನಾವು ಕಾಣಬಹುದು. ಹರಿಹರನು ತನ್ನ ರಗಳೆ ಯಲ್ಲಿ ಹೇಗೆ ಔನ್ನತ್ಯವನ್ನು ಪಡೆದನೋ, ಹಾಗೆಯೇ ಕನ್ನಡ ಗದ್ಯಕ್ಕೂ ಹೊಸ ಪ್ರಾಣವನ್ನೇ ಕೊಟ್ಟನು. ಕುಳಿತು ತೂಕಡಿಸುತ್ತಿದ್ದ ಗದ್ಯಪಕ್ಷಿ ಹರಿಹರನ ಚೇತನದಿಂದ ಉದ್ದೀಪನಗೊಂಡು ಮೇಲೆದ್ದು ಗರಿಗೆದರಿ ಮುಗಿಲೆತ್ತರಕ್ಕೆ ಹಾರಿತು. ಹರಿಹರನು ಗದ್ಯವನ್ನು ಒಂದು ಸ್ಥಳದಲ್ಲಿಯೂ ಪದ್ಯವನ್ನು ಮತ್ತೊಂದು ಸ್ಥಳದಲ್ಲಿಯೂ ರಚಿಸಿ, ಪದ್ಯದಷ್ಟೇ ಗದ್ಯ ಉಚಿತವಾದದ್ದೆಂದು ಮನ್ನಣೆಗೆ ಯೋಗ್ಯವಾದದ್ದೆಂದು ಸಾರಿ ಅದನ್ನು ಗಣ್ಯ ಮಾನ್ಯ ಹಾಗೂ ಧನ್ಯವಾಗಿಸಿದನು.

ಆತನು ರಗಳೆಯನ್ನು ಹಳಗನ್ನಡ ಶೈಲಿ ಯಲ್ಲಿ ಬರೆದಿದ್ದರೂ ಜನರ ಬಳಕೆಯಲ್ಲಿದ್ದ, ಅಂದಿನ ಭಾಷೆಯನ್ನು ಗದ್ಯಕ್ಕಾಗಿ ಉಪಯೋಗಿಸಿ ಕೊಂಡನು. ಹರಿಹರನ ಗದ್ಯ, ಕನ್ನಡ ಸಾಹಿತ್ಯದ ಉತ್ಕೃಷ್ಟ ಗದ್ಯ. ಆತ, ಚಾವುಂಡರಾಯ ಪುರಾಣ ಮತ್ತು ವಡ್ಡಾರಾಧನೆ ಕೃತಿಗಳನ್ನು ನೋಡಿ ದ್ದನೋ ಇಲ್ಲವೋ ತಿಳಿಯದು. ಆದರೆ ಇಷ್ಟು ಮಾತ್ರ ನಿಜ. ವಚನ ಸಾಹಿತ್ಯದಲ್ಲಿ ಸುಪ್ತವಾಗಿದ್ದ ಗದ್ಯದ ಗುಪ್ತ ಚೇತನವನ್ನು ಹರಿಹರನು ಗುರುತಿ ಸಿದಂತೆ ತೋರುತ್ತದೆ. ಮತ್ತು ಆ ಶಕ್ತಿಯನ್ನು ತನ್ನದಾಗಿಸಿಕೊಂಡು ತನ್ನ ಕೃತಿಗಳಲ್ಲಿ ಅದನ್ನು ಪರಿಣಾಮಕಾರಿಯಾಗಿ ಉಪಯೋಗಿಸಿಕೊಂಡಿ ದ್ದಾನೆ. ಆಧುನಿಕ ಗದ್ಯದ ಶಕ್ತಿ ಸಾಮರ್ಥ್ಯ ವನ್ನು ಹರಿಹರನ ಗದ್ಯ ಸಾಧಿಸಿರುವುದನ್ನು ಕಂಡು ನಾವು ಅಚ್ಚರಿಗೊಳ್ಳುತ್ತೇವೆ. ಆತನ ಗದ್ಯ ಒಂದು ಹೊಸ ಚೈತನ್ಯದಿಂದ ಮಿಡಿಯುತ್ತದೆ. ಯಾವ ಭಾವವನ್ನೇ ಆಗಲಿ, ಯಾವರಸವನ್ನೇ ಆಗಲಿ ಉದ್ಬೋಧನೆ ಮಾಡುವ ಶಕ್ತಿಯನ್ನು ಅವನ ಗದ್ಯ ಗಳಿಸಿಕೊಂಡಿದೆ.

ಆತನ ರಗಳೆಗಳಲ್ಲಿ ಬರುವ ಗದ್ಯ ಉಜ್ವಲ ವಾಗಿರುತ್ತದೆ. ರಸಾರ್ದ್ರವಾಗಿರುತ್ತದೆ. ಆ ಗದ್ಯದ ಲಯವನ್ನೂ, ಮಾಧುರ್ಯವನ್ನೂ, ಇಂಪನ್ನೂ ಕಂಡಾಗ ನಮಗೆ ಹಸಿರು ಹುಲ್ಲಿನ ಮೇಲೆ ಬರಿ ಗಾಲಿನಲ್ಲಿ ನಡೆದ ಆನಂದದ ಅನುಭವವಾಗುತ್ತದೆ.

ಆತನ ಒಂದೊಂದು ರಗಳೆಯಲ್ಲಿಯೂ

ವಿವಿಧ ತೆರನಾದ ಗದ್ಯದ ಓಟವನ್ನು ನಾವು ಕಾಣು ತ್ತೇವೆ. ಉದಾಹರಣೆಗಾಗಿ ಬಸವರಾಜದೇವರ ರಗಳೆಯನ್ನು ನೋಡಿದಾಗ ಅದು ವ್ಯಕ್ತವಾಗು ತ್ತದೆ. ಬಹುಶಃ ಇದು ಹರಿಹರನ ಕೊನೆಯ ಕೃತಿ ಯಾದ್ದರಿಂದಲೋ ಏನೋ? ಈ ಕಾವ್ಯದಲ್ಲಿ ಹರಿ ಹರನ ಪರಿಣಿತಮತಿಯ ಕುಂಚದಿಂದೆಳೆದ ಉತ್ಕೃಷ್ಟ ಗದ್ಯ ಚಿತ್ರವನ್ನು ಕಾಣುತ್ತೇವೆ.

"ಇಂತು ಶುದ್ಧಾಂಗನಾಗಿ, ಸುಖಿಯಾಗಿ, ಧಾರುಣಿಗೆ ಕಾರಣಿಕನಪ್ಪ ಬಸವಂ ಸಂಗಸುಖ ದಿಂದಿರ್ಪಲ್ಲಿ; ನೆಲದಲಿ ಮೂಡಿದ ಸ್ವಯಂಭು ಲಿಂಗಕ್ಕೆ ನೆಲಂ ತಾಯಾಗಲಱಿಯದೆಂಬಂತೆ, ಹರನ ಬೆಸನಂ ಹೊತ್ತು ಪಲವು ಕಾರಣದಿಂದ ಮರ್ತ್ಯಲೋಕದೊಳ್ ಪುಟ್ಟಿದ ಗಣೇಶ್ವರನಪ್ಪ ಬಸವರಾಜಂಗೆ ತಾಯ್ತಂದೆಗಳಿಲ್ಲೆಂಬುದನಱಿವ ವಂತೆ, ಶಿವಭಕ್ತನುಮಂ ಶಿವಭಕ್ತೆಯುಮಂ ಕೈಲಾಸಕ್ಕೆ ಕೊಂಡೊಯ್ಯೆ;

ಬಸವರಾಜಂ ಪುಸಿಯ ತಾಯ್ತಂದೆಗಳು ಪೋದುದಂ ಕಂಡಾದರಂ ಮಿಕ್ಕು ಸಂಸಾರದ ಭಾರವಿಳಿದು ನಲಿನಲಿದಾಡಿ, ಶಿವಭಕ್ತಿ ಮುತ್ತಂ ತಿರ್ದ ಮುತ್ತಬ್ಬೆಯ ಪಕ್ಕದೊಳು ಶಿವಪ್ರಸಾದ ಸಂತುಷ್ಟ ಹೃದಯನಾಗಿ ನಾಲ್ಕೆರಡು ವರುಷಂ ಸುಖದೊಳಿರೆ, ಭಸಿತಕ್ಕೆ ಬಣ್ಣವೇಱುವಂತೆ ಬಂದ ಯೌವನವನ್ನು—

"ಜನನದ ಬಳಿವಿಡಿದೆಂತಕ್ಕೆ ಬಂದ ಜವ್ವನಂ ಶಿವಪೂಜೆಯಲ್ಲಿ ಸಮೆಯವೇಳ್ಕುಂ ಇಂತ ಲ್ಲಲ್ಲಿ ಶಿವಭಕ್ತಿಯುಂ, ಕರ್ಮಮುಮೊಂದಾ ಗಿರದು''—ಎಂದು ಬಸವಣ್ಣನವರ ಭಕ್ತಮನಸ್ಸಿನ ಸ್ಥಿತಿಯನ್ನು ಮತ್ತು ಅದರ ಕಾರಣಿಕತನವನ್ನು ಹರಿಹರನು ಗದ್ಯದಲ್ಲಿ ಅಪೂರ್ವವಾಗಿ ಚಿತ್ರಿಸಿ ದ್ದಾನೆ. ಇಲ್ಲಿ ಆತನ ಪದಮೋಡಿ ವರ್ಣಿಸಲಸದಳ. ಅವನು ಹೇಗೆ ತಾಳ ಹಾಕುತ್ತಾನೋ ಹಾಗೆ ನಾವು ತಲೆ ಅಲ್ಲಾಡಿಸುತ್ತೇವೆ. ಪುಂಗಿಯ ನಾದಕ್ಕೆ ಮರುಳಾದ ನಾಗನಂತೆ ಓದುಗರ ಸ್ಥಿತಿಯಾಗು ತ್ತದೆ.

ಆತನ ಗದ್ಯದಲ್ಲಿನ ಪದಗಳು ನರ್ತನ ಮಾಡುತ್ತವೆ. ಸರುಬಿಗಳಾದ ನಾವು ಮೂಕರಾಗಿ ತನ್ಮಯರಾಗಿ ಅದನ್ನೇ ಆಲಿಸುತ್ತೇವೆ. ಉದಾ:-

ಎಲೆ ಮಗನೆ ಬಸವ ಬಸವಣ್ಣ ಬಸವಿ ದೇವ, ನಿನ್ನಂ ಮಹಿತಳದೊಳು ಮೆಱೆದಪೆವು. ನೀಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು—ಎಂಬ ನುಡಿಯೊಡನೆ ಕನಸಿನ ಮಾತು ಮನವನಿಮ್ಮೆತಗಂಡು ನಿದ್ರೆ ತಿಳಿದು ಕಣ್ದೆಱೆದು ಕೆಲಬಲನಂ ನೋಡಿ ಬೆಚ್ಚಿ ಬೆಗಡುಗೊಂಡು ಅನುತಾಪವೇಱಿ ವಿರಹಂ ಹೊಮ್ಮಿ ಕಣ್ಗೆಟ್ಟಗ ಲಲಾ "ದೇವ ದೇವ ಸಂಗ ಕಂಡ್ಯೆ ಕೆಟ್ಟೆ ಕೆಟ್ಟೆಂ ತೊಟ್ಟನಿಂತು ಕಣ್ ನೋಡದೆ ಹುಣ್ಣನೋಡದೆ ಹೋ ೯ ಗೆಂಬರೆ? ಗಗನದಿಂದಿಳಿವಂಗಾಧಾರ ಮಾಗುತ್ತೆ ತಪ್ಪುವರೆ....ಅಮೃತವೇಕೆ ವಿಷವೇಕೆ? ಬೆಳಗೇಕೆ ತಮವೇಕೆ? ಎಂದು ಮೆಲ್ಲ ಮೆಲ್ಲನಾ ಲಿಂಗನಮಂ ಸಡಲ್ಚಿ ನಡೆತಂದು"....ಅ ಎಂಬಲ್ಲಿ ಹರಿಹರನು ಅತ್ಯುಜ್ವಲವಾದ ಉಪಮೆಗಳನ್ನು ಕೊಟ್ಟು ಭಕ್ತನ ಉತ್ಕಟಾವೇಶವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. "ಹರ ಕರುಣೋದಯ ಮಾದಂತರುಣೋದಯ ಮಾಗೆ ನಿದ್ರೆ ತಿಳಿದೆದ್ದು" ಎಂಬುದನ್ನು ಹರಿಹರ ಪ್ರಕೃತಿ ಪರಮಾತ್ಮಗಳ ಸಮ್ಮಿಳನವಾಗಿ ಹೇಳಿದ್ದಾನೆ. ಅವನ ಗದ್ಯದಲ್ಲಿ ಯಾವುದೊ ಅವ್ಯಕ್ತವಾದ ಲಯ ನಮಗೆ ಗೋಚರ ವಾಗುತ್ತದೆ. ಮನಸ್ಸು ಆಹ್ಲಾದಕಾರಿಯಾಗು ತ್ತದೆ.

ಉದಾ: ಎಲೆ ಬಸವ, ಬಸವಣ್ಣ, ಬಸ

ವಯ್ಯ, ಬಸವರಸ, ಬಸವರಾಜ, ಬಸವಿದೇವ ಕೇಳಯ್ಯಾ ನಿನ್ನ ನೇಮವಿದಾರ್ಗುಂಟು, ಗುರು ಲಿಂಗದೊಳೆರಡಿಲ್ಲದಿಪ್ಪೆ ಶರಣರಂಸಂಗನೆಂದು ಕಾಣ್ಬೆ ಬಂದ ಭಕ್ತರ ನತ್ಯಾದರಿಪೆ ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ ಬೇಡಿ ದುದು ಶರಣರ್ಗಿಲ್ಲೆನ್ನದೀವೆ ಬೇಡಲೊಲ್ಲದವರ್ಗೆ ಮಿಗಿಲಾಗಿ ಆರಾಧಿಪೆ ಜಾಗ್ರತ್ಸ್ವಪ್ನ ಸುಷುಪ್ತಿ ಯವಸ್ಥಾತ್ರಯಂಗಳೊಳು ಶರಣಂ ಸಂಗನೆಂದ ಲ್ಲದೆ ಕಾಣೆ. ನಿಚ್ಚ ಶಿವರಾತ್ರಿಯನಚ್ಚರಿಯಂ ಮಾಳ್ಪೆ ಜಂಗಮ ಪ್ರಾಣಿಯಾಗಿಪ್ಪೆ ಶಿವಲಿಂಗಾ ರ್ಪಿತವಲ್ಲದುದನಾಘ್ರಾಣಿಸಿ ನೋಡೆ. ನುಡಿಯೆ, ಮುಟ್ಟೆ, ಕೇಳೆ ಶಿವ ಸಮಯನುದ್ಧರಿಸುವೆ ಪರ ಸಮಯವಂ ಸಂಹರಿಸೆ ಲಿಂಗದಲ್ಲಿ ಕಠಿನಮಂ ಕೇಳೆ, ಜಂಗಮದಲ್ಲಿ ಜಾತಿಯನಱಸೆ ಪ್ರಸಾದದಲ್ಲಿ ಅಪವಿತ್ರೆಯನಱಿಯೆ ಪರಾಂಗನೆಯರಂ ಹೆತ್ತ ತಾಯ್ಗಳೆಂಬೆ, ಪರದ್ರವ್ಯವಂ ಕಿಲ್ಬಿಷವೆಂದು ಮುಟ್ಟೆ, ನಡೆದು ತಪ್ಪೆ, ನುಡಿದು ಹುಸಿಯೆ, ಹಿಡಿದು ಬಿಡೆ, ಬಿಟ್ಟು ಹಿಂಗಲೀಯೆ, ಕೊಟ್ಟು ನೆನೆಯೆ, ನಟ್ಟು ಕೀಳೆ ಮುಟ್ಟಿ ಪೆಱಪಿಂಗೆ, ಕೂಡಿತಪ್ಪೆ, ನೋಡಿ ನಿರಾಕರಿಸೆ, ನೆನೆದು ಮಱಿಯೆ ಮನದೊಳೋವರಿಯಲ್ಲ, ಬುದ್ಧಿಯೊಳು ವಿಸಂಚ ವಿಲ್ಲ, ಅಹಂಕಾರದೊಳು ಗರ್ವವಿಲ್ಲ....

ಇಂತಹ ಕಡೆಗಳಲೆಲ್ಲಾ ಹರಿಹರನ ಗದ್ಯ, ಮೈದಾನದಲ್ಲಿ ಹರಿಯುವ ನದಿಯಂತೆ ಪ್ರಶಾಂತ ವಾಗಿ ನಿರರ್ಗಳವಾಗಿ ಹರಿಯುತ್ತದೆ. ಹೆಸರಿಸಲೇ ಬೇಕಾದ ಮತ್ತೊಂದು ಮನಮುಟ್ಟುವ ಗದ್ಯ ಪಂಕ್ತಿ ಎಂದರೆ—

ಶಿವ ಜಂಗಮನಾಗಿ ಬಂದಾಗ–

"ಬಸವ, ಬಸವಾ, ನಾವು ಹೆಂಗೂಸಿಲ್ಲದೆ ಇರ್ದುದಿಲ್ಲೆಂಬ ಮಾತಂ ಕೇಳ್ದು– ದೇವ, ದೇವ ನಿಮ್ಮ ಚಿತ್ತವನಱಿಯದಂಜಿದೆಂ, ಇದೊಂದರಿ ದಲ್ಲ–ಎಂದು ಪರಿಚಾರಕರಂ ಪುರದೊಳಯೆಂಕೆ ಕಳುಪಲವರಿವರೆನ್ನದೆ ಪಟ್ಟಣದ ಪುಣ್ಯಾಂಗನೆಯ ರೆಲ್ಲಂ ಕೂಡಿ ದಂಪತಿಗಳಾಗಿರೆ, ಎಲ್ಲಿಯುಂ ತೆಱ ಹಿಲ್ಲವೆಂದು ಬಿನ್ನೈಸಿ ಕೌತುಕಂಬಟ್ಟು–ಅಱ ದೆನಱಿದೆಂ ತನ್ನ ಮಾಯವೆನ್ನಂ ಕೊಳುವುದೆ? ಅದಕ್ಕೇನಱಲಕ್ಕುಮೆನುತ್ತೆ; ಸಿರಿ ಸರಸ್ವತಿ ಯರಂ ಕೀಳ್ಮಾಡುವ ತನ್ನರಸಿ ಮಾಯೀ ದೇವಿ ಯರಂ ತಂದು ಕೂಡುವೆಂ"....

ಅಂತೆಯೆ "ಬಸವ, ಬಸವಾ ಜಂಗಮ ದೇವರು, ಸಂಗಮ ದೇವರಾದರೆನೆ ತಾಯೆ ತಾಯೆ ಮುನ್ನವಾರೆಂದು ಕೊಟ್ಟೆನೆಂದು ನುಡಿವಲ್ಲಿಂ ಮುನ್ನವೆ ಸಂಗಮೇಶ್ವರಂ ಬಸವನ ಚಿತ್ತಮಂ ಪರೀಕ್ಷಿಸಲಾರದೆ ಸೋಲ್ತು ಬೇಗದಿಂದಂತರ್ಧಾ ನಕ್ಕೆ ಸಂದಂ"–ಎಂಬುದನ್ನು ಕಂಡಾಗ, ಸವಿದಾಗ ನಿಜಕ್ಕೂ, ಕವಿ ಗದ್ಯಶೈಲಿಯ ಉತ್ತುಂಗ ಶೃಂಗ ದಲ್ಲಿ ಏರಿ ನಿಂತು ಈ ಮಾತನ್ನು ಆಡುತ್ತಿದ್ದಾನೆನ್ನಿ ಸುತ್ತದೆ.

ನಂಬಿಯಣ್ಣನ ರಗಳೆಯಲ್ಲಿ ಹರಿಹರನ ಗದ್ಯ ಸಿದ್ಧಿಯನ್ನು ಸಾಧಿಸಿದೆ. ಇಲ್ಲಿ ಆತನ ಗದ್ಯದ ನಾದ ಕೆಲವು ಕಡೆ ಕಾವ್ಯೋದ್ಯಾನದಲ್ಲಿ ಝೇಂಕರಿ ಸುವ ದುಂಬಿಯಂತಾದರೆ, ಕೆಲವು ಕಡೆ ವೀಣೆಯ ನಾದದಂತೆ ಮೃದುಮಧುರವಾಗುವುದು ಮತ್ತೆ ಹಲವು ಕಡೆ ಭೈರವಿಯ ಡಮರುಗದಂತೆ ಉದ್ಘೋ ಷಿಸುತ್ತದೆ.

ನಂಬಿಯ ಬಾಲ್ಯವನ್ನು ಕವಿ ಕಣ್ಣಿಗೆ ಕಟ್ಟು ವಂತೆ ಅದ್ಭುತವಾಗಿ ಚಿತ್ರಿಸುತ್ತಾನೆ. ಆತನ ಒಂದೊಂದು ಸೊಲ್ಲಿನಲ್ಲಿಯೂ ಸರಸ ಸುಂದರ ವಾಣಿ ನಲಿದು ನರ್ತಿಸುವಂತೆ ತೋರುತ್ತದೆ. ಉದಾ:–

"ಒಂದು ದಿನ ತನ್ನೊಡನೆಯು ಮುನ್ನಣೆಯ ಮಕ್ಕಳೆಲ್ಲ ನೆರೆದೊಂದು ಮರದ ಬಂಡಿಯಂ ಮಾಡಿ ತಂಡದೊಳ್ ನಲಿದು ಮುಂದೆ ಬಂದತಿರಥ ನಪ್ಪ ನಂಬಿಯಣ್ಣನಂ ನಡುವೆ ಕುಳ್ಳಿರಿಸಿ ನೀನ ರಸಂ ನಾವೆಲ್ಲಂ ಪರಿವಾರವೆಂದಲ್ಲಿಯ ಬಲ್ಲಿದ ಬೆವಹಾರಿಗಳ ಮಕ್ಕಳೆಲ್ಲಾ ನೆರೆದು"......"ಪುರದ ತಿರುವೀಧಿಯೊಳು ನಡೆತಪ್ಪಾಗಳು ಆ ಪಟ್ಟಣದ ನರಸಿಂಗಮೊನೆಯರ ಪಟ್ಟದಾನೆ............ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ ಮಾವಂತರಂ ಮುಱಿದಿಕ್ಕುತಂ, ಆರೆಕಾಱರನರೆದು ಸಣ್ಣಿ ಸುತ್ತಂ ಮಂದಿಯಂ ಮುಂದುಗೆಡಿಸುತಂ ನೆರವಿಯಂ ಪರಿದೋಡಿಸುತ್ತುಂ ಸಿಕ್ಕಿದರಂ ಸೀಳ್ದು ಬಿಸುಡುತಂ ಘಳಿಘಳಿಸೆ ಬರ್ಪ ಮತ್ತಗಜಮಂ ಭೋಂಕನೆ ಕಂಡು ಬಂಡಿಯಂ ಬಿಟ್ಟು ಮಕ್ಕಳೆಲ್ಲಂ ಚೆಲ್ಲಿ ಪೋಗೆ ಸಿಂಹದ ಮಱಿಯಂತೆ ಕಿಱುವಂಡಿಯೊಳಿರ್ದ ನಂಬಿಯಣ್ಣನಲ್ಲಿಗೆ ಸೊಕ್ಕಿದಾನೆ ಮಿಕ್ಕುಮಿಾಱಿ ಬಂದು ಮುಂದೆ ನಿಂದು ಕೈಲಾಸಕ್ಕೆ ಬಿಜಯಂಗೈಯ್ವಂ ಹೈರಾವತವೀತೆಱದಿಂ ಬರ್ಪುದೆಂಬುದಂ ಸೂಚಿಸುವಂತೆ ಬಂಡಿಯಂ ಬಲವಂದು ಕಾಲ್ಗೆಱಗಿ"......ಇದೇ ರೀತಿ ಕವಿ ನಂಬಿಯ ಯೌವನವನ್ನು ವರ್ಣಿಸುವಾಗ ತನ್ಮಯನಾಗಿ ವರ್ಣಿಸುತ್ತಾನೆ. ''ಏಱುಂ ಜವ್ವನಂ ಶಿವಪೂಜೆಗೆಂದರಳಲಿರ್ದ ಪರಿಮಳದ ಮೊಗ್ಗೆಯಂತಿರ್ದಪುದು" ... ಈ ರೀತಿ ವರ್ಣಿಸುವಾಗ ಕವಿ ಯಾವ ರೀತಿಯ ಶಬ್ದಾಡಂಬರಕ್ಕೂ ಎಡೆಯಿಲ್ಲದೆ ಮುನ್ನಡೆಯುತ್ತಾನೆ.

ಮತ್ತೊಂದು ಸೊಗಸಾದ ಗದ್ಯ ಚಿತ್ರವೆಂದರೆ ಶಿವ ವೃದ್ಧನಾಗಿ ಬಂದಾಗ–ಇದರಲ್ಲಿ ಕವಿ ಅಂದಿನ ಜನ ಬಳಕೆಯ ಭಾಷೆಯನ್ನು ಸೊಗಸಾಗಿ ಉಪಯೋಗಿಸಿಕೊಂಡಿದ್ದಾನೆ."ವಿವಾಹ ಮಂಟಪವನ್ನು ಪೊಕ್ಕ ಶಂಕರನನ್ನು ಕಂಡು ಅಲ್ಲಿಯ ಪಿರಿಯರುಂ, ಮಾನ್ಯರುಂ ಕಂಡೆಲೆ ಅಪ್ಪರೆ ಇತ್ತ ಬಿಜಯಂಗೆಯ್ವುದೆನೆ ಕೇಳದಂತೆ ಮತ್ತೆ ಮತ್ತೆ ಶಿವದಿಡುತೆ—ಎನ್ನ ತೊತ್ತಿನ ಮಗನಂ ಕುಮಾರನೆಂದು ಸತ್ಕುಲಜನೆಂದು ಬಗೆದು ಹೆಣ್ಣಂ ಕೊಟ್ಟು ನಿಮ್ಮ ಕುಲಮುಂ ಕೆಡಿಸಿಕೊಳ್ಳದಿರಿ"......''ಅವಂ ನರಸಿಂಗ ಮೊನೆಯರ್ ಪೆತ್ತ ಮಗನಲ್ಲಂ ಕೊಂಡು ಸಾಕಿದ ದತ್ತುಪುತ್ರನವಂ ಶಿವಬ್ರಾಹ್ಮಣಂ ಸೌಂದರ ಪೆರುಮಾಳೆಯುಲ್ಲಂ ನಂಬಿ ಎಂದು ಎನ್ನ ತೊತ್ತಿನ ಮಗಂ ಅದಕ್ಕೆ ಪ್ರಮಾಣಪತ್ರಮುಂಟೆಂದಾ''........

ಶಿವ ಕುಂಟಣಿಯಾಗಿ ಹೊರಟಾಗ ಹರಿಹರ ಭಾವಪೂರ್ಣವಾದ ಅಭಿವ್ಯಕ್ತಿಯನ್ನು ವ್ಯಕ್ತಪಡಿಸಿದ್ದಾನೆ– ಇಲ್ಲಿ ಅವನ ಗದ್ಯ ಪದ್ಯದ ಮಟ್ಟಕ್ಕೇರಿದೆ. ಅಭಿವ್ಯಕ್ತಿಯ ಕ್ರಮ ಯಾವುದಾದರೇನು? ಭಾವಮಾತ್ರ ಒಂದೇ–

"ಭಕ್ತಜನಬಾಂಧವಂ ಪ್ರೇಮಜನ ಕಾಮದಂ ಪ್ರಣಯಜನ ಪ್ರಾಣಮಿತ್ರಂ ನಂಬಿದರ ಬೆಂಬಲಂ ನಚ್ಚಿದರ ಚ್ಚು ಮಚ್ಚಿದರ ಮೆಚ್ಚು ಅಗಲದರಾನಂದವೆನಿಸ ಶಿವಲಿಂಗಂ ಜಂಗಮರೂಪಂ ಕೈಕೊಂಡು ನಂಬಿಯಣ್ಣಂಗೆ ಕುಂಟಣಿಯಂ ನಡೆಸುಲೆಂದು ಕಾರುಣ್ಯಪಾರಾವಾರಂ ಪಾರ್ವತಿಯಂ ಪೊಱಗೆ ನಿಲಿಸಿ ನಂದೀಶಂ ಕೈಗುಡೆ ವೀರಭದ್ರಾದಿಗಣಂಗಳಱದಡೆ.... ಮುಡಿದ ಪಾರಿಜಾತದರಲ ಪರಿಮಳಂ ಧರಣಿಯಂ ತೆಕ್ಕನೆ ತೀವೆ ಈಶಾನಸೆಟ್ಟಿಯರ ಮನೆಯಂ ಪೊಕ್ಕು ಸಂಕಿಲಿ ನಾಚಿಯರ ತಾಯಪ್ಪ ಶಿವದೇವಿಯರ ಬಾಗಿಲಲಿ ನಿಲಲ್''....

ಹರಿಹರ ಒಂದು ವಸ್ತುವನ್ನೇ ಅಗಲಿ,

ಒಂದು ವಿಚಾರವನ್ನೇ ಆಗಲಿ, ವಿವರಿಸಿ ಹೇಳು ವಾಗ ಎಲ್ಲವನ್ನು ನಮಗೆ ಕಾಣಿಸುತ್ತಾನೆ. ವಿವರ ವಿವರವಾಗಿ ಭಾವದ ತುಮುಲವನ್ನು ಬಿಡಿಸು ತ್ತಾನೆ. ಇದು ಅವನ ದೊಡ್ಡ ಗುಣ. ಪರವೆಯ ವಿರಹವನ್ನು ವರ್ಣಿಸುತ್ತಾ "ಪರವೆಗೆ ಅಶೋಕ ಸಶೋಕ, ಮಾಮರಂ ತೋಮರಂ, ಬೆಳ್ದಿಂಗಳು ಬಿಳಿಯುಂಗಳಂ, ಕೊಳಂ ಕೊಳುಗುಳಂ....ಫಲಂ ನಿಷ್ಫಳಂ, ಕಾವಂ ದಾವಂ, ವನಂ ಪಿತೃವನವಾಗಿ ಶಿವಭಕ್ತಿ ಹೀನಂಗೆ ಜಗ ಮುಳಿಯುವಂತೆ ಸೌಂದರ ನಿಲ್ಲದೆ ಪರವೆಗೆ ಚರಾಚರ ವಸ್ತುಗಳು ಮುಳಿಯೆ ಮುಬುಗುತ್ತಿರ್ದಪಳು"....ಎಂಬುದನ್ನು ಹೃದ ಯಂಗಮವಾಗಿ ಹೇಳುತ್ತಾನೆ.

ಅವನ ಎಲ್ಲಾ ಕಾವ್ಯಗಳಲ್ಲಿಯೂ ಗದ್ಯ ಅಯಸ್ಕಾಂತದಂತೆ ಎಲ್ಲರ ಕಣ್ಮನಗಳನ್ನೂ ಸೆಳೆ ಯುತ್ತದೆ. ಅದರಲ್ಲಿ ಎಷ್ಟೇ ತಪ್ಪುಗಳಿದ್ದರೂ, ಎಷ್ಟೇ ಪುನುರುಕ್ತಿಯ ದೋಷವಿದ್ದರೂ, ಅವನ ಪ್ರತಿಭಾಪೂರ್ಣವಾದ ವಾ ಕ್ ಕಾ ಂ ತಿ ಯ ಲ್ಲಿ ಎಲ್ಲವೂ ಮರೆಯಾಗುತ್ತದೆ. ಚಂದ್ರನಲ್ಲಿನ ಕಲೆ ಯಂತೆ.

ಮಲುಹಣ ರಗಳೆಯಲ್ಲಿರುವುದು ಗದ್ಯದ ಒಂದೇ ಸ್ಥಲವಾದರೂ ಹರಿಹರ ಅದನ್ನೇ ರಸದ ಮಡುವಾಗಿಸಿದ್ದಾನೆ.

ಮಲುಹಣ ಮಿತ್ರನೊಡಗೂಡಿ ದೇವಾಲ ಯಕ್ಕೆ ಬರುತ್ತಾನೆ–

"ಕಾಮನ ಕೈಸೆಜ಼ೆ ಬರ್ಪಂತೆ–ವಿಜಯೇಶ್ವರ ದೇವರ ಶಿವಾಲಯಕ್ಕೆ ನಡೆದು ಬಂದು ಮಲು ಹಣಿಯ ತನಿನೇಹಂ ತನ್ನನೀ ತೆಱದೊಳ್ ಸುತ್ತು ವುದೆಂಬುದಂ ತೋಱುವಂತೆ ಪ್ರದಕ್ಷಿಣಂ ಬಂದು ಒಳಪೊಕ್ಕು"....''ಶಿವನನ್ನು ನಮಿಸಿ''....ರಸಭರಿತ ಚಿತ್ರನಪ್ಪ ಮಲುಹಣದೇವಂ ಲಿಂಗಾರ್ಚನೆಯಂ ತೀರ್ಚಿ ತಿರುಗಿ ಬರ್ಪಾಗಳ್ ರಂಗಮಂಟಪದಲ್ಲಿ ಮಲುಹಣಿಯನ್ನು ನೋಡಿ ಆಕೆಯ ರೂಪಿನಲ್ಲಿ ನೋಟಂ ಸಿಲುಕಿಸುವ ಜವ್ವನಿಗನಂ ಮಲುಹಣಿ ಭೋಂಕನೆ ನೋಡಿ ಕಂಡು ಮನಂ ಬೆದಱಿ ಹೃದಯಂ ನಡುಗಿ''....ಮೂರ್ಛಿಸುವ ಮಗಳಂ ಪದ್ಮಾವತಿ ನೋಡಿ ಕಂಡು ಇದೇನಿದೇನು! ರಂಗ ಮ ಂ ಟ ಪ ಂ ವಿರಹಮಂಟಪವಾದುದೀಶ್ವರನ ಕೇಳಿಕೆ ರತೀಶ್ವರನ ಕೇಳಿಕೆಯಾದುದು''....ಎಂಬು ದರಲ್ಲಿ ಪ್ರಧಾನವಾಗಿ ಭಕ್ತಿರಸವಿದ್ದರೂ ಜೊತೆಗೆ ಶೃಂಗಾರವೂ ಕೂಡಿ ತುಂಗೆ ಮತ್ತು ಭದ್ರೆಯರ ಮಿಳಿತದಂತೆ ದಿವ್ಯವಾಗಿದೆ.

ಹರಿಹರ ಮಲುಹಣಿ ಮ ಲು ಹ ಣ ರ ಮಧುರ ಮಿಲನವನ್ನು ಮಧುರವಾಗಿ ಚಿತ್ರಿಸಿ ದ್ದಾನೆ. ಆತ ಪ್ರಾಸದಲ್ಲಿ ಅದ್ವಿತೀಯ, ಅದರಲ್ಲಿ ಎಷ್ಟು ರೀತಿ ವೈವಿಧ್ಯವನ್ನು ತ ರ ಬ ಹು ದೋ ಅಷ್ಟನ್ನು ತಂದು ತೀರಿಸಿದ್ದಾನೆ.

''ಕರಣವೆಲ್ಲಂ ನೋಟಂ, ನೋಟವೆಲ್ಲಂ ನುಡಿ, ನುಡಿಯೆಲ್ಲಂ ವಿರಹಂ, ವಿರಹವೆಲ್ಲಂ ದೈನ್ಯಂ, ದೈನ್ಯ ವೆಲ್ಲಂ ಸಾತ್ವಿಕಂ, ಸಾತ್ವಿಕವೆಲ್ಲಂ ಮೈ, ಮೈಯೆಲ್ಲಂ ಕೂಟಂ,ಕೂಟವೆಲ್ಲಂ ಮನಂ, ಮನವೆಲ್ಲಂ ಮೆಚ್ಚು, ಮೆಚ್ಚೆಲ್ಲಂ ಸೋಲು, ಸೋಲವೆಲ್ಲಂ ರಸಮಯ ವಾಗಿ, ದಿನಂಗಳ್ ನಿಮಿಷಂಗಳಾಗಿ ಸಂವತ್ಸರಂ ಗಳ್ ಮಾಸಂಗಳಾಗೆ ಪದ್ಮಾವತಿ ಸ ಂ ಪ ನ್ನೆ ಯಾಗಿ'', ಎಂಬ ಪ್ರತಿಯೊಂದು ಮಾತನ್ನು ಹರಿ ಹರನು ರಸದಿಂದ ಘಟ್ಟಿಸಿ, ಭಾವದಿಂದ ಬಡಿಯಿಸಿ ಅಲಂಕೃತಿಯಿಂದ ಬಳೆಯಿಸಿ ರಸಿಕರು ಮೆಚ್ಚು ವಂತೆ ಮಾಡಿದ್ದಾನೆ.

ಐಶ್ವರ್ಯ ಮುಗಿದು ಹೋದರೂ ಆಶೆ ಯನ್ನಿಟ್ಟುಕೊಂಡಿರುವ ವ್ಯಕ್ತಿಯ ಸ್ಥಿತಿಯನ್ನು ಕವಿ ಗದ್ಯದಲ್ಲಿ ಅಪೂರ್ವವಾಗಿ ಚಿತ್ರಿಸಿದ್ದಾನೆ–

"ಮಲುಹಣನಂ ಸೆಜ್ಜೆಯೊಳ್ ಮೂದಲಿಸಿ ಕುಳ್ಳಿರ್ದೆಡೆಯೊಳ್ ಕುಸರಿ ದರಿದು, ನಿಂದಿರ್ದೆಡೆಯೊಳ್ ನೀರಂ ಚೆಲ್ಲಿ ಮನೆಯ ಮುಂದೆ ಸುಳಿವ ಹೊಸ ಹೊಸ ಹರೆಯದ ಸಂಪನ್ನರಪ್ಪ ರಾಜ ಪುತ್ರರುಟ್ಟುಡಿಗೆಯಂ ತೊಟ್ಟ ತುಡಿಗೆಯಂ ಕಂಡು ಅವರಂ ಪುಗಿಸುವೆನೆಂದು"....ನಿಂತು ಹರಿಹರ ಹೇಳಿದಾಗ ನಿಜಕ್ಕೂ ಮೆಚ್ಚುಗೆಯಿಂದ ತಲೆಯನ್ನು ಅಲ್ಲಾಡಿಸುತ್ತೇವೆ.

ಗಿರಿಜಾ ಕಲ್ಯಾಣದಲ್ಲಿನ ಗದ್ಯವನ್ನು ಕಂಡಾಗ, ಇಲ್ಲಿನ ಗದ್ಯ ಸಂಸ್ಕೃತದ ಪ್ರಭಾವಕ್ಕೆ ಸಿಲುಕಿದೆ. ಸಂಪ್ರದಾಯದ ಒತ್ತಡಕ್ಕೆ ಸಿಕ್ಕಿದ್ದರಿಂದಲೋ ಅಥವಾ ಉದ್ದೇಶಪೂರ್ವಕವಾಗಿಯೋ, ಹರಿಹರನು ಇಲ್ಲಿನ ಗದ್ಯವನ್ನು ಹಿಂದಿನ ಚಂಪೂಕಾರರಂತೆ ಸ್ವಲ್ಪ ಹೆಚ್ಚು ಕಡಿಮೆ ಸಂಸ್ಕೃತ ಭೂಯಿಷ್ಠವಾಗಿಯೇ ಬಳಸಿಕೊಂಡಿದ್ದಾನೆ. ಆದರೂ ಹಿಂದಿನವರಂತೆ ದೀರ್ಘವಾದ ಸಮಾಸ ಪದಗಳನ್ನು ತಂದು ಹಾಕದೆ ಸ್ವಲ್ಪ ಮಟ್ಟಿಗೆ ಅಲ್ಲಿನ ಕ್ಲಿಷ್ಟತೆಯನ್ನು ಪರಿಹರಿಸಿದ್ದಾನೆ. ಆದರೂ ಇತರ ಕೃತಿಗಳಲ್ಲಿ ಕಂಡು ಬರುವ ಗದ್ಯದ ನಾದ ಮಾಧುರ್ಯ ಇಲ್ಲಿನ ಗದ್ಯದಲ್ಲಿಲ್ಲ. ಈ ಗದ್ಯವನ್ನು ಓದುತ್ತಿರುವಂತೆಯೇ ಅನ್ನದಲ್ಲಿ ಕಲ್ಲು ಬಂದವರಂತೆ ಸುಮ್ಮನಾಗುತ್ತೇವೆ. ಇಷ್ಟಾದರೂ ಕೆಲವು ಕಡೆ ಕವಿ ತನ್ನ ಪಾಂಡಿತ್ಯವನ್ನೆಲ್ಲಾ ಪರಿಪೂರ್ಣವಾಗಿ ಮರೆತು ತನ್ನ ಸಹಜ ಶೈಲಿಯ ಪ್ರವಾಹವನ್ನು ಹರಿಸಿದ್ದಾನೆ.

ಗಿರಿಜಾತೆಯ ಶೈಶವವನ್ನು ಬಣ್ಣಿಸುತ್ತಾ "....ಮೇನೆಯ ಮಗ್ಗುಲೊಳಂ ಸಾಧಿಸುವ ಸಾವಿತ್ರಿಯ ತೋಗಿಲೊಳಂ, ಎತ್ತುವ ಅನಸೂಯೆಯ ಹಸ್ತದೊಳಂ....ಪುಣ್ಯದ ಜೀವದಂತೆ, ಶಿವಜ್ಞಾನದ ದೇಹದಂತೆ ಸಾಲೋಕ್ಯದ ಸವಿಯಂತೆ ಶಿವನ ಸುಖದಂತೆ, ಕಾಂತಿಯು ಲತೆಯಂತೆ, ನಿರುಪಾಧಿಕ ಜ್ಯೋತಿಯಂತೆ ಸಕಲ ಜಗನ್ಮಾತೆಯನ್ನು ಗಿರಿಜಾತೆ ಶೈಶವಲೀಲೆಯನೊಳಕೊಂಡು ತೊಳತೊಳಗಿ....ಬೆಳಬೆಳಗಿ....ನಳನಳಿಸಿ ಬಳೆಯುತ್ತಿರ್ದಳ್...."

ಹರಿಹರನು ನಮ್ಮನ್ನು ಹೇಮಕೂಟಕ್ಕೆ ಕರೆದೊಯ್ದು ಹರನ ಪರತತ್ವಮಯ ಸೌಂದರ್ಯವನ್ನು ನಮಗೆ ತೋರಿಸುವಂತೆ ಅಮೋಘವಾಗಿ ವರ್ಣಿಸಿದ್ದಾನೆ.

"ಎಂದು ಗಿರಿರಾಜಂ ಹರನ ಪರತತ್ವಮಯ ಸೌಂದರ ರೂಪಮಂ ಗಿರಿಜೆಗೆ ತೋರುತ್ತಂ ಪೊಡಮಡು ಪೊಡಮಡೆನೆ ಪಾರ್ವತೀದೇವಿಗೆ ಕೌತುಕರಸದೊಳಾನಂದಂ ಪುಟ್ಟೆ.... "ಹಾಗೆಯೇ ರತಿ, ಮನ್ಮಥ ಸುಟ್ಟನಂತರ ಪ್ರಳಾಪಿಸಿದ್ದನ್ನು ಕವಿ ಆತ್ಯಪೂರ್ವವಾದ-ಗದ್ಯ ಶೈಲಿಯಲ್ಲಿ ಚಿತ್ರಿಸಿದ್ದಾನೆ.

"ದೆಸೆದೆಸೆಗೆ ಕರೆಕರೆದು ಬಾಯಾಱಿ ಬಲ್ಲಱಿದು ನಿಂದಿರಲಾಱದೆ ಕಾಲ್ಕುಪ್ಪಳಿಸಿ ಭೋಂಕನೆ ಕುಳ್ಳಿರ್ದು ತನ್ನೊಳಗೆ ತೆಕ್ಕನೆ ತೀವಿ ತೆರೆಮಸಗುವ ಶೋಕರಸಮುರ್ಕಿ ಪೊಱಪೊಣ್ಮದುದೆಂಬಂತೆ ಕಣ್ಣನೀರ್ ಕರೆದೊತ್ತರಿಸಿ ಪರಿಯೆ ಮತ್ತೆ ಮತ್ತಱುತ್ತುಂ ಗಂಟಲುರ್ಬಿ ಸೆರೆ ಬಿಗಿದು ಕಣ್ಕೆಂಪೇಱಿ ಮಿಕ್ಕು ನೆಗೆವ ಬಿಕ್ಕಿನೊಳ್....ಶೋಕಾಗ್ನಿಯೊಳ್ ಬೆಂದುಗಿದು ಸೀದು ಸೀಕರಿವೋಗಿ"....ಇಂತು ಕೇಳ್ವ ಪಶುಪಕ್ಷಿಮೃಗ ಗುಲ್ಮಲತೆ ವೃಕ್ಷಾವಳಿಗಳ್ಗೆ ಕರುಣಂ ಪುಟ್ಟುವಂತೆ ರತಿಯತಿ ಶೋಕಂಗೆಯ್ದು"....ಎಂದಾಗ ಮರಗಿಡಗಳೇನು ನಾವೂ ಸಹ ರತಿಯ ಶೋಕದಲ್ಲಿ ಪಾಲ್ಗೊಳ್ಳುತ್ತೇವೆ. ಹಾಗೆಯೇ ಅಪರ್ಣೆ ಆ ಮಹಾವಟವೃಕ್ಷದ ಕೆಳಗೆ ನಿಂತು ಮಾಡಿದ ವಿಪುಳತಪಸ್ಸನ್ನೂ ಹಾಗೂ ಪಾರ್ವತೀ ವಿವಾಹ ಮಂಟಪವನ್ನು ಕವಿ ಗದ್ಯದಲ್ಲಿ ಪ್ರಭಾವಕಾರಿಯಾಗಿ ಚಿತ್ರಿಸಿದ್ದಾನೆ.

ಹರಿಹರನ ರಗಳೆಯಲ್ಲಿರುವ ಎಲ್ಲ ಗದ್ಯ ಸ್ಥಲಗಳು ಪ್ರತಿಭಾನ್ವಿತವೂ, ಪ್ರಭಾವಕಾರಿಯೂ ಆದುದರಿಂದ ಯಾವುದನ್ನು ಉದ್ಧರಿಸಬೇಕು ಯಾವುದನ್ನು ಬಿಡಬೇಕೆಂದು ತೋಚುವುದಿಲ್ಲ. ಅಂತಹ ವೈವಿಧ್ಯಪೂರ್ಣ ಗದ್ಯ ಲೇಖನ ಅವನದು.

ರಗಳೆಗಳಲ್ಲಿ ಮನೋಜ್ಞವಾದ ರೂಪಕ ಚಿತ್ರಗಳನ್ನು ಕೊಡುವಂತೆ, ಗದ್ಯದಲ್ಲಿಯೂ ಉಜ್ವಲವಾದ ರೂಪಕ ಚಿತ್ರಗಳನ್ನು ಕೊಡುತ್ತಾನೆ. ಅವನು ಕೊಡುವ ಪ್ರತಿಯೊಂದು ರೂಪಕವೂ ಮಿನುಗುತ್ತಾ ಓದುಗರ ಮುಂದೆ ನಿಲ್ಲುತ್ತದೆ.

"ಈ ಗದ್ಯ ಪದ್ಯವೆರಡರಲ್ಲಿಯೂ ವಾಣಿ ಸಹಜ ಸಂಪನ್ನವಾಗಿ ನೆರೆ ಬಂದ ತೊರೆಯಂತೆ ಹರಿಯುತ್ತದೆ. ಅದರಲ್ಲಿ ತೇಲುವ ಕಸ ಕಡ್ಡಿಗಳಂತೆ ದೋಷಗಳಿದ್ದರೂ ಅವು ಕಣ್ಣೊತ್ತುವುದಿಲ್ಲ. ಅವುಗಳಿಂದ ಒಮ್ಮೊಮ್ಮೆ ಕಳೆಯೇರುತ್ತದೆ" ನಿಜ. ಡಾ|| ರಂ.ಶ್ರೀ. ಮುಗಳಿಯವರು ಹರಿಹರನ ಬಗ್ಗೆ ಸತ್ಯವನ್ನೇ ಹೇಳುತ್ತಿದ್ದಾರೆ. ಇದಕ್ಕೆ ಹರಿಹರನ ಆವೇಶವೂ ಬಹುಮಟ್ಟಿಗೆ ಕಾರಣ. ಪೂಜ್ಯ ಗುರುವರ್ಯ ಮೊ.ಲ.ನ ರವರು ಹೇಳುವಂತೆ—"ಅವನ ಪ್ರತಿಭೆ ಒಂದು ಗಾಳಿ ಪಟ, ಅದು ಆವೇಶದ ಗಾಳಿ ಬೀಸಿದ ಕೂಡಲೇ ಮೇಲೆ ಮೇಲೆ ಗಮನಿಸಿ ಸರ್ಪದಂತೆ ಹೆಡೆಯಾಡಿಸಿ ರಾಗಾಕಾರದಲ್ಲಿ ನಡೆಯುತ್ತದೆ. ಮೇಘಮಂಡಲವನ್ನು ಮಿಾರುತ್ತದೆ. ವಿಶ್ವವ್ಯಾಪಿಯಾದ ವಿರಾಟ್ ದರ್ಶನವನ್ನು ಮಾಡಿಸಿ ಕೊನೆಗೆ ವಿರೂಪಾಕ್ಷನ ಶಿಖರದಲ್ಲಿ ನಿಲ್ಲಿಸುತ್ತದೆ." ಅಂತಹ ಕಾವ್ಯಯೋಗಿ ಹರಿಹರಕವಿ. ಅವನ ಆವೇಶ ಯಾವ ಪಾಶವೀ ಶಕ್ತಿಗೂ ನಿಲುಕದ ತಾರಕಶಕ್ತಿ. ಅದರ ಭರದಲ್ಲಿ ಪದ್ಯವೇ ಆಗಲಿ, ಗದ್ಯವೇ ಆಗಲಿ ಅತ್ಯುತ್ಕೃಷ್ಟವಾದ ರೀತಿಯಲ್ಲಿ ಮೈದೋರುತ್ತದೆ.

ಕನ್ನಡ ಸಾಹಿತ್ಯದ ಪ್ರಯೋಗ ಶೀಲವಾದ ಕ್ರಾಂತಿ ಪ್ರವಾಹವೊಂದರ ದೊಡ್ಡ ತರಂಗ ಹರಿಹರಕವಿ. ಅವನು ಕನ್ನಡಾಂಬೆಗೆ ನೀಡಿದ ಒಂದು ವಿಶಿಷ್ಟ ತೊಡವು ಎಂದರೆ ಅದು ಮಧುರತಮ ಗದ್ಯ. ಅದು ಅವನು ಕನ್ನಡಕ್ಕೆ ಕೊಟ್ಟ ಅಪೂರ್ವ ಕಾಣಿಕೆಗಳಲ್ಲೊಂದು. ಹರಿಹರನು ಕನ್ನಡ ಗದ್ಯ ಸಾಹಿತ್ಯದ ನೂತನ ಬ್ರಹ್ಮ, ಆದ್ಯ ಪ್ರವರ್ತಕ, ಆಚಾರ್ಯ ಪುರುಷ ಎಂದು ನಾವು ಹೇಳಬೇಕು.

ಜಿ. ಸಾವಿತ್ರಿ

---

# ಛಂದಸ್ಸು[1] ಅದರ ನಿಯಮ ಹಾಗೂ ಸ್ವಾತಂತ್ರ್ಯ

ಛಂದಸ್ಸು ಎಂಬ ಪದದ ಬಳಕೆಯು ಅನೇಕ ವಿಧವಾಗಿದೆ. ಸದ್ಯಕ್ಕೆ ಈ ಮಾತಿನ ಅರ್ಥವನ್ನು ಎರಡು ಬಗೆಯಾಗಿ ಗುರುತಿಸಿಕೊಂಡರೆ ಸಾಕು.

ಒಂದನೆಯ ಅರ್ಥ, ಛಂದಸ್ಸು ಕಾವ್ಯದ ಲಯವನ್ನು ಕುರಿತದ್ದು ಎಂದು. ಇದೇ ಸಾಮಾನ್ಯವಾಗಿ ಬಳಕೆಯಲ್ಲಿರುವ–ವ್ಯಾಪಕವಾದ–ಅರ್ಥ. ಈ ಕಾವ್ಯದ ಛಂದಸ್ಸು ಚೆನ್ನಾಗಿದೆ ಎನ್ನುವಾಗ ಈ ಕಾವ್ಯದ ಲಯ ಚೆನ್ನಾಗಿದೆ; ಇದರಿಂದ ಭಾವಪುಷ್ಟಿ ಉಂಟಾಗಿದೆ ಎಂದೇ ಅರ್ಥ.

ಎರಡನೆಯ ಅರ್ಥ, ಕಾವ್ಯದ ಲಯಕ್ಕೆ ಸಂಬಂಧಿಸಿದಂತೆ ಇರುವ ಭಿನ್ನ ಭಿನ್ನ ಪ್ರಕಾರಗಳಿಗೆ ಸಂಬಂಧಿಸಿದ್ದು. ರಗಳೆಯ ಛಂದಸ್ಸು, ಕಂದ ಛಂದಸ್ಸು, ಅನುಷ್ಟುಭ್ ಛಂದಸ್ಸು ಎನ್ನುವಾಗಲೆಲ್ಲ ಇದೇ ಅರ್ಥ. ಈ ಒಂದೊಂದು ಛಂದಸ್ಸಿಗೂ ನಿಯಮಗಳಿರುವುದು ಎಲ್ಲರಿಗೂ ತಿಳಿದ ವಿಷಯವೇ. ಛಂದಶ್ಶಾಸ್ತ್ರವು ಇಂಥ ಛಂದಸ್ಸುಗಳ ನಿಯಮಗಳನ್ನು ವಿವರವಾಗಿಯೇ ತಿಳಿಸುವ ಶಾಸ್ತ್ರ.

ಆದರೆ ಛಂದಶ್ಶಾಸ್ತ್ರವನ್ನು ನೋಡಿದರೆ ಒಂದೊಂದು ಛಂದಸ್ಸಿಗೆ ಮೊದಲು ಹೇಳಿದ ನಿಯಮಕ್ಕೂ ಇರುವ ಪ್ರಯೋಗಗಳಿಗೂ ಸಾಕಾದಷ್ಟು ಭಿನ್ನತೆ ಕಂಡು ಬರುವ ವಿಷಯ ಅಪರಿಚಿತವಾದದ್ದೇನೂ ಅಲ್ಲ. ಅಷ್ಟೇಅಲ್ಲ ಇದೇ ಒಂದು ನಿಯಮವೋ ಎಂಬ ಹಾಗೆ 'ಮೂಲನಿಯಮ'ಗಳ 'ಉಲ್ಲಂಘನೆ'ಯು ಸಾಕಾದಷ್ಟು ನಡೆದಿರುವುದೂ ಸುವ್ಯಕ್ತ ಇಂಥ 'ಉಲ್ಲಂಘನೆ'ಯು ನಿಯಮಗಳನ್ನು ಅರಿಯದ ಅಜ್ಞತೆಯ ಕಾರಣದಿಂದ ಅಥವಾ ನಿಯಮಗಳನ್ನು ಪಾಲಿಸಲು ಸಾಮರ್ಥ್ಯವಿಲ್ಲದ ಅದಕ್ಷತೆಯಿಂದ ಮೂಡಿಬಂದಿದ್ದು ಛಂದಸ್ಸಿನ ಅವನತಿಯ ಗುರುತಾಗಿದೆಯೊ ಅಥವಾ ಭಾವಾಭಿವ್ಯಕ್ತಿಗೆ ತೊಡಕಾಗಿದ್ದ ಮೂಲನಿಯಮದ ಬಂಧನಗಳನ್ನಷ್ಟೆ ಕಿತ್ತು ಯಶಸ್ವಿಯಾದ ಪ್ರತಿಭೆಯ ಸ್ವಾತಂತ್ರ್ಯದ ಕಹಳೆಯಾಗಿದೆಯೋ ಪರೀಕ್ಷಿಸಬೇಕು. ಆಗ ಛಂದಸ್ಸಿನ ನಿಯಮ–ಸ್ವಾತಂತ್ರ್ಯಗಳ ವಿಚಾರ ಸ್ಪಷ್ಟವಾಗುತ್ತದೆ. ಅದಕ್ಕಾಗಿ ಒಂದು ಸಂಪ್ರದಾಯ ಛಂದಸ್ಸನ್ನೂ ಅದರ ಭಿನ್ನರೂಪಗಳನ್ನೂ ಕಂದಪದ್ಯವನ್ನೂ ಉದಾಹರಣೆಯಾಗಿಟ್ಟುಕೊಂಡು ನೋಡೋಣ.

ಸಂಸ್ಕೃತದ ಆರ್ಯಾವೃತ್ತವು ಆರ್ಯಾಗೀತಿಯಾಗಿ, ಪ್ರಾಕೃತದಲ್ಲಿ ಸ್ಕಂದಕ ಆಗಿ ಕನ್ನಡದಲ್ಲಿ[2] ಕಂದವಾಗಿ ಬಳಕೆಯಾಗಿದೆ.

**ಆರ್ಯಾವೃತ್ತ:**

ದೂರಂ ಮುಕ್ತಾಲತಯಾ  
ಬಿಸಸಿತಯಾ ವಿಪ್ರಲೋಭ್ಯಮಾನೋ ಮೇ  
ಹಂಸ ಇವ ದರ್ಶಿತಾಶೋ  
ಮಾನಸ ಜನ್ಮಾ ತ್ವಯಾನೀತಃ

1. V. S. ಆಪ್ಟೆಅವರ ಸಂಸ್ಕೃತ-ಇಂಗ್ಲಿಷ್ ಅರ್ಥಕೋಶದ ಪುಟ 441ರಲ್ಲಿ ಏಳು ಅರ್ಥಗಳನ್ನು ಗಮನಿಸಬಹುದು
2. ಸಂಸ್ಕೃತದಿಂದ ನೇರವಾಗಿ ಬಂದಿದೆಯೋ ಅಥವಾ ಪ್ರಾಕೃತದ ಮೂಲಕ ಬಂದಿದೆಯೋ ಎಂಬುದು ಗಮನಾರ್ಹ. ಸಂಸ್ಕೃತದ ಮೂಲಕವೇ ಬಂದಿರಬಹುದು ಎಂಬುದು ನನ್ನ ಗ್ರಹಿಕೆ.

**ಕಂದಪದ್ಯ**

ಎನಗಾಸೆದೋಱಿ ಬಿಸಸಿತ
ಮೆನಿಸುವ ನಿಜತಾರಹಾರಲತೆಯಿಂದಂ ಹಂ
ಸನವೊಲ್ ಮಾನಸ ಸಂಭವ
ಮೆನಿಪ ಮದೀಯಾಭಿಮಾನಮುಂ ಕಟ್ಟಿಯಶ್ದಾ

ಮೇಲಿರುವ ಆರ್ಯಾವೃತ್ತದ ಕಂದದ ಅನುವಾದ ಕವಿ ನಾಗವರ್ಮನೇ ಮಾಡಿದ್ದು. ಆರ್ಯಾ ಮತ್ತು ಕಂದಗಳ ಲಕ್ಷಣಗಳಲ್ಲಿ ಎಷ್ಟು ಭಿನ್ನತೆಗಳಿವೆ ನೋಡಿರಿ.

ಎರಡರಲ್ಲೂ ಪಙ್ಕ್ತಿಗಳೇನೋ ನಾಲ್ಕೆ. ಒಂದನೆಯ ಹಾಗೂ ಮೂರನೆಯ ಪಾದಗಳು ಕಂಬದಲ್ಲೂ ಆರ್ಯದಲ್ಲೂ ಒಂದೇ ರೀತಿ.[1] ಆದರೆ ಎರಡನೆಯ ಹಾಗೂ ನಾಲ್ಕನೆಯ ಪಾದಗಳಲ್ಲಿ ತುಂಬ ಭಿನ್ನತೆಯಿದೆ. ಆರ್ಯಾವೃತ್ತದ ಎರಡನೆ ಪಾದದಲ್ಲಿ ನಾಲ್ಕು ಮಾತ್ರೆಯ ನಾಲ್ಕು ಗಣಗಳು ಕೊನೆಗೆ ಒಂದು ಗುರುವಿದೆ; ಕಂದದಲ್ಲಿ[2] ನಾಲ್ಕು ಮಾತ್ರೆಯ ಐದುಗಣಗಳಿವೆ. ಕೊನೆಯ ಗಣದ ಕೊನೆಯ ಮಾತ್ರೆ ಇಲ್ಲೂ ಗುರುವಾಗಿರುತ್ತದೆ. ಆರ್ಯಾವೃತ್ತದ ನಾಲ್ಕನೆಯ ಪಾದದಲ್ಲಿ ನಾಲ್ಕು ಮಾತ್ರೆಯ ಎರಡು ಗಣಗಳು ಮುಂದೆ ಒಂದು ಲಘು (ಇದು ಯತಿಸ್ಥಾನ) ಮತ್ತೆ ನಾಲ್ಕು ಮಾತ್ರೆಯ ಒಂದು ಗಣ ಮೇಲೆ ಒಂದು ಗುರು. ಕಂದದಲ್ಲಿ ಹಾಗಿಲ್ಲ. ನಾಲ್ಕು ಮಾತ್ರೆಯ ಐದು ಗಣಗಳೇ ಇಲ್ಲೂ ಇರುತ್ತವೆ. ಎರಡನೆಯ ಮತ್ತು ನಾಲ್ಕನೆಯ ಪಾದಗಳ ಅಂತ್ಯಗಣವು ಗುರುವಿನಿಂದಲೇ ಮುಗಿಯಬೇಕು. ವಿಷಮ ಸ್ಥಾನಗಳಲ್ಲಿ ಜಗಣ (⏑–⏑) ಬರಬಾರದು. ಆದರೆ ಆರನೆಯ ಗಣವು (ಎರಡನೆಯ ಮತ್ತು ನಾಲ್ಕನೆಯ ಸಾಲಿನ ಮೂರನೆಯ ಗಣವು) ⏑⏑⏑⏑ ಅಥವಾ ⏑–⏑ ಆಗಿಯೇ ಇರಬೇಕು. ಆರ್ಯೆಯಲ್ಲೂ ಎರಡನೆಯ ಪಾದದ ಮೂರನೆಯ ಗಣ ⏑⏑⏑⏑ ಅಥವಾ ⏑–⏑ ಆಗಿಯೇ ಇರಬೇಕು. ನಾಲ್ಕನೆಯ ಪಾದದ ಮೂರನೆಯ ಗಣಸ್ಥಾನದಲ್ಲಿ ಕೇವಲ ಲಘುವೊಂದೇ ಉಳಿದು ಯತಿಸ್ಥಾನವಾಗುತ್ತದೆ. ಹೀಗಾಗಿ ಆರ್ಯೆಯಲ್ಲಿ ಯತಿ ನಿಯತವಾಗಿ ಎರಡನೆಯ ಹಾಗೂ ನಾಲ್ಕನೆಯ ಪಾದಗಳ ಎರಡು ಗಣಗಳಾದ ಮೇಲೆ ಬರುವ ಲಘುವಿನ ಮೇಲೆ ಬೀಳಬೇಕು. ಕನ್ನಡದಲ್ಲಿ ಲಘುವೇನೊ ಉಳಿದಿದೆ. ಆದರೆ ಯತಿ? ಯತಿವಿಲಂಘನದಿಂದರಿದಲ್ತೆ ಕನ್ನಡಂ[3]! ಸಂಸ್ಕೃತದಲ್ಲಿಲ್ಲದ ಆದಿಪ್ರಾಸ ಕಂದದಲ್ಲಿ ಉಂಟು. (ಇದನ್ನು ಮಾತ್ರ ವಿಕಾಸದ ಚಿಹ್ನೆಯೆಂದು ಪಟ್ಟು ಹಿಡಿದು ಕೂಡಲು ಸಾಧ್ಯವಿಲ್ಲ.)

ಮೇಲಿನ ಸ್ಥೂಲವಿವರಣೆಯಿಂದ ಆರ್ಯಾವೃತ್ತ ಮತ್ತು ಕಂದಗಳಿಗೆ ಎಷ್ಟು ಭಿನ್ನತೆಗಳಿವೆ ಎಂಬುದನ್ನು ಕಂಡಂತಾಯಿತು. ಕಂದವಾದ್ದೇನೊ ಆರ್ಯೆಯಿಂದ. ಆದರೆ ಆರ್ಯೆಯ ನಿಯಮುಗಳು ಕಂದದಲ್ಲುಳಿದಿಲ್ಲ, ಹಾಗೆ ಹಾಗೆಯೇ ಮಾತ್ರೆಗಳ ಲೆಕ್ಕದಲ್ಲಿ, ಯತಿಯ ವಿಚಾರದಲ್ಲಿ ತುಂಬ ವ್ಯತ್ಯಾಸನೇ ಕಾಣುತ್ತದೆ. ಆದರೆ ಮಾತ್ರೆಗಳ ಲೆಕ್ಕದಲ್ಲಿ ಭಿನ್ನತೆಯಾದ್ದರಿಂದಾಗಲಿ, 'ನಿಯತ ಯತಿ'ಯು ಉಳಿದಿಲ್ಲದ್ದರಿಂದಾಗಲಿ ಕಂದವು. ಆರ್ಯಾವೃತ್ತವು ಹಾಳಾದ ಛಂದಸ್ಸಿನ ರೂಪವಾಗಿಲ್ಲ; ಜನ್ನ ಮೊದಲಾದ ಕವಿಗಳ ಕೈಯಲ್ಲಿ

---

1. ಕಂದವನ್ನು ಪೂರ್ವಾರ್ಧ ಮತ್ತು ಉತ್ತರಾರ್ಧ ಎಂದು ಎರಡು ಭಾಗ ಮಾಡಿ ಒಂದೊಂದು ಭಾಗದಲ್ಲಿ ನಾಲ್ಕು ಮಾತ್ರೆಯ ಎಂಟು ಗಣಗಳನ್ನು ಗುರುತಿಸಲಾಗುತ್ತದೆ.
2. ಕಂದದಲ್ಲಿ ಬರುವ ಗಣಗಳನ್ನು ನಾಲ್ಕು ಮಾತ್ರೆಯ ಗಣಗಳು ಎಂದು ಕರೆದಿಲ್ಲ. ನಾಗವರ್ಮ ಛಂದೋಂಬುಧಿಯಲ್ಲಿ ಇವನ್ನು ಗಿರಿಶಂ (⏑⏑-), ಧೂರ್ಜಟಿ (-⏑⏑), ಶರ್ವಂ (- -), ಪುರಾರಿ (⏑-⏑) ಮತ್ತು ಪುರರಿಪು (⏑⏑⏑⏑) ಗಣಗಳು ಎಂದೇ ಕರೆಯುತ್ತಾನೆ.
3. ಕೇಶಿರಾಜನ ಶಬ್ದಮಣಿದರ್ಪಣದ ಕೊನೆಯ ವೃತ್ತ. ಛಂದೋಂಬುಧಿ: ಚತುರ್ಥಾಧಿಕಾರ, ಪದ್ಯ ೩

ಅದು ಕನ್ನಡದ ಕಂದನೆಂಬಂತೆ ವೈತಾಳೀ ಆರ್ಯಾ ವೃತ್ತದ ವಿಕಾಸದ ರೂಪಿನ ಗುರುತಾಗಿದೆ ಎಂದೇ ಅನುಭವವೇದ್ಯವಾಗುತ್ತದೆ. ಈ ಕೆಲವು ಕಂದದ ಉದಾಹರಣೆಗಳನ್ನು ನೋಡಿ:

ಕರುಣಿಸು ದೈವಮೆ
ಪಾಲಿಸು ಹರಾದ್ರಿ
ರಕ್ಷಿಸೆಲೆ್ರಾತ್ರಿ
ಶರಣಾಗು ಸರೋವರವೆ
ವನದೇವಿಯರಿರಾ
ನೆಱೆದೆಲ್ಲರುಮೆನಗೆ ಪುರುಷಭಿಕ್ಷೆಯನಿಕ್ಕಿ|| 1 ೪೯೫

ತಾಂ ಗಡ
ಶೂರಂ ಗಡ
ಕಪ್ಪಂಗೊಡೆ ನಾಂ ಗಡ
ಕನಲ್ದು ಬರ್ಪಂ ಗಡ
ಯುದ್ಧಂ ಗಡ
ಗೆಲ್ವಂ ಗಡ
ಬಳಿಕಂ ಗೆಲದೇಕಿರ್ಪನಿರ್ಪನಮನು ಸಮರ್ಥಂ 2

ಮೇಲಿನ ಎರಡು ಪದ್ಯಗಳನ್ನು ಓದುವಾಗ (ಕಂದವನ್ನು ಬರೆದಿರುವ ರೀತಿ ಯತಿ ಸೂಚಕವಾಗಿಯೂ ಇದೆ.) ಕಂದದಲ್ಲಿ ಎರಡನೆಯ ಹಾಗೂ ನಾಲ್ಕನೆಯ ಪಾದಗಳ ಮೂರನೆಯ ಗಣದ ಮೊದಲ ಲಘುವೇ ಯತಿಸ್ಥಾನ ಎಂಬ ನಿಯಮ ಉಳಿದಿಲ್ಲ. ಮೇಲಿನಂತೆ ಬರೆದಿದ್ದರಿಂದಾಗಲಿ, ಯತಿ ನಿಯತಸ್ಥಾನದಲ್ಲಿ ಬಂದಿಲ್ಲ ಎಂಬ ಕಾರಣದಿಂದಾಗಲಿ ಅವುಗಳ ಕಾವ್ಯತ್ವಕ್ಕೆ ಕುಂದು ಬಂದಿಲ್ಲ; ಕಳೆಯೇರಿದೆ. ಅದೂ ಅಲ್ಲದೆ ಇವು ಕಂದ ಎಂಬ ಕಾರಣಕ್ಕಾಗಿಯಲ್ಲ ಸುಂದರವಾಗಿರುವುದು; ಕವಿ ಹೇಳಬಯಸಿದ ಭಾವ ಚೆನ್ನಾಗಿ ಪ್ರಕಟವಾಗಿದೆ ಎಂಬ ಕಾರಣಕ್ಕಾಗಿ. ಇನ್ನೊಂದು ಕಂದಪದ್ಯವನ್ನು ನಾವು ಗಮನಿಸೋಣ.

ವಿತತ ಯಶಂಗಾ ವಿಪ್ರಂ
ಗೆ ತತ್ ಪ್ರಿಯಂ ಸಂಭವಂ ದ್ವಿಜನ್ಮಂಗೆ ಗುಣಾ
ನ್ವಿತೆ ಸತಿ ಸಜ್ಜನಿಕೆಗರುಂ
ಧತಿಗೆ ಮಿಗಿಲ್ ಕೊಂಡಿನಬ್ಬೆಯೆಂಬಳ್ ಪೆಸರಿಂ 3

ನಾಗವರ್ಮನ ಛಂದೋಂಬುಧಿಯ ಈ ಕಂದ ಸಾಂಪ್ರದಾಯಿಕ ನಿಯಮಗಳ ದೃಷ್ಟಿಯಿಂದ ಸಮರ್ಪಕವಾಗಿಯೇ ಇದೆ. ಆದರೆ ಮೇಲಿನ ಎರಡು ಉದಾಹರಣೆಗಳಲ್ಲಿನ ಸೊಗಸು ಇದಕ್ಕಿಲ್ಲ. ವಿಚಾರ ಮಾಡಿದರೆ ತಿಳಿಯುತ್ತದೆ, ಮೇಲಿನೆರಡು ಕಂದಗಳೂ ಯಶಸ್ವಿಯಾಗಿರುವುದು ಭಾವಪುಷ್ಟಿ ಆ ಲಯದಲ್ಲಿ ಉಂಟಾಗಿರುವುದರಿಂದ ಎಂದು. ಛಂದೋಂಬುಧಿಯ ಕಂದ ಗದ್ಯವಾಗಿಯೇ ಇದ್ದರೂ ಬಾಧಕವೇನೂ ಆಗುತ್ತ ಇರಲಿಲ್ಲ. ಇದರಿಂದ ಇನ್ನೊಂದು ವಿಷಯ ಸ್ಪಷ್ಟವಾದ ಹಾಗಾಯಿತು; ಕೇವಲ ನಿಯಮಪಾಲನೆಯೇ ಛಂದಸ್ಸಿನ ಜೀವಾಳವಲ್ಲ; ಸಾರ್ಥಕವಾಗಿ ಭಾವಪುಷ್ಟಿಯಾಗುವ ಹಾಗೆ ವೈತಾಳುವುದೇ ಛಂದಸ್ಸಿನ ರಹಸ್ಯ. ನಾಗವರ್ಮನ ಕಾದಂಬರಿಯ 'ಕರುಣಿಸು ದೈವಮೆ....'ಎಂಬ ಕಂದದೊಡನೆ ಸ್ವಲ್ಪ ಹೆಚ್ಚು ಕಡಿಮೆ ಸಮಾನಭಾವದ ಮಹಾದೇವಿಯಕ್ಕನ ವಚನವನ್ನು ಹೋಲಿಸೋಣ.

ಚಿಲಿ ಮಿಲಿ ಎಂದೋದುವ ಗಿಳಿಗಳಿರಾ ನೀವು
ಕಾಣಿರೆ, ನೀವು ಕಾಣಿರೆ,
ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು
ಕಾಣಿರೆ, ನೀವು ಕಾಣಿರೆ,
ಎರಗಿ ಬಂದಾಡುವ ದುಂಬಿಗಳಿರಾ ನೀವು
ಕಾಣಿರೆ, ನೀವು ಕಾಣಿರೆ,
ಕೊಳನ ತಡಿಯೊಳಾಡುವ ಹಂಸಗಳಿರಾ ನೀವು
ಕಾಣಿರೆ, ನೀವು ಕಾಣಿರೆ,
ಗಿರಿಗಹ್ವರಗಳೊಳಗಾಡುವ ನವಿಲುಗಳಿರಾ

1. ಕರ್ನಾಟಕ ಕಾದಂಬರೀ ಸಂಗ್ರಹ, ೪-೯೫.
2. ಸಂಕ್ಷಿಪ್ತ ರಾಜಶೇಖರ ವಿಳಾಸಂ-ಸಂಪಾದಕರು : ಟಿ.ಯನ್. ಚೆನ್ನಪ್ಪ. ಪುಟ 26. ದ್ವಿತೀಯಾಶ್ವಾಸಂ, ಪದ್ಯ 16.
3. ಛಂದೋಂಬುಧಿಃ ಪ್ರಥಮಾಧಿಕಾರ, ಪದ್ಯ ೧೬.

ನೀವು ಕಾಣಿರೆ, ನೀವು ಕಾಣಿರೆ
ಚೆನ್ನಮಲ್ಲಿಕಾರ್ಜುನನೆಲ್ಲಿರ್ದಿಹನೆಂದು ನೀವು
ಹೇಳಿರೆ, ನೀವು ಹೇಳಿರೆ ?

ಈ ವಚನದ ಲಯವು ಅದ್ಭುತವಾಗಿದೆ. ಈ ವಚನದೊಂದಿಗೆ ಹೋಲಿಸಿದಾಗ ಪ್ರತಿಭಾವಂತ ಕವಿಯಾದ ನಾಗವರ್ಮನ ಅದ್ಭುತ ಕಂದದ ನಾಲ್ಕನೆಯ ಸಾಲಿನ ಸೊಗಸು ರವೆಯಷ್ಟು ಕಡಿಮೆ ಆಗಿ ಕಾಣುತ್ತದೆ. (ಈ ಮಾತನ್ನು ಹೇಳುವಾಗ ನಾಗವರ್ಮನ ಕಲಾವಂತಿಕೆಗೆ ಗೌರವ ಸೂಚಿಸದ ಅಥವಾ ಆರ್ಯಾವೃತ್ತವನ್ನು ಕಂದಪದ್ಯವಾಗಿ ಬಳಸಿ ವೈವಿಧ್ಯ ತುಂಬಿದ ಕವಿಪ್ರತಿಭೆಯನ್ನು ಅಲ್ಲಗಳೆವ ಮೌಢ್ಯ ನಮ್ಮದಾಗಬಾರದು.)

ಛಂದಸ್ಸಿನ ನಿಯಮ ಇದ್ದಂತೆ ಉಳಿದಿಲ್ಲ ಎಂಬುದನ್ನು ಇನ್ನೂ ಸ್ಪಷ್ಟತರವಾಗಿ ಕಾಣಬೇಕಾದರೆ ಅಂಶಗಣದ ಪಿರಿಯಕ್ಕರ ಛಂದಸ್ಸನ್ನೂ ಗಮನಿಸೋಣ. ನಾಗವರ್ಮನು ಛಂದೋಂಬುಧಿಯಲ್ಲಿ ಅದರ ಲಕ್ಷಣವನ್ನು ಹೀಗೆ ಹೇಳುತ್ತಾನೆ:

ಮೊದಲೊಳಜಗಣಂ ಕುಂದದೆ ಬರ್ಕತ್ತ
ಮುಯ್ದುಗಣಂಗಳೆ ವಿಷ್ಣುವಕ್ಕುಂ
ತುದಿಯೊಳೇೞಂಬ ತಾಣದೊಳೆಲ್ಲಿಯುಂ ಕಂದ
ರ್ಪರಿಪುಗಣಂ ನೆಲಸಿನಿಲ್ಕೆ
ಪದದೊಳೆರಡೆಂಬ ಸಂಖ್ಯೆಯೊಳಾಱೞೊಳಜ
ಗಣಂ ಸಮವಾಯಮಪ್ಪೊಡಕ್ಕುಂ
ಸದಮಳೇಂದುನಿಭಾನನೆ ನಾಕಿಗನಿಪ್ಪದಿ
ನಿಂತಿದು ಪಿರಿಯಕ್ಕರಂ 1

ಇದು ಅಂಶಗಣದ ನಾಲ್ಕು ಸಾಲಿನ ಪದ್ಯ. ಒಂದು ಸಾಲಿನಲ್ಲಿ ಏಳುಗಣ ಇರಬೇಕು. ಮೊದಲ ಗಣ ಬ್ರಹ್ಮವಾಗಿರಬೇಕು. ಏಳನೆಯಗಣ ರುದ್ರವಾಗಿರಬೇಕು. ಮಿಕ್ಕ ಐದು ವಿಷ್ಣುಗಣಗಳು (ಮೂರನೆಯ ಸಾಲು, ಲಕ್ಷಣ ಪದ್ಯದಲ್ಲಿ ಪಾಠಾಂತರದಿಂದ ಕೂಡಿ ಸ್ವಲ್ಪ ಅಸ್ಪಷ್ಟವಾಗುತ್ತದೆ.) ಎರಡು ಮತ್ತು ಆರನೆಯ ಗಣಗಳಲ್ಲೂ ಬ್ರಹ್ಮ ಗಣ ಬರಬಹುದು.

ಲಕ್ಷ್ಯ ಲಕ್ಷಣ ಸಮನ್ವಿತವಾದ ಈ ಪದ್ಯದ ಮೂರನೆಯ ಸಾಲಿಗಿರುವ ಪಾಠಾಂತರ ಈ ಛಂದಸ್ಸಿನ 'ನಿಯಮ'ದಲ್ಲಿ ಬಳುಕು (flexibility) ಹೇಗಾಗಿದೆ ಎಂಬುದನ್ನು ತಾನೇ ಸೂಚಿಸುತ್ತದೆ. ಅದಿರಲಿ, ಪಿರಿಯಕ್ಕರದ ಉದಾಹರಣೆಗಳನ್ನು ಒಮ್ಮೆ ಗಮನಿಸಿ. ಬ್ರಹ್ಮಗಣವು, ಮೊದಲಲ್ಲೇ ಏನು ಎರಡನೆಯ ಗಣ ಸ್ಥಾನದಿಂದ ಹಿಡಿದು ಆರನೆಯ ಗಣಸ್ಥಾನದವರೆಗೆ ಎಲ್ಲಾ ಸ್ಥಾನಗಳಲ್ಲೂ ವಿಷ್ಣುಗಣದ ಬದಲಿಗೆ ಬಂದಿದೆ. ಕೆಲವೆಡೆ ಮೊದಲ ಬ್ರಹ್ಮಗಣಕ್ಕೆ ಬದಲು ವಿಷ್ಣುಗಣವೂ ಬಳಕೆಯಾಗಿದೆ. ಈ ಛಂದಸ್ಸಿನ ವಿಚಾರವನ್ನು ಕೂಲಂಕಷವಾಗಿ ಗಮನಿಸಿದ ಕೀರ್ತಿಶೇಷ ಶ್ರೀ ಬಿ. ಎಂ. ಶ್ರೀ. ಅವರು ಪಿರಿಯಕ್ಕರದ ಅನೇಕ ಉದಾಹರಣೆಗಳನ್ನು ಕನ್ನಡ ಕೈಪಿಡಿಯ ತಮ್ಮ ಕನ್ನಡ ಛಂದಸ್ಸಿದ ಚರಿತ್ರೆ 2 ಎಂಬ ಭಾಗದಲ್ಲಿ ವಿಪುಲವಾಗಿಯೇ ಕೊಟ್ಟು ಅದರ ಲಕ್ಷಣವನ್ನು ಹೀಗೆ ಸೂಚಿಸಿದ್ದಾರೆ, ಕಾವ್ಯ–ಪ್ರಯೋಗಗಳ ಆಧಾರದಿಂದ.

"ನಾಲ್ಕು ಪಾದ: ಪ್ರತಿ ಪಾದದಲ್ಲಿಯೂ ಏಳು ಗಣ: ಮೊದಲು ಬ್ರಹ್ಮ, ಆಮೇಲೆ ಐದು ವಿಷ್ಣು:ಕೊನೆಯಲ್ಲಿ ಒಂದು ರುದ್ರ: ವಿಷ್ಣುವಿಗೆ ಬದಲಾಗಿ ಹಾಡಿಗೆ ಹೊಂದಿ ಬ್ರಹ್ಮ ಬರಬಹುದು; ಮೊದಲನೆಯ ಬ್ರಹ್ಮಕ್ಕೆ ಅಪೂರ್ವವಾಗಿ ವಿಷ್ಣು

1. ಛಂದೋಂಬುದಿ: ಜ-ಳರ ಪಾಠಾಂತರಗಳನ್ನು ಕೈಬಿಡಲಾಗಿದೆ. ಇಲ್ಲಿ ಬಳಸಿಕೊಂಡಿರುವ ಪ್ರತಿ ಶ್ರೀ ಎಚ್. ಎಸ್. ರಾಮಸ್ವಾಮಿಅಯ್ಯಂಗಾರ್ ಅವರು ಸಂಪಾದಿಸಿದ್ದು:

2. ಕನ್ನಡ ಕೈಪಿಡಿ: ಸಂಪುಟ I ಪುಟ. 126—130

ಬರಬಹುದು: ಕೊನೆಯ ರುದ್ರ ನಿತ್ಯ." 1

ನಾಗವರ್ಮನ ಲಕ್ಷಣವನ್ನು ಬಿ. ಎಂ. ಶ್ರೀ. ಅವರ ಲಕ್ಷಣದೊಂದಿಗೆ ಇಟ್ಟು ನೋಡಿದಾಗ ಪಿರಿಯಕ್ಕರ ಛಂದಸ್ಸಿನ ನಿಯಮದಲ್ಲಿ ಬೇಕಾದಷ್ಟು ವ್ಯತಾಸವಾಗಿರುವುದು ಕಾಣುತ್ತದೆ. ಈ ವ್ಯತ್ಯಾಸವು ಪಿರಿಯಕ್ಕರ ಪಡೆದ ವೈವಿಧ್ಯವನ್ನೂ, ಸೊಗಸನ್ನೂ ಸೂಚಿಸುತ್ತಿದೆ. ಹೀಗಾಗಿ ಇಲ್ಲಿ ನಿಯಮ ಉಲ್ಲಂಘನೆಯಾಗಿದೆ ಎಂಬುದಕ್ಕಿಂತ ಕಟ್ಟುನಿಟ್ಟಾದ ತೊಡಕಿನ ನಿಯಮದಿಂದ ಅಕ್ಕರವು ಬಿಡುಗಡೆ ಪಡೆದಿದೆ ಎನ್ನಬಹುದು. ಈ ಪಿರಿಯಕ್ಕರದಲ್ಲಿ ಉಂಟಾದ ಸ್ವಾತಂತ್ರ್ಯ ಹೇಗೆ ಆ ಛಂದಸ್ಸಿನ ವಿಕಾಸದ ಗುರುತಾಯಿತು ಎಂದು ಹಳಗನ್ನಡ, ನಡುಗನ್ನಡ ಕಾವ್ಯಗಳಲ್ಲಷ್ಟೆ ನೋಡಿದರೆ ಆಗಲಿಲ್ಲ. ಹೊಸಗನ್ನಡ ಕವಿ ಶ್ರೀ. ದ. ರಾ. ಬೇಂದ್ರೆ ಅವರು ಪಿರಿಯಕ್ಕರ ಛಂದಸ್ಸು ಹೇಗೆ ಹೊಸ ಒಂದು ರೂಪವನ್ನೆ ತಮ್ಮ ಕೈಯಲ್ಲಿ ಪಡೆದಿದೆ, ಎಂಬುದನ್ನು ಸಖಿಗೀತ ಎಂಬ ದೀರ್ಘ ಕವನದಲ್ಲಿ ಹೀಗೆ ಹೇಳಿದ್ದಾರೆ:

"ಅಕ್ಕರ ಛಂದವು ಸಾಂಗತ್ಯ-ಸಂಸ್ಕಾರ
ಹೊಂದಿಲ್ಲಿ ಬಂದಿದೆ ಹೊಸಹೊಸದು" 2

ಹಳೆಯ ಛಂದಸ್ಸು ಇದ್ದಂತೆ ಸೊರಗದೆ ಕವಿಗಳ ಕೈಯಲ್ಲಿ ಹೇಗೆ ವಿಕಾಸವಾಗುತ್ತ-ನಿಯಮ ಬಂಧನಗಳನ್ನು ಕಳಚಿಕೊಳ್ಳುತ್ತ-ಹೋಗುತ್ತದೆ-ಹೋಗಿದೆ-ಎಂಬುದನ್ನು ಇದರಿಂದ ಇನ್ನಷ್ಟು ಸ್ಪಷ್ಟತರವಾಗಿ ತಿಳಿದಂತಾಯಿತು. ಕವಿ ಛಂದಸ್ಸಿನ ನಿಯಮಗಳನ್ನು ಆಷ್ಟಿಷ್ಟು ಕಡಿಮೆ ಮಾಡಲು ಯತ್ನಿಸುವುದು, ನಿಯಮಗಳನ್ನು ಪಾಲಿಸುವುದು ಶ್ರಮವಾಗುತ್ತದೆ ಎಂಬ ಕಾರಣಕ್ಕಾಗಿ ಅಲ್ಲ. ನಿಯಮಗಳು ಎಂಥ ಪ್ರತಿಭೆಗಾದರೂ ತೊಡಕೇ ಆಗುತ್ತವೆಯಾದ್ದರಿಂದ. ಒಂದೆರಡು ಉದಾಹರಣೆಗಳನ್ನು ನೋಡೋಣ. ಭಾಮಿನೀ ಷಟ್ಪದಿಯಲ್ಲಿಯೇ ತನ್ನ ಪ್ರತಿಭೆಯ ವಿಶ್ವರೂಪದರ್ಶನ ಮಾಡಿಸುವ ಗದುಗಿನ ನಾರಣಪ್ಪನ ದೈತ್ಯ ಪ್ರತಿಭೆ ಕೂಡ ತನ್ನ ಪ್ರಾರ್ಥನಾ ಪದ್ಯದ ಕೊನೆಯ ಪಾದದಲ್ಲೇ 'ಕಾವುದಾನತ ಜಗವ ಗದುಗಿನ ವೀರನಾರಯಣ' ಎಂದು ಬಳಸಿರುವುದನ್ನು ಗಮನಿಸಿ. ಛಂದಸ್ಸಿನ ನಿಯಮ ನಾರಾಯಣ ಪದದ ಕೈಕಾಲು ಮುರಿದು ನರಯಣನೆ, ನಾರಯಣ ಎಂದೆಲ್ಲ ಆಗುವಂತೆ ಮಾಡಿದೆ. ಸಂಸ್ಕೃತದ ಅಮರುಶತಕದ ಈ ವೃತ್ತವನ್ನು ಗಮನಿಸಿ,

ಕಾಂತೇ ತಲ್ಪಮುಪಾಗತೇ ವಿಗಲಿತಾ ನೀವೀ
ಸ್ವಯಂ ಬಂಧನಾತ್
ವಾಸೋ ವಿಶ್ಲಥಮೇಖಲಾಗುಣ ಧೃತಂ
ಕಿಂಚಿನ್ನಿತಂಬೇ ಸಿತ್ಥಂ
ಏತಾವತ್ಸಖಿ ವೇದ್ಮಿ ಸಾಂಪ್ರತಮಹಂ ತಸ್ಯಾಂಗ
ಸಂಗೇ ಪುನಃ
ಕೋಯಂ ಕಾಸ್ಮಿರತಂ ನುವಾ ಕಥಮಿತಿ
ಸ್ವಲ್ಪಾಉಪಿ ಮೇನಸ್ಮೃತಿಃ। 3

ಪದ್ಯದ ತಿರುಳಿನ ಭಾಗ 'ಏತಾವತ್ಸಖಿ ವೇದ್ಮಿ ಸಾಂಪ್ರತಮಹಂ' ಎಂಬಲ್ಲಿಗೆ ನಿಲ್ಲಬೇಕು. ಅದು ಅದ್ಭುತವಾದ ಅಂತ್ಯ. ಅಲ್ಲಿಂದ ಮುಂದಕ್ಕೆ ಭಾವ ಅವಿಶ್ರಾಂತವಾಗಿ ಧ್ವನಿತವಾಗುತ್ತ

---

2. ಸಖೀಗೀತ. ೧೯೫೮ರ ಚತುರ್ಥಾವೃತ್ತಿ. ಪುಟ ೪೩ ಪಙ್ಕ್ತಿ, ೯೩೭-೯೩೮.
3. ಅಮರುಶತಕ. ಪುಟ 96.

ಹೋಗುತ್ತದೆ. 'ಸಖಿ ನನಗೀಗ ನೆನಪಿರುವುದು ಇಷ್ಟೇ' ಎಂದವಳ ಬಾಯಿಂದಲೇ ಕವಿ ಮುಂದೆ "ನನ್ನ ಇನಿಯನ ಅಂಗಸಂಗವಾದ ಮರುಕ್ಷಣವೆ ಅವನು ಯಾರು? ನಾನು ಯಾರು? ರತಿಸುಖ ಯಾವ ಬಗೆಯದು? ಇವು ಯಾವುವೂ ನನಗೆ ಸ್ವಲ್ಪವೂ ನೆನಪಿಲ್ಲ" 1 ಎಂದು ಹೇಳಿಸುವುದು ಪದ್ಯದ ಮೊದಲ ಅರ್ಧದ ಅರ್ಥವನ್ನು ನೀರುಜೊಳ್ಳಾಗಿ ಮಾಡಿಬಿಡುತ್ತದೆ. ಬಹುಶಃ ಕವಿ ಎರಡೂವರೆ ಸಾಲಿಗೇ ಭಾವ ಮುಗಿದರೂ ವೃತ್ತವನ್ನು ಮುಗಿಸಲು ರಸ್ತೆಯ ಹಳ್ಳಕ್ಕೆ ಜಲ್ಲಿ ತುಂಬಿದ ಹಾಗೆ ಈ ಒಂದೂವರೆ ಸಾಲಿನ ಭಾಗವನ್ನು ತುಂಬಿರಬೇಕು.

ಇಷ್ಟನ್ನು ಗಮನಿಸಿದ ಮೇಲೆ ನಾವು ಛಂದಸ್ಸಿನ ವಿಷಯವಾಗಿ ಹೀಗೆ ಹೇಳಬಹುದು:

೧) ಕಟ್ಟುನಿಟ್ಟಾದ ಛಂದಸ್ಸಿನ ನಿಯಮದಲ್ಲಿ ಶಿಥಿಲತೆ ತೋರಿ ವೈವಿಧ್ಯ ಮೂಡುತ್ತಿದೆ. 2

೨) ಛಂದಸ್ಸು ಇರುವುದು 3 ಭಾವಾಭಿವ್ಯಕ್ತಿಗಾಗಿ. ಭಾವವು ಸಮುಚಿತವಾಗಿ ಅಭಿವ್ಯಕ್ತವಾಗುವ ದೃಷ್ಟಿಯಿಂದಷ್ಟೇ ಆ ಛಂದಸ್ಸಿನ ನಿಯಮಗಳಿಗೆ ಗೌರವ.

೩) ಭಾವವು ಸಹಜವಾಗಿ ಪ್ರಕಟವಾಗಲು ಇಂಥ ಛಂದಸ್ಸೇ ಆಗಬೇಕು ಎಂಬ ಹಟದ ನಿಯಮ ಯಾವುದೂ ಇಲ್ಲ. ವೃತ್ತದಲ್ಲಾಗಲಿ, ಕಂದದಲ್ಲಾಗಲಿ, ಷಟ್ಪದಿಯಲ್ಲಾಗಲಿ ಅಥವಾ ವಚನದಲ್ಲಾಗಲಿ ಭಾವವು ಸಮುಚಿತವಾಗಿ ಅಭಿವ್ಯಕ್ತ ಆದರೆ ಸಾಕು.

ಈ ಅಭಿಪ್ರಾಯಗಳನ್ನು ಸೋದಾಹರಣವಾಗಿ ಪರೀಕ್ಷಿಸೋಣ. ನಾಗವರ್ಮನ 'ಕರುಣಿಸು ದೈವವೆ....' 4 ಎಂಬ ಪದ್ಯವನ್ನೂ ಮಹಾದೇವಿಯಕ್ಕನ "ಚಿಲಿಮಿಲಿ ಎಂದೋದುವ ಗಿಳಿಗಳಿರಾ...." 5 ಎಂಬ ವಚನವನ್ನೂ ಪಂಪಕವಿಯ ಆದಿಪುರಾಣದ ಈ ಪದ್ಯದೊಡನೆ ಹೋಲಿಸಿ:

ಸುರತರುನಂದನಂಗಳಿರ ರತ್ನಪಿನದ್ಧವಿಮಾನ
ಕುಟ್ಟಿಮಾಂ-
ತರ ಸುರತಾಲಯಂಗಳಿರ ಚಾರುವಿಲೋಲ
ಕಟಾಕ್ಷಪಾತ ಸೌಂ-
ದರ ಪರಿವಾರ ದೇವಿಯರಿರಾ ಕಡುಕೆಯ್ದು
ಕೃತಾಂತನಿಂತು ನಿ-
ರ್ನೆರನೊೞಿದುಯ್ಯೆ ಬಾರಿಸದೆ ಕೆಮ್ಮನು
ಪೇಕ್ಷಿಸಿ ನೋಡುತಿರ್ಪಿರೇ 6 (ಆದಿಪುರಾಣ ೩-೪)

ಯಾರೂ ಈ ಮೂರು ಉದಾಹರಣೆಗಳನ್ನೂ ಗಮನಿಸಿ 'ಪಂಪ ನೀನು ವಚನದಲ್ಲೇಕೆ ಬರೆಯಲಿಲ್ಲ, ನಾಗವರ್ಮ, ನೀನು ವೃತ್ತದಲ್ಲೇಕೆ ಬರೆಯಲಿಲ್ಲ? ಮಹಾದೇವಿಯಕ್ಕ ನೀನು ಕಂದದಲ್ಲೋ ವೃತ್ತದಲ್ಲೋ ಯಾಕೆ ಬರೆಯಲಿಲ್ಲ?" ಎಂದು ಕುತರ್ಕ ಮಾಡಲು ಹೋಗುವುದಿ ವೃತ್ತದಲ್ಲಿಲ್ಲ. ಬರೆದಿರಲಿ, ಕಂದದಲ್ಲಿ ಬರೆದಿರಲಿ ಅಥವಾ ಇನ್ನಾವುದೇ ಛಂದಸ್ಸಿನಲ್ಲಿ ಬರೆದಿರಲಿ ಬಳಸಿರುವ ಛಂದಸ್ಸು ವ್ಯಕ್ತವಾಗಬೇಕಾದ ಭಾವವನ್ನು

1. ಅದೇ ಪದ್ಯದ ಅನುವಾದ.
2. ಇಲ್ಲಿಯವರೆಗೆ ಈ ವಿಚಾರವನ್ನು ನಿದರ್ಶನ ಸಹಿತವಾಗಿ ನೋಡಿ ಆಗಿದೆ. ಮಿಕ್ಕವನ್ನು ಮುಂದೆ ಪರೀಕ್ಷಿಸಲಾಗಿದೆ.
3. ಛಂದೋಬದ್ಧವಾಗಿದ್ದರೆ ನೆನಪಿಡಲು ಅನುಕೂಲ ಎಂಬ ವಾದ ಕಾವ್ಯಕ್ಕೆ ಬೇಕಾದ ಛಂದಸ್ಸಿನ ವಿಚಾರ ಮಾಡುವಾಗ ತೀರ ಗೌಣವಾಗುತ್ತದೆ.
4. ಹಿಂದೆಯೇ ಈ ಪದ್ಯದ ಪೂರ್ತಿ ಪಾಠ ಉದ್ಧರಿಸಲ್ಪಟ್ಟಿದೆ.
5. ಹಿಂದೆ ಉದ್ಧರಿಸಲಾಗಿದೆ.
6. ಆದಿಪುರಾಣ.

ಚೆನ್ನಾಗಿ ವ್ಯಕ್ತಗೊಳಿಸಿದೆಯೆ ಅಥವಾ ಇಲ್ಲವೆ ಎಂಬುದಷ್ಟನ್ನೆ ಸಹೃದಯ ಗಮನಿಸುತ್ತಾನೆ. ಭಾವ ಬರೆದ ರೀತಿಯಲ್ಲಿ ಪುಷ್ಟವಾಗಿದ್ದರೆ ತೀರಿತು. ವೃತ್ತದಲ್ಲಿ ಬರೆದದ್ದರಿಂದ ಉತ್ತಮ; ಕಂದದಲ್ಲಿ ಬರೆದದ್ದರಿಂದ ಮಧ್ಯಮ; ವಚನದಲ್ಲಿ ಬರೆದದ್ದರಿಂದ ಅಧಮ ಎಂದು ಹೇಳಲಿಕ್ಕೆ ಸಾಧ್ಯವೇ? ಕೇವಲ 1 ಛಂದಸ್ಸನ್ನು ಬಳಸುವುದರಿಂದಷ್ಟೇ ಯಾರೂ ಪ್ರತಿಭೆಯ ದೃಷ್ಟಿಯಲ್ಲಿ ಮೇಲಾದವರು ಅಥವಾ ಕೀಳಾದವರು ಆಗಲಾರರು.

ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಸಾಂಪ್ರದಾಯಿಕ ಛಂದಸ್ಸು ಅಥವಾ ಅದರ ನಿಯಮ ಪಂಪನಂಥವರಿಗೂ ಹೇಗೆ ತೊಡಕಾಗುತ್ತದೆ ಎಂಬುದಕ್ಕೆ ಈ ಕೆಳಗಿನ ಪದ್ಯ ನೋಡಿ.

ಒಡಲೊಳೆ ಜೀವಮಿರ್ದು ಗಡ ಸಂಚಿಸುತಿರ್ಪುದು
ಪುಣ್ಯ ಪಾಪಮಂ
ಗಡ ಬೞಿಕತ್ತ ಬೇಱಿ ಪೆಱತೊಂದೊಡಲೊಳ್
ಗಡ ತಾನೆ ನಿಂದೊಡಂ
ಬಡುವುದು ಧರ್ಮ ಕರ್ಮ ಫಲಮಂ ಗಡ
ಸತ್ತನೆ ಮತ್ತೆ ಪುಟ್ಟುವಂ
ಗಡ ಪುಸಿಕಾಣ ಡಂಬಮಿದು ಖೇಚರ ನೀನಿದ
ನೆಂತು ನಂಬಿದೋ? 2 (ಆದಿಪುರಾಣ ೨-೮)

ಈ ಪದ್ಯದಲ್ಲಿ ಬರುವ 'ಗಡ'ದ ಬಳಕೆಯನ್ನು ಷಡಕ್ಷರಿಯ ಪದ್ಯದಲ್ಲಿ ಬರುವ 'ಗಡ'ದ ಬಳಕೆಯೊಂದಿಗೆ ಹೋಲಿಸಿ. ಛಂದಸ್ಸಿನ ನಿಯಮ ಹೇಗೆ ಒಂದೇ ವಾಕ್ಯದ ಅರ್ಥದಲ್ಲಿ ಮತ್ತು ಕೊನೆಯಲ್ಲಿ 'ಗಡ'ವನ್ನು ಎರಡು ಸಾರಿ ಬಳಸುವಂತೆ ಮಾಡಿ ಪಂಪನ ವಾಗ್ಗುಂಫನಕ್ಕೂ ತೊಡರುಗಾಲುಹಾಕಿದೆ ಎಂಬುದನ್ನು ಗಮನಿಸಿ.

ಇಲ್ಲಿಯವರೆಗೆ ಹೇಳಿದುದರ ಸಾರಾಂಶ ಇಷ್ಟು: ಛಂದಸ್ಸಿನ ನಿಯಮ ಇದ್ದಂತೆ ಉಳಿದಿಲ್ಲ. ಇರುವ ನಿಯಮಗಳು ತೊಡರಾಗುತ್ತ ಬಂದಂತೆ ಸಮರ್ಥ ಕವಿಗಳು ನಿಯಮಗಳನ್ನು ಕಡಿಮೆ ಮಾಡಿಕೊಳ್ಳುತ್ತ ಬಂದಿದ್ದಾರೆ. ನಿಯಮಗಳನ್ನು ಉಲ್ಲಂಘಿಸುವ ಅಥವಾ ಮುರಿಯುವ ಹಟಕ್ಕಾಗಿ ಅಲ್ಲ ನಿಯಮಗಳನ್ನು ಕಡಿಮೆ ಮಾಡಿಕೊಂಡಿರುವುದು; ಆ ನಿಯಮಗಳನ್ನು ಪಾಲಿಸುವ ಶಕ್ತಿಯಿಲ್ಲದೆ ಇಲ್ಲವೆ ನಿಯಮಗಳ ಜ್ಞಾನವಿಲ್ಲದೆಯೂ ಹಾಗೆ ಮಾಡಿಲ್ಲ. 3 ಛಂದಸ್ಸಿನಲ್ಲಿ ಸೊಗಸನ್ನು ಹಾಗೂ ವೈವಿಧ್ಯವನ್ನು ತಂದುಕೊಳ್ಳುವುದಕ್ಕೋಸ್ಕರ, ಭಾವಾಭಿವ್ಯಕ್ತಿಗೋಸ್ಕರ, ಸ್ವಾತಂತ್ರ್ಯ ವಹಿಸಿ ನಿಯಮಗಳನ್ನು ಸಡಿಲಿಸಿಕೊಂಡು ಬಂದರು. ಈ ಅರ್ಥದಲ್ಲಿ ಪ್ರತಿ ಛಂದಸ್ಸಿನ ಚರಿತ್ರೆಯೂ ಆ ಛಂದಸ್ಸು ಕಾಲಕಾಲಕ್ಕೆ ತನ್ನ ಸಾಂಪ್ರದಾಯಿಕ ಶುಷ್ಕ ನಿಯಮಗಳನ್ನು ಒಂದೊಂದಾಗಿ ಕಳೆದುಕೊಳ್ಳುತ್ತ ವೈವಿಧ್ಯಕ್ಕೆ ಅವಕಾಶ ಮಾಡಿಕೊಂಡ ವಿಕಾಸದ ಕಥೆಯೇ ಆಗಿದೆ. ಈ ಹಿನ್ನೆಲೆಯಿಂದ ಹೊಸಗನ್ನಡ ಕಾವ್ಯದ ಲಯವನ್ನೂ, 'ನವ್ಯಕಾವ್ಯ'ದಲ್ಲಿ ಬರುವ 'ಸ್ವಚ್ಛಂದ ಛಂದಸ್ಸ'ನ್ನೂ ಗಮನವಿಟ್ಟು ನೋಡಿದರೆ ಛಂದಸ್ಸಿನಲ್ಲಿ ಕಾಣುತ್ತಿರುವ ಸ್ವಾತಂತ್ರ್ಯ ಶಕ್ತಕವಿಯ ವಾಗದಿರದು.

ಸತ್ತ್ವವನ್ನು ಪಡೆಯುತ್ತಿದೆ ಎಂಬುದು ವೇದ್ಯ ಕೈಯಲ್ಲಿ ಎಂಥ ಅದ್ಭುತ ವಿಕಾಸವನ್ನು ಹಾಗೂ

ಜಿ. ಎಸ್. ಸಿದ್ಧಲಿಂಗಯ್ಯ ಎಂ. ಎ.

---

1. "ಲೋಕೋಪಕಾರ" ದಂಥ ಶಾಸ್ತ್ರಗ್ರಂಥಗಳೂ ಛಂದೋಬದ್ಧವಾಗಿವೆ. ಅದರ ಹಿರಿಮೆ ಛಂದಸ್ಸಿಗಿಂತಲೂ ವಿಷಯ ನಿರೂಪಣೆ ಹಾಗೂ ವಿಷಯದ ಘನತೆಯನ್ನವಲಂಬಿಸುತ್ತದೆ. ಅಲ್ಲದೆ ಕವಿ ಪ್ರತಿಭೆಯು ತನ್ನ ಭಾವಕ್ಕೆ ತಕ್ಕ ಛಂದಸ್ಸನ್ನೂ ಗುರುತಿಸಿ ಕೊಳ್ಳಬೇಕಾಗುತ್ತದೆ. ರತ್ನಾಕರನ ಸಾಂಗತ್ಯ ಈ ದೃಷ್ಟಿಯಿಂದ ವಿಚಾರಾರ್ಹವಾಗಿದೆ.
2. ಆದಿಪುರಾಣ
3. ಹೀಗೆಂದರೆ ಇದರ ಅರ್ಥವು ನಿಯಮಭಂಗವಾದೆಲ್ಲೆಲ್ಲ ಚೆಲುವಾಗಲೇಬೇಕು ಎಂಬ ವೊಂದುವಾದವಾಗುವುದಿಲ್ಲ: ಛಂದಸ್ಸಿನ ರಹಸ್ಯವನ್ನು ಅರಿಯುವಲ್ಲಿ ಅಸಮರ್ಥನೂ, ಅದನ್ನು ತತ್ತ್ವಯುತವಾಗಿ ಬಳಸುವಲ್ಲಿ ದುರ್ಬಲನೂ ಆದವನ ಕೈಯಲ್ಲಿ ಈ ನಿಯಮಭಂಗವು ಹಾಸ್ಯಾಸ್ಪದವಾಗಿರುವುದೂ ಉಂಟು. ಕನ್ನಡ ಕೈಪಿಡಿ ಸಂಪುಟ ೧ರ ೧೧೩ನೆಯ ಪುಟದಲ್ಲಿ ಕಂದಪದ್ಯಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಿ.

# ಶಾಲಾಶಿಕ್ಷಣ ವಸ್ತುವಿನ ಪುನರ್‌ನಿರ್ಮಾಣದಲ್ಲಿ ಸಾಹಿತ್ಯ ಪರಿಷತ್ತು ವಹಿಸಬಹುದಾದ ಪಾತ್ರ

ಪಂಡಿತರತ್ನಂ ಬ್ರಹ್ಮಶ್ರೀ ಶಿವಮೂರ್ತಿ ಶಾಸ್ತ್ರಿಗಳವರು ಓರ್ವ ಪ್ರಾಥಮಿಕ ಶಿಕ್ಷಕರಾಗಿ ಜೀವನವನ್ನಾರಂಭಿಸಿ ಸ್ವಾತಂತ್ರ್ಯ ಚಳವಳಿ, ಏಕೀಕರಣದ ಹೋರಾಟ, ಸಮಾಜ ಸಂಘಟನೆ, ಸಾಹಿತ್ಯ, ಕಲೆ, ಸಂಸ್ಕೃತಿಪ್ರಸಾರ ಮುಂತಾದ ಕಾರ್ಯಗಳಲ್ಲಿ ಗಣನೀಯ ಪಾತ್ರವನ್ನು ವಹಿಸಿ ಈಗ ಹಲವಾರು ವರ್ಷಗಳಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದುಕೊಂಡು ಸಾಹಿತ್ಯ ಪರಿಷತ್ತು ನಾನಾ ಮುಖಗಳಲ್ಲಿ ಬೆಳೆಯುವಂತೆ ಮಾಡಿರುವುದು ಸರ್ವವಿದಿತವೂ ಅತ್ಯಂತ ಶ್ಲಾಘನೀಯವೂ ಆಗಿರುತ್ತದೆ. ಇಂತಹ ಅಧ್ಯಕ್ಷರ ನೇತೃತ್ವದಲ್ಲಿ ಸಾಹಿತ್ಯ ಪರಿಷತ್ತು ಒಂದು ಹೊಸ ಕಾರ್ಯಕ್ರಮವನ್ನು ಶಾಲಾ ಮಕ್ಕಳು, ಯುವಕ ಯುವತಿಯರ ಹಿತದೃಷ್ಟಿಯಿಂದ ರೂಪಿಸಿದಲ್ಲಿ ಇಡೀ ಕರ್ಣಾಟಕವೇ–ಇಡೀ ಭಾರತ ರಾಷ್ಟ್ರವೇ ಅವರಿಗೆ ಚಿರಋಣಿಯಾಗಿರಬಹುದೆಂದು ನಾನು ಭಾವಿಸಿ ಈ ಪುಟ್ಟ ಲೇಖನವನ್ನು ಬರೆದಿರುತ್ತೇನೆ–ಪ್ರಾಜ್ಞರು ಈ ಸಲಹೆಯನ್ನು ವಿಮರ್ಶನಾ ದೃಷ್ಟಿಯಿಂದ ವಿಚಾರ ಮಾಡಿ ಕಾರ್ಯರೂಪಕ್ಕೆ ತರುವುದಾದಲ್ಲಿ ಒಬ್ಬ ಸಾಮಾನ್ಯ ಶಿಕ್ಷಕನಾದ ನನ್ನ ಜೀವನದ ಈ ಒಂದು ಆಸೆಯು ನೆರವೇರಿದಂತಾದೀತೆಂದು ಭ್ರಮಿಸುತ್ತೇನೆ.

ರಾಷ್ಟ್ರಪಿತಾಮಹ ಮಹಾತ್ಮ ಗಾಂಧೀಜಿಯವರು ೧೯೪೭ರ ಆಗಸ್ಟು ೧೫ರಂದು ದೇಶಕ್ಕೆ ಸ್ವಾತಂತ್ರ್ಯವನ್ನು ತಂದು ಕೊಟ್ಟರು. ಹಾಗೂ ಶಾಲಾ ಕಾಲೇಜುಗಳ ಶಿಕ್ಷಣದ ಮಾರ್ಪಾಡಿನ ಆವಶ್ಯಕತೆಗೂ ಜನತೆಯ ಗಮನವನ್ನು ಸೆಳೆದರು.

"ಶಿಕ್ಷಣದ ಗುರಿ ಪರೀಕ್ಷೆಗಳಲ್ಲಿ ಪಾಸು ಮಾಡುವುದು ಮಾತ್ರವೇ ಅಲ್ಲದೆ ಬಾಲಕ ಬಾಲಕಿಯರ ವ್ಯಕ್ತಿತ್ವದ ಸರ್ವತೋಮುಖವಾದ ಬೆಳವಣಿಗೆಯಾಗಬೇಕು. ಈ ಗುರಿಯನ್ನು ಸಾಧಿಸಲು ಶಾಲಾ ಕಾಲೇಜುಗಳ ಪಠ್ಯ ವಿಷಯಗಳು ಒಂದು ಹೊಸ ದೃಷ್ಟಿಯನ್ನನುಸರಿಸಿ, ಪೂರ್ತಿಯಾಗಿ ಮಾರ್ಪಾಡಾಗಬೇಕು" ಎಂಬುದನ್ನು ಎಲ್ಲರಿಗೂ ಮನ ನಾಟುವಂತೆ ಮನವರಿಕೆ ಮಾಡಿಕೊಟ್ಟರು. ಈಗ ನಮ್ಮ ರಾಷ್ಟ್ರಾಧ್ಯಕ್ಷರು ಡಾ|| ರಾಧಾಕೃಷ್ಣನ್ ಸಮಿತಿ, ಡಾ|| ಲಕ್ಷ್ಮಣಸ್ವಾಮಿ ಮೊದಲಿಯಾರ್ ಸಮಿತಿ, ಅಂತರ್ ರಾಷ್ಟ್ರಿಯ ಸಮಿತಿ–ಇವು ೧೯೪೯, ೧೯೫೨, ೧೯೫೪ರಲ್ಲಿ ಇದೇ ವಿಷಯವನ್ನು ಸ್ಪಷ್ಟವಾಗಿ ಪುಷ್ಟೀಕರಿಸಿ, ವಿದ್ಯಾಭ್ಯಾಸವು ವ್ಯಕ್ತಿಯ ಶಕ್ತಿ, ಸಾಮರ್ಥ್ಯ, ಆಸಕ್ತಿ, ಅಭಿರುಚಿ ಸಮಾಜದ ಅವಶ್ಯಕತೆ ಇವುಗಳನ್ನು ಗಮನದಲ್ಲಿಟ್ಟುಕೊಂಡು ಪಾಶ್ಚಾತ್ಯ ದೇಶಗಳಲ್ಲಿನ ವಿಜ್ಞಾನ ಪ್ರಗತಿ ಮತ್ತು ನಮ್ಮ ಸಂಸ್ಕೃತಿ ಇವೆರಡೂ ಉದ್ದೇಶಗಳನ್ನು ಅಳವಡಿಸಿಕೊಂಡು ನಮ್ಮ ನಿತ್ಯಜೀವನಕ್ಕೆ ಹೊಂದಿಕೊಂಡು ಹೋಗುವ ರೀತಿಯಲ್ಲಿ ಪಠ್ಯವಸ್ತು ಪುನರ್‌ನಿರ್ಮಾಣವಾಗಬೇಕೆಂದು ಒತ್ತಿ ಒತ್ತಿ ಸಮರ್ಥಿಸಿರುವುವು.

ಆದರೇನು? ಜನತೆಗೆ ಈ ಒಂದು ಸಲಹೆಯ ಪ್ರಾಮುಖ್ಯತೆಯ ಅರಿವು ಇನ್ನೂ ಸಾಲ

ದೆಂದೇ ಸಾಮಾನ್ಯ ಶಿಕ್ಷಕರಿಗೆ ಭಾಸವಾಗುತ್ತಿದೆ. ಎಲ್ಲೆಲ್ಲಿ ನೋಡಿದರೂ ಜನತೆಯೂ ಜನನಾಯಕರೂ ಹೆಚ್ಚು ಹೆಚ್ಚು ಶಾಲಾ ಕಾ ಲೇ ಜು ಗ ಳ ಸ್ಥಾಪನೆ, ಉಚಿತಶಿಕ್ಷಣ, ತಾಂತ್ರಿಕ ಶಿಕ್ಷಣ, ಉಚಿತ ಉಪಾಹಾರ ಇಂತಹ ವಿಷಯದ ಕಡೆಗೇ ಹೆಚ್ಚು ಆಸಕ್ತಿವಹಿಸುತ್ತಿರುವುದು ನಮ್ಮ ಪ್ರಜಾ ಸರ್ಕಾರದ ಒಂದು ವೈಶಿಷ್ಟ್ಯ. ಹೀಗಾಗಿ ನಾವು ಶಾಲಾಕಾಲೇಜುಗಳಲ್ಲಿ ಬೆಳಗಿನಿಂದ ಸಂಜೆಯವರೆಗೂ ಕ್ಲಾಸು ರೂಮುಗಳಲ್ಲಿ "Inside class-room" ಏನೇನು ಪಾಠ ವಿಷಯುಗಳನ್ನು, ಯಾವ ಯಾವ ಉದ್ದೇಶ ಸಾಧನೆಗಾಗಿ, ಹೇಗೆ ಬೋಧಿಸುತ್ತಿರುವವೆಂಬ ಸಮಸ್ಯೆಯ ಕ ಡೆ ಗೆ ಸಾಕಷ್ಟು ದೃಷ್ಟಿ ಹರಿಸಿಲ್ಲ. ಆದುದರಿಂದಲೇ ಘನ ಸರ್ಕಾರದವರೂ ಈ ವಿಷಯದಲ್ಲಿ ಹೆಚ್ಚು ಏನೂ ಮಾಡಲು ಸಾಧ್ಯವಾಗಿಲ್ಲ–ಇದು ನಿಜವಾಗಿಯೂ ಬಹಳ ಶೋಚನೀಯ ಪರಿಸ್ಥಿತಿ ಎಂದು ಹೇಳದೆ ಗತ್ಯಂತರವಿಲ್ಲ.

ಈಗ ದೇಶದಾದ್ಯಂತ ಎಲ್ಲೆಲ್ಲಿ ನೋಡಿದರೂ ಮಕ್ಕಳ ಮಾತೃಭಾಷೆಯಲ್ಲಿಯೇ ಪ್ರಾಥಮಿಕ ಶಿಕ್ಷಣ, ಪ್ರಾದೇಶಿಕ ಭಾಷೆಯಲ್ಲಿ ಮಾಧ್ಯಮಿಕ ಶಿಕ್ಷಣ ಮತ್ತು ಸಾಧ್ಯವಿದ್ದರೆ ಪ್ರೌಢಶಿಕ್ಷಣ ಕೊಡುವಂತಾಗಬೇಕು. ಮತ್ತು ದೇಶ ಭಾಷೆಯಾದ ಹಿಂದಿಯನ್ನೂ ಎಲ್ಲರೂ ಕಲಿಯುವಂತಾಗಬೇಕು. ಜತೆಗೆ ಇಂಗ್ಲಿಷ್ ಅಂತರ್‌ರಾಷ್ಟ್ರ ಭಾಷೆಯಾದ ಕಾರಣ ಅದನ್ನು ಕಲಿಯಬೇಕೆಂದು ವಿದ್ಯಾತಜ್ಞರು ಮತ್ತು ಸರ್ವರೂ ಸಾರ್ವತ್ರಿಕ ಅಭಿಪ್ರಾಯ ಹೊಂದಿರುತ್ತಾರೆಂಬುದು ಸರ್ವವಿದಿತ. ಆದರೆ ಈ ಭಾಷೆಗಳಲ್ಲಿ ನಾವು ಕಲಿಸಬೇಕಾದ ವಿಷಯುಗಳು ಏನು? ಯಾವುವು? ಹೇಗೆ? ಏಕೆ? ಎಂಬ ಪ್ರಶ್ನೆಗಳನ್ನು ಕೂಲಂಕಷವಾಗಿ ವಿಮರ್ಶಿಸಿಲ್ಲವೆಂದು ವಿಷಾದದಿಂದ ಹೇಳಲೇಬೇಕಾಗಿರುತ್ತೆ. ಉದಾಹರಣೆ:– ಇವತ್ತಿಗೂ ಕೂಡ ನಮ್ಮ ಹೈಸ್ಕೂಲ್ ಅಥವಾ ಪ್ರೀ–ಯೂನಿವರ್ಸಿಟಿ ವಿದ್ಯಾರ್ಥಿಗಳು ಎಲ್ಲರೂ ಅಭ್ಯಸಿಸಬೇಕಾಗಿರುವ ರಸಾಯನಶಾಸ್ತ್ರ (Chemistry) ವಿಷಯುಗಳನ್ನು ಕುರಿತು ಸ್ವಲ್ಪ ವಿಮರ್ಶಿಸೋಣ. ಸಾವಿರಾರು ಮಂದಿ ಬಾಲಕ ಬಾಲಕಿಯರು ಅಭ್ಯಸಿಸಬೇಕಾದ ಆ ರಸಾಯನಶಾಸ್ತ್ರ ವಿಷಯುಗಳೆಲ್ಲವೂ ಕೇವಲ ತಾತ್ವಿಕವಾದುವೇ (Bookish) ಆಗಿದ್ದು ಸಾಧಾರಣ ಮಟ್ಟದ ವ್ಯವಹಾರಿಕ ದೃಷ್ಟಿಯುಳ್ಳ ಅನೇಕ ಮಂದಿ ಬಾಲಕ ಬಾಲಕಿಯರಲ್ಲಿ ಅತ್ಯಾವಶ್ಯಕವಾದ ಶ್ರದ್ಧೆ, ಆಸಕ್ತಿ, ವೈಜ್ಞಾನಿಕ ಮನೋಭಾವ ಇವುಗಳನ್ನು ಪ್ರಚೋದಿಸಲು ಪರಿಣಾಮಕಾರಿಯಾಗಿಲ್ಲ. ಆದರೂ ವಿಷಯಗಳೆಲ್ಲವನ್ನೂ ಬಲವಂತವಾಗಿಯಾದರೂ ಅಭ್ಯಾಸ ಮಾ ಡ ಲೇ ಬೇ ಕು. ತಿಳಿದು ಕೊಳ್ಳಲೇಬೇಕು. ಪರೀಕ್ಷೆಗಳಲ್ಲಿ ಉತ್ತರಿಸಲೇಬೇಕು. ತೇರ್ಗಡೆಯಾಗಲೇಬೇಕು– ಹಾಗೂ ಅನೇಕರು ಎಷ್ಟೇ ಕಷ್ಟಪಟ್ಟಿದ್ದರೂ ತೇರ್ಗಡೆಯಾಗದೆ, ಕನಿಷ್ಠಪಕ್ಷ ಆರು ತಿಂಗಳು ಅಥವಾ ಒಂದು ವರ್ಷ, ಅದಕ್ಕೂ ಹೆಚ್ಚೇ ಆಗಬಹುದು. ಪುನಃ ಪುನಃ ಅಭ್ಯಸಿಸುವುದನ್ನೇ ಅಭ್ಯಸಿಸಬೇಕು. ಹೀಗಾಗಿ ಅನೇಕ ತರುಣ ತರುಣಿಯರ ವ್ಯಕ್ತಿತ್ವ ಎಷ್ಟು ಮೊಟಕಾಗಿ ಅವರ ಜೀವನ ಎಷ್ಟು ಜಿಗುಪ್ಸೆಯಿಂದ ಕೂಡಿ ಅದರಿಂದ ತಂದೆತಾಯಿಗಳಿಗೆ ಮಾತ್ರವಲ್ಲದೆ ಇಡೀ ದೇಶಕ್ಕೇ ಎಷ್ಟು ನಷ್ಟವಾಗುತ್ತಿರುತ್ತಿದೆ ಎಂಬುದನ್ನು ಈ ಸ್ವತಂತ್ರ ರಾಜ್ಯದಲ್ಲೂ ನಾವು ಇನ್ನೂ ಗ್ರಹಿಸಿಲ್ಲವೆಂದರೆ ಇದು ಎಷ್ಟು ಶೋಚನೀಯ!

ಹಾಗಾದರೆ ಈ ಸಮಸ್ಯೆಯ ಪರಿಹಾರ ವೇನು? ಇದು ಬಿಡಿಸಲಾರದ ತೊಡಕು ಎನ್ನುವಂತಿದೆ ನಿಜ.– ಆದರೂ ಜನತೆಯು ಇತ್ತ ಕಡೆ ತೀವ್ರಗಮನ ಕೊಡಬೇಕು. ಸರ್ಕಾರವನ್ನು ಇತ್ತ

ಕಡೆ ಮನಕೊಡುವಂತೆ ಮಾಡಬೇಕು-ದೇಶದ ಯುವಕ ಯುವತಿಯರ "ಮಾನಸಿಕ ಆಹಾರ"ದ ಪುನರ್ವ್ಯವಸ್ಥೆಗೆ ಆವಶ್ಯಕವೆಂದೆನಿಸುವ ಎಲ್ಲಾ ಸೌಲಭ್ಯಗಳನ್ನೂ ಶೀಘ್ರದಲ್ಲಿಯೇ ಘನಸರ್ಕಾರ ದವರು ದೊರಕಿಸಿ ಕೊಡಬೇಕು. "ಈ ಸಮಸ್ಯೆ ಸರ್ಕಾರದ ಸಮಸ್ಯೆ" ಯಾಕೆಂದರೆ ನಮ್ಮ ದೇಶ ನಾನಾ ರೀತಿಯಲ್ಲಿ ಬೆಳೆಯುತ್ತಿರುವ ದೇಶ. ಪ್ರಜಾಪ್ರಭುತ್ವವನ್ನು ರೂಢಿಸಿಕೊಳ್ಳಬೇಕಾದ ದೇಶ. ಇಂತಹ ದೇಶಗಳಲ್ಲಿ "ಮಾನವನ ಶಿಕ್ಷಣ" ಹೇಗಿರಬೇಕೆಂಬುದನ್ನು ಸರ್ಕಾರವು ಚೆನ್ನಾಗಿ ಪರಿ ಶೀಲಿಸಬೇಕು. ಅದಕ್ಕೆ ಸಹಕಾರಿಯಾಗುವ ಎಲ್ಲ ಸಂಸ್ಥೆಗಳಿಗೂ ಧಾರಾಳವಾದ ಉತ್ತೇಜನವನ್ನು ಕೊಡಬೇಕು. ಇಡೀ ಕರ್ಣಾಟಕ ಪ್ರಾಂತ್ಯಕ್ಕೆ ಕರ್ಣಾಟಕ ಸಾಹಿತ್ಯ ಪರಿಷತ್ತು ಪ್ರಮುಖ ದಿಕ್ಸೂಚಿ. ಏಕೀಕರಣ ಸಮಸ್ಯೆಗೆ ಬಹಳ ಕಾಲ ಬಹುವಾಗಿ ಶ್ರಮಿಸಿತು. ಈಗ ಆ ಕಾರ್ಯ ಮುಗಿ ಯಿತು—ಸಾಹಿತ್ಯಕ್ಕೆ ಈಗ ಒಂದು ವಿಶಾಲ ಅರ್ಥ ಕೊಡಬೇಕು. ವೈಜ್ಞಾನಿಕ, ಸಾಮಾಜಿಕ, ಆರ್ಥಿಕ, ನೈತಿಕ ಈ ಎಲ್ಲ ವಿಷಯಗಳಿಗೆ ಸಂಬಂಧಿಸಿದಂತೆ ವಿವಿಧ ಸಾಹಿತ್ಯ ರಚನೆಯ ಕಾರ್ಯಕ್ಕೆ ಕೈಹಾಕ ಬೇಕು. ಹಾಗೂ ಶಾಲಾ ಕಾಲೇಜು ಲೈಬ್ರರಿಗಳಿಗೆ ಹೊಸ ಹೊಸ ಪುಸ್ತಕಗಳನ್ನು ತಯಾರಿಸಬೇಕು.

ನಮ್ಮ ಮಾತೃಭಾಷೆಯೇ ಆದ ಕನ್ನಡದ ಪಠ್ಯಪುಸ್ತಕಗಳ ಪಠ್ಯ ವಿಷಯಗಳು ಈಗಿನ ಕಾಲದ ತರುಣರು ತರುಣಿಯರ ಆಸಕ್ತಿ ಅಭಿರುಚಿ ಗಳು ಮತ್ತು ನಿತ್ಯ ಜನಜೀವನದ ಅವಶ್ಯಕತೆಗಳು ಇವುಗಳಿಗೆ ತಕ್ಕಂತೆಯೂ ಅಲ್ಲದೆ ನಮ್ಮ ಪ್ರಜಾ ಪ್ರಭುತ್ವದ ಮೂಲ ತತ್ವಗಳಾದ ಸ್ವಯಂ ಆಲೋ ಚನಾಶಕ್ತಿ, ನಿಷ್ಪಕ್ಷಪಾತ ದೃಷ್ಟಿವಿಮರ್ಶನಾ ಶಕ್ತಿ ಇವುಗಳನ್ನು ಉದ್ರೇಕಗೊಳಿಸಬಹುದಾ ದಂಥವೂ ಆಗಿರಬೇಕು. ಈ ಮೊದಲು ಸೂಚಿ ಸಿದ (Chemistry) ರಸಾಯನಶಾಸ್ತ್ರ ವಿಷಯ ವನ್ನೇ ತೆಗೆದುಕೊಂಡರೆ ಅಮೇರಿಕ ದೇಶದ ಹೈಸ್ಕೂಲುಗಳಲ್ಲಿ ಉಪಯೋಗಿಸಲ್ಪಡುತ್ತಿರುವ "Living chemistry" ಜೀವಂತ ರಸಾಯನ ಶಾಸ್ತ್ರ ಎಂಬ ಒಂದು ಪುಸ್ತಕದ ವಿಷಯಸೂಚಿ ವಿಷಯ ಪ್ರತಿಪಾದನೆಯನ್ನು ನೋಡಿದರೆ ನಮ ಪಠ್ಯ ವಿಷಯಗಳು ಎಷ್ಟು ಹಿಂದಿನ ಕಾಲದವು ಮತ್ತು ಎಷ್ಟು Bookish ತಾತ್ವಿಕ ರೀತಿಯವು ಎಂಬುದು ಸ್ಪಷ್ಟವಾಗಿ ಗೊತ್ತಾಗುವುದು.

ಜೀವಂತ ರಸಾಯನಶಾಸ್ತ್ರವೆಂಬ ಪಠ್ಯ ಪುಸ್ತಕದಲ್ಲಿ ವ್ಯಕ್ತಿಸಂಬಂಧರಸತಂತ್ರ, ಗೃಹ ವ್ಯವಸ್ಥೆಯ ರಸತಂತ್ರ ಮತ್ತು ಸಮಾಜದಲ್ಲಿ ರಸ ತಂತ್ರ ಎಂಬ ಪ್ರಕರಣಗಳಿದ್ದು ನಮ್ಮ ಆಹಾರ, ಔಷಧಿಗಳು, ರೋಗಗಳು, ಉಡುಪುಗಳು, ಆಧು ನಿಕ ಗೃಹನಿರ್ಮಾಣ ವಸ್ತುಗಳು, ದೊಡ್ಡ ದೊಡ್ಡ ಪಟ್ಟಣಗಳಲ್ಲಿ ನೀರು ಸರಬರಾಜು ವ್ಯವಸ್ಥಾ ಕ್ರಮ, ದೊಡ್ಡ ದೊಡ್ಡ ಕೈಗಾರಿಕೆಗಳು ಎಂಬ ಮುಂತಾದ ವಿಷಯಗಳು ನಿತ್ಯ ಜೀವನಕ್ಕೆ ಸಂಬಂಧಿಸಿದಂತೆ ವಿವರಿಸಲ್ಪಟ್ಟವೆ ಎಂಬುದನ್ನು ಯಾರಾದರೂ ಓದಿ ನೋಡಿದ ಪಕ್ಷದಲ್ಲಿ ಇಂತಹ ಪುಸ್ತಕಗಳನ್ನು ನಮ್ಮ ದೇಶದಲ್ಲಿ ನಮ್ಮ ಶಾಲಾ ಬಾಲಕ ಬಾಲಕಿಯರುಗಳಿಗೆ ನಮ್ಮ ಭಾಷೆ ಯಲ್ಲಿಯೇ ಬರೆದು ಏಕೆ ಒದಗಿಸಬಾರದು ಎಂಬ ಪ್ರಶ್ನೆಯು ನಮ್ಮೆಲ್ಲರ ಹೃದಯವನ್ನು ತಲ್ಲಣಗೊಳಿ ಸುವುದರಲ್ಲಿ ಏನೇನೂ ಸಂದೇಹವಿಲ್ಲ.

ಮತ್ತೊಂದು ವಿಷಯ ಉದಾಹರಣೆಯಾಗಿ ನೋಡೋಣ. ಭೂಗೋಳಶಾಸ್ತ್ರವು ಸಾಧಾರಣ ವಾಗಿ ಕಷ್ಟವೂ ನಿರುತ್ಸಾಹಕಾರಿಯೂ ಆದು ದೆಂದು ಅನೇಕ ಶಾಲಾಬಾಲಕರು ಆಸಕ್ತಿ ರಹಿತ ರಾಗಿರುತ್ತಾರೆ. ಆದರೆ ಈ ವಿಷಯದಲ್ಲೂ ಒಂದು ಹೊಸ ಮಾದರಿಯ "ಪ್ರಪಂಚ ಭೂವಿವರಣೆ"

ಎಂಬ ಪುಸ್ತಕವನ್ನು ನಾವು ಅವಲೋಕಿಸೋಣ. ಕೆನಡ–ನೆರೆರಾಜ್ಯ ಹಾಗೂ ಮಿತ್ರರಾಜ್ಯ–ಜರ್ಮನಿ ವಿಶ್ವದ ಒಂದು ಸಮಸ್ಯೆ,–ರಷ್ಯ–ಈಗ ವಿಶ್ವದ ಬಲಿಷ್ಠರಾಷ್ಟ್ರ,–ಫ್ರಾನ್ಸ್–ನಮ್ಮ ಹಳೆಯ ಮಿತ್ರ ಎಂಬ ವಿಷಯ ಸೂಚಿಯನ್ನು ನೋಡಿ ಈ ವಿಷಯ ಗಳು ಬರೆಯಲ್ಪಟ್ಟಿರುವ ರೀತಿಯನ್ನು ನೋಡಿದರೆ ಇದು ಒಂದು ಕಥೆಯ ಪುಸ್ತಕವೋ ಎಂಬಂತೆ ಭಾಸವಾಗಿ ಸಾಮಾನ್ಯ ವಿದ್ಯಾರ್ಥಿಯರ ಆಸಕ್ತಿ ಉತ್ಸಾಹಗಳನ್ನು ಕೆರಳಿಸಿ ಅವರಲ್ಲಿ ಉತ್ತಮ ದರ್ಜೆಯ ವ್ಯವಹಾರ ಜ್ಞಾನವನ್ನು ಬೆಳಸಿ, ನಾನಾ ರಾಷ್ಟ್ರ ಜನತೆಯಲ್ಲಿ ಪರಸ್ಪರ ತೋರಿಸಬೇಕಾದ ಸೌಹಾರ್ದ ವಿಶ್ವಾಸ ಮುಂತಾದ ಭಾವನೆಗಳು ಅಂಕುರಿಸುವಂತೆ ಮಾಡಿ ವಿಶ್ವಶಾಂತಿಗೂ ಭಾವೈಕ್ಯತೆಗೂ (Emotional Integration) ಬಹುಮಟ್ಟಿಗೆ ಸಹಕಾರಿಯಾಗುತ್ತದೆ.

ಪ್ರಾಥಮಿಕ ಮಟ್ಟದ ಒಂದು ಪುಸ್ತಕದ ಉದಾಹರಣೆ ತೆಗೆದುಕೊಳ್ಳೋಣ. "ನಿಮ್ಮ ಆರೋಗ್ಯ ಮತ್ತು ನೀವು" ಎಂಬ ಪುಸ್ತಕದಲ್ಲಿ ಪ್ರೈಮರಿ ಐದನೆಯ ತರಗತಿಯ ಪುಸ್ತಕ "ಬೆಳೆಯುವ ಮೂರು ವಿಧ" ಎಂಬ ವಿಷಯದ ವಿವರಣೆ ನಮ್ಮೆಲ್ಲರಿಗೂ ಬಹಳ ಆಶ್ಚರ್ಯವನ್ನುಂಟು ಮಾಡುವಂತಿದೆ. ಬೆಳೆಯುವುದು ಅಂದರೇನು? ದೇಹದ ಬೆಳವಣಿಗೆ, ಮಾನಸಿಕ ಬೆಳವಣಿಗೆ, ವರ್ತನೆ ಅಂದರೆ ನಡತೆಯ ಬೆಳವಣಿಗೆ ಇವು ಮೂರು ವಿಧ ಎಂದು ಹೇಳುತ್ತಾ ಮಕ್ಕಳು ಇತರರೊಡನೆ ಬಾಳುವುದು ಹೇಗೆ? ತಮ್ಮ ವ್ಯಕ್ತಿತ್ವವನ್ನು ಉತ್ತಮಗೊಳಿಸಿಕೊಳ್ಳುವುದು ಹೇಗೆ? ಎಂಬ ವಿಷಯ ವಿವರಣೆ ಮಕ್ಕಳ ಮನಸ್ಸಿಗೆ ಚೆನ್ನಾಗಿ ನಾಟಿ ಅವರಲ್ಲಿ ಉತ್ತಮ ಭಾವನೆಗಳು ಮತ್ತು ಉದಾತ್ತ ಆಲೋಚನೆ ಅಭ್ಯಾಸಗಳು ಬೆಳೆಯುವಂತೆ ಮಾಡುತ್ತದೆ.

ಹಾಗಾದರೆ ನಮ್ಮ ಕನ್ನಡದಲ್ಲಿ ಇಂತಹ ಪುಸ್ತಕಗಳನ್ನು ನಾವು ಏಕೆ ಬರೆಸಬಾರದು ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಹಾಗೆ ಮಾಡಲು ನಮ್ಮ ಕನ್ನಡ ಸಾಹಿತ್ಯ ಪರಿಷತ್ತು ಈಗ ಮುಂದೆ ಬರಬೇಕು.

ಪರಿಷತ್ತಿನಲ್ಲಿ ಪರದೇಶಗಳ ಪಠ್ಯಪುಸ್ತಕಗಳು ಮತ್ತು ನಮ್ಮ ದೇಶದ ಪಠ್ಯಪುಸ್ತಕಗಳು ಮತ್ತು ನಾನಾ ವಿಧವಾದ ಅಭಿವೃದ್ಧಿಯನ್ನು ನಾನಾ ರೀತಿಯಲ್ಲಿ ತೋರುವ ಸರ್ಕಾರಿ ರಿಪೋರ್ಟುಗಳು, ಟೂರಿಸ್ಟ್ ಬ್ಯೂರೋ, ರೈಲ್ವೆಗಳು, ಪೋಸ್ಟ್ ಆಫೀಸು, ಕೈಗಾರಿಕೆ ಈ ಎಲ್ಲ ವಿವಿಧ ಸರ್ಕಾರಿ ಶಾಖೆಗಳು ಆಗಾಗ್ಗೆ ಪ್ರಚಾರಪಡಿಸುವ ಪುಸ್ತಕಗಳು ಮತ್ತು ಯೋಜನಾ ಕ್ರಮಕ್ಕೆ ಸಂಬಂಧಪಟ್ಟ ಬುಲೆಟಿನ್‌ಗಳು ಇವುಗಳೆಲ್ಲವನ್ನೂ ಒಳಗೊಂಡ ಒಂದು ಲೈಬ್ರರಿ ಸ್ಥಾಪನೆಯಾಗಬೇಕು. ಜತೆಗೆ ನಾನಾ ಮತದವರ ಸಾರವೆನಿಸಿರುವ ಗ್ರಂಥಗಳೂ ಅವಶ್ಯಕ. ಇವೆಲ್ಲವನ್ನೂ ಸದಾ ಅಭ್ಯಸಿಸಿ ನಮ್ಮ ದೇಶದ ನಾನಾ ಭಾಷಾ ಪ್ರಾಂತ್ಯದವರ ನಾನಾ ಮತದವರ ಸಂಸ್ಕೃತಿಸಾರದೊಂದಿಗೆ ಪಾಶ್ಚಾತ್ಯರೀತಿಯ ಐಹಿಕ ಮತ್ತು ಆಧುನಿಕ ಪುರೋಭಿವೃದ್ಧಿಗೆ ಸಂಬಂಧಿಸಿದಂತೆ ನೂತನ ರೀತಿಯಲ್ಲಿ ಶಾಲಾ ಕಾಲೇಜು ಯುವಕ ಯುವತಿಯರ ಬುದ್ಧಿಮಟ್ಟಕ್ಕೂ ಅಭಿರುಚಿ ಆಸಕ್ತಿಗಳಿಗೂ ತಕ್ಕಂತೆ ನೂತನ ಪಠ್ಯಪುಸ್ತಕಗಳನ್ನು ರಚಿಸಿ ಅವುಗಳನ್ನು ಶಾಲಾಕಾಲೇಜುಗಳಿಗೆ ಒದಗಿಸಬೇಕು. ಇದಕ್ಕೆ ಶಕ್ತರೂ ತಜ್ಞರೂ ಅನುಭವಿಗಳೂ ಆದ ತಜ್ಞರ ಸಹಕಾರ ಮತ್ತು ಕಾರ್ಯನಿರ್ವಾಹ ಅತ್ಯಾವಶ್ಯಕ. ನಮ್ಮ ದೇಹಪೋಷಣೆಗೆ ಉತ್ತಮ ಆಹಾರ ಒದಗಿಸಲು ಸೆಂಟ್ರಲ್ ಫುಡ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಏರ್ಪಾಡಾಗಿರುವಂತೆಯೂ, ನೈತಿಕ ಮತ್ತು ಮಾನಸಿಕ ಆಹಾರ

ಒದಗಿಸಲು ಓರಿಯಂಟ್ ರಿಸರ್ಚ್ ಇನ್ಸ್ಟಿಟ್ಯೂಟ್ ಇರುವಂತೆಯೂ ಆಧುನಿಕ ಪ್ರಪಂಚದ ಆಗು ಹೋಗುಗಳಿಗೆ ಹೊಂದಿಕೊಂಡು ಹೋಗಬಹುದಾದ ಶಿಕ್ಷಣ ವಸ್ತುನಿರ್ಮಾಣ ಮಾಡಲು ನ್ಯಾಷನಲ್ ಎಜ್ಯುಕೇಷನಲ್ ರಿಸರ್ಚ್ ಇನ್ಸ್ಟಿಟ್ಯೂಟ್ ಸ್ಥಾಪನೆಗೆ ಅತ್ಯಾವಶ್ಯಕ. ಇದರ ಸ್ಥಾಪನೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯ ಮತ್ತು ನಮ್ಮ ಮಾನ್ಯ ಬ್ರಹ್ಮಶ್ರೀ ಶಿವಮೂರ್ತಿಶಾಸ್ತ್ರಿಗಳಂತಹವರ ಮುಂದಾಳತ್ವ ನೆರವಾಗಬೇಕು.

ಹೊಸದಾಗಿ ನಾವು ಗಳಿಸಿರುವ ಸ್ವಾತಂತ್ರ್ಯವನ್ನು ನಮ್ಮ ಮುಂದಿನ ಪೀಳಿಗೆಯು ರಕ್ಷಿಸಿಕೊಂಡು ಹೋಗಲು ಸಹಾಯಕವಾಗುವಂತೆ ಶಾಲಾ ಕಾಲೇಜುಗಳ ಶಿಕ್ಷಣವನ್ನು ಮಾರ್ಪಡಿಸುವುದು ಸುಲಭ ಸಮಸ್ಯೆಯಲ್ಲ. ಅಂತಹ ಹೊಸ ಪುಸ್ತಕಗಳನ್ನು ತಕ್ಷಣವೇ ಪಠ್ಯಪುಸ್ತಕಗಳನ್ನಾಗಿ ಗೊತ್ತು ಮಾಡಬೇಕಾದುದಿಲ್ಲ. ಅಂತಹ ಹೊಸ ಪುಸ್ತಕಗಳು ಹೊಸ ಪ್ರಯೋಗದ ಒಂದು ದಿವ್ಯ ಜ್ಯೋತಿಯನ್ನು ಬೆಳಗಬೇಕು. ತನ್ಮೂಲಕ ನಮ್ಮ ಯುವಕ ಯುವತಿಯರಲ್ಲಿ ಉತ್ತಮ ದರ್ಜೆಯ ತಾತ್ವಿಕ ಮತ್ತು ವ್ಯವಹಾರಿಕ ಜ್ಞಾನವುಂಟಾಗಿ ಉತ್ತಮ ರೀತಿಯ ಕುಶಲತೆ, ಅಭ್ಯಾಸ, ಪರಸ್ಪರ ಸೋದರ ಭಾವ, ಆದರ್ಶ ನಡತೆ ಹಾಗೂ ಮನೋವೃತ್ತಿಗಳ ವಿಕಾಸ, ರಾಷ್ಟ್ರೀಯ ಭಾವೈಕ್ಯತೆ ಮೇಲಾಗಿ ಅಂತರ್ ರಾಷ್ಟ್ರೀಯ ಭಾವನೆ ಇತ್ಯಾದಿಗಳು ಬೆಳೆಯಬೇಕು. ಆಗ ನಾವು ಇಡೀ ಭಾರತಕ್ಕೆ ಮಾತ್ರವೇ ಅಲ್ಲ, ಇಡಿ ಪ್ರಪಂಚಕ್ಕೆ ಒಂದು ಮಾದರಿಯಾಗಬಹುದಲ್ಲವೇ? ಇಂತಹ ಕಾರ್ಯಕ್ರಮಕ್ಕೆ ನಮ್ಮ ಕರ್ಣಾಟಕ ಸಂಸ್ಥಾನದ ಸರ್ಕಾರ, ಭಾರತ ಸರ್ಕಾರ ಮತ್ತು ಯುನೆಸ್ಕೊ ಅಲ್ಲದೆ ಕೆಲವು ಅಮೆರಿಕಾ ದೇಶದ ವಿದ್ಯಾ ಪ್ರಗತಿಗೆ ಸಂಭಂಧಿಸಿದ ರಾಕಿಫೆಲ್ಲರ್ ಫೌಂಡೇಷನ್, ಫೋರ್ಡ್ ಫೌಂಡೇಷನ್ ಮುಂತಾದ ಸಂಸ್ಥೆಗಳು ಉದಾರ ಸಹಾಯ ಮಾಡಬಹುದಾಗಿರುತ್ತೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಇದು ನಮ್ಮ ಯುವಕ ಯುವತಿಯರ ಶಿಕ್ಷಣದ ಮಹಾ ಸಮಸ್ಯೆ. ಇದನ್ನು ಪರಿಹರಿಸಲು ನಾವೆಲ್ಲರೂ ದೊಡ್ಡ ಮನಸ್ಸು ಮಾಡಬೇಕು. ''ಮನಸ್ಸು ಮಾಡಿದರೆ ಮಹಾದೇವನ ನೆರವು ಸಿದ್ಧ"

ಡಾ|| ಎಂ. ಸಿದ್ದಲಿಂಗಯ್ಯ

---

# ಕರ್ನಾಟಕ ಇತಿಹಾಸದ ಮೇಲೆ ಹೊಸ ಬೆಳಕು

ಭಾರತೀಯ ಸಂಸ್ಕೃತಿಯ ನಿಚ್ಚಳವಾದ ತಿಳಿವಳಿಕೆಯುಂಟಾಗಬೇಕಾದರೆ ಭಾರತದ ಕೆಲವು ಮಹತ್ತ್ವದ ಪ್ರದೇಶಗಳ ಸಾಮಾಜಿಕ ಹಾಗೂ ಸಾಂಸ್ಕೃತಿಕ ಇತಿಹಾಸದ ಜ್ಞಾನವು ಅತ್ಯವಶ್ಯವಾಗಿದೆ. ಭಾರತ ಸಂಸ್ಕೃತಿಯ ಉತ್ಕ್ರಾಂತಿಗೆ ಕಾರಣವಾದ ಪ್ರಾದೇಶಿಕ ಕೊಡುಗೆಗಳನ್ನು ಅವಲೋಕಿಸದೆ ಭಾರತದ ಸಮೀಚೀನವಾದ ಹಾಗೂ ವ್ಯಾಪಕವಾದ ಸಾಂಸ್ಕೃತಿಕ ಇತಿಹಾಸವನ್ನು ರಚಿಸುವುದು ಅಸಾಧ್ಯವಾದ ಮಾತು. "ಕರ್ನಾಟಕ ಇತಿಹಾಸದ ಮೇಲೆ ಹೊಸ ಬೆಳಕು" ಎಂಬ ಈ ಚಿಕ್ಕ ಲೇಖನದಲ್ಲಿ ಅಂತಹ ಕೆಲವೊಂದು ಹೊಸ ವಿಚಾರಗಳನ್ನು ವ್ಯಕ್ತಪಡಿಸುವ ಪ್ರಯತ್ನವನ್ನು ಮಾಡಲಾಗಿದೆ. ಕನ್ನಡ ನಾಡಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಇತಿಹಾಸ ರಚನೆಗೆ ಬೇಕಾಗುವ ವಿಶ್ವಸನೀಯ ಹಾಗೂ ಪರಿಪೂರ್ಣವಾದ ಪ್ರಮಾಣಗಳ ಕೊರತೆಯಿದೆ. ಆದರೆ ಸಾಹಿತ್ಯಿಕ ಹಾಗೂ ರಾಜಕೀಯ ಇತಿಹಾಸದ ಬಗೆಗೆ ಸಂಪೂರ್ಣವಾಗಿಯಲ್ಲದಿದ್ದರೂ ತಕ್ಕಮಟ್ಟಿಗೆ ಕಾರ್ಯವಾಗಿದೆ. ಸಂಸ್ಕೃತಿ ಹಾಗೂ ಸಮಾಜಗಳ ಅಭ್ಯಾಸದ ವಿಷಯದಲ್ಲಿ ವಿಶಿಷ್ಟ ಅಂಶಗಳ ಬಗೆಗೆ ಅಲ್ಲಲ್ಲಿ ಕೆಲವು ಪ್ರಯತ್ನಗಳು ನಡೆದಿವೆಯಾದರೂ ಗಮನಾರ್ಹವಾದ ಕಾರ್ಯವಾಗಿಲ್ಲ. ಕನ್ನಡನಾಡಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಇತಿಹಾಸವನ್ನು ಕುರಿತು ಕೆಲವು ವಿಶಿಷ್ಟ ಅಂಶಗಳನ್ನು ಇಲ್ಲಿ ವಿವೇಚಿಸಬೇಕೆಂದಿದ್ದೇವೆ.

ಸಂಸ್ಕೃತ ಸಾಹಿತ್ಯಕ್ಕೆ ಕರ್ನಾಟಕವು ಸಲ್ಲಿಸಿದ ಕೊಡುಗೆಯನ್ನು ಗಮನದಲ್ಲಿರಿಸಿಕೊಂಡರೆ, ಕನ್ನಡ ಸಾಹಿತ್ಯದ ಪರಂಪರೆ ಅತ್ಯಂತ ಪ್ರಭಾವಿಯಾಗಿ ತೋರುತ್ತದೆ. ತಮಿಳು ಭಾಷೆಯೊಂದನ್ನುಳಿದರೆ ಭಾರತದ ಬೇರಾವ ಭಾಷೆಗೂ ಕನ್ನಡದಂತಹ ಉಜ್ಜ್ವಲವಾದ ಸಾಹಿತ್ಯಿಕ ಸನಾತನತೆ ಇಲ್ಲ. ಕನ್ನಡ ಸಾಹಿತ್ಯದ ಸಂಯೋಜಿತವಾದ ಇತಿಹಾಸವನ್ನು ರಚಿಸಿದವರಲ್ಲಿ ರೈಸ್ ಅವರು ಅಗ್ರಗಾಮಿಗಳು. ಅನೇಕ ಜನ ವಿದ್ವಾಂಸರು ಅವರ ಆದರ್ಶವನ್ನು ಅನುಸರಿಸಿ ಸಾಹಿತ್ಯದ ಇತಿಹಾಸವನ್ನು ರಚಿಸಿದರು. ಕನ್ನಡ ಕವಿಗಳ ಸಂಖ್ಯಾವ್ಯಾಪ್ತಿಯನ್ನು ಹೆಚ್ಚಿಸಿದರು. ಆದರೆ ಸರ್ವಗ್ರಾಹ್ಯವಾದ, ವಿಚಾರ ಸಮ್ಮತವಾದ, ಐತಿಹಾಸಿಕ ಪ್ರಜ್ಞೆಯ ಮೇಲೆ ಆಧಾರಿತವಾದ ಸಾಹಿತ್ಯದ ಚಿತ್ರವನ್ನು ಕೊಡುವ ವಿಷಯದಲ್ಲಿ ವಿಫಲರಾಗಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಾಲವಿಭಾಗ ಕ್ರಮವು ಕೂಡ ಸಮರ್ಪಕವಾಗಿಲ್ಲ. ಕನ್ನಡ ಸಾಹಿತ್ಯದ ಬೆಳವಣಿಗೆ ಹಾಗೂ ಕನ್ನಡನಾಡಿನ ಬೌದ್ಧಿಕ ಅಭಿವೃದ್ಧಿಗಳನ್ನು ವಸ್ತುನಿಷ್ಠವಾಗಿ ನೋಡಿದರೆ ಕೆಲವು ವಿಶಿಷ್ಟವಾದ ಲಕ್ಷಣಗಳು ಕಂಡುಬಾರದೆ ಇರವು. ಕನ್ನಡನಾಡಿನ ಬೌದ್ಧಿಕ ಚಟುವಟಿಕೆಗಳಿಗೆ ಕೆಳಗೆ ಕೊಟ್ಟ ಮೂರು ಅಂಶಗಳು ಪ್ರಮುಖವಾದ ಆಧಾರಗಳಾಗಿವೆ:

೧. ರಾಜಾಶ್ರಯ

೨. ಧರ್ಮಶ್ರದ್ಧೆ

೩. ಸಾಹಿತ್ಯ ನಿರ್ಮಿತಿಯ ಮೇಲೆ ಪ್ರಭಾವ ಬೀರುವ ಐತಿಹಾಸಿಕ ಸ್ಥಿತಿಗತಿಗಳು

ಭಾರತದಲ್ಲಿ, ಪ್ರಮುಖವಾದ ಕಲೆಗಳೆಲ್ಲವೂ ಸರ್ವಸಾಮಾನ್ಯವಾಗಿ ರಾಜಮನೆತನಗಳ ಕೊಡುಗೈ ನೆರವಿನಿಂದ ಅಭಿವೃದ್ಧಿ ಹೊಂದಿದವು. ಭಾರತೀಯ ಸಾಹಿತ್ಯವೆಲ್ಲವೂ ಧಾರ್ಮಿಕ ಪ್ರಭಾವದಲ್ಲಿಯೇ ಬೆಳೆದು ಬಂದಿದೆ ಎಂಬ ಮಾತು ನಿಜ. ಆದರೆ, ರಾಜಕೀಯ ಸ್ಥಿರತೆ ಕೂಡ ಸಾಹಿತ್ಯ ನಿರ್ಮಾಣಕ್ಕೆ ಮೇಲಿನವುಗಳಷ್ಟೇ ಪ್ರಮುಖವಾದ ಕಾರಣವಾಗಿದೆ. ಮೇಲಣ ಮೂರು ಅಂಶಗಳು ಕನ್ನಡ ಸಾಹಿತ್ಯದ ಬಳೆವಣಿಗೆಯನ್ನು ನಿರ್ದಿಷ್ಟಪಡಿಸಿವೆ. ಕನ್ನಡ ಸಾಹಿತ್ಯಿಕ ಚಟುವಟಿಕೆಗಳಿಗೆ ಧಾರ್ಮಿಕಭಾವನೆಯೇ ಸ್ಫೂರ್ತಿಯ ಕೇಂದ್ರವಾಗಿದೆ. ಸಾಹಿತ್ಯ ನಿರ್ಮಾಣಕ್ಕೆ ಕೈಹಾಕಿದ ಧಾರ್ಮಿಕ ಪಂಗಡಗಳಲ್ಲಿ ಜೈನ, ವೀರಶೈವ ಹಾಗೂ ಬ್ರಾಹ್ಮಣ ಇವು ಮೂರು ಪ್ರಮುಖವಾಗಿವೆ. ೧೨ನೆಯ ಶತಮಾನದ ಮಧ್ಯದವರೆಗೆ ಕನ್ನಡ ಸಾಹಿತ್ಯಕ್ಕೆಲ್ಲ ಜೈನರೇ ಸಾರ್ವಭೌಮರಾಗಿದ್ದರು. ಆಗ, ಮೇಲೆ ವಿವರಿಸಿದ ಮೂರೂ ಅಂಶಗಳು ಅವರಿಗೆ ಅನುಕೂಲವಾಗಿದ್ದವು. ರಾಷ್ಟ್ರಕೂಟ ಹಾಗೂ ಹೊಯ್ಸಳ ಸಾಮ್ರಾಜ್ಯಗಳ ಬಹುಜನ ಅರಸರೆಲ್ಲ ಜೈನ ಧರ್ಮೀಯರಾಗಿದ್ದರು. ಸಾಹಿತ್ಯಕ್ಕೂ ಕಲೆಗಳಿಗೂ ಅವರು ಸಂಪೂರ್ಣ ಪ್ರೋತ್ಸಾಹನೆಯನ್ನಿತ್ತರು. ರಾಷ್ಟ್ರಕೂಟ ಸಾಮ್ರಾಜ್ಯದ ಕಾಲಕ್ಕೆ ಉಂಟಾದ ರಾಜಕೀಯ ಸ್ಥಿರತೆ ಹಾಗೂ ಶಾಂತ ವಾತಾವರಣ ಸಾಹಿತ್ಯ ನಿರ್ಮಿತಿಗೆ ಅನುಕೂಲವಾದುವು. ಪ್ರತಿಭಾ ಶಾಲಿಗಳಾದ ಅನೇಕ ಜನ ಕವಿಗಳು ಕಾವ್ಯಸೃಷ್ಟಿಯನ್ನು ಕೈಕೊಂಡರು. ಒಂದೆರಡು ಅಪವಾದಗನ್ನುಳಿದರೆ ೧೨ನೆಯ ಶತಮಾನದ ಮಧ್ಯಭಾಗದವರೆಗೆ ಆಗಿಹೋದ ಹಿರಿಯ ಕವಿಗಳೆಲ್ಲ ಜೈನ ಧರ್ಮದಲ್ಲಿ ಶ್ರದ್ಧೆಯುಳ್ಳವರಾಗಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಜೈನ ಕವಿಗಳ ಕಾಣಿಕೆ ಅಪೂರ್ವವಾದುದಾಗಿದೆ.

ಕನ್ನಡ ಸಾಹಿತ್ಯೇತಿಹಾಸದಲ್ಲಿ ವೀರಶೈವರು ಕಾಲಾನುಕ್ರಮದಿಂದ ಎರಡನೆಯವರಾಗಿ ಬರುತ್ತಾರೆ. ವೀರಶೈವ ಕವಿಗಳು ಹಾಗೂ ಪಂಡಿತರು ಜೈನರಂತೆ ಆಶ್ರಯಕ್ಕಾಗಿ ರಾಜಾಸ್ಥಾನವನ್ನು ಅವಲಂಬಿಸಲಿಲ್ಲ. ಅವರ ದೃಷ್ಟಿ ನೇರವಾಗಿ ಸಾಮಾನ್ಯ ಜನರ ಮೇಲೆ ಕೇಂದ್ರೀಕೃತವಾಯಿತು. ವಚನ, ರಗಳೆ, ಷಟ್ಪದಿ, ಸಾಂಗತ್ಯ ಮೊದಲಾದ ಶೈಲಿ–ಛಂದಸ್ಸುಗಳನ್ನು ಬಳಸಿ, ಸಾಹಿತ್ಯದಲ್ಲಿ ಸಂಪ್ರದಾಯವಾದವನ್ನು ಮೆಟ್ಟಿ ನಿಂತರು. ಸಾಹಿತ್ಯದ ವಸ್ತು ಹಾಗೂ ಅದರ ಅಭಿವ್ಯಕ್ತಿಕ್ರಮದಲ್ಲಿ ತೀವ್ರವಾದ ಬದಲಾವಣೆಯನ್ನುಂಟುಮಾಡಿದರು. ಸಮತೆ, ಬಂಧುತ್ವ, ಕಾರ್ಯಗೌರವದಂತಹ ಮಾನವೀಯ ವಿಚಾರಗಳ ಮೇಲೆ ಆಧಾರಿತವಾದ ಒಂದು ನವೀನ ಜೀವನದರ್ಶನವನ್ನು ಜನತೆಯ ಮುಂದಿರಿಸಿದರು. 'ವಚನ ಸಾಹಿತ್ಯ'ಎಂಬ ಒಂದು ಅಪೂರ್ವವಾದ ಸಾಹಿತ್ಯ ಪ್ರಭೇದವನ್ನು ಬಳಕೆಗೆ ತಂದರು. ವೀರಶೈವ ಕವಿಗಳು ಅಧಿಕಾರದಲ್ಲಿದ್ದವರನ್ನು ಸಂತೋಷಪಡಿಸುವುದಕ್ಕೆಂದು ಕೃತಿ ರಚನೆಗೆ ಕೈಹಾಕಲಿಲ್ಲ. ಮಾನವನ ಉದ್ಧಾರಕ್ಕೆ ಹಾಗೂ ಬಂಧವಿಮೋಚನೆಗೆ ಅವರ ಲೇಖನಿಗಳು ಮಿಸಲಾದವು. ಮಾನವ್ಯವನ್ನು ಬೆಳಗಿಸುವುದೇ ಸಾಹಿತ್ಯದ ಪರಮೋಚ್ಚ ಧ್ಯೇಯವೆಂದು ರಾಘವಾಂಕನು ಸಾರಿದನು. ಈತನ ಗುರುವಾದ ಹರಿಹರ ದೇವನು, ಮುಖಸ್ತುತಿಗೆ ಎಳಸದೆ, ಅಧಿಕಾರಾಮಿಷಗಳಿಗೆ ತುತ್ತಾಗದೆ ಮಹೋನ್ನತವಾದ ಆದರ್ಶಗಳನ್ನು ಅಳವಡಿಸಿಕೊಳ್ಳಬೇಕೆಂದು "ನೀನನವರತಂನೆನೆ ಪೊಗಳ್ವಾಳ್ದನೆಮ್ಮಘನಸೆಂಪಿನ ಸೊಂಪಿನಹಂಪೆಯಾಳ್ದನಂ"ಎಂದುಎಚ್ಚರಿಸಿದನು. ವೀರಶೈವರು ಸ್ವಯಂಪ್ರೇರಣೆಯಿಂದ ಸಾಹಿತ್ಯ ನಿರ್ಮಾಣ ಕಾರ್ಯವನ್ನು ಕೈಕೊಂಡರು. ಅವರ ಬೌದ್ಧಿಕ ಅನ್ವೇಷಣೆಗೆ ಧಾರ್ಮಿಕ ಸಂಸ್ಥೆಗಳಾದ ಮಠಗಳು ಮಹತ್ತ್ವಪೂರ್ಣವಾದ ಸಹಾಯ

ವನ್ನು ಸಲ್ಲಿಸಿದುವೆಂಬುದನ್ನು ಮರೆಯುವಂತಿಲ್ಲ. ಹೀಗಾಗಿ ವೀರಶೈವ ಕವಿಗಳು ಪ್ರಭೂತವಾದ ಸಾಹಿತ್ಯ ಸೃಷ್ಟಿಗೈದು ಜನಜಾಗ್ರತಿಯ ಒಂದು ಮಹಾಕ್ರಾಂತಿಗೆ ಕಾರಣರಾದರು. ಈ ಕಾಲದಲ್ಲಿ ಸಾಹಿತ್ಯದ ಕ್ರಾಂತಿಯುಗ ಮೊದಲಾಯಿತು.

ಬ್ರಾಹ್ಮಣರು ಬಹಳ ತಡವಾಗಿ ಸಾಹಿತ್ಯ ಸೃಷ್ಟಿಗೆ ಕೈ ಹಾಕಿದರು. ರುದ್ರಭಟ್ಟ, ಚೌಂಡರಸ, ನಾಗವರ್ಮ, ದುರ್ಗಸಿಂಹರಂತಹ ಕೆಲವರು ಹೊರತು, ೧೫ನೆಯ ಶತಮಾನದ ಮಧ್ಯಕಾಲದ ವರೆಗೆ ಬ್ರಾಹ್ಮಣರಾರೂ ಸಾಹಿತ್ಯ ನಿರ್ಮಾಣ ಕಾರ್ಯದಲ್ಲಿ ತೊಡಗಲಿಲ್ಲ. ಸಂಸ್ಕೃತದ ಮೇಲಣ ಪರಂಪರಾಗತ ವ್ಯಾಮೋಹ, ಇಂತಹ ಇನ್ನೂ ಅನೇಕ ಕಾರಣಗಳು ಕನ್ನಡ ಸಾಹಿತ್ಯದ ನಂದನ ವನದಲ್ಲಿ ಪ್ರವೇಶಿಸದಂತೆ ಅವರನ್ನು ತಡೆಹಿಡಿದಿದ್ದುವು. ಅನಂತರ ಬಂದ ಕುಮಾರವ್ಯಾಸ, ಹಾಗೂ ಲಕ್ಷ್ಮೀಶ, ಹರಿದಾಸರು ವೀರಶೈವ ಕವಿಗಳ ಹಾಗೂ ವಚನಕಾರರ ಮಾದರಿಯನ್ನು ಅನುಸರಿಸಿ ಕನ್ನಡ ಸಾಹಿತ್ಯಿಕ ಚಟುವಟಿಕೆಯಲ್ಲಿ ತೊಡಗಿದರು. ಸಮೃದ್ಧವಾದ ಸಾಹಿತ್ಯವನ್ನು ಅವರು ಸೃಷ್ಟಿಸಿದರು. ೧೫ನೆಯ ಶತಮಾನದ ಅನಂತರ ಸಾಹಿತ್ಯವು ಕೇವಲ ಜೈನರ ಅಥವಾ ವೀರಶೈವರ ಸೊತ್ತಾಗಿ ಉಳಿಯಲಿಲ್ಲ. ಸಮಾನ ಭೂಮಿಕೆಯಲ್ಲಿ ಸ್ವತಂತ್ರ ಸ್ಪರ್ಧೆ ಏರ್ಪಡಲು ಅವಕಾಶವುಂಟಾಯಿತು. ಮೂರೂ ಧರ್ಮಗಳಲ್ಲಿ ಅನೇಕ ಪ್ರತಿಭಾಶಾಲಿಗಳು ಜನ್ಮವೆತ್ತಿದರು. ಭಕ್ತಿಭಾವನೆಯಿಂದ ಸ್ಫೂರ್ತಿಗೊಂಡು ಹುಟ್ಟಿಬಂದ ಹೊಸ ಮಾದರಿಯ ದಾಸಸಾಹಿತ್ಯವು ವಚನ ಸಾಹಿತ್ಯದಂತೆ ಸಾಮಾನ್ಯ ಜನತೆಯ ಮೇಲೆ ಅತ್ಯಂತ ಪ್ರಭಾವವನ್ನು ಬೀರಿತು. ಕ್ರಿ.ಶ. ೧೪೦೦ ರಿಂದ ೧೭೦೦ರ ವರೆಗಿನ ಕಾಲಾವಧಿಯಲ್ಲಿ ಅನೇಕ ಮಹಾಕಾವ್ಯಗಳು ಹುಟ್ಟಿಬಂದವು. ಕ್ರಿ.ಶ. ೧೭೦೦ರ ತರುವಾಯ ಸಾಹಿತ್ಯ ಕ್ಷೇತ್ರದಲ್ಲಿ ನಿಷ್ಕ್ರಿಯತೆಯ ಕಾಲ ಪ್ರಾರಂಭವಾಯಿತು. ಕರ್ನಾಟಕದಲ್ಲಷ್ಟೇ ಏಕೆ, ಇಡೀ ಭಾರತದಲ್ಲಿಯೇ ಇಂತಹ ವಾತಾವರಣ ಪರಿಸತ್ತು. ಈ ಸಾಹಿತ್ಯಿಕ ಬಂಜೆತನಕ್ಕೆ ಅಥವಾ ಕೃತಿಗಳ ಅನುತ್ಪಾದನೆಗೆ, ದೇಶದಲ್ಲಿ ತಲೆದೋರಿದ ಅರಾಜಕ ಹಾಗೂ ಗೊಂದಲಮಯ ವಾತಾವರಣವೇ ಕಾರಣವೆಂದು ಹೇಳಬಹುದು.

ಬ್ರಿಟಿಷರು ಭಾರತವನ್ನು ಜಯಿಸಿದ ಮೇಲೆ ಇಂಗ್ಲಿಷ್ ಅಭ್ಯಾಸದ ಪ್ರಭಾವದಿಂದ ಇಲ್ಲಿ ಸಾಹಿತ್ಯಿಕ ಆಂದೋಲನವು ಮತ್ತೆ ಚೇತರಿಸಿಕೊಂಡಿತು. ಕನ್ನಡನಾಡಿನ ಭಿನ್ನ ಭಿನ್ನ ಧಾರ್ಮಿಕ ಪಂಗಡದವರು ಪಾಶ್ಚಾತ್ಯ ಪ್ರಭಾವ ಪ್ರೇರಣೆಗಳಿಗೆ ತೋರಿಸಿದ ಪ್ರತಿಕ್ರಿಯೆ ಒಂದೇ ಬಗೆಯದಾಗಿಲ್ಲ. ಅನೇಕ ಶತಮಾನಗಳವರೆಗೆ ಸಾಹಿತ್ಯದಲ್ಲಿ ಸಾರ್ವಭೌಮತ್ವದ ಗುತ್ತಿಗೆಯನ್ನು ಸ್ಥಾಪಿಸಿದ, ವಿಶಿಷ್ಟ ಸಾಹಿತ್ಯ ಸಂಪ್ರದಾಯವನ್ನು ಉಳಿಸಿಕೊಂಡು ಬಂದ ವೀರಶೈವರು ಹಾಗೂ ಜೈನರು ಇಂಗ್ಲಿಷ್ ಅಭ್ಯಾಸಕ್ಕೆ ಪ್ರಾರಂಭದಲ್ಲಿ ಅಷ್ಟೊಂದು ಒಲಿಯಲಿಲ್ಲ. ಭಾರತೀಯ ಇತಿಹಾಸದಲ್ಲಿ ಇದು ಒಂದು ವಿಲಕ್ಷಣ ಸಂಗತಿಯಾಗಿದೆ. ಜೈನ ಹಾಗೂ ವೀರಶೈವರಿಗಿಂತ ಒಂದು ಕಾಲದಲ್ಲಿ ಹಿಂದುಳಿದಿದ್ದ ಬ್ರಾಹ್ಮಣರು ಕೂಡಲೇ ಇಂಗ್ಲಿಷ್ ಅಭ್ಯಾಸಕ್ಕೆ ಅಂಟಿಕೊಂಡು ಸಾಹಿತ್ಯಿಕ ಚಟುವಟಿಕೆಗಳತ್ತ ಧುಮುಕಿದರು. ೧೯ನೆಯ ಹಾಗೂ ೨೦ನೆಯ ಶತಮಾನದಲ್ಲಿ ನಿರ್ಮಿತವಾದ ವಿಪುಲವಾದ ಸಾಹಿತ್ಯ ಸೃಷ್ಟಿಗೆ ಅವರು ಆಂಗ್ಲವಿದ್ಯಾಭ್ಯಾಸದಿಂದ ಸುಸಜ್ಜಿತರಾದುದೇ ಕಾರಣವೆಂದು ಹೇಳಬಹುದು. ವಿದ್ಯಾಭ್ಯಾಸದ ಕೊರತೆ ಹಾಗೂ ಇತರ ಅನನುಕೂಲಗಳ ಮೂಲಕ ವೀರಶೈವರು ಸಾಹಿತ್ಯ ಸ್ಪರ್ಧೆಯಲ್ಲಿ ಹಿಂದೆ ಬೀಳಬೇಕಾಯಿತು. ವ್ಯಕ್ತಿಯ ಜೀವನದಲ್ಲಿ ಎಂತೋ ಅಂತೆ ಜನಾಂಗದ ಜೀವನ

ದಲ್ಲಿಯೂ ಗತಿಹೀನ ಹಾಗೂ ಪ್ರಗತಿಪರವಾದ ಕಾಲಖಂಡಗಳನ್ನು ಕಂಡುಕೊಳ್ಳಬಹುದಾಗಿದೆ. ಇಂತಹ ಏರಿಳಿತಗಳಿಗೆ ಕೆಲವು ಐತಿಹಾಸಿಕ ಸ್ಥಿತಿಗತಿಗಳು, ಅಲ್ಲದೆ ಹೊಸ ಶಕ್ತಿಗಳನ್ನು ಅಳವಡಿಸಿಕೊಳ್ಳಬಲ್ಲ ಅಂತಃಶಕ್ತಿಯ ಕೊರತೆಗಳು ಕಾರಣಗಳಾಗುತ್ತವೆ. ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಈ ಬಗೆಯ ಏರಿಳಿತಗಳು ಉಂಟಾಗಿವೆ ಎಂಬುದನ್ನು ಅಭ್ಯಾಸದಿಂದ ಅರಿಯಬಹುದಾಗಿದೆ. ಇಂತಹ ಕಾಲದಲ್ಲಿಯೂ ಮೈಸೂರಿನಲ್ಲಿ ರಾಜಾಶ್ರಯದಿಂದ ವ್ಯಾಕರಣದ ಬಿ. ಮಲ್ಲಪ್ಪ, ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿ, ಕರ್ಣಾಟಕ ಭಾಷಾರತ್ನ ಪಿ. ಆರ್. ಕರಿಬಸವ ಶಾಸ್ತ್ರಿಗಳಂತಹ ವಿದ್ವಾಂಸರು ಆಗಿರುವುದು ಗಮನಾರ್ಹವಾಗಿದೆ.

ಮೇಲಿನ ಸಮೀಕ್ಷೆಯ ಆಧಾರದ ಮೇಲೆ ಕನ್ನಡ ಸಾಹಿತ್ಯ ಚರಿತ್ರೆಯ ವಿಚಾರ ಶೀಲ ಹಾಗೂ ನಿಷ್ಪಕ್ಷಪಾತವಾದ ವಿಭಾಗ ಕ್ರಮವನ್ನು ಕಂಡುಕೊಳ್ಳಬಹುದು. ಅದು ಈ ರೀತಿಯಾಗಿದೆ:

೧. ಸಾಂಪ್ರದಾಯಯುಗ– ಪ್ರಾರಂಭ ಕಾಲದಿಂದ ಕ್ರಿ.ಶ. ೧೧೫೦ರ ವರೆಗೆ

೨. ಕ್ರಾಂತಿಯುಗ–ಕ್ರಿ.ಶ. ೧೧೫೦ರಿಂದ ಕ್ರಿ.ಶ. ೧೪೦೦ರ ವರೆಗೆ

೩. ಸ್ಪರ್ಧಾಯುಗ–ಕ್ರಿ.ಶ.೧೪೦೦ರಿಂದ ಕ್ರಿ.ಶ. ೧೭೦೦ರ ವರೆಗೆ

೪. ಅಂಧಕಾರಯುಗ– ಕ್ರಿ ಶ. ೧೭೦೦ ರಿಂದ ಕ್ರಿ.ಶ. ೧೮೫೭ರ ವರೆಗೆ

೫. ಪಾಶ್ಚಾತ್ಯ ಪ್ರಭಾವ ಯುಗ–ಕ್ರಿ.ಶ. ೧೯ನೆ ಶತಕದ ಮಧ್ಯಕಾಲದಿಂದ ಇಂದಿನವರೆಗೆ.

ಕೊನೆಯದಾಗಿ ಸಮಗ್ರ ಭಾರತೀಯ ಸಾಹಿತ್ಯಕ್ಕೆ ಕನ್ನಡ ಸಾಹಿತ್ಯದ ಕೊಡುಗೆ ಎಷ್ಟೆಂಬುವನ್ನು ಅಳೆದು ನೋಡಬಹುದು. ಕರ್ನಾಟಕದ ಒಂದು ಸಾವಿರಕ್ಕೂ ಮೇಲ್ಪಟ್ಟ ಕವಿಗಳಲ್ಲಿ ಸುಮಾರು ಐವತ್ತು ಜನವಾದರೂ ಭಾರತದ ಪ್ರಥಮವರ್ಗದ ಕವಿಗಳ ಸಾಲಿನಲ್ಲಿ ನಿಲ್ಲಲರ್ಹರಾಗಿದ್ದಾರೆ. ಪಂಪ, ಹರಿಹರದೇವ, ರನ್ನ, ರಾಘವಾಂಕರಂತಹ ಶ್ರೇಷ್ಠವರ್ಗದ ಕವಿಗಳು ಸಂಸ್ಕೃತದಲ್ಲಿ ಸಾಹಿತ್ಯ ಸೃಷ್ಟಿಸಿದ್ದಾರೆ. ಯಾವ ದೃಷ್ಟಿಕೋನದಿಂದ ನೋಡಿದರೂ ಅವರು ಭಾರತದ ಮಹಾ ಕವಿಗಳ ವರ್ಗಕ್ಕೆ ಸೇರಬಲ್ಲವರಾಗುತ್ತಿದ್ದರು. ಚಾಮರಸ ಮತ್ತು ನಿಜಗುಣ ಶಿವಯೋಗಿಗಳ ಕೃತಿಗಳು, ಸಂಸ್ಕೃತ, ಮರಾಠಿ ತೆಲುಗು,ತಮಿಳು ಮೊದಲಾದ ಅನೇಕ ಭಾಷೆಗಳಲ್ಲಿ ಅನುವಾದಿಸಲ್ಪಟ್ಟವೆಯೆನ್ನುವುದೇ ಅವರ ಸಮಷ್ಟಿಪ್ರಭಾವ (Universality of appeal) ಹಾಗೂ ಸಾಹಿತ್ಯಿಕ ಔನ್ನತ್ಯಗಳ ಹಿರಿಮೆಯ ದ್ಯೋತಕವಾಗಿದೆ. ಪಾಲ್ಕುರಿಕೆ ಸೋಮನು,ಕನ್ನಡ, ತೆಲುಗು, ಸಂಸ್ಕೃತ ಭಾಷೆಗಳಲ್ಲಿ ಕೃತಿರಚನೆ ಮಾಡಿದುದಲ್ಲದೆ ಅವನ ಕೃತಿಗಳು ಕನ್ನಡ, ತಮಿಳು, ಸಂಸ್ಕೃತ ಭಾಷೆಗಳಿಗೂ ಭಾಷಾಂತರವಾಗಿರುವುದು ಗಮನಾರ್ಹವಾಗಿದೆ. ಮಾನವ ಜಾತಿಯ ಜ್ಞಾನವೃದ್ಧಿಯುಂಟಾಗಲು ಇಂತಹ ಕೃತಿಗಳು ಜಗತ್ತಿನ ಪ್ರಮುಖ ಭಾಷೆಗಳಲ್ಲಿ ಅನುವಾದಗೊಳ್ಳಬೇಕೆಂದು ಪ್ರತಿಯೊಬ್ಬರೂ ಹಾರೈಸಬಹುದಾಗಿದೆ.

ಭಾರತೀಯ ಸಮಾಜದ ಇತಿಹಾಸವನ್ನು ರಚಿಸಲು ಬೇಕಾದ ಯೋಗ್ಯ ಆಧಾರಗಳ ಕೊರತೆ ಇದೆ ಎನ್ನುವುದನ್ನು ಗಮನಿಸಬೇಕು. ಪ್ರಾಚೀನ ಕಾಲದಿಂದ ಇಂದಿನವರೆಗೆ ಭಾರತೀಯ ಸಮಾಜ ಜ್ಞಾನದ ವ್ಯಾಪಕವಾದ ಪರಿಜ್ಞಾನವನ್ನುಂಟು ಮಾಡುವ ಒಂದು ಗ್ರಂಥವೂ ನಮಗೆ ದೊರೆಯದೇ ಇರುವುದು ವಿಷಾದದ ಸಂಗತಿಯಾಗಿದೆ. ಪ್ರಾದೇ

ಶಿಕ ಸಮಾಜ ರಚನೆಯನ್ನು ವಿವರಿಸುವ ಯೋಗ್ಯ ಆಧಾರಗಳ ಕೊರತೆಯಿಂದ ಭಾರತದಲ್ಲಿ ಸಮಾಜ ವಿಜ್ಞಾನ ಕ್ಷೇತ್ರದಲ್ಲಿ ಸಂಶೋಧನಾ ಕಾರ್ಯವನ್ನು ಕೈಕೊಳ್ಳಲು ಬಹು ದೊಡ್ಡ ಅಂತಕ ಉಂಟಾಗಿದೆ ಯೆಂದು ಸಮಾಕಾಲೀನನಾದ ಓರ್ವ ಪಾಶ್ಚಾತ್ಯ ಪಂಡಿತನು ಎತ್ತಿ ಹೇಳಿದ್ದಾರೆ. ಬೇರೆ ಬೇರೆ ಪ್ರದೇಶ ಗಳ ಜನರ ಸಾಮಾಜಿಕ ವೈಲಕ್ಷಣ್ಯಗಳನ್ನು ಕುರಿತು ಪಾಶ್ಚಾತ್ಯ ವಿದ್ವಾಂಸರು ಬರೆದ ಬರೆಹಗಳು ಉಚ್ಚ ಜ್ಞಾನದ ಮಾತೃಕೆಗಳಾಗಿವೆ. ಆದರೆ ಅವು ಅಷ್ಟೊಂದು ಶಾಸ್ತ್ರೀಯವಾಗಿಲ್ಲವಷ್ಟೇ ಅಲ್ಲ; ಧರ್ಮ ಮತ್ತು ಇತರ ಸಾಮಾಜಿಕ ಸಂಸ್ಥೆಗಳ ನ್ನೊಳಗೊಂಡ ಸಮಾಜ ತತ್ವದ ಸಂಯೋಜಿತ ಹಾಗೂ ನಿರಂತರವಾದ ಐತಿಹಾಸಿಕ ಸ್ಥಿತ್ಯಂತರ ಗಳನ್ನು ಅವು ವಿವರಿಸುವುದಿಲ್ಲ.

ಕರ್ನಾಟಕದ ಸಮಾಜ ವಿಕಾಸ ಹಾಗೂ ಸಮಾಜಶಾಸ್ತ್ರದ ಬೆಳೆವಣಿಗೆಯನ್ನು ಕುರಿತ ಅಭ್ಯಾ ಸವು ಬಹಳ ಮಹತ್ವದ್ದಾಗಿದೆ. ರಾಜಕೀಯ ಇತಿ ಹಾಸವು ಅತ್ಯುತ್ತಮವಾದ ಆಧಾರಗಳ ಮೇಲೆ ರಚಿತವಾಗಿದ್ದರೂ, ಸಮಾಜ ವಿಕಾಸವನ್ನು ವಿವರಿ ಸುವ ವಿಷಯಗಳು ಅಜ್ಞಾತವಾಗಿವೆ. ಕರ್ನಾಟಕದ ಕೆಲವು ಮಹತ್ವದ ಶಕ್ತಿಗಳನ್ನು ಎತ್ತಿ ತೋರಿಸುವ ಸಮಾಜ ರಚನೆಗೆ ನೆರವಾದ ಪ್ರಯತ್ನ ಇಲ್ಲಿ ಇದೆ. ಕರ್ನಾಟಕದ ಜನತೆ ತನ್ನ ಐತಿಹಾಸಿಕ ಜೀವನದಲ್ಲಿ ಅನೇಕ ಸಾಮಾಜಿಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಶೌರ್ಯಸಾಹಸಗಳ, ಸುಧಾರಣೆ ಉತ್ಕ್ರಾಂತಿಗಳ, ಅವನತಿ ಅಧಃ ಪತನಗಳ ಭಿನ್ನ ರೀತಿಯ ಅನುಭವಗಳನ್ನು ಮಾಡಿ ಕೊಳ್ಳಬೇಕಾಯಿತು. ಭಾರತೀಯ ಸಂಸ್ಕೃತಿಯ ಪರಿಜ್ಞಾನಕ್ಕೆ ಇಂತಹವುಗಳ ಅಭ್ಯಾಸ ಅನಿವಾ ರ್ಯವಾಗಿದೆ.

ಧಾರ್ಮಿಕ ಅಸಹಿಷ್ಣುತೆ, ಆಕ್ರಮಣ ಶೀಲ ಧರ್ಮಾಂಧತೆ ಹಾಗೂ ತಾತ್ವಿಕ ಘರ್ಷಣೆಗಳು ಭಾರತೀಯ ಇತಿಹಾಸದಲ್ಲಿ ಕೆಲವು ಸಲ ಕಂಡು ಬಂದರೂ, ಅವು ಯೂರೋಪದಲ್ಲಿಯಂತೆ ಬೃಹದಾ ಕಾರವನ್ನು ತಾಳಲಿಲ್ಲವೆಂಬ ಐತಿಹಾಸಿಕ ಸಂಗತಿ ಸರ್ವವಿದಿತವಾಗಿದೆ. ಭಾರತದಲ್ಲಿಯೂ ಉತ್ತರ ದಕ್ಷಿಣ ಭೇದವಿದೆ. ಉತ್ತರ ಭಾರತವು ಮತಾಂಧ ವಾದ ಧಾರ್ಮಿಕ ನೀತಿಯನ್ನು ಅನುಸರಿಸಿದರೆ, ದಕ್ಷಿಣ ಭಾರತವು ಇದಕ್ಕೆ ಭಿನ್ನವಾದ ಪರಧರ್ಮ ಸಹಿಷ್ಣುತೆಯ ಉದಾರ ನೀತಿಯನ್ನು ಅನುಸರಿ ಸಿದೆ. ಆಳರಸರು ತಾವು ಹಿಂದುಗಳು ಅಥವಾ ಮುಸಲ್ಮಾನರು ಯಾರೇ ಆಗಿರಲಿ, ಧಾರ್ಮಿಕ ಕ್ರೌರ್ಯ ಹಿಂಸಾಕಾರ್ಯಗಳಲ್ಲಿ ತೊಡಗಲಿಲ್ಲ: ಹೀಗೆಂದರೆ ಇಲ್ಲಿ ಧಾರ್ಮಿಕ ವಿಪ್ಲವಗಳೇಳಲೇ ಇಲ್ಲವೆಂದು ಅರ್ಥವಲ್ಲ. ಧರ್ಮವು ಜನ ಜೀವನ ದಿಂದ ಸಂಪೂರ್ಣವಾಗಿ ಭಿನ್ನವೆಂದು ಭಾರತೀಯ ರೆಂದಿಗೂ ಭಾವಿಸಲಿಲ್ಲ. ಧಾರ್ಮಿಕ ವಿಪ್ಲವಗಳು ಬೌದ್ಧಿಕ ಘರ್ಷಣೆಗಳಿಗಷ್ಟೇ ಪರಿಮಿತವಾಗಿರು ತ್ತಿದ್ದವು; ಕ್ವಚಿತ್ತಾಗಿ ಅವು ಈ ವಲಯವನ್ನು ಮೀರಿಹೋಗುತ್ತಿದ್ದವು. ಕರ್ನಾಟಕದಲ್ಲಿ ಧರ್ಮ ಸ್ವಾತಂತ್ರ್ಯ ಹಾಗೂ ವಿಚಾರ ಸ್ವಾತಂತ್ರ್ಯಗಳು ಸದಾಕಾಲದಲ್ಲಿ ಪ್ರಚಾರದಲ್ಲಿದ್ದುವು. ಕೇಂದ್ರವು ಮಂಡಳ ರಾಜ್ಯಗಳನ್ನು ಭಿನ್ನವಾದವುಗಳೆಂದು ಎಂದಿಗೂ ಭಾವಿಸುತ್ತಿರಲಿಲ್ಲ. ಧರ್ಮ, ಜಾತಿ, ಪಂಗಡಗಳನ್ನು ಗಣನೆಗೆ ತಾರದೆ, ಎಲ್ಲ ಪ್ರಜೆ ಗಳನ್ನೂ ಸಮಾನವಾಗಿ ನ್ಯಾಯ ಸಮ್ಮತವಾಗಿ ನಡೆಯಿಸಿಕೊಳ್ಳಬೇಕೆಂಬ ರಾಜನೀತಿಯನ್ನು ಕನ್ನಡಿಗರು ಅರಿತುಕೊಂಡಿದ್ದರು. ಭಿನ್ನಧಾರ್ಮಿಕ ಪಂಗಡಗಳಲ್ಲಿ ಘರ್ಷಣೆಗಳುಂಟಾದರೆ ಅವುಗಳಲ್ಲಿ ಸಾಮರಸ್ಯವನ್ನು ತರಲು ರಾಜ್ಯಗಳು ಪ್ರಯತ್ನಿ ಸಿದ ಉದಾಹರಣೆಗಳು ಕರ್ನಾಟಕದ ಇತಿಹಾ ದಲ್ಲಿ ಅನೇಕ ಇವೆ.

ಜೈನ ಅರಸರು ಅಹಿಂಸಾಧರ್ಮದ ಧೋರಣೆ ಯಿಂದಾಗಿ ಅನ್ಯಧರ್ಮೀಯರನ್ನು ಹಿಂಸಿಸುತ್ತಿರ

ಲಿಲ್ಲ. ಜೈನರಲ್ಲದವರಿಗೆ ರಾಜ್ಯದಲ್ಲಿ ಮಹತ್ವದ ಹುದ್ದೆಗಳನ್ನು ಜೈನ ಅರಸರು ಕೊಡುತ್ತಿದ್ದರೆಂಬುದಕ್ಕೆ ಸಾಕಷ್ಟು ನಿದರ್ಶನಗಳಿವೆ. ಪ್ರತಿಸ್ಪರ್ಧಿ ಧರ್ಮವಾದ ವೀರಶೈವದ ಮುಂದಾಳು ಶ್ರೀ ಬಸವಣ್ಣನವರಿಗೆ ಶೈವನಾದ ಬಿಜ್ಜಳನು ಮಂತ್ರಿಪದವಿಯನ್ನಿತ್ತನು. ಕಾಕತೀಯ, ವಿಜಯನಗರ, ಕೆಳದಿ, ಮೈಸೂರು ರಾಜ್ಯಗಳು ಪರಧರ್ಮ ಸಹಿಷ್ಣುತೆಯ ಅಪೂರ್ವ ಉದಾಹರಣೆಗಳಾಗಿವೆ.

ಧರ್ಮಸಹಿಷ್ಣುತೆ ಕೇವಲ ಕನ್ನಡ ಅರಸರ ಸೊತ್ತಾಗಿರಲಿಲ್ಲ ಎನ್ನುವುದು ಇನ್ನೊಂದು ಆಶ್ಚರ್ಯದ ಸಂಗತಿಯಾಗಿದೆ. ಇಲ್ಲಿನ ಮುಸಲ್ಮಾನ ಅರಸರು ಕೂಡ ಈ ನೀತಿಯನ್ನು ಅನುಸರಿಸಿದರು. ಮಹಮ್ಮದೀಯ ಸಾಮ್ರಾಜ್ಯಗಳಾದ ವಿಜಾಪುರ, ಬೀದರೆ, ಗೋಳಕೊಂಡಗಳಲ್ಲಿ ಹಿಂದುಗಳಿಗೆ ಮಹತ್ವದ ಹುದ್ದೆಗಳು ಲಭ್ಯವಾಗಿದ್ದವು. ರಾಜಕೀಯ ಐಕ್ಯ, ಉದಾರಧೋರಣೆ, ಪರಧರ್ಮ ಸಹಿಷ್ಣುತೆಗಳು ಅವರ ಮಾರ್ಗದರ್ಶಕ ತತ್ತ್ವಗಳಾಗಿದ್ದವು. ಈ ಅರಸರು ಷಿಯಾ ಪಂಥಕ್ಕೆ ಸೇರದವರಾದುದರಿಂದ ಒತ್ತಾಯದ ಧರ್ಮ ಪ್ರಸಾರ ಹಾಗೂ ಹಿಂಸಾಕಾರ್ಯಗಳಿಗೆ ಕೈ ಹಾಕುತ್ತಿರಲಿಲ್ಲ. ವಿಜಯನಗರದ ಸೈನ್ಯದಲ್ಲಿ ಎಂಬತ್ತು ಸಾವಿರ ಮುಸಲ್ಮಾನ ಸೈನಿಕರಿದ್ದರೆನ್ನುವ ಸಂಗತಿಯು ಹಿಂದೂ–ಮುಸಲ್ಮಾನರಲ್ಲಿನ ರಾಜಕೀಯ ಹಾಗೂ ಸಾಮಾಜಿಕ ಮಧುರ ಬಾಂಧವ್ಯದ ದ್ಯೋತಕವಾಗಿದೆ.

ಹಿಂದುಗಳಲ್ಲಿಯೇ ಅನೇಕ ಸಲ ಸಾಹಿತ್ಯ ಹಾಗೂ ಆಡಳಿತೆಯ ಕ್ಷೇತ್ರಗಳಲ್ಲಿ ಧಾರ್ಮಿಕ ಕಲಹಗಳೇಳುತ್ತಿದ್ದುವು. ಆದರೆ, ಸುದೈವದಿಂದ ಅವು ದೊಡ್ಡ ಧಾರ್ಮಿಕ ಬಿಕ್ಕಟ್ಟುಗಳಿಗೆ ದಾರಿ ಮಾಡಿಕೊಡುತ್ತಿರಲಿಲ್ಲ. ಪ್ರಾರಂಭದಲ್ಲಿ ವೀರಶೈವ ಹಾಗೂ ಜೈನರು ಧಾರ್ಮಿಕ ಸರ್ವಶ್ರೇಷ್ಠತೆಗಾಗಿ ಸ್ಪರ್ಧಿಸುತ್ತಿದ್ದರು. ಆದರೆ, ವೀರಶೈವರು ಧಾರ್ಮಿಕ ಸ್ವಾಮ್ಯವನ್ನು ಸ್ಥಾಪಿಸಿದ ಮೇಲೆ ಈ ಸ್ಪರ್ಧೆ ಮಾಯವಾಯಿತು. ವೀರಶೈವ ಹಾಗೂ ಬ್ರಾಹ್ಮಣರಲ್ಲಿ ಉದ್ಭವಿಸಿದ ತೀಕ್ಷ್ಣಸ್ಪರ್ಧೆ ಕರ್ನಾಟಕದ ಸಾಮಾಜಿಕ ಇತಿಹಾಸದ ಇನ್ನೊಂದು ಎದ್ದು ಕಾಣುವ ಲಕ್ಷಣವಾಗಿದೆ. ವೀರಶೈವ ಆಂದೋಲನವು ಬ್ರಾಹ್ಮಣರ ಸರ್ವಾಧಿಕಾರಕ್ಕಿತ್ತ ಆಹ್ವಾನವಾಯಿತು. ಬ್ರಾಹ್ಮಣ ಧರ್ಮದಲ್ಲಿ ಜನ್ಮವೆತ್ತಿದ ಶ್ರೀಬಸವೇಶ್ವರರು ವೀರಶೈವರ ಮುಂದಾಳಾದರು. ಹನ್ನೆರಡನೆಯ ಶತಮಾನದ ಅನಂತರ ವೀರಶೈವ ಧರ್ಮವು ಸಮಾಜದಲ್ಲಿ ಅನೇಕ ಪರಿವರ್ತನೆಗಳನ್ನುಂಟು ಮಾಡಿತು. ವೀರಶೈವರು ತಾವು ಸಮಾಜದಲ್ಲಿ ಸರ್ವಶ್ರೇಷ್ಠರೆಂದು ಹೇಳಿಕೊಳ್ಳಲಿಲ್ಲವಷ್ಟೇ ಅಲ್ಲ,ಹಾಗೆ ಹೇಳಿಕೊಳ್ಳಲು ಬ್ರಾಹ್ಮಣರಿಗೂ ಅವಕಾಶಸಿಕ್ಕದಂತಹ ವಾತಾವರಣವನ್ನು ನಿರ್ಮಿಸಿದರು. ಇದರಿಂದ ಸಾಹಿತ್ಯ ಹಾಗೂ ಇತರ ಕ್ಷೇತ್ರಗಳಲ್ಲಿ ಪರಸ್ಪರರಲ್ಲಿ ತೀವ್ರವಾದ ಸ್ಪರ್ಧೆ ಪ್ರಾರಂಭವಾಯಿತು. ಸಾಹಿತ್ಯವು ಸಾಧನವಾಯಿತು. ಸಮಷ್ಟಿ ದೃಷ್ಟಿಯಲ್ಲಿ ಒಂದೇ ಧರ್ಮಪ್ರಚಾರದ ಒಂದು ಬಗೆಯ ನೈತಿಕ ಪರಿವೇಷಗಳನ್ನೊಳಗೊಂಡ ಬ್ರಾಹ್ಮಣ ಹಾಗೂ ವೀರಶೈವರ ಸಾಂಸ್ಕೃತಿಕ ಪ್ರವಾಹಗಳು ಭಿನ್ನವಾಗಿಯೇ ಹರಿದುದು ಅತ್ಯಾಶ್ಚರ್ಯದ ಸಂಗತಿಯಾಗಿದೆ.

ಮಹಾತ್ಮ ಬಸವಣ್ಣನವರು ಪ್ರಾರಂಭಿಸಿದ ಸಮಾಜಕ್ರಾಂತಿಯು ದಕ್ಷಿಣ ಭಾರತದ ಜನಜೀವನದ ಮೇಲೆ ಶಾಶ್ವತವಾದ ಪ್ರಭಾವ ಬೀರಿತು. ಶ್ರೀ ಕುಮಾರ ಸ್ವಾಮಿಗಳ ಕೆಳಗಣ ನಿರೀಕ್ಷಣೆ ಅತ್ಯಂತ ಯೋಗ್ಯವಾಗಿದೆ.

"ಬಸವಣ್ಣನವರು ಪ್ರಾರಂಭಿಸಿದ ವೀರಶೈವ ಆಂದೋಲನವು, ಬೌದ್ಧಧರ್ಮದ ಅವಸಾನದ ನಂತರ ಭಾರತದ ಜನಜೀವನದಲ್ಲಿ ಪ್ರಗತಿಪರ ಜೀವನದರ್ಶನದ ಮೇಲೆ ಆಧರಿತವಾದ

ಒಂದು ಮಹಾಸಾಮಾಜಿಕ ಕ್ರಾಂತಿಯನ್ನುಂಟು ಮಾಡಿತು. ಬುದ್ಧನು ಸಮಾಕಾಲೀನ ಸಾಮಾಜಿಕ ನ್ಯೂನತೆಗಳ ವಿರುದ್ಧವಾಗಿ ನಾಸ್ತಿಕತೆಯ ಆಧಾರದ ಮೇಲೆ ಹೋರಾಡಿದರೆ, ಬಸವಣ್ಣನವರು ಆಸ್ತಿಕತೆಯ ಆಧಾರದ ಮೇಲೆ ಅವುಗಳನ್ನು ಜಯಿಸಿದರು."

ಅಶೋಕಚಕ್ರವರ್ತಿಯ ಕಾಲದಲ್ಲಿ ಬೌದ್ಧ ಧರ್ಮವು ರಾಷ್ಟ್ರೀಯ ಪ್ರಜ್ಞೆಯನ್ನು ಜಾಗ್ರತೆಗೊಳಿಸುವುದರಲ್ಲಿ ಯಶಸ್ವಿಯಾಯಿತು. ಭಾರತೀಯ ಇತಿಹಾಸದಲ್ಲಿ ವೀರಶೈವ ಆಂದೋಲವು ಕ್ರಾಂತಿಕಾರಿಯಾದ ಇನ್ನೊಂದು ಅಧ್ಯಾಯಕ್ಕೆ ನಾಂದಿಯಾಯಿತು. ಬಸವಣ್ಣನವರು ಎಂಟು ನೂರು ವರ್ಷಗಳ ಹಿಂದೆ ಪ್ರಾರಂಭಿಸಿದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸುಧಾರಣೆಗಳ ಪ್ರಭಾವವನ್ನು ನಾವು ಇಂದಿಗೂ ಕಾಣುತ್ತೇವೆ. ವೀರಶೈವ ಆಂದೋಲನದ ಐತಿಹಾಸಿಕ ಪಾತ್ರದ ಮೌಲ್ಯ ನಿರ್ಣಯವು ಭಾರತದ ಸಾಂಸ್ಕೃತಿಕ ಇತಿಹಾಸಕ್ಕೆ ಶ್ರೇಷ್ಠ ಕೊಡುಗೆಯಾಗಲರ್ಹವಾಗಿದೆ. ವೀರಶೈವ ಆಂದೋಲನವು ಸರ್ವಾದರಣೀಯ, ಪ್ರಜಾಸತ್ತಾತ್ಮಕ ಹಾಗೂ ವಿಶ್ವಸಮ್ಮತವಾದ ತತ್ವಗಳು ಭೂಮಿಕೆಯ ಮೇಲೆ ಪ್ರಾರಂಭವಾಯಿತು. ಸಮಾನತೆಯ ಆಧಾರದ ಮೇಲೆ ನವೀನ ಸಮಾಜ ರಚನೆ ಅದರ ಗಮ್ಯವಾಗಿತ್ತು. ಹಿಂದೂಧರ್ಮದಲ್ಲಿ ಅದು ಪ್ರಪ್ರಥಮವಾಗಿ ದೊಡ್ಡ ಪ್ರಮಾಣದ ಜಾತಿಪಲ್ಲಟಗಳಿಗೆ ದಾರಿಮಾಡಿ ಕೊಟ್ಟಿತು. ಪ್ರಜಾಸತ್ತಾತ್ಮಕವಾದ ಸಂದೇಶ ಹಾಗೂ ಉದಾರ ಧೋರಣೆಗಳಿಂದ ಯಾವದೇ ರೀತಿಯ ಶಕ್ತಿಪ್ರದರ್ಶನವಿಲ್ಲದೆ ವೀರಶೈವ ಧರ್ಮವು ದೊಡ್ಡಪ್ರಮಾಣದಲ್ಲಿ ಜನಸಮುದಾಯವನ್ನು ಗೆದ್ದುಕೊಳ್ಳುವುದರಲ್ಲಿ ಯಶಸ್ವಿಯಾಯಿತು. ಕ್ರಿ.ಶ. ೧೨೦೦ರಿಂದ ಕ್ರಿ.ಶ.ಸು ೧೭೦೦ರ ಮಧ್ಯದವರೆಗಿನ ಕಾಲಾವಧಿಯು ವೀರಶೈವ ಧರ್ಮದ ಉಚ್ಛ್ರಾಯದ ಕಾಲವಾಗಿದ್ದ ಗತಿಶೀಲವಾದ ಈ ಧರ್ಮದ ಆಶ್ರಯದಲ್ಲಿ ಹಿಂದೆಂದೂ ಸಂಭವಿಸದೇ ಇದ್ದ ಸಾಮಾಜಿಕ ಉನ್ನತಿ ಕೈಸಾರಿತು. ಕಾಕತೀಯ ರಾಜ್ಯ ಮತ್ತು ವಿಜಯನಗರದ ಹಾಗೂ ಕೆಳದಿ ಸಂಸ್ಥಾನದ ಕೆಲವು ಅರಸರನ್ನುಳಿದರೆ ವೀರಶೈವರಿಗೆ ರಾಜಾಶ್ರಯವೇ ಇರಲಿಲ್ಲ. ಆದರೆ ಹೊಯ್ಸಳರ ಆಸ್ಥಾನದಲ್ಲಿ ಕೆರೆಯ ಪದ್ಮರಸ, ಹರೀಶ್ವರ, ಕುಮಾರ ಪದ್ಮರಸ ಮೊದಲಾದವರು ಉನ್ನತ ಸ್ಥಾನದಲ್ಲಿದ್ದುದು ಅಪವಾದವಾಗಿದೆ ಕೇವಲ ಆತ್ಮಸಂತೋಷದಿಂದಲೇ ವೀರಶೈವರು ಸಾಹಿತ್ಯ ನಿರ್ಮಾಣ ಕಾರ್ಯಕೈಕೊಂಡರು. ಸಮಾಜದ ಮೇಲೆ ಈ ಆಂದೋಲನವು ವ್ಯಾಪಕವಾದ ಪ್ರಭಾವವನ್ನು ಬೀರಿತು. ಮುಂದೆ ಕಾಣಿಸಿಕೊಂಡ ಎಲ್ಲ ರೀತಿಯ ಧರ್ಮಪಲ್ಲಟಗಳಿಗೆ ವೀರಶೈವ ಧರ್ಮವು ಪ್ರತಿಬಂಧಕೋಪಾಯವಾಯಿತು. ಕರ್ನಾಟಕ ರಾಜ್ಯದಲ್ಲಿ ಇಂದು ನೂರಕ್ಕೆ ಇಪ್ಪತ್ತೈದರಷ್ಟು ಜನ ವೀರಶೈವರಿದ್ದಾರೆ. ಉತ್ತರ ಕರ್ನಾಟಕದಲ್ಲಿ ಈ ಪ್ರಮಾಣವು ೩೫ ರಿಂದ ೪೦ರ ವರೆಗೆ ಏರುತ್ತದೆ. ಭಿನ್ನ ಧಾರ್ಮಿಕ ಪಂಗಡಗಳು ವೀರಶೈವರ ಆಚಾರ ವಿಚಾರಗಳ ಮೇಲೆ ಪ್ರಭಾವ ಬೀರಿವೆ. ಉತ್ತರಕರ್ನಾಟಕದಲ್ಲಿ ಇಸ್ಲಾಂ ಹಾಗೂ ಕ್ರಿಶ್ಚಿಯನ್ ಧರ್ಮಗಳ ಪ್ರಸಾರವನ್ನು ವೀರಶೈವ ಧರ್ಮವು ತಡೆಗಟ್ಟಿತು. ಒಂದು ವೇಳೆ ಹೀಗಾಗದೆ ಇದ್ದಿದ್ದರೆ ದಕ್ಷಿಣ ಭಾರತದ ಸಾಮಾಜಿಕ ಸ್ವರೂಪವೇ ಬೇರೆಯಾಗಬಹುದಿತ್ತು. ಕರ್ನಾಟಕದಲ್ಲಿ ವೀರಶೈವ, ಬ್ರಾಹ್ಮಣ ಹಾಗೂ ಜೈನರನ್ನೊಳಗೊಂಡ ನೂರಕ್ಕೆ ಐವತ್ತು ಜನ ಶಾಖಾಹಾರಿಗಳಾಗಿದ್ದಾರೆ. ಪಾನಪ್ರತಿಬಂಧವನ್ನು ಯಶಸ್ವಿಗೊಳಿಸಿದ ಈ ಧರ್ಮಗಳು ಪ್ರಶಂಸಾರ್ಹವಾಗಿವೆ. ಧಾರ್ಮಿಕ ಒತ್ತಾಯದಿಂದ ಮುಸಲ್ಮಾನರೂ

ಕೂಡ ಮಾದಕಪೇಯಗಳನ್ನು ಸೇವಿಸುವುದಿಲ್ಲ. ಹೀಗಾಗಿ ಪಾನಪ್ರತಿಬಂಧ ಸಮಸ್ಯೆ ಕರ್ನಾಟಕದಲ್ಲಿ, ಭಾರತದ ಬೇರಾವ ರಾಜ್ಯಕ್ಕಿಂತಲೂ ಹೆಚ್ಚು ಯಶಸ್ವಿಯಾಗಿ ಬಗೆಹರಿಯಿತು. ಅದಕ್ಕೆ ವೀರಶೈವರ ಕ್ರಾಂತಿ ಮುಖ್ಯ ಕಾರಣವೆನಿಸಿತು.

ಕರ್ನಾಟಕದ ಸಾಮಾಜಿಕ ಇತಿಹಾಸದಲ್ಲಿ ಮಠಗಳಿಗೆ ಒಂದು ವೈಶಿಷ್ಟ್ಯ ಪೂರ್ಣವಾದ ಸ್ಥಾನವಿದೆ. ಈ ಮಠಗಳು ಭಾರತದ ಇತರ ಪ್ರದೇಶಗಳಲ್ಲಿದ್ದ ಮಠಗಳಂತೆ ನೈತಿಕ ಹಾಗೂ ಧಾರ್ಮಿಕ ಸಂಪ್ರದಾಯವನ್ನು ಉಳಿಸುವ, ವಿದ್ಯಾಭ್ಯಾಸ ಮತ್ತು ಕಲಾಪ್ರೋತ್ಸಾಹದಂತಹ ಕಾರ್ಯ ಮಾಡುವುದರ ಜೊತೆಗೆ ಇಲ್ಲಿನ ಮಠಗಳು ಸಾಮಾನ್ಯ ಜನರಲ್ಲಿ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜಾಗ್ರತಿಯನ್ನುಂಟುಮಾಡಿದವು. ವೀರಶೈವ ಮಠಗಳ ಕಾರ್ಯಕ್ಷೇತ್ರ ಕೇವಲ ಕೆಲವು ವಿಶಿಷ್ಟಸ್ಥಳಗಳಿಗೆ ಪರಿಮಿತವಾಗಿರದೆ ದೇಶದ ಮೂಲೆ ಮೂಲೆಗಳನ್ನು ವ್ಯಾಪಿಸಿತು. ಮಠಗಳು ಪ್ರತಿಯೊಂದು ಹಳ್ಳಿಯ ಪುನರ್ ಜೀವನಕ್ಕೆ ಕಾರಣವಾದುವು. ಹರಿಜನೋದ್ಧಾರ ಕಾರ್ಯ ಬಹುಮಟ್ಟಿಗೆ ವೀರಶೈವರಿಂದಾಗಿದೆಯೆನ್ನಬಹುದು.

ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಲನವಲನಗಳ ಪರಿಜ್ಞಾನಕ್ಕೆ ಧಾರ್ಮಿಕ ಏರಿಳಿತಗಳ ಅಭ್ಯಾಸ ಅತ್ಯವಶ್ಯ. ಕರ್ನಾಟಕದ ವ್ಯಾಪಕವಾದ ಇತಿಹಾಸವನ್ನು ರಚಿಸಬೇಕಾದರೆ ಕಳೆದ ಒಂದೆರಡು ಶತಮಾನಗಳಿಂದ ಕನ್ನಡಿಗರಲ್ಲಿ ಉಂಟಾದ ನಿಷ್ಕ್ರಿಯತೆ ಹಾಗೂ ಅದರಿಂದುಂಟಾದ ಅನಾಹುತಗಳ ವಿಶೇಷವಾದ ಜ್ಞಾನವು ಇರಬೇಕಾಗುತ್ತದೆ. ಕರ್ನಾಟಕಕ್ಕೆ ಅನೇಕ ಶತಮಾನಗಳನ್ನು ವ್ಯಾಪಿಸಬಲ್ಲ ಉಜ್ವಲವಾದ ಇತಿಹಾಸವಿದೆ. ಚಾಳುಕ್ಯ ಹಾಗೂ ರಾಷ್ಟ್ರಕೂಟ ಅರಸರ ಕಾಲಕ್ಕೆ ಉತ್ತರ ಭಾರತವನ್ನು ಅಂಕಿತದಲ್ಲಿರಿಸಿಕೊಳ್ಳಬಲ್ಲ ಅಪೂರ್ವಶಕ್ತಿ ರಾಜ್ಯಸಂಘಟನೆ ಕನ್ನಡನಾಡಿನಲ್ಲಿತ್ತು. ಹದಿಮೂರನೆಯ ಶತಮಾನದ ಅನಂತರ ಕರ್ನಾಟಕವು ಮಹಮದೀಯರ ದಾಳಿಗಳ ಆಘಾತವನ್ನು ಸಹಿಸಬೇಕಾಯಿತು. ವಿಜಯನಗರ ಸಾಮ್ರಾಜ್ಯದ ಕಾಲವು ಉಜ್ವಲವಾದುದಾಗಿತ್ತು. ಆದರೆ ಅದಕ್ಕೆ ಎದುರಾಗಿ ಬಹುಮನೀ ರಾಜ್ಯವು ಉತ್ತರ ಕರ್ನಾಟಕವನ್ನು ಆಕ್ರಮಿಸಿತ್ತು. ಆದರೆ, ವಿಜಯನಗರ ಪತನದ ಅನಂತರ ಕರ್ನಾಟಕವು ರಾಜಕೀಯ ಅಸ್ತಿತ್ವವನ್ನೇ ಕಳೆದುಕೊಂಡಿತು. ಹದಿನೆಂಟನೆಯ ಶತಮಾನದಲ್ಲಿ ಬ್ರಿಟಿಷರು ದೇಶವನ್ನು ವಿಭಜಿಸಿ ಭಿನ್ನ ಭಿನ್ನ ಬಗೆಯ ಭಾಷೆ ಹಾಗೂ ಸಂಪ್ರದಾಯಗಳುಳ್ಳ ಪ್ರಾಂತಗಳಲ್ಲಿ ಹಂಚಿ, ರಾಜಕೀಯ ಸಂಘಟನೆಗೆ ಬಲವಾದ ಪೆಟ್ಟು ಕೊಟ್ಟರು. ಹೀಗಾಗಿ ಕರ್ನಾಟಕದ ಜನರು ತಮ್ಮ ವಿಶಿಷ್ಟವಾದ ಸಾಂಸ್ಕೃತಿಕ ಸಂಪ್ರದಾಯಗಳನ್ನು ಕೂಡ ಮರೆತುಬಿಡುವಂತಾಯಿತು.

ಕರ್ನಾಟಕದ ಇತಿಹಾಸರಚನೆಗೆ ಕೈಹಾಕಿದವರಲ್ಲಿ ಪಾಶ್ಚಾತ್ಯ ವಿದ್ವಾಂಸರೇ ಮೊದಲಿಗರು. ಜೆ. ಎಫ್. ಫ್ಲೀಟ್, ವೀಕ್, ಕಾಲ್ಡವೆಲ್, ಲೂಯಿಸ್ ರೈಸ್ ಮುಂತಾದವರಿಗೆ ಐತಿಹಾಸಿಕ ತತ್ತ್ವಗಳಲ್ಲಿದ್ದ ಅಚಲವಾದ ಶ್ರದ್ಧೆ, ಗೌರವಗಳು ಕಳೆದುಹೋದ ಕರ್ನಾಟಕದ ಇತಿಹಾಸದ ಹೊಸ ಅಧ್ಯಾಯಗಳನ್ನು ತೆರೆದುವು. ಭಾರತೀಯ ಇತಿಹಾಸಜ್ಞರು ಅವರ ಕಾರ್ಯವನ್ನು ಮುಂದುವರಿಸಿದರು. ಆದರೆ ಕರ್ನಾಟಕದ ಬೇರೆ ಬೇರೆ ಸಾಮ್ರಾಜ್ಯಗಳ ಐತಿಹಾಸಿಕ ಮೌಲ್ಯವೇನು ಎಂಬುದರ ಸ್ಪಷ್ಟವಾದ ಕಲ್ಪನೆ ಇನ್ನೂ ಉಂಟಾಗಿಲ್ಲ. ವಿಜಯನಗರ ಸಾಮ್ರಾಜ್ಯದ ನಿಚ್ಚಳವಾದ ಇತಿಹಾಸವನ್ನು ರಚಿಸುವ ವಿದ್ವಾಂಸರು ಇನ್ನೂ ಬರಬೇಕಾಗಿದೆ. ಮಲೆನಾಡು ಪ್ರದೇಶದಲ್ಲಿದ್ದ

ಕೆಳದಿ, ಕೊಡಗು, ಸ್ವಾದಿ, ಬಿಳಗಿ ಸಂಸ್ಥಾನಗಳು ತಮ್ಮ ರಾಜಕೀಯ ಉಚ್ಛ್ರಾಯ ಕಾಲದಲ್ಲಿ ಮಾಡಿದ ಕಾರ್ಯಗಳ ಮೌಲ್ಯಮಾಪನವನ್ನು ಪ್ರಾದೇಶಿಕ ಹಾಗೂ ಸಮಗ್ರ ಭಾರತದ ದೃಷ್ಟಿಯಿಂದ ಮಾಡಿನೋಡಬೇಕಾಗಿದೆ.

ಬೇರೆ ಬೇರೆ ಸಾಮ್ರಾಜ್ಯಗಳ ಇತಿಹಾಸದ ರಚನೆಯಾಗದೆ ಕರ್ನಾಟಕದ ವ್ಯಾಪಕವಾದ ಇತಿಹಾಸದ ಕಲ್ಪನೆಯನ್ನು ಮಾಡಿಕೊಳ್ಳುವುದು ಕೂಡ ಅಸಂಭವವಾಗಿದೆ. ಪೂರ್ವಭಾವಿಯಾಗಿ, ಚೆಲ್ಲಾಪಿಲ್ಲಿಯಾಗಿ ಹರಡಿರುವ ಐತಿಹಾಸಿಕ ಆಧಾರಗಳನ್ನು ಒಂದೆಡೆಗೆ ಕಲೆಹಾಕಬೇಕು. ಕೆಲವು ವ್ಯಕ್ತಿಗಳು ಸ್ವತಂತ್ರವಾಗಿ ಸಂಗ್ರಹಿಸಿದ ಆಧಾರಗಳನ್ನು ಕೂಡ ಇತಿಹಾಸಜ್ಞರು ನೋಡಬೇಕು. ಸಂಶೋಧನೆಯ ಕಾರ್ಯ ಅವಿರತವಾಗಿ ಸಾಗಬೇಕು.

ಜಿ. ಎಸ್. ಹಾಲಪ್ಪ

---

# ಆಂಧ್ರ ಭಾಗವತ ಕರ್ತನಾದ ಭಕ್ತ ಪೋತನ ಕವಿ

ಆಂಧ್ರದ ಸಾಹಿತ್ಯದಲ್ಲಿ ಪೋತನಕವಿ ರಚಿಸಿದ ಭಾಗವತಕ್ಕೆ ಒಳ್ಳೆಯ ಖ್ಯಾತಿಯಿದೆ. ರಾಮಾಯಣ ಭಾರತಗಳಿಗಿಂತಲೂ ಭಾಗವತವೇ ಹೆಚ್ಚು ವ್ಯಾಪ್ತಿಯನ್ನು ಹೊಂದಿದೆ. ಆಂಧ್ರದ ಹಳ್ಳಿಗಳಲ್ಲಿ ಮನೆಮನೆಯಲ್ಲಿಯೂ ಭಾಗವತವನ್ನು ಇಟ್ಟುಕೊಂಡಿರುವರು. ಇದಕ್ಕೆ ಕಾರಣವೆಂದರೆ ಇದರಲ್ಲಿರುವ ಮೂರು ಮುಖ್ಯ ಲಕ್ಷಣಗಳು. (೧) ಭಕ್ತಿ ಸಂಪದ (೨) ವೇದಾಂತ ವಿವರಣೆ (೩) ರಸವತ್ ಕವಿತೆ. ಈ ಮೂರು ಲಕ್ಷಣಗಳಲ್ಲಿ ಭಕ್ತಿ ಲಕ್ಷಣವೇ ಪೋತನ ಕವಿತ್ವಕ್ಕೆ ಜೀವಾಧಾರ. ಭಾಗವತದಲ್ಲಿರುವ ಪ್ರಹ್ಲಾದಚರಿತ್ರೆ, ಗಜೇಂದ್ರ ಮೋಕ್ಷ, ವಾಮನ ಚರಿತ್ರೆ ಮುಂತಾದ ಪರಿಚ್ಛೇದಗಳಲ್ಲಿ ಈ ಅಂಶಕ್ಕೆ ಪೋತನನು ಹೆಚ್ಚು ಗಮನ ಕೊಟ್ಟಿದ್ದಾನೆ. ಸಂಸ್ಕೃತ ಭಾಗವತದಲ್ಲಿ ಇಲ್ಲದೇ ಇರುವ ಸನ್ನಿವೇಶಗಳನ್ನೂ ವರ್ಣನೆಗಳನ್ನೂ ತೆಲುಗುಭಾಗವತದಲ್ಲಿ ಸೇರಿಸಿ ಮೂಲಗ್ರಂಥಕ್ಕಿಂತಲೂ ಹೆಚ್ಚು ಸಾಹಸ ಮಾಡಿದ್ದಾನೆ. ತತ್ವದ ವಿಷಯಗಳನ್ನೂ, ವೇದಾಂತ ಚರ್ಚೆಗಳನ್ನೂ ಸಾಮಾನ್ಯ ಜನರಿಗೆ ಅರ್ಥವಾಗುವ ರೀತಿಯಲ್ಲಿ ಚಿತ್ರಿಸಿದ್ದಾನೆ. ಇವನದು ಅದ್ವೈತಮತ.

ಪೋತನ, ಶ್ರೀನಾಥ–ಇವರು ಸಮಕಾಲೀನರು. ಕನ್ನಡಿಗರಿಗೆ ಇವರ ಪರಿಚಯವು ಚಲನಚಿತ್ರದ ಮೂಲಕ ಆಗಿದೆ. ಇವರಿಬ್ಬರಲ್ಲಿ ಪೋತನನು ಭಕ್ತಕವಿ. ಶ್ರೀನಾಥನು ಭೋಗಕವಿ. ಒಬ್ಬ ಕಾವ್ಯವನ್ನು ಬರೆದು ದೇವರಿಗೆ ಅರ್ಪಣೆ ಮಾಡಿದರೆ ಸಂಸಾರಬಂಧವು ವಿಚ್ಛೇದವಾಗಿ ಮೋಕ್ಷವು ದೊರಕುತ್ತದೆ ಎಂದು ಅಭಿಪ್ರಾಯ. ಇನ್ನೊಬ್ಬ ಕಾವ್ಯಗಳನ್ನು ಅರಸರಿಗೆ ಅಂಕಿತ್ಯ ಮಾಡಿದರೆ ಅವರು ಬೇಕಾದಷ್ಟು ಭೋಗ ಭಾಗ್ಯಗಳನ್ನು ಕೊಟ್ಟು ಸುಖಜೀವನಕ್ಕೆ ಮಾರ್ಗ ಮಾಡುತ್ತಾರೆ ಎಂದು ಅಭಿಪ್ರಾಯ. ಪೋತನ ಯೋಗಮಾರ್ಗವನ್ನನುಸರಿಸಿ ನೇಗಿಲನ್ನು ಹಿಡಿದು ಭೂಮಿಯನ್ನು ಉತ್ತು ಬಿತ್ತಿ ತನ್ನ ಜೀವನ ಮಾಡಿಕೊಳುತ್ತಾನೆ. ಶ್ರೀನಾಥನು ರಾಜಾಸ್ಥಾನಗಳಲ್ಲಿ ಸಂಚರಿಸಿ ಮೃಷ್ಟಾನ್ನವನ್ನುಂಡು ಹಂಸತೂಲಿಕಾತಲ್ಪಗಳಲ್ಲಿ ಶಯನಿಸಿ ರಸಿಕಜೀವನವನ್ನು ನಡೆಸುತ್ತಾನೆ. ರಾಜರಿಗೆ ಕಾವ್ಯವನ್ನು ಕೊಟ್ಟರೆ ಅದು ಕನ್ಯಾವಿಕ್ರಯ ಸಮಾನವೆಂದು ಪೋತನನು ಭಾವಿಸಿದರೆ, ಶ್ರೀನಾಥನು ಅವರಿಗೆ ಅರ್ಪಣ ಮಾಡದೆಯಿದ್ದರೆ ಕವಿಗೆ ತಕ್ಕ ಪ್ರಚಾರ, ವಿಖ್ಯಾತಿ ಆಗುವುದಿಲ್ಲ ಎನ್ನುವನು

ಪೋತನ ಯಾವ ದೇಶದವನೆಂದು ವಿಮರ್ಶಕರು ಹೋರಾಟ ನಡೆಸಿದ್ದಾರೆ. ಇವನ ಮನೆಯ ಹೆಸರು 'ಬಮ್ಮೆರ' ಎಂದೂ ಇವನ ನಿವಾಸ ಸ್ಥಾನವು ಈಗ ಹೈದರಾಬಾದ್ ಹತ್ತಿರವಲ್ಲಿರುವ ಏಕಶಿಲಾನಗರವೆಂದೂ ಕರೆಯುತ್ತಿರುವ ಓರುಂಗಲ್ ಎಂದೂ ಕೆಲವರ ಅಭಿಪ್ರಾಯ. ಇನ್ನು ಕೆಲವರು ರಾಯುಲ ಸೀಮೆಯ ಕಡಪಾ ಜಿಲ್ಲೆಯಲ್ಲಿರುವ ಏಕಶಿಲಾನಗರವೆ ನಾಮಾಂತರವನ್ನು ಹೊಂದಿರುವ ಒಂಟಿಮಿಟ್ಟ ಎನ್ನುತ್ತಾರೆ. ಹೇಗಾದರೂ ಇರಲಿ ಇವನ ಭಾಗವತವು ರಸಮಯವಾಗಿ ಜನಪ್ರಿಯವಾದ ಮೇಲೆ ನಮ್ಮವನೆಂದೂ ತಮ್ಮವ

ನೆಂದೂ ವಾದಹೂಡಿ ಹೋರಾಡುವುದು ಜನತೆಯ ಸ್ವಭಾವ.

ಪೋತನ ನಿಯೋಗಿ ಬ್ರಾಹ್ಮಣ. ೧೫ನೆಯ ಶತಮಾನದಲ್ಲಿದ್ದವನು. ಆಂಧ್ರ ಸಾಹಿತ್ಯದಲ್ಲಿ ಈ ಶತಕವನ್ನು ಪೋತನ–ಶ್ರೀನಾಥಯುಗವೆಂದು ಕರೆಯುತ್ತಾರೆ. ಪೋತನನು ಗುರುವಿನ ಹತ್ತಿರ ವ್ಯಾಸಂಗ ಮಾಡಲಿಲ್ಲ ಇವನದು ಸಹಜ ಪಾಂಡಿತ್ಯ. ಶ್ರೀರಾಮನಿಂದ ಇವನಿಗೆ ಪ್ರೇರಣೆಯಾಗಿ ಭಾಗವತವನ್ನು ಅನುವಾದಿಸಿದ್ದಾನೆ. ಅದಕ್ಕೆ ಇವನು ಗ್ರಂಥಾದಿಯಲ್ಲಿ ಈ ರೀತಿ ಬರೆದಿದ್ದಾನೆ:

ಕ|| ಪಲಿಕಿಡಿದಿ ಭಾಗವತಮುಟ
ಪಲಿಕಿಂಚೆಡಿವಾಟು ರಾಮುಭದ್ರುಂಡಟ ನೇ|
ಪಲಿಕಿನ ಭವಹರಗನುಗುನಟ
ಪಲಿಕೆದ ವೇರೆಂಡುಗಾಥ ಬಲುಕಗನೇಲಾ||

ಹೀಗೆ ತನಗೆ ಪ್ರೋತ್ಸಾಹವನ್ನು ಕೊಟ್ಟ ಶ್ರೀರಾಮನಿಗೆ ಈ ಗ್ರಂಥವನ್ನು ಅರ್ಪಣೆ ಮಾಡಿದ್ದಾನೆ.

ಶ್ರೀನಾಥನು ಪದೇ ಪದೇ ಬಂದು ಅವನು ನಡೆಸುತ್ತಿರುವ ರೈತಜೀವನವನ್ನು ನಿಂದಿಸಿ ರಾಜಾಸ್ಥಾನಕ್ಕೆ ಬಂದು ಸುಖಜೀವನ ಮಾಡಲು ಬರುವಂತೆ ಪೋತನನ್ನು ನಿರ್ಬಂಧಿಸುವನು. ಅವನನ್ನು ತೃಪ್ತಿಪಡಿಸಲು ಒಂದು ಸಲ ಸರ್ವಜ್ಞಸಿಂಗ ಮಹೀಪಾಲನ ಆಸ್ಥಾನಕ್ಕೆ ಹೋದಾಗ ಅವನು ಮದೋನ್ಮತ್ತನಾಗಿ ತನ್ನನ್ನು ನಾಯಕನನ್ನಾಗಿಯೂ, ತನ್ನ ವೇಶ್ಯೆಯನ್ನು ನಾಯಕಿಯನ್ನಾಗಿಯೂ ಮಾಡಿ ಒಂದು ಕಾವ್ಯವನ್ನು ಬರೆ ಎಂದು ಆಜ್ಞಾಪಿಸಿದನು. ಪೋತನನಿಗೆ ಕೋಪ ಬಂದರೂ ತನ್ನ ಭಾವಮೈದುನನಾದ ಶ್ರೀನಾಥನಿಗೆ ಅವಮಾನ ಮಾಡಕೂಡದೆಂದೆಣಿಸಿ ಅಲ್ಲಿಯೇ "ಬೋಗಿನೀ ದಂಡಕ" ಎಂಬ ಆಶುಕವಿತ್ವವನ್ನು ಹೇಳಿದನಂತೆ. ಆ ದಿವಸದಿಂದ ತಾನು ರಾಜಾಸ್ಥಾನಕ್ಕೆ ಬರುವುದಿಲ್ಲವೆಂದು ಪ್ರತಿಜ್ಞೆ ಮಾಡಿದನಂತೆ.

ಹಾಗಾದರೂ ಕೂಡ ಶ್ರೀನಾಥನು ಬಿಡಲಿಲ್ಲ. ಒಂದು ದಿವಸ ತಾನು ಪಲ್ಲಕ್ಕಿಯಲ್ಲಿ ಬರುತ್ತಾ ಇದ್ದಾಗ ಪೋತನನು ಕೆರೆಯ ಕಟ್ಟೆಯ ಮೇಲೆ ಕುಳಿತುಕೊಂಡು ತನ್ನ ಮಗನಿಂದ ಗದ್ದೆಯನ್ನು ಉಳಿಸುತ್ತಿದ್ದನು. ಶ್ರೀನಾಥನು ತನ್ನ ಪ್ರತಾಪವನ್ನು ತೋರಿಸುವುದಕ್ಕೆ ಪಲ್ಲಕ್ಕಿಯನ್ನು ಹೊತ್ತುಕೊಂಡು ಹೋಗುತ್ತಿದ್ದವರನ್ನು ಬಿಡಿಸಿದನಂತೆ. ಜನರಿಲ್ಲದ ಪಲ್ಲಕ್ಕಿ ಗಾಳಿಯಲ್ಲಿ ಹೋಗುತ್ತಿದ್ದಿತು. ಅದನ್ನು ನೋಡಿ ಪೋತನನ ಮಗ ಕವಿ ಪೋತನ್ನನಿಗೆ ಹೇಳಿದಾಗ ಅವನು ನೇಗಿಲಿಗೆ ಕಟ್ಟಿದ್ದ ಎತ್ತುಗಳನ್ನು ಬಿಡಿಸಿದನಂತೆ ಆದರೂ ಎತ್ತುಗಳಿಲ್ಲದ ನೇಗಿಲೇ ಉಳುತ್ತಾ ಇತ್ತು. ಅನಂತರ ಶ್ರೀನಾಥನು ಹತ್ತಿರಕ್ಕೆ ಬಂದು "ಹಾಲಕುಲಕು ಕುಶಲಮಾ?" (ನೇಗಿಲು ಹಿಡಿದವರಿಗೆ ಕ್ಷೇಮವೇ?) ಎಂದು ಕೇಳಿದನಂತೆ. ಅದಕ್ಕೆ ಪೋತನನು ಹೀಗೆ ಉತ್ತರ ಕೊಟ್ಟನು:

ಉತ್ಪ||ಬಾಲರಸಾಲ ಸಾಲನವಪಲ್ಲವ
ಕೋಮಲ ಕಾವ್ಯ ಕನ್ಯಕರ್
ಕೂಳಕಿಚ್ಚಿ ಅಪ್ಪಡುವು ಕೂಡು ಭುಜಿಂ
ಚುಟಕಂಟೆ ಸತ್ಕವುಲ್
ಹಾಳಿಕುಲೈನ ನೇಮಿ? ಗಹನಾಂತರ
ಸೀಮನು ಕಂದಮೂಲ ಕಾ
ದ್ದಾಳಿಕುಲೈನನೇಮಿ? ನಿಜದಾರಸು
ತೋದರ ಪೋಷಣಾರ್ಥಮೈ ||

[ಎಳೆಮಾವಿನ ಚಿಗುರಿನಂತೆ ಕೋಮಲಳಾದ ಕಾವ್ಯ ಕನ್ಯಕೆಯನ್ನು ಮೂರ್ಖರಾದ ಅರಸರಿಗೆ ಕೊಟ್ಟು ಅವರು ಕೊಡುವ ಶುಲ್ಕವನ್ನು ಸ್ವೀಕರಿಸಿ ಉಣ್ಣುವುದಕ್ಕಿಂತಲೂ ನೇಗಿಲು ಹಿಡಿದ

ರೇನು? ಅಲ್ಲದೆ! ಅರಣ್ಯದಲ್ಲಿದ್ದುಕೊಂಡು ಕಂದ ಮೂಲಗಳನ್ನು ತಿಂದು ಜೀವನ ಮಾಡಿಕೊಂಡು ತನ್ನ ದಾರಾಪುತ್ರರನ್ನು ಪೋಷಿಸುವುದು ಲೇಸಲ್ಲವೇ!]

ಆಮೇಲೆ ಮನೆಗೆ ಹೋದಾಗ ಶ್ರೀನಾಥನಿಗೂ ಅವನ ಪರಿವಾರಕ್ಕೂ ಆತಿಥ್ಯವನ್ನು ಕೊಡುವುದಕ್ಕೆ ಮನೆಯಲ್ಲಿ ಏನೂ ಇರಲಿಲ್ಲ. ಪೋತನನ ಮಗ ಮಲ್ಲನ್ನ ಹೋಗಿ ಊರಲ್ಲಿ ಸಾಲ ಕೇಳಿದರೂ ಸಿಕ್ಕಲಿಲ್ಲ. ಆಗ ಪುನಃ ಶ್ರೀನಾಥನು "ನೋಡಯ್ಯಾ! ನಿನ್ನ ಜೀವನ! ಎಂತಹ ಕಷ್ಟ ದೆಶೆಯಲ್ಲಿದೆ. ಈಗಲಾದರೂ ನನ್ನ ಮಾತನ್ನು ಕೇಳಿ ಬಾ! ಬೇಕಾದಷ್ಟು ಹಣ ಕೊಡಿಸುತ್ತೇನೆ" ಎಂದನು. ಈ ಸನ್ನಿವೇಶವನ್ನು ನೋಡಿ ಪೋತನನ ಎದುರಿನಲ್ಲಿ ಸರಸ್ವತಿ ಕಾಣಿಸಿಕೊಂಡು ಕಣ್ಣೀರಿಟ್ಟಳು. ಕೂಡಲೇ ಪೋತನನು ಹೀಗೆ ನುಡಿದನು :

"ಏಕಮ್ಮಾ ಅಳುತ್ತೀಯೇ! ನನ್ನ ಹೊಟ್ಟೆಗೋಸ್ಕರ ನಿನ್ನನ್ನು ಅಧಮರಾದ, ನೀಚರಾದ ಅರಸರಿಗೆ ಮಾರುವುದಿಲ್ಲ. ತ್ರಿಕರಣಶುದ್ಧಿಯಾಗಿ ಹೇಳುತ್ತಿದ್ದೇನೆ ನಂಬು" ಎಂದನು.

ಇದಾದ ಮೇಲೆ ಶ್ರೀನಾಥನನ್ನೂ ಅವನ ಪರಿವಾರದವರನ್ನೂ ನದಿಗೆ ಹೋಗಿ ಸ್ನಾನ ಮಾಡಿಕೊಂಡು ಬರಲು ಹೇಳಿದನು. ಇವನು ಹೇಗೆ ನಮಗೆ ಊಟ ಹಾಕುತ್ತಾನೋ ನೋಡೋಣ ಎಂದು ಎಲ್ಲರೂ ಹೋದರು. ಅವರು ಬಂದ ಕೂಡಲೇ ಎಲ್ಲರಿಗೂ ಮೃಷ್ಟಾನ್ನವನ್ನು ಸರಸ್ವತಿಯೇ ಒದಗಿಸಿ ಕೊಟ್ಟದ್ದನ್ನು ಪೋತನನ ಪತ್ನೀಪುತ್ರರು ಬಡಿಸಿದರು. ಎಲ್ಲರೂ ಸಂತೋಷದಿಂದ ಊಟ ಮಾಡಿದರು. ಪುನಃ ಶ್ರೀನಾಥನು ಪೋತನನ್ನು ರಾಜಾಸ್ಥಾನಕ್ಕೆ ಬರಲು ಒತ್ತಾಯ ಮಾಡಲಿಲ್ಲ.

ಪೋತನನು ತಾನು ರಚಿಸುತ್ತಿದ್ದ ಭಾಗವತದಿಂದ ಕೆಲವು ಘಟ್ಟಗಳನ್ನು ಶ್ರೀನಾಥನ ಮುಂದೆ ಓದಿದನು. ಗಜೇಂದ್ರ ಮೋಕ್ಷದಲ್ಲಿ ಒಂದು ಸನ್ನಿವೇಶ ಬಂದಿತು. ಗಜೇಂದ್ರನನ್ನು ಮೊಸಳೆ ಹಿಡಿದಿದೆ. ವಿಷ್ಣುಭಕ್ತನಾದ ಗಜೇಂದ್ರನು ವಿಷ್ಣುವಿನಲ್ಲಿ ಮೊರೆಯಿಡುತ್ತಾನೆ. ಆ ಸಂದರ್ಭದಲ್ಲಿ ಶ್ರೀ ಮಹಾವಿಷ್ಣುವು ವೈಕುಂಠವಲ್ಲಿ ಅರಮನೆಯ 'ಹತ್ತಿರ' ಮಂದಾರ ವನಾಂತರಾಮೃತ ಸರಃಪ್ರಾಂತೇಂದು ಕಾಂತೋಪಲಸ್ಥಿತ ಪರ್ಯಂಕ ರಮಾವಿನೋದಿಯಾಗಿದ್ದಾನೆ. ಭಕ್ತನಾದ ಗಜೇಂದ್ರನ ಬಹುಕಾಲದ ಆರ್ತನಾದವನ್ನು ಕೇಳಿದ ಕೂಡಲೆ ಶ್ರೀ ಮಾಯಾವಿಷ್ಣುವು ಯಾರಿಗೂ ಹೇಳದೆಯೇ ಶಂಖ ಚಕ್ರ ಗದಾದ್ಯಾಯುಧಗಳನ್ನು ಧರಿಸದೆಯೇ ಓಡಿಬಂದನೆಂದು ಪೋತನನು ಭಕ್ತ್ಯಾವೇಶದಿಂದ ಈ ಘಟ್ಟದಲ್ಲಿ ವರ್ಣಿಸಿದ್ದಾನೆ. ಇದನ್ನು ಶ್ರೀನಾಥನು ಆಕ್ಷೇಪಿಸಿ "ಏನಯ್ಯಾ! ಮಹಾವಿಷ್ಣುವು ಏತಕ್ಕೆ ಬಂದನು? ಗಜೇಂದ್ರ ಮಕರಗಳ ಹೋರಾಟದ ತಮಾಷೆಯನ್ನು ನೋಡುವುದಕ್ಕಾಗಿಯೆ? ಆಯುಧ ಸಾಮಗ್ರಿಗಳಿಲ್ಲದ ಗಜೇಂದ್ರನನ್ನು ಹೇಗೆ ರಕ್ಷಿಸಬಲ್ಲನು" ಎಂದನು. ಪೋತನನು ಕೂಡಲೇ ಪ್ರತ್ಯುತ್ತರವನ್ನು ಕೊಡಲಿಲ್ಲ. ಮಾರನೇ ದಿವಸ ತನ್ನ ಹೆಂಡತಿಗೆ ರಹಸ್ಯವಾಗಿ ಹೇಳಿ ಒಂದು ಸನ್ನಿವೇಶನನ್ನು ಕಲ್ಪಿಸಿದನು. ಅಂದು ಭಾವ ಮೈದುನಿಗೆ ಔತಣ. ಪೂರ್ವಭಾವಿಯಾಗಿ ಅಭ್ಯಂಗನಸ್ನಾನ ಆಗಬೇಕೆಂದು ಶ್ರೀನಾಥನ ತಲೆಗೆ ತಾನೇ ಎಣ್ಣೆ ಹಚ್ಚುತ್ತಿದ್ದನು. ಪೋತನನ ಮನೆಯ ಹಿಂಭಾಗದಲ್ಲಿದ್ದ ಬಾವಿಯೊಳಗೆ ಯಾರೋ ಬಿದ್ದ ಹಾಗೆ ಶಬ್ದ ಕೇಳಿಸಿತು. ಪೋತನನ ಹೆಂಡತಿ ಓಡಿಬಂದು "ಅಣ್ಣಾ!

ನಿನ್ನ ಮಗ ಬಾವಿಯೊಳಗೆ ಬಿದ್ದಿದ್ದಾನೆ'' ಎಂದು ಗಾಬರಿಯನ್ನು ನಟಿಸಿ ಹೇಳಿದಳು. ಕೂಡಲೇ ಶ್ರೀನಾಥನು ಪೋತನನ ಕೈ ಬಿಡಿಸಿಕೊಂಡು ಎಣ್ಣೆ ಹಚ್ಚಿಸಿಕೊಂಡಿದ್ದ ಮೈಯಲ್ಲೇ ಓಡಿಹೋಗಿ ಬಾವಿ ಸುತ್ತಲೂ ತಿರುಗುತ್ತಾ ಬಗ್ಗಿ ಬಗ್ಗಿ ನೋಡಿದನು. ಪೋತನನು ಅವನನ್ನು ಮೂದಲಿಸಿ ''ಏನಯ್ಯಾ! ಏತಕ್ಕೆ ಬಂದಿದ್ದೀಯಾ? ಮಗನು ಬಾವಿಯೊಳಗೆ ಹೇಗೆ ಬಿದ್ದಿದ್ದಾನೋ ಎಂದು ತಮಾಷೆ ನೋಡಲು ಬಂದಿದ್ದೀಯಾ? ಹಗ್ಗ ಎಲ್ಲಿ? ಇಳಿಯೋರಾರು?" ಎಂದು ಕೇಳಿದನು. ಸೂಕ್ಷ್ಮಗ್ರಾಹಿಯಾದ ಶ್ರೀನಾಥನು ಕೂಡಲೇ ಆದರ ಅರ್ಥವನ್ನು ಗ್ರಹಿಸಿ ಪೋತನನ ಕಾಲಿಗೆ ಬಿದ್ದು ''ನೀನು ಮನಶ್ಶಾಸ್ತ್ರ ಪಂಡಿತ ಶ್ರೇಷ್ಠ" ಎಂದನು. ತಂದೆ ತಾಯಿಗಳಿಗೆ ಮಕ್ಕಳ ಮೇಲೆ ಎಷ್ಟು ಪ್ರೀತಿ ವಾತ್ಸಲ್ಯಗಳಿರುತ್ತವೋ ಹಾಗೆಯೇ ದೇವರಿಗೆ ಭಕ್ತರ ಮೇಲೆಯೂ ಇರುತ್ತದೆ. (ಮನೆಗಳಿಗೆ ಬೆಂಕಿಬಿದ್ದರೆ ಜನರು ಓಡಿ ಹೋಗುತ್ತಾರೆಯೇ ಹೊರತು ಹೋಗುವವರು ನೀರಿನ ಕೊಡಗಳನ್ನು ತೆಗೆದುಕೊಂಡು ಹೋಗುವುದಿಲ್ಲ.) ಆದರಂತೆಯೇ ಭಕ್ತಪರಾಧೀನನಾದ ಆತನೂ ಕೂಡ ಎಂದನು.

ಪೋತನನು ತನ್ನ ಭಾಗವತವನ್ನು ಯಾವ ಅಡ್ಡಿಯೂ ಇಲ್ಲದೆ ಪೂರೈಸಿದನು. ಚಲನಚಿತ್ರದ ಕಥೆಯಲ್ಲಿ ಅರಸನಾದ ಸರ್ವಜ್ಞಸಿಂಗ ಮಹೀಪತಿ ಭಾಗವತವನ್ನು ಅರ್ಪಣ ಮಾಡಬೇಕೆಂದು ಬಲವಂತ ಮಾಡಿದನೆಂದೂ ಅವನಿಗೆ ತಕ್ಕ ಪ್ರಾಯಶ್ಚಿತ್ತವಾಯಿತೆಂದೂ ತೋರಿಸಲಾಗಿದೆ. ಇದಕ್ಕೆ ತಕ್ಕ ಆಧಾರಗಳಿಲ್ಲ. ಕಥೆ ಮನೋರಂಜಕವಾಗಿರಬೇಕೆಂದು ಚಲನಚಿತ್ರಕಾರರು ತಕ್ಕ ಮಾರ್ಪಾಡುಗಳನ್ನು ಮಾಡಿಕೊಂಡಿದ್ದೇವೆಂದು ತಾವೇ ಹೇಳಿಕೊಂಡಿದ್ದಾರೆ. ಪೋತನನು ತನ್ನ ಭಾಗವತವನ್ನು ಪೂರ್ತಿಮಾಡಿ ಒಂದು ಪೆಟ್ಟಿಗೆಯಲ್ಲಿಟ್ಟು ರಾಮಾಂಕಿತ ಮಾಡಿ ಪ್ರತಿದಿನವೂ ಪೂಜೆ ಮಾಡುತ್ತಿದ್ದನು ಅವನು ವಿಧಿವಶನಾದಮೇಲೆ ಅವನ ಮಗ ಮಲ್ಲನ್ನನು ಅಷ್ಟು ವಿದ್ಯಾವಂತನಲ್ಲದುದರಿಂದ ಆ ಪೆಟ್ಟಿಗೆಯನ್ನು ತೆಗೆದು ನೋಡಲೇ ಇಲ್ಲ. ಪೋತನನ ಶಿಷ್ಯಂದಿರಾದ ಏರ್ಚೂರಿಸಿಂಗನ, ವೆಲಿಗಿಂದಲ ನಾರಯ ಎಂಬುವರು ಬಂದು ತೆಗೆದು ನೋಡಿದಾಗ ಗ್ರಂಥದಲ್ಲಿ ಕೆಲವು ಭಾಗಗಳು ಗೆದ್ದಲು ಹಿಡಿದು ನಾಶವಾಗಿ ಹೋಗಿದ್ದುವು. ಆ ಭಾಗಗಳನ್ನು ಅವರಿಬ್ಬರೂ ಪೋತನನ ಶೈಲಿಯನ್ನೇ ಆಶ್ರಯಿಸಿ ಬರೆದು ಪೂರೈಸಿದರು.

ಪೋತನನ ಭಾಗವತವು ದ್ವಾದಶ ಸ್ಕಂಧಗಳಿಂದ ಕೂಡಿದ ಗ್ರಂಥ. ಇದರಲ್ಲಿ ವಾಮನ ಚರಿತ್ರೆ, ಶ್ರಿಕೃಷ್ಣನ ಬಾಲ ಕ್ರೀಡೆಗಳು, ರುಕ್ಮಿಣೀ ಕಲ್ಯಾಣ, ಪ್ರಹ್ಲಾದ ಚರಿತ್ರೆ, ಗಜೇಂದ್ರಮೋಕ್ಷ ಮುಂತಾದುವು ರಸವತ್ತಾದ ಭಾಗಗಳು.

ವಾಮನ ಚರಿತ್ರೆಯಲ್ಲಿ ಪೋತನನು ರಾಕ್ಷಸ ಚಕ್ರವರ್ತಿಯಾದ ಬಲಿಯನ್ನು ಮಹೋನ್ನತ ಗುಣಗಳಿಂದ ಕೂಡಿದ ಧೀರೋದಾತ್ತ ನಾಯಕನಾಗಿಯೂ ಸತ್ಯಸಂಧನಾಗಿಯೂ ಆಡಿದ ಮಾತನ್ನು ನಡೆಸುವುದಕ್ಕೆ ತನ್ನ ಮಾನ, ಪ್ರಾಣ, ರಾಜ್ಯ, ಸಂಪದಗಳನ್ನು ಕೂಡಾ ಲೆಕ್ಕಿಸದಂತಹ ಉತ್ತಮ ನಾಯಕನನ್ನಾಗಿಯೂ ಚಿತ್ರಿಸಿದ್ದಾನೆ. ಬಲಿಚಕ್ರವರ್ತಿಯ ಗುರುವೂ ಪುರೋಹಿತನೂ ಆದ ಶುಕ್ರಾಚಾರ್ಯನು ವಾಮನಮೂರ್ತಿಗೆ ಕೊಟ್ಟ ಮೂರಡಿಗಳ ದಾನವನ್ನು ಹಿಂತೆಗೆದುಕೊಳ್ಳಬೇಕೆಂದು ಬೇಕಾದಷ್ಟುಶಾಸ್ತ್ರೀಯ ಪ್ರಮಾಣಗಳನ್ನುಕೊಟ್ಟು ಬೋಧಿಸುವನು. ಕಡೆಗೆ ಮಹಾವಿಷ್ಣುವೇ ಹೀಗೆ ವಾಮನಾವತಾರದಿಂದ ಬಂದು ನಿನ್ನನ್ನು ನಾಶ ಮಾಡುತ್ತಿದ್ದಾನೆ ಎನ್ನುವನು. ಸರ್ವಸ್ವವೂ ನಾಶವಾಗುವ ಸಂದರ್ಭದಲ್ಲಿ ಬೇಕಾದರೆ ಸುಳ್ಳು ಹೇಳ

ಬಹುದೆಂದು ವೇದಪ್ರಮಾಣವನ್ನು ಕೂಡ ತೋರಿಸುವನು, ನೋಡಿ:

> ವಾರಿಜಾಕ್ಷಲಂದು ವೈವಾಹಿಕಮುಂದು
> ಪ್ರಾಣವಿತ್ತ ಮಾನ ಭಂಗಮುಂದು ಚಕಿತ
> ಗೋಕುಲಾಗ್ರಜನ್ಮ ರಕ್ಷಣಮುಂದು ಬೊಂಕ
> ವಚ್ಚುನಘಮು ಬೊಂದ ದಧಪಾ!

(ಸ್ತ್ರೀಯರ ವಿಷಯದಲ್ಲಿ, ಮದುವೆಗಳ ಸಂದರ್ಭಗಳಲ್ಲೂ, ಪ್ರಾಣ ಮಾನ ಭಂಗವಾಗುವ ಸಮಯದಲ್ಲೂ ಗೋರಕ್ಷಣೆಯಲ್ಲೂ ಸುಳ್ಳು ಹೇಳಿದರೂ ಪಾಪವಿಲ್ಲ) ಆದರೆ ಬಲಿಚಕ್ರವರ್ತಿಯು ಒಪ್ಪಲಿಲ್ಲ. ಅವನದು ಒಂದೇ ಮಾತು, "ತಿರುಗನ್ನೇರದು ನಾದು ಜಿವ್ವ ವಿನುಮಾ ಧೀವರ್ಯ ವೇಮೇಟಿಕ್"ಎನ್ನುವನು. ತನಗೆ ನರಕವು ಬಂದರೂ ಬಂಧವನೇ ಆದರೂ ಭೂವ್ಯಾಕಾಶಗಳು ತಲೆಕೆಳಗಾದರೂ, ಹರಿ ಹರರೇ ಅಭ್ಯಾಗತರಾಗಿ ಬಂದು ಕೇಳಿಕೊಂಡರೂ ತನ್ನ ನಾಲಗೆ ಹಿಂದಿರುಗುವುದಿಲ್ಲ ಎಂದನು. ಮತ್ತೆ ಹೀಗೆ ಹೇಳಿದನು:

> ಮು|| ಕಾರೇರಾಜಲು, ರಾಜ್ಯಮುಲ್
> ಗಲುಗವೇ, ಗರ್ವೋನ್ನತಿಂಜೆಂದರೇ,
> ವಾರೇರಿ! ಸಿರಿಮೂಟಗಟ್ಟುಕೊನಿ
> ಪೋವನ್ ಜಾಲಿರೇ
> ವೇ ರೈನನ್‌ಗಲದೇ! ಶಿಬಿಪ್ರಮುಖುಲುನ್
> ಪ್ರೀರ್ತಿ ಯಶಃಕಾಮುವೈ
> ಈರೇ ಕೊರ್ಕುಲು, ವಾರಲನ್
> ಮಂಚಿರೇ ಇಕ್ಕಾಲಮುನ್ ಭಾರ್ಗವಾ!

(ಎಷ್ಟು ಜನ ಅರಸರಾಗಿಲ್ಲ, ರಾಜ್ಯಗಳಾಳಿಲ್ಲ, ಗರ್ವೋನ್ನತಿಯನ್ನು ಹೊಂದಿದ್ದ ಅವರೆಲ್ಲರೂ ಈಗ ಎಲ್ಲಿದ್ದಾರೆ? ತಮ್ಮ ಸಂಪದಗಳನ್ನು ಮೂಟೆ ಕಟ್ಟಿಕೊಂಡು ತಮ್ಮೊಡನೆ ತೆಗೆದುಕೊಂಡು ಹೋದರೆ? ಆದರೆ ಯಶವನ್ನೇ ಕೋರಿ ಮಾಡಿದ ತ್ಯಾಗಗಳಿಂದ ಶಿಬಿ ಚಕ್ರವರ್ತಿ ಮುಂತಾದವರನ್ನು ಈಗಲೂ ಜನರು ಹೊಗಳುತ್ತಿಲ್ಲವೇ? ಅವರನ್ನು ಜನ ಮರೆತು ಹೋದರೇ?)

ಶ್ರೀಕೃಷ್ಣನ ಬಾಲ ಕ್ರೀಡೆಗಳನ್ನು ವರ್ಣಿಸುವ ಸಂದರ್ಭದಲ್ಲಿ ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾನೆ. ಬಾಲಕೃಷ್ಣನ ಚೇಷ್ಟೆಗಳನ್ನು ತಡೆಯಲಾರದೆ ಗೋಪಿಕೆಯರು ಬಂದು ಯಶೋದಮ್ಮನ ಹತ್ತಿರ ಹೀಗೆ ಹೇಳುವರು:

> "ಕಂ|| ಓಯಮ್ಮ ನೀ ಕುಮಾರುಡು
> ಮಾಹಿಂಡ್ಲಲ ಪಾಲು ಪೆರುಗು ಮನನೀಡಮ್ಮಾ!
> ಪೋಯೆದಮೆಕ್ಕಡಿಕೈನನು
> ಮಾಯನ್ನಲಸುಲಭುಲಾನ ಮಂಜುಲವಾಣೀ!"

ಹುಡುಗರು ಬಂದು 'ನಿಮ್ಮ ಮಗ ಮಣ್ಣು ತಿಂದಿದ್ದಾನೆ' ಎಂದು ಹೇಳಿವಾಗ ಬಾಲಕೃಷ್ಣನು: "ಅಮ್ಮಾ ಮನ್ನುದಿನಂಗ ನೇ ಶಿಶುವುನೋ ಆಕೊಂಟನೋ ವೆರ್ರಿನೋ? ನಮ್ಮಂಜಾಡಕು ವೀರಿ ಮಾಟಲು" ಎಂದು ಹೇಳಿ ತನ್ನ ಬಾಯಿಯನ್ನು ಬಿಚ್ಚಿ ತೋರಿಸಿದನು. ಆಗ ಅವನ ಬಾಯಿಯೊಳಗೆ ಯಶೋದಳಿಗೆ ವಿಶ್ವರೂಪವು ಕಾಣಿಸಿತು. ಇಷ್ಟೊಂದು ಚಿಕ್ಕಹುಡುಗನ ಹತ್ತಿರ ಇಂತಹ ಮಾಹಾತ್ಮ್ಯವು ಉಂಟೆ? ಎಂದು ಆಶ್ಚರ್ಯಪಟ್ಟು ತನ್ನನ್ನು ತಾನೇ ನಂಬದೇ ಹೀಗೆಂದಳು: "ಕಲಯೋ! ವೈಷ್ಣವ ಮಾಯೆಯೋ! ಇತರ ಸಂಕಲ್ಪಾರ್ಥಮೋ! ಸತ್ಯಮೋ! ತಲಪನ್ನೇರಕಯುನ್ನದಾನನೂ ಯಶೋದಾದೇವಿಗಾನೋ ಪರಸ್ಥಲಮೋ ಬಾಲಕುಡೆಂತ! ಈತನಿ ಮುಖ್ಯಸ್ಥಂಬೈ ಅಜಾಂಡಂಬುಂಡುಟಕೇಮಿ ಹೇತುವೋ ಮಹಾಶ್ಚರ್ಯಂಬು ಚಿಂತಿಂಪಗಾ||

ಹೀಗೆಯೇ ಪ್ರಹ್ಲಾದನನ್ನು ಉತ್ತಮ ಭಕ್ತನನ್ನಾಗಿ ಚಿತ್ರಿಸಿ ಈ ಪಾತ್ರಗಳನ್ನು ಆದರ್ಶಪ್ರಾಯವಾಗಿ ಮಾಡಿದ್ದಾನೆ. ಸಂತಕವಿ ಪೋತನ.

ಪೋತನ ಸರಳಜೀವಿ, ಮಹಾತಪಸ್ವಿ, ಯಾವಾಗಲೂ ಭಗವಂತನ ಪಾದಸೇವೆಯನ್ನು ಬಯಸಿದವನು. ತನ್ನ ಬಯಕೆಯನ್ನು ಈ ರೀತಿ ಹೇಳುತ್ತಾನೆ :

ಕಂ|| ನೀಪಾದ ಕಮಲ ಸೇವೆಯು
ನೀಪಾದಾರ್ಚ ಕುಲತೋಡಿ ನೆಯ್ಯಮು ನಿತಾಂ
ತಾಪಾರ ಭೂತದಯಯುನು
ತಾಪಸಮಂದಾರ ನಾಕು ದಯಸೇಯಗದೇ !

ಈ ಎರಡು ಮಾತಿನಲ್ಲಿ ಭಗವಂತನ ಚರಣ ಕಮಲ ಸೇವೆಯನ್ನೂ ಆತನ ಭಕ್ತರ ಸ್ನೇಹವನ್ನೂ ನಿರಂತರವಾದ ಭೂತದಯೆಯನ್ನೂ ಸದಾ ನನಗೆ ದಯಪಾಲಿಸು ಓ ಭಗವಂತನೇ! ಎಂದು ತನ್ನ ಸಂಕಲ್ಪವನ್ನು ಈಡೇರಿಸಿಕೊಂಡು ವಿಶ್ವ ಶ್ರೇಯಸ್ಸಿಗಾಗಿ ಅಮರ ಕಾವ್ಯವನ್ನು ರಚಿಸಿ ನಿರ್ಮಲ ಯಶಸ್ಸನ್ನು ಹೊಂದಿ ಮೋಕ್ಷಮಾರ್ಗವನ್ನು ಹಿಡಿದನು.

ಕೆ. ಸುಬ್ಬರಾಮಪ್ಪ

# ನೂರೊಂದು ವಿರಕ್ತರು

ನೂರೊಂದು ವಿರಕ್ತರು ಎಂಬ ಪದ ಪ್ರಯೋಗವು ನಮಗೆ ತಿಳಿದ ಮಟ್ಟಿಗೆ ದೊರೆಯುವುದು ಮೂರು ಗ್ರಂಥಗಳಲ್ಲಿ :

| ಕಾವ್ಯ | ಕವಿ | ಕಾಲ |
|---|---|---|
| ೧. ಪ್ರೌಢರಾಯನ ಕಾವ್ಯ 1 | ಅದೃಶ್ಯಕವಿ | ಕ್ರಿ.ಶ. ೧೫೮೦ |
| ೨. ಚೆನ್ನಬಸವ ಪುರಾಣ 2 | ವಿರೂಪಾಕ್ಷ ಪಂಡಿತ | ಕ್ರಿ.ಶ. ೧೫೮೪ |
| ೩. ನೂರೊಂದು ವಿರಕ್ತರ ಕಾವ್ಯ 3 | ಮೋದಿಯ ರುದ್ರ | ಕ್ರಿ.ಶ. ೧೭೩೬ |

ಈ ಮೂರು ಗ್ರಂಥಗಳಲ್ಲಿಯೂ ನೂರೊಂದು ವಿರಕ್ತರ ಹೆಸರುಗಳ ಬಗೆಗೆ ಐಕಮತ್ಯವಿಲ್ಲ. ಪ್ರೌಢರಾಯನ ಕಾವ್ಯದಲ್ಲಿ ನಾಲ್ಕು ಹೆಸರುಗಳು ಸಿಕ್ಕರೆ ಚೆನ್ನಬಸವ ಪುರಾಣದಲ್ಲಿ ಹದಿಮೂರು ಹೆಸರುಗಳು ಕಂಡುಬರುತ್ತವೆ. ಮೂರನೆಯ ಗ್ರಂಥದಲ್ಲಿ ಮಾತ್ರ ೧೦೧ ವಿರಕ್ತರ ಹೆಸರುಗಳೂ ಅವರ ಪವಾಡಗಳೂ ಸ್ಪಷ್ಟವಾಗಿ ಉಲ್ಲಿಖಿತ ವಾಗಿವೆ. ಈ ಮೂರೂ ಗ್ರಂಥಗಳಲ್ಲಿ ಬಂದಿರುವ ಹೆಸರುಗಳಲ್ಲಿರುವ ಭಿನ್ನತೆಯನ್ನು ಕುರಿತು ಇಲ್ಲಿ ವಿವೇಚಿಸುವುದು ಸೂಕ್ತವೆನಿಸಿದೆ.

**ಪ್ರೌಢರಾಯನ ಕಾವ್ಯದಲ್ಲಿ :**

ಹರರೂಪವಾದ ನೂರೊಂದು ಸುವಿರಕ್ತರುರೆ
ಕರಸ್ಥಲದ ನಾಗಿದೇವನು ಕಲ್ಲುಮಠದ ಪ್ರಭು
ವರನು ವೀರಣ್ಣೊಡೆಯರುಂ ಚಾಮರಸಾದಿ
ಶಿವಭಕ್ತ ತತಿಯು ನೆರೆದು
—೧-೪೨

ಪ್ರೊ. ಎಸ್. ಎಸ್. ಭೂಸನೂರಮಠ, ಎಂ.ಎ. ಅವರು 'ಲಿಂಗಲೀಲಾವಿಲಾಸ ಚಾರಿತ್ರ'ದ ಪ್ರಸ್ತಾವನೆಯಲ್ಲಿ ಈ ಪದ್ಯವನ್ನು ಉದ್ಧರಿಸಿ, ಕಲ್ಲುಮಠದ ಪ್ರಭುದೇವರು, ಚಾಮರಸ ಮೊದಲಾದವರು ನೂರೊಂದು ವಿರಕ್ತರಲ್ಲಿ ಪರಿಗಣಿತ ರಾದವರೆಂದು ಅರ್ಥಯಿಸಿದ್ದಾರೆ. ಆದರೆ, ಈ ಪದ್ಯವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಚಾಮರಸಾದಿ ಭಕ್ತರನ್ನು ನೂರೊಂದು ವಿರಕ್ತರ ಗುಂಪಿನಿಂದ ಬೇರೆ ಮಾಡಬೇಕಾಗುತ್ತದೆ. "ಕರಸ್ಥಲದ ನಾಗೀದೇವನು, ಕಲ್ಲುಮಠದ ಪ್ರಭುವರನು, ವೀರಣ್ಣೊಡೆಯರುಂ" ಎಂಬಲ್ಲಿರುವ ಸಮುಚ್ಚಯ ಸೂಚಕವಾದ 'ಉಂ' ವಿಧಿಯು ಅರ್ಥಪೂರ್ಣ ವಾಗಿದೆ ಎಂದು ತಿಳಿಯುವುದು. ಆದರಿಂದ ಇಕ್ಕಡಿಯಾಗಿ ವಿಂಗಡಿಸಬೇಕಾಗುವುದು. ಎಂದರೆ 'ಉಂ' ಎಂಬ ವಿಧಿಯಿಂದ ಮುಗಿಯುವ ಸಮುಚ್ಚಯದ ಮೂವರನ್ನು (ನಾಗಿದೇವ–ಪ್ರಭುವರ–ವೀರಣ್ಣೊಡೆಯರನ್ನು) ನೂರೊಂದು ವಿರಕ್ತ

1. ಪ್ರೌ. ಕಾ. ೧-೪೨.
2. ಲಿಂ. ಲೀ. ವಿ. ಚಾ. ಉಪೋದ್ಘಾತ.

ರೆಂದೂ ಚಾಮರಸಾದಿಗಳನ್ನು 'ಶಿವಭಕ್ತತತಿ' ಯೆಂದೂ ಅರ್ಥಮಾಡಬೇಕಾಗುತ್ತದೆ. ಎಂದರೆ ನೂರೊಂದು ವಿರಕ್ತರೂ ಜಂಗಮಸ್ಥಲದಲ್ಲಿ ನಿಂತವರೆಂದೂ ಚಾಮರಸಾದಿಗಳು ಭಕ್ತವರೇಣ್ಯ ರೆಂದೂ ವೇದ್ಯವಾಗುತ್ತದೆ. ಆದುದರಿಂದ ಅದೃಶ್ಯ ಕವಿಯ ಅಭಿಪ್ರಾಯದಂತೆ ಕರಸ್ಥಲದ ನಾಗಿ ದೇವ, ವೀರಣ್ಣೊಡೆಯ, ಕಲ್ಲುಮಠದ ಪ್ರಭುದೇವ ಇವರು ನೂರೊಂದು ವಿರಕ್ತರ ಪಙ್ತಿಯಲ್ಲಿ ಸಮಾ ವಿಷ್ಟರಾಗುತ್ತಾರಲ್ಲದೆ ಚಾಮರಸ ಮೊದಲಾ ದವರು ಅದರಲ್ಲಿ ಬರುವುದಿಲ್ಲ ; ಅವರು ಭಕ್ತರು.

ಚೆನ್ನಬಸವ ಪುರಾಣದಲ್ಲಿ :

ಕೆಳಗಣ ಹೆಸರುಗಳು ಈ ಕಾವ್ಯದಲ್ಲಿ ಉದ್ಧೃತವಾಗಿವೆ [1]:

೧. ಕರಸ್ಥಲದ ವೀರಣ್ಣೊಡೆಯ
೨. ಅಕ್ಕಸಾಲೆಯ ನಾಗ (ಕರಸ್ಥಲದ ನಾಗಿದೇವ)
೩. ಹೊನ್ನಯ್ಯ
೪. ಮಿಡಿಬಿಲ್ಲ ಶಾಂತದೇವ
5. ಹೇಟಿಯ ಮರುಳ
೬. ತಗರಕಾಳೆಗದ ಪ್ರಭು
೭. ಬಾಲಲಿಂಗಣ್ಣ
೮. ಬತ್ತಲೇಶ್ವರ
೯. ಗುರುಬಸವ
೧೦. ನಿರ್ವಾಣಿ ಬೋಳೇಶ
೧೧. ಪರಪಟ್ಟೆ

ಪ್ರೌಢರಾಯನ ಕಾವ್ಯದಲ್ಲಿ ನೂರೊಂದು ವಿರಕ್ತರೊಳಗೆ ಎಣಿಸಲಾದ ಕಲ್ಲುಮಠದ ಪ್ರಭು ದೇವರ ಹೆಸರು, ಚೆನ್ನಬಸವ ಪುರಾಣದಲ್ಲಿಯ ನಾಮಾವಳಿಯಲ್ಲಿ ಕಂಡುಬರುವುದಿಲ್ಲ. 'ನೂರೊಂದು ವಿರಕ್ತರ ಕಾವ್ಯ'ದಲ್ಲಿಯೂ ಈತ ನನ್ನು ವಿರಕ್ತರಲ್ಲಿ ಒಬ್ಬನೆಂದು ಎಣಿಕೆಗೆ ತೆಗೆದು ಕೊಂಡಿಲ್ಲ. ಅದು ಕಾರಣವಾಗಿ, ಕಲ್ಲುಮಠದ ಪ್ರಭುದೇವರನ್ನು ನೂರೊಂದು ವಿರಕ್ತರ ಮಾಲಿಕೆ ಯಲ್ಲಿ ಪರಿಗಣಿಸಲಾಗದು. ಅಂತೂ ಈ ವಿವೇ ಚನೆಯ ಮಥಿತಾರ್ಥವೆಂದರೆ ಚಾಮರಸನೂ ಕಲ್ಲುಮಠದ ಪ್ರಭುದೇವನೂ ನೂರೊಂದು ವಿರಕ್ತ ರಲ್ಲಿ ಸಮಾವಿಷ್ಟರಾಗಿದ್ದಿಲ್ಲವೆಂಬುದು.

ಇನ್ನು ಕರಸ್ಥಲದ ವೀರಣ್ಣೊಡೆಯರ ವಿಚಾರ. ಮೇಲೆ ನಿರ್ದೇಶಿಸಿದ ಮೂರು ಕಾವ್ಯ ಗಳಲ್ಲಿಯೂ ಇವರ ಹೆಸರು ವಿರಕ್ತರೊಳಗೆ ಕಂಡು ಬರುತ್ತದೆ. ಇಷ್ಟೇ ಅಲ್ಲ, 'ಚೆನ್ನಬಸವಪುರಾಣ' ಮತ್ತು 'ನೂರೊಂದು ವಿರಕ್ತರ ಕಾವ್ಯ'ಗಳಲ್ಲಿ ವೀರಣ್ಣೊಡೆಯರದೇ ಮುಖ್ಯ ಪಾತ್ರ. ಇವರು ಕರಸ್ಥಲದ ನಾಗಿದೇವನ ಗುರುಗಳು. ಹೀಗಿ ದ್ದರೂ ಇವರನ್ನು ನೂರೊಂದು ವಿರಕ್ತರೊಳಗೆ ಸೇರಿಸಬಹುದೇ ಎಂಬ ಸಂದೇಹ ತಲೆದೋರು ತ್ತದೆ. ಅದಕ್ಕೆ ಕಾರಣ 'ನೂರೊಂದು ವಿರಕ್ತರ ಕಾವ್ಯ' ಮತ್ತು 'ಚೆನ್ನಬಸವಪುರಾಣ'ಗಳಲ್ಲಿ ದೊರೆಯುವ ಒಂದೆರಡು ಪದ್ಯಗಳ ಆಧಾರ.

ಚೆನ್ನಬಸವ ಪುರಾಣದಲ್ಲಿ

...........ಅತಿಮರುಳರಂದದೊಳಿಪ್ಪ ನೂರೊಂದು
ವಿರತರ್.............. (ಸಂಧಿ.೬೩ ಪದ್ಯ ೩೭)

ಎಂಬ ವರ್ಣನೆಯಿದೆ. 'ವಿರತರು' ಎಂದರೆ ವಿರ ಕ್ತರು. ಅಲ್ಲಿ ಬರುವ ಹಲವು ವಿರತರ ಚರಿತ್ರೆ

1. ಚೆ. ಬ. ಪು. ಸಂಧಿ ೬೩

ಗಳನ್ನೂ 'ನೂರೊಂದು ವಿರಕ್ತರ ಕಾವ್ಯ'ದೊಳಗಣ ಎಲ್ಲ ಚರಿತ್ರಗಳನ್ನೂ ಅವಲೋಕಿಸಿದಾಗ ಈ ವಿರ ಕ್ತರು ಲೌಕಿಕದಲ್ಲಿ ಮರುಳರಂದದಿ ಇದ್ದಂತೆ ಭಾಸವಾಗುತ್ತದೆ. ತನಗೆ ಲೋಕ ಮರುಳಾಗಿಯೂ ಲೋಕಕ್ಕೆ ತಾನು ಮರುಳಾಗಿಯೂ ತೋರುವುದು ಶರಣರಿಗೆ ಸಹಜವಾದುದು. ಈ ದೃಷ್ಟಿಯಿಂದ ವಿಚಾರ ಮಾಡಿದರೆ, ಲೌಕಿಕವ್ಯವಹಾರಗಳನ್ನು ಚಾಚೂ ತಪ್ಪದೆ ಒಳ್ಳೆಯ ಎಚ್ಚರಿಕೆಯಿಂದ ನೆರ ವೇರಿಸುತ್ತಿದ್ದ ಕರಸ್ಥಲದ ವೀರಣ್ಣೊಡೆಯರನ್ನು ನೂರೊಂದು ವಿರಕ್ತರ ಸಾಲಿನಲ್ಲಿ ಕುಳ್ಳಿರಿಸುವುದು ಸರಿಯಲ್ಲವೆಂದು ಎನಿಸುತ್ತದೆ. ಈ ವಿಚಾರವನ್ನು 'ನೂರೊಂದು ವಿರಕ್ತರ ಕಾವ್ಯ'ದ ಕರ್ತೃವಾದ ಮೋದಿಯ ರುದ್ರನೂ ಅನುಮೋದಿಸುತ್ತಾನೆ. ಈ ಕಾವ್ಯದಲ್ಲಿ ವೀರಣ್ಣೊಡೆಯರ ಹಾಗೂ ಪ್ರೌಢ ದೇವರಾಯನ ಸಂಭಾಷಣೆ ಇಂತಿದೆ :

> ನೂರೊಂದು ವಿರಕ್ತರು ತಮ್ಮಯ ಘನ
> ಮೇರೆಯ ತೋರದೆ ನಿರ್ವಯಲಾದರು
> ಕಾರಣಪುರುಷರು ನೀವೆಮ್ಮಯ
> ಬಳಿವಿರ್ಪಿರೊ ಪೋಗುವಿರೊ ।
> ದಾರಿಯ ಪೇಳೆನೆ ದರಹಸಿತದಿ ಗುರು
> ವೀರಣ್ಣಯ್ಯನು ನುಡಿದನು ರಾಜಗೆ
> ಕಾರಣಮೂರ್ತಿಯು ನಾಗೇಶನು
> ಕರೆದರೆ ನಾಪೋಗುವೆನು ॥
> (ನೂ.ವಿ.ಕಾ. ೬-೧೨೧)

"ನೂರೊಂದು ವಿರಕ್ತರೆಲ್ಲರೂ ಬಯಲಾಗಿ ಹೋದರು, ನೀವಾದರೂ ನಮ್ಮ ಬಳಿಯಲ್ಲಿ ಉಳಿಯುವಿರೋ ಇಲ್ಲವೋ ?" ಎಂದು ಪ್ರೌಢ ದೇವರಾಯನು ವೀರಣ್ಣೊಡೆಯರನ್ನು ಪ್ರಶ್ನಿಸು ತ್ತಾನೆ. "ಗುರು ನಾಗೇಶನು ಕರೆದರೆ ನಾನು ಹೋಗುವೆ" ಎಂಬುದಾಗಿ ವೀರಣ್ಣೊಡೆಯರು ಉತ್ತರಿಸುತ್ತಾರೆ.

ಈ ಮಾತುಗಳಿಂದ ವೀರಣ್ಣೊಡೆಯರು ನೂರೊಂದು ವಿರಕ್ತರ ಗುಂಪಿನಿಂದ ಭಿನ್ನರು ಎಂದು ನಿಚ್ಚಳವಾಗಿ ವ್ಯಕ್ತವಾಗುತ್ತದೆ. ಒಟ್ಟಾರೆ ಪ್ರೌಢದೇವರಾಯನ ಕಾವ್ಯದಲ್ಲಿ ಉಕ್ತರಾದ ಕರಸ್ಥಲದ ನಾಗಿದೇವ, ಕಲ್ಲುಮಠದ ಪ್ರಭುದೇವ, ಕರಸ್ಥಲದ ವೀರಣ್ಣೊಡೆಯ, ಚಾಮರಸ ಈ ನಾಲ್ವರೊಳಗೆ ಕರಸ್ಥಲದ ನಾಗಿದೇವನ ಹೊರ ತಾಗಿ ಉಳಿದ ಮೂವರು ನೂರೊಂದು ವಿರಕ್ತರ ಗುಂಪಿನಿಂದ ಬೇರೆಯಾಗುತ್ತಾರೆ. ಕರಸ್ಥಲದ ನಾಗಿದೇವನು ನೂರೊಂದು ವಿರಕ್ತರೊಳಗಿನವ ನೆಂಬ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ. ನೂರೊಂದು ವಿರಕ್ತರಲ್ಲಿ ಅವರೇ ಆದಿ, ಅವರೇ ಅಗ್ರಗಣ್ಯರು.

'ಚೆನ್ನಬಸವ ಪುರಾಣ'ದಲ್ಲಿ ಉಕ್ತರಾದ ಹನ್ನೊಂದುಜನ ವಿರಕ್ತರೊಳಗೆ ಕರಸ್ಥಲದ ವೀರಣ್ಣೊಡೆಯರನ್ನು ಈಗ ಬಿಟ್ಟು ಬಿಡಬೇಕಾಗು ತ್ತದೆ. ಇನ್ನುಳಿದ ಹತ್ತು ಜನರೆಲ್ಲರೂ ನೂರೊಂದು ವಿರಕ್ತರ ಕಾವ್ಯದಲ್ಲಿ ಕಂಡುಬರುತ್ತಾರೆ. ಚೆನ್ನ ಬಸವ ಪುರಾಣ ಮತ್ತು ನೂರೊಂದು ವಿರಕ್ತರ ಕಾವ್ಯ ಇವುಗಳೊಳಗೆ ಈ ದೃಷ್ಟಿಯಲ್ಲಿ ಹೆಚ್ಚಿನ ಸಾಮ್ಯವಿದ್ದಂತೆ ತೋರುತ್ತದೆ. ಚೆನ್ನಬಸವ ಪುರಾಣದಲ್ಲಿ ೧೧ ವಿರಕ್ತರ ಹೆಸರುಗಳನ್ನು ಹೇಳಿ, ಅವರ ಚರಿತ್ರೆಯನ್ನು ಅತಿಸಂಕ್ಷೇಪವಾಗಿ ವಿವರಿ ಸಿದ್ದರೆ,ನೂರೊಂದು ವಿರಕ್ತರ ಕಾವ್ಯದಲ್ಲಿ ೧೧ಜನರ ನ್ನೊಳಗೊಂಡು ೧೦೧ ವಿರಕ್ತರೆಲ್ಲರ ಹೆಸರುಗಳನ್ನು ಹೇಳಿ, ಅವರಲ್ಲನೇಕರ ಚರಿತ್ರಗಳನ್ನು ಸ್ವಲ್ಪ ವಿಸ್ತಾರವಾಗಿಯೇ ವಿವರಿಸಲಾಗಿದೆ. ಕೆಲವರ ಹೆಸರುಗಳನ್ನು ಮಾತ್ರ ನಿರ್ದೇಶಿಸಿ ಬಿಡಲಾಗಿದೆ. ಆ ಕಾವ್ಯೋಕ್ತವಿರಕ್ತರ ಹೆಸರುಗಳು ಇಂತಿವೆ.

೧. ಕರಸ್ಥಲದ ನಾಗಿದೇವ
೨. ಸಪ್ತ ಕಾವ್ಯದ ಗುರುಬಸವ

೩. ಹೊನ್ನಿದೇವ
೪. ಹೇಟಿಯ ಮರುಳ
೫. ಟಗರ ಕಾಳಗದ ಪ್ರಭು
೬ ಬಾಲ ಲಿಂಗಣ್ಣ
೭. ಬತ್ತಲೇಶ
೮. ಮಿಡಿಬಿಲ್ಲ ಶಾಂತೇಶ
೯. ಆಯುಧಶಾಂತ
೧೦. ಕುದುರೆಯಶಾಂತ
೧೧. ಮಂಚವ ಶಾಂತ
೧೨. ಮಾದ್ದಳೆ ನುಡಿಸುವನ
೧೩. ಬುಡುಬುಡುಕೆಯ ಶಾಂತೇಶ
೧೪. ಡಂಗುರು ಶಾಂತ
೧೫. ಖಂಡಣಿ ಶಾಂತ
೧೬ ಸಾಣಖಂಡೆಯ ಶಾಂತ
೧೭. ಮದ್ದಾನಿ ಶಾಂತ
೧೮. ಸಿಂಗಡಿಯ ಶಾಂತ
೧೯. ಚಕ್ರದ ಶಾಂತ
೨೦ ಬೊಂಬೆಕಟ್ಟ ಮೆರಸುವ ಶಾಂತ
೨೧. ಜಟ್ಟಿ ಶಾಂತ
೨೨. ವೀರ ಶಾಂತ
೨೩. ಡೊಂಬರ ಶಾಂತ
೨೪. ವರ್ಧೇಂದ್ರಿಯ ಶಾಂತ
೨೫ ಗುರು ಬಸವೇಶ್ವರ
೨೬ ಸಿಬ್ಬೆರಗಿನ ಮಹಾಶಾಂತ
೨೭ ಸರಕಿಲ ಶಾಂತೇಶ್ವರ
೨೮ ರುದ್ರಭೂಮಿಯ ಶಾಂತ
೨೯. ಜಣ್ಣಗದ್ದುಗೆಯ ಶಾಂತ
೩೦. ರುದ್ರಮೂರ್ತಿ ಶಾಂತ
೩೧. ಭದ್ರಕಾಳಿಯ ಶಾಂತ
೩೨ ಇದ್ದಲಿ ಶಾಂತೇಶ
೩೩. ಬಯಲ ಶಾಂತ
೩೪. ಮಡಿವಾಳ ಶಾಂತ
೩೫. ಹಿಡಿಗಡಲಿಯ ಶಾಂತ
೩೬. ನಿರಾದಿ ಶಾಂತ
೩೭ ಪೆಟಲಿನ ಶಾಂತ
೩೮. ಕಾಳಿ ಶಾಂತೇಶ
೩೯. ಗುಂಡಶಾಂತ
೪೦. ಚಂಡಿನಾಟದ ಶಾಂತ
೪೧. ನಂಬಿ ಶಾಂತ
೪೨. ಶಿಶುಗಳೊಡನೆ ಆಟವಾಡುವ ಶಾಂತ
೪೩ ಬಿಸಿನೀರಿನ ಶಾಂತ
೪೪. ಚದುರ ಶಾಂತ
೪೫. ಬೇಟೆಯ ಶಾಂತ
೪೬. ಶಿವಮೂರ್ತಿಯ ರೂಪದ ಶಾಂತ
೪೭ ಸುಖಿವೇಕಿ ಶಾಂತ
೪೮. ಮಜ್ಜನ ಶಾಂತೇಶ
೪೯. ವಿಭೂತಿಯ ಶಾಂತ
೫೦. ವಸುಗೆಗೆಲಸದ ಶಾಂತ
೫೧. ಜೂಜಿನ ಶಾಂತ
೫೨. ಕಿನ್ನರಿ ಶಾಂತ
೫೩ ಗದ ಶಾಂತೇಶ
೫೪. ಎಚ್ಚರಸಿಯಮದ ಶಾಂತ
೫೫ ಗಿರಿಗಟ್ಟಿಗಿಯ ಶಾಂತೇಶ
೫೬. ಕಸ್ತೂರಿ ತಿಲಕದ ಶಾಂತ
೫೭. ಇಂದ್ರಜಾಲದ ಶಾಂತ
೫೮. ಗಿಂಡಿಯ ಶಾಂತ
೫೯. ಚಂಡಿನಾಟದ ಶಾಂತ
೬೦. ಬ್ಲೊಂಜೆಯ ಮಾಳ್ಪ ಶಾಂತ
೬೧. ನಿಧಾನದ ಶಾಂತ
೬೨. ಚಂಡ ವಿಕ್ರಮ ಶಾಂತ
೬೩. ಚಂದ್ರಮಂಕಿ ಶಾಂತ
೬೪. ತೃಣದ ಶಾಂತ

೬೫. ನಾಟ್ಯ ಶಾಂತ
೬೬. ಮಹೀಂದ್ರಜಾಲದ ಗುಣದ ಶಾಂತ
೬೭. ಕವಿ ಶಾಂತ
೬೮. ಗಾಂಗೇಯ ಶಾಂತ
೬೯. ಭಟ್ಟ ಶಾಂತ
೭೦. ವಿಟ್ಟ ಶಾಂತೇಶ
೭೧. ಬೆಟ್ಟದಾ ಮೇಲಿರ್ಪ ಶಾಂತ
೭೨. ಘಟ್ಟಗೋಲಿನ ಶಾಂತಮೂರ್ತಿ
೭೩. ನಿಷ್ಠೆನಿಜವಂದ ಶಾಂತ
೭೪. ಶರಭ ಶಾಂತೇಶ
೭೫. ಉಗ್ಗಡಿಪ ಶಾಂತ
೭೬. ಅಟ್ಟೆಹೊಯ್ಸಡಮಾಮಿ ಶಾಂತ
೭೭. ಕಟ್ಟುನಾಯಕ ಶಾಂತ
೭೮. ಮರವಿಕ್ರಯಿಪ ಶಾಂತ
೭೯. ಚಾಕಿ ಶಾಂತ
೮೦. ಬೊಗರಿಯ ಶಾಂತಲಿಂಗ
೮೧. ಶರ....ಶಾಂತ
೮೨ ....ದಿಯಲ್ಲಿ ಇರುವ ಶಾಂತ
೮೩ ಸೂಜಿಯ ಪರ ಶಾಂತ
೮೪. ವಕ್ಕಲಿ....ನೆನಸುವ ಗರುವ ಶಾಂತ
೮೫. ಕೆಲಸಿ ಶಾಂತ
೮೬. ಶಂಕರನ ಒಲುಮೆ ಶಾಂತ
೮೭. ನಿಂಬಿ ಶಾಂತನು
೮೮. ಸೊಡ್ಡಿನ ಶಾಂಭ
೮೯. ಚೆಲುವ ಶಾಂತೇಶ
೯೦. ಸಾಧನೆಯ ಶಾಂತನು
೯೧. ಒಡ್ಡ ಶಾಂತ
೯೨. ನಿರ್ವಂಚನೆಯ ಶಾಂತ
೯೩. ಚಂಗವಿಡಿದೊರೆವ ಶಾಂತ
೯೪. ಶೂಲದ ಶಾಂತಲಿಂಗ
೯೫. ಕಂಚಿನಾದ್ರಿಯ ಕಾಂತ
೯೬. ರತ್ನದ ಶಾಂತ
೯೭ ಕೋಲ ಕಾಂತ
೯೮. ಬಾಲಗಾಸಿಯಶಾಂತಮೂರುತಿ
೯೯. ಹಾಲ ಶಾಂತ
೧೦೦. ಗಣಶಾಂತ
೧೦೧. ಬಾಣಬತ್ತಿ ಶಾಂತಲಿಂಗ

ಈ ಕಾವ್ಯವು ಪರಿಷ್ಕೃತವಾಗಿ ಅಚ್ಚುಗೊಂಡಿಲ್ಲವಾದುದರಿಂದಲೂ ದೊರೆತ ಕೈಬರೆಹದ ಪ್ರತಿಯಲ್ಲಿ ಹಲವೆಡೆ ಸ್ಖಾಲಿತ್ಯಗಳಿರುವುದರಿಂದಲೂ ಕೆಲವೊಂದು ಹೆಸರುಗಳಿಗೆ ಸಂಬಂಧಿಸಿದ ವಿಶೇಷಣಗಳು ಸ್ವಲ್ಪ ಸಂದೇಹಾಸ್ಪದವಾಗಿವೆ. ಕಥೆಯ ಘಟನೆಗಳನ್ನು ಪರಿಗಣಿಸಿ, ಸಂದೇಹದೆಡೆಗಳಲ್ಲಿ ಊಹೆಯಿಂದ ಸಾಕಷ್ಟು ಜೋಕೆ ತೂಕಗಳಿಂದ ಮಾಡಿರುವುದರಿಂದ ಕಾವ್ಯದ ಶುದ್ಧಹಸ್ತಪ್ರತಿ ದೊರಕಿ ಪರಿಷ್ಕೃತ ಗ್ರಂಥವು ಪ್ರಕಟವಾದಾಗ, ಇವುಗಳಲ್ಲಿ ಒಂದೆರಡು ಕಡೆ ಅಲ್ಪ ಸ್ವಲ್ಪ ವ್ಯತ್ಯಾಸಗಳು ತಲೆದೋರಬಹುದೇ ವಿನಾ ಮೂಲ ಆಶಯಕ್ಕೆ ಯಾವ ಭಂಗವೂ ಬಾರದೆಂದು ನಮ್ಮ ಭಾವನೆ.

ಇಲ್ಲಿ ಸುಮಾರು ಹತ್ತು ಹೆಸರುಗಳನ್ನು ಬಿಟ್ಟರೆ, ಮಿಕ್ಕುವೆಲ್ಲ ಶಾಂತ ಶಾಂತೇಶ ಮತ್ತು ಶಾಂತಲಿಂಗ ಎಂಬುವೇ ಇವೆ. ಇಷ್ಟು ಜನರೆಲ್ಲರೂ ಒಂದೆಡೆ ಒಂದೇ ಹೆಸರಿನವರಿದ್ದರೆ? ಎಂಬೊಂದು ಪ್ರಶ್ನೆ ಸಹಜವಾಗಿಯೆ ತಲೆಯೆತ್ತುತ್ತದೆ. 'ಚೆನ್ನಬಸವ ಪುರಾಣ'ವು ಹತ್ತು ಹೆಸರುಗಳಿಗೆ ಇತ್ಯಾದಿ ಎಂದು ಹೇಳಿ ಮುಂದೆ ಸಾಗಿದರೆ 'ನೂರೊಂದು ವಿರಕ್ತರ ಕಾವ್ಯ'ವು ಅವೆಲ್ಲ ಹೆಸರುಗಳನ್ನೂ ಪೂರಯಿಸುವ ಸಾಹಸ ಮಾಡಿದೆ. ಮೇಲೆ ನಿರ್ದೇಶಿಸಿದ ಬಹುಶಃ ಎಲ್ಲ ಹೆಸರುಗಳೂ ಶಾಂತ, ಶಾಂತೇಶ, ಶಾಂತಲಿಂಗ ಎಂಬುದಾಗಿಯೇ

ಉಂಟು ನಿಜ. ಆದರೆ ಮೂಲತಃ ಅವರೆಲ್ಲರ ಅಂಕಿತ ನಾಮುಗಳೂ ಹಾಗೆಯೇ ಇದ್ದಿರಲಿಕಿಲ್ಲ. ಅವರು ಹೊಂದಿದ ಸ್ಥಿತಿಗನುಗುಣವಾಗಿ ಈ ಹೆಸರು ಅವರಿಗೆ ಬಂದಿರಬಹುದು. ಅವರೆಲ್ಲ ಹೊಂಡಿದುದು ಶಾಂತಸ್ಥಿತಿಯೇ ಆಗಿದ್ದಿತು. ಆದುದರಿಂದ ಜನ ಅವರನ್ನು ಆ ಅಭಿಧಾನದಿಂದ ಕರೆದಿರಬೇಕು. ವ್ಯಕ್ತಿಶಃ ಒಬ್ಬೊಬ್ಬನನ್ನು ಗುರುತಿಸುವುದಕ್ಕಾಗಿ, ಅವರವರು ಲೋಕದಲ್ಲಿ ನಡೆಸಿದ ನಟನೆ, ಕೈಕೊಂಡ ಕಾಯಕ ಇತ್ಯಾದಿಗಳಿಗೆ ಅನುಸಾರವಾದ ವಿಶೇಷಣಗಳನ್ನು ಅವರವರ ಹೆಸರುಗಳಿಗೆ ಹೊಂದಿಸಲಾಗಿದೆ. ಇವೆಲ್ಲ ಹೆಸರುಗಳೂ ಕವಿ ಮೋದಿಯ ರುದ್ರನ ಸೃಷ್ಟಿಯುವೇ ಎಂದು ಹೇಳಲಿಕ್ಕಾದು ; ಅದು ಶರಣರ ನಡೆಗೆ ಹೊಲ್ಲ. 'ಚೆನ್ನಬಸವ ಪುರಾಣ'ದ ಕರ್ತೃವಿನಂತೆ ಈತನೂ ಇತ್ಯಾದಿ ಎಂದು ಹೇಳಿ ಮೌನತಳೆದಾನಲ್ಲದೆ ಕಲ್ಪಿತನಾಮುಗಳನ್ನು ಉಸಿರಲಾರ. ಕಾವ್ಯಾರಂಭದಲ್ಲಿ ಕವಿ ಈ ಪ್ರಶ್ನೆಯನ್ನು ಎತ್ತಿಯೂ ಇದ್ದಾನೆ

ಮೋದಿಯ ರುದ್ರನು 'ಪಂಚಮೋದ್ಭವ' ಕಾವ್ಯವನ್ನು ರಚಿಸಿದ ಮೇಲೆ, ಅದನ್ನೋದಿ ಆನಂದಭರಿತರಾಗಿ ಷಟ್ಸ್ಥಲಜ್ಞಾನ ಕೋವಿದ ಮುಳಿಯ ಸ್ವಾಮಿ ಎಂಬ ವಿರಕ್ತವರೇಣ್ಯರು,

> "....ಕಂದ, ನೀ ಬಾರೆಲವೊ, ನಿನಗೊಂದು
> ಒರೆವೆ ಬುದ್ಧಿಯ, ಕೇಳು ಈ ಕಾವ್ಯರಚಿಸಿದೊಲ್
> ಪರಮ ನೂರೊಂದು ವಿರಕ್ತ ಮಾಹೆಶ್ವರರ
> ಚರಿತ್ರ ವಿರಚಿಸೆಂದು ।
> ವರವಿತ್ತು ಪೇಳಲ್ಕೆ, ಆ ಮಹಾ ಪೂರ್ವಕಥೆ
> ದೊರಕುವುದು ದುರ್ಲಭಂ, ನಾನೆಂತು ವಿರಚಿಸುವೆಂ
> ಗುರುವೆ ಬಿನ್ನಹವೆಂದು ನುಡಿಯಲ್ಕೆ
> ಪೇಳಿದಂ ವರ ಪ್ರಸಾದದ ವಾಕ್ಯವ ॥
> ಸಕಲಮತ ಶಾಸ್ತ್ರನೊಳು
> ಪಂಚಮೋದ್ಭವಣಿಯಂ
> ಪ್ರಕಟ... ಲದಿ ಕಾವ್ಯಮಂ ರಚಿಸಿದ್ದೆ
> ಭಕುತ ನೀ ಪೂರ್ವಜನ್ಮಾಂತರದಿ
> ಗುರುಕೃಪೆಯ ಪಡೆದಿರಲು ಶಾಸ್ತ್ರಜ್ಞಾನ ।
> ವಿಕಸಿತವುಮಾಗಿಹುದು ವೀರ ಮಾಹೇಶ್ವರರ
> ಪ್ರಕಟಿತೆಂದೆನಿಸಲು ಮೂಲವಮಂ ದೊರಕುವುದು
> ಶುಕ (ಸುಖ) ರೂಪದಿಂದೆ ಹೋಗೆಂದು
> ಬೆಸ...ಯೆ ಕೈಕೊನೀ ಕಾವ್ಯವ "॥
> (—ನೂ.ವಿ.ಕಾ. ೧-೨೩, ೨೪.)

ಎಂಬುದಾಗಿ ಕವಿಯ ಶಂಕೆಯನ್ನು ಬಿಡಿಸಿ 'ನೂರೊಂದು ವಿರಕ್ತರ ಕಾವ್ಯವನ್ನು ರಚಿಸುವಂತೆ ಅಪ್ಪಣೆ ಕೊಡಿಸುತ್ತಾರೆ. ಇಲ್ಲಿಯ ಪ್ರಶ್ನೋತ್ತರದಲ್ಲಿ ವಿರಕ್ತರ ಬಗೆಗೆ ಚಾರಿತ್ರಿಕ ಸಾಮುಗ್ರಿ ತನ್ನಲ್ಲಿಲ್ಲವೆಂದು ಮೋದಿಯ ರುದ್ರ ಕಳವಳ ಪಟ್ಟುದಕ್ಕೆ ಆ ಮುಳಿಯ ಸ್ವಾಮಿಗಳು 'ದೃಢ ಸಂಕಲ್ಪದಿಂದ ಬರೆಯಲುಜ್ಜುಗಿಸು, ಅದಕ್ಕೆ ಬೇಕಾದ ಮೌಲ್ಯವು ತಾನೇ ದೊರೆಕೊಳ್ಳುವುದೆಂದು ಹೇಳಿ ಅವನನ್ನು ಆಶೀರ್ವದಿಸಿ ಪ್ರೋತ್ಸಾಹಿಸುತ್ತಾರೆ. ಇಷ್ಟಾದ ಮೇಲೆ ಕವಿ ತನ್ನೀ ಕಾವ್ಯವನ್ನು ರಚಿಸಿರುವನು. ಇದರಿಂದ ನೂರೊಂದು ವಿರಕ್ತರ ಹೆಸರುಗಳೂ ಅವರ ವಿಷಯವಾಗಿ ಹೇಳಿದ ಪವಾಡಗಳೂ ಸ್ವಕಪೋಲಕಲ್ಪಿತಗಳಲ್ಲವೆಂದು ಸ್ಪಷ್ಟವಾಗುತ್ತದೆ. ಅವುಗಳಿಗೆ ಯಾವುದೋ ಒಂದು ಮೂಲದಿಂದ ಆಧಾರ ಸಿಕ್ಕಿರಲೇಬೇಕು.

ಏಕೋತ್ತರಶತಕ ವಿರಕ್ತರು ಇಂತಿಂತಿಹರು ಎಂಬ ಮಾತು ಅವರ ಕಾಲದಲ್ಲಿಯೇ ಖಚಿತವಾಗಿ ಹೋಗಿದ್ದರೆ ಈ ಸಂದೇಹದ ಸಮಸ್ಯೆಗಳೇ ಏಳುತ್ತಿರಲಿಲ್ಲ. ಇವರೆಲ್ಲರೂ ವಿಜಯನಗರದ ಪ್ರೌಢದೇವರಾಯನ ಸಮುಕಾಲೀನರು (ಕ್ರಿ.ಪ. ೧೪೧೯–೪೭) ಈ ಕಾಲದಲ್ಲಿಯೇ ಕಾವ್ಯವನ್ನು ಬರೆದ ಲಕ್ಕಣ್ಣದಂಡೇಶನು ತನ್ನ ಶಿವತತ್ತ್ವ ಚಿಂತಾಮಣಿಯಲ್ಲಿ 'ನೂರೊಂದು ವಿರಕ್ತರು' ಎಂಬ ಮಾತನ್ನಾಗಲಿ, ಅವರ ಹೆಸರನ್ನಾಗಲಿ

ಉಲ್ಲಖಿಸುವುದಿಲ್ಲ. ಪ್ರಮಥಗಣಂಗಳು, ರುದ್ರ ಗಣಂಗಳು, ತೇರಸರು, ದಶಗಣಂಗಳು, ೬೩ ಪುರಾತನರು, ಷೋಡಶರು, ಅಸಂಖ್ಯಾತರು ಮತ್ತು ನೂತನಗಣಂಗಳು ಇವರೆಲ್ಲರ ಹೆಸರುಗಳನ್ನೂ ವಿಸ್ತಾರವಾಗಿ ವಿವರಿಸುತ್ತಾನೆ.[1] ಕನ್ನಡ ನಾಡಿನಲ್ಲಿ ಮಾತ್ರವೇ ಅಲ್ಲ, ನೆರೆಹೊರೆಯ ಆಂಧ್ರ, ತಮಿಳು ಮೊದಲಾದ ದೇಶಗಳಲ್ಲಿ ಇದ್ದ ಸಕಲ ಗಣಂಗಳನ್ನೂ ಆತನು ವರ್ಣಿಸಿದ್ದಾನೆ. ಇಷ್ಟೆಲ್ಲ ಪರಿಶ್ರಮ ವಹಿಸಿದ ಕವಿ 'ನೂರೊಂದು ವಿರಕ್ತರು' ಎಂಬ ಪದಪ್ರಯೋಗ ಮಾಡಿ, ಅವರನ್ನು ನೂತನ ಗಣಂಗಳ ಮಧ್ಯದಲ್ಲಿ ಕುಳ್ಳಿರಿಸಬಹುದಾಗಿತ್ತು. ನೂರೊಂದರಲ್ಲಿ ಒಂದು ಹೆಸರೂ ಅಲ್ಲಿ ಬಾರದಿರುವುದು ಅತ್ಯಂತ ಸೋಜಿಗದ ಮಾತು. ಇದರಂತೆಯೇ ಅದೇ ಕಾಲದಲ್ಲಿದ್ದ ಚಾಮರಸ, ಮಗ್ಗೆಯ ಮಾಯಿದೇವ, ಜಕ್ಕಣಾರ್ಯ, ಕಲ್ಮಠದ ಪ್ರಭುದೇವ ಇವರೇ ಮೊದಲಾದವರ ಕಾವ್ಯಕೃತಿಗಳಲ್ಲಿಯೂ ನೂರೊಂದು ವಿರಕ್ತರ ನಾಮ ನಿರ್ದೇಶವಾದಂತಿಲ್ಲ. ಇದರ ಮೇಲಿಂದ ಈ ನೂರೊಂದು ವಿರಕ್ತರ ಜೀವಿತ ಕಾಲಾವಧಿಯಲ್ಲಿ ಅವರ ಸಂಖ್ಯೆ ನಿರ್ದಿಷ್ಟವಾಗಿ ಅವರೊಳಗೆ ಒಬ್ಬರು ಇನೊಬ್ಬರನ್ನು ಹೆಸರಿಸಿದುದರ ಕುರುಹುಗಳು ಗೋಚರಿಸುವುದಿಲ್ಲ. ೬೩ ಪುರಾತನರ ಚರಿತ್ರೆಗಳನ್ನು ಓದಿದರೆ ಈ ಮಾತಿನ ಅರ್ಥ ಸ್ಪಷ್ಟವಾಗುತ್ತದೆ, ೬೩ ಪುರಾತನರ ಹೆಸರುಗಳ ನಿರ್ಣಯ ಅವರೆಲ್ಲರ ಜೀವಿತ ಕಾಲಾವಧಿಯ ಅನಂತರ ಆದ ಹಾಗೆ ಈ ನೂರೊಂದು ವಿರಕ್ತರ ಸಂಸ್ಥೆ ಒಂದು ರೂಪಕ್ಕೆ ಬಂದಿರಬೇಕು.

ವಿವರಶೈವದಲ್ಲಿ ೧, ೩, ೫, ೬, ೮, ೩೬, ೬೩, ೨೧೬ ಇವೇ ಮೊದಲಾದ ಸಂಖ್ಯೆಗಳಿಗೆ ಹೆಚ್ಚಿನ ಪಾವಿತ್ರ್ಯವಿದೆ. '೧೦೧' ಎಂಬ ಸಂಖ್ಯೆ ವೀರಶೈವದ ಸ್ಥಲಕಟ್ಟುಗಳ ಒಂದು ವಿಭಜನಾ ಕ್ರಮ ಸೂಚಿಸುತ್ತದೆ. ಏಕೋತ್ತರಶತಸ್ಥಲ ಎಂಬ ಗ್ರಂಥದ ಹೆಸರೇ ಇದಕ್ಕೆ ಸಾಕ್ಷಿ. ಇನ್ನು ಅನೇಕ ಗ್ರಂಥಗಳಲ್ಲಿ ಅಂಗಸ್ಥಲ,ಲಿಂಗಸ್ಥಲಗಳನ್ನು ಸೇರಿಸಿ ಒಟ್ಟು ೧೦೧ ಸ್ಥಲಗಳನ್ನು ಹೇಳಲಾಗಿದೆ. ಇದನ್ನು ಗಣನೆಯಲ್ಲಿಟ್ಟುಕೊಂಡು, ಈ ವಿರಕ್ತರು,ಲಿಂಗೈಕ್ಯರಾದ ಅನಂತರ ಅವರಲ್ಲಿ ೧೦೧ ಜನರನ್ನು ವಿಶೇಷಿಸಿ, ಹೆಸರಿಸಿ 'ನೂರೊಂದು ವಿರಕ್ತರು'ಎಂಬ ಪದ ಪ್ರಯೋಗವನ್ನು ರೂಢಿಗೊಳಿಸಿದಂತೆ ತೋರುತ್ತದೆ.

'ವೀರಶೈವಾಮೃತ ಮಹಾಪುರಾಣವು, ರಚಿತವಾದುದು ಕ್ರಿ. ಶ. ಸುಮಾರು ೧೫೧೩ರಲ್ಲಿ. ಆ ಕಾವ್ಯದಲ್ಲಿಯೂ ನೂತನ ಭಕ್ತರ ಚರಿತ್ರೆಯನ್ನು ತಿಳಿಸಲು ಒಂದು ಸಂಧಿ ಮೀಸಲಾಗಿದೆ[3]. ಅದರಲ್ಲಿ,

> "....ಲಕ್ಕಣ್ಣ ದಣ್ಣಾಯಕರು ಶಿವತತ್ತ್ವ
> ಚಿಂತಾಮಣಿಯೊಳು ತತ್ಕಾಲ ನೂತನಭಕ್ತ
> ಸಂತತಿಯನೊರೆದುದಂ ಪೇಳ್ದಿಪ್ಪೆ ..."[4]

ಎಂದು ಶಿವತತ್ತ್ವಚಿಂತಾಮಣಿಯಲ್ಲಿ ಬಂದಿದ್ದ ತತ್ಕಾಲೀನ ಚರಿತ್ರಗಳನ್ನೊರೆದು,

---

1. ಶಿವತತ್ತ್ವ ಚಿಂತಾಮಣಿ, ಸಂಧಿ ೩೪ ರಿಂದ ೩೮.
2. ಸಿದ್ಧಾಂತ ಶಿಖಾಮಣಿ, ತೋಂಟದ ಸಿದ್ಧೇಶ್ವರ ಪುರಾಣ.
3. ಕಾಂಡ ೮, ಸಂಧಿ ೮.
4. ವೀ.ಮ.ಪು. ಕಾಂಡ ೮, ಸಂಧಿ ೮, ಪದ್ಯ ೨೫.

"....ಬಳಿಕೀವರ್ತಮಾನದೊಳವತರಿಸಿ-
ದಂತಕಾಂತಕನಿಷ್ಠ ನೂತನ ಶರಣನುತಿಗ-
ಳಂ ತಿಳಿವುವೆಂ ಭಕ್ತಿಯಿಂ ಕೇಳೆಂದರಾ
ವೀರ ಹಲಗೆಯದೇವರು ॥1

ಎಂದು ಹೇಳಿ ಕೆಲವು ಗಣಂಗಳ ಚರಿತ್ರೆಯನ್ನು ಕೊಡುತ್ತಾನೆ. ಅಲ್ಲಿ ನೂರೊಂದು ವಿರಕ್ತರಿಗೆ ಸಂಬಂಧಿಸಿದ ಕೆಲವು ಹೆಸರುಗಳು ಗೋಚರಿಸುತ್ತವೆ:

೧. ಕರಸ್ಥಲದ ನಾಗಿದೇವ
೨. ಕರಸ್ಥಲದ ವೀರೇಶ
೩. ಗುರುಬಸವೇಶ
೪. ಪಟಪರಿ (ಪರಪಟ್ಟ?) ನಾಗಿದೇವ
೫. ಬಿಲ್ಲ ಮರುಳರು
(ಮಿಡಿಬಿಲ್ಲ ಶಾಂತೇಶ?)
೬. ಬತ್ತಲೊಡೆಯರು

ವರ್ತಮಾನ ಗಣಂಗಳನ್ನು ಹೇಳಲು ಹೊರಟ ಮಲ್ಲಣಾರ್ಯರು (ವೀರಶೈವಾಮೃತ ಮಹಾ ಪುರಾಣದ ಕರ್ತೃ) ತಮ್ಮ ಸಮಕಾಲೀನರ ಹೆಸರುಗಳನ್ನು ಮಾತ್ರ ಹೇಳದೆ ತಮ್ಮ ಹಿರಿಯ ಸಮಕಾಲೀನರಾಗಿರಬಹುದಾದ ಕರಸ್ಥಲದ ನಾಗಿದೇವರೇ ಮೊದಲಾದ ಕೆಲವು ಜನ ವಿರಕ್ತರ ಹೆಸರುಗಳನ್ನು ಹೇಳುತ್ತಾರೆ. ಲಕ್ಕಣ್ಣ ದಂಡೇಶನು ಬಿಟ್ಟಲ್ಲಿಂದ ಮುಂದಿನ ಶರಣರ ಚರಿತ್ರೆಗಳನ್ನು ಗುಬ್ಬಿ ಮಲ್ಲಣಾರ್ಯರು ಹೇಳಿದ್ದಾರೆ. ಈ ಎಲ್ಲರನ್ನೂ ಮಲ್ಲಣಾರ್ಯರು ವರ್ತಮಾನ ಕಾಲದ ಗಣಂಗಳೆಂದು ಪರಿಗಣಿಸಿದ್ದಾರೆ. ವೀರಶೈವಾಮೃತ ಮಹಾಪುರಾಣದಲ್ಲಿ ನೂರೊಂದು ವಿರಕ್ತರೊಳಗಿನ ಕೆಲವೊಂದು ಹೆಸರುಗಳು ಉಕ್ತವಾಗಿದ್ದರೂ 'ನೂರೊಂದು ವಿರಕ್ತರು' ಎಂಬ ಪದದ ಪ್ರಯೋಗ ಕಾಣದಿರುವುದೂ, ತೇರಸರು, ಷೋಡಶರು, ಅರುವತ್ತುಮೂವರು ಇವರ ಒಂದೊಂದು ಗುಂಪನ್ನು ವಿಭಜಿಸಿದಂತೆ ನೂರೊಂದು ವಿರಕ್ತರ ವಿಶಿಷ್ಟ ಗುಂಪೊಂದನ್ನು ಕಲ್ಪಿಸಿ ಅದರ ವರ್ಗೀಕರಣ ಮಾಡದಿರುವುದೂ ಗಮನಾರ್ಹವಾಗಿದೆ. ಆದುದರಿಂದ ಮಲ್ಲಣಾರ್ಯರ ಕಾಲದಲ್ಲಿ (ಕ್ರಿ. ಶ. ೧೫೧೩) ಇನ್ನೂ ನೂರೊಂದು ವಿರಕ್ತರ ಗಣನೆ ಪೂರ್ತಿಯಾಗಿ ಖಚಿತವಾಗಿರಲಿಲ್ಲವೆಂದು ಊಹಿಸಬೇಕಾಗುತ್ತದೆ. ಕ್ರಿ. ಶ. ೧೫೩೦ ರಲ್ಲಿ ಹುಟ್ಟಿದ ಅದೃಶ್ಯಕವಿಯ 'ಪ್ರೌಢರಾಯನ ಕಾವ್ಯ' ದಲ್ಲಿಯೂ ಕ್ರಿ. ಶ. ೧೫೮೪ ರಲ್ಲಿ ರಚಿತವಾದ ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ' ದಲ್ಲಿಯೂ ಈ ಪದ ಪ್ರಯೋಗವು ಮೊದಲ ಬಾರಿ ಕಂಡುಬರುವುದರಿಂದ ಕ್ರಿ.ಶ. ೧೫೧೩-೧೫೩೦ ರ ನಡುವಣ ಅವಧಿಯಲ್ಲಿ ನೂರೊಂದು ವಿರಕ್ತರ ಸಂಖ್ಯಾನಿರ್ಣಯವಾಗಿರಬೇಕೆಂದು ತೋರುತ್ತದೆ.

ಪ್ರೌಢದೇವರಾಯನ ಕಾಲದ ಸುವಿಖ್ಯಾತ ಕವಿಗಳೂ ವಚನಕಾರರೂ ಟೀಕಾಕಾರರೂ ಆದ ಲಕ್ಕಣ್ಣದಂಡೇಶ, ಜಕ್ಕಣಾರ್ಯ, ಕಲ್ಮಠದ ಪ್ರಭುದೇವ, ಚಾಮರಸ, ಮಗ್ಗೆಯ ಮಾಯಿದೇವ ಪ್ರಭೃತಿಗಳು ನೂರೊಂದು ವಿರಕ್ತರ ಗುಂಪಿನಲ್ಲಿ ಸೇರ್ಪಡೆ ಹೊಂದಲಿಲ್ಲವೆಂಬುದು ನಿಜ. ಈ ಮಹಾನುಭಾವರು ನೂರೊಂದು ವಿರಕ್ತರಲ್ಲಿ ಸಮಾವಿಷ್ಟರಾಗುವರೆಂದು ಭಾವಿಸಿ, ಅವರು ನಮ್ಮ ಸಾಹಿತ್ಯದಲ್ಲಿ ಎಸಗಿದ ಸೇವೆಯನ್ನು ಮನದಂದು, ನೂರೊಂದು ವಿರಕ್ತರೆಂದರೆ ವೀರಶೈವದಲ್ಲಿ ಅದ್ವಿತೀಯವಾದ ಕಾರ್ಯವನ್ನು ಗೈದವರು ಎಂದು ಇದುವರೆಗೆ ತಿಳಿಯಲಾಗುತ್ತಿತ್ತು. ಇವರೇ ನೂರೊಂದು ವಿರಕ್ತರೊಳಗೆ ಪರಿಗಣಿತ

1. ವೀ.ಮ.ಪು. ಕಾಂಡ ೮, ಸಂಧಿ ೮, ಪದ್ಯ ೨೫.

ರಾಗದೆ ಹೋದರೆ ನೂರೊಂದು ವಿರಕ್ತರ ಮಹತ್ತ್ವವೇನು ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ಇಷ್ಟರಿಂದ ನೂರೊಂದು ವಿರಕ್ತರು ಸಾಮಾನ್ಯರೆಂದೇನೂ ಭಾವಿಸಲಾಗದು. ಅವರು, "....ಕಲ್ಯಾಣಮಂಡಲದ ಶಿವಭಕ್ತರ ಸಂತಾನವೆನಿಸಿದವರು[1]. ಕಲ್ಯಾಣದ ಶಿವಶರಣರ ಆದರ್ಶದಂತೆ ಜೀವಿಸಿದವರು; ಜಂಗಮಸ್ಥಲವನ್ನೈದಿ, ಜೀವನದ ಅಸಾರತೆಯನ್ನು ಕಂಡು, ಪರಮ ವೈರಾಗ್ಯ ಶೀಲರಾಗಿ ಪ್ರಭುವಿನ ಬೆಳಗನುಂಡು ಬೆಳಗಾದವರು. ಪ್ರಭುದೇವರು ೧೨ ನೆಯ ಶತಮಾನದ ಕ್ರಾಂತಿಗೆ ಕೇಂದ್ರ ಶಕ್ತಿಯಾದಂತೆ ೧೫ ನೆಯ ಶತಮಾನದ ಕ್ರಾಂತಿಗೆ 'ನೂರೊಂದು ವಿರಕ್ತರು' ಕಾರಣರಾಗಿರಬೇಕು. ಅವರ ತಪಃಪ್ರಭಾವ ಸಾಮಾನ್ಯವಾದುದಲ್ಲ. ಅದರಲ್ಲಿಯೂ ಕೆಲವರು ಸಾಹಿತ್ಯ ನಿರ್ಮಾತೃಗಳು ಇದ್ದಿರಬೇಕು. ಉದಾಹರಣೆಗೆ ಕರಸ್ಥಲದ ನಾಗಿದೇವರು ತ್ರಿವಿಧಿಗಳನ್ನು ರಚಿಸಿರುವರು. ಇದರಂತೆ ಅವರೂ ಇತರರೂ ಅನೇಕಕೃತಿಗಳ ಜನಕರಾಗಿರುವ ಸಂಭವವಿದೆ. ಕಾಲದ ದವಡೆಯಲ್ಲಿ ಅವು ಸಿಕ್ಕುಹೋಗಿರುವುದು ಸಾಧ್ಯವಿದೆ. ನಮ್ಮ ಜನತೆಗೆ ಇಂತಹ ಮಹಾನುಭಾವರು ರಚಿಸಿದ ಕೃತಿಗಳನ್ನೂ ಅದರ ನೈಜ ಇತಿಹಾಸವನ್ನೂ ಉಳಿಸಿಕೊಳ್ಳುವುದಕ್ಕಿಂತ ಅವರ ಅದ್ಭುತ ಪವಾಡಗಳನ್ನು ಬಣ್ಣಿಸಿ ಹೇಳುವುದರಲ್ಲಿಯೇ ವಿಶೇಷ ಆಶಕ್ತಿ. ತತ್ಪರಿಣಾಮವಾಗಿ 'ನೂರೊಂದು ವಿರಕ್ತರ' ನೈಜ ಚರಿತ್ರೆ, ಅವರ ಕಾವ್ಯ ಕೃತಿಗಳು ನಮಗೆ ಕಾಣದಾಗಿವೆ. ಅವರು ಲೋಕಕ್ಕೆ ಮರುಳರಂತೆ ತೋರಿದ ವಿಷಯ ಮಾತ್ರ ಸ್ಪಷ್ಟವಾಗಿ ತಿಳಿದು ಬರುತ್ತದೆ. ಜಗದ ಕಣ್ಣಿಗೆ ಮರುಳಂತಿದ್ದ ಮಹಾನುಭಾವರು ಅಸದೃಶವಾದ ಲೋಕೋದ್ಧಾರಕ ಕಾರ್ಯಗಳನ್ನೂ ಮಾಡಲಾರರೆಂದು ತಿಳಿಯಕೂಡದು. ರೇವಣಸಿದ್ಧೇಶ್ವರರು 'ತನಗೆ ಲೋಕಂ ಮರುಳ್' ಎಂಬಂತೆ ಇದ್ದರೆಂದು ಹರಿಹರ ದೇವನು ವರ್ಣಿಸುತ್ತಾನೆ. ಆದರೆ ಆ ರೇವಣಸಿದ್ದೇಶ್ವರರ ಪ್ರಭಾವ ಕಿರುಕುಳವೇ? ಚಾಲುಕ್ಯ, ಕಲಚುರ್ಯ, ಪಲ್ಲವ ಮೊದಲಾದ ಅರಸು ಮನೆತನಗಳು ರೇವಣಸಿದ್ಧೇಶ್ವರರ ಪ್ರಭಾವಕ್ಕೆ ಒಳಗಾಗಿ ಅವರಿಗೆ ತಲೆವಾಗಿದ್ದವು.

ಅರಸುವಿಚಾರ ಸಿರಿಯು ಶೃಂಗಾರ
ಸ್ಥಿರವಲ್ಲ ಮಾನವಾಃ
ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು ನೋಡಾ!
ಒಬ್ಬ ಜಂಗಮದಭಿಮಾನದಿಂದ
ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು,
ಸಂದಿತ್ತು, ಕೂಡಲ ಸಂಗಮದೇವಾ,
ನಿಮ್ಮ ಕವಳಿಗೆಗೆ!

ಎಂಬ ವಚನದಲ್ಲಿ ಬಸವಣ್ಣನವರು ಉಲ್ಲೇಖಿಸಿದ 'ಒಬ್ಬ ಜಂಗಮ' ರೇವಣಸಿದ್ಧೇಶ್ವರರೇ ಎಂದು ಊಹಿಸಬಹುದಾಗಿದೆ. ಚಾಳುಕ್ಯ ದೊರೆ ರೇವಣಸಿದ್ಧೇಶ್ವರರನ್ನು ಕೆಣಕಿ, ಚಾಣಕ್ಯನನ್ನು ಕೆಣಕಿದ ನಂದರಂತೆ ಹಾಳಾಗಿರಬೇಕು. ಹೀಗೆಯೇ ಮಂಗಳವಾಡದ ನೆರೆಯ ಮಾಸನೂರ ಹೊಳೆಯಲ್ಲಿ ಸುರಿಗೆಯನ್ನು ಹಾಕಿ ಬಿಜ್ಜಳನಿಗೆ ರೇವಣಸಿದ್ಧೇಶ್ವರರು ಖಡ್ಗವನ್ನು ದಯಪಾಲಿಸಿದ ಪವಾಡದ ಹಿನ್ನೆಲೆಯಲ್ಲಿ ಐತಿಹಾಸಿಕ ಸತ್ಯವಿರುವಂತೆ ತೋರುತ್ತದೆ. ಅದು ಏನಿದ್ದರೂ, ಲೋಕಕ್ಕೆ ಮರುಳರಂತಿದ್ದ ರೇವಣಸಿದ್ಧೇಶ್ವರರು ಎಷ್ಟೊಂದು ಪ್ರಭಾವಶಾಲಿಯಾಗಿದ್ದರೆಂಬುದನ್ನು ವಿದಿತಪಡಿಸುವುದೇ ಪ್ರಸ್ತುತವಾದುದು. ಅವರು ಮಹಾಕರ್ತೃತ್ವಶಾಲಿಗಳೂ ಪರಮತಪಸ್ವಿಗಳೂ ಆಗಿದ್ದರೆಂಬುದನ್ನು ಮರೆಯುವಂತಿಲ್ಲ. ಇದರಂತೆಯೇ ಲೋಕದೃಷ್ಟಿಯಲ್ಲಿ ಹುಚ್ಚು ಹುಚ್ಚಾಗಿ ಕಾಣುತ್ತಿದ್ದ ಈ ವಿರಕ್ತರೂ ತಪೋನಿಧಿಗಳಾಗಿ, ಶಿವ

1. ನೂ.ವಿ.ಕಾ. ೩-೨೨.

ಯೋಗಿಗಳಾಗಿ, ಲಿಂಗಾಂಗಸಮರಸರಾಗಿ, ಕರ್ತೃತ್ವಶಾಲಿಗಳಾಗಿ ಆ ಕಾಲದಲ್ಲಿ ನಡೆದ ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ನವೋದಯಕ್ಕೆ ಪ್ರೇರಕರಾಗಿರಬೇಕು, ಕಾರಣ ಪುರುಷರಾಗಿರಬೇಕು.

ವಿರೂಪಾಕ್ಷ ಪಂಡಿತನು,

ಸುರಪನ ನಿಮಿತ್ತದಿಂದಿಳೆಯೊಳಗೆ ನೂರೊಂದು
ವರ ಗಣೇಶ್ವರರುದಿಸಿ ಜಂಗಮಸ್ಥಲವಾಂತು
ಪರಮುಷಟ್ಸ್ಥಲವನುದ್ಧರಿಸಿ
ಬಳಿಕವರಿರದೆ ನಿರವಯುವನೈದಲೀಗ ||
(ಚೆ. ಬ. ಪು. ೬೩-೪೨)

ಎಂದು ಹೇಳುತ್ತಾನೆ. ಆತನ ಅಭಿಮತದಂತೆ ನೂರೊಂದು ವಿರಕ್ತರು ಜಂಗಮಸ್ಥಲವನ್ನು ಹೊಂದಿ, ಷಟ್ಸ್ಥಲವನ್ನು ಉದ್ಧಾರ ಮಾಡಿದ ಮಹಾನುಭಾವರು. ಹಿಂದೆ ಬಸವಾದಿ ಪ್ರಮಥರ ಕಾಲದಲ್ಲಿ ಚೆನ್ನಬಸವಣ್ಣನವರು ಷಟ್ಸ್ಥಲವನ್ನು ಉದ್ಧರಿಸಿದರು[1]. ಮುಂದೆ 'ಕಲ್ಯಾಣ ಮಂಡಲದ ಶಿವಭಕ್ತರ ಸಂತಾನವೆನಿಸಿದ' ಈ ನೂರೊಂದು ವಿರಕ್ತರು 'ಷಡುಸ್ಥಲವನುದ್ಧರಿಸಿರುವರು.' ಇದೇ ಅವರ ಘನತೆಗೆ ಸಾಕ್ಷಿ.

ನೂರೊಂದು ವಿರಕ್ತರು ಷಡುಸ್ಥಳವನುದ್ಧರಿಸಿದ ಅಲ್ಪಾವಧಿಯಲ್ಲಿಯೇ ಮತ್ತೆ ವೀರಶೈವದಲ್ಲಿ ಸ್ವಲ್ಪ ಶೈಥಿಲ್ಯವುಂಟಾದಂತೆ ತೋರುತ್ತದೆ. ಆಗ 'ಏಳುನೂರಾ ಒಂದು' ವಿರತರು ಉದಯವಾಗಿ ಷಡುಸ್ಥಲವನುದ್ಧರಿಸಿದರೆಂದು ಚೆನ್ನಬಸವ ಪುರಾಣದಲ್ಲಿ ಹೇಳಿದೆ:

ಸುರಪನ ನಿಮಿತ್ತದಿಂದಿಳೆಯೊಳಗೆ ನೂರೊಂದು
ವರಗಣೇಶ್ವರರುಧಿಸಿ ಜಂಗಮಸ್ಥಲವಾಂತು
ಪರಮುದಿಷಟ್ಸ್ಥಲವನುದ್ಧರಿಸಿ ಬಳಿಕವರಿರದೆ
ನಿರವಯವನೈದಲೀಗ
ಧರೆಯೊಳಗೆ ವೀರಶೈವಾಚಾರವಡಗಿತ್ತು
ಕರುಣದಿಂ ನೀವೆ ಚಿತ್ತೈಸಿ ಷಟ್ಸ್ಥಲವನು-
ದ್ಧರಿಸೆಂದು ನಾರದಂ ಬಿನ್ನವಿಸಲೀಶಂ
ನಿರಂಜಗಣೇಶನೊಡನೆ ||
ವರಗಣೇಶ್ವರರನೇಳ್ನೂರ್ವರಂ ಕೂಡಿಕೊಂ-
ಡಿರದೆ ಭೂಮಿಯೊಳುದಿಸಿ ಜಂಗಮಸ್ಥಲವಾಂತು
ಪರಮ ಷಟ್ಸ್ಥಲವನುದ್ಧರಿಸೆಂದು ಕಳುಹಲು[2]

ಏಳುನೂರು ವಿರತರು ಭೂಮಿಗೆ ಅವತರಿಸಿದರು.

ಏಳುನೂರು ವಿರತರಿಗೂ ಏಳುನೂರೆಪ್ಪತ್ತು ಅಮರಗಣಗಳಿಗೂ ಏನಾದರೂ ಸಂಬಂಧವಿರಬಹುದೇ ಎಂಬ ಸಂದೇಹ ಹಲವರಿಗೆ ತಲೆದೋರಬಹುದು. ಆದರೆ ವಸ್ತುಸ್ಥಿತಿಯನ್ನವಲೋಕಿಸಿದರೆ ಅವರಿಗೂ ಇವರಿಗೂ ಸಂಖ್ಯಾಸಾಮೀಪ್ಯದ ಹೊರತು ಐತಿಹಾಸಿಕವಾಗಿ ಬೇರೆ ಯಾವ ಸಂಬಂಧವೂ ಇರುವುದಿಲ್ಲ. ಏಳುನೂರೆಪ್ಪತ್ತು ಅಮರಗಣಂಗಳಿದ್ದುದು ಬಸವಾದಿ ಪ್ರಮಥರ ಕಾಲದಲ್ಲಿ ಎಂದು ಹಲವು ಗ್ರಂಥಗಳಿಂದ ತಿಳಿದು ಬರುತ್ತದೆ. ತೋಂಟದ ಸಿದ್ಧಲಿಂಗ ಶಿವಯೋಗಿಗಳು ತಮ್ಮೊಂದು ವಚನದಲ್ಲಿ "ಬಸವ ಚೆನ್ನಬಸವ ಪ್ರಭುದೇವರೇ ಮುಖ್ಯವಾದ ಏಳುನೂರು ಎಪ್ಪತ್ತು ಅಮರಗಣಂಗಳು ಎಲ್ಲರೂ...." ಎಂದು ನುಡಿದಿರುವರು. ಇದರಿಂದ ಏಳುನೂರೆಪ್ಪತ್ತು ಅಮರಗಣಂಗಳಲ್ಲಿ ಬಸ

---

1. ಷಡುಸ್ಥಲವನುದ್ಧಾರಿಸಿದ ಗುರು ಚೆನ್ನಸಂಗನಬಸವ ಶರಣಾರ್ಥಿ—೧, ೩.
2. ಚೆ.ಬ.ಪು. ಸಂ, ೬೩, ಪ, ೪೩-೪೪.

ವಣ್ಣ, ಚೆನ್ನಬಸವಣ್ಣ, ಪ್ರಭುದೇವರು ಮುಖ್ಯ ರಾದವರೆಂದೂ ಅವರೆಲ್ಲರೂ ಬಸವಣ್ಣನವರ ಸಮಕಾಲೀನರೆಂದೂ ಅರ್ಥ ಮಾಡಬಹುದಾಗಿದೆ ಶಿವಗಣಪ್ರಸಾದಿ ಮಹಾದೇವಯ್ಯನವರ ಶೂನ್ಯ ಸಂಪಾದನೆಯಲ್ಲಿ ಬರುವ ಒಂದು ಉದ್ಧರಣೆಯು ಈ ಮಾತಿಗೆ ಪುಷ್ಟಿಯನ್ನು ಕೊಡುತ್ತದೆ. "ಇಂತು ಬಸವರಾಜದೇವರು ಮಹಾಗಣಂಗಳ ಕೈಯಲು ಬೀಳುಕೊಂಡು ತಮ್ಮ ಗೃಹೋಪಕರಣಂಗಳಂ ಲಿಂಗಜಂಗಮಕ್ಕೆ ಸೂಱೆಗೊಟ್ಟು ಯೇಳುನೂಱ ಯೆಪ್ಪತ್ತು ಮಹಾಗಣಂಗಳಿಗೆ ನಿಜಪದ ಪ್ರಾಪ್ತಿಯಂ ನಿರೂಪಿಸಿ ಕಳುಹಿ.... ಕಪ್ಪಡಿ ಸಂಗಮನಾಥನ ಶ್ರೀಪಾದ ಸಮೀಪಕ್ಕೆ ಬಿನ್ನಪಂ ಗೆಯ್ದ ಪ್ರಸ್ತಾಪದ ವಚನ." 2 ಇಲ್ಲಿ ಮಹಾ ದೇವಯ್ಯನವರು ಏಳುನೂರಾ ಎಪ್ಪತ್ತು ಮಹಾ ಗಣಂಗಳನ್ನು ಸಂಬೋಧಿಸಿರುವರು. ಪ್ರಾಯಶಃ 'ಅಮರ ಗಣಂಗಳು' ಎನ್ನುವುದಕ್ಕೆ 'ಮಹಾ ಗಣಂ ಗಳು" ಎಂಬುದು ಪರ್ಯಾಯಪದವಾಗಿರಬೇಕು.

ವೀರಶೈವ ಮತಚರಿತ್ರೆಯಲ್ಲಿ ಈ ನೂರೊಂದು ವಿರಕ್ತರ ಪರಿಚಯವು ಅರುವತ್ತು ಮೂವರ, ಹಾಗೂ ಅಮರ ಗಣಂಗಳ ಪರಿಚಯ ದಷ್ಟೆ ಮಹತ್ವದ್ದೆನ್ನುವುದು ಇಲ್ಲಿ ಗಮನಾರ್ಹ ವಾಗಿದೆ.

ಆರ್. ಸಿ. ಹಿರೇಮಠ

# ತತ್ಕೂರ್ವರ್ಮೆ ಅರ್ಥವಿಚಾರ ಮತ್ತು ನಿಷ್ಪತ್ತಿ

ಹಳಗನ್ನಡ ಕಾವ್ಯಗಳಲ್ಲಿಯೂ ಹಸ್ತಪ್ರತಿಗಳಲ್ಲಿಯೂ ತತ್ಕೂರ್ವರ್ಮೆ, ತರ್ಕೂರ್ವರ್ಮೆ ಎಂಬೆರಡು ರೂಪಗಳಲ್ಲಿ ದೊರೆಯುವ ಒಂದು ಶಬ್ದಕ್ಕೆ ಹಲವು ಪ್ರಯೋಗಗಳು ದೊರೆಯುತ್ತವೆ. ಇವೆರಡರಲ್ಲಿ ಯಾವುದು ಪರಿಶುದ್ಧ ರೂಪವೆಂಬುದನ್ನೂ ಅದರ ಅರ್ಥವನ್ನೂ ವಿಚಾರ ಮಾಡುವುದು ಈ ಲೇಖನದ ಉದ್ದೇಶ. ಇದಕ್ಕಾಗಿ ಹಲವು ಕವಿಪ್ರಯೋಗಗಳನ್ನು, ಶಾಸನಗಳಲ್ಲಿಯೂ ಸಾಹಿತ್ಯದಲ್ಲೂ ದೊರೆಯುವವನ್ನು, ಪರಿಶೀಲಿಸಬೇಕಾಗುತ್ತದೆ.

ನಾಗಚಂದ್ರನ 'ಮಲ್ಲಿನಾಥಪುರಾಣ'ದಲ್ಲಿ ಈ ಕೆಳಗೆ ಕಾಣಿಸಿರುವ ಪದ್ಯವಿದೆ.

1) ಕ್ಷಣಿಕಂ ಪೋಗೆರಡಿಲ್ಲದೆನ್ನೊಲವಿನೊಳ್
ತತ್ಕೂರ್ವರ್ಮೆಗೆಟ್ಟೆನ್ನವೋ
ಗಣಕೆಯ್ಯಂ ಕಳೆದಂ ದಿನೇಶನ
ಪರಾಶಾಸಕ್ತನೆಂದಂದು ಬಂ
ಬಳ ಬಾಡಿರ್ದು ಜಿನುಂಗುವಂತೆ
ನಿಜಗಂಧಾಸಕ್ತಭೃಂಗೀಕಳ
ಕ್ವಣಿತಂ ಕೈಮಿಗೆ ಸಂಜೆಯೊಳ್
ಸರಸಿಜಂ ತಾಳ್ದತ್ತು ಸಂಕೋಚಮಂ ||
(೭-೭)

ಈ ಪದ್ಯಕ್ಕೆ ಟಿಪ್ಪಣಿಯನ್ನು ಬರೆಯುತ್ತ ಗ್ರಂಥದ ಸಂಪಾದಕರಾದ ಎಂ. ಎ. ರಾಮಾನುಜಯ್ಯಂಗಾರ್ಯರು ಕೆಲವು ಪ್ರಯೋಗಗಳನ್ನು ಕಾಣಿಸಿದ್ದಾರೆ; ಅವು ಹೀಗಿವೆ.

2) ಕಲಿಯುಂ ಚಾಗಿಯುಮಿನ್ನರಾರ್
ಮನುಕುಲರ್ ಮುನ್ನಾದರೆಂಬನ್ನೆಗಂ
ನೆಲನುಂ ನೇಸಱುಮುಳ್ಳಿನಂ ನಿಲಿಸಿದಂ
ತತ್ಕೂರ್ವರ್ಮೆಯಂ ಪೆರ್ಮೆಯಂ
ಕುಲ ನಿಸ್ತ್ರಾಕನೇಕ ಕುಂಡಲಂ....
(ಪಂ. ರಾ. ಆ. ೬-೧೭೧)

3) ನಿನಗೆಱಗದಿಂದ್ರನಂ ಗೆಲ್ದು ನಿನ್ನ ಭುಜಬಲದ ಮಹಿಮೆಯಂ ಬೀಱಿದೆ ಜೀ| ಯೆನಿಸಾತನ ಸೆಱೆಯಂ ಬಿಟ್ಟು ನಿನ್ನ ತತ್ಕೂರ್ವರ್ಮೆ ಬಣ್ಣಿಸಲ್ಬಾರದೆನಲ್ || (ಪಂ.ರಾ.ಆ ೧೦-೨೧೨)

4) ಕ್ರಮಮುಂ ವಿಕ್ರಮದಿಂದೆ ತಾಳ್ದುವಮಗಂ ಗಾಂಗೇಯನಿರ್ದಂತೆ ನೋಡ ಮರುಳ್ ಶಂತನು ತನ್ನದೊಂದು ಸವಿಗಂ ಸೋಲಕ್ಕಮಿತ್ತಂ ನಿಜಕ್ರಮಮುಮಂ ತನ್ನಯ ಬೇಟದಾಕೆಯ ಮಗಂಗೆಂದೊಂದಪಖ್ಯಾತಿಲೋಕಮನಾವರ್ಜಿಸೆ ಬರ್ದೊಡೆನ್ನ ಕುಲಮುಂ ತತ್ಕೂರ್ವರ್ಮೆಯುಂ ಮಾಸದೇ ||
(ಪಂಪ ಭಾರತ ೧-೬೯)

ದುರ್ಗಸಿಂಹನ 'ಪಂಚತಂತ್ರ'ದಲ್ಲಿ ಈ ಕೆಳಗೆ ಬರೆದಿರುವ ವಾಕ್ಯ ದೊರೆಯುತ್ತದೆ :

5) "ಆದೞಿಂ ಸಂಜೀವಕನೊಳಾದ ವಿಶ್ವಾಸಂ ದೋಷಮಲ್ಲೆನೆ ಮತ್ತಂ ದಮನಕನಿಂತೆಂದಂ:—ಸಂಜೀವಕನ ತತ್ಕೂರ್ವರ್ಮೆಯನಿನ್ನೇವೇೞ್ವೆಂ ಕ್ಷತ್ರಿಯಧರ್ಮವರ್ತಿಯಪ್ಪ ನಿನಗೆ ಯತಿಧರ್ಮಮಂ ಪತ್ತಿಸಿದಂ ನೀನುಮದೞಿಂತೆ ಕೆಲವು ದಿನಕ್ಕೆ ಪುಲ್ಲಂ ತಿಂದು ಪಶುತ್ವಂ ಪೊರ್ದದಿರೆ, ಎಂತುಂ"
(ಪುಟ. ೧೧೪)

ಮೇಲಿನ ಎಲ್ಲಾ ಪ್ರಯೋಗಗಳಲ್ಲಿಯೂ 'ತತ್ಕೂರ್ವರ್ಮೆ' ಎಂದೇ ಅಚ್ಚಾಗಿರುವುದು ಕಾಣುತ್ತದೆ.

ಮೇಲಿನ ಪ್ರಯೋಗಗಳಲ್ಲಿ ಪಂಪ ರಾಮಾಯಣದ ೧೦–೨೧೨ ರ ಪ್ರಯೋಗಕ್ಕೆ ಕರ್ನಾಟಕ

ಸಾಹಿತ್ಯ ಪರಿಷತ್ತಿನಿಂದ ೧೯೨೧ ರಲ್ಲಿ ಪ್ರಕಟವಾದ ಪರಿಷ್ಕೃತ ಮುದ್ರಣದಲ್ಲಿ 'ತಕ್ಕ್ಯುರ್ಮೆ' ಎಂದು ಪಾಠವನ್ನಿಟ್ಟುಕೊಂಡಿದೆ. ೬-೧೭೧ ರ ಪ್ರಯೋಗಕ್ಕೆ 'ತತ್ಕ್ಯುರ್ಮೆ' ಎಂದು ಮೊದಲು ಅಚ್ಚಾಗಿದ್ದುದಕ್ಕೆ 'ತಕ್ಕ್ಯುರ್ಮೆ' ಎಂದು ತಿದ್ದುಪಡಿಯನ್ನು ಸೂಚಿಸಿದೆ. 'ಮಲ್ಲಿನಾಥ ಪುರಾಣ'ದ ಮತ್ತು 'ಪಂಚ ತಂತ್ರ'ದ ಪರಿಷ್ಕೃತ ಮುದ್ರಣಗಳು ಇದುವರೆಗೂ ಬಂದಿಲ್ಲದಿರುವುದರಿಂದ ಅವುಗಳಲ್ಲಿ 'ತತ್ಕ್ಯುರ್ಮೆ' ಎಂಬ ಪಾಠವೇ ಉಳಿದುಕೊಂಡಿದೆ. 'ಪಂಪ ಭಾರತ'ದ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಪರಿಷ್ಕೃತ ಮುದ್ರಣದಲ್ಲಿ (೧೯೩೭) 'ತ[ಕ್ಕ್ಯು]ರ್ಮೆ' ಎಂಬ ಪಾಠವನ್ನು ಸಂಪಾದಕರು ನಿಯೋಜಿಸಿದ್ದಾರೆ. ಆ ಗ್ರಂಥದ ಪ್ರಥಮ ಮುದ್ರಣದಲ್ಲೂ (ಖ,ಘ) ಪ್ರತಿಗಳಲ್ಲೂ 'ತತ್ಕ್ಯುರ್ಮೆ' ಎಂಬ ಪಾಠವೇ ದೊರೆಯುತ್ತದೆ. 'ಪಂಪ ಭಾರತ'ದ ಹಸ್ತಪ್ರತಿಗಳಲ್ಲಿರುವಂತೆ 'ಪಂಪ ರಾಮಾಯಣ'ದ ಹಸ್ತಪ್ರತಿಗಳಲ್ಲೂ ಕೆಲಕೆಲವೆಡೆ 'ತತ್ಕ್ಯುರ್ಮೆ' ಎಂಬ ಪಾಠವಿರಬೇಕೆಂದು ಹೇಳಬಹುದು ; ಇಲ್ಲದಿದ್ದರೆ ಆ ಆ ಗ್ರಂಥಗಳ ಪ್ರಥಮ ಸಂಪಾದಕರು 'ತತ್ಕ್ಯುರ್ಮೆ' ಎಂದು ಮುದ್ರಿಸಲು ಕಾರಣವಿಲ್ಲ. ಹಸ್ತಪ್ರತಿಗಳಲ್ಲಿರುವಂತೆ ಅವರು ಮುದ್ರಿಸಿದ್ದಾರೆಂದು ಭಾವಿಸಬಹುದು.

ಈಗ 'ತಕ್ಕ್ಯುರ್ಮೆ' ಎಂಬ ಶಬ್ದರೂಪಕ್ಕಿರುವ ಪ್ರಯೋಗಗಳಲ್ಲಿ ಕೆಲವನ್ನು ಗಮನಿಸಬಹುದು:

ಕರ್ಣನ ಮರಣಾನಂತರ ಅವನನ್ನು ತೆಗಳಿ ಮಾತನಾಡಿದ ಅಶ್ವತ್ಥಾಮನನ್ನು ದುರ್ಯೋಧನನು ಮೆಚ್ಚದೆ ಅವನ ಮೇಲೆ ಕೆರಳಿದಾಗ ಅಶ್ವತ್ಥಾಮನು

6) "ಎಂಬುದುಮಿಾ ನುಡಿಯೆ ನಿನ್ನ ಕೂರ್ಮೆಗಂ
ತಕ್ಕ್ಯುರ್ಮೆಗಂ ದೊರೆಯಪ್ಪುದಾದೊಡಮರಾತಿ
ಸೈನ್ಯಮಂ ತವೆ ಕೊಂದಲ್ಲದೆ ನಿನ್ನ ಮೊಗಮಂ
ನೋಡೆನೆಂದು"

ಅಶ್ವತ್ಥಾಮನು ಎದ್ದು ಹೋಗುತ್ತಾನೆ ಇಲ್ಲಿರುವ ತಕ್ಕ್ಯುರ್ಮೆಗೆ ಯಾವ ಪಾಠಾಂತರವೂ ಇಲ್ಲ:

ಮಗಳು, ಅಕ್ಕ, ತಂದೆ, ತಾಯಿ, ತಂಗಿ ಮುಂತಾದ ಈಗಿನ ಬಂಧುಗಳೆಲ್ಲ ಜನ್ಮಾಂತರಗಳಲ್ಲಿ ಬೇರೆ ಬೇರಾಗಿ ಹುಟ್ಟುತ್ತಾರೆಂದಮೇಲೆ

7) ಸಂಸಾರದೊಳ್ ಪೇಸುಗೆಗೆಟ್ಟೀ ನಾಣಪುತ್ತಪ್ಪುಟಿ
ಜಗಳದೊಳೇನಮ್ಮ ತಕ್ಕ್ಯುರ್ಮೆಯುಂಟೇ ?
(ಶಾಂತಿ ಪುರಾಣ ೬-೮೭)

'ಪಂಪ ರಾಮಾಯಣ'ದಲ್ಲಿ 'ತಕ್ಕ್ಯುರ್ಮೆ'ಯ ಪ್ರಯೋಗ ಹಲವು ಬಾರಿ ಬಂದಿದೆ ೬-೧೭೧, ೧೦-೨೧೨, ೧೧-೧೦೯, ೧೪-೧೩ ಗದ್ಯ, ೧೯-೮ ಇವುಗಳಲ್ಲಿ ಕೊನೆಯ ಪ್ರಯೋಗ ಗಮನಾರ್ಹವಾಗಿದೆ.

8) ತಕ್ಕರ ಮಾತಂ ಕೇಳದೆ
ತಕ್ಕ್ಯುರ್ಮೆಯನುಟಿದು ಗುಣವತಿಯಂ ಪಾ ।
ಪಕ್ಕಂಜದೆ ಜಡಮತಿಯಂ
ತಕ್ಕುದೆ ಪೊಗಟಲ್ಕೆ ರಾಮನಂ ನಿರ್ಗುಣನಂ ॥

ಇಲ್ಲಿ 'ತಕ್ಕ್ಯುರ್ಮೆ' ಎಂಬುದರ ಎರಡನೆಯ ಅಕ್ಷರ ಕಕಾರ ದ್ವಿತ್ವದ ಪ್ರಾಸದಲ್ಲಿ ಕಂಡು ಬರುವುದು ಅತ್ಯಂತ ಮುಖ್ಯವಾದುದ್ದು. ಈ ಶಬ್ದದ ರೂಪ 'ತತ್ಕ್ಯುರ್ಮೆ'ಯಲ್ಲ, 'ತಕ್ಕ್ಯುರ್ಮೆ' ಎಂಬುದನ್ನು ಇದು ಸ್ಥಾಪಿಸುತ್ತದೆ.

ಕನ್ನಡ ಶಾಸನಗಳಲ್ಲಿ ಈ ಶಬ್ದ ಹಲವು ಸಲ ಪ್ರಯುಕ್ತವಾಗಿದೆ. ಇಲ್ಲಿ ಪಾಠ ಕೆಟ್ಟು ಹೋಗುವ ಸಂಭವವು ಬಲು ಕಡಮೆ. ಶಾಸನ ಸಾಹಿತ್ಯ ರಚಕನು ಲಿಖಿಸಿದಂತೆ ಕಲ್ಲ ಮೇಲಿನ ಕಂಡರಣೆ ಇರುವುದರಿಂದ ಪಾಠಾಂತರಗಳಿಗೆ

ಅವಕಾಶ ಕಡಮೆಯಾಗಿರುತ್ತದೆ. ಒಂದೆರಡು ಕೈಗಳನ್ನು ದಾಟಿ ಶಾಸನದ ಒಕ್ಕಣೆ ಆಗಿರುವುದರಿಂದ ಅದರಲ್ಲಿ ಪರಂಪರಾಗತ ಹಸ್ತಪ್ರತಿಗಳಲ್ಲಿರುವಷ್ಟು ಪಾಠದೋಷಗಳು ಇರಲಾರವು. ಈ ದೃಷ್ಟಿಯಿಂದ ಶಾಸನಗಳ ಪಾಠ ಪರಿಗ್ರಾಹ್ಯ. ಈಗ 'ತಕ್ಕೂರ್ಮೆ'ಗೆ ಎರಡು ಶಾಸನ ಪ್ರಯೋಗಗಳನ್ನು ನೋಡಬಹುದು. ಕ್ರಿ ಶ. ೧೧೪೭ ರಲ್ಲಿ ಲಿಖಿತವಾದ ಶಾಸನವೊಂದರಲ್ಲಿ (South Indian Inscriptions, XV, 32-7) ಈ ಕೆಳಗಣ ಪದ್ಯವಿದೆ.

9) ಬರ್ಮಣದಂಡನಾಥನ ಮಹೋನ್ನತಿಯಂ
ಧೃತಿಯಂ ಚರಿತ್ರಮಂ
ಪೆರ್ಮೆಯನೀಗಳೆಯ್ದೆ ಪರಿಭಾವಿಸಿ ನೋಳ್ಪಡೆ
ಮೇಲೆನಿಪ್ಪನಾ
ಧರ್ಮತನೂಭವಂಗೆನುತೆ ಬಣ್ಣಿಪುದೀ
ಜಗಮೆಲ್ಲಮೊಲ್ದು ತ
ಕ್ಕೂರ್ಮೆಯಿನೆಂದೊಡೇಪೊಗಳ್ವೆನಿಂ ಪೊಗಳ್ವೆಂ
ಬುಧಕಲ್ಪವೃಕ್ಷನಂ ||

ಕ್ರಿ. ಶ. ೧೧೮೭ ರಲ್ಲಿ ರಚಿತವಾದ ಕುರ್ತಕೋಟೆಯ ಶಾಸನವೊಂದರಲ್ಲಿ (South Indian Inscriptions, XI-ii, 133-24) ಈ ಕೆಳಗಿನ ವೃತ್ತ ಕಾಣುತ್ತದೆ.

10) ಧರ್ಮ್ಮದ ದಾನದಾರ್ಪಿನ ತವರ್ಮ್ಮನೆ
ಸರ್ವ್ವಜನೋಪಕಾರಿತ
ಕ್ಕೂರ್ಮ್ಮೆಯ ಜನ್ಮಭೂಮಿ ಸುಭಟಾಗ್ರಣಿ
ಮೋರಿಯವಂಶಮಣ್ಡನಂ
ನಿರ್ಮ್ಮಳಮೊಪ್ಪುತಿರ್ಪ ತಿಳಕಂ ಸಲೆ
ಭಾವಿಸೆ ಗುಚ್ಚಗೇತನಿಂ
ಧಾರ್ಮ್ಮಿಕರಾರು ಮತ್ತುಳಿದರೆಂಬುದು
ವಾರ್ದ್ಧಿಪರೀತ ಭೂತಳಂ ||

ಮೇಲೆ ಕಾಣಿಸಿರುವ 8, 9, 10 ನೆಯ ಪದ್ಯಗಳಿಂದ 'ತಕ್ಕೂರ್ಮ್ಮೆ' ಯೆಂಬುದು ಶುದ್ಧವಾದ ರೂಪವೆಂದು ಖಚಿತವಾಗುತ್ತದೆ. 'ತತ್ಕೂರ್ಮೆ' ಎಂಬುದನ್ನು ತತ್ + ಕೂರ್ಮೆ ಎಂದು ಬಿಡಿಸಬೇಕಾಗುತ್ತದೆ. ಆಗ ತತ್ ಎಂಬುದು ಸಂಸ್ಕೃತದ ಸರ್ವನಾಮ ಶಬ್ದವಾಗುತ್ತದೆ. ಇಂಥ ಶಬ್ದವೊಂದು ಅಚ್ಚಗನ್ನಡ ಶಬ್ದವೊಂದರೊಡನೆ ಸೇರಿ ಸಂಧಿಯೋ ಸಮಾಸವೋ ಆಗಿರುವುದಕ್ಕೆ ಬೇರೆ ಉದಾಹರಣೆಗಳು ನಮಗೆ ದೊರೆತಿಲ್ಲ. ಆದ್ದರಿಂದ 'ತತ್ಕೂರ್ಮೆ' ಎಂಬ ರೂಪವನ್ನು ಅಶುದ್ಧವೆಂದು ಭಾವಿಸಬೇಕಾಗುತ್ತದೆ.

'ತಕ್ಕೂರ್ಮೆ' ಎಂಬುದರ ಅರ್ಥವನ್ನು ಈಗ ವಿಚಾರ ಮಾಡುವುದಕ್ಕೆ ತೊಡಗಬಹುದು. ಎಂ. ಎ. ರಾಮಾನುಜಯ್ಯಂಗಾರ್ಯರು ಇದಕ್ಕೆ ಅರ್ಥವೇನನ್ನೂ ಸೂಚಿಸಿಲ್ಲ. 'ಶಾಂತಿಪುರಾಣ'ದ ಸಂಪಾದಕರೂ ಇದರ ಅರ್ಥವನ್ನು ಹೇಳಿಲ್ಲ. 'ಪಂಪ ರಾಮಾಯಣ'ದ ಮತ್ತು 'ಪಂಪಭಾರತ'ದ ಸಂಪಾದಕರುಗಳು ಆ ಆ ಗ್ರಂಥದ ಕೋಶದಲ್ಲಿ ಇದರ ಅರ್ಥವನ್ನು 'ಯೋಗ್ಯತೆ' ಎಂದು ಸೂಚಿಸಿದ್ದಾರೆ. 'ತಕ್ಕು' ಎಂದರೆ, ಯೋಗ್ಯತೆ, ಅರ್ಹತೆ ಎಂಬೀ ಅರ್ಥಗಳು ಪ್ರಸಿದ್ಧವಾಗಿಯೇ ಇವೆ. ಆದ್ದರಿಂದ 'ತಕ್ಕೂರ್ಮೆ' ಎಂದು ಹೇಳಬೇಕಾದ ಅವಶ್ಯಕತೆ ಇರುವುದಿಲ್ಲ. ಇದರಲ್ಲಿ ಇನ್ನೂ ಏನೋ ವಿಶೇಷವಿರಬೇಕು. ಈ ಶಬ್ದವನ್ನು ತಕ್ಕು+ ಕೂರ್ಮೆ ಎಂದು ಬಿಡಿಸಿದರೆ ತಕ್ಕಿನ ಕೂರ್ಮೆ ಎಂದಾಗಿ (ಎಂದರೆ ಯೋಗ್ಯತೆಯ ಪ್ರೀತಿ) ಅರ್ಥ ಸ್ಪಷ್ಟತೆಯುಂಟಾಗುವುದಿಲ್ಲ. ಅಲ್ಲದೆ ತಕ್ಕು ಗೂರ್ಮೆ ಎಂಬ ಸಮಾಸರೂಪವಾಗಬೇಕು. ಇಂಥ ರೂಪವಿತ್ತೆಂದು ಹೇಳಲು ನಮಗೆ ಆಧಾರ ಸಿಕ್ಕಿಲ್ಲ. 'ತಕ್ಕು, ಕೂರ್ಮೆ' ಎಂಬೆರಡು ಶಬ್ದಗಳನ್ನು ಸೇರಿಸಿ ಉಚ್ಚರಿಸುವಾಗ ಸದೃಶಾಕ್ಷರ ಲೋಪ (Haplology) ನಿಯಮದ ಪ್ರಕಾರ ಒಂದು 'ಕ' ನಷ್ಟವಾಗಿದೆಯೆಂದು ಹೇಳಬಹುದೆ?

ಹೀಗಾಗಿರುವುದು ಸ್ವಲ್ಪ ಅಸಂಭವವೆಂದು ತೋರುತ್ತದೆ. ಶಬ್ದದ ಉಚ್ಚಾರಣೆಯ ದೃಷ್ಟಿಯಿಂದ ಇದು ಸಂಭವವೆಂದು ಕಾಣುವುದಾದರೂ ಅರ್ಥದ ದೃಷ್ಟಿಯಿಂದ (=ಯೋಗ್ಯತೆಯ ಪ್ರೀತಿ) ಹಿಂದೆ ಸೂಚಿಸಿದ ಅಸ್ಪಷ್ಟತೆಯೇ ಉಳಿಯುತ್ತದೆ. ಈ ಶಬ್ದವನ್ನು ಬೇರೊಂದು ರೀತಿಯಲ್ಲಿ ಬಿಡಿಸಬಹುದು. ತಕ್ಕ+ಊರ್ಮೆ ಎಂದು ಬಿಡಿಸಿದರೆ ಸಂಧಿಯಾಗುವಾಗ ಪೂರ್ವಪದಾಂತ್ಯಸ್ವರ ಲೋಪವಾಗಿ 'ತಕ್ಕೂರ್ಮೆ' ಎಂದು ಸಹಜವಾಗಿಯೇ ರೂಪಸಿದ್ಧಿಯಾಗುತ್ತದೆ. ಹೀಗಾದರೆ 'ಊರ್ಮೆ' ಎಂಬುದಕ್ಕೆ ಅರ್ಥವೇನು? ಇಂಥ ಒಂದು ಶಬ್ದವಿದ್ದಿತೆಂಬುದಕ್ಕೆ ಈ ಕೆಳಗಿನ ಪ್ರಯೋಗಗಳು ಸಾಕ್ಷಿಗಳಾಗಿವೆ.

1) ಸೊಗಯಿಪ ತಮ್ಮ ಜವ್ವನದ
ತಮ್ಮ ವಿಭೂತಿಯ ತಮ್ಮ ತಮ್ಮ ಚೆ
ಲ್ವುಗಳ ವಿಲಾಸ ದುರ್ಮೆಗಳೊಳಾವೆವೆ
ಗಾಗಿಪೆವೆಂದು ಬಂದ ಚೆ
ನ್ನಿಗರುಮನಾಸೆಕಾಱರುಮನೊಲ್ಲದೆ
ಚೆಲ್ವಿಡಿದಿರ್ದ ರೂಪು ದೃ
ಷ್ಟಿಗೆವರೆ ಪಾಂಡುರಾಜನನೆ ಕೊಂತಿ
ಮನಂಬುಗೆ ಮಾಲೆಸೂಡಿದಳ್ ||
(ಪಂಪ ಭಾರತ. ೧-೧೧೬)

ಇಲ್ಲಿ ಬರುವ 'ವಿಲಾಸದುರ್ಮೆಗಳೊಳ್' ಎಂಬಲ್ಲಿ ವಿಲಾಸದ+ಉರ್ಮೆಗಳೊಳ್ ಎಂಬೆಡೆ 'ಉರ್ಮೆ' ಎಂಬ ಶಬ್ದ ಕಾಣುತ್ತದೆ. ಇದಕ್ಕೆ ಪೇರ್ಮೆ (ಕ), ಪಿರ್ಮೆ (ಖ ಎಂಬೆರಡು ಪಾಠಾಂತರಗಳಿದ್ದರೂ ವಸ್ತುತಃ ಅವನ್ನು 'ಪೆರ್ಮೆ' ಎಂಬ ಒಂದೇ ಪಾಠಾಂತರವಾಗಿ ಪರಿಗಣಿಸಬಹುದು. ಇದನ್ನು ಇಟ್ಟುಕೊಂಡರೆ 'ವಿಲಾಸ ಪೆರ್ಮೆಗಳೊಳ್' ಎಂದಾಗುತ್ತದೆ. ಆದರೆ 'ವಿಲಾಸ ಪೆರ್ಮೆ' ಎಂಬ ಅರಿಸಮಾಸವುಂಟಾಗುತ್ತದೆ. ಇದು ದೋಷ, ಆದ್ದರಿಂದ ತ್ಯಾಜ್ಯ. ಇದನ್ನು ಬಿಟ್ಟು 'ವಿಲಾಸದೂರ್ಮೆಗಳೊಳ್' ಎಂದು ಪಾಠವನ್ನು ಪರಿಷ್ಕರಿಸಿಕೊಳ್ಳಬಹುದು. 'ಊರ್ಮೆ' ಶಬ್ದದ ಅಸ್ತಿತ್ವ "ಊರ್ಮೆ ಜೋಗವ್ವೆಯ ವಂಶದೊಳ್ ಪೆಣ್ಗೂಸುಗಳಲ್ಲದೆ ಗಣ್ಡುಗೂಸುಗಳ ವಂಶಕ್ಕಧಿಕಾರಮುಲ್ಲದೆ ಸಲ್ಲದು" ಎಂಬ ಶಾಸನ ವೊಂದರ ವಾಕ್ಯದಿಂದ (Epigraphia Indica XXIX, p 208) ತಿಳಿದುಬರುತ್ತದೆ. ಇದು ಹತ್ತನೆಯ ಶತಮಾನದ ತಳಂಗೆಱೆಯ ಶಾಸನ. ಊಱು=ಒಸರು, ಚಿಮ್ಮು (ಅತಿಶಯವಾಗು, ಹೆಚ್ಚಾಗು) ಎಂಬ ಧಾತುಗೆ –ಮೆ ಪ್ರತ್ಯಯ ಸೇರುವುದರಿಂದ 'ಊರ್ಮೆ' ಎಂಬ ಭಾವನಾಮವಾಗಿದೆ. ಅರ್ಥ ಅತಿಶಯ, ಆಧಿಕ್ಯ ಎಂದು. ನೀರು ಊಟೆಯಿಂದ ಮೇಲಕ್ಕೆ ಚಿಮ್ಮುವ ಹಾಗೆ ಎಂದರೆ ಅತಿಶಯವಾಗುವ ಹಾಗೆ. 'ಊರ್ಮೆ ಜೋಗವ್ವೆಯ' ಎಂದರೆ ಅತಿಶಯಳಾದ, ಶ್ರೇಷ್ಠಳಾದ ಜೋಗವ್ವೆಯ ಎಂದು ಅರ್ಥಮಾಡಬಹುದು. 'ವಿಲಾಸದೂರ್ಮೆಗಳೊಳ್' ವಿಲಾಸದ ಅತಿಶಯದಲ್ಲಿ ಆಧಿಕ್ಯದಲ್ಲಿ ಎಂಬಲ್ಲಿಯೂ ಈ ಅರ್ಥ ಸಂಗತವಾಗುತ್ತದೆ. ಆದ್ದರಿಂದ 'ತಕ್ಕೂರ್ಮೆ' ಎಂದರೆ ಯೋಗ್ಯತೆಯ ಅತಿಶಯ, ಅತಿಶಯವಾದ ಯೋಗ್ಯತೆ ಎಂದರ್ಥವಾಗುತ್ತದೆ. ಒಟ್ಟನಲ್ಲಿ 'ತಕ್ಕೂರ್ಮೆ' ಎಂಬುದನ್ನು ತಕ್ಕ+ಊರ್ಮೆ ಎಂದು ಬಿಡಿಸಬೇಕು. ಅರ್ಥ ಯೋಗ್ಯತಾತಿಶಯ, ಅಧಿಕ ಯೋಗ್ಯತೆ. ಈ ಅರ್ಥ ಎಲ್ಲಾ ಪ್ರಯೋಗಗಳ ವಿಷಯದಲ್ಲೂ ಸಮಂಜಸವಾಗಿದೆ.

ಡಿ. ಎಲ್. ನರಸಿಂಹಾಚಾರ್

---

# ಹರಿಹರ ಕವಿಯ ಕೃತಿಗಳಲ್ಲಿ ಆತ್ಮಕಥನ

ವೀರಶೈವ ಪುರಾಣಗಳಲ್ಲಿ ಬರುವ ಹರಿಹರ ಕವಿಯ ಜೀವನ ಚರಿತ್ರೆ ಸ್ಥೂಲವಾಗಿ ಹೀಗಿದೆ. ಹಂಪೆಯ ವಿರೂಪಾಕ್ಷನ ಭಕ್ತರಾದ ಮಹದೇವ ಭಟ್ಟ, ಶರ್ವಾಣಿಯರೆಂಬ ಸಾತ್ವಿಕ ದಂಪತಿಗಳ ಸುಕುಮಾರ ಹರಿಹರ. ಆತನ ತಂಗಿ ರುದ್ರಾಣಿ. ಈಕೆ ಹಂಪೆಯಲ್ಲಿದ್ದ ಶಿವಭಕ್ತನೊಬ್ಬನ ಕೈಹಿಡಿದು, ಚಿಕ್ಕಕವಿ ರಾಘವಾಂಕನ ತಾಯಿಯೆನಿಸಿದಳು. ಹರಿಹರನು ಮಾಯಿದೇವನೆಂಬ ಗುರುವಿನಲ್ಲಿ ವಿದ್ಯಾಭ್ಯಾಸ ಮಾಡಿ ಗಣಿತಶಾಸ್ತ್ರದಲ್ಲಿ ಪಾರಂಗತನಾದನು. ಹೊಟ್ಟೆಯ ಪಾಡಿಗಾಗಿ ಈತನು ದ್ವಾರಸಮುದ್ರದ ಹೊಯ್ಸಳರಾಜ ನರಸಿಂಹ ಬಲ್ಲಾಳನಲ್ಲಿ ಕರಣಿಕ ವೃತ್ತಿಯನ್ನು ಕೈಕೊಂಡನು. ಕರಣಿಕನಾದ ಆತ ಕಾರಣ ಪುರುಷನಾಗುವ ಸನ್ನಿವೇಶವೊಂದು ಒದಗಿಬಂತು. ಒಂದು ದಿನ ಆತ ತನ್ನ ಕಾರ್ಯನಿರತನಾಗಿದ್ದವನು ಇದ್ದಕ್ಕಿದ್ದಂತೆಯೇ ಲೇಖನಿಯನ್ನು ಕೆಳಗಿಟ್ಟು ಅಂಗೈಗಳನ್ನು ಉಜ್ಜಿಕೊಳ್ಳುತ್ತಾ ಕುಳಿತನು. ಇದನ್ನು ಕಂಡು ಕುತೂಹಲಗೊಂಡ ರಾಜನು ಅದಕ್ಕೆ ಕಾರಣವೇನೆಂದು ಕೇಳಲು, ಹಂಪೆಯ ವಿರೂಪಾಕ್ಷನ ಗುಡಿಯಲ್ಲಿ ಮೇಲುಕಟ್ಟಿನ ಬಟ್ಟೆಗೆ ಹತ್ತಿದ್ದ ಉರಿಯನ್ನು ಆರಿಸಿದುದಾಗಿ ಉತ್ತರಕೊಟ್ಟನು. ರಾಜನು ಇದನ್ನು ನಂಬದೆ, ಆತನ ಮಾತನ್ನು ಪರೀಕ್ಷಿಸಲೆಂದು ದೂತರನ್ನು ಹಂಪೆಗೆ ಕಳುಹಿಸಿದನು. ಅವರು ಹಂಪೆಗೆ ಹೋಗಿ ಬಂದು, ಹರಿಹರನ ಮಾತು ಸತ್ಯವೆಂದು ವರದಿ ಒಪ್ಪಿಸಿದರು. ರಾಜನ ಸಂದೇಹ ಪ್ರವೃತ್ತಿಯನ್ನು ಕಂಡು ಬೇಸರದ ಹರಿಹರನು ತನ್ನ ಸೇವಾವೃತ್ತಿಗೆ ಜಲಾಂಜಲಿಯಿತ್ತು ಹಂಪೆಗೆ ಹಿಂದಿರುಗಿ, ವಿರೂಪಾಕ್ಷನ ಪೂಜೆಯಲ್ಲಿ ನಿರತನಾದವು ಶಿವಕೃಪೆಯಿಂದ ಆತನಲ್ಲಿ ಕವಿತಾ ಶಕ್ತಿ ಉಕ್ಕಿ ಹರಿಯಿತು. ಆತನ ಕೀರ್ತಿಯನ್ನು ಕೇಳಿ ಮೋಹಿತಳಾಗಿ ಬಂದ ವೇಶ್ಯೆಯೊಬ್ಬಳು ಆತನ ಉಪದೇಶದಿಂದ ಉದ್ಧಾರವಾದಳು.

ಮೇಲಿನ ಕಥೆಯಲ್ಲಿ ಬರುವ ಪವಾಡ ಅಕ್ಷರಶಃ ಸತ್ಯವಾಗಿರಲಿ, ಇಲ್ಲದಿರಲಿ; ಆತನು ರಾಜನ ಊಳಿಗದಲ್ಲಿ ಅಸಹ್ಯಗೊಂಡು ಶಿವಭಕ್ತಿ ಯುತನಾದನೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ ವೆಂದು ತೋರುತ್ತದೆ. ಆತನ ಶತಕಗಳಲ್ಲಿ ಒಂದಾದ ಪಂಪಾಶತಕದಲ್ಲಿ :

> ಪೋಗೆನೆ ಪೋಪ, ಬಾರೆಲವೊ ಬಾರೆನೆ
> ಜೀಯ ಹಸಾದವೆಂದು ಬೆ
> ಳ್ಬಾಗುತೆ ಬರ್ಪ, ಮಾಣೆಲವೊ
> ಸುಮ್ಮನಿರೆಂದಡೆ ಸುಮ್ಮನಿರ್ಪ, ಮ
> ತ್ತಾಗಳ ಝುಂಕಿಸುತ ನಡುಗಿ ಬೀಳುವ
> ಸೇವೆಯ ಕಷ್ಟವೃತ್ತಿಯಂ
> ನೀಗಿದೆನಿಂದು ನಿಮ್ಮ ದೆಸೆಯಿಂ
> ಕರುಣಾಕರ ಹಂಪೆಯಾಳ್ದನೆ !

ಇಷ್ಟು ಹೃದಯಂಗಮವಾಗಿ ಹೇಳಬೇಕಾದರೆ ಸ್ವಾನುಭವವಿಲ್ಲದೆ ಹೇಗೆ ಸಾಧ್ಯ? ಇದು ಆತನ ಆತ್ಮಕಥನದ ಒಂದು ದಿಗ್ದರ್ಶನವೆಂದೇ ತೋರು ತ್ತದೆ. ಅದೇ ಶತಕದ ಮತ್ತೊಂದು ಪದ್ಯದಲ್ಲಿ ಆತನು ತನ್ನ ಜೀವನದ ಆದರ್ಶವನ್ನು ಘೋಷಿಸುತ್ತಾ,

ಮನುಜರ ಮೇಲೆ, ಸಾವನರ ಮೇಲೆ,
ಕನಿಷ್ಠರ ಮೇಲೆ, ಅಕ್ಕಟಾ
ತನ ತನಗಿಂದ್ರ ಚಂದ್ರ ರವಿ ಕರ್ಣ
ದಧೀಚಿ ಬಲೀಂದ್ರರೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡೆಲೆ
ಮಾನವ, ನೀನಹರ್ನಿಶಂ
ನೆನೆ, ಪೊಗಳರ್ಚಿಸೆಮ್ಮ ಕಡುಸೊಂಪಿನ
ಪೆಂಪಿನ ಹಂಪೆಯಾಳ್ದನಂ

ಎಂದು ಹೇಳುವ ಮಾತು ಎಷ್ಟು ಮರ್ಮಸ್ಪರ್ಶಿಯಾಗಿದೆ! ಆತನ ಈ ಸ್ವತಂತ್ರ ಮನೋವೃತ್ತಿ ಸಾಹಿತ್ಯ ಜಗತ್ತಿನಲ್ಲಿ ಸೃಷ್ಟಿಸಿದ ಹೊಸ ಹೆದ್ದಾರಿಯಾಗಿರುವುದು ಹಾಗಿರಿಲಿ, ಆತನಿಗೆ ರಾಜನ ಊಳಿಗದಲ್ಲಿದ್ದ ಜಿಹಾಸೆ ಈ ಮಾತುಗಳಿಂದ ಮತ್ತಷ್ಟು ಸ್ಪಷ್ಟವಾಗುತ್ತದೆ.

ಹರಿಹರಕವಿಯು ದ್ವಾರಸಮುದ್ರವನ್ನು ಬಿಟ್ಟು ಹಂಪೆಗೆ ಹಿಂದಿರುಗಿದ ದಿನ ಆತನು ಅಲ್ಲಿಯ ಸೋಮನಾಥ ದೇವಾಲಯದಲ್ಲಿ ತಂಗಿದ್ದನಂತೆ. ಆ ರಾತ್ರಿ ಪರಶಿವನು ಪಂಪೆಯ ರಾಜನ ಕನಸಿನಲ್ಲಿ ಕಾಣಿಸಿಕೊಂಡು ಹರಿಹರನನ್ನು ಸತ್ಕರಿಸುವಂತೆ ಅಪ್ಪಣೆ ಮಾಡಿದನಂತೆ! ಮರುದಿನ ರಾಜನು ಆತನನ್ನು ಆಸ್ಥಾನಕ್ಕೆ ಕರೆತರಲೆಂದು ಪಲ್ಲಕ್ಕಿಯನ್ನು ಕಳಿಸಲು, ಅದರಲ್ಲಿ ಪಯಣ ಮಾಡುತ್ತಾ ಕವಿಯು ಪಂಪಾ ಶತಕವನ್ನು ಹಾಡಿದನಂತೆ! ಇದು ನಿಜವಾದರೆ ಕವಿಯ ಕಾವ್ಯಕರ್ಮ ಪಂಪಾಶತಕದಿಂದ ಪ್ರಾರಂಭವಾಯಿತೆಂದು ಹೇಳಬೇಕಾಗುತ್ತದೆ. ಇಲ್ಲಿನ ಕಥೆಯನ್ನು ನಂಬಲಿ, ಬಿಡಲಿ; ಪಂಪಾಶತಕವು ಹರಿಹರ ಕವಿಯ ಪ್ರಥಮ ಕೃತಿಯೆಂದು ಹೇಳಿದರೆ ತಪ್ಪಲ್ಲ. ಏಕೆಂದರೆ ಇದರಲ್ಲಿ ಕವಿಯಭಕ್ತಿ, ಸಾಧಕನ ಉದ್ರೇಕದಿಂದ ಕೂಡಿದೆ. ರಕ್ಷಾಶತಕದಲ್ಲಿ ಕಾಣಬರುವ ಸಿದ್ಧಪುರುಷನ ಪ್ರಶಾಂತತೆ ಪಂಪಾಶತಕದಲ್ಲಿಲ್ಲ. ಕವಿಯ ಭಕ್ತಿ ನಿಶ್ಚಲವಾಗಿ ಪರಿಪಕ್ವಗೊಂಡಿರುವುದನ್ನು ರಕ್ಷಾಶತಕದಲ್ಲಿ ಬರುವ ಈ ಪದ್ಯವು ಸ್ಪಷ್ಟಗೊಳಿಸುತ್ತದೆ.

ಬಿಡೆನೀಶಾ ನಿಮ್ಮ ಪಾದಾಬ್ಜವನೆಲೆಲೆ
ಬಿಡೆಂ ಸೀಳ್ದೊಡಂ ಪೋಳ್ದೊಡಂ ಪೊ
ಯ್ದೊಡದಂತಿಂತೆಂದುಮೆಂದುಂ ಬಿಡೆನಭವ
ಬಿಡೆಂ ಸರ್ವಥಾ ಮಾಣೆನಾಂ ಬ
ಲ್ಪಿಡಿದೆಂ ಮತ್ತತ್ತಮಿತ್ತಂ ಚಲಿಸೆನೆಲೆ
ಮನುಸ್ವಾಮಿ ನಿಮ್ಮಾಜ್ಞೆಯಿಂದಂ
ಮೃಡನೇ ಭಕ್ತ್ಯರ್ಥಿ ಪಂಪಾಪುರದರಸ
ವಿರೂಪಾಕ್ಷ ರಕ್ಷಿಪ್ಪುದೆನ್ನಂ

ಇಲ್ಲಿ ಹರಿಹರದೇವನ ಕವಿತಾಶಕ್ತಿ ತನ್ನ ಸೆಲೆಯನ್ನು ಕಂಡುಕೊಂಡಿದೆ ಅರಳು ಹುರಿದಂತೆ ಚಟಪಟನೇಳುವ ಆ ಮಾತುಗಳ ರಭಸ, ಶಬ್ದಗಳ ಪುನರಾವರ್ತನೆ, ಒಂದೇ ಭಾವವನ್ನೂ ವಿಧವಿಧವಾಗಿ ಹೇಳಿ ಓದುಗರ ಮನಸ್ಸಿನಲ್ಲಿ ತನ್ನ ಭಾವವನ್ನು ಅಚ್ಚೊತ್ತುವ ಆ ಉತ್ಸಾಹ–ಈ ಕಾವ್ಯಗುಣಗಳು ಇಲ್ಲಿ ಅರಳಲು ಪ್ರಾರಂಭಿಸಿವೆ. ಹರಿಹರನ ಶತಕಗಳೆರಡು ಆತನ ಭಕ್ತಿಯನ್ನು ಬಿತ್ತರಿಸುವ, ಭೋಗವಿರತಿ ವೈರಾಗ್ಯಗಳನ್ನು ಬೋಧಿಸುವ ಆತ್ಮ ಕಥನಗಳೇ ಸರಿ.

ಹರಿಹರ ಕವಿಯಲ್ಲಿ ಮತ್ತೊಂದು ಪವಾಡವನ್ನು ಆರೋಪಿಸುವುದುಂಟು. ಒಂದು ದಿನ ಕವಿ ವಿರೂಪಾಕ್ಷ ದೇವಾಲಯವನ್ನು ಪ್ರದಕ್ಷಿಣೆ ಮಾಡಿ, ವೃಷಭನಿಗೆ ನಮಸ್ಕರಿಸುವಾಗ ಆತ ಧರಿಸಿದ್ದ ಟೋಪಿ ನೆಲಕ್ಕೆ ಬಿದ್ದಿತಂತೆ! ಹತ್ತಿರದಲ್ಲಿದ್ದ ಘಟಂಗನೊಬ್ಬ ಅದನ್ನು ಎತ್ತಿ ನುಡಿದು ಕವಿಯನ್ನು ಹಂಗಿಸಿದನಂತೆ! ಅದನ್ನು ಕೇಳಿ ಹರಿಹರನು 'ಶಿವನೇ ಪರದೈವವೆಂದು ಸವಾಲು ಹಾಕುತ್ತೇನೆ. ಈ ಸವಾಲನ್ನು ಸ್ವೀಕರಿಸುವವರು ಈ

ಟೋಪಿಯನ್ನು ನೋಲಕ್ಕೆತ್ತಲಿ' ಎಂದನಂತೆ! ಹಾಗೆ ಹೇಳಿ ಮುಡಿಗೆಯ ಅಷ್ಟಕವೆಂಬ ಎಂಟು ವೃತ್ತಗಳನ್ನು ಹಾಡಿದನಂತೆ! ಈ ಕತೆಗೂ ಮುಡಿಗೆಯ ಅಷ್ಟಕಕ್ಕೂ ಯಾವ ಸಂಬಂಧವೂ ಕಾಣಬರುತ್ತಿಲ್ಲ. ಇಲ್ಲಿನ ಎಂಟು ಪದ್ಯಗಳಲ್ಲಿಯೂ ಕವಿಯು ಕ್ಷಕಾರಪ್ರಾಸವನ್ನು ನಿರ್ವಹಿಸಿದ್ದಾನೆ. ಬಹುಶಃ ಕವಿಯು ತನ್ನ ಶಬ್ದಸಂಪತ್ತನ್ನೊ ಕವಿತಾಶಕ್ತಿಯನ್ನೊ ಒರೆಹಚ್ಚಿ ನೋಡಿಕೊಳ್ಳಲು ಈ ಅಷ್ಟಕವನ್ನು ರಚಿಸಿರಬಹುದು. ತನ್ನ ಮಹೋನ್ನತಿ ಶಿವಶರಣರ ರಗಳೆಗಳಲ್ಲಿ ಅರಳುವ ಮುನ್ನ ಆತನ ಕವಿತಾಶಕ್ತಿ ಅರಸುತ್ತಿದ್ದ ನೆಲೆಗಳಲ್ಲಿ ಇದೂ ಒಂದಾಗಿರಬಹುದು.

ಹರಿಹರ ಕವಿಯ ಭಾವಗೀತಾತ್ಮಕವಾದ ರಗಳೆಗಳಲ್ಲಿ 'ಪಿಂಡೋತ್ಪತ್ತಿ ರಗಳೆ' ಮತ್ತು 'ಪುಷ್ಪ ರಗಳೆ' ಇವೆರಡೂ ವ್ಯಕ್ತಿನಿಷ್ಠವಾದವು; ಈ ರಗಳೆಗಳಲ್ಲಿ ಹರಿಹರ ದೇವನ ಆತ್ಮಕಥೆ ಸ್ವಲ್ಪ ಮಟ್ಟಿಗೆ ಸೂಚಿತವಾಗಿದೆಯೆಂದು ಪಂಡಿತರು ಊಹಿಸುತ್ತಾರೆ[1]. ಆ ಊಹೆಯಂತೆ ಹರಿಹರನು ಸಂಸಾರಿಯಾಗಿ, ಹೆಂಡತಿ ಮಕ್ಕಳೊಡನೆ ಜೀವನದ ಸುಖದುಃಖಗಳನ್ನು ಕಂಡುಂಡವನಾಗಿರಬೇಕೆಂದು ಹೇಳಬೇಕಾಗುತ್ತದೆ. ಆತನ 'ಪಿಂಡೋತ್ಪತ್ತಿ ರಗಳೆ'ಯಲ್ಲಿ ಜೀವನು ತಾಯಿಯ ಗರ್ಭವನ್ನು ಹೊಕ್ಕು, ಭೂಮಿಯಲ್ಲಿ ಜನಿಸಿ, ಬೆಳೆದು ಯುವಕನಾಗುವ ವರೆಗೆ ಅನುಭವಿಸುವ ಕಷ್ಟ ಕೋಟಲೆಗಳನ್ನು ಜೀವನದಲ್ಲಿ ಜಿಹಾಸೆಹುಟ್ಟುವಂತೆ ವರ್ಣಿಸಿ, ಮುಂದೆ ಆ ಗತಿಯನ್ನು ಕವಿ ಹೀಗೆ ವರ್ಣಿಸುತ್ತಾನೆ.

**ಬಳಿಕ ಯೌವನನಾಗೆ ತಾಯ್ ತಂದೆಗಳ್ ಕಂಡು**
**ತಿಳಿದೊಂದು ಮದುವೆಯಂ ಮಾಡಲ್ ಮನಂಗೊಂಡು**
.... .... .... .... .... .... .... ....
.... .... .... .... .... .... ... ....
**ಪಶುವಿನ ಕೊರಲೊಳೊಂದು ಪಾಶಮಂ ಬಿಗಿವಂತೆ**
**ಮಿಸುಕದಂತಲ್ಲೊಂದು ಎಳೆಮರನ ಬಿಗಿವಂತೆ**
**ದೈತೆಯಂ ತಂದೊರ್ಬಳಂ ಮದುವೆಯಂ ಮಾಡಿ**

ಆ ಜೀವಿಯನ್ನು ಸಂಸಾರ ಬಂಧನಕ್ಕೆ ಸಿಲುಕಿಸಿದರು. 'ದೈತೆ'ಯನ್ನು ಮದುವೆಯಾದವನಿಗೆ ಸಂಸಾರದಲ್ಲಿ ಸಮರಸ ಜೀವನ ಸಾಧ್ಯವೆ? ವಿರಸ ದಾಂಪತ್ಯದ ಜೊತೆಗೆ, ಯವ್ವನ, ಧನ, ರೂಪಗಳೂ ದುರ್ಬೋಧನೆಯೂ ಸೇರಿಕೊಂಡರೆ ಕೇಳಬೇಕೆ?

**ತಲೆ ಹುಳಿತ ನಾಯಂತೆ ಪುಗದ ಮನೆಯಂ ಪೊಕ್ಕು**
**ಅಲನೆಯರ ನುಣ್ಣನೆಯ ಜೋಹಕ್ಕೆ ಮನಮಿಕ್ಕು**
**ಪುಳಿತ ಪೆಣನಂ ಕಡಿವುತಿರ್ಪ ಪಳೆ ನಾಯಂತೆ**
**ಕಳಿತ ಮಾಂಸಕ್ಕಳುಪಿ ತಿಂಬ ಬಳ್ಳುವಿನಂತೆ**

ಇಂದ್ರಿಯಗಳ ದಾಸನಾಗಿ :

**ಸಂತತಂ ಯವ್ವನದ ನರಕದೊಳ್ ಮುಳುಗಿರಲು**

ಕೈಲಿದ್ದ ಕಾಸೂ ಮೈಲಿದ್ದ ಕಸುವೂ ತೀರಿಹೋದವು. ಆಗ ಅವನ ವಿಲಾಸದ ಹೆಣ್ಣುಗಳು :

ನಡೆವೆಣನೆ ನುಡಿವೆಣನೆ ಬಾಳ್ವೆಣನೆ ಪೋಗೆಂದು
ಬಡಿಯದಿರು ಬಾಲವಂ ಸುಡು ನಾಯಿ ಥೂ ಎಂದು

ಅವನನ್ನು ಬಡಿದೋಡಿಸಿದರು. ಕೆಟ್ಟಮೇಲೆ ಆ ಜೀವಕ್ಕೆ ಬುದ್ಧಿ ಬಂತು. ಆದರೆ ಆ ವೇಳೆಗೆ ಕಾಲ ಮಿಂಚಿತ್ತು. ಮನ ಮನೆಗಳೆರಡೂ ಬರಿ

---

1. ಹಂಪೆಯ ಹರಿಹರ—ಶ್ರೀ ಡಿ. ಎಲ್. ನರಸಿಂಹಾಚಾರ್ ಎಂ.ಎ.

ದಾಗಿದ್ದವು ನೈತುಂಬ ಸಾಲ ಬೇರೆ. 'ಸಾಲದಿಂ ಸಿಗ್ಗಾಗಿ, ಪಲ ಉಪವಾಸಂ ಪತ್ತಿ' ಆ ಜೀವ ಸಂಕಟಪಟ್ಟಿತು. ಇದರ ಜೊತೆಗೆ ಮಕ್ಕಳ ಕಾಟ ಬೇರೆ. 'ಬಾಲಕರ್ ಬಾಲೆಯರ್ ಕೊಯಿದು ತಿನುತಿರೆ ಮುತ್ತಿ' ಅವರ ಹೊಟ್ಟೆ ಬಟ್ಟೆಗಳಿಗಾಗಿ ಆರಂಭವನ್ನು ಕೈಕೊಳ್ಳಬೇಕಾಯಿತು. ಅದು ವ್ಯರ್ಥವಾದ್ದರಿಂದ ವ್ಯಾಪಾರಕ್ಕೆ ಕೈಹಾಕಿದ್ದಾಯಿತು. ಆದರೆ ಅದರಲ್ಲಿಯೂ 'ಮೊದಲುಮಂ ಲಾಭಮಂ ಕಾಣದೆ' ಅಸಲಿಗೇ ಮೋಸವಾಗಲು ಸೇವಾವೃತ್ತಿಗೆ ಕೈಹಾಕಬೇಕಾಯಿತು. ಅದು ಮತ್ತೂ ದುಃಖಕರವಾಗಿತ್ತು.

ಪತಿಯಪ್ಪ ನಿನ್ನನರಿಯದೆ ನರರ್ಗಾಳಾಗಿ
ಮತಿಗೆಟ್ಟು ಧೃತಿಗುಂದಿ ಮರ್ತ್ಯರ್ಗೆ ತೊತ್ತಾಗಿ
ನಡುವಿರುಳು ಪೋಗೆನಲು ನಾಲ್ಗಾವುದಂ ಪೋಗಿ
ಎಡಹುತುಂ ತಾಗುತುಂ ಲಘುವಾಗಿ ಮರುಳಾಗಿ

ಆತ್ಮಗೌರವವೇ ಇಲ್ಲದೆ, ಜೀವ ರೋಸಿ, ಮರುಕದಿಂದ ಕತಕತ ಕುದಿಯಿತು. ಮುಂದಿನ ಹೆಜ್ಜೆ ಭಿಕ್ಷಾಟನೆ.

ಎಂಟು ಗೇಣುದ್ದಮುಂ ಗೇಣುದ್ದದೊಳ್ ನಿಲಿಸಿ
ಎಂಟುಮುಡಿ ಕಾರ್ಪಣ್ಯಮಂ ಮುಖದೊಳಳವಡಿಸಿ
ನಿಂದವರ್ಗಳಂ ಬೇಡಿ ನೆರದವರ್ಗಳಂ ಬೇಡಿ
ಬಂದವರ್ಗಳಂ ಬೇಡಿ ಬಲ್ಲವರ್ಗಳಂ ಬೇಡಿ
ತಾನುಳಿಯನುಳಿದೆಲ್ಲರನಾವಗಂ ಬೇಡಿ
ಏನೆಂಬೆನೆಲ್ಲಿಯುಂ ಪಡೆಯದೆ ಮೊಗಂ ಬಾಡಿ

ಕೊನೆಯ ಘಟ್ಟವನ್ನು ಮುಟ್ಟಿದುದಾಯಿತು:

ಆನೇಕೆ ಸಂಸಾರವೇಕೆ ಕೇಳಲೆ ತಂದೆ
ನೀನು ಎನಗೊಡ್ಡಿದ ಮಹೇಂದ್ರಜಾಲಂ ತಂದೆ

ಆದ್ದರಿಂದ,

ನಿತ್ಯ ಲಿಂಗಾರ್ಚನೆಯೊಳಿಂಸೆನ್ನನೆಲೆ ದೇವ
ಸತ್ಯ ಶರಣರ ನಡುವೆ ಸಲಿಸೆನ್ನನೆಲೆ ದೇವ

ಎಂದು ಜೀವ ಬೇಡಿತು. ಈ ಆರ್ತನಾದ ಭಗವಂತನನ್ನು ಮುಟ್ಟಿತು. ಸಂಸಾರ ತೊಲಗಿತು. ಶಿವಪೂಜೆ ಕೀರ್ತನಗಳ ಆನಂದದಲ್ಲಿ ಜೀವ ಮಗ್ನವಾಯಿತು

ಹೀಗೆ 'ಪಿಂಡೋತ್ಪತ್ತಿಯ ರಗಳೆ'ಯಲ್ಲಿ ಹರಿಹರನ ಪೂರ್ವಾಶ್ರಮ ಜೀವನ ಚಿತ್ರಿತವಾಗಿದ್ದರೆ 'ಪುಷ್ಪರಗಳೆ'ಯಲ್ಲಿ ಆ ಋಷಿಕವಿಯ ವಿರಕ್ತ ಜೀವನದ ದಿವ್ಯದರ್ಶನ ಗೋಚರಿಸುತ್ತದೆ. ಆ ಮಹಾನುಭಾವನು ಬೆಳಗಿನ ಝಾವಕ್ಕೆ ಎದ್ದು, ವಿಭೂತಿಯನ್ನು ಧರಿಸಿ, ಹೂವಿನ ಕರಡಿಗೆಯನ್ನು ಕೈಲಿಹಿಡಿದು, ಶಿವಗೀತೆಗಳನ್ನು ಹಾಡುತ್ತಾ 'ಪರಿಮಳದ ಸುಗ್ಗಿ, ಸೌರಭದ ಸಂದಣಿಯೆನಿಪ' ಹೂದೋಟಕ್ಕೆ ಹೊರಡುತ್ತಾನೆ ಅಲ್ಲಿ,

ಅಳಿಯೆರಗದನಿಲನಲುಗದ ರವಿಕರಂ ಪುಗದ
ಬೆಳೆ ಬೆಳೆದು ನಳನಳಿಸಿ ಮಘಮಘಿಪ ಕವಲಿಡಿದ

ಇರುವಂತಿಗೆಯ ಪುಷ್ಪವನ್ನು 'ಪರಶಿವಂಗೋಲೈಪ ಪೂವ ನೀಡೌ' ಎಂದು ಬೇಡಿ, ಪಡೆದು ಸಂತೋಷದಿಂದ ಕುಣಿಯುತ್ತಾ ಸಂಪಗೆಯ ಬಳಿಗೆ ಬಂದು,

ಏನವ್ವ ಸಂಪಿಗೆಯೆ ಶಿವನ ಸಿರಿಮುಡಿಗಿಂದು
ನೀನೀವ ಪೊಸ ಕುಸುಮಮಂ ನೀಡು ನೀಡೆಂದು

ಕೇಳಿ ಕೊಯ್ದುಕೊಳ್ಳುತ್ತಾನೆ ಆಮೇಲೆ ಸೇವಂತಿಗೆ,ಮಲ್ಲಿಗೆ,ಮಾಧವಿ, ಆದಿರ್ಗಂದಿ ಪುಷ್ಪಗಳನ್ನು ಪಡೆದು ಜಾಜಿಯ ಹತ್ತಿರಕ್ಕೆ ಬರುತ್ತಾನೆ.

ಜಾತಿ ನೀನೇ ಸಕಲ ಪುಷ್ಪಜಾತಿಗೆ ಜಾತಿ
ಭೂತೇಶ್ವರನ ಜಡೆಯ ಮುಡಿಗೇರಿದೊಡೆ ಜಾತಿ

ಎಂದ ಆದನ್ನು ಹೊಗಳಿ ಹೂಗಳನ್ನು ಸಂಗ್ರಹಿಸಿದ ಮೇಲೆ ಕೇತಕಿಯನ್ನು ಕಂಡು,

ಹೊರಗೆ ಮುಳ್ಳೊಳಗೆ ಕಂಪಕ್ಕಕ್ಕು ನಿನ್ನ ಪರಿ
ಹೆರೆಸೂಡಿದನ ಗುಪ್ತಭಕ್ತನಂತಿರ್ಪ ಪರಿ

ಎನ್ನಿಸುತ್ತದೆ  ಅದರ ಪುಷ್ಪಗಳನ್ನೂ ಪಡ್ಡಳಿ, ಮೊಲ್ಲೆ, ಮರುಗ, ದವನ, ಸುರಹೊನ್ನೆ, ಕಮಲ, ನೆಯ್ದಿಲೆ, ಲಿಂಗದೊಲವಾದ ಚೆಂಗಣಿಗಿಲೆ ಇತ್ಯಾದಿ ಗಳನ್ನೆಲ್ಲ ಕುಯ್ದು ತಂದು ಎಳವಮಾವಿನ ಮರದ ಕೆಳಗಿನ ಚಂದ್ರಕಾಂತ ಶಿಲಾತಲದಲ್ಲಿ ಕುಳಿತು, ತಿರಿದು ತಂದ ಪುಷ್ಪಗಳನ್ನೆಲ್ಲ ಬಾಳೆಯ ಎಲೆಯ ಮೇಲೆ ಮೃದುವಾಗಿ ಸುರಿದು, ಸರಸಿಜಸೂತ್ರ ದಿಂದ ಅವುಗಳ ಮಾಲೆಯನ್ನು ಕಟ್ಟುತ್ತಾನೆ. ಹಾಗೆ ಕಟ್ಟುವಾಗ ಅದೆಷ್ಟು ಚಚ್ಚರ !

ಕೈಮುಟ್ಟೆ ಮುಟ್ಟದೆ ಮನಂ ಮುಟ್ಟೆ ಕಟ್ಟುತುಂ
ಕೈಮರೆದು ಪೂ ಬೀಳೆ ಮಿಗೆ ಸತ್ತು ಹುಟ್ಟುತುಂ
ನೋಡಿದೊಡೆ ಪೂ ಬಾಡುಗೆಂದು ಕಣ್ಮುಚ್ಚುತುಂ
ನಾಡೆ ನೆನೆದೊಡೆ ಕುಂದುಗೆಂದು ಮನ ಬೆಚ್ಚುತುಂ

ಹಾರವನ್ನು ಕಟ್ಟಿ ಮುಗಿಸುತ್ತಾನೆ. ಆ ವೇಳೆಗೆ ಹೂವನ್ನು ಅರಸುತ್ತ ದುಂಬಿಗಳು ತೋಟಕ್ಕೆ ಬರುತ್ತವೆ. ಆದರೆ ಅಲ್ಲೇನಿದೆ ? ಅವು ಹೂವಿನ ಕಂಪು ಹಿಡಿದು ಹರಿಹರನ ಒಳಿಗೆ ಬರುತ್ತವೆ ಆ ಭಕ್ತಕವಿ ಅವುಗಳನ್ನು ಹೆದರಿಸುತ್ತಾ,

ಬೇಡೆಲೆಲೆ ಹಂಪೆಯರಸ ಕುಮಾರಂ ಸಿತಗ
ನಾಡಂಬರಂಗಳಂ ಕೊಳ್ಳನಾರಡಿಗೆರಗ
ಅಳಿಯಾಸೆ ಬೇಡ ನಿಮಗಿಲ್ಲಿ ಸೋಲುವರಿಲ್ಲ
ಗಳಗಳನೆ ಬಂದಂತೆ ಮರಳಿ ಗಳಗಳನೆಲ್ಲ

ಎಂದು ಅವುಗಳನ್ನು ನಿವಾರಿಸಿ,ಶಿವನಗುಡಿಗೆ ಬರು ತ್ತಾನೆ. ಅಲ್ಲಿ ದೇವದೇವನು ನಿದ್ರೆಯಿಂದ ಏಳು ವವರೆಗೂ ಕಾದಿದ್ದು, ಆ ಮೇಲೆ ಮೃದುವಾಗಿ,

ಏನೆನ್ನ ಶಿವನೆ ! ಉಪ್ಪವಡಿಸಿರ್ದಾ ತಂದೆ
ಏನಯ್ಯ ! ತಳುವಿರ್ದನೆನುತಲಿರ್ದಾ ತಂದೆ
ಅಳಿಗಳೆರಗದ ಗಂಧವಹನಲುಗದಲರ್ಗಳಂ
ಎಳಸಿ ತಂದೆಂ ತಂದೆ ! ದೇವ ಪೊಸಪೂಗಳಂ

ಎಂದು ವರದಿಯೊಪ್ಪಿಸಿ, ಪನ್ನೀರಿನಿಂದ ಪರಶಿವನ ಮುಖವನ್ನು ತೊಳೆದು, ಪರಾಗದ ವಿಭೂತಿಯಿಟ್ಟು ಕೇತಕಿಯ ನುಣ್ಣೆಸಳ್ಗಳಿಂದ ಶಿವನ ಜಟೆಯ ಸಿಕ್ಕು ಬಿಡಿಸಿ, ಶಶಿಕಳೆ ನೋಯದಂತೆಯೂ ಸುರನದಿ ತುಳಕದಂತೆಯೂ ಅದನ್ನು ಗಂಟುಹಾಕಿ, ಪುಷ್ಪ ಗಳಿಂದ ಅಲಂಕರಿಸಿ, ದೇವದೇವನ ಅರ್ಚನೆ ಕೀರ್ತನಗಳಲ್ಲಿ ಮಯ್ಮರೆದು ಆನಂದಮಗ್ನನಾಗು ತ್ತಾನೆ. ಹರಕವಿ ಹರಿಹರನು ಪುಷ್ಪಗಳಿಂದ ಪರ ಶಿವನನ್ನು ಅಲಂಕರಿಸುವುದರ ಜೊತೆಯಲ್ಲಿ ಕನ್ನಡ ಸಾಹಿತ್ಯದೇವಿಯ ಅಲಂಕಾರವನ್ನೂ ಅದ್ವಿತೀಯ ವಾಗಿ ನೆರವೇರಿಸಿದ್ದಾನೆ.

ಹರಿಹರದೇವನು ಭಕ್ತ ಕವಿ. ಭಕ್ತಕವಿ ಎಂಬುದನ್ನು ಆತನ ಕಾವ್ಯಗಳ ಪ್ರತಿಯೊಂದು ಸಾಲೂ ಸಾರಿ ಹೇಳುತ್ತದೆ. ಆತನ ಬಾಳ ಕಥೆ ಯನ್ನು 'ಇದಮಿತ್ಥಂ' ಎಂದು ಹೇಳುವುದು ಸಾಹಸ ಕಾರ್ಯವೆನಿಸೀತು. ಆದರೆ ಮೇಲೆ ಸೂಚಿಸಿರುವ ಕಾವ್ಯಗಳಿಂದ ಆತನ ಆತ್ಮಕಥೆಯ ಸ್ಥೂಲರೇಖೆ ಗಳನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದೆಂದು ತೋರುತ್ತದೆ. ಸ್ಪಷ್ಟಇತಿಹಾಸದ ಅಭಾವದಲ್ಲಿ ಕಾರ್ಯಕಾರಣ ಸಂಬದ್ಧವಾದ ಊಹೆಯ ಬೆನ್ನೇರಿ ಹೋಗುವುದು ನಮಗಿರುವ ಏಕೈಕ ಉಪಾಯ. ಹೀಗೆ ಮಾಡುವುದರಿಂದ ಕವಿಗೆ ನಾವು ಯಾವ ಅಪಚಾರವನ್ನೂ ಮಾಡಿದಂತಾಗುವುದಿಲ್ಲವೆಂದು ನಮ್ಮ ಭಾವನೆ. ಶ್ರೀಮಾನ್ ಡಿ. ಎಲ್. ನರ ಸಿಂಹಾಚಾರ್ಯರು ತಮ್ಮ 'ಹಂಪೆಯ ಹರಿಹರ' ದಲ್ಲಿ ಹೇಳಿರುವಂತೆ "ಅವನ ಕಾವ್ಯಗಳಲ್ಲಿರುವ ಅಸಾಧಾರಣವಾದ ಲೋಕಾನುಭವವು ಜೀವನದ ಕುಲುಮೆಯಲ್ಲಿ ಕಾದು ಕಾದು ಪೆಟ್ಟು ತಿಂದುದರ ಪರಿಣಾಮವೆಂದು ತೋರದೆ ಇರಲಾರದು."

ತ. ಸು. ಶಾಮರಾಯ

# ಕುಮಾರ ಸಂಭವದಲ್ಲಿ ಪಾರ್ವತೀಪರಮೇಶ್ವರರ ಸಂವಾದ

ಕಾಳಿದಾಸ ಮಹಾಕವಿಯ ಕುಮಾರ ಸಂಭವದಲ್ಲಿ ಕಾಣಲಿರುವ ಪಾರ್ವತೀ ಪರಮೇಶ್ವರರ ಸಂವಾದದ ಸ್ವಾರಸ್ಯವನ್ನು ಕುರಿತು ಇಲ್ಲಿ ನಾಲ್ಕು ಮಾತು ಹೇಳಿದೆ.

ಪಾರ್ವತಿಯ ಉಗ್ರೋಗ್ರವಾದ ತಪಸ್ಸಿಗೆ ಪರಮೇಶ್ವರನು ಮೆಚ್ಚಿದ್ದಾನೆ. ಮೆಚ್ಚಿ ಬ್ರಹ್ಮ ಚಾರಿಯ ವೇಷವನ್ನು ತಳೆದು ಆ ಪಾರ್ವತಿಯ ಮುಂದೆ ಕಾಣಿಸಿಕೊಳ್ಳುತ್ತಾನೆ. ತನ್ನ ವಿಷಯ ದಲ್ಲಿ ಅವಳಿಗಿರುವ ದೃಢನಿರ್ಧಾರ, ನಿಶ್ಚಲ ಪ್ರೇಮ, ಉಜ್ವಲಭಕ್ತಿ ಇವುಗಳ ಸ್ವರೂಪವನ್ನು ತಿಳಿದುಕೊಳ್ಳುವುದು ಆತನ ಈ ವೇಷಾಂತರದ ಉದ್ದೇಶ. ತನ್ನ ನಿಜಸ್ವರೂಪವನ್ನು ಮರೆಮಾಡಿ ಕೊಂಡು ಬಂದು ತನ್ನ ಗುಣಕಥನವನ್ನು ಆ ಪಾರ್ವ ತಿಯ ಮಾತುಗಳಿಂದಲೇ ಕೇಳಿ ಪರಮೇಶ್ವರನು ಆನಂದಪಡುವ ಒಂದು ಅಪೂರ್ವ ಸನ್ನಿವೇಶ ವನ್ನು ಕಾಳಿದಾಸಕವಿ ಇಲ್ಲಿ ಸೃಷ್ಟಿಸಿದ್ದಾನೆ ಈ ಸನ್ನಿವೇಶವು ತುಂಬ ನಾಟಕೀಯವಾಗಿದೆ. ಈ ಶಿವಪಾರ್ವತಿಯರ ಒಂದೊಂದು ಮಾತೂ ಅದೆಷ್ಟು ಮಧುರ! ಆ ಮಾತಿನಲ್ಲಿ ಅದೆಂತಹ ಚಮತ್ಕಾರ! ಹೊರನೋಟಕ್ಕೆ ಸರಸ ಸಲ್ಲಾಪ, ಆದರೆ ಅದರ ಅಂತರಾರ್ಥವನ್ನು ಕುರಿತು ವಿಚಾರಿಸಿದರೆ ಎಂತಹ ಧರ್ಮ, ತತ್ವ, ದರ್ಶನಗಳ ಒಕ್ಕಣೆ ಅಲ್ಲಿವೆ! ಜೊತೆಗೆ ಮಧುರವೂ ಚತುರವೂ ಆದ ಈ ಸಂವಾದ ಸ್ವರೂಪದ ದರ್ಶನ ಧ್ವನಿಯ ಮೇಲೆ ಕವಿಯು ಎಷ್ಟು ತಿಳಿಯಾದ ತೆಳುವಾದ ಹಾಸ್ಯದ ನಗೆ ಬೆಳುದಿಂಗಳನ್ನು ಹೊದಿಸಿದ್ದಾನೆ. ಜಗದ ಜನ ನೀಜನಕರಾದ ಆ ಪಾರ್ವತೀ ಪರಮೇಶ್ವರರನ್ನು ಹೀಗೆ ಕೂಡಿಸಿ ಹೀಗೆ ಆಡಿಸಿದ ಆ ಮಹಾಕವಿಯ ದಿವ್ಯಪ್ರತಿಭೆ ಅದ್ವಿತೀಯವೇ ಸರಿ.

ಪಾರ್ವತಿಯನ್ನು ಕುರಿತು ಪರಮೇಶ್ವರನು ಆಡುವ ಮೊದಲ ಮಾತುಗಳು ಇವು :

> "ಅಪಿ ಕ್ರಿಯಾರ್ಥಂ ಸುಲಭಂ ಸಮಿತ್ಕುಶಂ |
> ಜಲಾನ್ಯಪಿ ಸ್ನಾನವಿಧಿಕ್ಷಮಾಣಿ ತೇ ||
> ಅಪಿ ಸ್ವಶಕ್ತ್ಯಾ ತಪಸಿ ಪ್ರವರ್ತಸೇ |
> ಶರೀರಮಾದ್ಯಂ ಖಲು ಧರ್ಮಸಾಧನಂ"

ತಪದಲ್ಲಿ ತೊಡಗಿರುವವರನ್ನು ಯಾರಾದರೂ ಸಹಜವಾಗಿ ಕೇಳತಕ್ಕ ಮಾತುಗಳೇ ಇವು. ಈ ಮಾತುಗಳಲ್ಲಿ, ಸಮಿತ್ತು, ದರ್ಭೆ, ನೀರು ಈ ಸುತ್ತಣ ಬಾಹ್ಯಪರಿಕರಗಳ ಸೌಕರ್ಯಗಳನ್ನು ಈಶ್ವರನು ಮೊದಲು ಪ್ರಶ್ನಿಸುತ್ತಾನೆ. ಆಮೇಲೆ ಶರೀರಕ್ಕೆ ತೊಂದರೆಯಾಗದಂತಹ ರೀತಿಯಲ್ಲಿ ತಪಸ್ಸು ನಡೆಯುತ್ತಿದೆಯೇ ಎಂದು ವೈಯಕ್ತಿಕ ವಾದ ವಿಚಾರಕ್ಕೆ ಮುಂದುವರಿಯುತ್ತಾನೆ. ಆದರೆ ಒಡನೆಯೇ ತಪ್ಪು ತಿಳಿವಳಿಕೆಯಾದೀ ತೆಂದು 'ಶರೀರವೇ ಧರ್ಮಕ್ಕೆ ಪ್ರಧಾನ ಸಾಧನವು' ಅದರಿಂದ ಕೇಳಿದೆ ಎಂಬ ಅಂಶವನ್ನು ಸ್ಪಷ್ಟ ಪಡಿಸುತ್ತಾನೆ. ಮಾತು, ಬುದ್ಧಿ, ಹಣ, ಹೀಗೆ ಬೇರೆ ಬೇರೆ ಸಾಧನಗಳಿಂದ ಧರ್ಮವನ್ನು ಗಳಿಸ ಬಹುದಾದರೂ ಎಲ್ಲಕ್ಕೂ ಮೂಲ ಮತ್ತು ಮುಖ್ಯ ಸಾಧನವು ಶರೀರ. ಅಂತಹ ಶರೀರಕ್ಕೆ ಈ ತಪ ದಿಂದ ತೊಂದರೆಯಾಗದ ಹಾಗೆ ನೋಡಿಕೊಳ್ಳ ಬೇಕು ಎಂಬ ಅಂಶ ಇಲ್ಲಿ ಸೂಚಿತವಾಗಿದೆ. ಒಟ್ಟಿನಲ್ಲಿ ಬ್ರಹ್ಮಚಾರಿಯ ಮಾತಿನಲ್ಲಿ 'ಪ್ರಮಾದ' 'ಸ್ವಾರ್ಥ' ಎಂಬ ಅಂಶ ಯಾವುದೂ ಇದೆ

ಎನ್ನುವ ಹಾಗಿಲ್ಲ. ಆದರೂ ತನ್ನ ಇಂಗಿತ ಸೂಚಿತವಾಗದೆಯೂ ಇಲ್ಲ. ಕಾಲಿದಾಸನ ಉಕ್ತಿ ಚಮತ್ಕಾರ, ಭಾವ ಗಾಂಭೀರ್ಯ ಎಂದರೆ ಹೀಗಿದೆ.

ಮುಂದಿನ ಮಾತುಗಳಲ್ಲಿ ವಟುವು ಇನ್ನೂ ಒಂದು ಹೆಜ್ಜೆ ಮುಂದೆ ಹೋಗುತ್ತಾನೆ.

ಅಪಿತ್ವದಾವರ್ಜಿತವಾರಿ ಸಂಭೃತಂ
ಪ್ರವಾಲಮಾಸಾಮನುಬಂಧಿ ವೀರುಧಾಮ್
ಚಿರೋಜ್ಝಿತಾಲಕ್ತ ಕಪಾಟಲೇನ ತೇ
ತುಲಾಂ ಯದಾರೋಹತಿ ದಂತವಾಸಸಾ

ಇಲ್ಲಿ ಬಳ್ಳಿಗಳ ಕುಶಲವನ್ನು ಕೇಳುವುದು ಒಂದು ನೆಪವೋ ಎನಿಸುತ್ತದೆ. ಅಲತಿಗೆ ಹಚ್ಚದೆ ಇದ್ದರೂ ತುಟಿ ಕೆಂಪಗಿದೆ ಎನ್ನುವ ಮಾತಿನ ಉದ್ದೇಶ ಎಷ್ಟು ಮಾರ್ಮಿಕವಾಗಿ ಬಂದಿದೆ ಈ ಬ್ರಹ್ಮ ಚಾರಿಯ ಮಾತುಗಳಲ್ಲಿ.

ಮುಂದೆ ವಟು ಉತ್ಪಲಾಕ್ಷಿ ಎಂದು ಸಂಬೋಧಿಸಿ ಹೀಗೆಯೇ ಮಾತುಗಳನ್ನು ಮುಂದು ವರಿಸುತ್ತಾನೆ :

ಅಪಿ ಪ್ರಸನ್ನಂ ಹರಿಣೇಷುತೇ ಮನಃ
ಕರಸ್ಥ ದರ್ಭಪ್ರಣಯಾಪಹಾರಿಷು
ಯ ಉತ್ಪಲಾಕ್ಷಿ ಪ್ರಚಲೈರ್ವಿಲೋಚನೈ
ಸ್ತವಾಕ್ಷಿಸಾದೃಶ್ಯಮಿವ ಪ್ರಯುಂಜತೇ

ತಪ್ಪುಮಾಡಿದವರಲ್ಲಿ ಕೂಡ ತಪಸ್ವಿಗಳಿಗೆ ಕೋಪ ಇರಬಾರದು ಇರಲಾರದು ಎಂಬ ಭಾವದ ಸೂಚನೆ ಇಲ್ಲಿದೆ. ಇಂತಹ ಸಣ್ಣ ತಪ್ಪುಗಳಿಗೆ ಕೆರಳುವುದು ಸಹಜ. ಅದು ಕೂಡದು ಎಂಬ ಅಂಶ ಇಲ್ಲಿ ಸೂಚ್ಯವಾಗಿ ಬಂದಿದೆ. ಜೊತೆಗೆ ಜಿಂಕೆಯ ಮಾತು ತೆಗೆದು ಪಾರ್ವತಿಯ ನಯನ ಸೌಂದರ್ಯದ ಕಡೆಗೆ ಪರ್ಯಾಯವಾಗಿ ಈಶ್ವರನು ತನ್ನ ಗಮನ ಹರಿದುದನ್ನು ಸೂಚಿಸದೆ ಇಲ್ಲ.

ಹೀಗೆ ಸಮಿತ್ತು, ದರ್ಭೆ, ನೀರು ಇವುಗಳ ವ್ಯಾಜದಲ್ಲಿ ದೇಹಕಾಂತಿಯನ್ನೂ ಬಳ್ಳಿಯ ಚಿಗು ರಿನ ನೆಪದಲ್ಲಿ ಚೆಂದುಟಿಯ ಚೆಲುವನ್ನೂ ಜಿಂಕೆಯ ನಿಮಿತ್ತದಲ್ಲಿ ಕಣ್ಣ ಬೆಡಗನ್ನೂ ವಟು ವರ್ಣಿಸಿರು ವುದು ಚಮತ್ಕಾರ ಜನಕವಾಗಿದೆಯಲ್ಲವೆ?

ಇಷ್ಟಾದ ಮೇಲೆ ಪಾರ್ವತಿಯಲ್ಲಿ ಕಾಣ ಬರುವ ದೇಹಸೌಂದರ್ಯಕ್ಕಿಂತ ಮಿಗಿಲಾದ ಶೀಲ ಸೌಂದರ್ಯವನ್ನು ವಟುವೇಷದ ಈಶ್ವರನು ಪ್ರಶಂ ಸಿಸುತ್ತಾನೆ.

ಯದುಚ್ಯತೇ ಪಾರ್ವತೀ ಪಾಪವೃತ್ತಯೇ
ನ ರೂಪಮಿತ್ಯವ್ಯಭಿಚಾರಿ ತದ್ವಚಃ
ತಥಾಹಿತೇ ಶೀಲಮುದಾರ ದರ್ಶನೇ
ತಪಸ್ವಿನಾಮಪ್ಯುಪದೇಶಿತಾಂ ಗತಮ್ ॥

ಪಾಪವಿದ್ದಲ್ಲಿ ರೂಪವಿರುವುದಿಲ್ಲವೆಂಬ ಅಂಶ ಇಲ್ಲಿ ಸೂಚ್ಯವಾಗಿದೆ. ಪಾರ್ವತಿಯ ಶೀಲವು ಮುನಿಗಳಿಗೆ ಕೂಡ ಉಪದೇಶವೀಯುವ ಸ್ಥಿತಿಯಲ್ಲಿದೆ. ಈಶ್ವ ರನ ಈ ಪ್ರಶಸ್ತಿ ಸತ್ಯವಾದದ್ದು. ಇದನ್ನು ಕೇಳಿದ ಪಾರ್ವತಿ ಧನ್ಯಳು. 'ಉದಾರದರ್ಶನೆ' ಎಂಬ ಸಂಬೋಧನೆ ಬಹ್ವರ್ಥ ಗರ್ಭಿತ! ಜ್ಞಾನ ಚಾರಿತ್ರ ದರ್ಶನ ಇವುಗಳಿಂದ ಅವಳ ಅಂತರಗ ಬಹಿರಂಗಕ್ಕಿಂತ ಸುಂದರ ಎಂಬುದು ಎಷ್ಟು ರಮಣೀಯವಾಗಿ ಪ್ರತಿಪಾದಿತವಾಗಿದೆ!

ಪಾರ್ವತಿಯ ನಿರ್ಮಲ ಚಾರಿತ್ರ್ಯವನ್ನು ಮುಂದೆಂದೂ ವಟು ಹೊಗಳುತ್ತಾನೆ :

ವಿಕೀರ್ಣ ಸಪ್ತರ್ಷಿಬಲಿ ಪ್ರಹಾಸಿಭಿ
ಸ್ತಥಾನಗಾಂಗ್ಯೈಃ ಸಲಿಲೈರ್ದಿವಶ್ಚ್ಯುತೈಃ
ಯಥಾತ್ವದೀಯೈಶ್ಚರಿತೈರನಾವಿಲೈ
ರ್ಮಹೀಧರಃ ಪಾವಿತ ಏಷ ಸಾನ್ವಯಃ

ಪಾರ್ವತಿಯ ನಿರ್ಮಲಶೀಲದಿಂದ ಹಿಮವಂತನು ಪುತ್ರ ಪೌತ್ರ ಸಹಿತನಾಗಿ ಪವಿತ್ರನಾಗಿದ್ದಾನಂತೆ.

ಸಪ್ತರ್ಷಿಗಳಿಂದ ಪೂಜಿತಳಾದ ದೇವಗಂಗೆಯಿಂದ ಪವಿತ್ರೀಕೃತನು ಈ ಮೊದಲೇ ಹಿಮಾಲಯನು; ಆದರೆ ಈಗ ಪಾರ್ವತಿಯ ತಪಸ್ಸಿನಿಂದ ಆ ತಂದೆ ಇನ್ನೂ ಇನ್ನೂ ಶುದ್ಧನು ಎಂಬ ವರ್ಣನೆ ತುಂಬ ಸೊಗಸಾಗಿದೆ

ಈ ಅಭಿಪ್ರಾಯವನ್ನೇ ಪುಷ್ಟೀಕರಿಸುತ್ತದೆ ಮುಂದಿನ ನುಡಿ :

> ಅನೇನ ಧರ್ಮಃ ಸವಿಶೇಷಮದ್ಯಮೇ
> ತ್ರಿವರ್ಗಸಾರಃ ಪ್ರತಿಭಾತಿ ಭಾವಿನಿ
> ಥ್ವತ್ತಯಾ ಮನೋ ನಿರ್ವಿಷಯಾನ ಕಾಮಯಾ
> ಯದೇಕ ಏವಪ್ರತಿಗೃಹ್ಯ ಸೇವ್ಯತೇ

ಪಾರ್ವತಿಯೇ ಧರ್ಮವನ್ನು ಆಶ್ರಯಿಸಿದ್ದುದರಿಂದ ಧರ್ಮ, ಅರ್ಥ, ಕಾಮುಗಳಲ್ಲಿ ಧರ್ಮವೇ ಸಾರ ವತ್ತಾದದ್ದು ಎಂಬುದು ಪರಮೇಶ್ವರನಿಗೆ ತಿಳಿಯಿ ತಂತೆ. ಪ್ರಶಸ್ತಾಭಿಪ್ರಾಯೆ, ನಿನ್ನ ನಡತೆ ಧರ್ಮದ ಶ್ರೇಷ್ಠತೆಯನ್ನು ಸಾರುವುದಕ್ಕೆ ಪ್ರಮಾಣವಾಗಿ ಪರಿಣಮಿಸಿದೆ ಎಂಬ ಈಶ್ವರ ವಾಕ್ಯಕ್ಕೆ ಮೀರಿದ ಯಾವ ಪ್ರಮಾಣವಿದೆ ಪಾರ್ವತಿಯ ತಪೋ ವರ್ಣನೆಯನ್ನು ಪರಿಣಾಮಕಾರಿಯಾಗಿ ಸಾರುವು ದಕ್ಕೆ !

ಇಷ್ಟು ಲೋಕಾಭಿರಾಮವಾದ ಮಾತು ಕತೆ ಆದಮೇಲೆ ಬಂದ ಕೆಲಸಕ್ಕೆ ಪೀಠಿಕೆ ಹಾಕು ತ್ತಾನೆ ವಟು.

> ಪ್ರಯುಕ್ತ ಸತ್ಕಾರ ವಿಶೇಷಮಾತ್ಮನಾ
> ನ ಮಾಂ ಪರಂ ಸಂಪ್ರತಿಪತ್ತುಮರ್ಹಸಿ
> ಯತಃ ಸತಾಂ ಸಂನತ ಗಾತ್ರಿ ಸಂಗತಂ
> ಮನೀಷಿಭಿಃ ಸಾಪ್ತಪದೀನಮುಚ್ಯತೇ

ಪಾರ್ವತಿಯಿಂದ ಸತ್ಕೃತನಾದ ತಾನು ಪರಕೀಯ ನಲ್ಲವಂತೆ ಆಕೆಗೆ. ಅದಕ್ಕೆ ಕಾರಣವನ್ನು ಕೊಡು ತ್ತಾನೆ. ಎಷ್ಟಾದರೂ ಓದಿದವನು ಬ್ರಹ್ಮಚಾರಿ! 'ಸಾಧುಜನರಲ್ಲಿ ಸಖ್ಯಸಪ್ತಪದಸಾಧ್ಯ' ಎನ್ನು ತ್ತಾನೆ. ಏಳುಹೆಜ್ಜೆ ಕೂಡಿ ನಡೆದರೆ ಏಳು ಮಾತು ಕೂಡಿ ನುಡಿದರೆ ಅಷ್ಟೇ ಸಾಕು ಸ್ನೇಹ ಬೆಳೆಯುತ್ತದೆ ಎಂದು ವಿದ್ವಾಂಸರು ಹೇಳುತ್ತಾರೆ. ಎಂಬ ಪ್ರಮಾಣವನ್ನು ವಟು ಒದಗಿಸುತ್ತಾನೆ ತನ್ನ ಪಾರ್ವತಿಯ ಸಖ್ಯ ಈಗ ಬೆಳೆದಿದೆ. ತಾವು ಅನ್ಯರಲ್ಲ. ಒಬ್ಬೊರೊಬ್ಬರಿಗೆ ಎಂಬ ಸೂಚನೆ ಯನ್ನು ಕೊಡುವ ರೀತಿ ಮೋಹಕವಾಗಿದೆ.

ಹೀಗೆ ಸೊಗಸಾಗಿ ಪೀಠಿಕೆ ಹಾಕಿ ಬ್ರಹ್ಮ ಚಾರಿ ಮಾತು ಬೆಳೆಸುತ್ತಾನೆ :

> ಅತೋತ್ರ ಕಿಂಚಿದ್ಭವತೀಂ ಬಹುಕ್ಷಮಾಂ
> ದ್ವಿಜಾತಿಭಾವಾದುಪಪನ್ನ ಚಾಪಲಃ ।
> ಅಯಂ ಜನಃ ಪ್ರಷ್ಟುಮನಾಸ್ತಪೋಧನೇ
> ನ ಚೇದ್ರಹಸ್ಯಂ ಪ್ರತಿವಕ್ತುಮರ್ಹಸಿ ॥

ತಾನು ಬ್ರಹ್ಮಚಾರಿಯಂತೆ, ತನಗೆ ಮಾತು ಹೆಚ್ಚಂತೆ, ಪಾರ್ವತಿ ತುಂಬ ಸಹನಶೀಲಳಂತೆ. ಬ್ರಹ್ಮಚಾರಿಯಾದ ತನಗೆ ಏನೋ ಅನುಮಾನ ಬಂದ ಹಾಗೂ ಪಾರ್ವತಿಯನ್ನು ಕೇಳಿ ಪರಿಹರಿಸಿ ಕೊಳ್ಳುವ ಆಸೆ ತನಗೆ ಇರುವ ಹಾಗೂ ಮಾತ ನಾಡುತ್ತಾನೆ ಈಶ್ವರನು. ಗುಟ್ಟಿಲ್ಲದೆ ಇದ್ದರೆ ಹೇಳಬಹುದಾದರೆ, ಕೇಳಿ ತಿಳಿದುಕೊಳ್ಳುವುದಕ್ಕೆ ಅಪೇಕ್ಷೆಯಂತೆ. ತಾನು ಚಪಲನು. ಪಾರ್ವತಿ ಸಹನ ಶೀಲಳು ! ಈ ಮಾತಿನ ಮೋಡಿಯಿಂದ ಈ ವಟು ಎಂತಹ ಪ್ರೌಢಭಾಷಕ ಎಂಬುದು ನಮಗೆ ತಿಳಿಯುತ್ತದೆಯಲ್ಲವೆ ?

ಇದೇ ಪ್ರೌಢಭಾಷಕತ್ವ ಮುಂದುವರಿದಿದೆ ಇಲ್ಲಿ :

> ಕುಲೇ ಪ್ರಸೂತಿಃ ಪ್ರಥಮಸ್ಯವೇಧಸ
> ಸ್ತ್ರಿಲೋಕ ಸೌಂದರ್ಯಮಿವೋದಿತಂ ವಪುಃ

ಅಮ್ಯಗೃವೈಶ್ವರ್ಯಸುಖಂ ನವಂ ವಯ
ಸ್ತಪಃಫಲಂ ಸ್ಯಾತ್ಕಿಮತಃ ಪರಂ ವದ ॥

ಈ ತಪ ಏಕೆ ಎಂಬುದೇ ವಟುವಿಗೆ ಬಂದ ಸಂದೇಹ. ಪಾರ್ವತಿಯ ಜನನವೋ ಹಿರಣ್ಯಗರ್ಭನ ವಂಶದಲ್ಲಿ; ದೇಹವೋ ಮೂರು ಲೋಕದ ಸೌಂದರ್ಯದ ಸಾರರೂಪ; ಯೌವನವೋ ಹೊಚ್ಚ ಹೊಸತು, ಐಶ್ವರ್ಯ ಸುಖವೋ ಹುಡುಕಿಕೊಂಡು ಹೋಗಬೇಕಾದದ್ದೇ ಇಲ್ಲ. ಹೀಗಿರುವಾಗ ಬೇರೆ ಯಾವ ಉದ್ದೇಶಕ್ಕೆ ಈ ತಪ. ಇದು ಶಿವನ ಸಂದೇಹ. ಕುಲ, ರೂಪ, ಐಶ್ವರ್ಯಾದಿಗಳೆಲ್ಲ ಇರುವಾಗ ಇನ್ನು ಯಾವುದಕ್ಕಾಗಿ ತಪಸ್ಸು? ಇದೇ ಈಶ್ವರನಿಗೆ ಬಗೆಹರಿಯದ ಪ್ರಶ್ನೆಯಾಗಿದೆ.

ತಪಸ್ಸಿಗೆ ಕಾರಣ ಹೊಳೆಯಲಿಲ್ಲವಂತೆ !

ಭವತ್ಯನಿಷ್ಟಾದಪಿನಾಮ ದುಃಸಹಾ
ನ್ಮನಸ್ವಿನೀನಾಂ ಪ್ರತಿಪತ್ತಿರೀದೃಶೀ
ವಿಚಾರಮಾರ್ಗ ಪ್ರಹಿತೇನ ಚೇತಸಾ
ನ ದೃಶ್ಯತೇ ತಚ್ಚ ಕೃಶೋದರಿ ತ್ವಯಿ

ಅನಿಷ್ಟನಿವಾರಣೆಗಾಗಿ ತಪಸ್ಸು ಮಾಡುವುದುಂಟು. ಎಷ್ಟು ಯೋಚಿಸಿದರೂ ಅಂತಹ ಅನಿಷ್ಟ ನಿನಗೆ ಒದಗಿಬಂದಿಲ್ಲ ಎಂದು ಈಶ್ವರ ಹೇಳುತ್ತಾನೆ.

ಅಲಭ್ಯಶೋಕಾಭಿಭವೇಯಮಾಕೃತಿ
ರ್ವಿಮಾನನಾ ಸುಭ್ರು ಕುತಃ ಪಿತುರ್ಗೃಹೇ
ಪರಾಭಿಮರ್ಶೋ ನ ತವಾಸ್ತಿ ಕಃ ಕರಂ
ಪ್ರಸಾರಯೇತ್ ಪನ್ನಗರತ್ನ ಸೂಚಯೇ ॥

ಯಾರಿಂದಲಾದರೂ ಅಪಮಾನವಾದಂತಿಲ್ಲ, ಯಾರೂ ನಿನ್ನನ್ನು ತಿರಸ್ಕರಿಸಿದಂತಿಲ್ಲ. ಏಕೆಂದರೆ ತಂದೆಯ ಮನೆಯಲ್ಲಿರುವ ನಿನಗೆ ಎಂತಹ ಅಪಮಾನ? ಇನ್ನೊಬ್ಬರಿಂದ ನಿನಗೆ ಅಪಮಾನವೆ? ನಾಗರ ಹೆಡೆಯ ರತ್ನಕ್ಕೆ ಯಾರು ಕೈಚಾಚಿಯಾರು ಎಂಬ ಈಶ್ವರನ ಈ ಮಾತಿನಲ್ಲಿ ಸಂದೇಹಕ್ಕೆ ಅಸ್ಪದವಿಲ್ಲದೆ ಹಾಗೆ, ತಪಸ್ಸಿನ ನಿರ್ಧಾರಕ್ಕೆ ಬರಬೇಕಾದ ಕಷ್ಟಗಳಾವುವೂ ಆಕೆಗೆ ಒದಗಿಲ್ಲವೆಂಬುದನ್ನು ಸಂಯುಕ್ತಿಕವಾಗಿ ಈಶ್ವರ ಮಂಡಿಸಿದ್ದಾನೆ.

ಕಿಮಿತ್ಯಪಾಸ್ಯಾಭರಣಾನಿಯೌವನೇ
ಧೃತಂ ತ್ವಯಾ ವಾರ್ಧಕಶೋಭಿ ವಲ್ಕಲಮ್
ವದ ಪ್ರದೋಷೇ ಸ್ಫುಟ ಚಂದ್ರತಾರಕಾ
ವಿಭಾವರೀಯದ್ಯರುಣಾಯ ಕಲ್ಪತೇ॥

ಈಗ ತುಂಬು ಯೌವನದಲ್ಲಿರುವ ನಿನಗೆ ಮುಪ್ಪಿಗೆ ಒಪ್ಪುವ ನಾರುಮಡಿ ಏಕೆ? ಚಂದ್ರ ನಕ್ಷತ್ರಗಳಿಂದ ಶೋಭಿಸುವ ರಾತ್ರಿಯು ಪ್ರದೋಷಕಾಲದಲ್ಲಿಯೇ ಏಮಾಣನನ್ನು ಬಯಸುವುದೆಂಬ ದೃಷ್ಟಾಂತ ಬೇರೆ !

ತಾನೇ ತಪಸ್ಸಿಗೆ ಕಾರಣಗಳನ್ನು ಊಹಿಸುತ್ತಾನೆ :

ದಿವಂಯದಿ ಪ್ರಾರ್ಥಯಸೇ ವೃಥಾಶ್ರಮಃ
ಪಿತುಃ ಪ್ರದೇಶಾಸ್ತವದೇವ ಭೂಮಯಃ
ಅಥೋಪಯಂತಾರಮಲಂ ಸಮಾಧಿನಾ
ನ ರತ್ನಮನ್ವಿಷ್ಯತಿ ಮೃಗ್ಯತೇಹಿ ತತ್ ॥

'ಸ್ವರ್ಗಪ್ರಾಪ್ತಿಗಾಗಿ ತಪಸ್ಸು ಮಾಡುತ್ತಿರಬಹುದು, ನೀನು. ಆದರೆ ಇದು ವೃಥಾಶ್ರಮ. ನೀನು ಇರುವುದೇ ಸ್ವರ್ಗದಲ್ಲಿ. ಅಥವಾ 'ವರ'ನನ್ನು ಬಯಸುತ್ತಿಯೋ?' ಎಷ್ಟು ಹೊತ್ತಾದ ಮೇಲೆ ವಟು ಈ ಪ್ರಶ್ನೆ ಕೇಳುತ್ತಾನೆ ನೋಡಿ. ಅಭವನ ಅಪೂರ್ವ ಸಂಯಮ ಇಲ್ಲಿದೆ. ಹಾಗಾದರೆ ಈ ತಪ ಸಾಕು. ರತ್ನ ಯಾರನ್ನೂ ಅರಸುವುದಿಲ್ಲ. ಎಲ್ಲರೂ ರತ್ನವಿರುವ ಎಡೆಗೇ ಹುಡಿಕಿಕೊಂಡು ಬರುತ್ತಾರೆ. ಈಗ ಈಶ್ವರ ಬಂದಿರುವುದೂ ಹಾಗೆಯೇ. ತನ್ನ ಆಗಮನವನ್ನು ಶಿವನು

ಎಷ್ಟು ಕಲಾಮಯವಾದ ಮಾತುಗಳಲ್ಲಿ ಸೂಚಿಸು ತ್ತಿದ್ದಾನೆ.

ವರನನ್ನು ಬಯಸುತ್ತಿದ್ದೀಯೋ ಎಂದಾಗ ಪಾರ್ವತಿ ನಿಟ್ಟುಸಿರುಬಿಟ್ಟಳು. ಈ ಸಂದರ್ಭ ವನ್ನು ಸದುಪಯೋಗಪಡಿಸಿಕೊಂಡು ವಟು ಮುಂದುವರಿಯುತ್ತಾನೆ :

ನಿವೇದಿತಂ ನಿಶ್ವಸಿತೇನ ಸೋಷ್ಮಣಾ
ಮನಸ್ತು ಮೇ ಸಂಶಯಮೇವ ಗಾಹತೇ
ನ ದೃಶ್ಯತೇ ಪ್ರಾರ್ಥಯಿತವ್ಯ ಏವತೇ
ಭವಿಷ್ಯತಿ ಪ್ರಾರ್ಥಿತದುರ್ಲಭಃ ಕಥಮ್

ನಿನ್ನ ನಿಟ್ಟುಸಿರಿನಿಂದ, ಬಿಸಿಯುಸಿರಿನಿಂದ ನಿನ್ನ ಮನಸ್ಸು ನನಗೆ ತಿಳಿಯಿತು. ಆದರೂ ಸಂಶಯ ಹೋಗಲಿಲ್ಲ. ನೀನು ಪ್ರಾರ್ಥಿಸುವಷ್ಟು ಯೋಗ್ಯತೆ ಪಡೆದ ವರ ಯಾರೋ ಕಾಣೆನೆ ! ಹೀಗೆ ಪ್ರಾರ್ಥಿ ಸಿದರೂ ಅವನು ಪ್ರತ್ಯಕ್ಷನಾಗನೆ ! ಎಂಬುದು ಶಿವನ ಮಾತು. ನೀನು ವರನನ್ನು ಕಷ್ಟಪಟ್ಟು ಅರಸಿಕೊಂಡು ಹೋಗಬೇಕಾಗಿಲ್ಲ. ಅವನೇ ನಿನ್ನಲ್ಲಿಗೆ ಬರಬೇಕು ಎಂಬುದು ಇದರ ತಾತ್ಪರ್ಯ.

ಅಹೋ ಸ್ಥಿರಃಕೋಪಿ ತವೇಪ್ಸಿತೋ ಯುವಾ
ಚಿರಾಯ ಕರ್ಣೋತ್ಪಲಶೂನ್ಯತಾಂ ಗತೇ
ಉಪೇಕ್ಷತೇಯಃ ಶ್ಲಥಲಂಬಿನೀರ್ಜಟಾಃ
ಕಪೋಲದೇಶೇ ಕಲಮಾಗ್ರಪಿಂಗಲಾಃ

ನೀನು ನಿನ್ನ ಕಿವಿಯ ನೈದಿಲೆಯ ಅವತಂಸವನ್ನು ತೆಗೆದಿದೀಯೇ. ನಿನ್ನ ಕೆನ್ನೆ ತೆರಪಾಗಿದೆ. ಈ ತೆರಪಾದ ಕೆನ್ನೆಯ ಮೇಲೆ ಮಾಗಿದ ಭತ್ತದ ಕದಿರಿನ ಬಣ್ಣದ ಈ ಜಟೆ ಇಳಿ ಬಿದ್ದಿದೆ. ಹೀಗೆ ಈ ಜಟೆ ಇಳಿಬಿದ್ದಿರುವುದನ್ನು ಇನ್ನೂ ಹೀಗೆಯೇ ಬಿಟ್ಟಿರುವುದಕ್ಕೆ ಅವಕಾಶವಿತ್ತಿರುವ ಆ ನಿನ್ನ ಯುವಕನು ನಿಜವಾಗಿಯೂ ಸ್ಥಿರನೇ ಸರಿ. ಹೀಗೆ ಈಶ್ವರ ಪಾರ್ವತಿಯ ವಿಷಯದಲ್ಲಿ ಸಹಾನು ಭೂತಿ ತೋರಿಸುತ್ತಿದ್ದಾನೆ. ಆ ಯುವಕ ಕಠಿಣ ಹೃದಯ. ಇಲ್ಲದಿದ್ದರೆ ಎಂದೋ ಬಂದು ಈ ಜಟಾ ಬಂಧನ ವೇಷವನ್ನು ಮಾಣಿಸುತ್ತಿದ್ದನು ಎಂದು ಇದರ ಅರ್ಥ. ಬ್ರಹ್ಮಚಾರಿ ಇಲ್ಲಿ ಯಾರನ್ನು ನವುರಾಗಿ, ವಿನೋದಪೂರ್ಣವಾಗಿ ಚಿತ್ರಿಸುತ್ತಿ ದ್ದಾನೆಯೋ, ವ್ಯಾಖ್ಯಾನಿಸುತ್ತಿದ್ದಾನೆಯೋ ಆ ವ್ಯಕ್ತಿ ತಾನೇ. ಆ 'ಯುವಕ' ಆ 'ಸ್ಥಿರ' ಬೇರೆ ಯಾರೂ ಅಲ್ಲ, ಈ ವಟುವೇ! ಈ ವಟು 'ಸ್ಥಾಣು'ವೂ ಹೌದು. ಸಹಜವಾದ ಅರ್ಥಕ್ಕೆ ಬಾಧೆ ಬಾರದಂತೆ ಪೆರತೊಂದು ಸವಿನೋದ ನಾತ್ಮಕವಾದ ಅರ್ಥವನ್ನೂ ಇಟ್ಟು ಆಡಿದ ಮಾತು ಕಾಳಿದಾಸನ ವ್ಯಂಗ್ಯ ಚಮತ್ಕಾರಕ್ಕೆ ಸುಂದರ ವಾದ ನಿದರ್ಶನ.

ಪಾರ್ವತಿ ಆಯ್ದಿರಬಹುದಾದ ಯುವಕನ ಟೀಕೆ ಮುಂದುವರಿಯುತ್ತದೆ :

ಮುನಿವೃತ್ತೈಸ್ತ್ವಮತಿಮಾತ್ರಕರ್ಶಿತಾಂ
ದಿವಾಕರಾಪ್ಲುಷ್ಟ ವಿಭೂಷಣಾಸ್ಪದಾಮ್
ಶಶಾಂಕಲೇಖಾಮಿವ ಪಶ್ಯತೋ ದಿವಾ
ಸಚೇತಸಃ ಕಸ್ಯ ಮನೋ ನ ದೂಯತೇ ||

ಚಾಂದ್ರಾಯಣಾದಿ ವ್ರತಗಳಿಂದ ಕೃಶಳಾಗಿ ದ್ದೀಯೆ. ಆಭರಣಗಳನ್ನು ಧರಿಸಬಹುದಾದ ಎಡೆಗಳೆಲ್ಲವೂ ಬಿಸಿಲಿಗೆ ಬಾಡಿ ಬೆಂಡಾಗಿವೆ. ಹಗಲಿನ ಚಂದ್ರನಂತೆ ಆಗಿದ್ದೀಯೆ. ನಿನ್ನನ್ನು ನೋಡಿದ ಯಾರ ಮನಸ್ಸು ತಪಿಸದೇ ಇದ್ದೀತು ಎಂದು ಹೇಳುವಲ್ಲಿ!ಎಲ್ಲರ ಮನವೂ ಕರಗುತ್ತದೆ ಉರಿಯುತ್ತದೆ ಎಂಬುದೇ ಆಶಯ. ನಾನೂ ಉರಿದಿದ್ದೇನೆ ಎಂಬುದೇ ಇಂಗಿತ

ಅನ್ವೈಮಿ ಸೌಭಾಗ್ಯಮದೇನ ವಂಚಿತಂ
ತವಪ್ರಿಯಂ ಯಶ್ಚತುರಾವಲೋಕಿನಃ

ಕರೋತಿಲಕ್ಷ್ಯಂ ಚಿರಮಸ್ಯ ಚಕ್ಷುಷೋ
ನವಕ್ತ್ರ ಮಾತ್ಮೀಯಮರಾಲ ಪಕ್ಷ್ಮಣಃ ॥

ಈ ನಿನ್ನ ಕೊಂಕು ಎವೆಗಳ ಸವಿನೋಟಗಳಿಗೆ ತನ್ನ ಮೊಗವನ್ನು ಎದಿರು ಹಿಡಿಯದ ಆ ನಲ್ಲನು ಸೌಭಾಗ್ಯ ಗರ್ವದಿಂದ ವಂಚಿತನಾಗಿದಾನೆ ಎಂದು ತಿಳಿಯುತ್ತೇನೆ ಎಂದು ವಟು ಹೇಳುವಾಗ ಪಾರ್ವತಿ ಒಲಿಯುವುದೇ ಒಂದು ಭಾಗ್ಯ, ಅವಳ ಮುಖ ನೋಡಿ ನಲಿಯುವ ಭಾಗ್ಯವನ್ನು ಕಳೆದುಕೊಳ್ಳುವ ದಡ್ಡತನದ ಆ ನಲ್ಲ ಎಂತಹ ರೀತಿಯಲ್ಲಿ ವಂಚಿತ ದ್ದಾನೆ ಎಂಬುದು ತಾತ್ಪರ್ಯ

ಕಿಯಚ್ಚಿರಂ ಶ್ರಾಮ್ಯಸಿ ಗೌರಿ ವಿದ್ಯತೇ
ಮಮಾಪಿ ಪೂರ್ವಾಶ್ರಮ ಸಂಚಿತಂ ತಪಃ
ತದರ್ಧಭಾಗೇನ ಲಭಸ್ವ ಕಾಂಕ್ಷಿತಂ
ವರಂ ತಮಿಚ್ಛಾಮಿ ಚ ಸಾಧುವೇದಿತಮ್

ಕೊನೆಯದಾಗಿ ವಟು ಹೇಳುವ ಮಾತು ಇದು. ಗೌರಿ ಇನ್ನೆಷ್ಟು ದಿನ ಈ ಶ್ರಮ? ನಾನೂ ನನ್ನ ಬ್ರಹ್ಮಚರ್ಯಾಶ್ರಮದ ದಿನಗಳಲ್ಲಿ ಬೇಕಾದ ಹಾಗೆ ತಪಸ್ಸು ಮಾಡಿದ್ದೇನೆ. ಅದರ ಅರ್ಧಭಾಗದ ಪುಣ್ಯದಿಂದ ಬಯಸಿದ ವರನನ್ನು ಪಡೆ. ಆದರೆ ಅವರು ಯಾರು, ಹೇಳು. ಸರಿಯಾಗಿ ನಾನು ತಿಳಿದುಕೊಳ್ಳಬೇಕು ಎನ್ನುತ್ತಾನೆ ವಟು.

ಇಲ್ಲಿಗೆ ಪಾರ್ವತಿಯನ್ನು ಕುರಿತು ವಟು ವೇಷದ ಈಶ್ವರ ಆಡುವ ಮೊದಲ ಮಾತುಗಳು ಮುಗಿಯುತ್ತವೆ. ಪಾರ್ವತಿಯ ರೂಪ ವರ್ಣನೆ, ಶೀಲವರ್ಣನೆ, ಕುಲ, ಐಶ್ವರ್ಯ, ಯೌವನಗಳ ಮಾತು ಇಷ್ಟೆಲ್ಲ ಇದ್ದು ಏಕೆ ತಪಸ್ಸು ಎಂಬ ಜಿಜ್ಞಾಸೆ, ತಪಸ್ಸಿಗೆ ತನ್ನದೇ ಆದ ಊಹೆಗಳು ಹೀಗೆ ಕ್ರಮ ಕ್ರಮವಾಗಿ ಮಾತು ಬೆಳೆಯಿಸಿ ವಟು 'ವರ'ನ ಪ್ರಸ್ತಾಪ ತೆಗೆದು ಆ ವರನ ಟೀಕೆ ಬೆಳೆಯಿಸಿ ನನ್ನ ತಪಸ್ಸಿನಿಂದ ಅವನನ್ನು ಪಡೆ ಎಂಬಲ್ಲಿಯವರೆಗೆ ಮಾತು ಬಂದು ನಿಲ್ಲುತ್ತದೆ. 'ಉತ್ಪಲಾಕ್ಷಿ' 'ಉದಾರ ದರ್ಶನೆ' 'ಭಾವಿನೀ' 'ಸಂನತಗಾತ್ರೀ' 'ಬಹುಕ್ಷಮೆ' 'ತಪೋಧನೆ' 'ಕೃಶೋದರಿ' 'ಸುಭ್ರು' 'ಗೌರಿ' ಎಂದು ಕ್ರಮವಾಗಿ ಮಾತಿನ ನಡು ನಡುವೆ ಪಾರ್ವತಿಯನ್ನು ಸಂಬೋಧಿಸಿ ಕೊನೆಗೆ ಹೆಸರು ಹಿಡಿದು ಕರೆದು ಮಾತುಮುಗಿಸುತ್ತಾನೆ ಈಶ್ವರ. ಪಾರ್ವತಿಯನ್ನು ಪರೋಕ್ಷವಾಗಿ ಹೊಗಳುವುದೂ ತನ್ನನ್ನು ನಿಂದಿಸುವುದೂ ಮಾತಿನ ಉದ್ದಕ್ಕೂ ನಡೆಯುತ್ತದೆ. ತನ್ನ ಇಂಗಿತವನ್ನು ತುಂಬ ಗೋಪ್ಯವಾಗಿ ಬಹಿರಂಗ ಪಡಿಸುವ ಚಮತ್ಕಾರ ಇಲ್ಲಿದೆ. ಹೀಗೆ ಕಾಳಿದಾಸ ಮ ಹಾ ಕ ವಿ ಪಾರ್ವತೀಪರಮೇಶ್ವರರ ಸಂವಾದದಲ್ಲಿ ವಟುವೇಷದ ಈಶ್ವರನ ಮಾತುಗಳನ್ನು ಸುಂದರವಾಗಿ ಅಳವಡಿಸಿಟ್ಟಿದ್ದಾನೆ.

ಪರಮೇಶ್ವರನು ಹೀಗೆ ಮರ್ಮವನ್ನು ಬೇಧಿಸುವ ಮಾತುಗಳನ್ನು ಆಡಿದಾಗ ಪಾರ್ವತಿ ಪ್ರತ್ಯುತ್ತರವನ್ನು ಕೊಡಲು ಅಸಮರ್ಥೆಯಾದಳು. ತನ್ನ ಸಖಿಯ ಕಡೆ ನೋಟವನ್ನು ಬೀರಿದಳು. ಆ ಇಂಗಿತಜ್ಞೆ ಪಾರ್ವತಿಯ ಮನೋಗತವನ್ನು ಪರಮೇಶ್ವರನಿಗೆ ಕೆಲವೇ ಮಾತುಗಳಲ್ಲಿ ತಿಳಿಸಿದಳು. ವಟು ದೂರದಲ್ಲಿರುವ ಈಶ್ವರನಿಗೆ ಪಾರ್ವತಿಯ ಸದ್ಭಾವಗಳನ್ನು ಕೇಳಿ ಮಹದಾನಂದವಾಯಿತು. ಆದರೆ ಆ ಆನಂದದ ಲಕ್ಷಣಗಳನ್ನು ಅದುಮಿ ಪಾರ್ವತಿಯನ್ನು ಕುರಿತು ಮತ್ತೆ ಪ್ರಶ್ನಿಸುತ್ತಾನೆ: "ಸಖಿ ಹೇಳಿದ ಈ ಎಲ್ಲವೂ ಪರಿಹಾಸವೋ ಹೇಗೆ?" ಎಂದು.

ಪಾರ್ವತಿಗೆ ಎಂತಹ ಇಕ್ಕಟ್ಟಿನ ಪ್ರಸಂಗ ಇದು! ತನ್ನ ಭಾವೀಪತಿಯ ವಿಷಯದಲ್ಲಿ ತನ

ಗಿರುವ ಅನುರಾಗವನ್ನೂ ಆತನ ಸಮಾಗಮ ಸಿದ್ಧಿಗಾಗಿ ತಾನು ತಪಗೈಯುವ ಬಗೆಯನ್ನೂ ಪರಪುರುಷನ ಎದುರು ಹೇಳುವುದು ಹೇಗೆ? ಲಜ್ಜಾನ್ವಿತೆಯೂ ವಿನಯವತಿಯೂ ಮಿತ ಭಾಷಿಣಿಯೂ ಆದವಳು ಆತ್ಮೀಯವೂ ಗೋಪ್ಯವೂ ಪ್ರಿಯವೂ ಆದ ಈ ವಿಷಯವನ್ನು ಬಹಿರಂಗಪಡಿಸುವುದು ಉಂಟೆ? ಈ ವಟು ತಂದೊಡ್ಡಿದ ಧರ್ಮಸಂಕಟ ಎಷ್ಟು ದಾರುಣ! ಕವಿ ಈ ಸಂದರ್ಭವನ್ನು ವರ್ಣಿಸುವಾಗ ಪಾರ್ವತಿಯು ಸ್ಫಟಿಕದ ಜಪಸರವನ್ನು ತನ್ನ ಬೊಗಸೆಗೈಗಳ ತುದಿಯಲ್ಲಿ ಒರಸಿಕೊಂಡು ಬಹು ದಿನಗಳಿಂದ ಯೋಚಿಸಿಕೊಂಡಿದ್ದ ವಾಕ್ಯವನ್ನು ಮಿತವಾದ ಅಕ್ಷರಗಳಿಂದ ಪ್ರಯಾಸಪೂರ್ವಕವಾಗಿ ಪ್ರಕಟಪಡಿಸಿದರೆಂದು ವರ್ಣಿಸಿ ಪಾರ್ವತಿಯ ಶೀಲದ ರಮಣೀಯತೆಯನ್ನು ಸೂಚಿಸಿದ್ದಾನೆ.

> ಯಥಾಶ್ರುತಂ ವೇದವಿದಾಂ ವರ ತ್ವಯಾ
> ಜನೋಽಯ ಮುಚ್ಚೈಃಪದಲಂ ಘನೋತ್ಸುಕಃ
> ತಪಃ ಕಿಲೇದಂ ತದವಾಪ್ತಿ ಸಾಧನಂ
> ಮನೋರಥಾನಾಮಗತಿರ್ನವಿದ್ಯತೇ

ಹೇ ವೈದಿಕ ಶ್ರೇಷ್ಠ ನೀನು ಕೇಳಿದುದು ನಿಜ. ಈ ಜನ ಶಿವಲಾಭರೂಪವಾದ, ಉನ್ನತವಾದ, ಜ್ಞಾನವನ್ನು ಆಕ್ರಮಿಸುವುದಕ್ಕೆ ಕಾತರವನ್ನು ವ್ಯಕ್ತಪಡಿಸುತ್ತಿರುವ ಸಂಗತಿ ನಿಜ. ಈ ತಪಸ್ಸು ಆ ಪದವಿಯನ್ನು ಪಡೆಯುವುದಕ್ಕಾಗಿಯೇ. ಆಸೆಗೆ ಪಾರ ಎಲ್ಲಿ? ಅದು ಏನನ್ನು ಬೇಕಾದರೂ ಬಯಸಬಹುದು ಎಂಬ ಪಾರ್ವತಿಯ ಈ ಮಾತಿನಲ್ಲಿ ವಿನಯ, ನಯ ಅನುರಾಗ ಈ ಮೂರು ಸುಂದರವಾಗಿ ಮಿಳಿತವಾಗಿರುವುದನ್ನು ಕಾಣುತೇವೆ.

ಈ ಮಾತಿಗೆ ಬ್ರಹ್ಮಚಾರಿಯ ಉತ್ತರ ಸಿದ್ಧವಾಗಿತ್ತು

> ಅಥಾಹವರ್ಣೀ ವಿದಿತೋ ಮಹೇಶ್ವರ
> ಸ್ತದರ್ಥಿನೀ ತ್ವಂ ಪುನರೇವ ವರ್ತಸೇ
> ಅಮಂಗಲಾಭ್ಯಾಸರತಿಂ ವಿಚಿಂತ್ಯ ತಂ
> ತವಾನುವೃತ್ತಿಂ ನಚ ಕರ್ತುಮುತ್ಸಹೇ

ಮಹೇಶ್ವರನ ವಿಷಯ ನನಗೆ ಗೊತ್ತು. ಒಮ್ಮೆ ಭಗ್ನಮನೋರಥಳಾದ ನೀನು ಮತ್ತೆ ಆ ಈಶ್ವರನನ್ನೇ ಅಪೇಕ್ಷಿಸುತ್ತಿದ್ದೀಯೆ. ಅಮಂಗಳವಾದ ಆಚಾರಗಳಲ್ಲಿ ಆಸಕ್ತನಾಗಿರುವ ಆತನನ್ನು ಅನುಸರಿಸಲಿರುವ ನಿನ್ನ ವೃತ್ತಿಯನ್ನು ನಾನು ಒಪ್ಪಲಾರೆ ಎನ್ನುತ್ತಾನೆ ಶಿವ. ಇಲ್ಲಿಯ ವ್ಯಂಗ ಪರಿಹಾಸ ಅವರ್ಣನೀಯ. 'ಮಹೇಶ್ವರನ ಸಂಗತಿ ನನಗೆ ಗೊತ್ತು' ಎಂಬುದು ನಿಜ. ಈಶ್ವರನಿಗಲ್ಲದೆ ಈಶ್ವರನ ವಿಚಾರ ಬೇರೆ ಯಾರಿಗೆ ಗೊತ್ತು? ಒಮ್ಮೆ ಭಗ್ನಮನೋರಥಳಾದ ನೀನು ಎಂಬಲ್ಲಿ ತನ್ನ ಮಾತಿನಿಂದ ಪಾರ್ವತಿಗೆ ನೋವಾದೀತ ನೋಡೋಣ ಎಂಬ ಅಭಿಪ್ರಾಯ ಈಶ್ವರನದು ಇದ್ದ ಹಾಗೆ ತೋರುವುದಿಲ್ಲವೆ?

ಮತ್ತೆ ಈಶ್ವರನ ಮಾತುಗಳು ಮುಂದುವರಿಯುತ್ತವೆ :

> ಅವಸ್ತು ನಿರ್ಬಂಧಪರೇ ಕಥಂ ನುತೇ
> ಕರೋಽಯ ಮಾಮುಕ್ತ ವಿವಾಹಕೌತುಕಃ
> ಕರೇಣ ಶಂಭೋರ್ವಲಯೀಕೃತಾಹಿನಾ
> ಸಹಿಷ್ಯತೇ ತತ್ ಪ್ರಥಮಾವಲಂಬನಮ್

'ಧಾರೆಯ ಕಂಕಣ ಕಟ್ಟಿರುವ ನಿನ್ನ ಕೈ ಹಾವಿನ ಕಡಗ ತೊಟ್ಟಿರುವ ಶಿವನ ಕೈಯನ್ನು ಹೇಗೆ ಹಿಡಿದುಕೊಳ್ಳಬಹುದು' ಎಂಬಲ್ಲಿ ಪಾಣಿಗ್ರಹಣ ವಿಧಿಯೇ ಕಷ್ಟಸಾಧ್ಯ ಎನ್ನುವುದು ಅವನ ಮಾತಿನ ಅಭಿಪ್ರಾಯ.

> ತ್ವಮೇವ ತಾವತ್ ಪರಿಚಿಂತಯ ಸ್ವಯಂ
> ಕದಾಚಿದೇತೇ ಯದಿ ಯೋಗಮರ್ಹತಃ

> ವಧೂದುಕೂಲಂ ಕಲಹಂಸಲಕ್ಷಣಂ
> ಗಜಾಜಿನಂ ಶೋಣಿತ ಬಿಂದುವರ್ಷಿಚ

ನೀನು ಗೋರೋಜನಾದಿಗಳಿಂದ ಅಂಕಿಸಿರುವ ಹಂಸಗಳ ಗುರುತು ಮೆರೆಯುವ ಸಂಕಲಿಕೆ ಸೀರೆ ಉಡುವವಳು. ಆ ಶಿವನೋ ನೆತ್ತರು ಹನಿಯುವ ಆನೆಯ ತೊವಲು ಉಡುವವನು. ನಿಮ್ಮ ಇಬ್ಬರಲ್ಲಿಯೂ ಸಾಮ್ಯ ಹೇಗೆ ಸಾಧಿಸೀತು ಎನ್ನುತ್ತಾನೆ ಶಿವ. ತಾನೇ ಪಾರ್ವತಿ ಯೋಚಿಸಿ ನಿರ್ಣಯಿಸಬೇಕಂತೆ. ಪಾಣಿಗ್ರಹಣ ವಿಧಿಯಂತೆ ವಸ್ತ್ರ ಬಂಧನ ವಿಧಿಯೂ ಅಸಾಧ್ಯವೆಂಬುದು ಧ್ವನಿತವಾಗುತ್ತದೆ.

ಪಾರ್ವತೀ ಪರಮೇಶ್ವರರ ವಿವಾಹ ಹೇಗೆ ಇಜ್ಜೋಡಿಯ ಸಂಬಂಧವಾಗುತ್ತದೆ ಎಂಬುದನ್ನು ವಟು ಮುಂದಿನ ಮಾತುಗಳಲ್ಲಿ ಮತ್ತೆ ವಿಶದಪಡಿಸುತ್ತಾನೆ.

> ಚತುಷ್ಕಪುಷ್ಪ ಪ್ರಕರಾವ ಕೀರ್ಣಯೋಃ
> ಪರೋಽಪಿಕೋನಾಮ ತವಾನುಮನ್ಯತೇ
> ಅಲಕ್ತಕಾಂಕಾನಿ ಪದಾನಿ ಪಾದಯೋ
> ರ್ವಿಕೀರ್ಣಕೇಶಾಸು ಪರೇತಭೂಮಿಷು ||

'ನೀನು ಹೂವುಗಳು ಹಾಸಿರುವ ಮಹಲಿನಲ್ಲಿ ಅಲತಿಗೆ ಹಚ್ಚಿದ ಹೆಜ್ಜೆಗಳನ್ನು ಮೆಲ್ಲನೆ ಇಟ್ಟು ನಡೆವವಳು. ಇಂತಹ ನೀನು ಆ ಶಿವನೊಡನೆ ಹೆಣಗಳ ತಲೆಗೂದಲು ಹಸರಿಸಿರುವ ಸುಡುಗಾಡಿನ ಬಿರು ನೆಲದಲ್ಲಿ ಅಡಿಯಿಡುವುದನ್ನು ಯಾವ ಹಗೆ ತಾನೆ ಒಪ್ಪುತ್ತಾನೆ ?' ಎನ್ನುತ್ತಾನೆ ಶಿವ. ನಿನಗೆ ಶಿವನೊಡನೆ ಸಾಹಚರ್ಯವಾದರೂ ಸಾಧ್ಯವೆ ಎನ್ನುವುದು ವಟುವಿನ ಮಾತಿನ ಅರ್ಥ. ಪಾರ್ವತಿಯ ಕೋಮಲ ಸ್ವಭಾವ ಈಶ್ವರನ ಶ್ಮಶಾನಪಾಸದವನೆಂಬ ಕಲ್ಪನೆಯ ಹಿನ್ನೆಲೆಯಲ್ಲಿ ಹೇಗೆ ಎದ್ದುಕಾಣುತ್ತದೆ ಇಲ್ಲಿ ?

ಶಿವನೊಡನೆ ಸಹಬಾಳುವೆ ಅಸಹನೀಯವಾಗುವುದೆಂಬುದನ್ನು ಮುಂದೆಯೂ ವಟು ಹೇಳುತ್ತಾನೆ :

> ಅಯುಕ್ತರೂಪಂ ಕಿಮತಃ ಪರಂವದ
> ತ್ರಿನೇತ್ರವಕ್ಷಃ ಸುಲಭಂ ತವಾಪಿಯತ್
> ಸ್ತನದ್ವಯೇಽಸ್ಮಿನ್ ಹರಿಚಂದನಾಸ್ಪದೇ
> ಪದಂ ಚಿತಾಭಸ್ಮ ರಜಃ ಕರಿಷ್ಯತಿ

ಶಿವನನ್ನು ಮದುವೆಯಾದರೂ ಶ್ರೀಗಂಧ ಚಂದನಾದಿ ಲೇಪನದ್ರವ್ಯಗಳಿಂದ ಶೋಭಿಸುವ ನಿನ್ನ ದೇಹ ಚಿತೆಯ ಒೂದಿಯ ಲೇಪನವನ್ನು ಸಹಿಸೀತೆ ಎನ್ನುತ್ತಾನೆ ಶಿವ ಭಸ್ಮಧಾರಣ ನಿನ್ನಿಂದ ಸಾಧ್ಯವೇ ಎಂಬುದು ಭಾವ

ಈ ಶಿವ ಸಂಬಂಧದಿಂದ ನೀನು ಲೋಕದ ಅಪಹಾಸ್ಯಕ್ಕೂ ಗುರಿಯಾಗುತ್ತೀಯೆ ಎಂಬುದು ಮುಂದಿನ ಅವನ ವಾದ.

> ಇಯಂ ಚ ತೇಽನ್ಯಾ ಪುರತೋ ವಿಡಂಬನಾ
> ಯದೂಢಯಾ ವಾರಣರಾಜ ಹಾರ್ಯಯಾ
> ವಿಲೋಕ್ಯ ವೃದ್ಧೋಕ್ಷಮಧಿಷ್ಠಿತಂ ತ್ವಯಾ
> ಮಹಾಜನಃ ಸ್ಮೇರ ಮುಖೋ ಭವಿಷ್ಯತಿ ||

ಆನೆಯ ಮೇಲೆ ಮೆರವಣಿಗೆ ಬರುವ ಬದಲು ಮುದಿಯೆತ್ತಿನ ಮೇಲೆ ಮೆರವಣಿಗೆ ಬಂದರೆ ನಿನ್ನನ್ನು ನೋಡಿ ಮಹಾಜನರು ನಗುತ್ತಾರೆ. ಅವರ ವಿಡಂಬನಕ್ಕೆ ನೀನು ಮಾತ್ರ ಬಾಗುತ್ತೀಯೆ ಎಂಬ ಮಾತಿನಲ್ಲಿ ಈ ನಗಪಾಟಲು ಏಕೆ ಎಂದು ಈಶ್ವರನು ಪ್ರಶ್ನಿಸುತ್ತಿದ್ದಾನೆ.

ಈಶ್ವರನನ್ನು ಸೇರುವ ಹಂಬಲದಲ್ಲಿ ಇಬ್ಬರೂ ದುರವಸ್ಥೆಗೆ ಈಡಾಗಿದ್ದಾರಂತೆ.

> ದ್ವಯಂ ಗತಂ ಸಂಪ್ರತಿ ಶೋಚನೀಯ ತಾಂ
> ಸಮಾಗಮ ಪ್ರಾರ್ಥನಯಾ ಪಿನಾಕಿನಃ

> ಕಲಾಚ ಸಾ ಕಾಂತಿಮತೀ ಕಲಾವತ
> ಸ್ತ್ವಮಸ್ಯ ಲೋಕಸ್ಯ ಚ ನೇತ್ರಕೌಮುದೀ

ಪಿನಾಕಿಯನ್ನು ಸೇರಬೇಕೆಂದು ಬಯಸಿ ಆಕಾಶದ ಆ ಚಂದ್ರ ಕಲೆ, ಈ ಲೋಕದ ಚಂದ್ರಿಕೆಯಾದ ನೀನು ಈ ಇಬ್ಬರೂ ದುರವಸ್ಥೆಗೆ ಬಂದಂತಾಯಿತು ಎಂಬ ಶಿವನ ಈ ಮಾತಿನಲ್ಲಿ ನಿಕೃಷ್ಟವಾದ ವಸ್ತುವನ್ನು ಆಶ್ರಯಿಸಿ ಕೊರಗಬೇಕಾಯಿತು ಎಂಬ ಭಾವ ಇದೆ.

> ವಪುರ್ವಿರೂಪಾಕ್ಷಮಲಕ್ಷ್ಯ ಜನ್ಮತಾ
> ದಿಗಂಬರತ್ವೇನ ನಿವೇದಿತಂ ವಸು
> ವರೇಷು ಯದ್ಬಾಲಮೃಗಾಕ್ಷಿ ಮೃಗ್ಯತೇ
> ತದಸ್ತಿ ಕಿಂ ವ್ಯಸ್ತಮಪಿ ತ್ರಿಲೋಚನೇ

'ವಂಶವೋ ಯಾರಿಗೂ ತಿಳಿಯದು, ದೇಹವೋ ಮೂರು ಕಣ್ಣುಗಳಿಂದ ವಿಕಾರವಾಗಿದೆ. ಐಶ್ವರ್ಯವೋ ದಿಗಂಬರತ್ವದಿಂದಲೇ ಅರಿತುಕೊಳ್ಳಬಹುದು. ಹೇಬಾಲಮೃಗನೇತ್ರೇ ಯಾವ ಗುಣಗಳನ್ನು ವರನಲ್ಲಿ ಹುಡುಕುತ್ತಾರೋ ಆ ಗುಣಗಳಲ್ಲಿ ಒಂದಾದರೂ ಆ ಮುಕ್ಕಣ್ಣನಲ್ಲಿದೆಯೇ' ಎಂಬುದು ವಟುವಿನ ಪ್ರಶ್ನೆ. ಆದ್ದರಿಂದ,

> ನಿವರ್ತಯಾಸ್ಮಾದಸ ದೀಪ್ಸಿತಾನ್ಮನಃ
> ಕ್ವತದ್ವಿಧಸ್ತ್ವಂ ಕ್ವ ಚ ಪುಣ್ಯ ಲಕ್ಷಣಾ
> ಅಪೇಕ್ಷ್ಯತೇ ಸಾಧು ಜನೇನ ವೈದಿಕೀ
> ಶ್ಮಶಾನ ಶೂಲಸ್ಯ ನ ಯೂಪಸತ್‌ಕ್ರಿಯಾ ॥

ನಿನ್ನ ಮನಸ್ಸನ್ನು ಈ ಕೆಟ್ಟ ಬಯಕೆಯಿಂದ ಹಿಂದಿರುಗಿಸು. ಪುಣ್ಯಲಕ್ಷಣೆಯಾದ ನೀನೆಲ್ಲಿ? ಹಾಗಿರುವ ಶಿವನೆಲ್ಲಿ? ಶ್ಮಶಾನದಲ್ಲಿರುವ ಶೂಲಕ್ಕೆ ಯಜ್ಞದಲ್ಲಿ ಯೂಪ ಸ್ತಂಭಕ್ಕೆ ಸಲ್ಲುವ ವೇದೋಕ್ತವಾದ ಸತ್ಕರ್ಮಗಳನ್ನು ಸಜ್ಜನಳು ಎಂದೂ ಮಾಡುವುದಿಲ್ಲ ಎನ್ನುತ್ತಾನೆ ಶಿವ. ಪಾರ್ವತಿಯ ಸತ್ವಪರೀಕ್ಷೆಗಾಗಿ ಶಿವನು ಆಡಿದ ಕೊನೆಯ ಮಾತು ಇದು. ಈ ಸಂದರ್ಭದಲ್ಲಿ ಉದ್ದಕ್ಕೂ ವಟುವೇಷದ ಪರಮೇಶ್ವರನು ಪಾರ್ವತಿಯ ಸ್ಥಿರ ಬುದ್ಧಿಯನ್ನೂ ಏಕೋ ಭಾವವನ್ನೂ ಪರೀಕ್ಷಿಸುವ ಸಲುವಾಗಿ ವ್ಯಂಗ್ಯವಾಗಿ ಮಾತುಗಳನ್ನು ಆಡಿರುವುದು ಕಾಣಬರುತ್ತದೆ. ಸಾಮಾನ್ಯರ ಬುದ್ಧಿಗೆ ನಿಲುಕುವಂತಹ ಮಾತುಗಳನ್ನು ಸ್ವಲ್ಪ ಲಾಘುವವಾಗಿಯೇ ಆಡಿದ್ದಾನೆ ಶಿವ. ಮದುವೆಯಾಗುವ ವರನಲ್ಲಿರಬೇಕಾದ ಗುಣಗಳು, ಪರ್ವತ ರಾಜಕನ್ಯೆಯಾದ ಪಾರ್ವತಿಯ ವಿವಾಹ ಕಾಲದ ವೈಭವ, ಅದಕ್ಕೆ ಸರಿಜೋಡಿಯಾಗದ ಈಶ್ವರನ ರೂಪ, ಗುಣ ಮುಂತಾದವು—ಇವುಗಳನ್ನು ಕುರಿತು ಚುಚ್ಚುಮಾತುಗಳನ್ನು ಉದ್ದೇಶಪೂರ್ವಕವಾಗಿ ವಟು ನುಡಿದಿದ್ದಾನೆ. ಈ ಮಾತುಗಳನ್ನು ಕೇಳಿದರೆ ಸಾಮಾನ್ಯರಿಗೆ ಈ ವಟು ಹೇಳುವುದು ನಿಜ. ಇಂತಹ ಪಾರ್ವತಿ ಅಂತಹ ಶಿವನನ್ನು ಮದುವೆಯಾದರೆ ಎಂತಹ ಏರುಪೇರು ಜೋಡುಯಾಗುತ್ತದೆ. ಎಂತಹ ವಿಷಮ ದಾಂಪತ್ಯವಾಗುತ್ತದೆ' ಎನಿಸುತ್ತದೆ. ಸಾಮಾನ್ಯರ ಕಣ್ಣಿಗೆ, ಮೇಲು ನೋಟಕ್ಕೆ, ವಟುವಿನ ಮಾತು ದಿಟವೆಂದೇ ಹೊಳೆಯುತ್ತದೆ. ಆದರೆ ಪಾರ್ವತಿ ಅಸಾಮಾನ್ಯೆ. ತಪಸ್ಸಿನಿಂದ ಅಪೂರ್ವವಾದ ತತ್ತ್ವಜ್ಞಾನವೂ ಅಚಲವಾದ ಅಭವ ಪ್ರೇಮವೂ ಅವಳ ಮನಸ್ಸನ್ನು ತುಂಬಿರುವಾಗ ಇಂತಹ ಮಾತುಗಳು ಅವಳಿಗೆ ಕೋಪವನ್ನುಂಟು ಮಾಡದೆ ಇರುತ್ತವೆಯೆ? ಆದ್ದರಿಂದ ವಿನಾಕಾರಣ ತನ್ನನ್ನು ಕೆರಳಿಸಿದ ವಟುವನ್ನು ಕುರಿತು ಹೇಗೆ ನಡೆದಳು, ಹೇಗೆ ನುಡಿದಳು ಎಂಬುದನ್ನು ಕವಿವಾಣಿಯನ್ನೇ ಮತ್ತೆ ಓದಿ ತಿಳಿಯೋಣ. !

> ಉವಾಚ ಚೈನಂ ಪರಮಾರ್ಥತೋ ಹರಂ
> ನವೇತ್ಸಿ ನೂನಂ ಯತ ಏವಮಾತ್ಥಮಾಮ್
> ಅಲೋಕ ಸಾಮಾನ್ಯಮಚಿಂತ್ಯ ಹೇತುಕಂ
> ದ್ವಿಷಂತಿ ಮಂದಾಶ್ಚರಿತಂ ಮಹಾತ್ಮನಾಮ್

'ತತ್ವತಃ ನಿನಗೆ ಹರನ ವಿಷಯ ತಿಳಿಯದು. ಆದ್ದರಿಂದಲೇ ನೀನು ನನ್ನೊಡನೆ ಹೀಗೆ ಹೇಳುತ್ತಿದೀಯೆ. ಸಾಮಾನ್ಯರ ತಿಳಿವಳಿಕೆಗೆ ಮೀರಿರುವ ಅಸಾಮಾನ್ಯರ ನಡೆನುಡಿಗಳನ್ನು ಅಂತಹ ಮಹಾತ್ಮರ ಚರಿತ್ರೆಯನ್ನು ಮೂಢರು ಅರಿಯಲಾರರು, ತಪ್ಪುತಪ್ಪಾಗಿ ಅರಿಯುವುದೂ ಉಂಟು. ಆದ್ದರಿಂದಲೇ ದಡ್ಡರು ದೊಡ್ಡವರನ್ನು ಹಳಿಯುತ್ತಾರೆ ಎಂದು ಹೇಳಿ ವಟುವಿನ ಅಜ್ಞಾನ, ಈಶ್ವರನ ಮಹಾಮಹಿಮೆ, ತನಗೆ ಆತನಲ್ಲಿರುವ ಗೌರವ ಈ ಮೂರನ್ನೂ ಪಾರ್ವತಿ ಏಕಕಾಲದಲ್ಲಿ ತನ್ನ ಈ ಉತ್ತರದಲ್ಲಿ ಪ್ರಕಟಪಡಿಸಿದ್ದಾಳೆ. ಪಾರ್ವತಿಯು ಮಾತುಗಳನ್ನು ಮುಂದುವರಿಸುತ್ತಾಳೆ :

ವಿಪತ್ಪ್ರತೀಕಾರ ಪರೇಣಮಂಗಳಂ
ನಿಷೇವ್ಯತೇ ಭೂತಿ ಸಮುತ್ಸುಕೇನವಾ
ಜಗಚ್ಛರಣ್ಯಸ್ಯ ನಿರಾಶಿಷಃ ಸತಃ
ಕಿಮೇಭಿರಾಶೋ ಪಹತಾತ್ಮವೃತ್ತಿಭಿಃ

'ಸಂಕಟದಿಂದ ಪಾರಾಗುವುದಕ್ಕೂ ಮಂಗಳವನ್ನು ಪಡೆಯುವುದಕ್ಕೂ ಮಂಗಳ ಕರ್ಮವನ್ನು ಆಚರಿಸಬೇಕು. ಯಾವ ಆಶೆಯೂ ಇಲ್ಲದ ಲೋಕರಕ್ಷಕನಿಗೆ ಆಶಾಪೀಡಿತರ ಇಂತಹ ನಡವಳಿಗಳಿಂದ ಏನಾಗಬೇಕಾಗಿದೆ' ಎಂದು ಪಾರ್ವತಿ ಕೇಳುತ್ತಾಳೆ. 'ಮಹೇಶ್ವರನು ನನಗೆ ಗೊತ್ತು. ಅವನ ಅಮಂಗಳದಲ್ಲಿ ಆಸಕ್ತನು' ಎಂದ ವಟುವಿನ ಮಾತುಗಳಿಗೆ ಇಲ್ಲಿ ಉತ್ತರವಿದೆ. ಈಶ್ವರನ ನಿಜವಾದ ಸ್ವಭಾವ ನಿನಗೆ ಗೊತ್ತಿಲ್ಲ. ಶಿವನು ಲೋಕಗಳನ್ನು ಕಾಪಾಡುವವನು. ಅವನಿಗೆ ಯಾವ ಆಪತ್ತುಗಳೂ ಇಲ್ಲ. ಯಾವ ಆಶೆಗಳೂ ಇಲ್ಲ. ಯಾವಾಗಲೂ ಪರಿಪೂರ್ಣ. ಆದುದರಿಂದ ಸುಖ, ಐಶ್ವರ್ಯ, ಮಂಗಳಗಳ ವಿಷಯದಲ್ಲಿ ಕಾತರನೂ ಅಲ್ಲ. ಆದ್ದರಿಂದ ಶಿವನು ಮಂಗಳಾಸಕ್ತನೋ ಅಮಂಗಳಾಸಕ್ತನೋ ಅದನ್ನು ಕಟ್ಟಿಕೊಂಡು ನಮಗೇನು ? ಯಾರು ಯಾವ ಆಶೆಯೂ ಇಲ್ಲದವನೋ ಆದರೆ ಎಲ್ಲರ ಆಶೆಗಳನ್ನೂ ನೆರವೇರಿಸುವವನೋ ಯಾರು ನಿವಾರಿಸಿಕೊಳ್ಳಬೇಕಾದ ಯಾವ ಆಪತ್ತುಗಳೂ ಇಲ್ಲದವನೋ ಆದರೆ ಎಲ್ಲರ ಆಪತ್ತುಗಳನ್ನೂ ನಿವಾರಿಸುವವನೋ ಅಂತಹ ವ್ಯಕ್ತಿ ಶಿವ ಎಂಬ ಅಭಿಪ್ರಾಯ ಪಾರ್ವತಿಯ ಮಾತುಗಳಲ್ಲಿ ಅಡಗಿದೆ. ಪಾರ್ವತಿ ಶಿವನನ್ನು ಕುರಿತ ತನ್ನ ಅಭಿಪ್ರಾಯವನ್ನು ಮತ್ತೆ ಈ ರೀತಿ ತಿಳಿಸುತ್ತಾಳೆ :

ಅಕಿಂಚನಃ ಸನ್ ಪ್ರಭವಃ ಸ ಸಂಪದಾಂ
ತ್ರಿಲೋಕನಾಥಃ ಪಿತೃಸದ್ಮ ಗೋಚರಃ
ಸ ಭೀಮರೂಪಃ ಶಿವ ಇತ್ಯುದೀರ್ಯತೇ
ನ ಸಂತಿ ಯಾಥಾರ್ಥ್ಯವಿದಃ ಪಿನಾಕಿನಃ

ಪರಮೇಶ್ವರನು ಏನೂ ಇಲ್ಲದೆಯೆ ಎಲ್ಲ ತೆರನಾದ ಐಶ್ವರ್ಯಗಳಿಗೂ ತವರಾಗಿದ್ದಾನೆ. ಮೂರು ಲೋಕಗಳನ್ನೂ ವ್ಯಾಪಿಸಿ ಅವುಗಳ ಒಡೆಯನಾಗಿದ್ದಾನೆ. ಹೀಗಿದ್ದೂ ಸುಡುಗಾಡಿನಲ್ಲಿ ಸಂತೋಷವಾಗಿ ನೆಲಸಿದ್ದಾನೆ. ಅವನು ಭೀಮರೂಪನೂ ಹೌದು. ಮಂಗಳ ರೂಪನೂ ಹೌದು. ಆದುದರಿಂದಲೇ ಆ ಶಿವನ ಯಥಾರ್ಥವನ್ನು ಅರಿತವರು ಯಾರೂ ಇಲ್ಲ, ಎನ್ನುತ್ತಾಳೆ ಪಾರ್ವತಿ. ಈ ಧಾಟಿಯಲ್ಲಿಯೇ ಮಾತು ಮುಂದುವರಿಯುತ್ತದೆ.

ವಿಭೂಷಣೋದ್ಭಾಸಿ ಪಿನದ್ಧಭೋಗಿವಾ
ಗಜಾಜಿನಾಲಂಬಿ ದುಕೂಲಧಾರಿ ವಾ
ಕಪಾಲಿ ವಾಸ್ಯಾದಥವೇಂದು ಶೇಖರಂ
ನ ವಿಶ್ವ ಮೂರ್ತೇರವಧಾರ್ಯತೇ ವಪುಃ

'ಹಾವುಗಳನ್ನು ತೊಟ್ಟುಕೊಂಡಿದ್ದಾನೆಯೋ ಆನೆಯ ತೊಗಲು ಉಟ್ಟುಕೊಂಡಿದ್ದಾನೆಯೋ ಚಂದಿರನನ್ನು ಮುಡಿದಿದ್ದಾನೆಯೋ

ಬ್ರಹ್ಮಕಪಾಲ ಹಿಡಿದಿದ್ದಾನೆಯೋ ವಿಶ್ವ ಮೂರ್ತಿಯ ಆಕಾರವನ್ನು ನಿರ್ಧರಿಸುವವರು ಯಾರು ?' ಎನ್ನುತ್ತಾಳೆ ಪಾರ್ವತಿ. ಇಂತಹ ಲೋಕೋತ್ತರ ಮಹಿಮೆ ಆತನದು ಕೇವಲ ಹೊರಮೈಯ ಉಡುಗೆ ತೊಡುಗೆಗಳಷ್ಟರಿಂದಲೆ ಪರಶಿವಮೂರ್ತಿಯ ಸ್ವರೂಪ ಜ್ಞಾನವಾಗ ಬಲ್ಲುದೆ ಎನ್ನುವುದು ಇದರ ಅಭಿಪ್ರಾಯ. ಸಣ್ಣ ಮಾನವ ವ್ಯಕ್ತಿಯ ವಿಷಯದಲ್ಲಿಯೇ ಆತನ ಚಾರಿತ್ರ್ಯವನ್ನು ಪರಿಪೂರ್ಣವಾಗಿ ಬಲ್ಲವರು ಅವನ ನಂಟರು ಇಷ್ಟರು ಆಪ್ತರು ಇವರಲ್ಲಿಯೇ ಇಲ್ಲ ಎಂದ ಮೇಲೆ ದೇವದೇವನಾದ ಪರಮೇಶ್ವರನ ಚರಿತ್ರೆ, ವ್ಯಕ್ತಿಮಹಿಮೆ, ಲೀಲೆಗಳನ್ನು ಅಳೆಯುವುದುಂಟೆ ತಿಳಿಯುವುದುಂಟೆ ಎನ್ನುವುದು ಇದರ ಅರ್ಥ. ಮುಂದೆ:

ತದಂಗ ಸಂಸರ್ಗಮವಾಪ್ಯ ಕಲ್ಪತೇ
ಧ್ರುವಂ ಚಿತಾಭಸ್ಮರಜೋ ವಿಶುದ್ಧಯೇ
ತಥಾಹಿ ನೃತ್ಯಾಭಿನಯಕ್ರಿಯಾಚ್ಯುತಂ
ವಿಲಿಪ್ಯತೇ ಮೌಲಿಭಿರಂಬರೌಕಸಾಮ್

ಎಂಬಲ್ಲಿ ಪಾರ್ವತಿ ಈಶ್ವರ ತತ್ವದ ವಿಭೂತಿ ಪ್ರಸಾದಾದಿ ಗುಣಗಳನ್ನು ವರ್ಣಿಸುತ್ತಾಳೆ. 'ಇಂತಹ ಪರಮೇಶ್ವರನು ಮೈಯಲ್ಲಿ ತಳೆದ ಚಿತೆಯ ಬೂದಿಯೂ ಇನ್ನೊಂದು ವಸ್ತುವನ್ನು ಶುದ್ಧಿಗೊಳಿಸುವ ಸತ್ವವನ್ನು ಪಡೆದಿರುತ್ತದೆ. ಶಿವನು ನಾಟ್ಯವಾಡುವಾಗ ಉದುರಿದ ಮೈಬೂದಿಯನ್ನು ಸುರರು ತಲೆಯಲ್ಲಿ ಪ್ರಸಾದ ರೂಪವಾಗಿ ಧರಿಸುತ್ತಾರೆ' ಎನ್ನುತ್ತಾಳೆ ಪಾರ್ವತಿ. ಈಶ್ವರನ ಮಹಿಮೆ ಇಲ್ಲಿಗೆ ಮುಗಿಯಲಿಲ್ಲ. ಪಾರ್ವತಿ ಇದಕ್ಕೂ ಅದ್ಭುತವಾದ ವಿವರವನ್ನು ಈ ಮುಂದೆ ಕೊಡುತ್ತಾಳೆ:

ಅಸಂಪದಸ್ತಸ್ಯ ವೃಷೇಣ ಗಚ್ಛತಃ
ಪ್ರಭಿನ್ನ ದಿಗ್ವಾರಣ ವಾಹನೋವೃಷಾ
ಕರೋತಿ ಪಾದಾವುಪಗಮ್ಯ ಮೌಲಿನಾ
ವಿನಿದ್ರಮಂದಾರ ರಜೋರುಣಾಂಗುಲೀ

'ಐರಾವತವನ್ನು ಏರಿಬರುವ ಇಂದ್ರನು ಎತ್ತನ್ನು ಏರಿಬರುವ ಶಿವನ ಚರಣಗಳಿಗೆ ನಮಸ್ಕಾರ ಮಾಡಿ ತಾನು ಕೊರಳಿನಲ್ಲಿ ಧರಿಸಿದ್ದ ಅರಳುತ್ತಿರುವ ಮಂದಾರಮಾಲೆಯ ಹುಡಿಯಿಂದ ಆ ಶಿವನ ಅಡಿಗಳನ್ನು ಅರುಣಗೊಳಿಸುತ್ತಾನೆ.' ಪಾರ್ವತಿಯ ಈ ಮಾತು ಮಹತ್ವದ್ದಾಗಿದೆ. ವ್ಯಕ್ತಿಯ ಶ್ರೀಮಂತಿಕೆ ಅಥವಾ ದಾರಿದ್ರ್ಯ ಆ ವ್ಯಕ್ತಿಯ ಅಂತಸ್ಸತ್ವವನ್ನು ಅಳೆಯುವ ಸಾಧನವಲ್ಲ ಎಂಬುದು ಇಲ್ಲಿಯ ಭಾವ. ಭೋಗ ಭೂಮಿಯಲ್ಲಿ ನಿಂತು ಕಾಲಿದಾಸ ಯೋಗದ ಹಿರಿಮೆಯನ್ನು ಸಾರುತ್ತಿದ್ದಾನೆ ಇಲ್ಲಿ. ಎತ್ತು ಏರಿದ ಶಿವನಿಗೆ ಐರಾವತವೇರಿದ ಇಂದ್ರನು ನಮಸ್ಕರಿಸುತ್ತಾನೆ. ಭಗವದ್ವಿಭೂತಿಯ ಮಹಿಮೆ ಎಂದರೆ ಇದೇ.

ವಿವಕ್ಷತಾ ದೋಷಮಪಿ ಚ್ಯುತಾತ್ಮನಾ
ತ್ವಯೈಕಮೀಶಂ ಪ್ರತಿಸಾಧು ಭಾಷಿತಮ್
ಯ ಮಾಮನಂತ್ಯಾತ್ಮಭುವೋಪಿ ಕಾರಣಮ್
ಕಥಂ ಸ ಲಕ್ಷ್ಯ ಪ್ರಭವೋ ಭವಿಷ್ಯತಿ

'ನೀನು ಈಶ್ವರನ ದೋಷಗಳನ್ನೇ ಕುರಿತು ಹೇಳಿದೆ. ಆದರೂ ಒಂದು ಗುಣವನ್ನೇ ಹೇಳಿದ್ದೀಯೆ. ಬ್ರಹ್ಮನಿಗೂ ಜನಕನಾದ ಪರಮೇಶ್ವರನ ವಂಶವನ್ನು ಯಾರು ತಿಳಿದಿದ್ದಾರೆ? ಪಾರ್ವತಿ ಹೀಗೆ ಹೇಳಿ ಕಡೆಯ ಮಾತನ್ನು ಆಡಿಬಿಡುತ್ತಾಳೆ:

ಅಲಂ ವಿವಾದೇನ ಯಥಾ ಶ್ರುತಸ್ತ್ವಯಾ
ತಥಾವಿಧಸ್ತಾವದಶೇಷಮಸ್ತು ಸಃ
ಮಮಾತ್ರ ಭಾವೈಕರಸಂ ಮನಃ ಸ್ಥಿತಂ
ನ ಕಾಮವೃತ್ತಿರ್ವಚನೀಯಮೀಕ್ಷತೇ

'ಸಾಕು. ನೀನು ಹೇಳಿದ ಹಾಗೆಯೇ ಹರ ಇದ್ದರೇನೂ ಚಿಂತೆಯಿಲ್ಲ. ಇನ್ನು ನಿನ್ನೊಡನೆ ಕಲಹ ಬೇಡ. ನೀನು ವರ್ಣಿಸಿದ ಆ ಹರನಲ್ಲಿಯೇ ನನ್ನ ಮನಸ್ಸು ಬೇರೂರಿಗೆ. ಭಾವೈಕರಸದಿಂದ ನನ್ನ

ಮನಸ್ಸು ಅವನಲ್ಲಿ ನೆಲಸಿದೆ. ಸ್ವೇಚ್ಛಾಚಾರಿಗಳು ಲೋಕದ ನಿಂದೆಯನ್ನು ಗಣಿಸುವುದಿಲ್ಲವಲ್ಲವೆ?' ಪಾರ್ವತಿಯ ಈ ಮಾತು ಪ್ರೇಮದ ದೊಡ್ಡತತ್ವವನ್ನು ಮಂಡಿಸುತ್ತದೆ. ಭಾವೈಕರಸದಿಂದ ನನ್ನ ಮನಸ್ಸು ಅವನಲ್ಲಿ ನೆಲಸಿದೆ ಎನ್ನುವುದು ಇಲ್ಲಿ ಮುಖ್ಯ. ಸತಿಪತಿಗಳು ವಿದ್ಯೆಬುದ್ಧಿ ಶಕ್ತಿ ಸಾಮರ್ಥ್ಯ ಶ್ರೀಮಂತಿಕೆ ಪದವಿ ಪ್ರಶಸ್ತಿ ರೂಪ ಕುಲ ಇತ್ಯಾದಿಗಳನ್ನು ಗಮನಿಸಿ ಒಬ್ಬರನ್ನು ಒಬ್ಬರು ಪ್ರೀತಿಸುವುದಿಲ್ಲ. ನಿಜವಾದ ಪ್ರೀತಿ ಆತ್ಮಆತ್ಮಗಳ ಬೆಸುಗೆಗೆ ಸಂಬಂಧಪಟ್ಟದ್ದು, ಈ ಭಾವದ ಏಕಮನವೇ ಪ್ರೇಮದ ಒರೆ. ಕಾಳಿದಾಸ ಈ ಮಾತನ್ನು ಈ ಸಂದರ್ಭದಲ್ಲಿ ಆಡಿಸಿ ಪ್ರಣಯ ವಿಷಯಕವಾದ ರಹಸ್ಯ ಮಂತ್ರವೊಂದನ್ನು ಬಯಲುಗೈದಂತಾಗಿದೆ.

ಬ್ರಹ್ಮಚಾರಿ ಮತ್ತೆ ಏನನ್ನೋ ಹೇಳಲು ತೊಡಗುತ್ತಾನೆ. ಅಷ್ಟರಲ್ಲಿ ಪಾರ್ವತಿಯೇ ಹೀಗೆ ಹೇಳುತ್ತಾಳೆ ತನ್ನ ಸಖಿಗೆ :

> ನಿವಾರ್ಯತಾಮಾಲಿ ಕಿಮಪ್ಯಯಂ ವಟುಃ
> ಪುನರ್ವಿವಕ್ಷುಃ ಸ್ಫುರಿತೋತ್ತರಾಧರಃ
> ನ ಕೇವಲಂಯೋ ಮಹತೋಽಪಭಾಷತೇ
> ಶೃಣೋತಿ ತಸ್ಮಾದಪಿ ಯಃ ಸ ಪಾಪಭುಕ್

ಈ ವಟು ಇನ್ನೂ ಏನನ್ನೋ ಹೇಳುವಂತಿದೆ. ಹೇಗಾದರೂ ಇವನನ್ನು ಇಲ್ಲಿಂದ ತೊಲಗಿಸು. ಹಿರಿಯದಾದುದರ ನಿಂದೆ ಕಿರಿದಲ್ಲ. ಅಂತಹ ನಿಂದೆಗೆ ಕಿವಿಗೊಟ್ಟರೂ ಸಾಕು. ಪಾಪ ನಮಗೆ ತಟ್ಟುತ್ತದೆ. ಹೀಗೆ ಹೇಳಿ 'ಅಥವಾ ನಾನೇ ಇಲ್ಲಿಂದ ಹೊರಡುತ್ತೇನೆ' ಎಂದು ಪಾರ್ವತಿ ಅಡಿ ತೆಗೆಯುತ್ತಾಳೆ.

ವಟು ಅಷ್ಟರಲ್ಲಿ ನಿಜರೂಪವನ್ನು ತೋರಿ ನಗುನಗುತ್ತ ಪಾರ್ವತಿಯ ಕೈಹಿಡಿಯುತ್ತಾನೆ ಪಾರ್ವತಿ ಬೆದರಿದಳು ಬೆವರಿದಳು. ನದಿಯ ಪೂರ್ವಕ್ಕೆ ಬಂಡೆ ಇದ್ದಕ್ಕಿಂದಂತೆ ಎದುರು ಬಂದಂತಾಯಿತು. ತೆರಳಲೆಂದು ಅಡಿಯೆತ್ತಿದ ಗಿರಿಜೆಗೆ ಆಕೆ ನಿಲ್ಲಲೂ ಆರಳು. ನಡೆಯಲೂ ಆರಳು. 'ಶೈಲಾಧಿ ರಾಜತನಯಾ ನ ಯಯೌ ನ ತಸ್ಥೌ ?'

> ಅದ್ಯ ಪ್ರಭೃತ್ಯವನತಾಂಗಿ ತವಾಸ್ಮಿ ದಾಸಃ
> ಕ್ರೀತಸ್ತಪೋಭಿರಿತಿ ವಾದಿನಿ ಚಂದ್ರಮೌಳೌ
> ಅಹ್ನಾಯ ಸಾ ನಿಯಮಜಂ ಕ್ಲಮಮುತ್ಸಸರ್ಜ
> ಕ್ಲೇಶಃಫಲೇನ ಹಿ ಪುನರ್ನವತಾಂ ವಿಧತ್ತೇ

'ಇನತ್ತಿನಿಂದ ನಾನು ನಿನ್ನ ದಾಸ. ನಿನ್ನ ತಪಸ್ಸಿಗೆ ಮಾರುಹೋಗಿದ್ದೇನೆ' ಎಂದು ಚಂದ್ರಮೌಳಿ ನುಡಿದನು. ಪಾರ್ವತಿ ಕೃತಾರ್ಥಳಾದಳು. ಅವಳು ಕ್ಲೇಶಪಟ್ಟುದಕ್ಕೆ ತಕ್ಕ ಪ್ರತಿಫಲ ದೊರೆಯಿತು. ಫಲೋದಯ ಸಿದ್ಧಿಯಲ್ಲಿ ಪಾರ್ವತಿ ನವ ಚೇತನವನ್ನು ಪಡೆದಳು.

ಪಾರ್ವತಿಯ ಮಾತುಗಳಿಂದ ತಿಳಿದು ಬರುವ ಸಂಗತಿ ಇಷ್ಟು.

ಪಾರ್ವತಿ ಶಿವನಲ್ಲಿ ಯಾವ ಕೋಪವನ್ನೂ ದೋಷವನ್ನೂ ಕಾಣಲಿಲ್ಲ. ಯಾವ ಅನನುಕೂಲಗಳೂ ಕಷ್ಟ ನಷ್ಟಗಳೂ ಅವರಿಗೆ ಹರನ ಸಂಬಂಧದಲ್ಲಿ ಕಾಣಲಿಲ್ಲ. ಪದವಿ, ಹಣ, ರೂಪ, ಯೌವನ, ಕುಲ ಇವುಗಳನ್ನು ಗಣಿಸದೆ ಶುದ್ಧವಾದ ಏಕೋಭಾವದಿಂದ ಪಾರ್ವತಿ ಪರಮೇಶ್ವರನನ್ನು ಚಿಂತಿಸಿದಳು. ಹೀಗೆ ಭಾವದೃಷ್ಟಿಯಿಂದಷ್ಟೇ ನೋಡಿದಾಗ, ಪ್ರೇಮದ ದೃಷ್ಟಿಯಿಂದಷ್ಟೇ ನೋಡಿದಾಗ ಕುರೂಪ ದೈನ್ಯ ಅಭಾವ ಎಂದು ಇತರರು ಭಾವಿಸಬಹುದಾದ ಅಂಶಗಳು ಮುಡಿಯಾಗುತ್ತವೆ. ಪಾರ್ವತಿಯ ಪ್ರೇಮಸಂಪತ್ತಿನ ಶಕ್ತಿ ಅಪಾರವಾದದ್ದು ಅದು ಹರನ ಆನೆಯ ತೊವಲನ್ನು ಪಟ್ಟೆಯ ತೊವಲನ್ನಾಗಿ

ಭಾವಿಸಬಲ್ಲುದು. ಪ್ರೇತವನವನ್ನು ನಂದನ ವನ ವನ್ನಾಗಿ ಕಲ್ಪಿಸಬಲ್ಲುದು. ಪ್ರೇಮವಿಲ್ಲದಿದ್ದಲ್ಲಿ ನಂದನ ವನ ವಿಹಾರವೂ ಪ್ರೇತವನ ವಿಹಾರವೇ ಆದಿತಲ್ಲವೆ?) ಪ್ರೇಮದ ಮುಂದೆ ಸಂಗಳಿಸಿ ಸುಂದರನಾಗುತ್ತಾನೆ. ಪ್ರೇಮದ ತಪಸ್ಸಿಗೆ ತನ್ನನ್ನೇ ಮಾರಿಕೊಳ್ಳುತ್ತಾನೆ. ಪ್ರೇಮಕ್ಕೆ ಅಡಿ ಯಾಳಾಗುತ್ತಾನೆ.

ಪಾರ್ವತಿಯ ಉಗ್ರೋಗ್ರವಾದ ತಪಸ್ಸಿನ ವರ್ಣನೆಯನ್ನು ಕಾಲಿದಾಸ ಕವಿ ರಮ್ಯಾದ್ಯಂತ ವಾಗಿ ಚಿತ್ರಿಸಿದ್ದಾನೆ. ಇಲ್ಲಿ ವೇಷಾಂತರದಿಂದ ಪಾರ್ವತಿಯ ಸತ್ವ ಪರೀಕ್ಷೆಗಾಗಿ ಬಂದ ಈಶ್ವರನ ಎದುರಿನಲ್ಲಿ ಅವನಿಗೆ ಸಮರ್ಪಕವಾದ ಉತ್ತರ ಗಳನ್ನು ಕೊಟ್ಟ ಹರತತ್ವದ ಶಿವತತ್ವದ ಪ್ರೇಮ ತತ್ವದ ಕಲ್ಯಾಣ ಗುಣಗಳನ್ನು ಕಮನೀಯವಾಗಿ ವಿವರಿಸಿ ಪಾರ್ವತಿ ಜಯಶೀಲಳಾಗಿದ್ದಾಳೆ. ಈ ಜಯಕ್ಕೆ ಆತಪ ಕಾರಣ. ಆತಪಕ್ಕೆ ಈ ಜಯ ಸಿದ್ಧಿ. ಹಾಗೆ ತಪಸ್ಸು ಮಾಡಿದಲ್ಲದೆ ಹೀಗೆ ವಾಣಿ ಮೊಳಗದು. ತಪಸ್ಸಿಗೆ ತಪಸ್ಸು, ಪ್ರೇಮಕ್ಕೆ ಪ್ರೇಮ, ಈಶ್ವರನ ತಪಸ್ಸು ಕಡಮೆಯೆ. ಜಗತ್ತಿನ ಚಾಂಚಲ್ಯದ ಇಂದ್ರಿಯ ಪ್ರಚೋದನೆಯ ಉನ್ಮತ್ತ ಕಾರಕವಾದ ಮನ್ಮಥನ ಕಾಮ ಕೋಲಾಹಲ ವನ್ನು ಕ್ಷಣಮಾತ್ರದಲ್ಲಿ ಸುಟ್ಟ ನಿಸ್ಸೀಮ ತಪಸ್ಸು ಅದು. ಆ ತಪಸ್ಸಿಗೆ ಆ ಜಯ. ಈ ತಪಸ್ಸಿಗೆ ಈ ಜಯ. ಹೀಗೆ ಉಭಯತ್ತರ ತಪಸ್ಸಿನಿಂದ ಶುದ್ಧಾತ್ಮರಾಗಿ ತತ್ವಸಾಕ್ಷಾತ್ಕಾರದಿಂದ ಪರಿ ಪೂರ್ಣರಾದ ಶಿವಶರ್ವಾಣಿಯರ ವಿವಾಹ ಲೋಕ ಕಲ್ಯಾಣಾರ್ಥವಾಗಿ ನಡೆದದ್ದು. ಏಕೆಂದರೆ ದಾಂಪತ್ಯದ ಫಲವೇ ದೇವಸೇನಾನಿ ಕುಮಾರ ಸ್ವಾಮಿಯ ಜನನ. ಅಂತಹ ಕುಮಾರ ಸಂಭವಕ್ಕೆ ಇಂತಹ ತಪಸ್ಸು ನಡೆಯಬೇಕಾಯಿತು.

ಇಲ್ಲಿ ಪ್ರೇಮಭಾವನೆಯ ಚಿಂತನೆಯಿಂದ ಈಶ್ವರನನ್ನೂ ಕುರಿತು ಪರಿಭಾವಿಸಿದ ಈ ತಪಸ್ವಿ ನಿಯ ಅಮರವೂ ಅಚ್ಯುತವೂ ಅನಂತವೂ ಆತ್ಮೀ ಯವೂ ಅಕಳಂಕವೂ ಆದ ಭಕ್ತಿಗೆ,ಸ್ನೇಹಕ್ಕೆ,ದಾಕ್ಷಿ ಣ್ಯಕ್ಕೆ, ಶ್ರದ್ಧೆಗೆ, ಸಹನೆಗೆ, ಸೌಜನ್ಯಕ್ಕೆ ಪರಮೇಶ್ವ ರನು ಸೋಲೊಪ್ಪಿಕೊಂಡು ಒಲಿದು ಬಂದುದರಲ್ಲಿ ಆಶ್ಚರ್ಯವೇನಿದೆ? ಚಿತ್ತಪಶ್ರೀಯ ಚಿತ್ತವಿತ್ತ ಕವಿಕುಲ ಗುರುವಿಗೆ ಅನಂತ ನಮಸ್ಕಾರ.

**ಎಸ್. ವಿ. ಪರಮೇಶ್ವರಭಟ್ಟ**

---

# ಶ್ರೀ ಪೋಲಾಳ್ವ ದಂಡನಾಥ

### ಶ್ರೀ ಹರಿಹರ ದೇವರು

ಶ್ರೀಮಹಿಮಾಸ್ಪದಂ ಭುಜಗಚಕ್ರಧರಂ
-ದ್ವಿಜರಾಜಭೂಷಣಂ
ಕಾಮದನರ್ಜುನೋದ್ಭರುಚಿ ಗೋಪಮನೋ-
ಹರಮೂರ್ತಿ ಭಾಸ್ವದ
ಬ್ಜಾಮಳನೇತ್ರನಾದಿಪುರುಷಂ ಪರಮೇಶ್ವರನೊಲ್ದು
ದೇವ ಚೂ
ಡಾಮಣಿ ಸಂತತಂ ಹರಿಹರಂ
ಪರಿರಕ್ಷಿಸುತಿರ್ಕೆ ಧಾತ್ರಿಯಂ ||೧||

ಹರಿಯಿಂದಂ ಬಿಟ್ಟು ದೈವಂ ಧರಣಿತಳ
ದೊಳಿಲ್ಲೆಂದು ಪೇಳ್ವರ್ ಕೆಲಂಬರ್
ಹರನಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು
ಪೇಳ್ವರ್ ಕೆಲಂಬರ್
ನರರಾ ಸಂದೇಹಮಂ ಪಿಂಗಿಸಲತಿಶಯದಿಂ
ಕೂಡಲೂರಲ್ಲಿ ಶೋಭಾ
ಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ ಕೂರ್ತು
ರಕ್ಷಿಕ್ಕೆ ನಮ್ಮಂ ||೨||

ಸಂದ ಶಿವಂಗೆ ವಿಷ್ಣುವಿನ ರೂಪಮದಾದುದು
ವಿಷ್ಣುವಿಂಗೆ ಪೆಂ
ಪೊಂದಿದುದುನೆಗಳ್ತೆವೆತ್ತ ಶಿವರೂಪಮದಾದುದು
ವೇದವಾಕ್ಯದಿಂ
ದೆಂದದನೆಯ್ದೆ ನಿಶ್ಚಯಿಸುವಂತಿರೆ ಕೂಡಲೊಳೇಕ
ಮೂರ್ತಿಯಿಂ
ನಿಂದ ಜಗನ್ನುತಂ ಹರಿಹರಂ ಪರಿರಕ್ಷಿಸುತಿರ್ಕೆ
ಧಾತ್ರಿಯಂ||೩||

ನಿರವದ್ಯಂ ನಿರ್ವಿಕಲ್ಪಂ ನಿರತಿಶಯ ಸುಖಾ
ನಂದಮಾದ್ಯಂತ ಶೂನ್ಯಂ
ಪರಿಪೂರ್ಣಂ ಚಿನ್ಮಯಂ ಪಾಕ್ಕರಣರಹಿತಮಾದಾ
ನಿರಾಕಾರಮಿಂತೀ
ಧರೆಯೊಳ್ ಸಾಕಾರಮಾದಂತಿರೆ ನೆಗಳ್ದ ಗುಹಾರಣ್ಯ
ದೊಳ್ ನಿಂದ ದೇವಂ
ಪರಿರಕ್ಷಿಕ್ಕುರ್ವಿಯಂ ಶ್ರೀಹರಿಹರನಮರಾಧೀಶ
ಸಂಸ್ತೋತ್ರಪಾತ್ರಂ ||೪||

### ಮೊದಲ ಮಾತು

ಶ್ರೀಹರಿಹರೇಶ್ವರ ಸ್ತೋತ್ರರೂಪವಾದ ಮೇಲಿನ ನಾಲ್ಕುಪದ್ಯಗಳನ್ನು ದಾವಣಗೆರೆಯ ೨೫ನೆಯ ನಂಬರಿನ ಶಾಸನದಿಂದ ತೆಗೆದು ಉದ್ಧರಿಸಲಾಗಿದೆ. ಈ ಸೊಗಸಾದ ಶಾಸನವು ನಮ್ಮ ಪುಣ್ಯದಿಂದ ಇದುವರೆಗೆ ಉಳಿದುಬಂದಿರುವುದು - ಒಂದು ಆಶ್ಚರ್ಯದ ಸಂಗತಿ. ಈ ಶಾಸನದಲ್ಲಿ ಹರಿಹರ ಕ್ಷೇತ್ರದ ಮಹಿಮೆ, ಹೊಯ್ಸಳ ವಂಶದ ವಿವರಗಳು, ಶ್ರೀಹರಿಹರ ದೇವಾಲಯದ ನಿರ್ಮಾಣಕ್ಕೆ ಸಂಬಂಧಿಸಿದ ವಿಷಯಗಳು ನಮಗೆ ದೊರಕುತ್ತವೆ. ಅಲ್ಲದೆ ಸಾಹಿತ್ಯದ ದೃಷ್ಟಿಯಿಂದ ನೋಡಿದರೂ ಇದು ಒಂದು ಅತ್ಯುತ್ತಮವಾದ ಶಾಸನ. ಹರಿಹರ ಕ್ಷೇತ್ರದಲ್ಲಿ ದೊರಕುವ ಎಷ್ಟೋ ಮುಖ್ಯಶಾಸನಗಳು ಸಂಸ್ಕೃತ ಭಾಷೆಯಲ್ಲಿ ರಚಿತವಾಗಿವೆ. ನಮ್ಮ ದೇಶಕ್ಕೆ ಸ್ವಾತಂತ್ರ್ಯ ದೊರಕಿದ ಮೇಲೂ ಜನರಿಗೆ ತಿಳಿಯಲಿ

ಬಿಡಲಿ-ಇಂಗ್ಲಿಷ್ ಭಾಷೆಯಲ್ಲಿ ಶಾಸನ ಬರೆಯಿಸಿ ವಿಧಿಯಿಲ್ಲದಾಗ ಕನ್ನಡವನ್ನು ಬಳಸುವಂತೆ, ಹಿಂದಿನವರು ಅನೇಕವೇಳೆ ಶಾಸನದ ಮುಖ್ಯ ವಿವರಗಳನ್ನು ಸಂಸ್ಕೃತಭಾಷೆಯಲ್ಲಿ ಹೇಳಿ, ದಾನದ ವಿವರಗಳನ್ನು ತಿಳಿಸುವಾಗ ಮಾತ್ರ 'ಅಸ್ಯ ಗ್ರಾಮಸ್ಯ ಸೀಮಾನಿರ್ದೇಶಸ್ತು ಸ್ಫುಟಪರಿಜ್ಞಾನಾರ್ಥಂ ಕರ್ನಾಟಭಾಷಾಯಾ*ವಿಲಿಖ್ಯತೇ' (ದಾ. ೩೪)ಎಂಬ ಮಾತನ್ನು ಸೇರಿಸುತ್ತಿದ್ದರು. ಆದರೆ ಈ ಶಾಸನವನ್ನು ಸಂಪೂರ್ಣವಾಗಿ (ಶಾಸನದ ಮೊದಲಲ್ಲಿ ಬರುವ 'ನಮಸ್ತುಂಗ ಶಿರಶ್ಚುಂಬಿ......' ಹಾಗೂ ಕೊನೆಯಲ್ಲಿ ಬರುವ "ಸ್ವದತ್ತಂ ಪರದತ್ತಂ ವಾ....." ಎಂಬ ಎರಡು ಶ್ಲೋಕಗಳನ್ನು ಬಿಟ್ಟರೆ) ಕನ್ನಡ ಭಾಷೆಯಲ್ಲಿಯೇ ಬರೆದು ಕೊರೆದಿರುವುದು ಒಂದು ಮಹತ್ವದ ಸಂಗತಿ. ಈ ಶಾಸನದ ವಿಷಯವಾಗಿ ಇಲ್ಲಿ ನಾಲ್ಕು ಮಾತುಗಳನ್ನು ಹೇಳಲು ಯತ್ನಿಸಿದೆ.

ಪುಣೆ-ಬೆಂಗಳೂರುಗಳ ಹೆದ್ದಾರಿಯಲ್ಲಿರುತ್ತ, ಶಿವಮೊಗ್ಗ-ಬಳ್ಳಾರಿಗಳನ್ನು ರಾಜಮಾರ್ಗಗಳಿಂದ ಬಂಧಿಸುತ್ತ, ವ್ಯವಸಾಯ, ಉದ್ಯೋಗ, ಕೈಗಾರಿಕೆ, ವ್ಯಾಪಾರಗಳಿಗೆ ನೆಲೆಮನೆಯಾಗಿರುತ್ತ, ಒಟ್ಟಾದ ಕನ್ನಡನಾಡಿನ ಕೇಂದ್ರದಲ್ಲಿದ್ದು ತುಂಗಭದ್ರಾ ನದಿಯ ಬಲದಡದಲ್ಲಿರುವ ಹರಿಹರಕ್ಷೇತ್ರ ನಿನ್ನೆ ಮೊನ್ನೆಯ ಪಟ್ಟಣವೇನಲ್ಲ. ಕಾಲಕಾಲಕ್ಕೆ ತಕ್ಕಂತೆ, ಚಾಳುಕ್ಯ, ಕಾಳಚೂರ್ಯ, ಯಾದವ, ಹೊಯ್ಸಳ, ವಿಜಯನಗರದ ಅರಸುಗಳ ಆಳ್ವಿಕೆಗೆ ಒಳಪಟ್ಟು, ನಾಲ್ಕುವೇದಗಳು, ಶಿಕ್ಷಾ, ವ್ಯಾಕರಣ, ಮೀಮಾಂಸ, ವೇದಾಂತ ಮುಂತಾದ ಶಾಸ್ತ್ರಗಳನ್ನು ತಿಳಿದ ವಿದ್ವಾಂಸರಾದ ಬ್ರಾಹ್ಮಣರಿಂದ ಕೂಡಿ, ನಾಡಿನ ಮುಖ್ಯಪಟ್ಟಣವಾಗಿದ್ದ ಹರಿಹರದ ಹೆಸರು ಹನ್ನೊಂದು ಹನ್ನೆರಡನೆಯ ಶತಮಾನಗಳಿಂದಲೂ ಶಾಸನದಲ್ಲಿ ಕೇಳಿಬರುತ್ತದೆ. ಅಲ್ಲದೆ ಶಾಸನಗಳಲ್ಲಿ ಈ ಕ್ಷೇತ್ರಕ್ಕೆ 'ಗುಹಾರಣ್ಯಕ್ಷೇತ್ರ'*, 'ಕೂಡಲೂರು' ಎನ್ನುವ ಹೆಸರುಗಳೂ ಉಂಟು. ಈ ದಿನ ಹರಿಹರ ಕ್ಷೇತ್ರಕ್ಕೆ ಹಿರಿಮೆಗರಿಮೆಗಳೇನಾದರೂ ಬಂದಿದ್ದರೆ ಮಿಕ್ಕಯಾವ ಕಾರಣದಿಂದಲೂ ಅಲ್ಲ; ಹದಿಮೂರನೆಯ ಶತಮಾನದ ಆದಿಭಾಗದಲ್ಲಿ ಹೊಯ್ಸಳ ಚಕ್ರವರ್ತಿಯಾದ ಎರಡನೆಯ ನರಸಿಂಹನ ಮಂತ್ರಿಯೂ, ದಂಡಾಧಿಪನೂ ಆದ ಪೋಳಾಳ್ವನು ಕಟ್ಟಿಸಿದ ಸುಂದರವಾದ ಶ್ರೀ ಹರಿಹರೇಶ್ವರ ದೇವಾಲಯದಿಂದ. ಪ್ರತಿವರ್ಷವೂ ಸಾವಿರಾರು ಜನ ಯಾತ್ರಿಕರು ಹರಿಹರ ಕ್ಷೇತ್ರಕ್ಕೆ ಬಂದು, ತುಂಗಭದ್ರೆಯಲ್ಲಿ ಸ್ನಾನಮಾಡಿ, ಸ್ವಾಮಿಯ ದರ್ಶನಮಾಡಿ ಪುನೀತರಾಗುತ್ತಿದ್ದಾರೆ.

ಕನ್ನಡನಾಡಿನ ಶಾಸನಗಳನ್ನು-ಇತರದೇಶಗಳ ಶಾಸನಗಳಿಗೂ ಈ ಮಾತು ಅನ್ವಯಿಸುತ್ತದೆ- ಪರಿಶೀಲಿಸಿದಾಗ ಒಂದು ಅಂಶ ಸ್ಪಷ್ಟವಾಗುತ್ತದೆ; ಎದ್ದು ಕಾಣುತ್ತದೆ. ರಾಜಮಹಾರಾಜರೂ ಚಕ್ರವರ್ತಿಗಳೂ ಗದ್ದಲಮಾಡುತ್ತಿದ್ದಾರೆ. ಶತ್ರುರಾಜರ ಮೇಲೆ ದಾಳಿ ನಡೆಸಿ, ದಿಗ್ವಿಜಯ ಮಾಡಲು ಮೆರೆವಣಿಗೆ ಹೊರಟಿದ್ದಾರೆ. ಸೈನ್ಯದ ಅಬ್ಬರ, ರಾಜರ ಬಿರುದಿನ ಘೋಷ, ಜನರ ಅಟ್ಟಹಾಸ ಇವು ನಮ್ಮ ಕಿವಿಗಳನ್ನು ಕಿವುಡುಗುಟ್ಟಿಸುತ್ತವೆ. ಜಯಶಾಲಿಗಳಾಗಿ ರಾಜಧಾನಿಗೆ ಬಂದ, ನಮ್ಮ ನಾಡಿನ ಕೀರ್ತಿಧ್ವಜವನ್ನು ಎತ್ತಿ ಹಿಡಿದ ಈ ಧೀರರಾಜರಿಗೆ ನಮ್ಮ ಅಭಿವಂದನೆ.

---

*ಕನ್ನಡವನ್ನು ಒಂದು ಪ್ರಾಕೃತಭಾಷೆಯೆಂದು ಹಿಂದಿನವರು ಬಗೆದಿದ್ದರು. 'ಅತಃಪರಂ ಪ್ರಾಕೃತ ಭಾಷಯಾ ವಕ್ಷ್ಯಾಂತ್ಯೇತ್ಯಾನಿ ಸುಂಕಾಸಿ' (ಕರ್ನಾಟಕ ಶಾಸನಗಳು, ಬಾದಾಮಿ-1)

*ಗುಹಾಸುರನೆಂಬ ರಾಕ್ಷಸನು ಈ ಕ್ಷೇತ್ರದಲ್ಲಿರುತ್ತ ಬ್ರಹ್ಮನಿಂದಾಗಲಿ ಹರಿಯಿಂದಾಗಲಿ ಹರನಿಂದಾಗಲಿ ಮರಣವಿಲ್ಲನೆಂಬ ವರವನ್ನು ಪಡೆದು ಮದಿಸಿ ಜನರನ್ನು ಹಿಂಸಿಸುತ್ತಿದ್ದನು. ಆಗ ಹರಿಹರರು ಒಂದೇ ರೂಪದಲ್ಲಿ ಬಂದು ಈ ರಾಕ್ಷಸನನ್ನು ಸಂಹರಿಸಿ ಜನರ ಕಷ್ಟವನ್ನು ಪರಿಹರಿಸಿದರು. ಅಂದಿನಿಂದ ಈ ಕ್ಷೇತ್ರಕ್ಕೆ ಗುಹಾರಣ್ಯಕ್ಷೇತ್ರವೆಂದು ಹೆಸರಾಯಿತು.

*ಹರಿಹರರು ಕೂಡಿ ಇರುವ ಊರು ಕೂಡಲೂರು. ತುಂಗಭದ್ರಾನದಿಗೆ ಇಲ್ಲಿ ಹರಿದ್ರಾನದಿ(ಸೂಳೆಕೆರೆ ಹಳ್ಳ) ಬಂದು ಸೇರುವುದರಿಂದಲೂ ಈ ಊರಿಗೆ ಈ ಹೆಸರು ಬಂದಿರಬಹುದೆ? (ಲೇ)

ಆದರೆ ವಿಜಯೋನ್ಮತ್ತರಾಗಿ ತಾಯ್ನಾಡಿಗೆ ಹಿಂದಿರುಗಿ ಬಂದ ಇವರು ಶತ್ರುದೇಶದಲ್ಲಿ ತಮ್ಮ ಹಿಂದೆ ಬಿಟ್ಟುಬಂದುದೇನು? ಸು ಡು ಗಾ ಡು; ಜನರ ಹಾಹಾಕಾರ; ಹೆಂಗುಸರ ಗೋಳು, ಕಣ್ಣೀರು. ಇವರು ನಡೆಸಿದ ಕೊಲೆಗೆ, ಕೊಳ್ಳೆಗೆ, ಸುಲಿಗೆಗೆ ಪ್ರತಿಕ್ರಿಯೆ ಎಂದಾದರೊಂದು ದಿನ ಬಂದಿರಲೇ ಬೇಕಲ್ಲವೆ? ಇವರು ಗಳಿಸಿದ ಸಂಪತ್ತು, ಮೆರೆದ ವೈಭವ, ಕಟ್ಟಿಸಿದ ಅರಮನೆಗಳು ಈಗೆಲ್ಲಿ? ಅವು ಇದ್ದ ಸ್ಥಳಗಳನ್ನಾಗಲಿ, ಹೆಸರನ್ನಾಗಲಿ ಯಾರಾದರೂ ಈಗ ಹೇಳುವರೇ? ಆ ರಾಜ ಮಹಾರಾಜರನ್ನು ನೆನೆಯುವರೇ? ಆದರೆ ದಿಗ್ವಿಜಯವೇ, ರಾಜ್ಯವಿಸ್ತಾರವೇ ನಮ್ಮ ರಾಜರ ಬದುಕಿನ ಗುರಿಯಾಗಿರಲಿಲ್ಲ. ಕನ್ನಡನಾಡಿನ ಮಹಾ ತಾಯಿಯೊಬ್ಬಳು ಬದುಕಿನ, ತ್ಯಾಗಜೀವನದ ಗುರಿಯನ್ನು ತನ್ನ ಮಗನಿಗೆ ಹುಟ್ಟನಿಂದಲೇ ಈ ರೀತಿ ಹೇಳುತ್ತಾಳೆ-

ಕೆಱೆಯಂ ಕಟ್ಟಿಸು ಬಾವಿಯಂ ಸವೆಸು
ದೇವಾಗಾರಮಂ ಮಾಡಿಸ
ಜ್ಜೆಱೆಯೊಳ್ ಸಿಲ್ಕಿದನಾಥರಂ ಬಿಡಿಸು
ಮಿತ್ರರ್ಗಿಂಬುಕೆಯ್ ನಂಬಿದ
ರ್ಗೆಱೆವೆಟ್ಟಾಗಿರು ಶಿಷ್ಟರಂಪೊರೆ ಯೆನುತ್ತಿಂತೆಲ್ಲವಂ
ಪಿಂತೆ ತಾ
ಯೆಱೆದಳ್ಪಾಲೆಱೆವಂದುತೊಟ್ಟು
ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ

(S.I.I. IV. No. 267)

ದೇವಾಲಯ ನಿರ್ಮಾಣ, ಸತ್ರಸ್ಥಾಪನೆ, ಕೆರೆ ಬಾವಿ ಕಾಲುವೆಗಳನ್ನು ತೋಡಿಸುವುದು ಇವೇ ಮೊದಲಾದ ಲೋಕೋಪಕಾರಕವಾದ ಕಾರ್ಯಗಳನ್ನು ಮಾಡಿದ ಮಹನೀಯರು ಈಗಲೂ ಜನ ಮನಗಳಲ್ಲಿ ನೆಲೆಸಿದ್ದಾರೆ. ಶ್ರೀ ಹರಿಹರ ದೇವಾಲಯವನ್ನು ಕಟ್ಟಿಸಿದ ಪೋಲಾಳ್ವನು ಮೇಲಿನ ಧ್ಯೇಯದಿಂದ ಪ್ರೇರಿತನಾಗಿರಬೇಕು. ತಾನು ಸಂಪಾದಿಸಿದ ಹೊನ್ನಿಗೆ ದೇವಾಲಯ ನಿರ್ಮಾಣವೇ ಪರಮ ಗುರಿಯೆಂದು ಮನಗಂಡ ಪೋಲಾಳ್ವನೇ ಧನ್ಯ!

ಪೋಲಾಳ್ವದೇವನು ಹರಿಹರದಲ್ಲಿರುವ ದೇವಾಲಯವನ್ನು ಕಟ್ಟಿಸಿದನೇಹೊರತು, ಶ್ರೀಹರಿಹರದೇವರನ್ನು ಪ್ರತಿಷ್ಠಿಸಲಿಲ್ಲ. ಸ್ಕಾಂದಪುರಾಣದ ಕಾಶೀಖಂಡದಲ್ಲಿ ಬರುವ 'ಹರಿಹರ ಮಾಹಾತ್ಮೆ'ಯಲ್ಲಿ ಹರಿಹರೇಶ್ವರನನ್ನು ಬ್ರಹ್ಮಪ್ರತಿಷ್ಠೆಯೆಂದು ಹೇಳಿದ್ದರೂ, ಶಾಸನಗಳಲ್ಲಿ ದೇವರನ್ನು 'ಸ್ವಯಂಭೂ' 'ಶಂಕರನಾರಾಯಣ' 'ಪ್ರಸನ್ನ ಶಂಕರನಾರಾಯಣ' 'ಚೆಲ್ವುವೆತ್ತಾ ಹರಿಹರ ಪರಮರ್' ಎಂದು ಬಗೆಬಗೆಯಾಗಿ ಸಂಬೋಧಿಸಿದೆ. ಹರಿಹರೇಶ್ವರಸ್ವಾಮಿಯ ಪ್ರಸನ್ನವದನವನ್ನು ಕಂಡವರಿಗೆ ಈ ವಿಶೇಷಣದ ಸಾರ್ಥಕತೆ ಚೆನ್ನಾಗಿ ಅರಿವಾಗುತ್ತದೆ. ಎಂದರೆ ಹರಿಹರ ದೇವರೂ ದೇವರಿಗೆ ಸೇರಿದ ಸಣ್ಣ ದೇವಸ್ಥಾನವೂ ಒಂದೆರಡು ಶತಮಾನಗಳ ಹಿಂದಿನಿಂದಲೂ ಇದ್ದಿರಬೇಕು. ಶ್ರೀದೇವರ ಅಂಗರಾಗ, ತ್ರೈಕಾಲಿಕ ನೈವೇದ್ಯ, ಪುಷ್ಪೋತ್ಸವ, ಧೂಪ ದೀಪೋತ್ಸವ ಇವುಗಳು ಯಾವ ಬಾಧೆಯೂ ಇಲ್ಲದೆ ನಡೆಯುವಂತೆ ರಾಜರೂ ಮಂಡಲೇಶ್ವರರೂ ದೇವರಿಗೆ ಅನೇಕ ದತ್ತಿಗಳನ್ನು ಬಿಟ್ಟಿದ್ದರು. ಹೀಗೆ ದತ್ತಿಬಿಟ್ಟ ಮಂಡಲೇಶ್ವರರಲ್ಲಿ ಶೂರನೂ ದಾನಿಯೂ ಶೀಲವಂತನೂ ಆದ ಹೆರ್ಮಾಡಿರಾಯ. ಅವನ ಗುಣವರ್ಣನೆ ಈ ಪದ್ಯದಲ್ಲಿದೆ;-

ಅರಿಭೂಪಾಲರ ಮಿಾಸೆ ಭೋಂಕನೆ
ಕರಿಂಕೇಳ್ವನ್ನೆಗಂ ತೇಜವಾ
ನರಿಸಿತ್ತುರ್ವಿಯಯನಾಪದಬ್ಧಿ ವಿನಿ
ಮಗ್ನೋನ್ಮಗ್ನರಂ ದಾನವು
ದ್ಧರಿಸಿತ್ತರ್ಥಿಜನಂಗಳಂ ಮನುಪವಿತ್ರಾ
ಚಾರಮಂ ತಾಂ ತಿರ
ಸ್ಕರಿಸಿತ್ತಾತ್ಮಚರಿತ್ರವೇನಧಿಕನೋ
ಪೆರ್ಮಾಡಿ ಭೂಪಾಲಕಂ

ದೈವಭಕ್ತನಾದ ಹೆಮ್ಮಾಡಿರಾಯನಿಗೆ ಶ್ರೀ ಹರಿಹರೇಶ್ವರನಿಗೆ ಒಂದು ಸುಂದರವಾದ ದೇವಾಲಯವನ್ನು ಕಟ್ಟಿಸಬೇಕೆಂಬ ಆಸೆ ಇತ್ತು. ಈ ಪ್ರಯತ್ನಕ್ಕೆ ಕೈಯಿಕ್ಕುತಿದ್ದಂತೆಯೇ ಈ ಕಾರ್ಯವನ್ನು ನಿಲ್ಲಿಸಬೇಕೆಂದು ಭಕ್ತನಿಗೆ ಸ್ವಪ್ನವಾಯಿತು. ನಿರುಪಾಯನಾಗಿ ಹೆಮ್ಮಾಡಿನಾಯಕನು ಸುಮ್ಮನಾದನು. ಹರಿಹರದೇವಾಲಯವನ್ನು ಕಟ್ಟಿಸುವ ಪುಣ್ಯ ಪೋಲಾಳ್ವದಂಡನಾಥನಿಗಿರುವಾಗ ಅದು ಹೆಮ್ಮಾಡಿರಾಯನಿಗೆ ಹೇಗೆ ತಾನೇ ಉಂಟಾಗಬೇಕು?

ಮುನ್ನಂ ಹೆರ್ಮಾಡಿರಾಯಂ ಹರಿಹರ
ಗೃಹಮಂ ಮಾಡಿಸಲ್ವೇಳ್ಕುಮೆಂದಿ
ರ್ಪನ್ನಂ ಮುಂದೊರ್ಬಭಕ್ತಂ ಜನಿಯಿಸಿ
ಯೆನಗಾವಸಮಂ ಮಾಡಿದಪ್ಪಂ
ನೀಂ ನಿಲ್ಲೆಂದಾತನಂ ಸ್ವಪ್ನದೊಳೆ ನಿಲಿಸಿ
ದೇವಾಲ್ಯಮಂ ನೀನೆ ಲೇಸ
ಪ್ಪಿನಂ ಪೋಲಾಳ್ವ ಮಾಡೆಂದೊಸೆದು
ಹರಿಹರಂ ಹೇಳ್ದು ತಾಂ ಮಾಡಿಕೊಂಡಂ||

ಕನ್ನಡನಾಡು ಅನೇಕ ಧರ್ಮಗಳಿಗೆ ತವರುಮನೆಯಾಗಿದ್ದರೂ ವಿಷ್ಣುಪ್ರಾಶಸ್ತ್ಯಕ್ಕಾಗಿ, ಶಿವಪ್ರಾಶಸ್ತ್ಯಕ್ಕಾಗಿ ಜನರಲ್ಲಿ ನಡೆದ ಕದನಗಳಿಗೆ ಇಲ್ಲಿ ಕೊರತೆಯೇನೂ ಇಲ್ಲ. ಆದರೂ ನಾಡಿನ ಪ್ರಾಜ್ಞರೂ ವಿವೇಕಿಗಳೂ "ಸತ್ಯವೊಂದೇ, ವಿದ್ವಾಂಸರು ಅದನ್ನು ಹಲವು ರೀತಿಯಲ್ಲಿ ನುಡಿಯುತ್ತಾರೆ" ಎಂಬ ಹಳೆಯ ತತ್ತ್ವವನ್ನು ಹೊಸರೀತಿಯಲ್ಲಿ ಸಮನ್ವಯ ಮಾಡಲು ಪ್ರಯತ್ನಿಸಿದರು. ಬೇಲೂರಿನ ಮೂರನೆಯ ನಂಬರಿನ ಶಾಸನ ಈ ಮಾತನ್ನು ಸಮರ್ಥಿಸುತ್ತದೆ.[A] ಹರಿಹರ, ದತ್ತಾತ್ರೇಯ ಅವತಾರಗಳೂ ಈ ಸಮನ್ವದ ದಾರಿಯಲ್ಲಿ ನಾಡಿನ ಹಿರಿಯರು ಮಾಡಿದ ಪ್ರಯತ್ನಗಳು. ಆಂಧ್ರದೇಶದಲ್ಲಿ ಹರಿಹರ ಪೂಜೆಗೆ ವಿಶೇಷ ಪ್ರಾಶಸ್ತ್ಯವಿರುವಂತೆ ತಿಳಿದುಬರುತ್ತದೆ. ಆಂಧ್ರದೇಶದ ಪೋಲಾಳ್ವನು ಕನ್ನಡನಾಡಿನಲ್ಲಿ ಸಂಚರಿಸುತ್ತ ತುಂಗಭದ್ರಾತೀರದಲ್ಲಿ ಶ್ರೀ ಹರಿಹರೇಶ್ವರಸ್ವಾಮಿಯನ್ನು ನೋಡಿ, ರೋಮಾಂಚಗೊಂಡು, ತನ್ನ ಇಷ್ಟಸಿದ್ಧಿಯಾಯಿತೆಂದೆಣಿಸಿ, ಸುಂದರವಾದ ದೇವಾಲಯವೊಂದನ್ನು ಕಟ್ಟಲು ಸಂಕಲ್ಪಿಸಿದನು. ಅವನಿಗೆ ದೇವರು ಸ್ವಪ್ನದಲ್ಲಿ ಕಾಣಿಸಿದುದೂ ಇದಕ್ಕೆ ಸಹಾಯಮಾಡಿತು.

ಶ್ರೀಹರಿಹರದೇವರ ಸ್ತೋತ್ರರೂಪವಾದ ನಾಲ್ಕು ಪದ್ಯಗಳನ್ನು ಬಿಟ್ಟರೆ ದಾವಣಗೆರೆ ೨೫ನೆಯ ನಂಬರಿನ ಶಾಸನದಲ್ಲಿ ನಾಲ್ಕು ಭಾಗಗಳಿವೆ; ಹೊಯ್ಸಳ ವಂಶದ ಮತ್ತು ಅದರಲ್ಲಿ ಹುಟ್ಟಿದ ಪ್ರಖ್ಯಾತ ರಾಜರ ವರ್ಣನೆ, ಪೋಲಾಳ್ವನ ವಿಷಯ ಶ್ರೀ ಹರಿಹರ ದೇವಾಲಯದ ನಿರ್ಮಾಣದ ಮತ್ತು ಅದರ ಕಲಾವೈಭವದ ವರ್ಣನೆ, ಫಲಶ್ರುತಿ. ಈ ನಾಲ್ಕು ವಿಷಯಗಳನ್ನು ಇಲ್ಲಿ ಸ್ವಲ್ಪ ವಿವರಿಸಿದೆ:-

ಹೊಯ್ಸಳ ರಾಜವಂಶ ವಿಷ್ಣುವಿನಿಂದ ಮೊದಲಾಗುತ್ತದೆ.

ಶ್ರುತಿ ಸಿಂಹಾಸನಮಾಗೆ ಚಾಮರಚಯಂ
ಲಕ್ಷ್ಮೀ ವಿಳಾಸೇಕ್ಷಣ
ದ್ಯುತಿಯಾಗಾನತ ದೇವಕೋಟಿ
ಮಣಿರೋಚಿಮಂಜರೀ ಪುಂಜಮಾ
ರತಿಯಾಗೋಲಗದೊಳ್ ಸ್ವಕೀಯ
ಮಹಿಮಾವಷ್ಟಂಭಮಂ ನಾರದಂ
ಸ್ತುತಿಗೆಯ್ಯುತ್ತಿರೆ ಪದ್ಮನಾಭನೆಸೆದಂ
ಲೋಕೈಕ ಕಲ್ಪದ್ರುಮಂ||

---

[A] ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ।
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ॥
ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ।
ಸೋಽಯಂ ವೋ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ ॥

ವಿಷ್ಣುವಿನ ಮಗ ಬ್ರಹ್ಮ, ಅವನಿಂದ ಅತ್ರಿ, ಅವನ ಮಗ ಸೋಮ, ಸೋಮನಿಂದ ಬುಧ, ಬುಧನಿಂದ ಪೂರೂರವ, ಅವನ ಮಗ ಆಯು, ಅಲ್ಲಿಂದ ಮುಂದೆ ನಹುಷ, ಯಯಾತಿ ಯದುಗಳು ಹುಟ್ಟಿ ಯದುವಂಶ ಕುಡಿವರಿಯಿತು. ಈ ಯದುವಂಶದಲ್ಲಿ ಹುಟ್ಟಿದವನೇ ಸಳ. ಭಯರಹಿತನಾದ ಈತನು ತನ್ನ ಗುರುವಿನೊಡನೆ 'ರಾಜ್ಯಸಿದ್ಧಿನಿಮಿತ್ತ'ವಾಗಿ ಶಶಕಪುರದ ವಾಸಂತಿಕಾದೇವಿಯನ್ನು ಆರಾಧಿಸುತ್ತಿರಲು ಒಂದುದಿನ:

ಕುಡಿವಾಲಂ ನೆಲನಂ ಪಳಂಚಲೆಯೆ
ಕೋಪೋದ್ರೇಕದಿಂ ದಿಟ್ಟಿಗಳ್
ಕಿಡಿಯಂ ಸಾಲಿಡೆ ನೀಳ್ದ ಕೇಸುರಿಯವೋಲ್
ಜಿಹ್ವಾದಳಂ ಪೊಣ್ಮೆ ಬ
ಲ್ಸಿಡಿಲಂ ದಾಡೆಯ ಕೂರ್ಪದಿರ್ಪೆ
ಹುಲಿಯೊಂದಾಕಸ್ಮಿಕಂ ವಿಸ್ಮಯಂ
ಬಡುವನ್ನಂ ಘನ ಘೋರಘರ್ಘರ ನಿನಾದಂ
ಪಾಯ್ದುದುಚ್ಛೃಂಖಳಂ||

ಮುನಿಯಾ ಹುಲಿಯಂ ಹೊಯ್ ಸಳ
ಎನೆ ಸೆಳೆಯಿಂ ಹೊಯ್ದುಕೊಂದು
ಹೊಯ್ಸಳನಾದಂ ।

ಸಳನು ಹೊಯ್ಸಳನಾಗಿ ಸ್ಥಾಪಿಸಿದ ರಾಜವಂಶದಲ್ಲಿ ಆ ವಂಶವನ್ನು ತನ್ನ ಕಾಂತಿಯಿಂದ ಬೆಳಗಿದ ವಿನಯಾದಿತ್ಯನು ಹುಟ್ಟಿದನು. ಬೇಡಿದವರಿಗೆ ಹೊನ್ನಿನ ಮಳೆಯನ್ನೇ ಕರೆಯುವ, ತನ್ನ ಮೇಲೆ ಬಿದ್ದವರಿಗೆ ಸಿಡಿಲೆರಗುವಂತಿದ್ದ ಎರೆಯಂಗನೇ ವಿನಯಾದಿತ್ಯನ ಮಗ. ಎರೆಯಂಗನಿಗೆ ಮಕ್ಕಳು ಮೂರು ಜನ-ಬಲ್ಲಾಳ, ಬಿಟ್ಟಿದೇವ [ವಿಷ್ಣುವರ್ಧನ] ಉದಯಾದಿತ್ಯ. ಇವರಲ್ಲಿ ಸಿಂಹಾಸನವನ್ನು ಏರಿದ ವಿಷ್ಣುವರ್ಧನನ ಪರಾಕ್ರಮ ಸಾಮಾನ್ಯವಾದುದಲ್ಲ. ಅವನ ದಿಗ್ವಿಜಯ ಕಾಲದಲ್ಲಿ ಶತ್ರುಗಳು ನಡುಗಿದರು, ಎದೆಯೊಡೆದರು, ದಿಕ್ಕೆಟ್ಟು ಓಡಿಹೋದರು. ಆ ಪರಾಕ್ರಮವನ್ನು ಕೇಳಿ.

ದೆಸೆಯೊಳ್ ನಿಶ್ಚಳಮಿರ್ಪ ದೇವರೆರ್ದೆ
ಢಕ್ಕಾಧ್ವಾನದಿಂ ಡಕ್ಕೆ ವಾ
ಜಿಸೆ ಸೇನಾರಜದಿಂ ಕೆಸರ್ಮುಸಗೆ
ವಾರಾಶಿವ್ರಜಂ ಬೆಟ್ಟು ಘ
ಟ್ಟಿಸಿದಂತಾಗೆ ಧರಿತ್ರಿಯೊಳ್ ಜಯ
ನಿಯೋಗೋದ್ಯೋಗದೊಳ್ ಹೋಗಿ ಸಾ
ಱಿಸಿ ವೀರಾರಿ ನೃಪಾಳರಂ ಬರಿಸಿದಂ
ಮೂವಿಟ್ಟಿಗಂ ಬಿಟ್ಟಿಗಂ ||

ಬಿಟ್ಟಿಗನಾಡವಾಂಗಣಕೆ ಜಟ್ಟಿಗನೆತ್ತಿ
ದೊಡತ್ತ ಕಂಚಿ ಬೆಂ
ಗೊಟ್ಟುದು ಕೊಂಕೂಡೆ ನೆಲೆಗೆಟ್ಟುದು
ಮಿಕ್ಕವಿರಾಟಕೋಟೆ ಕೊ
ಗಿಟ್ಟುದು ಕೋಯತೂರ್ ಕೆದಱಿ ಕೆಟ್ಟುದು
ರೂಢಿಯ ಚಕ್ರಗೊಟ್ಟವಿಂ
ಬಿಟ್ಟುದು ಕೈಯ್ದುವಿಕ್ಕಿ ಕಡಲೊಳ್
ಪಡಲಿಟ್ಟುದು ಸಪ್ತಕೊಂಕಣಂ ||

ವಿಷ್ಣುವರ್ಧನ ಲಕುಮಾದೇವಿಯರ ಮಗ ಒಂದನೆಯ ನಾರಸಿಂಹ. ತಂದೆಯಂತೆ ಮಗ ಸಿಡಿಲಮರಿ:

ಬಲವಂತಂ ಭೀಮನಿಂದಂ ಛಲಿ ಭೃಗುಸುತ
ನಿಂದಂ ಮಹಾತ್ಯಾಗಶೀಲಂ
ಬಲಿಯಿಂದಂ ಗಂಗೆಯಿಂದಂ ಶುಚಿ ಕುಲಗಿರಿ
ಯಿಂದಂ ಸ್ಥಿರಂ ವಾರ್ಧಿಯಿಂದಂ
ಸಲೆ ಗಂಭೀರಂ ಪ್ರತಾಪೋನ್ನತನತುಳ
ದಿನಾಧೀಶನಿಂದಂ ನಿತಾಂತಂ
ಕಲಿಯೆಂತುಂ ಸಿಂಗದಿಂದಂ ಸಮರವಿಜಯ
ವಿಕ್ರಾಂತರಂಹಂ ನೃಸಿಂಹಂ ||

ಒಂದನೆಯ ನಾರಸಿಂಹನ ಮಗ ಎರಡನೆಯ ವೀರಬಲ್ಲಾಳ. ಪರಾಕ್ರಮದಲ್ಲಿ ಇವನು ತಂದೆಗಿಂತ ಕಡಮೆಯೇನೂ ಇರಲಿಲ್ಲ. ಸೇವುಣರಮೇಲೆ

ಬಲ್ಲಾಳನು ತೋರಿಸಿದ ಪರಾಕ್ರಮ ಅತ್ಯದ್ಭುತ ವಾದುದು. ಅಸಂಖ್ಯಾತರಾದ ಕಾಲಾಳು ಮತ್ತು ಅಶ್ವಸೇನೆಯೊಡನೆ ತನ್ನನ್ನು ಎದುರಿಸಿದ ಸೇವುಣರ ಸೇನೆಯನ್ನು ತನ್ನೊಂದು ಆನೆಯಿಂದ ಸೋಲಿಸಿ, ಸೊರಟೂರಿನಿಂದ ಕೃಷ್ಣವೇಣೀದಡದವರೆಗೆ ನಿಂತಲ್ಲಿ ನಿಲ್ಲದಂತೆ ಶತ್ರುಸೇನೆಯನ್ನು ಓಡಿಸಿದ ಧೀರ ಈ ವೀರಬಲ್ಲಾಳ!

ನರಸಿಂಹ ಚಕ್ರವರ್ತಿಯ
ಕರಾಳಕರವಾಳ ತೀವ್ರಧಾರೆಗೆ ಕೂರ್ಪ
ಚ್ಚ ರಿಯಾಗೆ ಪುಟ್ಟುವಂತಿರೆ
ಪರಾಕ್ರಮೋದ್ಭಾಸಿ ಪುಟ್ಟಿದಂ ಬಲ್ಲಾಳಂ ||

ಸಂದುಗ್ರಾಹಿತರಕ್ತದಿಂದ ವಳಿಱಾದತ್ತೀ
ಮಹೀಚಕ್ರಮಿ
ನ್ನೆಂದಿಂಗಾಱುವುದೊಟ್ಟಿದಟ್ಟಿಗಳ
ಬೆಟ್ಟೆಲ್ಲೆಲ್ಲಿಗುಂ ಬಟ್ಟೆಯಿ
ನ್ನೆಂದಿಂಗಪ್ಪುದು ಮಾರಿಗಂ ಹಸಿವ
ದೆಂದಿಂಗಪ್ಪುದೆಂಬನ್ನೆಗಂ
ಕೊಂದಂ ಸೇವುಣ ಸೈನ್ಯಮಂ ಬವರದೊಳ್
ಬಲ್ಲಾಳ ಭೂಪಾಳಕಂ ||

ಏಕಾಂಗವೀರ ವೀರಬಲ್ಲಾಳನ ಪರಾಕ್ರಮವನ್ನು ಕೇಳಿ:

ಎರಡುಂ ಲಕ್ಕಂಬರಂ ಸುತ್ತಣೆಯರಶನಿ
ಸನ್ನಾಹದಿಂ ಪನ್ನೆರಳ್ಸಾ
ಸಿರಮುಶ್ವಶ್ರೇಣಿ ಮೇಲಂಕವಣಿಯ
ಮಣಿಪರ್ಯಾಣದಿಂ ತೋರ್ಕೆವೆತ್ತೆ
ಯ್ತರೆ ತನ್ನೊಂದಾನೆಯಿಂ ಸೇವುಣ
ನೃಪಬಲಮಂ ನೂಂಕಿ ಬೆನ್ನಟ್ಟಿ ಕೊಂದಂ
ಸೊರಟೂರಿಂ ಕೃಷ್ಣವೇಣೀನದಿಯ ತಡಿವರಂ
ವೀರಬಲ್ಲಾಳರಾಯಂ ||

ವೀರಬಲ್ಲಾಳನ ಹೆಂಡತಿ ಪದ್ಮಲದೇವಿ, ಇವರ ಮಗನೇ "ಲಲನಾಮೋಹನಮೂರ್ತಿ, ಕೀರ್ತಿ ರಮಣಂ, ಸಾಹಿತ್ಯ ರತ್ನಾಕರಂ, ಬಲವದ್ವೈರಿ ನೃಪಾಲಕಾಳಕುಳಿಕಂ, ಲೋಕೈಕ ಕಲ್ಪದ್ರುಮಂ, ಆದ ಎರಡನೆಯ ನಾರಸಿಂಹ. ಇವನ ಪ್ರಶಸ್ತಿಯನ್ನು ಶಾಸನ ಈ ರೀತಿ ನಿರೂಪಿಸುತ್ತದೆ:-

ಸಿರಿವಕ್ಷೋರಂಗದೊಳ್ ನರ್ತಿಸೆ ವಿಜಯ
ಭುಜಾದಂಡದೊಳ್ ವಿಕ್ರಮ ಶ್ರೀ
ಯಿರೆ ವಕ್ತ್ರಾಂಭೋಜದೊಳ್ ವಾಗ್ವನಿತೆ
ನೆಲಸೆ ತನ್ನಾಜ್ಞೆ ವಿದ್ವಿಷ್ಟ ಭೂಪಾ
ಳರ ಕೋಟೀರಂಗಳೊಳ್ ವರ್ತಿಸೆ
ವಿಶದಯಶಂ ಪರ್ಬೆ ವಾರಾಶಿತೀರಂ
ಬರಮಾಳ್ದಂ ವಿಶ್ವಧಾತ್ರೀ ತಳಮನತಿಬಳಂ
ರಾಯರೊಳ್ ನಾರಸಿಂಹಂ |

ಕದನದ ಗೆಲ್ಲಮೊಂದೆರಡು ಮೂಱನೆ
ಲೆಕ್ಕಿಸಲುಂಟೆ ಸೇವುಣರ್
ಕುದಿದಿದಿರಾಂತು ಸತ್ತುದನೆ ಬಣ್ಣಿಪೆನಿಂ
ಗದೆಯಿಂದೆ ಭೀಮನೂ
ಱದ ಕುರುಭೂಮಿಯಿಲ್ಲ ಕಲಿರಾಯನೃಸಿಂಹನ
ಪಟ್ಟದಾನೆ ಮೆ
ಟ್ಟದ ರಣರಂಗಮಿಲ್ಲಮದು ಬಾಪ್ಪು ಜಯಂ
ತನಗೆಕ್ಕಲಾವಣಂ ||

ಜವರಾತೂ ಜಗದೇಕವೀರು ಮಝು
ದೇವಾರೋಡಕೂ ಬಾಪು ಜಾ
ದವನಾರಾಯಣು ನಾರಸಿಂಗು ಭಲ
ಎಂದಣ್ಮಂಗೆ ತಾಂ ಮೆಚ್ಚಿ ತೂ
ಗುವವೋಲ್ ವಿಕ್ರಮಪಾಳ ಪಾವುಸಶಿರಃ
ಕಂಜಂಗಳಲ್ಲಾಡುತಿ
ರ್ದುವು ತನ್ನಾನೆಯ ಹೊನ್ನ ಡೆಂಚೆಯದ
ಚಂಚತ್ಕೇತು ದಂಡಂಗಳೊಳ್ ||

ಕಡೆದಮರಾದ್ರಿಯಿಂ ಕಡಲನಂದು
ಸುರಾಸುರರೊಂದೆ ದಂತಿಯಂ

ಪಡೆದರದಿರ್ಕೆ ಪಾಂಡ್ಯಮುಕರೋದ್ಧತ
ಕಾಡವ ಸೈನ್ಯಮೆಂಬ ಹೆ
ಗ್ಗಡಲನಳುರ್ಕೆಯಿಂದೆ ಭುಜಮುಂದರದಿಂ
ಕಡೆದನುನ್ಮದೇಭಮಂ
ಪಡೆದನನೇಕಮಂ ಯದುಕುಳಾಭರಣಂ
ನರಸಿಂಹವಲ್ಲಭ ||

ಮೊದಲೊಳ್ ವಿಕ್ರಮಪಾಳ ಪಾವುಸರ
ನಿತ್ತಲ್ ಕೊಂದನತ್ತಲ್ ಪೊರ
ಳ್ಚಿದನಾ ಕಾಡವರಾಯನಂ ಮಗರನಂ
ಪಾಂಡ್ಯೇಶನಂ ಕೊಂಡನು
ನ್ಮದಗಂಧೇಭಮನೊಲ್ದು ಪಟ್ಟಮನದಂ
ಚೋಳಂಗೆ ಮುಂದಿಟ್ಟು ಕ
ಟ್ಟಿದನಾ ಸೇತುವಿನೊಳ್ ನೃಸಿಂಹದದಟಂ ನಟ್ಟಂ
ಜಯಸ್ತಂಭಮಂ ||

ಮೇಲಿನ ಹೊಯ್ಸಳ ರಾಜರ ಪ್ರಶಸ್ತಿ ಸ್ವಲ್ಪ ಮೇರೆ ಮೀರಿ ಬಳೆಯಿತೆಂದು ಈ ಲೇಖನವನ್ನೋದುವ ನಿಜ ವಾಚಕರಿಗೆ ತೋರಬಹುದು. ಆದರೆ ಇದನ್ನು ಈ ರೀತಿ ಬೆಳೆಯಿಸಿದುದಕ್ಕೆ ಕಾರಣ ವಿಷ್ಟೆ. 'ಅಸಂತುಷ್ಟನಾದ ಬ್ರಾಹ್ಮಣ, ಸಂತುಷ್ಟನಾದ ರಾಜ-ಇವರಿಬ್ಬರೂ ನಷ್ಟರಾಗುತ್ತಾರೆ' ಎಂದು ಅರ್ಥ ಬರುವ ಸೂಕ್ತಿಯೊಂದುಂಟು. ಈ ನೀತಿಯನ್ನನುಸರಿಸಿ ಹಿಂದಿನ ರಾಜರು ಆತ್ಮರಕ್ಷಣೆಗಾಗಿಯೋ ರಾಜ್ಯವಿಸ್ತಾರಕ್ಕಾಗಿಯೋ ದಿಗ್ವಿಜಯವನ್ನು ಕೈಕೊಳ್ಳಬೇಕಾಗಿತ್ತು. ಆ ಕಾಲದ ರಾಜನೀತಿ ಇದಾಗಿತ್ತು. ಮೇಲಾಗಿ ಆ ಕಾಲದ ರಾಜರ ಬದುಕು ಹೂವಿನ ಹಾಸಿಗೆಯೇನಾಗಿರಲಿಲ್ಲ. ಆಹಾರ, ವಿಹಾರ, ನಿದ್ರೆ, ಯುದ್ಧ ಈ ಎಲ್ಲ ವಿಚಾರಗಳಲ್ಲಿಯೂ ಅವರು ಮೈಯೆಲ್ಲ ಕಣ್ಣಾಗಿರಬೇಕಾಗಿತ್ತು. ಇನ್ನೊಂದು ವಿಷಯ. ಭರತಖಂಡವು ಇಂಗ್ಲೀಷರ ಅಧೀನಕ್ಕೆ ಬಂದಮೇಲೆ, ದೇಶಿಯ ರಾಜರು ಯುದ್ಧ ಮಾಡದೆ ನಿರುಪಾಧಿಕವಾಗಿ ಜೀವನ ನಡೆಸುವಂತಾಯಿತು. ಆದರೆ ಹಿಂದಿನ ರಾಜರ ಪರಿಸ್ಥಿತಿ ಹಾಗಿರಲಿಲ್ಲ. ಆ ಕಾಲದ ರಾಜರು ತಾವೇ ಯುದ್ಧರಂಗಕ್ಕೆ ಸೈನ್ಯವನ್ನು ಕರೆದೊಯ್ದು, ಯುದ್ಧದಲ್ಲಿ ಭಾಗವಹಿಸುತ್ತಿದ್ದರು. ಅನೇಕ ವೇಳೆ ರಾಜರು ಒಬ್ಬಂಟಿಗರಾಗಿ ಶತ್ರುಸೈನ್ಯದ ವೀರನೊಡನೆ ಮಲ್ಲ ಕಾಳಗದಲ್ಲಿಯೋ ಖಡ್ಗಕಾಳಗದಲ್ಲಿಯೋ ಅಥವಾ ಇನ್ನಾವ ವಿಧವಾದ ಕಾಳಗದಲ್ಲಿಯೋ ಭಾಗವಹಿಸಬೇಕಾಗಿತ್ತು. ಒಟ್ಟಾರೆ ರಾಜರ ಜೀವನ ಎಲ್ಲ ಕಾಲಗಳಲ್ಲಿಯೂ ಆಪತ್ತಿಗೆ ಒಳಗಾಗಿರುತ್ತಿತ್ತು. ಅವರು ಸ್ವಲ್ಪ ಅಪ್ರಮತ್ತರಾದರೂ ಅವರ ಅಧಃಪತನ ಸಿದ್ಧವಾದಂತೆಯೇ! ಹೀಗಿರುವಲ್ಲಿ ತಮ್ಮ ಸ್ವಾಮಿಯ ಶೌರ್ಯವನ್ನು ಕಣ್ಣಾರೆ ಕಂಡು ಅದನ್ನು ಕವಿಗಳು ವರ್ಣಿಸಿರುವುದರಲ್ಲಿ ಆಶ್ಚರ್ಯವೇನು? ಇದರಲ್ಲಿ ಅತ್ಯುಕ್ತಿಯ ಲೇಪವಿಲ್ಲದೆ, ಕವಿಯ ಅಂತಃಕರಣದ ಧ್ವನಿಯೇ ಇಲ್ಲಿ ಮೂಡಿದೆಯೆಂದು ನಮಗೆ ಅನ್ನಿಸುತ್ತದೆ. ಈ ಪ್ರಶಸ್ತಿಯನ್ನು ಬರೆದು ಏಳು ನೂರು ವರ್ಷಗಳು ಕಳೆದಿದ್ದರೂ, ಈ ಪದ್ಯಗಳನ್ನು ಓದಿದಾಗ ಹೊಯ್ಸಳ ರಾಜರು ಶೂರರು, ಉದಾರಿಗಳು, ಪ್ರಜಾವತ್ಸಲರು ಎಂಬ ಭಾವನೆ ನಮ್ಮ ಮನಸ್ಸಿನಲ್ಲಿ ಮೂಡುತ್ತದೆ. ರಾಜರ ಈ ಗುಣಗಳನ್ನು ಕೇಳಿ, ಅವುಗಳಿಂದ ಆಕರ್ಷಿತನಾಗಿ ಪೋಲಾಳ್ವನು ಆಂಧ್ರದೇಶದಿಂದ ದ್ವಾರಾವತಿಗೆ ಬಂದಿರಬೇಕು. ಹಾಗೆಯೇ ಪರದೇಶದವನಾದ ಪೋಲಾಳ್ವನಲ್ಲಿ ಹೊಯ್ಸಳ ರಾಜರಿಗೆ ನಂಬಿಕೆಯುಂಟಾಗಿರಬೇಕಾದರೆ ಪೋಲಾಳ್ವನ ಶೌರ್ಯ, ಸ್ವಾಮಿನಿಷ್ಠೆ ಅತ್ಯುಚ್ಚಮಟ್ಟದ್ದಾಗಿರಬೇಕು.

ಎರಡನೆಯ ನಾರಸಿಂಹನ ಮಂತ್ರಿ, ದಂಡನಾಯಕ ಪೋಲಾಳ್ವ ಆಂಧ್ರದೇಶದ ನಾರಣಪುರದವನು. ಸುಂದರಿಯರ ಬಂಗಾರದ ಬಳೆಗಳ ರವದಿಂದ, ಮದ್ದಾನೆಗಳ ಘಂಟೆಗಳ ನಾದದಿಂದ,

ಮನೋಹರವಾಗಿ ಹಾಡುವ ಗಾಯಕರ ಸಂಗೀತ ದಿಂದ ಜನರಿಗೆ ಸುಖವನ್ನು ಕೊಟ್ಟು ನಾರಣಪುರ ಆಂಧ್ರದೇಶದಲ್ಲಿ ಶೋಭಿಸುತ್ತಿತ್ತು.

ವಾರವಧೂಕನತ್ಕನಕ ಕಂಕಣಝುಂಕೃತಿಯಿಂ
ಮದೇಭ ಘಂ
ಟಾರವದಿಂ ರಸಂ ಮಸೆಗೆ ಪಾಡುವ ಗಾಯಕ
ಬೃಂದದೊಂದು ಗೀ
ತಾರವದಿಂ ಜಗಜ್ಜನಕೆ ರಾಗಮನಿತ್ತು ಸುಖಕ್ಕೆ
ಸಂತತಂ
ಕಾರಣಮಾಗಿ ನಾರಪುರಂ ಪರಿರಂಜಿಪುದಾಂಧ್ರ
ದೇಶದೊಳ್ ||

ಆ ರಾಜಧಾನಿಯಲ್ಲಿ ಶ್ರೀಮಂತನೂ ಕೀರ್ತಿ ವಂತನೂ ಸುಂದರನೂ ವೀರನೂ ಉದಾರಿಯೂ ತೇಜಸ್ವಿಯೂ ಆದ ಅತ್ತಿರಾಜನಿಗೆ, ಪರಿವಾರಕ್ಕೆ, ಬೇಡಿದವರಿಗೆ ಕಲ್ಪವೃಕ್ಷದಂತಿದ್ದ ನವಿಲಾಡೆಯಕ್ಕ ನೆಂಬ ಹೆಂಡತಿ ಇದ್ದಳು. ಈ ದಂಪತಿಗಳ ಸುಕು ಮಾರನೇ "ಬಿರುದ ಚಮೂವರ ಮುರಾಂತಕ" ನೆನಿಸಿದ ಪೋಲಾಳ್ವದಂಡನಾಥ. ಶ್ರೀಮಂತರಾದ ತಂದೆತಾಯಿಗಳನ್ನು ಬಿಟ್ಟು ಪೋಲಾಳ್ವನು ಆಂಧ್ರ ದೇಶದಿಂದ ಕನ್ನಡದೇಶಕ್ಕೆ ಏಕೆ ಬರಬೇಕಾ ಯಿತೋ! ಬಹುಶಃ ಮೇಲೆ ಹೇಳಿದಂತೆ ಹೊಯ್ಸಳ ರಾಜರ ಗುಣಗಳಿಂದ ಆತನು ಆಕರ್ಷಿತನಾಗಿ ಇಲ್ಲಿಗೆ ಬಂದು ತನ್ನ ಸಾಮರ್ಥ್ಯಕ್ಕೆ ತಕ್ಕ ಆಶ್ರ ಯವನ್ನು ಪಡೆದಿರಬೇಕು. ಪೋಲಾಳ್ವನು ತನ್ನ ವಿದ್ಯೆಯಿಂದ, ಗುಣದಿಂದ, ಪರಾಕ್ರಮದಿಂದ, ಮಂತ್ರಾಲೋಚನಾ ಸಾಮರ್ಥ್ಯದಿಂದ ಹೊಯ್ಸ ಳೇಶ್ವರರಾದ ವೀರಬಲ್ಲಾಳನ, ವೀರನಾರಸಿಂಹನ ಮನಸ್ಸನ್ನು ಸೆಳೆದು ಅವನ ಆಸ್ಥಾನದಲ್ಲಿ ಪ್ರಧಾ ನಾಮಾತ್ಯನಾದನು. ಪೋಲಾಳ್ವನ ಗುಣಗಳನ್ನು ಶಾಸನವೇ ಬಣ್ಣಿಸಲಿ–

ಸಮುಕ್ಕಾಯುಧವೀವ ಕೈವಿತರಣಕ್ಕಾಲೋ
ಚನಕ್ಕಾಪ್ತಮಂ
ತ್ರಿ ಮಿಗಿಲ್ಗಣ್ ಪರದುರ್ಗವರ್ಗ ವಿಜಯಕ್ಕಾ
ಸ್ಥಾನರಂಗಕ್ಕೆ ರ
ತ್ನಮಯಾಕಲ್ಪಮೆನಿಪ್ಪಂ ನೆಗಳ್ದ ಬಲ್ಲಾಳಂ
ಗಮಾನಾರಸಿಂ
ಹಮಹೀಶಂಗಮಮಾತ್ಯನಾವನಧಿಕಂ
ಪೋಲಾಳ್ವದಂಡಾಧಿಪಂ ||

ರಾಜರಲ್ಲಿ ನಾರಸಿಂಹನೊಬ್ಬನೇ, ಮಂತ್ರಿ ಗಳಲ್ಲಿ ಪೋಲಾಳ್ವನೊಬ್ಬನೇ ! ಹೊಯ್ಸಳ ಸಾಮ್ರಾಜ್ಯವನ್ನು ಕಾಪಾಡಿದ ಕೀರ್ತಿ ಪೋಲಾಳ್ವ ನದೇ! ನಾರಸಿಂಹನ ಆಸ್ಥಾನದಲ್ಲಿ ಮಿಕ್ಕೆಲ್ಲ ಮಂತ್ರಿಗಳು ಲೆಪ್ಪದ ಬೊಂಬೆಗಳು, ಪೋಲಾ ಳ್ವನೇ ಅರಸನ ಆಲೋಚನೆಯಲ್ಲಿ ನಾಲಗೆ.

ರಣದೊಳ್ ತೆಂಕಣರಾಯನಂಕದ ಚತುಸ್ಸೈನೋ
ತ್ಕರಂ ದಂಡೆಯ
ಡ್ಡಣಮಿಾತಂ ಸಭೆಯೊಳ್ ಸಮಸ್ತಸಚಿವರ್
ಲೆಪ್ಪಂಗಳೆಂತೆಂಬ ಮಂ
ತಣದೊಳ್ ನಾಲಗೆಯೀತನಿಂ ಸಚಿವರಂ ದಂಡೇ
ಶರಂ ಬಲ್ಲೊಡಿ
ನ್ನೆಣೆಸಾಕಾರ್ಯದ ಖಡ್ಗದಗ್ಗಳಿಕೆಯೊಳ್ ಪೋ
ಲಾಳ್ವನಂ ಪೋಲ್ವರಂ ||

ಧರಣೀಪಾಳಕರ್ಕಳುಂ ಮಂತ್ರಿಗಳುಮಿತರರಿಲ್ಲೆಂದು
ಬೊಟ್ಟೊತ್ತಿದೆಂ ರಾ
ಯರೊಳಂತಾ ನಾರಸಿಂಹಂ ಸಚಿವರೊಳೆಸಕಂಬೆತ್ತ
ಪೋಲಾಳ್ವನೀಯಿ
ರ್ವರೆ ಶೌರ್ಯಂ ಕಾರ್ಯವೊಂಕಿರ್ದೆಡೆಯೊಳ
ದಟನಿಂ ಗೆಲ್ದರಾರತ್ತ ಬಾಣೋ
ದರನಂ ನಿನ್ನಂತಿರಾರ್ ಹೊಯ್ಸಳನ ಸಕಳ
ಸಾಮ್ರಾಜ್ಯಮಂ ಕಾದರಿತ್ತಲ್ ||

ಪೋಲಾಳ್ವ ಸತ್ಯವಂತ, ಕವಿ, ಸಾಹಿತ್ಯಾಭಿಮಾನಿ, ಗುಣಗ್ರಾಹಿ, ಸ್ವಾಮಿಭಕ್ತ, ಹಾಗೂ ತನ್ನ ಐಶ್ವರ್ಯವನ್ನು ಇತರರ ಒಳ್ಳಿಗಾಗಿ ಉಪಯೋಗಿಸಿದವನು. ಈಗ ಅಧಿಕಾರದಲ್ಲಿ ಆರೂಢರಾಗಿರುವವರು ಪೋಲಾಳ್ವನನ್ನು ಅನುಕರಿಸಿ, ಅವನ ಆದರ್ಶಗಳನ್ನು ಎತ್ತಿಹಿಡಿದರೆ ಭಾರತದ ಉದ್ಧಾರವಾಗುವುದರಲ್ಲಿ ಸಂದೇಹವೇ ಇಲ್ಲ. ಅವನ ಗುಣಗಳನ್ನು ಎತ್ತಿತೋರಿಸುವ ಕೆಳಗಿನ ಗದ್ಯಪದ್ಯಗಳು ಎಷ್ಟು ಹೃದಯಸ್ಪರ್ಶಿಯಾಗಿವೆ !

"ಹೊಯ್ಸಳ ಶ್ರೀವೀರನಾರಸಿಂಹದೇವಂ ನಿಜ ರಾಜಧಾನಿ ದೋರಸಮುದ್ರದೊಳ್ ಸುಖಸಂಕಥಾವಿನೋದದಿಂ ಪೃಥ್ವೀರಾಜ್ಯಂಗೆಯ್ಯುತ್ತುಮಿರ್ದಂ. ಆ ಪ್ರತಾಪಚಕ್ರವರ್ತಿಯ ತೇಜಕ್ಕೆ ಕಾಯ್ಪಿನಂತೆ ಕೈದುಗೆ ಕೂರ್ಪಿನಂತೆ ಮಂತ್ರಕ್ಕೆ ಶಕ್ತಿಯಂತೆ ರಾಜ್ಯಕ್ಕೆ ವಜ್ರಸನ್ನಾಹದಂತಭೇದಭಾವದಿಂ ಮನಸಂದು ಮಹಾಪ್ರಧಾನ ಪದವಿಗಧಿನಾಥನಾದ ತೊಲಗದ ಕಂಬಮೆಂಬ ಬಿರುದಧ್ವಜಾಡಂಬರಮನವಲಂಬಿಸಿದಸಂಗೀತಸಾರನ ಸಜ್ಜನಾಧಾರನ ಕಾವ್ಯಕರ್ತಾರನ ಕೀರ್ತಿಭರ್ತಾರನ ಕವಿಜನಾಭರಣನ ಸೂಕ್ತಿಸುಧಾಕರಣನ ವಿತರಣವಿಳಾಸನ ಲಕ್ಷ್ಮೀನಿವಾಸನ ವೈಷ್ಣವಚಕ್ರವರ್ತಿಯ ಜಗನ್ಮೋಹನಮೂರ್ತಿಯ ಸತ್ಯಸ್ವಭಾವನ ಪೋಲಾಳ್ವದೇವನ ಪೆರ್ಮೆಯ ವಿಸ್ತಾರಮಂ ಪೇಳ್ವೊಡೆ-

ಕರುವಿಟ್ಟಂ ಸತ್ಯದಿಂ ಕಣ್ದೆರೆದನಸಮಸಾಹಿತ್ಯದಿಂ
ಬಣ್ಣವಿಟ್ಟಂ
ಸಿರಿಯಿಂ ಕೂರ್ತಾಯುವೊಯ್ದಂ ಪರಹಿತ
ಚರಿತೋದ್ಯೋಗದಿಂ ಬರ್ಮನೆಂಬಂ
ತಿರೆ ಸತ್ಯಜ್ಞಾನಲಕ್ಷ್ಮೀ ಪರಹಿತಚರಿತೋದ್ಯೋಗ
ದೊಳ್ ತಾನೆ ಧಾತ್ರೀ
ಗುರುವಾದಂ ನಾರಸಿಂಹಾಧಿಪನ ಕಟಕದೊಳ್
ಮಂತ್ರಿ ಪೋಲಾಳ್ವದೇವಂ ||

ಬಗೆಗೇನುಂ ಕವಲಿಲ್ಲ ವಾಕ್ಯವೆರಡಿಲ್ಲಾದಾರ್ಯದೊಳ್
ಮಾಂದ್ಯಮಿ
ಲ್ಲ ಗುಣಪ್ರೀತಿಯೊಳಾತ್ಮಪಕ್ಷ ಪರಪಕ್ಷಾ
ಸಂಗಮಿಲ್ಲಾಳ್ದನು
ಜ್ಜುಗದೊಳ್ ಲಾಭದ ಲೋಭಮಿಲ್ಲ ಸಿರಿಯೊಳ್
ಸೊರ್ಕಿಲ್ಲ ಪೋಲಾಳ್ವನಂ
ಪೊಗಳ್ವಿನ್ನನ್ಯರನಣ್ಣ ಪೇಳ್ ಪೊಗಳ್ವುದೇ
ಪಾಲುಂಡು ಮೇಲುಂಬುದೇ ||

ಲಕ್ಷ್ಮೀಸರಸ್ವತಿಯರಿಗೆ ಯಾವಾಗಲೂ ದ್ವೇಷ. ಅತ್ತೆ ಸೊಸೆಯರಲ್ಲವೇ ಅವರು ? ಆದರೆ ಪೋಲಾಳ್ವನಲ್ಲಿ ಅವರು ಜಗಳವಾಡದೆ, ಅನ್ಯೋನ್ಯವಾಗಿ ಸ್ನೇಹದಿಂದಿದ್ದುದು ಒಂದು ವಿಶೇಷ. ಐಶ್ವರ್ಯ ಬಂದಾಗ ಮನುಷ್ಯನ ನಡತೆ ಮಾರ್ಪಡುತ್ತದೆ, ನೀತಿ ಕೆಡುತ್ತದೆ, ತಲೆ ತಿರುಗುತ್ತದೆ. ಆದರೆ ಪೋಲಾಳ್ವನಿಗೆ ಹಾಗಾಗಲಿಲ್ಲ. ಗಂಗೆಯಂತೆ ಪವಿತ್ರವಾದ ಅವನ ನಡತೆಯನ್ನೂ ಅತಿಶಯವಾದ ವಿಷ್ಣುಭಕ್ತಿಯನ್ನೂ ಏನೆಂದು ಹೊಗಳುವುದು ?

ಇದು ವಿದ್ಯಾಲಕ್ಷ್ಮೀ ನಿರ್ಮತ್ಸರತೆಯನಸದಳಂ
ಜನ್ಮನಂಬೆತ್ತ ರೂಪಿಂ
ತಿದು ಗಂಗಾಪೂರಪೂತಂ ನಡೆವಳಿಯಿದು
ವಿಕ್ರಾಂತಮುತ್ಸೇಕವೆಂದುಂ
ಪದನಂ ಪೋಲಾಳ್ವದಂಡಾಧಿಪ ಪಡೆಯದು ನಿನ್ನಲ್ಲಿ
ಮುನ್ನಾವುದೋ ನೋಂ
ತುದು ಸುಪ್ರಿಂದಾರನಾರಾಧಿಸಿ ಪಡೆದನೊ
ನಿನ್ನನ್ನನಂ ಪದ್ಮಗರ್ಭಂ ||
ಜಗನುಂ ಝುಂಪಿಸುತಿರ್ಪ ಕೀರ್ತಿ ಮುಗಿಲಂ
ಮುಟ್ಟಿರ್ಪ ಪೆಂಪಂಬುರಾ

ಶಿಗೆ ಮಾಱಿಂಡಲನಾದ ಗುಣ್ಪು ಪತಿರಾಜ್ಯಶ್ರೀ
ಗಡರ್ಪಾದ ಮಂ

ತ್ರಿಗುಣಂ ರಾಗಮನುರ್ವಿಗೀವ ಸಿರಿ ಸಾಯುಜ್ಯಾದಿ
ಸಂಪತ್ತಿಯಂ

ನಗುತಿರ್ಪತ್ಯುತಭಕ್ತಿ ತನ್ನೊಳೆಸಿಪಂ
ಪೋಲಾಳ್ವದಂಡಾಧಿಪಂ ||

ಆಂಧ್ರದೇಶದ ನಾರಾಯಣಪುರದಲ್ಲಿ ಹುಟ್ಟಿದ ಪೋಲಾಳ್ವನೆಲ್ಲಿ? ಹರಿಹರವೆಲ್ಲಿ ? ಶ್ರೀ ಹರಿಹರೇಶ್ವರನಲ್ಲಿದ್ದ ಭಕ್ತಿ ಪೋಲಾಳ್ವನನ್ನು ಹರಿಹರಕ್ಕೆ ಕರೆತಂದು ಸ್ವಾಮಿಗೆ ಒಂದು ಭವ್ಯಭವನವನ್ನು ಕಟ್ಟುವಂತೆ ಮಾಡಿತು. ಅನೇಕ ಕುಶಲ ಶಿಲ್ಪಿಗಳ ಕೆಲಸದಿಂದ ಸಿದ್ಧವಾಗಿ ೧೧೫ ಚಿನ್ನದ ಕಳಸಗಳಿಂದ ಮೆರೆಯುತ್ತಿದ್ದ ದೇವಾಲಯವನ್ನು ಸ್ವಸ್ತಿಶ್ರೀ ವಿಜಯಾಭ್ಯುದಯ ಶಕವರ್ಷ ೧೧೪೫ (೧೨೨೪) ನೆಯ ಸ್ವಭಾನು ಸಂವತ್ಸರದ ಮಾಘ ಶುದ್ಧ ಏಕಾದಶಿ ಗುರುವಾರದ ದಿನ ಚೋಳ ಪ್ರತಿಷ್ಠಾಚಾರ್ಯ ಶ್ರೀವೀರನಾರಸಿಂಹ ದೇವರ ಮಹಾಪ್ರಧಾನ ಪೋಲಾಳ್ವದಂಡಾಧಿಪನು ತನ್ನ ದೇವಾಲಯದ ಕೈಂಕರ್ಯವನ್ನು ಶ್ರೀಹರಿಹರೇಶ್ವರ ಸ್ವಾಮಿಗೆ ಅರ್ಪಿಸಿದನು. ಅಂದಿನ ವೈಭವ ಉತ್ಸವಗಳು ಅತ್ಯಪೂರ್ವವಾಗಿರಬೇಕು. ಶ್ರೀ ಹರಿಹರ ದೇವಾಲಯ ಸುಮಾರಾಗಿ ದೊಡ್ಡದಾಗಿದೆಯೆಂದೇ ಹೇಳಬೇಕು. ಇಂಥದೊಂದು ದೇವಾಲಯವನ್ನು ಕಟ್ಟಿಸಿ ಅದನ್ನು ಚಿನ್ನದ ಕಲಶಗಳಿಂದ ಅಲಂಕರಿಸಿರಬೇಕಾದರೆ ಪೋಲಾಳ್ವನ ಐಶ್ವರ್ಯ, ಅದಕ್ಕೆ ಸಮನಾದ ಧರ್ಮದ ವಿಷಯದಲ್ಲಿ ಅವನ ಪಕ್ಷಪಾತ ಇವು ಸುಸ್ಪಷ್ಟವಾಗುತ್ತವೆ. ಕಲಾ ವೈಭವೋಪೇತವಾದ ದೇವಾಲಯದ ಸೌಂದರ್ಯವನ್ನು ಎಷ್ಟುವರ್ಣಿಸಿದರೂ ಶಾಸನಕವಿಗೆ ತೃಪ್ತಿಯಿಲ್ಲ. ಪೋಲಾಳ್ವ ದಂಡನಾಯಕನು ನಿರ್ಮಿಸಿದ ಹರಿಹರ ದೇವಾಲಯದ ಕಲಾವೈಭವವನ್ನು ಆ ಶಾಸನವೇ ವರ್ಣಿಸಲಿ-

ಈ ತೆರನಾದ ದೇವಾಲಯವನ್ನು ಈ ಮೊದಲು ಯಾವ ರಾಯರೂ ಕಟ್ಟಿಸಿರಲಿಲ್ಲ !

ಸಿರಿಯಿಂದಂ ಕಡುರೂಢಿಯಿಂ ತಳೆದ
ರಾಯನರ್ಮುನ್ನಮಾರುಂ ಯುಗಾಂ

ತರದೊಳ್ಮಾಡಿಸಲಾರ್ತರೆ ಹರಿಹರ ಶ್ರೀದೇವತಾವಾ
ಸಮಂ

ಸ್ಥಿರಮಪ್ಪಂತಿರೆ ತಾನೆ ಮಾಡಿಸಿ ಜಸಂಬೆತ್ತಂ
ಜಗದ್ಭೂಷಣಂ

ನರಸಿಂಹಕ್ಷಿತಿಪಾಲ ಮಂತ್ರಿತಿಳಕಂ ಪೋಲಾಳ್ವ
ದಂಡಾಧಿಪಂ ||

ಸೂರ್ಯನೊಡನೆ ಮೇರುವಿನೊಡನೆ ಪ್ರತಿಸ್ಪರ್ಧಿ ಶ್ರೀಹರಿಹರ ದೇವಾಲಯ !

ದೆಸೆವೆಣ್ಗಳ್ ನೇಲಿಗೊಂಡ ಪುತ್ತಳಿಗಳಂ
ಗೋತ್ರಾದ್ರಿಗಳ್ ತುಂಗ ಕೂ

ಟ ಸಹಸ್ರಂಗಳನಿಂದುವಳಯಂಗಳ್ ಪೋಲ್ವಿನಂ
ಕಾಂತಿ ಶೋ

ಭಿಸೆ ಚೆಂಬೊಂಗಳಸಂಗಳಂ ಹರಿಹರ ಶ್ರೀ
ಗೇಹಮಂ ಕೂಡೆ ಮಾ

ಡಿಸಿದಂ ಧಾರ್ಮಿಕ ಧರ್ಮರಾಜತನಯಂ
ಪೋಲಾಳ್ವದಂಡಾಧಿಪಂ ||

ಗಿರಿಯೋ ಕೂಟವೋ ಸೂರ್ಯನೋ ಕಲಶವೋ
ದಿಗ್ಭಿತ್ತಿಯೋ ಭಿತ್ತಿಯೋ

ದೊರೆವೆತ್ತಾ ದೆಸೆವೆಣ್ಗಳೋ ಪರಿಲಸತ್ಪಾಂಚಾಲಿಕಾ
ಜಾಳಮೋ

ಪಿರಿದುಂ ನಿಟ್ಟಿಸಬಾರದೆಂದೆನೆ ಜನಂ
ಪೋಲಾಳ್ವದಂಡೇಶನ
ಚ್ಚರಿಯಪ್ಪಂತಿರೆ ಮಾಡಿದಂ ಹರಿಹರ ಶ್ರೀ
ದೇವತಾವಾಸವಮಂ ||

ದೇವಾಲಯವನ್ನು ಅಲಂಕರಿಸಿರುವ ಕಂಬಗಳೂ, ಪುತ್ತಳಿಗಳೂ ಏನು ಚೆಲುವು!

ಇದು ಪದ್ಮಾವಸಥಂ ದಿವಾಕರನವೊಲ್
ಕೀರ್ತ್ಯುನ್ನತಂ ಪಾತ್ರದಾ
ನದವೋಲ್ ಸತ್ಕುಮುದಂ ಸರೋವರದವೋಲ'
ಘಂಟಾನ್ವಿತಂ ದಿಗ್ಗಜೇಂ
ದ್ರದವೋಲ್ ತಾನೆನಿಪನ್ನೆಗಂ
ಹರಿಹರಶ್ರೀಗೇಹಮಂ ಮಾಡಿದಂ
ಯದುಭೂಪಾಳನ ದಂಡನಾಥತಿಲಕಂ
ಪೋಲಾಳ್ವದಂಡಾಧಿಪಂ||

ನಗೆವಾಯಿಂ ಕುಮುವಗಳಿಂ
ನೆಗೆದ ಜಂಘಾಕಾಂಡದಿಂ ರನ್ನವ
ಟ್ಟಿಗೆಯಿಂ ದಂಡಲತಾ ವಿಚಿತ್ರ
ಮುಖ ಪತ್ರವ್ರಾತದಿಂ ಘಂಟೆಯಿಂ
ಬಗೆಯಿಂ ಬಲ್ಸೆಣಿಗೆಯ್ವ ಪುತ್ಥಳಿಗಳಿಂ
ರಂಗಸ್ಥಳೀಸ್ತಂಭಮಾ
ವಗಮೊಪ್ಪುತ್ತಿರೆ ರಂಜಿಕುಂ ಹರಿಹರಶ್ರೀ
ದೇವತಾಮಂದಿರಂ ||

ಹರಿಹರೇಶ್ವರ ದೇವಾಲಯವನ್ನು ಕಟ್ಟಿಸಿದ ಪುಣ್ಯ ಹಿಂದಿನ ದೊರೆಗಳಿಗಾಗಲಿ ಇಲ್ಲವೆ ಹೆರ್ಮಾಡಿ ರಾಯನಿಗಾಗಲಿ ದೊರೆಯಿತೆ ?

ವಿನುತಂ ವೈಷ್ಣವ ಚಕ್ರವರ್ತಿ ನೆಗಳ್ದೀ
ಪೋಲಾಳ್ವ ದಂಡೇಶನೊ
ರ್ಬನೆ ಪುಣ್ಯಾಂಜನ ಸಿದ್ಧಿಯಂ
ಪಡೆದನಿಂದಂತಲ್ಲದಿರ್ದಂದು ಭೋಂ
ಕೆನೆ ಕೈಸಾರ್ವುದೆ ಸುಸ್ಥಿರಂ
ಹರಿಹರ ಪ್ರಾಸಾದ ನಿರ್ಮಾಣ ಧ
ರ್ಮನಿಧಾನಂ ಶತಶಾತಕುಂಭಕಳಶ
ಶ್ರೀವಿಭ್ರಮಭ್ರಾಜಿತಂ
ಪುರುಪುಚ್ಛಂ ಸಗರಂ ಭಗೀರಥನೃಪಾಳಂ
ಕಾರ್ತವೀರ್ಯಾರ್ಜುನಂ||

ಭರತಂ ಸಂದ ಪುರೂರವಂ
ಪೃಥು ದಿಲೀಪಂ ಮುಖ್ಯಮಾದಾದಿರಾ
ಜರೆ ಮುಂಮಾಡಿಸಲಾಱದಾ ಹರಿಹರಶ್ರೀಗೇಹಮಂ
ಮಾಡಿದಂ
ಗಿರಿ ಚೆಂಬೊಂಗಳಸಂಗಳಂ ತಲೆದವೊಲ್
ಪೋಲಾಳ್ವದಂಡಾಧಿಪಂ||

ಹರಿಹರಕ್ಷೇತ್ರದ ಕೀರ್ತಿ ಬಹಳ ವರ್ಷಗಳಿಂದಲೂ ಪ್ರಖ್ಯಾತವಾದದ್ದು. ಕಾಶಿಗೆ, ರಾಮೇಶ್ವರಕ್ಕೆ ಮಿಗಿಲಾದದ್ದು ಸಾಮರ್ಥ್ಯದಲ್ಲಿ ಈ ಕ್ಷೇತ್ರ. ಶಾಸ್ತ್ರಗಳನ್ನು ಉಜ್ಜೀವಿಸತಕ್ಕದ್ದು ಈ ಕ್ಷೇತ್ರ. ತಾನು ಮಾಡಿದ ಧರ್ಮ ಶಾಶ್ವತವಾಗಿ ನಿಲ್ಲಬೇಕು. ವಿದ್ವಾಂಸರು ಅವನ್ನು ಕಾಪಾಡಿಕೊಂಡು ಬರಬೇಕೆಂದು ಬಗೆದು ಪೋಲಾಳ್ವನು ಧರ್ಮಕ್ಕೆ ವಜ್ರಕವಚದಂತಿದ್ದ ನೂರನಾಲ್ವರು ಬ್ರಾಹ್ಮಣರಿಗೆ ಹರಿಹರಕ್ಕೆ ಆರುಮೈಲಿ ದೂರದಲ್ಲಿರುವ ಬಾನುವಳ್ಳಿಯನ್ನು ಸರ್ವಮಾನ್ಯವಾಗಿ ಬಿಟ್ಟನು. ಪೋಲಾಳ್ವನ ದಾನ ಇಷ್ಟಕ್ಕೇ ನಿಲ್ಲಲಿಲ್ಲ. ದ್ವಾರಾವತಿಗೆ ಸಮನೆಂದು ಪ್ರಖ್ಯಾತವಾದ ಗುಹಾರಣ್ಯಕ್ಕೆ ನಾಲ್ಕುಬಾಗಿಲು ಗಂಳತಿರುವ ಗ್ರಾಮಗಳಲ್ಲಿ ಒಂದಾದ ಬಾನುವಳ್ಳಿ (ಉಳಿದವು-ಎಲೆವಳ್ಳಿ. ಜಿಗುಳೆ, ಹೇಳೆಹಾಳು)ಯಲ್ಲಿ ಸುಂದರವಾದ ಲಕ್ಷ್ಮೀನಾರಾಯಣ ದೇವಾಲಯ

ವನ್ನು ಕಟ್ಟಿಸಿ, ಅಲ್ಲಿ ಧರ್ಮ ಶಾಶ್ವತವಾಗಿ ನಡೆಯುವಂತೆ ಮಾಡಿದನು.

ನೆಗಳ್ದಾ ಸೇತುಗೆ ವಾರಣಾಸಿಗೆ
ಕುರುಕ್ಷೇತ್ರಕ್ಕೆ ಸಾಮರ್ಥ್ಯದಿಂ
ಮಿಗಿಲಾಗಿರ್ಪುದು ಧಾತ್ರಿಯೊಳ್
ಹರಿಹರಕ್ಷೇತ್ರಂ ಸಮಂತಿಲ್ಲಿ ಮೇ
ರುಗೆ ಮಾಱಿಂಡಲಮುಪ್ಪಿನಂ
ಹರಿಹರಶ್ರೀಗೇಹಮಂ ಮಾಡಿದಂ
ಗಗನಂ ಪೊಂಗಳಸಂಗಳಿಂ
ಪುದುವಿನಂ ಪೋಲಾಳ್ವದಂಡಾಧಿಪಂ ||

ಶ್ರುತಿಗರ್ಭಂ ಸ್ಮೃತಿಗಾಯು
ಮಂತ್ರದ ಮಹತ್ವಂ ತಂತ್ರದಾಧಾರವೆಂ
ಬತಿ ಸಾಮರ್ಥ್ಯದ ನೂಱನಾಲ್ವರು
ಮುದಂಚದ್ವಿಪ್ರರಾಕ್ಷೇತ್ರ ನಿ
ರ್ಮಿತ ಧರ್ಮಕ್ಕೆ ಸಮಗ್ರ ವಜ್ರಕವಚಂ
ತಾವಾಗೆ ಪೋಲಾಳ್ವನೂ
ರ್ಜಿತ ಪುಣ್ಯಂ ನೆಱೆಮಾಡಿದಂ
ಹರಿಹರಶ್ರೀದೇವತಾವಾಸಮಂ ||

ಪೋಲಾಳ್ವನ ದಾನ ಒಂದು ತೂಕವಾದರೆ ಅವನ ಸಾಹಿತ್ಯ ಸೇವೆ ಇನ್ನೊಂದು ತೂಕ. ಪಂಪನಂತೆ ಪೋಲಾಳ್ವನು * ಶೂರನಾಗಿದ್ದಂತೆ, ಉತ್ತಮ ಕವಿಯೂ ಆಗಿದ್ದನೆಂಬುದಕ್ಕೆ ಷಟ್ಪದಿಯಲ್ಲಿ ಅವನು ಬರೆದಿದ್ದ 'ಹರಿಚಾರಿತ್ರ' ಎಂಬ ಗ್ರಂಥ ಸಾಕ್ಷಿಯಾಗಿದೆ. ಆದರೆ ನಮ್ಮ ದುರದೃಷ್ಟದಿಂದ ಆ ಗ್ರಂಥ ನಷ್ಟವಾಗಿದೆ. ಅದು ನಮಗೆ ದೊರಕಿದ್ದರೆ ಷಟ್ಪದಿಯ ಚರಿತ್ರೆಯ ಮೇಲೆ ಹೊಸಬೆಳಕನ್ನು ಬೀರುತ್ತಿದ್ದಿತು ಎಂಬುದರಲ್ಲಿ ಸಂದೇಹವೇ ಇಲ್ಲ. ಇನ್ನೊಂದು ವಿಷಯ ಈ ಶಾಸನದ ಕಾಲ ಹರಿಹರ-ರಾಘವಾಂಕರ ಕಾಲ ಸುಮಾರಾಗಿ. ಹರಿಹರ ರಾಘವಾಂಕರು ವಸ್ತು,ಶೈಲಿ, ಛಂದಸ್ಸುಗಳ ವಿಷಯದಲ್ಲಿ ಕನ್ನಡ ಸಾಹಿತ್ಯದಲ್ಲಿ ಕ್ರಾಂತಿಕಹಳೆಯನ್ನೂದಲು ತೊಡಗಿದ್ದರು. ಹರಿಹರನು ರಗಳೆಯಲ್ಲಿ ಕಾವ್ಯರಚನೆ ಮಾಡಿದರೆ, ರಾಘವಾಂಕನು ಷಟ್ಪದಿಯಲ್ಲಿ ಮಾಡಿದನು. ಹರಿಹರ ರಾಘವಾಂಕರು ಹಂಪೆಯಲ್ಲಿದ್ದರೂ ಅವರಿಗೆ ಹೊಯ್ಸಳ ರಾಜಧಾನಿಯ ಸಂಬಂಧವಿತ್ತು. ಹರಿಹರನಿಗೂ ಹರಿಹರದೇವಾಲಯಕ್ಕೂ ಸಂಬಂಧವಿತ್ತೆಂಬ ಮಾತು ವೀರಶೈವ ಕಾವ್ಯಗಳಲ್ಲಿ ಬರುತ್ತದೆ. ಹಂಪೆಗೂ ಹರಿಹರಕ್ಕೂ ಬಹಳ ದೂರವೇನಿಲ್ಲ. ಪೋಲಾಳ್ವನು ಕಟ್ಟಿಸಿದ ಹರಿಹರದೇವಾಲಯದ ಪ್ರಾರಂಭೋತ್ಸವಕ್ಕೆ ಈ ಕವಿಗಳು ಬಂದಿದ್ದರೆ ? ಒಂದು ವೇಳೆ ಬಂದಿದ್ದರೆ ಈ ಸಾಹಿತ್ಯದ ಪ್ರಶ್ನೆಗಳನ್ನು ಚರ್ಚಿಸಿರಬೇಕಲ್ಲವೆ? ಯಾರುಯಾರ ಮೇಲೆ ಎಷ್ಟು ಪ್ರಭಾವವನ್ನು ಬೀರಿದರು? ಪೋಲಾಳ್ವನ ಗ್ರಂಥ ದೊರೆಯದ ಕಾರಣ ಈ ಊಹೆಯನ್ನು ಸೂಚಿಸಿ, ವಿಷಯವನ್ನು ಇಲ್ಲಿಗೇ ಬಿಡೋಣ. ಒಟ್ಟಿನಲ್ಲಿ ಆಂಧ್ರದೇಶದ ಈ ದಂಡನಾಯಕನು ಕನ್ನಡದಲ್ಲಿ ಅದರಲ್ಲೂ ಷಟ್ಪದಿಯಲ್ಲಿ ಗ್ರಂಥರಚನೆ ಮಾಡಿದ್ದು ಒಂದು ವಿಶೇಷ.

ಗುರುಧರ್ಮದ್ವಿತಯಕ್ಕೆ ನೀನೆ
ದಿಟದಿಂ ಪೋಲಾಳ್ವ ಕೇಳ್ ಮುನ್ನಮಾ
ದರೊಳಿನ್ನಪ್ಪರೊಳಿಂದು ವರ್ತಿಪರೊಳಾ
ರ್ಗುಂಟಾದುವೀ ಧರ್ಮಮಾರ್
ಹರಿಚಾರಿತ್ರಮನೊಲ್ದು ಷಟ್ಪದದೆ
ಪೇಳ್ದರ್ ನಿನ್ನವೊಲ್ ।
ಧರೆ ಚೋದ್ಯಂಬಡುವಂತಿರಾರ್
ಹರಿಹರಶ್ರೀಗೇಹಮಂ ಮಾಡಿದರ್ ||

ಶಾಸನದ ಕೊನೆಯಲ್ಲಿ ಫಲಶ್ರುತಿಯನ್ನು ಹೇಳಿದೆ ಎಲ್ಲ ಶಾಸನಗಳಂತೆ. ಒಬ್ಬರು ಮಾಡಿದ

* ಪೋಲಾಳ್ವನು ಬ್ರಾಹ್ಮಣನೆಂದು ಡಾ॥ ಆರ್. ಸಿ. ಹಿರೇಮಠರ ಹೇಳಿಕೆ. ಶಾಸನದಿಂದ ಈ ಅಂಶ ದೃಢಪಡುವುದಿಲ್ಲ.

ಧರ್ಮವನ್ನು ಎಲ್ಲರ ಉಪಯೋಗಕ್ಕಾಗಿ ಜನರು ಕಾಪಾಡಿಕೊಂಡು ಬರಬೇಕು; ಇದು ಮಾಡಲೇ ಬೇಕಾದ ಕರ್ತವ್ಯ. ಇದರ ಧರ್ಮದ ಪಾಲನೆಯಿಂದ ಆಯುಸ್ಸು ಸಂಪತ್ತು ಉಂಟಾಗುತ್ತದೆ; ಇದನ್ನು ನಾಶಮಾಡುವುದರಿಂದ, ವಿರೂಪಗೊಳಿಸುವುದರಿಂದ ಘೋರವಾದ ಪಾಪ ಸಂಭವಿಸುತ್ತದೆ. ದಾನದ ಸ್ವತ್ತನ್ನು ಅಪಹರಿಸುವುದರಿಂದ ಘೋರವಾದ ನರಕ ಪ್ರಾಪ್ತವಾಗುತ್ತದೆ. ಈ ಭಾವ ಬರುವ ಪದ್ಯಗಳು ಸಾಮಾನ್ಯವಾಗಿ ಅನೇಕ ಶಾಸನ ಗಳ ಕೊನೆಯಲ್ಲಿ ಬರುತ್ತವೆ. ಈ ತೆರನಾದ ಪಾಪ ಪುಣ್ಯಗಳ ಭೀತಿಯನ್ನುಂಟುಮಾಡಿ, ನಮ್ಮ ಹಿರಿಯರು ಈ ಧರ್ಮಗಳು ಇಂದಿನವರೆಗೂ ಉಳಿದುಕೊಂಡು ಬರುವಂತೆ ಮಾಡಿದರು.

ಪ್ರಿಯದಿಂದಿಂತಿದನೆಯ್ದೆ ಕಾವ
ಪುರುಷಂಗಾಯುಂ ಜಯಶ್ರೀಯು ಮು

ಕ್ಕೆಯಿದಂ ಕಾಯದೆ ಕಾಯ್ವ ಪಾಪಿಗೆ
ಕುರುಕ್ಷೇತ್ರಂಗಳೊಳ್ ವಾರಣಾ

ಸಿಯೊಳೇಳ್ಕೋಟಿ ಮುನೀಂದ್ರರಂ
ಕಪಿಲೆಯಂ ವೇದಾಢ್ಯರಂ ಕೊಂದೊಂದೊಂ

ದಯಶಂ ಪೊರ್ದುಗುಮೆಂದು
ಸಾಱಿದಪುವೀ ಶೈಲಾಕ್ಷರಂ ಧಾತ್ರಿಯೊಳ್ ||

ಇಲ್ಲಿಗೆ ಈ ಶಾಸನದ ವಿಷಯ ಮುಗಿಯಿ ತಾದರೂ, ಇನ್ನು ಒಂದೆರಡು ಅಂಶಗಳನ್ನು ಹೇಳಿ ಈ ಲೇಖನವನ್ನು ಮುಗಿಸಬಹುದು. ಕನ್ನಡ ನಾಡಿನ ಪ್ರೌಢಶಾಸನಗಳಲ್ಲಿ ಇದೂ ಒಂದೆಂದೂ ಇದರಲ್ಲಿ ಸಾಹಿತ್ಯಾಂಶ ಗಮನಾರ್ಹವಾಗಿದೆಯೆಂದೂ ಮೇಲೆ ಹೇಳಿತಷ್ಟೆ. ನಮ್ಮ ನಾಡಿನ ಶಾಸನಗಳನ್ನು ಪರಿಶೀಲಿಸಿದರೆ ಒಂದು ಅಂಶ ಸ್ಪಷ್ಟವಾಗುತ್ತದೆ. ಯಾವ ರಾಜವಂಶದ ಕೀರ್ತನೆ ಶಾಸನಗಳಲ್ಲಿ ನಡೆದಿರುವುದೋ, ಆ ಪದ್ಯಗಳು ಸ್ವಲ್ಪ ಹೆಚ್ಚು ಕಡಮೆ ಇತರ ಶಾಸನಗಳಲ್ಲಿಯೂ ದೊರಕುತ್ತವೆ. ಈ ರೀತಿಯ ಪದ್ಯಗಳನ್ನು ಮೊದಲು ಯಾವನೋ ಒಬ್ಬ ಕವಿಯು ಬರೆದು ಆ ಬಳಿಕ ದೇಶದಲ್ಲಿ ಹರಿಯ ಬಿಟ್ಟಿರಬೇಕು. ಅಂಥ ಒಂದೆರಡು ಪದ್ಯಗಳು ಈ ಶಾಸನದಲ್ಲಿ ದೊರಕುತ್ತವೆ. (ಉದಾ–ಸಿರಿವಕ್ಷೋರಂಗ ದೊಳ್ ನರ್ತಿಸೆ) ಈ ಮಾತು ಹಾಗಿರಲಿ. ಈ ಶಾಸನ ದಲ್ಲಿ ಬರುವ ಹುಲಿಯ ವರ್ಣನೆ ಎಷ್ಟು ಸರಳವಾಗಿದೆ ಸ್ವಾಭಾವಿಕವಾಗಿದೆ, ಸುಂದರವಾಗಿದೆ! ಕೋಪದಿಂದ ಹುಲಿ ನಮ್ಮ ಮೇಲೆ ಹಾಯ್ದು ಬರುತ್ತಿದೆಯೋ ಎಂಬಂತಿದೆ ಮಾತುಗಳಲ್ಲಿ ಅದರ ವರ್ಣನೆ. ಇಲ್ಲಿ ಬರುವ ಉಲ್ಲೇಖ(ಸಮುಕ್ಕಾಯುಧ....)ಅನುಪ್ರಾಸ (ಸಿರಿಯೊಳ್ ಸೊರ್ಕಿಲ್ಲ, ಲಾಭದ ಲೋಭಮಿಲ್ಲ ಇತ್ಯಾದಿ) ಅಲಂಕಾರಗಳು ಗಮನಾರ್ಹವಾದುವು. ಶಾಸನಕವಿಗೆ ಮತ್ತೇಭವಿಕ್ರೀಡಿತದ ಮೇಲೆ ಅತಿಯಾದ ಮೋಹ. ಶಾಸನದ ಬಹುಪಾಲು ಪದ್ಯಗಳು ಅದರಲ್ಲಿ ರಚಿತವಾಗಿವೆ. ಈ ಛಂದಸ್ಸಿನ ಓಟ ಕವಿಯ ಮನಸ್ಸನ್ನು ಸೆರೆಹಿಡಿದಿರುವಂತೆ ತೋರುತ್ತದೆ. ಎಲ್ಲಕ್ಕೂ ಮಿಗಿಲಾಗಿ ಈ ಶಾಸನ ದಿಂದ ಪೋಲಾಳ್ವನ ವ್ಯಕ್ತಿಚಿತ್ರ ನಮಗೆ ದೊರ ಕುತ್ತದೆ. ಪೋಲಾಳ್ವನು ಹುಟ್ಟಿದ್ದು ಶ್ರೀಮಂತ ವಂಶದಲ್ಲಿ. ದೇವರು ಅನುಗ್ರಹಿಸಿದ ಒಳ್ಳೆಯ ಅವ ಕಾಶವನ್ನೂ ದೇಹವನ್ನೂ ದುರುಪಯೋಗಪಡಿಸಿ ಕೊಳ್ಳದೆ, ಲೋಕಸೇವೆಯ ಮಹತ್ವಾಕಾಂಕ್ಷೆಯನ್ನು ಬಳಸಿಕೊಂಡು, ಒಂದು ಕ್ಷಣಕಾಲವನ್ನೂ ವ್ಯರ್ಥ ಗೊಳಿಸದೆ ಶಸ್ತ್ರಶಾಸ್ತ್ರಗಳಲ್ಲಿ ನಿಪುಣತೆಯನ್ನು ಪಡೆದನು. ದೇಶಸಂಚಾರದಿಂದ ಲೋಕಚರಿತೆ ಯನ್ನು ಅರಿತನು. ರಾಜಾಸ್ಥಾನದ ಸಜ್ಜನರ ಸಹವಾಸದಿಂದ ನೀತಿಯನ್ನು ಕಲಿತನು. ತನ್ನ ಯೋಗ್ಯತೆಯನ್ನು ಅರಿತು ತಕ್ಕ ಸ್ಥಾನವನ್ನು ಕಲ್ಪಿಸಿ

ಕೊಟ್ಟ ಸ್ವಾಮಿಗೆ ತಾನು ತೋರಬೇಕಾದದ್ದು ಸ್ವಾಮಿ ನಿಷ್ಠೆ, ಸಂಪಾದಿಸಿದ ದ್ರವ್ಯಕ್ಕೆ ಗುರಿ ತ್ಯಾಗ, ಇಹಲೋಕದ ಬದುಕಿನ ಚರಮಗುರಿ ದೈವ ಭಕ್ತಿ ಎಂಬುದನ್ನು ಅರಿತು, ಅದರಂತೆ ನಡೆದು ತನ್ನ ತ್ಯಾಗಕ್ಕೆ ಕಲಶವಿಟ್ಟಂತೆ ಶ್ರೀ ಹರಿಹರದೇವಾಲಯ ವನ್ನು ಕಟ್ಟಿಸಿ ಬದುಕನ್ನು ಸಾರ್ಥಕಗೊಳಿಸಿಕೊಂಡ ಸತ್ಯವಂತ, ನಿಷ್ಪಕ್ಷಪಾತಿ,ಧೀರಗಂಭೀರ ಪೋಲಾಳ್ವ ಧನ್ಯ. ಚರಿತ್ರೆಯಲ್ಲಿ ಅವನಂಥ ವ್ಯಕ್ತಿಗಳು ದೊರಕು ವುದು ಅಪೂರ್ವ.

ಅವನು ಕಟ್ಟಿಸಿದ ದೇವಾಲಯಕ್ಕೆ ಅನಂತರ ಬಂದ ರಾಜಮಹಾರಾಜರು ದಂಡನಾಯಕ ಮಹಾ ಜನರೂ ದಾನಧರ್ಮಗಳನ್ನು ಮಾಡಿ ಪೋಲಾಳ್ವನ ಧರ್ಮವನ್ನು ಉಜ್ಜೀವಿಸಿದರು. ನಡುನಾಡಿನಲ್ಲಿರುವ ಈ ದೇವಾಲಯ ಶತ್ರುಗಳ ದಾಳಿಗೆ ಸಿಕ್ಕು ವಿರೂಪ ಗೊಂಡಿರುವುದು ನಿಜ. ಆದರೆ ದೇವಾಲಯದ ವಿರೂಪಕ್ಕೆ ನಮ್ಮವರು ಕೊಟ್ಟಿರುವ ಕಾಣಿಕೆ ಅಲ್ಪ ವೇನಲ್ಲ! ಕ್ಷೇತ್ರದ ಜನರಿಗೆ ಈ ಕಲಾಕ್ಷೇತ್ರದ ಬೆಲೆ ಗೊತ್ತಿಲ್ಲ. ದೇವಾಲಯದ ಸುತ್ತಲ ವಿಗ್ರಹಗಳು ನಾಶವಾಗಿವೆ, ಇಲ್ಲವೇ ವಿರೂಪಗೊಂಡಿವೆ. ಇದ ರಿಂದ ಪೋಲಾಳ್ವನ ಆತ್ಮ ಎಷ್ಟು ನೊಂದಿರುವುದೋ! ಇನ್ನಾದರೂ ಊರಿನ ಜನರು ದೇವಾಲಯದ ಆವರಣವನ್ನು ಶುಚಿಯಾಗಿಟ್ಟು ದೇವಾಲಯವನ್ನು ಇನ್ನೂ ಚೆನ್ನಾಗಿ ಇಟ್ಟುಕೊಂಡು ದಂಡನಾಯಕ ಪೋಲಾಳ್ವನ ಕೀರ್ತಿಯನ್ನು ಬೆಳಗಿಸಲಿ!

**ಎಚ್. ಎಂ. ಶಂಕರನಾರಾಯಣರಾವ್**

# ಮಾಧುರ್ಯ ಬಿಂಬಾಧರೇ
## (ಒಂದು ಟಿಪ್ಪಣಿ)

ಮೇಲ್ಕಂಡ ವೃತ್ತಾಂತ್ಯ ಅಂಕಿತವುಳ್ಳ ಓಲೆಯೊಂದು ದೊರೆತಿದ್ದು ಅದನ್ನು ಈ ಕೆಳಗೆ ವಿವರಿಸಲಾಗಿದೆ.

ಓಲೆಗುಲ್ಲಿ ಪತ್ರಸಂಖ್ಯೆಯು ಉಲ್ಲೇಖವಿಲ್ಲ. ಪ್ರತಿ "ಶ್ರೀ ಗುರವೇ ನಮಃ"ಎಂದು ಸಾಂಪ್ರದಾಯಿಕ ರೀತಿಯಲ್ಲಿ ಆರಂಭವಾಗಿದ್ದರೂ ಆದಿಯಲ್ಲಿ ಅಸಂಪೂರ್ಣವಾದ "೨" ನೆಯ ಕ್ರಮಾಂಕ ಸಂಖ್ಯೆಯ ವೃತ್ತದ ಉತ್ತರಭಾಗವಿದೆ. ಅನಂತರ "೩" ಮತ್ತು "೪" ನೆಯ ವೃತ್ತಗಳಿವೆ. ಪ್ರತಿ ವೃತ್ತಗಳ ಕೊನೆಯಲ್ಲಿ "ಮಾಧುರ್ಯ ಬಿಂಬಾಧರೇ" ಎಂಬ ಅಂಕಿತವಿದೆ. "೪" ನೆಯ ವೃತ್ತಾನಂತರ "ನಾಲ್ಕು ಜಾತಿಪುರುಷರ ಲಕ್ಷಣಂ" ಎಂದು ಹೇಳಿ ಸಂಸ್ಕೃತ ಶ್ಲೋಕವೊಂದನ್ನು ಉದಾಹರಿಸಲಾಗಿದೆ. ಶ್ಲೋಕಾಂತ್ಯದೊಡನೆ ಓಲೆಯು ಪತ್ರದ ಬರವಣಿಗೆ ಮುಗಿದಿದೆ. ಇಲ್ಲಿ ಕಾಣಬರುವ ಅಂಕಿತ ಪ್ರಯೋಗದಿಂದ ಕೃತಿ ವೃತ್ತಛಂದೋವಾಹಿಯಾಗಿದ್ದು "ಶತಕ" ಪ್ರಕಾರಕ್ಕೆ ಸಂಬಂಧಿಸಿರುವುದಾಗಿ ಭಾವಿಸಬಹುದಾಗಿದೆ. ಅಷ್ಟೇ ಅಲ್ಲದೆ ಉಪಲಬ್ಧ ಪದ್ಯಗಳಿಂದ ಶತಕದ ವಸ್ತು "ಕಾಮಶಾಸ್ತ್ರ"ದ ಅಭಿವ್ಯಕ್ತಿಗೆ ನಿಯೋಜಿತವಾಗಿರುವ ಅಂಶ ಸ್ಪಷ್ಟವಾಗುವುದು. ಇದಕ್ಕೆ ಪೂರಕವಾಗಿ ಉದ್ಧೃತಗೊಂಡಿರುವ ಸಂಸ್ಕೃತ ಶ್ಲೋಕವೂ ಮೇಲಿನ ಅಂಶವನ್ನೇ ಪುಷ್ಟೀಕರಿಸುತ್ತದೆ. ಹೀಗಾಗಿ ವಸ್ತುವಿನ ದೃಷ್ಟಿಯಿಂದ ಅಸಮಗ್ರಕೃತಿಗೆ ಕನ್ನಡ ಶತಕ ಸಾಹಿತ್ಯದ ಚರಿತ್ರೆಯಲ್ಲಿ ಗಮನಾರ್ಹವಾದ ಬೆಲೆಯುಂಟು.

ಕವಿಕಾಮ (ಸು. ೧೨೦೦) "ಶೃಂಗಾರ ರತ್ನಾಕರ"ದೊಡನೆ "ಸ್ತನಶತಕ"ವನ್ನು ರಚಿಸಿರುವುದಾಗಿ ತಿಳಿದಿದೆ. [ಕ. ಕ. ಚ. I] ಆದರೆ ದುರದೃಷ್ಟವಶಾತ್ ಆ ಶತಕದ ಉಲ್ಲೇಖವಲ್ಲದೆ ಮತ್ತೇನೂ ತಿಳಿದುಬಂದಿಲ್ಲ. ಮೇಲಿನ ಕೃತಿಗಳೆರಡೂ ವಸ್ತುವಿನ ದೃಷ್ಟಿಯಿಂದ ಸಮಾನತೆಯಿಂದಿರುವ ಕಾರಣ ಎರಡು ಪರಸ್ಪರ ಭಿನ್ನವೋ ಅಭಿನ್ನವೋ ಎಂಬುದನ್ನು ನಿರ್ಧರಿಸಲು ಉಪಲಬ್ಧ ಸಾಮಗ್ರಿ ಸಾಲದು. ಮುಂದಿನ ಸಂಶೋಧನೆಗಳು ಈ ವಿಷಯದ ಬಗೆಗೆ ಹೆಚ್ಚಿನ ಬೆಳಕನ್ನು ಚೆಲ್ಲಬೇಕಾಗಿದೆ.

ಓಲೆಯ ಪ್ರತಿಯಿಂದ ಸಂಪ್ರತಿಸುವಲ್ಲಿ ಸಲಹೆಗಳನ್ನಿತ್ತ ಶ್ರೀ ನ. ಕೃಷ್ಣಜೋಯಿಸ್ ಅವರಿಗೂ ಓಲೆಯನ್ನಿತ್ತ ಅತ್ತಿಬೆಲೆ ಶ್ರೀ ಎಚ್. ಜಿ. ಸಿದ್ಧಲಿಂಗಯ್ಯನವರಿಗೂ ನನ್ನ ವಂದನೆಗಳನ್ನರ್ಪಿಸುತ್ತೇನೆ.

ಈ ಓಲೆಯಲ್ಲಿನ ಪೂರ್ಣಪಾಠ ಇಂತಿದೆ.

*ಭಂಗದೊಳಲ್ತೆ ತಾನೆ ನುಡಿವಂ ಮತ್ತಂಘ್ರಿಯೊಳ್ ಬೀಳ್ವುದಂ<br>
ಕೊಡುವಂ ರಂಜಿಸುವಂ ವಿದೂಷಕನವಂ<br>
ಮಾಧುರ್ಯಬಿಂಬಾಧರೇ ‖ ೨ ‖

ವಿನಯಂಗುಂದುವನಲ್ಲ ಎಲ್ಲರೊಳಗಂ ಪೇಳ್ದಂತುಟಂ ಮಾಡುವಂ।<br>
ಮನಸಂತೋಷಿಪ ಮಾರ್ಗದಪ್ಪ ಪರಿಹಾಸಾಸ್ಪದಂ ನಿರ್ಮಚ್ಚರಂ।<br>
ವನಿತಾಲೋಲುಪ ದೇವಭಕ್ತನಿರುತಂ ಮಾಲ್ಯಾನುಲೇಪಪ್ರಿಯಂ<br>
ಜನರೊಳ್ ಸನ್ನುತ ಪೀಠವರ್ಧನನವಂ ಮಾಧುರ್ಯ ಬಿಂಬಾಧರೇ ‖ ೩ ‖

[ಅತಿ] ಗಂಭೀರನುದಾರ ಧೀರನುಚಿತಂ ನಾನಾ ಕಥಾಲಾಪನಂ<br>
ರತಿಸಂಪರ್ಕನತಿಪ್ರಪಂಚರಹಿತಂ ಶೌಚವ್ರತಾನೋಜ್ಜ್ವಿತಂ<br>
ಮತಿವಂತಂ ಮದನಾಗಮಜ್ಞನಜಡಂ ಸಂಗೀತ<br>
ಸಾಹಿತ್ಯವಾಂಛಿತ [ಚಿತ್ತಂ] ಗುಣನಾಗಲೀ<br>
ಕನ ತೆಱಂ ಮಾಧುರ್ಯ ಬಿಂಬಾಧರೇ ‖ ೪ ‖

ನಾಲ್ಕುಜಾತಿ ಪುರುಷರ ಲಕ್ಷಣ-

‖ ಶ್ಲೋಕ ‖ ಮುಖೇಚಕ್ಷುಷಿ ನಾಸಾಭ್ಯಾಂ<br>
ಕಂಠೇವಕ್ಷಸಿ ವಕ್ಷಸಿ (ಚಕ್ಷುಷಿ)<br>
ಪಾದಯೋಃಪ್ರಣವಾಕಾರಂ<br>
ಇತ್ಯೇತೇದೀಪಲಕ್ಷಣಂ‖

**ಎಸ್. ಶಿವಣ್ಣ**

# ಕವಿ-ಶೂಲಪಾಣಿ

'ವಕ್ತಾ ದಶಸಹಸ್ರೇಷು....' ಇದುವೆ ಶಾಸ್ತ್ರಿಗಳ
ಪರಿಚಯದ ಮೊದಲನುಡಿ; ಸಭೆಯಿಂದ ಹೊರಬಂದ
ಪಂಡಿತರು ತನುತನುಗೆ ಮೆಚ್ಚುಗೆಯ ನಾಡಿದುದು
ಕಿವಿಯಲ್ಲೆ ಮೊರೆಯುತಿದೆ.
ಆಸಂಜೆ ಮಂದಿರದಿ
ಸಾವಿರಕೆ ಮಿಗಿಲುಜನ 'ಗೌರಿಶಂಕರವಾಣಿ'
ಯಾಲಿಸಲು ನೆರೆದಿತ್ತು; ತಣಿಸಿತ್ತು ವಾಕ್-
ಶ್ರೀಯು;
ಅದಕಿಂತ ಸವಿಯಾಗಿ ತೋರಿತ್ತು ಕೊನೆಯ ನುಡಿ;
ಆಭಾರ ಮನ್ನಿಸಲು ನೆರೆನಿಂತ ಹುರಿಯಾಳು;
ನಿನದಿಸಿದ ನುಡಿಗಡಣ ಗಂಭೀರವೆನಿಸಿತ್ತು;
ಆಖ್ಯಾನದೊಳಗೊಂದು ಉಪಖಂಡವಿದ್ದಂತೆ
ವಂದನಾರ್ಪಣೆಯಲ್ಲು ಕಲ್ಯಾಣ-ಕಥೆಯಿತ್ತು;
ಕೇಳುಗರ ಮೈಮೇಲೆ ಎಚ್ಚರವೆ ಇರಲಿಲ್ಲ;
ಮುಗಿದಾಗ ಮಳೆಬಂದು ಬಿಟ್ಟಂತೆ ಕಂಡಿತದು;
ವಿದ್ಯಾರ್ಥಿ-ಬಾಲಕರು, ನಾವಂತು ಮಂತ್ರದಿಂ
ಬಂಧಿಸಿದ ಸರ್ಪನಂತಾಗಿದ್ದೆವದು ನೆನಪು-
ಹಲವುದಿನ ಮನಸಿನಲಿ ನೆಲಸಿದತ್ತಾ ಮೊನಪು!

*  *  *  *

ಇಪ್ಪತ್ತು ವರುಷಗಳು ಉರುಳಿದರು ಮಾಸಿಲ್ಲ;
ಆಗತ್ತು, ಮೋಡಿಯದು ಇಂದಿಗೂ ಉಳಿದಿಹುದು;
ಅರುವತ್ತು ದಾಟಿದರು ಷಷ್ಟ್ಯಬ್ದಿ ಕಳೆದರೂ
ಅಳಿದಿಲ್ಲವಾ ಠೀವಿ, ಬಳುಕಿಲ್ಲ ವಿದ್ವತ್ತು;
ಬಳೆಬಳೆದು ಹಬ್ಬಿಹುದು ಕೀರ್ತಲತೆ ಕುಡಿವರಿದು
ದೈವದೊಲುಮೆಯ ಕಂಭ, ಪಾಂಡಿತ್ಯ-ಹಂದರದಿ;

ಆಸ್ಥಾನ-ವಿದ್ವಾಂಸ, ಕೀರ್ತನಕೆ ಆಚಾರ್ಯ
ಪಂಡಿತರೊಳೇ ರತ್ನ, ಕರ್ಣಾಟ-ವಿಭೂಷಣ,....
ಎಲ್ಲಕ್ಕು ಮಿಗಿಲಾಗಿ ರಾಷ್ಟ್ರದಾ ಗೌರವವು
'ಪದುಮುಸಿರಿ' (ಪದ್ಮಶ್ರೀ) ಪದವಿಯದು ಲಭಿಸಿ
ಶೋಭಿಸಿತದುವೆ-
ಕನ್ನಡಿಗರಭಿಮಾನ ಸಂಕೇತ-ಸೌಧವದು,
ಜತೆಯಲ್ಲೆ ಭಾರತದ ಒಲವಿನಾ ಸೂತ್ರವಿದು.

*  *  *  *

ಶಿವಕಥಾವ್ಯಾಜದಿಂ ಸ್ವಾತಂತ್ರ್ಯ ಕಿಡಿಯೂಡಿ,
'ಶರಣ ಸಾಹಿತ್ಯ'ವನು ಮೂರ್ದಶಕ ನಡೆಸುತ್ತ
ಕನ್ನಡದ ಜನಪದವನೊಂದುಗೂಡಿಸೆ ದುಡಿದು,
ನಾಡದೇವತೆ ಪೀಠವೇರಿ ಜನಮನಮಿಡಿದು,
ದೇಶದಾದ್ಯಂತವೂ ಪ್ರವಚನವ ನೀಡುತುಂ,
ಗ್ರಂಥಗಳ ರಚಿಸುತ್ತ ಸೇವೆ ಸಲ್ಲಿಸುತಿಹರು.

*  *  *  *

ಕಬ್ಬಿಗರು ಯೋಗಿಗಳು ಮೇಣ್ಸಿದ್ಧಪುರುಷರಿಗೆ
ಜನುಮವಿತ್ತಿಹ ಜಿಲ್ಲೆ ತುಮಕೂರು; ಅಲ್ಲಿಯೇ
ಹುಲುಕುಂಟೆ ಮಠದಲ್ಲಿ ಹುಟ್ಟಿ ಜಸಗಳಿಸಿದರು;
'ಶೂಲಪಾಣಿ'ಯ (ಕಾವ್ಯ) ನಾಮದಿಂ ಧನ್ಯ
ರೆನಿಸಿದರು.
ನಡೆದಾಡುವಾ ವಿಶ್ವಕೋಶವೆನ್ನಿಸಿಕೊಂಬ
ಶಿವಮೂರ್ತಿ ಶಾಸ್ತ್ರಿಗಳು ನೂರ್ಕಾಲ ಸೊಗವಾಳ್ಗೆ.

**ಪಂಡಿತ ಕೆ. ಪಿ. ಶಿವಲಿಂಗಯ್ಯ, ಬಿ.ಎ.**

# ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು

**(ಒಂದು ಸಂದರ್ಶನ)**

೧

ಬೆಂಗಳೂರಿನ ಜನನಿಬಿಡವಾದ ಸ್ಥಳ-ರಂಗಸ್ವಾಮಿ ದೇವಾಲಯದ ಬೀದಿ, ನಗರದ ಹೃದಯದಂತಿರುವ ಕೆಂಪೇಗೌಡ ವೃತ್ತಕ್ಕೆ ಸಮೀಪದಲ್ಲಿರುವ ಈ ಬೀದಿಯಲ್ಲಿ ಹಗಲು-ರಾತ್ರಿಗಳಿಗೆ ಇರುವ ಅಂತರ ಕಡಿಮೆ. ಸದಾ ಪ್ರಯಾಣಿಕರ, ವಾಹನಗಳ ಗದ್ದಲ, ಜನಜಂಗುಳಿ ಇಲ್ಲಿನ ಒಂದು ಸಾಮಾನ್ಯನೋಟ. ಬಳೆಯಪೇಟೆಯಲ್ಲಿ ಉತ್ತರದಿಂದ ಬಂದವರು ಎಡಕ್ಕೆ ತಿರುಗಿದಾಗ ಒಂದು ಪುರಾತನವಾದ ಕಟ್ಟಡ ಸಿಕ್ಕುತ್ತದೆ. ಅದೇ ಸ್ವತಂತ್ರ ಕರ್ಣಾಟಕ ಮುದ್ರಣಾಲಯದ ಕಚೇರಿ. ಶರಣ ಸಾಹಿತ್ಯದ ಆಫೀಸು, ಪಂಡಿತರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ ಅವರ ವಾಸಗೃಹ, ಮತ್ತು ಕಾರ್ಯಾಲಯ.

ಆ ದಿನ ಶಾಸ್ತ್ರಿಗಳನ್ನು ನೋಡಲು ಬೆಳಗ್ಗೆ ೯ ಗಂಟೆಗೆ ಅಲ್ಲಿಗೆ ಹೋಗಿದ್ದೆ. ಶ್ರೀಯುತರು ಎಂದಿನಂತೆ ತಮ್ಮ ಗ್ರಂಥಭಂಡಾರದ ಪುಸ್ತಕರಾಶಿಯಲ್ಲಿ ಮುಳುಗಿದ್ದರು. ಆ ಗ್ರಂಥಭಂಡಾರವನ್ನು ವರ್ಣಿಸಿ ಕೇಳುವುದಕ್ಕಿಂತ ನೋಡಿಯೇ ಸಂತೋಷಪಡಬೇಕು. ಸಾಕಷ್ಟು ವಿಶಾಲವಾದ ಆ ಕೊಠಡಿಯಲ್ಲಿ ಸ್ವಯಂ ಶಾಸ್ತ್ರಿಗಳಿಗೆ ಕೂಡಲು ಎಡೆಯಿಲ್ಲದಂತೆ ಪುಸ್ತಕಗಳ ರಾಶಿ. ಅತೀ ಪ್ರಾಚೀನ ಗ್ರಂಥಗಳಿಂದ ತೊಡಗಿ ಅತ್ಯಾಧುನಿಕ ಗ್ರಂಥಗಳು : ಇತಿಹಾಸ, ಸಾಹಿತ್ಯ, ಕಾವ್ಯ, ಪುರಾಣಗಳಿಂದ ತೊಡಗಿ, ಪಾಕಶಾಸ್ತ್ರದವರೆಗೆ ಪ್ರಕಟವಾದ ಸಂಸ್ಕೃತ, ಇಂಗ್ಲಿಷ್, ಕನ್ನಡ, ತೆಲುಗು, ತಮಿಳು, ಹಿಂದಿ ಗ್ರಂಥಗಳು. ಅಷ್ಟೇ ಸಂಖ್ಯೆಯಲ್ಲಿ ತಾಳೆಯೋಲೆಯ ಕಡತಗಳು. ಅವುಗಳಲ್ಲಿ ಧೂಳುಕೂತವೆಷ್ಟೋ? ಹುಳುತಿಂದುವೆಷ್ಟೋ? ತಮ್ಮ ಬಿಡುವಿಲ್ಲದ ಸಾರ್ವಜನಿಕ ಸಾಹಿತ್ಯ ಚಟುವಟಿಕೆಯ ಜೀವನದಲ್ಲೂ ಶಾಸ್ತ್ರಿಗಳಿಗೆ ಪುಸ್ತಕಗಳ ಯೋಗಕ್ಷೇಮ ನೋಡಿಕೊಳ್ಳಲುವ್ಯವಧಾನವಿಲ್ಲವೆಂದರೆ ಇದು ಉತ್ಪ್ರೇಕ್ಷೆಯಲ್ಲ.

೨

ಕನ್ನಡನಾಡಿನಲ್ಲಿ ಶ್ರೀ ಶಿವಮೂರ್ತಿ ಶಾಸ್ತ್ರಿಗಳನ್ನು ನೋಡದವರು ವಿರಳ; ಕೇಳದವರು ಇನ್ನೂ ವಿರಳ. ಅವರು ಜೀವನದ ಆರಂಭದೆಸೆಯಲ್ಲಿ ಉಪಾಧ್ಯಾಯರಾಗಿ, ಅನಂತರ ಕೀರ್ತನಕಾರರಾಗಿ ಪ್ರಸಿದ್ಧಿಗೆ ಬಂದವರು. ಅನಂತರ ತಮ್ಮ ಕ್ಷೇತ್ರವನ್ನು ವೃತ್ತಪತ್ರಿಕಾ ವ್ಯವಸಾಯಕ್ಕೆ ಬದಲಿಸಿಕೊಂಡು, ಕೆಲವು ಕಾಲ 'ಸ್ವತಂತ್ರ ಕರ್ಣಾಟಕ' ಎಂಬ ಹೆಸರಿನ ವಾರಪತ್ರಿಕೆಯನ್ನು ನಡೆಸಿದರು. ಮುಂದೆ ಶರಣ ಸಾಹಿತ್ಯವನ್ನು ನೆಚ್ಚಿ, ಸಾಹಿತ್ಯ, ಕಲೆ, ಸಂಸ್ಕೃತಿಗಳ ಪ್ರಸಾರಕ್ಕೆ ಟೊಂಕಕಟ್ಟಿದರು. ಪಂಡಿತಪಾಮರರ ಪ್ರೀತ್ಯಾದರ ಗಳಿಸಿದರು; ಅರಮನೆ-ಗುರುಮನೆಗಳಿಂದ ಗೌರವ ಮನ್ನಣೆಗೆ ಪಾತ್ರರಾದರು. ಸಾರ್ವಜನಿಕ ಸಂಸ್ಥೆ-ಸರಕಾರಗಳ ಆದರಕ್ಕೆ ಪಾತ್ರರಾಗಿ ಬಿರುದು ಬಾವಲಿಗಳನ್ನು ಪಡೆದರು. ನಾಡುನುಡಿಗಳ ಸೇವೆಗೆ ಕಂಕಣತೊಟ್ಟು ಕರ್ಣಾಟಕದ ಮೂಲೆ ಮೂಲೆಗಳನ್ನು ಸಂಚರಿಸಿ ಬಂದರು. ಕರ್ಣಾಟಕದ ಏಕೀಕರಣ ಚಳುವಳಿ-ಗಡಿನಾಡು ಸಮಿತಿಯ ಸಕ್ರಿಯ ಸಚೇತಕರಾದರು; ಕನ್ನಡಮ್ಮನ ಸೇವೆಗೆ, ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪೂಜಾರಿಯಾದರು. ತುಮಕೂರಿನಲ್ಲಿ ಹುಲುಕುಂಟೆ ಮಠದ ಒಬ್ಬ ಅಜ್ಞಾತ ವ್ಯಕ್ತಿ, 'ಹೈದ' ಯಾವ ಕಾಲೇಜುಗಳನ್ನೂ ಹತ್ತದೆ, ಇಷ್ಟೆಲ್ಲಾ ಪ್ರತಿಷ್ಠೆಯ ಕೀರ್ತಿಗೌರವಗಳು, ಅಧಿಕಾರ ಪದವಿಗಳನ್ನು ಪಡೆದಿರುವುದು ಶಾಸ್ತ್ರಿಗಳ ಕರ್ತೃತ್ವಶಕ್ತಿಯ ದ್ಯೋತಕ; ಯುವಜನರನ್ನು ನಾಚಿಸುವ ಅವರ ನಿತ್ಯ ಉತ್ಸಾಹದ ಫಲ. ಅನುಭವದ ಗುರುವಿನಡಿಯಲ್ಲಿ ಲೋಕದ ವಿಶ್ವವಿದ್ಯಾನಿಲಯದಲ್ಲಿ ಅವರು ಗಳಿಸಿದ ಈ ಸಿದ್ಧಿಸಾಧನೆ-ಶಾಸ್ತ್ರಿಗಳ ಬಾಳಿನ ಶಿಲ್ಪ.

೩

ಸಂದರ್ಶನಾರ್ಥಿಯಾಗಿ ಬಂದ ನನ್ನನ್ನು ಶಾಸ್ತ್ರಿ

ಗಳು ವಿಶ್ವಾಸದಿಂದಲೇ ಬರಮಾಡಿಕೊಂಡು ಕುಶಲ ಪ್ರಶ್ನೆ ಮಾಡಿದರು.

ನಾನು ಅವರೊಂದಿಗೆ ಅನೇಕ ಸಂಗತಿಗಳ ಬಗೆಗೆ ವಿಚಾರ ವಿನಿಮಯ ಮಾಡಲು ಸಿದ್ಧನಾಗಿ ಹೋಗಿದ್ದೆ. ಆ ದಿನವೂ ಅವರು ಬೇರೊಂದು ಕಾರ್ಯ ಗೌರವವನ್ನು ಒಪ್ಪಿಕೊಂಡಿದ್ದುದರಿಂದ ಗಡಿಬಿಡಿಯಲ್ಲೇ ನಮ್ಮ ಮಾತುಕತೆಗಳು ನಡೆದವು.

"ಶಾಸ್ತ್ರಿಗಳೆ, ನಿಮ್ಮ ಸ್ವಂತ ಊರು, ಸ್ಥಳ-ಮನೆಗಳ ಬಗೆಗೆ ತಿಳಿಸುತ್ತೀರಾ ?" ಎಂದು ನಾನು ಪ್ರಶ್ನೆಗಳಿಗೆ ಆರಂಭಿಸಿದೆ.

"ನಾನು ಹುಟ್ಟಿದ್ದು ತುಮಕೂರು, ಅದೇ ನಮ್ಮ ಊರು. ನನ್ನ ವಿದ್ಯಾಭ್ಯಾಸವೆಲ್ಲ ನಡೆದುದು ಅಲ್ಲೀ.."

"ತಮ್ಮ ವಯಸ್ಸು...."

"ನೀವೇ ಲೆಕ್ಕಹಾಕಿಕೊಳ್ಳಿ....ನಾನು ಜನಿಸಿದ್ದು ತಾ॥ 23-2-1903 ಸೋಮವಾರ ಬೆಳಗ್ಗೆ. ಹಿಂದೂ ಪಂಚಾಂಗದಂತೆ ಶುಭಕೃತು ಸಂವತ್ಸರ ಮಾರ್ಗಶಿರ ಬಹುಳ ಏಕಾದಶಿ ಸೋಮವಾರ ಬೆಳಗ್ಗೆ."

"ಅಂದರೆ ತಮಗೀಗ ಅರುವತ್ತು ನಾಲ್ಕುವರ್ಷ ತುಂಬಿದಂತೆ ಆಯಿತು. ಆದರೂ ನಿಮ್ಮ ಜೀವನೋತ್ಸಾಹವನ್ನು ನೋಡಿದರೆ ಹಾಗೆ ಅನ್ನಿಸುವುದಿಲ್ಲ....ಇರಲಿ. ನಿಮ್ಮ ತಂದೆಯವರ ನಾಮಧೇಯ ?"

"ಬಸವಯ್ಯಸ್ವಾಮಿ ಹುಲುಕುಂಟೆ ಮಠ. ತಾಯಿ ನೀಲಮ್ಮ. ಇವರಿಗೆ ಒಬ್ಬನೇ ಮಗ ನಾನು."

"ನಿಮ್ಮ ಹಿರಿಯರ ವೃತ್ತಿ ?"

"ತಂದೆಯವರು ಪುರಾಣಕಾರರು, ಚೆನ್ನಬಸವ ಪುರಾಣ, ಬಸವಪುರಾಣ, ಜೈಮಿನಿಭಾರತ, ರಾಜಶೇಖರ ವಿಳಾಸ ಮೊದಲಾದ ಕಾವ್ಯಗಳನ್ನು ಸುಶ್ರಾವ್ಯವಾಗಿ ವಾಚನಮಾಡುತ್ತಿದ್ದರು. ಹಾಗೆ ನೋಡಿದರೆ ನಮ್ಮದು ಪೌರಾಣಿಕರ ವಂಶ, ಜಂಗಮರ ಮನೆತನ."

"ಬಹುಶಃ ಬಾಲ್ಯದಲ್ಲೇ ಈ ಸಂಗತಿ ನಿಮ್ಮ ಮೇಲೂ ಪರಿಣಾಮಮಾಡಿರಬೇಕಲ್ಲವೆ?"

"ಹೌದು, ನನಗೆ ಚಿಕ್ಕಂದಿನಿಂದಲೂ ಶಿವಕಥೆ, ಪುರಾಣ, ಗಮಕವಾಚನಗಳೆಂದರೆ ಇಷ್ಟ. ಮುಂದೆ ನಾನು ಕೀರ್ತನಕಾರನಾದುದಾದರೂ ಬಾಲ್ಯದಲ್ಲಿ ವೈಸೂರು ಶಿವಪ್ಪ ಶಾಸ್ತ್ರಿಗಳು, ಮೂಗಡಿ ವೀರಪ್ಪ ಶಾಸ್ತ್ರಿಗಳು ಮುಂತಾದ ಕೀರ್ತನಕಾರರ ಪ್ರೋತ್ಸಾಹದಿಂದ."

"ಹಾಗಾದರೆ ನೀವು ಶಾಲೆಗೆ ಸೇರಲೇ ಇಲ್ಲವೆ?"

"ಸೇರಿದೆ, ಆದರೆ ಕಾಲೇಜು ಮೆಟ್ಟಲು ತುಳಿಯುವ ಭಾಗ್ಯ ಪಡೆಯಲಿಲ್ಲ. ನಾನು 1917ರಲ್ಲಿ ಲೋಯರ್ ಸೆಕೆಂಡರಿ ಪರೀಕ್ಷೆ ಪಾಸು ಮಾಡಿದೆ. ಅನಂತರ 1923ರಲ್ಲಿ ಆ ಕಾಲದಲ್ಲಿ ಇದ್ದ ಅಪ್ಪರ್ ಸೆಕೆಂಡರಿ ಪರೀಕ್ಷೆಯಲ್ಲೂ ತೇರ್ಗಡೆಹೊಂದಿದೆ. ಹೈಸ್ಕೂಲಿಗೆ ಹೋಗಬೇಕೆಂದಿದ್ದಾಗ ನಮ್ಮ ತಂದೆಯವರು ಪೂರ್ವಕಾಲದ ಪೌರಾಣಿಕರಾಗಿದ್ದುದರಿಂದಲೂ ನನ್ನನ್ನು ಒಬ್ಬ ಜಂಗಮಯ್ಯನನ್ನಾಗಿ ಮಾಡಬೇಕೆಂದಿದ್ದುದರಿಂದಲೂ ನನ್ನ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಡಲಿಲ್ಲ. ನಾನು ಹಟಮಾಡಿದಾಗ, ಅವರು ನನ್ನನ್ನು ಚೆನ್ನಾಗಿ ಥಳಿಸಿ ಶಾಲೆ ಬಿಡಿಸಿದರು. ಅದರ ಗುರುತು ಈಗಲೂ ಮೈಮೇಲೆ ಇದೆ"—ಎಂದು ಶಾಸ್ತ್ರಿಗಳು ನಗುತ್ತಾ ತಮ್ಮ ಪೂರ್ವ ಸ್ಮರಣೆಯನ್ನು ಮೆಲುಕು ಹಾಕುತ್ತಾ ಹೇಳಿದರು.

"ಇದರಿಂದ ಒಳ್ಳೆಯದೇ ಆಯಿತು ಬಿಡಿ. ನೀವು ಎಲ್ಲರಂತೆ ಇಂಗ್ಲಿಷ್ ಕಲಿತು ಕಾಲೇಜು ಸೇರಿ ದೊಡ್ಡ ನೌಕರಿ ಹಿಡಿದಿದ್ದರೆ, ಭಾರಿ ಮೊತ್ತದ ಪೆನ್‌ಷನ್ ಪಡೆದು ನಿವೃತ್ತ ಅಧಿಕಾರಿಗಳಾಗಿರುತ್ತಿದ್ದಿರಿ. ಈಗಿನ ಹಾಗೆ ನಿಮ್ಮಿಂದ ನಾಡುನುಡಿಗಳ ಸೇವೆ ಈ ಪ್ರಮಾಣದಲ್ಲಿ ಆಗುತ್ತಿರಲಿಲ್ಲ. ನೀವು ಹೈಸ್ಕೂಲಿಗೆ ಸೇರದಿದ್ದುದು-ಇಂಗ್ಲಿಷ್ ಕಲಿಯದಿದ್ದುದು-ಒಳ್ಳೆಯದಾಯಿತು. ಬಿಡಿ—" ಎಂದು ನಾನೆಂದೆ.

"ನನಗೆ ಇಂಗ್ಲಿಷ್ ಭಾಷೆಯೂ ಬರುತ್ತದೆ. ಆದರೆ ವ್ಯವಹಾರಕ್ಕೆ ಎಷ್ಟು ಬೇಕೋ ಅಷ್ಟು. ಆದರೆ ಕನ್ನಡ ಸಂಸ್ಕೃತವನ್ನು ಸಾಕಷ್ಟು ಚೆನ್ನಾಗಿ ಬಲ್ಲೆ. ತೆಲುಗು ಮತ್ತು ಹಿಂದಿ ಭಾಷೆಗಳು ಓದಿ ತಿಳಿಯುವಷ್ಟು ಅರಿತಿದ್ದೇನೆ. ನನ್ನ ಕೆಲಸಕಾರ್ಯಗಳಿಗೆ ಇಷ್ಟು ಸಾಕಲ್ಲ—"ಎಂದು ನಕ್ಕರು.

"ಅದು ಸರಿ: ಶಾಸ್ತ್ರಿಗಳೆ, ನೀವು ಬೆಂಗಳೂರಿಗೆ ಬಂದದ್ದು ಯಾವಾಗ? ಏಕೆ ಇಲ್ಲಿಗೆ ಬಂದಿರಿ?" ನಾನು

ವಿಷಯಾಂತರ ಮಾಡಿದೆ.

"ನಾನು 1936ರಲ್ಲಿ ಬೆಂಗಳೂರಿಗೆ ಬಂದೆ. ಬರಲು ಕಾರಣ ಇಲ್ಲಿದ್ದ ನನ್ನ ಮಿತ್ರರು ಮತ್ತು ಅಭಿಮಾನಿಗಳ ಒತ್ತಾಯ. ಆಗ ಉನ್ನತ ಅಧಿಕಾರದಲ್ಲಿದ್ದ. ಸರ್ ಕೆ.ಪಿ. ಪುಟ್ಟಣ್ಣಶೆಟ್ಟರು, ದಿವಾನ ಬಹದ್ದೂರ್ ಪಿ. ಮಹಾದೇವಯ್ಯನವರು, ಜಿ. ಶಾಂತವೀರಪ್ಪನವರು, ಸರ್ ಮಿರ್ಜಾಇಸ್ಮೈಲ್ ಸಾಹೇಬರು ಮುಂತಾದವರು ನನ್ನನ್ನು ಬೆಂಗಳೂರಿನಲ್ಲಿ ತಂದು ನಿಲ್ಲಿಸಿದ ಮಹನೀಯರು. ಅವರನ್ನು ನಾನು ತ್ರಿಕಾಲದಲ್ಲಿಯೂ ಸ್ಮರಿಸುತ್ತೇನೆ."

"ಆಗಲೂ ನೀವು ಕೀರ್ತನ ವೃತ್ತಿಯನ್ನು ಹಿಡಿದಿದ್ದಿರಾ ?"

"ಹೌದು. ನಾನು ಅದರಲ್ಲಿ ಬಾಲ್ಯದಿಂದಲೂ ಪ್ರಸಿದ್ಧನಾಗಿದ್ದೆ." ಕೀರ್ತನದ ಹುಚ್ಚು ನನಗೆ ಬಹಳ.

"ಇದಕ್ಕೆ ಬೇಕಾದ ಶಿಕ್ಷಣ ಎಲ್ಲಿ ಪಡೆದಿರಿ? ನೀವು ಕೀರ್ತನಕಾರರಾದುದು ಹೇಗೆ?"

"ನಾನು ಗುಬ್ಬಿಯಲ್ಲಿ ಪ್ರೌಢಶಾಲೆಯ ಉಪಾಧ್ಯಾಯನಾಗಿ ನನ್ನ ಜೀವನವನ್ನು ಆರಂಭಿಸಿದೆನು. (೧೯೩೩) ಮುಂದೆ ಕೀರ್ತನಕಾರನಾಗಿ ಪ್ರಸಿದ್ಧಿಗೆ ಬಂದೆನು. ಇದಕ್ಕೆ ಕಾರಣ ಬಾಲ್ಯದಲ್ಲಿ ನಾನು ಮೈಸೂರು ಶಿವಪ್ಪಶಾಸ್ತ್ರಿ ಮೊದಲಾದ ವಿದ್ವಾಂಸರ ಬಳಿ ಶಿಷ್ಯನಾಗಿದ್ದೆ. ಕೈಲಾಸವಾಸಿ ಪಿ. ಆರ್. ಕರಿಬಸವ ಶಾಸ್ತ್ರಿಗಳ ಬಳಿ ವ್ಯಾಸಂಗ ಮಾಡಿ, ಕನ್ನಡ, ಸಂಸ್ಕೃತಗಳಲ್ಲಿ ಹೆಚ್ಚಿನ ಜ್ಞಾನಾರ್ಜನೆ ಪಡೆದುಕೊಂಡೆ. ಶ್ರೀಯುತರು ಮಹಾ ಪಂಡಿತರು ಶಿಷ್ಯವತ್ಸಲರು. ಕರ್ಣಾಟಕದ ಭಾಷಾರತ್ನರೂ, ಅಭಿನವ ಕಾಳಿದಾಸ ಬಿರುದಾಂಕಿತ ಬಸಪ್ಪಶಾಸ್ತ್ರಿಗಳ ಶಿಷ್ಯರೂ ಆದ ಅವರು ನನ್ನನ್ನು ಈ ಸ್ಥಿತಿಗೆ ತಂದ ಮಹನೀಯರು."

"ಕೀರ್ತನಕಾರರಾಗಿ ನಿಮ್ಮ ಅನುಭವವೇನು?"

"ನಾನು ಕರ್ಣಾಟಕದ ಮೂಲೆಮೂಲೆಗಳನ್ನೂ ಸುತ್ತಿ ಬಂದಿದ್ದೇನೆ. ಮೈಕ್ ಇಲ್ಲದ ಆ ದಿನಗಳಲ್ಲಿ ಹತ್ತು ಸಾವಿರ ಸಭಿಕರು ಇದ್ದ ಸಭೆಗಳಲ್ಲಿ ಕೀರ್ತನೆಯನ್ನು ಮಾಡಿದ್ದೇನೆ. ನಮ್ಮ ಕಲೆಗಳ ಸಲುವಾಗಿ ನಾನು ಕನ್ನಡ –ಸಂಸ್ಕೃತ ಸಾಹಿತ್ಯಗಳ ಅಧ್ಯಯನ ಚೆನ್ನಾಗಿ ಮಾಡಬೇಕಾಯಿತು. ಆಗ ಕನ್ನಡನಾಡಿನ ಇತಿಹಾಸ, ಕಲೆ, ಸಾಂಸ್ಕೃತಿಕ ವೈಭವದ ಚಿತ್ರಣ ನನ್ನ ಕಣ್ಣಮುಂದೆ ಬಂದು, ಮುಂದೆ ಸಾಹಿತ್ಯ ಕಲೆಗಳ ಉದ್ಧಾರಕ್ಕೆ, ಕರ್ಣಾಟಕದ ಏಕೀಕರಣಕ್ಕೆ ನನ್ನನ್ನು ನಾನು ಅರ್ಪಿಸಿಕೊಂಡೆ."

"ಹಾಗಿದ್ದರೆ ನಿಮ್ಮ ಮೇಲೆ ಗಾಂಧಿಜಿಯವರ ರಾಜಕೀಯ ಪ್ರಭಾವ ಬೀಳಲೇ ಇಲ್ಲವೆ?"

"ಅವರ ಪ್ರಭಾವದಲ್ಲಿ ಇಡೀ ದೇಶವೇ ಕೊಚ್ಚಿ ಹೋಗುತ್ತಿದ್ದಾಗ ನಾನಾದರೂ ಹೇಗೆ ಹಿಂದೆ ಉಳಿಯಬಹುದು? ನಾನು 1921ರಲ್ಲಿ ಕಾಂಗ್ರೆಸಿನ ಅಸಹಕಾರ ಚಳುವಳಿಯಲ್ಲಿ ಭಾಗವಹಿಸಿ, ತುಮಕೂರಿನಲ್ಲಿ ಭಾಷಣಗಳನ್ನು ಮಾಡಿದ್ದೆ. ಆಗ ಕಾಲದಲ್ಲಿ ಪ್ರಸಿದ್ಧಿಗೆ ಬಂದ ಶ್ರೀ ಕೆ. ರಂಗಯ್ಯಂಗಾರ್, ಶ್ರೀ ಟಿ. ಸುಬ್ರಹ್ಮಣ್ಯ, ಮುಂತಾದವರು ಕನ್ನಡ ಏಕೀಕರಣದ ಕಾರ್ಯದಲ್ಲಿ ತೊಡಗಿದಾಗ ಕಡಪಾ ರಾಘವೇಂದ್ರರಾಯರು, (1923 ವೇಳೆಗೆ) ಆಲೂರು ವೆಂಕಟರಾಯರು ಪರಿಚಯವಾಗಿ ಅವರ ಸ್ನೇಹಲಭಿಸಿತು ಅಂತೆಯೇ ಮಂಜಪ್ಪಹರ್ಡೇಕರ, ಡಾ॥ ಹಳಕಟ್ಟಿ ಮುಂತಾದವರ ಸ್ನೇಹ ಲಾಭವಾಯಿತು. ಕರ್ಣಾಟಕದ ಮೂಲೆಮೂಲೆಗಳನ್ನು ಕರ್ನಾಟಕದ ಏಕೀಕರಣಕ್ಕಾಗಿ ಸುತ್ತಿಬಂದಮೇಲೆ ಪ್ರೊ. ಬಸವನಾಳ, ಬಿ. ವೆಂಕಟನಾರಣಪ್ಪ, ಆರ್. ನರಸಿಂಹಾಚಾರ್ಯ, ಡಾ॥ ಶಾಮಾಶಾಸ್ತ್ರಿ ಮುಂತಾದ ಮಹಾಪಂಡಿತರ ಪರಿಚಯವೂ, ಕೈಲಾಸವಾಸಿ ಎಚ್. ಸಿದ್ದಯ್ಯ, ಬಿ.ಎ. ದಾತಾರ, ಮುರಿಗೆಯ್ಯ ಜಂಗಿನ, ಬ್ಯಾರಿಸ್ಟರ್ ಸರದಾರರಂತಹ ರಾಜಕಾರಣಿಗಳ ಸ್ನೇಹವೂ ದೊರೆಕಿತು. ಇದನ್ನು ನಾನು ನನ್ನ ಪರಮ ಭಾಗ್ಯವೆಂದು ಪರಿಗಣಿಸುತ್ತೇನೆ" ನಾನು ಅವಾಕ್ಕಾಗಿ ಕೇಳುತ್ತಾ ಕುಳಿತೆ.

ಚಣಕಾಲ ಮೌನವಾಗಿದ್ದು ಮತ್ತೆ ಮಾತಿನ ಪ್ರವಾಹ ಆರಂಭಿಸಿದರು.

ನನ್ನ ಸ್ನೇಹಿತರ ಪಟ್ಟಿ ಇಲ್ಲಿಗೆ ಮುಗಿಯುವುದಿಲ್ಲ. ಎಂ. ಗೋವಿಂದಪೈ, ಮುಳಿಯ ತಿಮ್ಮಪ್ಪಯ್ಯ, ಎಂ.ಆರ್. ಶ್ರೀ, ದೇವುಡು, ಕುಂದಣಗಾರ, ಮುದವೀಡು ಕೃಷ್ಣರಾಯರು, ಪ್ರೊ. ವೆಂಕಣ್ಣಯ್ಯ, ಶ್ರೀನಿವಾಸ ಜೋಯಿಸರು, ರಾಜಪುರೋಹಿತರು-ಗಳಗನಾಥರು.... ಒಬ್ಬೊಬ್ಬರನ್ನು ನೆನೆಸಿಕೊಂಡರೆ ಮೈ ರೋಮಾಂಚನವಾಗುತ್ತದೆ. ಇವರೆಲ್ಲರೂ ಕನ್ನಡ ದೇವಿಗೆ ತಮ್ಮ ತಪಸ್ಸಿನ ತೈಲವೆರದ ಮಹಾನುಭಾವರು. ಏಕೋ ಶಾಸ್ತ್ರಿಗಳ ಕಣ್ಣು ಇವರನ್ನು ನೆನೆಯುತ್ತಿದ್ದಂತೆ ಹನಿಗೂಡಿತು. ಕೈವಸ್ತ್ರ ಅವರ ಕಣ್ಣಿಗೆ ಹತ್ತಿತು.

"ನೀವು ಕಳೆದ ಮೂರು ನಾಲ್ಕು ದಶಕಗಳಿಂದಲೂ ಕರ್ನಾಟಕದ ಏಕೀಕರಣಕ್ಕಾಗಿ ದುಡಿಯುತ್ತಾ ಬಂದಿದ್ದೀರಿ. ಈಗ ನಾಡು ಒಂದಾಗಿದೆ ಎಂದು ನಿಮ್ಮ ಅಭಿಪ್ರಾಯವೆ?"

ಭೌಗೋಳಿಕವಾಗಿ ನಾವು ಕನಸುಕಂಡ ಕರ್ನಾಟಕ ಒಂದಾಗಿದ್ದರೂ ನನಗೆ ಈ ಏಕೀಕರಣದಿಂದ ಪೂರ್ಣವಾಗಿ ಸಂತೋಷವಾಗಿಲ್ಲ. ಜನತೆಯ ಹೃದಯದಲ್ಲಿ ನಾವೆಲ್ಲ ಒಬ್ಬ ತಾಯಿಯ ಮಕ್ಕಳೆಂಬ ಭಾವನೆ-ಮೂಡಿ ಮಾನಸಿಕ ಏಕೀಕರಣ, ಭಾವೈಕ್ಯ ಇನ್ನೂ ಬಂದಿಲ್ಲ. ನಮ್ಮ ಜನರಲ್ಲಿ, ನೆಲ, ಕುಲದ ಅಭಿಮಾನ ಬಳೆಯಬೇಕಾಗಿದೆ. ಕನ್ನಡನಾಡು ಒಂದಾಗಿ ಇಷ್ಟು ಕಾಲವಾದ ಮೇಲೂ ಅದನ್ನು ಎರಡಾಗಿ ಒಡೆಯಬೇಕೆಂಬ ವಿಚ್ಛಿತ್ರಕಾರಕ ವ್ಯಕ್ತಿಗಳ, ಶಕ್ತಿಗಳ ಒಡಕುಮಾತು ಕೇಳುತ್ತಲಿರುವುದು ವಿಷಾದಕರ. ಭೌಗೋಳಿಕವಾಗಿ, ಐತಿಹಾಸಿಕವಾಗಿ ಸಾಂಸ್ಕೃತಿಕವಾಗಿ ಒಂದಾಗಿರುವ ಕರ್ನಾಟಕವನ್ನು ತುಂಡರಿಸಿದರೆ ಅಂದೇ ನಾಡಿನ ದುರಂತ"—ಶಾಸ್ತ್ರಿಗಳ ಈ ಮಾತಿನಲ್ಲಿ ವಿಷಾದ ಕಳವಳಗಳು ತುಂಬಿದ್ದವು.

"ಫಜ್ಲಾಲಿ ಸಮಿತಿಯ ಶಿಫಾರಸಿನಂತೆ, ಎರಡೂವರೆ ಕೋಟಿ ಕನ್ನಡಿಗರ ಬಹುಕಾಲದ ಬಯಕೆಯಂತೆ ಹಲವು ರಾಜ್ಯಗಳಲ್ಲಿ ಹಂಚಿಹೋಗಿದ್ದ ಕನ್ನಡನಾಡು ಈಗ ಒಂದಾಗಿದೆ. ಮತ್ತೆ ಎರಡಾಗುವುದೆಂಬ ಮಾತು ಕಾರ್ಯರೂಪಕ್ಕೆ ಬರಲು ಸಾಧ್ಯವೇ ನಡೆಯಬೇಕು. ಆ ಮಾತು ಬಿಡಿ. ಈಗ ನನ್ನದೊಂದು ಪ್ರಶ್ನೆಯಿದೆ ಶಾಸ್ತ್ರಿಗಳೆ, ಕನ್ನಡನಾಡಿಗೆ ಈಗಿರುವ ಹೆಸರು ನಿಮಗೆ ತೃಪ್ತಿಯನ್ನು ತಂದಿದೆಯೆ?

"ಇಲ್ಲ, ನಮ್ಮ ನಾಡಿಗೆ 'ಕರ್ನಾಟಕ' ಎಂಬ ಹೆಸರು ಇರಬೇಕು. ಅನೇಕ ಶತಮಾನದಿಂದ ಜನಮನದಲ್ಲಿ ಸ್ಫೂರ್ತಿಯ ನೆಲಸಿ, ಮಂತ್ರವಾಗಿರುವ 'ಕರ್ನಾಟಕ' ಎಂಬ ಅಭಿಧಾನ ನಮ್ಮ ರಾಜ್ಯಕ್ಕೆ ಇಂದಲ್ಲ ನಾಳೆ ಬಂದೇ ಬರುತ್ತದೆ. ಈ ಬಗ್ಗೆ ನನಗೆ ಸಂಶಯವಿಲ್ಲ. 'ಕರ್ನಾಟಕ' ರಾಜ್ಯದ ಹೆಸರು. 'ಮೈಸೂರು' ಒಂದು ಊರಿನ ಹೆಸರು ಎಂಬುದನ್ನು ಜನ ಅರಿತಿರಬೇಕು. ಆ ಹೆಸರೆನೋ ಬರಬಹುದು, ಆದರೆ ಈ 'ನ' ಕಾರ 'ಣ' ಕಾರದ ಸಮಸ್ಯೆ ಬಂದರೆ ಅದನ್ನು ಹೇಗೆ ಬಿಡಿಸುತ್ತೀರಿ?"—ನಾನು ನಗುತ್ತ ಪ್ರಶ್ನಿಸಿದೆ.

"ನನ್ನ ಪಾಲಿಗೆ ಅಂಥ ಪ್ರಶ್ನೆಯೇ ಏಳುವುದಿಲ್ಲ. ಏಕೆಂದರೆ, ಹೆಸರಿನಲ್ಲಿ ನಕಾರವಿದ್ದರೆ ನಮಗೆ ನಷ್ಟವಲ್ಲ. ಣಕಾರವಿದ್ದರೆ ಲಾಭವಿಲ್ಲ, ನಮಗೆ ಇವುಗಳ ಮೋಹ ಇಲ್ಲ. ಹಿಂದೊಮ್ಮೆ ಈ ಬಗ್ಗೆ ಚರ್ಚೆನಡೆದಾಗ ನಾನು ಕೈ॥ಬೆಳ್ಳಾವೆ ವೆಂಕಟನಾರನಪ್ಪನವರ ಬೆಂಬಲಿಗನಾಗಿ 'ಣ' ಕಾರದ ಪಕ್ಷಕಟ್ಟಿ ಹೋರಾಡಿದ್ದೆನಾದರೂ, ಈಗ ನನಗೆ ಈ ಬಗ್ಗೆ ಆ ಸಕ್ತಿ ಇಲ್ಲ. ಕನಾರ್ಟಕ ಅಥವಾ ಕರ್ಣಾಟಕ ಎರಡೂ ಒಂದೇ ಆಗಿದೆ.

"ಕನ್ನಡನಾಡು ಆರ್ಥಿಕವಾಗಿ ಹಿಂದುಳಿದಿರಲು ಕಾರಣಗಳೇನು?"

"ನಮ್ಮ ಸರಕಾರ ಹಿಡಿತದಿಂದ ಕೆಲಸ ಮಾಡತ್ತಿರುವುದು, ಕೇಂದ್ರದಿಂದ ಆಗಬೇಕಾದ ಸಹಾಯ ಆಗದಿರುವುದು, ಎಲ್ಲಕ್ಕಿಂತ ಹೆಚ್ಚಾಗಿ ಕನ್ನಡಿಗರಲ್ಲಿ ಆಲಸ್ಯ ಅನೈಕ ಮತ್ಯ, ಜಾತೀಯತೆ ತುಂಬಿರುವುದು. ಇವು ನಮ್ಮ ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಪ್ರತಿಬಂಧಕ ವಾಗಿವೆ."

"ಇವುಗಳ ಪರಿಹಾರವೆಂತು?"

"ಜನಗಳಲ್ಲಿ ತಿಳಿವಳಿಕೆ ಹೆಚ್ಚಬೇಕು. ದೇಶಾಭಿಮಾನ ಭಾಷಾಭಿಮಾನಗಳು ಬಳೆಯಬೇಕು. ಪ್ರಜಾಪ್ರಭುತ್ವ ತತ್ತ್ವಗಳಲ್ಲಿ ನಂಬಿಕೆ ಇರಿಸಿ, ಸರ್ವರಿಗೂ ಸಮಾನ ಅವಕಾಶ ದೊರೆಕಬೇಕು. ಇದು ನಮ್ಮ ರಾಜ್ಯ. ಇದರ ಕ್ಷೇಮಚಿಂತನೆ ನಮಗೆ ಸೇರಿದೆ. ಉನ್ನತಿ ಅವನತಿಗಳು ನಮ್ಮ ಮೇಲೆ ನಿಂತಿವೆ ಎಂದು ನಾಡಿನ ಜನತೆ ತಿಳಿದು ತ್ರಿಕರಣಪೂರ್ವಕವಾಗಿ ಅಹರ್ನಿಶಿ ದುಡಿದಾಗಲೇ ನಮ್ಮ ರಾಜ್ಯದ ಅಭ್ಯುದಯ."

"ಶಾಸ್ತ್ರಿಗಳೆ,

ಇಷ್ಟೆಲ್ಲಾ ಪ್ರಭಾವವಿರುವ ಅನುಭವವಿರುವ ನೀವೇಕೆ ರಾಜಕೀಯಕ್ಕೆ ಇಳಿಯಬಾರದು?"

ನಾನು ವಿನೋದಕ್ಕೆ ಕೇಳಿದೆ.

ಅದನ್ನು ಅರಿತು ಅವರೂ ಮುಗುಳ್ನಗುತ್ತಾ ಉತ್ತರಿಸಿದರು" ನಾನು ಏನಿದ್ದರೂ ಸಾಂಸ್ಕೃತಿಕ ಸಾಹಿತ್ಯಕ ಮನುಷ್ಯ-ರಾಜಕೀಯ ಮನುಷ್ಯನಲ್ಲ. ಸಾಹಿತಿಗಳು ರಾಜಕೀಯ ಕ್ಷೇತ್ರಕ್ಕೆ ಇಳಿಯಬಾರದೆಂಬುದು ನನ್ನ ಖಚಿತ ಅಭಿಪ್ರಾಯ." ರಾಜಕೀಯ ಅಶಾಂತಿ ಮಯ,

"ನಾವು ಹಿಂದುಳಿದಿರಲು ಕಾರಣ ನಮ್ಮಲ್ಲಿ ಅಭಿಮಾನ ಶೂನ್ಯತೆ. ಕೆಲವು ಬಾರಿ ನಮ್ಮ ಮಿತಿಮೀರಿದ ಔದಾರ್ಯವೇ ಕಾರಣ. ಕೆಲವರು ಇದು ನಮ್ಮ ದೌರ್ಬಲ್ಯವೆನ್ನುತ್ತಾರೆ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?"

"ಈ ಮಾತ್ತು ಸತ್ಯ. ಕನ್ನಡನಾಡು ನೈಸರ್ಗಿಕವಾಗಿ, ಬೇರಾವ ರಾಜ್ಯಗಳೂ ಪಡೆಯದೆ ಇರುವ, ನೆಲ, ಜಲ ಸಂಪತ್ತುಗಳಿಂದ ಕೂಡಿದೆ. ಸಾಹಿತ್ಯ, ಸಂಸ್ಕೃತಿ, ಲಲಿತಕಲೆಗಳು ತುಂಬಿವೆ. ಧರ್ಮಸಹಿಷ್ಣುತೆಯಲ್ಲಿ ಇತರರಿಗೆ ಆದರ್ಶವಾಗಿ ನಿಲ್ಲಬಲ್ಲ ಘನತೆ ಹೊಂದಿದೆ. ವಾಯುಗುಣ ಹಿತಕರವಾಗಿದೆ. ತುಂಬಿಹರಿಯುವ ನದಿಗಳಿವೆ, ಫಲವತ್ತಾದಭೂಮಿ ಇದೆ. ಕಷ್ಟ ಪಟ್ಟುದುಡಿಯಬಲ್ಲ ಬುದ್ಧಿವಂತ ಜನರಿದ್ದಾರೆ. ಧೈರ್ಯ, ಸಾಹಸ, ತ್ಯಾಗ, ಪ್ರತಿಭೆಗಳಿಂದ ತುಂಬಿದ ಈ ಜನಕ್ಕೆ, ಸಾಂಸ್ಕೃತಿಕ, ಐತಿಹಾಸಿಕ ದಿವ್ಯ ಪರಂಪರೆ ಇದೆ. ಇಷ್ಟೆಲ್ಲಾ ಇದ್ದೂ ನಮ್ಮ-ರಾಜ್ಯ-ನಮ್ಮ ಜನ ಏಕೆ ಹಿಂದುಳಿದಿದ್ದಾರೆಂಬುದೇ ನನಗೆ ಅರ್ಥವಾಗುತ್ತಿಲ್ಲ."

"ನಮ್ಮ ಸಾಹಿತ್ಯದ ಪ್ರಗತಿಗೆ ನೀವು ಸೂಚಿಸುವ ಮಾರ್ಗಗಳು ಯಾವುವು?"

"ಮೊದಲು ದೇಶಭಾಷಾ ಉದ್ಧಾರಕ್ಕೆ ಸರಕಾರ ಟೊಂಕ ಕಟ್ಟಿ ನಿಲ್ಲಬೇಕು. ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡವೇ ಶಿಕ್ಷಣ ಮಾಧ್ಯಮವಾಗಬೇಕು. ಜನರ ನಿತ್ಯದ ವ್ಯವಹಾರದಲ್ಲಿ ತಾಯಿ ನುಡಿಗೆ ಪ್ರಥಮಸ್ಥಾನ ದೊರೆಕಬೇಕು. ಕನ್ನಡ ಎಲ್ಲ ಕಚೇರಿಗಳಲ್ಲಿ ಆಡಳಿತ ಭಾಷೆಯಾಗಬೇಕು. ಇಂಗ್ಲಿಷ್, ಹಿಂದಿ ಭಾಷೆಗಳ ಬಳಕೆ ಇರಲಿ, ಆದರೆ ಅನವಶ್ಯವಾಗಿ ಬಳಸಬಾರದು. ಕನ್ನಡ ಪುಸ್ತಕಗಳ ಪ್ರಸಾರ ಹೆಚ್ಚಾಗಬೇಕು, ಜನತೆಯಲ್ಲಿ ವಾಚನಾಭಿರುಚಿ ಹೆಚ್ಚಾಗಲು, ಒಳ್ಳೆಯ ಪುಸ್ತಕಗಳ ಮಾರಾಟದ ವ್ಯವಸ್ಥೆ ಯಾಗಬೇಕು. ಸಾಹಿತಿಗಳಂತೆಯೇ, ಪುಸ್ತಕ ವ್ಯಾಪಾರಿಗಳೂ ಭಾಷಾಭಿಮಾನ, ದೇಶಭಿಮಾನಗಳಿಂದ ಕೆಲಸಮಾಡಬೇಕು. ನಮ್ಮ ಗ್ರಂಥಗಳ ಮುದ್ರಣ ವಿನ್ಯಾಸ, ಅಚ್ಚುಕಟ್ಟು ಇತರರನ್ನು ಆಕರ್ಶಿಸುವಂತೆ ಇರಬೇಕು. ಆಗ ಮಾತ್ರ ನಾಡು ನುಡಿಗಳ ಸರ್ವತೋಮುಖ ಪ್ರಗತಿ ಸಾಧಿಸೀತು. ಕನ್ನಡ ಕಾವ್ಯ ಕಂಗೊಳಿಸೀತು.

ಪತ್ರಿಕಾ ಸಂಪಾದಕರಾಗಿ ನಿಮ್ಮ ಅನುಭವವೇನು?"

"1936ರಿಂದ ಇಂದಿನವರೆಗೆ ಮೂರುದಶಕಗಳಿಂದ ನಾನು ಪತ್ರಿಕೋದ್ಯೋಗಿಯಾಗಿದ್ದೇನೆ. ಕೆಲವು ವರ್ಷ 'ಸ್ವತಂತ್ರ ಕರ್ನಾಟಕ' ಎಂಬ ಹೆಸರಿನ ವಾರಪತ್ರಿಕೆ ನಡೆಸಿದ್ದೇನೆ. ಉಷಾ ಮಾಸಪತ್ರಿಕೆಗೂ ಒಂದು ವರ್ಷ ಸಂಪಾದಕನಾಗಿದ್ದೆ. ಆದರೆ ಇವೆಲ್ಲದರಲ್ಲಿ ನಷ್ಟವಾಗಿ ಬೇಸರವಾಗಿ ಬಿಟ್ಟು ಬಿಟ್ಟೆ. ಕನ್ನಡನಾಡಿನಲ್ಲಿ ಪತ್ರಿಕೋದ್ಯೋಗಿ ಎಂದರೆ ಕಷ್ಟ ನಷ್ಟ ಬಲಿದಾನಗಳಿಗೆ ಸಿದ್ಧನಾಗಿರಬೇಕು. ಈಗ ೩೦ ವರ್ಷಗಳಿಂದ ಶರಣ ಸಾಹಿತ್ಯ ಪತ್ರಿಕೆಯನ್ನು ಮಾತ್ರ ನಡೆಸಿಕೊಂಡು ಬರುತ್ತಿದ್ದೇನೆ. ಇದರಿಂದ ನನ್ನ ಬರೆವಣಿಗೆಗೂ, ಸಾಹಿತ್ಯ ಸೇವೆಗೂ ಇಂಬು ದೊರೆತಿದೆ."

"ನಿಮ್ಮ ಸಾಹಿತ್ಯ ಸೇವೆಯ ಬಗ್ಗೆ ಒಂದು ಮಾತು. ನೀವು ಇದುವರೆಗೆ ಎಷ್ಟು ಗ್ರಂಥಗಳನ್ನು ಬರೆದಿದ್ದೀರಿ. ಅವುಗಳಿಗೆ ದೊರೆತಿರುವ ಪ್ರೋತ್ಸಾಹ ಹೇಗಿದೆ?"

"ಇದುವರೆಗೆ ನಾನು ಶರಣ ಸಾಹಿತ್ಯ ಗ್ರಂಥಮಾಲೆಯಿಂದ ಮೂವತ್ತಾರು ಕೃತಿಗಳನ್ನು ಹೊರತಂದಿದ್ದೇನೆ. ಇವುಗಳಲ್ಲಿ ದುಂಬಿ ಮತ್ತು ನಾದ (ಕವನ ಸಂಗ್ರಹ) ವೀರಶೈವ ಸಾಹಿತ್ಯ ಇತಿಹಾಸ (ನಾಲ್ಕು ಭಾಗಗಳು,) ವೀರಶೈವ ಮಹಾ ಪುರುಷರು, ಸರ್ವಜ್ಞಮೂರ್ತಿ, ಕೆಳದಿರಾಣಿ ಚೆನ್ನಮ್ಮಾಜಿ, ಬಿದನೂರುಪ್ರಭು ಶಿವಪ್ಪ ನಾಯಕ, ಕರ್ನಾಟಕ ಸಂದರ್ಶನ, ಮಾದೇಶ್ವರ ಚರಿತೆ, ಷಡಕ್ಷರ ದೇವ ಮಹಾಕವಿ ಮೊದಲಾದ ಸ್ವತಂತ್ರ ಕೃತಿಗಳನ್ನೂ, ನಿಜಗುಣ ಶಿವಯೋಗಿ ಅವರ ಪುರಾತನ ತ್ರಿವಿಧಿ, ರಾಘವಾಂಕನ ವೀರೇಶ ಚರಿತೆ, ಚಂದ್ರಕವಿಯ ಪಾಲ್ಕುರಿಕೆ ಸೋಮನಾಥನ ಗಣಸಹಸ್ರ ಮತ್ತು ಪಂಪಾಸ್ಥಾನ ವರ್ಣನಂ, ಗುರುಸಿದ್ಧ ಕವಿಯ ಮಾದೇಶ್ವರ ಸಾಂಗತ್ಯ ನ್ಯಾಯಶತಕಂ ಮೊದಲಾದ ಗ್ರಂಥಗಳನ್ನು ಸಂಪಾದಿಸಿದ್ದೇನೆ. ಇವುಗಳಲ್ಲಿ ವೀರಶೈವ ಸಾಹಿತ್ಯ ಇತಿಹಾಸಕ್ಕೆ ಮೈಸೂರು ಸರ್ಕಾರದಿಂದ, ಬಿದನೂರಿನ ಪ್ರಭುವಿಗೆ ದೇವರಾಜ ಬಹದ್ದೂರ್ ನಿಧಿಯಿಂದ ಅಕಾಡಮಿ ಬಹುಮಾನ ಬಂದಿದೆ."

"ನಿಮ್ಮ ಸಾಹಿತ್ಯ ಸೇವೆ, ವಿದ್ವತ್ತನ್ನು ಮನಗಂಡು ಅನೇಕ ಸಂಘ ಸಮಿತಿಗಳು ನಿಮ್ಮನ್ನು ಗೌರವಿಸಿದ್ದಾರೆಂದು ಕೇಳಿದ್ದೇನೆ ನಿಜವೆ?

"ಹೌದು. ಈ ವಿಷಯದಲ್ಲಿ ನಾನು ಭಾಗ್ಯಶಾಲಿ. ನನ್ನ ಅಲ್ಪಸ್ವಲ್ಪ ಸಮಾಜ ಹಾಗೂ ಸಾಹಿತ್ಯ ಸೇವೆಯನ್ನು ನೋಡಿ ಅನೇಕ ಸಂಘ ಸಂಸ್ಥೆಗಳೂ, ಅರಮನೆ, ಗುರುಪೀಠಗಳೂ ನನ್ನನ್ನು ಗೌರವಿಸಿದ್ದಾರೆ—ಎಂದು ಹೇಳಿ ಒಂದು ಪಟ್ಟಿಯನ್ನು ನನ್ನ ಮುಂದೆ ಇಟ್ಟರು.

ಅವುಗಳಲ್ಲಿ ಮೈಸೂರಿನ ಶ್ರೀ ಜಯಚಾಮರಾಜೇಂದ್ರ ಒಡೆಯರು ತಮ್ಮ ೩೧ನೇ ವರ್ಷದ ವರ್ಧಂತಿ ಮಹೋತ್ಸವದಲ್ಲಿ ವಿಶೇಷ ದರ್ಬಾರಿನಲ್ಲಿ ಕೊಟ್ಟ ಪಂಡಿತರತ್ನಂ' ಬಿರುದೂ, ಚಿತ್ರದುರ್ಗದ ಜಯದೇವ ಮುರುಘರಾಜೇಂದ್ರರು ಕೊಟ್ಟ 'ಕೀರ್ತನಾಚಾರ್ಯ' ಶ್ರೀಮದ್ರಂಭಾಪುರಿ ಜಗದ್ಗುರುಗಳು ಕೊಟ್ಟ 'ಕೀರ್ತನಕೇಸರಿ' 'ಕವಿರತ್ನ' ಶ್ರವಣಬೆಳಗೊಳದ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯರು ಕೊಟ್ಟ 'ಕೀರ್ತನ ವಿಚಕ್ಷಣ' ಶ್ರೀ ಮದುಜ್ಜಯಿನಿ ಗುರುಪೀಠದವರು ಕೊಟ್ಟ 'ಶಿವಕೀರ್ತನ ಕವಿರಾಜ' ಶ್ರೀ ಶೈಲದ ಸಿಂಹಾಸನಾಧೀಶ್ವರರು ಕೊಟ್ಟ 'ವಿಮರ್ಶನಾಚಾರ್ಯ' ಕಾಶಿ ಜಗದ್ಗುರು ವಿಶ್ವಾರಾಧ್ಯರು ಕೊಟ್ಟ 'ಕರ್ನಾಟಕ ವಿಭೂಷಣ' ಈ ಪ್ರಶಸ್ತಿಗಳನ್ನೂ, ಬಿರುದುಗಳನ್ನೂ ಇಲ್ಲಿ ಸ್ಮರಿಸಿಕೊಳ್ಳಬಹುದು. ೩೦ ವರ್ಷಗಳಿಂದ ಅರಮನೆಯ ವಿದ್ವಾಂಸರಾಗಿಯೂ ಇರುವುದೆಂಬುದು ಗಮನಾರ್ಹ ಅಂಶ.

ಅಲ್ಲದೆ ಶಾಸ್ತ್ರಿಗಳಿಗೆ ಭಾರತ ಸರಕಾರದವರು 1966 ರಲ್ಲಿ ಪದ್ಮಶ್ರೀ ಬಿರುದನ್ನೂ, ರಾಜ್ಯ ಅಕಾಡಮಿಯವರು ಅದೇ ವರ್ಷ ಸಾಹಿತ್ಯ ಪ್ರಶಸ್ತಿಯನ್ನೂ ಧಾರವಾಡ ವಿದ್ವತ್ 'ಸಭೆಯು ಸಮಾಜ' ಭಾಸ್ಕರ ಬಿರದನ್ನೂ ಇತ್ತು ಗೌರವಿಸಿದರು. ಇವು ಯಾವ ಕನ್ನಡಿಗನೂ ಹೆಮ್ಮೆ ಪಡುವ ವಿಚಾರ

ಇಷ್ಟು ಮಾತ್ರವೇ ಅಲ್ಲ, ಅವರು ತಮ್ಮ ಅರವತ್ತೈದರ ಈ ಹರೆಯದಲ್ಲೂ ಅನೇಕ ಸಂಘ ಸಮಿತಿಗಳ ಸದಸ್ಯರಾಗಿದ್ದಾರೆ. ರಾಜ್ಯದ ಸಂಗೀತ ಸಾಹಿತ್ಯ ಅಕಾಡಮಿ, ಪರಿಷತ್ತಿನ ಕನ್ನಡ ಕನ್ನಡ ನಿಘಂಟು, ಕನ್ನಡ ವಿಶ್ವಕೋಶ, ಆಕಾಶವಾಣಿ ಸಲಹಾ ಸಮಿತಿ, ಅಖಿಲ ಭಾರತ ವೀರಶೈವ ಮಹಾಸಭಾ, ಮೈಸೂರು ಪ್ರಿಂಟರ್ಸ್ ಕೋಆಪರೇಟಿವ್ ಸೊಸೈಟಿ, ಗಡಿ ಸಲಹಾ ಸಮಿತಿ, ಬಸವ ಸಮಿತಿ ಮೊದಲಾದವುಗಳ ಸಂಪರ್ಕ ಇಟ್ಟುಕೊಂಡಿದ್ದಾರೆ. ಇವುಗಳಲ್ಲಿ ಅಧ್ಯಕ್ಷರಾಗಿ ಸದಸ್ಯರಾಗಿ ಕೆಲಸ ಮಾಡಿದ್ದಾರೆ. ಅವರ ಜೀವನದ ಒಂದು ದೊಡ್ಡ ಸಾಧನೆ ಎಂದರೆ ಅವರು ಎಂಟು ವರ್ಷನಾಲ್ಕು ತಿಂಗಳು ಅಂದರೆ ಸುಮಾರು ನೂರುತಿಂಗಳಕಾಲ ಕನ್ನಡನಾಡಿನ ಪ್ರಾತಿನಿಧಿಕ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದುದು. ಇದನ್ನು ಶಾಸ್ತ್ರಿಗಳು ಹೆಮ್ಮೆಯಿಂದ ಸ್ಮರಿಸಿಕೊಂಡರು.

"ಕನ್ನಡ ಸಾಹಿತ್ಯ ಪರಿಷತ್ತು ಬೆಳೆಯಲು ನಿಮ್ಮ ಸಲಹೆಗಳು ಏನು?"

"ಅದು ನವೋತ್ಸಾಹದಿಂದ ಕೆಲಸ ಮಾಡಲು ಮುಂದೆ ಬರಬೇಕು. ನಾಡಿನ ಎಲ್ಲ ವರ್ಗದ ಜನರ ಸಹಾಯ ಸಹಕಾರ ಪಡೆಯಬೇಕು. ಅದು ಒಂದು ವಿಶಿಷ್ಟ ವರ್ಗದ ಜನರ ಸ್ವತ್ತು ಆಗಬಾರದು. ಕಾಲಸ್ಥಿತಿಯನ್ನು ಅರಿತು ಪರಿಷತ್ತು ತನ್ನ ಕೆಲಸದ ಚಟುವಟಿಕೆಗಳನ್ನು ವಿಸ್ತರಿಸಬೇಕು. ಮುಖ್ಯವಾಗಿ ಗಡಿನಾಡಿನಲ್ಲಿ ಕನ್ನಡದ ಪ್ರಸಾರ ನಡೆಯಬೇಕು. ಅದು ಕೈಗೊಂಡಿರುವ ಗ್ರಂಥ ಪ್ರಕಟನಾ ಕಾರ್ಯ ಹೆಚ್ಚು ತ್ವರಿತದಲ್ಲಿ ನಡೆಯಬೇಕು. ಉದಾ: ಶಬ್ದಮಣಿ ದರ್ಪಣ, ಪಂಪ ರಾಮಾಯಣಗಳ ಪ್ರಕಟಣೆ, ಕವಿ ಚರಿತೆಯ ಎರಡನೆ ಸಂಪುಟದ ಪ್ರಕಟಣೆಗಳು ಬೇಗ ನಡೆಯಬೇಕು. ಕನ್ನಡ ಕನ್ನಡ ನಿಘಂಟಿನ ಕೆಲಸ ಹೆಚ್ಚಿನ ಶ್ರದ್ಧೆಯಿಂದ ನಡೆಯಬೇಕು. ಈಗಿರುವಂತೆ ಪರಿಷತ್ತು ಕೆಲಸ ಮಾಡಿದರೆ ಅದರಿಂದ ಯೋಜಿತಕ್ರಮದಲ್ಲಿ ನಿಘಂಟನ್ನು ಹೊತ್ತು ತರಲು ಸಾಧ್ಯವಾಗುವುದಿಲ್ಲ."

"ಇದರ ಬಗ್ಗೆ ಒಂದು ಒಡಕು ಸುದ್ದಿ ಬಂದಿದೆ. ಇದನ್ನು ಬೇರೆ ಕಡೆಗೆ ವರ್ಗಾಯಿಸುವ ಆಲೋಚನೆ ಉಂಟಂತಲ್ಲ—" ನಾನು ಕೇಳಿದೆ.

"ನಿಘಂಟನ್ನು ಬಿಟ್ಟರೆ ಪರಿಷತ್ತಿಗೆ ತುಂಬಲಾರದಷ್ಟು ನಷ್ಟವೆಂದು ನನ್ನ ಭಾವನೆ. ಅದನ್ನು ಇಲ್ಲೇ ಉಳಿಸಿಕೊಳ್ಳಲು ತನ್ನಿಂದಾಗುವ ಎಲ್ಲ ಪ್ರಯತ್ನ ಮಾಡುವುದು ಅಗತ್ಯ. ಈ ಬಗೆಗೆ ಸರಕಾರದ ಹಾಗೂ ಬೆಂಗಳೂರು ವಿಶ್ವ ವಿದ್ಯಾನಿಲಯದ ಸಹಾಯವನ್ನು ಪಡೆದರೆ ಈ ಕಾರ್ಯ ಯೋಜನಾ ಬದ್ಧವಾಗಿ ನಡೆದೀತು!"

"ಪರಿಷತ್ತಿನ ಹೊಸ ಕಾರ್ಯದ ಬಗ್ಗೆ ನಿಮ್ಮ ಖಚಿತ ಅಭಿಪ್ರಾಯವೇನು?"

"ಕನ್ನಡ ನುಡಿಯೊಂದು ಚೆನ್ನಾಗಿ ಬರುತ್ತಿದೆ." ಪರಿಷತ್ ಪತ್ರಿಕೆ ಕುಂಟ ಹತ್ತಿದೆ. ಇದು ಆಗಬಾರದು.

"ನಿಮ್ಮ ಜೀವನದಲ್ಲಿನ ಚಿರಸ್ಮರಣೀಯ ಘಟನೆ ಏನು?"

ಶಾಸ್ತ್ರಿಗಳು ಚಣಕಾಲ ಆಲೋಚಿಸಿ ಹೇಳಿದರು. 1936ರಲ್ಲಿ ವಿಜಯನಗರದ ಸ್ಥಾಪನೆಯ ಆರುನೂರನೇ ವರ್ಷದ ಉತ್ಸವ ಆಚರಿಸಲು ಹಂಪೆಗೆ ಹೋಗಿದ್ದೆ. ನಾನು ತುಂಗಭದ್ರೆಯಲ್ಲಿ ಸ್ನಾನ ಮಾಡುತ್ತಿದ್ದಾಗ ಅದರಲ್ಲಿ ಮುಳುಗಿದೆ. ಆಗ ಬೇಲೂರು ಕೇಶವದಾಸರು ನನ್ನನ್ನು ಉಳಿಸಿದರು. ಅನಂತರ ನಾನು ಪಂಪಾವಿರೂಪಾಕ್ಷನ ಸಾನ್ನಿಧ್ಯದಲ್ಲಿ ನಿಂತು ಉಳಿದ ನನ್ನ ಆಯುಷ್ಯವನ್ನು ಶರಣ ಸಾಹಿತ್ಯದ ಪ್ರಚಾರಕ್ಕೆ ಮೀಸಲಿಡುವುದಾಗಿ ಪ್ರತಿಜ್ಞೆಮಾಡಿದೆ. ಅದರಂತೆ ಕೇಶವದಾಸರೂ ಹರಿದಾಸ ಸಾಹಿತ್ಯಕ್ಕೆ ತಮ್ಮನ್ನು ಮೀಸಲಿಡುವುದಾಗಿ ವಚನ ತೊಟ್ಟರು. ಅದರಂತೆ ನಾವಿಬ್ಬರೂ ನಡೆದೆವು. ಈಗ ಕೇಶವ ದಾಸರು ವೈಕುಂಠವಾಸಿಯಾಗಿದ್ದಾರೆ. ನಾನು ನನ್ನ ಕೈಲಾದಷ್ಟು ಮಟ್ಟಿಗೆ ನಮ್ಮ ಶರಣ ಸಾಹಿತ್ಯ ಸೇವೆ ಮಾಡಿಕೊಂಡು ಬಂದಿದ್ದೇನೆ."

"ನಿಮ್ಮ ಜೀವನದ ಮಹತ್ಸಾಧನೆ ಏನು?"

"ಆರುನೂರು ವರ್ಷಗಳಿಂದ ಹರಿದು ಹಂಚಿ ಹೋಗಿದ್ದ ಕನ್ನಡನಾಡು, ಕವಿಗಳ ಹೊಂಗನಸಾಗಿದ್ದ ಕನ್ನಡನಾಡು 1956ರಲ್ಲಿ ಒಂದಾದುದು. ನಾಲ್ಕು ದಶಕಗಳ ಸೇವೆಯ ಅನಂತರ ಇದನ್ನು ನೋಡುವ ಪುಣ್ಯ ಪಡೆದು ನಾನು ಧನ್ಯ"

"ಜೀವನದಲ್ಲಿ ನೀವು ಗಳಿಸಿಕೊಂಡ ಶತ್ರುಮಿತ್ರರ ಬಗೆಗೆ ನಿಮ್ಮ ಅಭಿಪ್ರಾಯವೇನು?"

"ಈ ಪ್ರಶ್ನೆ ತುಂಬ ಸ್ವಾರಸ್ಯವಾಗಿದೆ. ನಿಜ ಹೇಳುವುದಾದರೆ ನನಗೆ ಶತ್ರುಗಳೆಂಬುವರೇ ಇಲ್ಲ. ನಾನು ಅಜಾತ ಶತ್ರು. ಎಲ್ಲರೂ ನನ್ನ ಕಣ್ಣಿಗೆ ಮಿತ್ರರಾಗಿಯೇ ಕಾಣುತ್ತಾರೆ. ನನ್ನ ಜೀವನಾನುಭವದಿಂದ ಹೇಳುವುದಾದರೆ, ಯಾರೂ ಚಿರಕಾಲ ಶತ್ರುಮಿತ್ರರಾಗಿ ಇರಲು ಸಾಧ್ಯವಿಲ್ಲ. ವಾಸ್ತವವಾಗಿ ಶತ್ರುಮಿತ್ರರೆಂಬ ಮಾತು ನಾವು ಜಗತ್ತನ್ನು ನೋಡುವ ದೃಷ್ಟಿಯಿಂದ ಬರುತ್ತದೆ. ಶತ್ರುಗಳನ್ನು ಮಿತ್ರಸ್ವರೂಪರೆಂದು ನಾನು ಭಾವಿಸುತ್ತೇನೆ. ಶತ್ರುಮಿತ್ರ ವ್ಯವಹಾರವು ಜೀವನದ ಪರಿಪೂರ್ಣತೆಗೆ ಉನ್ನತಿಗೆ ನೆರವಾಗುತ್ತದೆ. ಇದು ವ್ಯಕ್ತಿಗೆ ಕರ್ಮಾನುಸಾರ ಪ್ರಾಪ್ತವಾಗುತ್ತದೆ. ಜೀವನದಲ್ಲಿ ಬೇವುಬೆಲ್ಲಗಳಿದ್ದಂತೆ ಶತ್ರುಮಿತ್ರರ ಪಾತ್ರ."

"ಜೀವನ ನಿಮಗೆ ಕಲಿಸಿದ ಪಾಠವೇನು? ಬದುಕಿನಲ್ಲಿ ನೀವು ಪಡೆದ ದರ್ಶನವೇನು?"

"ಮನುಷ್ಯನು ತಾನು ಹುಟ್ಟಿದಮನೆ, ಬಳೆದ ಸಮಾಜ, ಸಾಕಿದ ದೇಶ ಇವುಗಳಿಗೆ ಉಪಯುಕ್ತನಾಗಿ ಬಾಳುವುದಕ್ಕೆ ಬೇಕಾದ ಗುಣ ಮತ್ತು ಸಂಪತ್ತನ್ನು ಗಳಿಸಿಕೊಳ್ಳಬೇಕು. ಕೈಲಾದ ಮಟ್ಟಿಗೆ ವ್ಯಕ್ತಿಯು ಜನತೆಗೆ ಉಪಕಾರ ಮಾಡಬೇಕು. ತಮಗೆ ಉಂಟಾದ ಅಪಕಾರಗಳನ್ನು ಶಾಂತಿ ಸಮಾಧಾನಗಳಿಂದ ಸಹಿಸಿಕೊಳ್ಳಬೇಕು. ಅಪಘಾತ, ಅಪಮಾನ ಒದಗಿದಾಗ ಸಮಾಧಾನದಿಂದ ಇರಬೇಕು. ಗಾಬರಿಗೊಳ್ಳಬಾರದು. ಒಂದು ಕಾಲದಲ್ಲಿ ಅವುಗಳು ಒಳ್ಳೆಯದಾಗಿ ಪರಿಣಮಿಸಬಹುದು. ವಿಶ್ವದಲ್ಲಿ ಮಾನವಜನ್ಮ ದೊಡ್ಡದು. ಅದನ್ನು ಎಲ್ಲ ರೀತಿಯಲ್ಲಿ ಸಾರ್ಥಕ ಪಡಿಸಿಕೊಳ್ಳಬೇಕು. 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು.' ಎಂಬ ಬಸವೇಶ್ವರರ ಮಾತಿನಂತೆ ನಾವು ನಡೆಯಬೇಕು. 'ಕಾಯಕವೇ ಕೈಲಾಸ' ಎಂದು ಅರಿತಾಗಲೇ ನಮ್ಮ ಜನ್ಮಸಾಫಲ್ಯ—"

ಇಷ್ಟು ಹೇಳುತ್ತಿದ್ದಂತೆ ಹೊರಗೆ ಕಾರಿನ ಹಾರನ್ ಆಯಿತು. ಅಲ್ಲಿಗೆ ನಮ್ಮ ಸಂಭಾಷಣೆ ಮುಗಿಯಿತು.

ಶಾಸ್ತ್ರಿಗಳು ನನ್ನನ್ನು ಬೀಳ್ಕೊಟ್ಟು ಮೊದಲೇ ಯೋಜಿತವಾಗಿದ್ದ ಕಾರ್ಯ ಗೌರವಗಳನ್ನು ನೆನೆದು ಕಾರನ್ನು ಹತ್ತಿದರು. ಪರ ಸ್ಥಳಕ್ಕೆ ಪ್ರಯಾಣ ಮಾಡಿದರು. ಎಲ್ಲಿಗೆ ಎಂದು ಮಾತ್ರ ನಾನು ಕೇಳಲಿಲ್ಲ.

**ಶ್ರೀನಿವಾಸರಾವ್ ಕೊರಟಿ,** ಎಂ.ಎ., ಬಿ.ಕಾಂ.,

# ಪಂಡಿತರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು (ಒಂದು ಸಂದರ್ಶನ)

**ಜೀವೇತ್ ಶರದಃ ಶತಂ**

ಅಗಲವಾದ ಮುಖ, ಮುಖದಲ್ಲಿ ಮಿನುಗುವ ನಗೆ, ಜಗತ್ತಿನ ಆಗುಹೋಗುಗಳನ್ನು ಸಂವೇದಿಸುವ ಕಣ್ಣುಗಳು, ಆಜಾನುಬಾಹು ಶರೀರ. ಶರೀರವನ್ನಪ್ಪಿಕೊಂಡ ಖಾದಿಯ ಜುಬ್ಬ, ಶುಭ್ರಧೋತರ, ತಲೆಗೊಂದು ಜರಿಯ ಪೇಟ, ಹೆಗಲಮೇಲೊಂದು ಶಾಲು, ಉದ್ದನೆಯ ಕೋಟು, ಕೈಯಲ್ಲೊಂದು ಕೋಲು, ಇನ್ನೊಂದು ಕೈಯಲ್ಲಿ ಪುಸ್ತಕಗಳ ಕಂತೆಗಳು. ಇವು ಪಂಡಿತರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಹೊರ ಪರಿಚಯ ಮಾಡಿಕೊಡುತ್ತವೆ.

ಅವರನ್ನು ಗುರುತಿಸುವ ನೇರವಾದ ದಾರಿ ಇದಲ್ಲ. ಅವರು ಕನ್ನಡನಾಡಿಗೆ ನೀಡಿದ ಸಾಹಿತ್ಯ ಸೇವೆ, ಧಾರೆಯೆರೆದ ಸಾಮಾಜಿಕ ಕಾರ್ಯ, ರಾಜಕೀಯ ಸುಧಾರಣೆಯ ಬಗ್ಗೆ ಅವರಗಿರುವ ತಳಮಳ, ಆಧ್ಯಾತ್ಮಿಕ ಪುನರುತ್ಥಾನದ ಬಗೆಗೆ ಅವರಲ್ಲಿರುವ ಕಳವಳ, ರಾಷ್ಟ್ರದ ಉತ್ಕರ್ಷಕ್ಕಾಗಿ ಹೋರಾಡುವ ಪ್ರಜ್ಞೆ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳನ್ನು ಇಂದು ಸಾರ್ವಜನಿಕರು ಗೌರವಿಸುವಂತೆ ಮಾಡಿವೆ.

ಅವರು ಮಾಡಿದ ಸಾಹಿತ್ಯ ತಪಸ್ಸಿನ ನಾಲ್ಕು ದಶಕಗಳು ಇಂದು ಕನ್ನಡಿಗರಿಗೆ ಸತ್ಫಲವನ್ನು ನೀಡುತ್ತಿವೆ. ಅವರಿಗೆ ಮೊದಲಿನಿಂದಲೂ ಕನ್ನಡದ ಮೇಲೆ ಅಪಾರ ಪ್ರೇಮ. ಅನನ್ಯಭಕ್ತಿ. ಕರ್ನಾಟಕದಲ್ಲಿ ಕನ್ನಡವು ನಿಶ್ಚೇಷ್ಟಿತವಾಗಿ ನಿಂತಾಗ ಕರ್ನಾಟಕ ಕುಲಪುರೋಹಿತರೆನಿಸಿದ ಆಲೂರ ವೆಂಕಟರಾಯರು, ಬೆನಗಲ್ ರಾಮರಾಯರು, ಬಿ.ಎಂ. ಶ್ರೀಕಂಠಯ್ಯನವರು, ಎಸ್.ಎಸ್. ಬಸವನಾಳರು, ಡಾ॥ ಫ. ಗು. ಹಳಕಟ್ಟಿ, ರಾಷ್ಟ್ರಕವಿ ಗೋವಿಂದಪೈಯವರು ಕನ್ನಡದ ಡಿಂಡಿಮವನ್ನೂದಿದರು. ಆ ಪ್ರೇರಣೆಯಿಂದ ಉತ್ಸಾಹಿತರಾದ ಶಾಸ್ತ್ರಿಗಳು ಕನ್ನಡಾಭಿಮಾನದ ಕಂಕಣತೊಟ್ಟು ರಿಂಗಣಕಣಕ್ಕಿಳಿದರು. ಆದರೆ ಶಾಸ್ತ್ರಿಗಳಿಗೆ ಪ್ರೇರಣೆ ನೀಡಿದುದು ಅವರ ಆತ್ಮಸಂವೇದನೆ, ನಾಡಿನ ಅಂದಿನ ಸ್ಥಿತಿಗತಿಗಳು, ಕನ್ನಡದ ಪರಿಸ್ಥಿತಿ, ಬಾಳಿನ ಸಂಘಟನೆಗಳು ಕನ್ನಡಿಗರ ದೈನ್ಯಾವಸ್ಥೆ.

ಬಾಲ್ಯದಿಂದಲೂ ಅವರದು ಸತತಾಭ್ಯಾಸ ಪ್ರವೃತ್ತಿ. ಸಂಸ್ಕೃತ ಕಲಿತು 'ಪಂಡಿತರತ್ನ'ರೆನಿಸಿಕೊಂಡರೂ ಅವರ ಒಲವು ಕನ್ನಡದ ಕಡೆಗೆ. ಶಬ್ದಾನುಶಾಸನ, ಶಬ್ದಮಣಿ ದರ್ಪಣ ಮೊದಲಾದ ಹಳೆಯ ವ್ಯಾಕರಣಗಳನ್ನು ಅಭ್ಯಸಿಸಿ, ಕುಮಾರವ್ಯಾಸ ಭಾರತ, ಲಕ್ಷ್ಮೀಶನ ಕಾವ್ಯ, ಪಂಪ, ರನ್ನ, ಆಂಡಯ್ಯ, ರಾಘವಾಂಕ, ಹರಿಹರ, ವಿರೂಪಾಕ್ಷಪಂಡಿತರ ಕಾವ್ಯಗಳ ಸಾರಸರ್ವಸ್ವವನ್ನು ಅರ್ಥೈಸಿ ನೋಡಿದವರು ಶಾಸ್ತ್ರಿಗಳು. ಗಹನವಾದ ಅಧ್ಯಯನ, ತೀಕ್ಷ್ಣವಾದ ವಿಮರ್ಶಾಶಕ್ತಿ, ಕಾವ್ಯಗಳನ್ನು ತೂಗಿನೋಡುವ ಚಿಕಿತ್ಸಕ ಗುಣ, ಅದಕ್ಕೆಲ್ಲ ಪೂರಕವಾದ ಸ್ಮರಣಶಕ್ತಿ ಶಾಸ್ತ್ರಿಗಳ ಸಾಹಿತ್ಯಾಭ್ಯಾಸದ ಸಂಕೇತಗಳು. ಅವರದು ಹಳೆಯ ಕಾವ್ಯಗಳನ್ನೋದುವುದರಲ್ಲೇ ಸೀಮಿತವಾದ ಪ್ರತಿಭೆಯಲ್ಲ. ಹೊಸ ಕಾವ್ಯಗಳನ್ನು, ಕಥೆ, ಕಾದಂಬರಿ, ವಿಮರ್ಶೆ, ಇತಿಹಾಸ, ಸಂಶೋಧನಾಗ್ರಂಥಗಳನ್ನೂ ಬಿಡದೆ ಓದಿದ್ದಾರೆ. ಅವರ ಮನೆಯೊಂದು ಗ್ರಂಥಭಾಂಡಾರ. ಅಲ್ಲಿ ಹಳೆತು ಹೊಸತುಗಳ ಸಂಗಮವಿದೆ. ತಾಡೋಲೆಯ ಹಸ್ತಪ್ರತಿಗಳಿವೆ. ತಾಮ್ರಪಟಗಳಿವೆ, ಹಳೆಯ ಕಡತಗಳಿವೆ. ಕರ್ನಾಟಕ ಐತಿಹಾಸಿಕ ಸ್ಥಳಗಳ ಚಿತ್ರಗಳಿವೆ. ಅವರ ಕಾರ್ಯಾಲಯ ಸಾಹಿತ್ಯಾಭ್ಯಾಸಿಗಳಿಗೆ ಒಂದು ಸ್ಫೂರ್ತಿಯ ಕೇಂದ್ರ. ಬೆಂಗಳೂರಿನ ರಂಗಸ್ವಾಮಿ ಗುಡಿಬೀದಿಯಲ್ಲಿರುವ ಅವರ ಮನೆ. ಮನೆಯ ಮುಂದೆ ತರತರದ ಗಿಡಬಳ್ಳಿಗಳನ್ನು ಬೆಳೆಸಿದ್ದಾರೆ. ಅವರು ನಿಸರ್ಗ ಸೌಂದರ್ಯ ಪ್ರಿಯರೆಂಬುದಕ್ಕೆ ಇದೊಂದು ಸಾಕ್ಷಿ. ಅವರಣದ ಮಧ್ಯದಲ್ಲಿ ಮನೆ. ಮನೆಯ ಎಡಗಡೆ ಸಾಹಿತ್ಯ ಶ್ರೀಯನ್ನು ಇಟ್ಟುಕೊಂಡ ಶಾಸ್ತ್ರಿಗಳ ಕಾರ್ಯಾಲಯ. ಬಲಪಾರ್ಶ್ವದಲ್ಲಿ ಸ್ವತಂತ್ರ

ಕರ್ನಾಟಕ ಮುದ್ರಣಾಲಯ ಹಾಗೂ ಶರಣ ಸಾಹಿತ್ಯ ಮಾಸಿಕದ ಪ್ರಕಾಶನ ಕೇಂದ್ರವಿದೆ.

ಹೌದು. ಅವರು ಸ್ವತಂತ್ರ ಕರ್ನಾಟಕ ಮುದ್ರಣಾಲಯದ ಒಡೆಯರು. 'ಕಾಯಕವೇ ಕೈಲಾಸ' ಎಂದು ನಂಬಿದವರು. ಅದು ಶರಣ ಸಾಹಿತ್ಯ ಹಾಗೂ ಗ್ರಂಥ ಮಾಲೆಯ ಪುಸ್ತಕಗಳು ಮುದ್ರಣವಾಗುವ ಸ್ಥಳ. ಇಷ್ಟೇ ಅಲ್ಲದೆ ಆಹ್ವಾನ ಪತ್ರಿಕೆ, ಇತರ ಲೇಖಕರ ಪುಸ್ತಕಗಳು, ಚಿಕ್ಕ ಪುಟ್ಟ ಮುದ್ರಣ ಕಾರ್ಯಗಳೂ ನಡೆದಿರುತ್ತವೆ. ಶಾಸ್ತ್ರಿಗಳು ಸ್ನಾನಮಾಡಿ ಶಿವಪೂಜೆ ಮುಗಿಸಿ ಮುದ್ರಣಾಲಯಕ್ಕೆ ಬರುವಾಗಲೇ ಅವರನ್ನು ಕಾಣಲು ಆತುರರಾಗಿರುವ, ಮುದ್ರಣಕ್ಕೆ ವಸ್ತುಗಳನ್ನು ನೀಡಿದವರು, ನೀಡುವವರು, ಲೇಖಕರು, ಮುನ್ನುಡಿ ತಮ್ಮ ಪುಸ್ತಕಕ್ಕೆ ಬರೆಸಿಕೊಳ್ಳಲು, ಮತ್ತೆ ಕೆಲವರು ಸಭೆ ಸಮಾರಂಭಗಳಿಗಾಹ್ವಾನಿಸಲು, ಅನೇಕರು ಅವರೊಂದಿಗೆ ಇಂದಿನ ರಾಜಕೀಯ ಸಾಹಿತ್ಯಕ ವಿಷಯಗಳನ್ನು ಚರ್ಚಿಸಲು, ಮತ್ತೆ ಕೆಲವರು ಅವರವರು ನಡೆಸಿದ ಸಂಶೋಧನಾಕಾರ್ಯಗಳ ಬಗೆಗೆ ಶಾಸ್ತ್ರಿಗಳಿಂದ ಮಾರ್ಗದರ್ಶನ, ಸೂಕ್ತ ಸಲಹೆ ಪಡೆಯಲು ಊರು ಪರಊರುಗಳಿಂದ ಬಂದವರು ಶಾಸ್ತ್ರಿಗಳನ್ನು ನೋಡಲು ಎಡೆಬಿಡದೆ ಕಾದಿರುತ್ತಾರೆ. ಅವರೆಲ್ಲರಿಗೂ ಶಾಸ್ತ್ರಿಗಳು ಸಮಾಧಾನವಿತ್ತು, ನಗುಮುಖದಿಂದ ಸಂತೃಪ್ತಿಪಡಿಸುತ್ತಾರೆ. ಈ ಕಾರ್ಯಕ್ರಮ ರಾತ್ರಿ ೧೦ ಘಂಟೆಯುವರೆಗೂ ಸಾಗಿರುತ್ತದೆ. ತನ್ಮಧ್ಯೆ ದೂರವಾಣಿಯಿಂದ (Telephone) ಮಾತಾಡುವ ಅನೇಕ ಮಹನೀಯರು. ಇಷ್ಟಾದರೂ ಶಾಸ್ತ್ರಿಗಳು ಇಂದಿನ ತಮ್ಮ ಅರುವತ್ತೈದನೆಯ ವಯಸ್ಸಿನಲ್ಲೂ ಅದೇ ಸಹನೆ, ಹಸನ್ಮುಖ, ಸ್ಫೂರ್ತಿ, ಸಮಾಧಾನದಿಂದ ಮಾತಾಡುತ್ತಾರೆ. ಮಕ್ಕಳಿಂದ ಮುದುಕರವರೆಗೂ ಶಾಸ್ತ್ರಿಗಳು ತಮ್ಮ ಸ್ನೇಹದ ಸೆರಗನ್ನು ಹಾಸುತ್ತಾರೆ. ಅನುಭವದ ಆನಂದವನ್ನೀಯುತ್ತಾರೆ. ಆಳವಾದ ಅಭ್ಯಾಸದ ಧಾರೆಯೆರೆಯುತ್ತಾರೆ. ಮನೆಗೆ ಬಂದವರನ್ನು ಮೃದು ಮಾತುಗಳಿಂದ ಸ್ವಾಗತಿಸುತ್ತಾರೆ. ಯಥೋಚಿತವಾಗಿ ಆದರ ಸತ್ಕಾರ ಮಾಡುತ್ತಾರೆ. ಬಂದವರ ಮನಸೆಳೆಯುವ ಕಾರ್ಯದಲ್ಲಿ ಶ್ರೀಯುತರು ತುಂಬ ಕುಶಲರು. ಅವರ ಈ ಸ್ವಭಾವದಿಂದಲೇ ಕರ್ನಾಟಕದ ಮೂಲೆ ಮೂಲೆಗಳಿಂದ ಬೆಂಗಳೂರಿಗೆ ಬಂದ ಜನರು ಶಾಸ್ತ್ರಿಗಳನ್ನು ಕಾಣಲು ಹವಣಿಸುತ್ತಾರೆ. ಆದರೆ ಒಂದು ಮಾತು ವಿಷಾದದಿಂದ ಒಪ್ಪಿಕೊಳ್ಳಬೇಕಾಗಿದೆ. ಅವರು ನಡೆಸುತ್ತಿರುವ ಮುದ್ರಣಾಲಯದ ಕೆಲಸದ ನೂರಾರು ತಾಪತ್ರಯಗಳಿಂದ ದಣಿದ ಶಾಸ್ತ್ರಿಗಳು ರಾತ್ರಿ ಊಟ ಮುಗಿಸಿ ಹನ್ನೊಂದರನಂತರ ಒಂದೆರಡು ಗಂಟೆಯವರೆಗೂ ಬರೆಯುತ್ತಾರೆ. ಅವರಿಗೆ ಸಾಕಷ್ಟು ಅಭ್ಯಾಸ ಮಾಡಲು, ಬರೆಯಲು ಮುದ್ರಣಾಲಯದ ಕಾರ್ಯಭಾರದಿಂದ ಸಾಧ್ಯವಾಗದಾಗಿದೆ. ಇಂದು ಅವರಿಂದ ಕರ್ನಾಟಕ ಸಾಹಿತ್ಯದ ಪಕ್ವಫಲಗಳನ್ನು ಜನತೆ ನಿರೀಕ್ಷಿಸುತ್ತಿದೆ. ಇನ್ನು ಹೆಚ್ಚಿನ ಸೇವೆಯಿಂದ ಕನ್ನಡ ಸಾಹಿತ್ಯಶ್ರೀ ಶ್ರೀಮಂತವಾಗಬೇಕಾಗಿದೆ. ಅವರೇ ಹೇಳುವಂತೆ "ಬರೆಯುವುದು ಬಹಳವಿದೆ. ಆದರೆ ಬರೆಯಲು ಸಾಕಷ್ಟು ಸಮಯ ಸಿಗುವುದಿಲ್ಲ" ಎಂಬುದು ಗಮನಾರ್ಹ.

ಇಂದು ಅವರು ಅರುವತ್ತೈದರ ಹೊಸ್ತಿಲಲ್ಲಿದ್ದಾರೆ. ಕರ್ನಾಟಕಕ್ಕೆ ಇವರು ನೀಡಿದ ಅಖಂಡ ನಲವತ್ತು ವರ್ಷಗಳ ಸೇವೆಯಿಂದ ದಣಿದಿದ್ದಾರೆ. ಅವರಲ್ಲಿಂದು ದೇಹಶಕ್ತಿ ಕುಗ್ಗುವುದು ಸ್ವಾಭಾವಿಕ. ಆದರೆ ವಿಚಾರ ಶಕ್ತಿ ಮಾತ್ರ ದಿನದಿನಕ್ಕೆ ಬಳೆಯುತ್ತದೆ. ಅದು ಸೋಲರಿಯದ ಜೀವ. ಮುಪ್ಪರಿಯದ ಭಾವ. ಜೀವನದ ಸಾರ್ಥಕತೆಗೆ ಹೋರಾಡುವುದು ಅವರ ಗುರಿ. ವಿವಿಧ ಕ್ಷೇತ್ರಗಳಲ್ಲಿ ವೈವಿಧ್ಯಮಯ ಪಾತ್ರಗಳನ್ನು ನಿರ್ವಹಿಸಿ ಬಹುಮುಖ ಪ್ರತಿಭೆಯಿಂದ ಬೆಳಗಿದ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಜೀವನ ಕನ್ನಡಿಗರಿಗೊಂದು ಹೊಸ ಚೇತನ. ಅವರ ಜೀವನವು ನಿತ್ಯ ನೂತನ ಪ್ರಜ್ಞೆಯನ್ನು ನೀಡುವುದರಲ್ಲಿ ಸಂದೇಹವಿಲ್ಲ.

ಅವರೊಬ್ಬ ಹೆಸರಾಂತ ಕೀರ್ತನಕಾರರು. ಪೌರಾಣಿಕರು ಭಾಷಣಕಾರರು, ಲೇಖಕರು ಹಾಗೂ ಗ್ರಂಥಕಾರರು, ಕೀರ್ತನ ಕೇಸರಿ, ಕೀರ್ತನಾಚಾರ್ಯ, ಬಿರುದಾಂಕಿತರು, ಕೀರ್ತನಕಲೆಯಿಂದ ಕರ್ನಾಟಕದ ಮೂಲೆ ಮೂಲೆಗಳನ್ನು ಸಂದರ್ಶಿಸುವ ಭಾಗ್ಯ ಅವರಿಗೆ ಲಭಿಸಿತು. ಕರ್ನಾಟಕದ ಏಕೀಕರಣಕ್ಕಾಗಿ ಕನ್ನಡದ ಅಧ್ವರ್ಯ

ರಾಗಿ, ಕನ್ನಡತನದ ಜಾಗೃತಿಗಾಗಿ, ನಾಡಿನ ಹತ್ತೊಂಬತ್ತು ಜಿಲ್ಲೆಗಳ ತಾಲ್ಲೂಕುಗಳೆಲ್ಲವನ್ನೂ, ಸಾವಿರಾರು ಗ್ರಾಮಗಳನ್ನೂ ಸಂದರ್ಶಿಸಿ, ಅಲ್ಲಿಯ ಜನಜೀವನ, ಸಾಹಿತ್ಯ. ಐತಿಹಾಸಿಕ ಅವಶೇಷಗಳು, ಸ್ಥಳ ಪುರಾಣಗಳನ್ನು ಚೆನ್ನಾಗಿ ಅಭ್ಯಸಿಸಿದವರು ಶಾಸ್ತ್ರಿಗಳು. ಅವರು ಕಂಡುಂಡುದನ್ನು ಶರಣ ಸಾಹಿತ್ಯ ಮಾಸಪತ್ರಿಕೆಯಲ್ಲಿ ಕನ್ನಡ ಜನತೆ ಓದಿದೆ. ಅನೇಕ ಇತರ ಪತ್ರಿಕೆಗಳಲ್ಲಿಯೂ ತಮ್ಮ ಅನುಭವಗಳನ್ನು ಆಗಾಗ ಅವರು ಮೂಡಿಸಿದ್ದಾರೆ. ಹೊರನಾಡುಗಳಲ್ಲಿರುವ ಕರ್ನಾಟಕ ಸಂಘಗಳು ಶಾಸ್ತ್ರಿಗಳನ್ನು ಪ್ರತಿವರ್ಷವೂ ಕರೆಯುತ್ತಲೇ ಇರುತ್ತವೆ. ಅದಕ್ಕೆ ಕಾರಣ ಅವರಲ್ಲಿರುವ ಪಾಂಡಿತ್ಯ, ಪ್ರತಿಭೆ ಹಾಗೂ ಸಾಮಾಜಿಕ ಪ್ರಜ್ಞೆ. ಮದರಾಸು, ಹೈದರಾಬಾದು, ಮುಂಬಯಿ, ಕಾಶಿ, ಹೊಸ ದಿಲ್ಲಿ ಮೊದಲಾದ ಕಡೆಯ ಕರ್ನಾಟಕ ಸಂಘದವರು ಶಾಸ್ತ್ರಿಗಳನ್ನು ಆಹ್ವಾನಿಸಿ ಗೌರವಿಸಿರುವುದು ಗಮನಾರ್ಹ.

ಒಂದು ಪತ್ರಿಕೆಯನ್ನು ನಡೆಸುವುದು ಅಷ್ಟೊಂದು ಸುಲಭವಲ್ಲ. ಅದರಲ್ಲಿಯೂ ಕನ್ನಡ ಪತ್ರಿಕೆಗಳ ಬಾಳು ಶೋಚನೀಯ. ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು 'ಸ್ವತಂತ್ರ ಕರ್ನಾಟಕ' ವಾರ ಪತ್ರಿಕೆ ಸಂಪಾದಕರಾಗಿಯೂ, ಪರಿಷತ್ಪತ್ರಿಕೆಗಳ ಸಂಪಾದಕರಾಗಿಯೂ ಅನನ್ಯಿತ ಸೇವೆ ಸಲ್ಲಿಸಿದ್ದಾರೆ. ಇದಕ್ಕೂ ಮಿಗಿಲಾದ ಸೇವೆ 'ಶರಣ ಸಾಹಿತ್ಯ' ಎಂಬ ಮಾಸ ಪತ್ರಿಕೆಯನ್ನು ಮೂವತ್ತು ವರ್ಷಗಳಿಂದಲೂ ನಡೆಸಿಕೊಂಡು ಬಂದಿರುವ ಸಾಮರ್ಥ್ಯ. ಪತ್ರಿಕಾ ಪ್ರಪಂಚದಲ್ಲಿ ನೂರಾರು ಅಡೆತಡೆಗಳು, ಕಷ್ಟ-ನಷ್ಟಗಳು; ಕೆಲವು ಪ್ರಸಂಗಗಳು, ಕತ್ತೆಗೂ ಕಾಲು ಬೀಳುವ ಪ್ರಸಂಗ ತಪ್ಪಿದ್ದಲ್ಲ. ಶಾಸ್ತ್ರಿಗಳು ಧೈರ್ಯದಿಂದ ಬಂದಿರುವ ಸಮಸ್ಯೆಗಳಿಗೆಲ್ಲ ಎದೆಯಾನಿಸಿ ಕಳೆದ ಮೂವತ್ತು ವರ್ಷಗಳಿಂದಲೂ 'ಶರಣ ಸಾಹಿತ್ಯ' ನೀಡಿ ನಾಡಿನ ವಿದ್ವಾಂಸರ, ವಿದ್ಯಾರ್ಥಿಗಳ, ವಿವೇಕಿಗಳ ಮನ್ನಣೆಗೆ ಪಾತ್ರರಾಗಿದ್ದಾರೆ. ಶರಣ ಸಾಹಿತ್ಯ ಸಾಹಿತ್ಯಾಭ್ಯಾಸಿಗಳಿಗೊಂದು ಮಾರ್ಗದರ್ಶಿಕೆ ಅಥವಾ ದಾರಿದೀಪವೆಂದರೂ ತಪ್ಪಲ್ಲ. ಅವರದು ಕಾವ್ಯ ಸಂಶೋಧನೆ, ಚರಿತ್ರೆಯ ಮೇಲೆ ತುಂಬ ವಿಶ್ವಾಸ. ಅವರು ಕಷ್ಟಪಟ್ಟು ಸಂಪಾದಿಸಿದ ಗಣಸಹಸ್ರನಾಮಾವಳಿ, ವಿರೇಶ ಚರಿತೆ, ಕನ್ನಡ ಆದಿತ್ಯಪುರಾಣ, ಷಡಕ್ಷರ ಮಂತ್ರ ಮಹಿಮೆ, ಘನಲಿಂಗಿ ದೇವರ ವಚನ, ಪುರಾತನರ ತ್ರಿವಿಧಿ ಮೊದಲಾದ ಗ್ರಂಥಗಳು ಹಳೆಯ ಕಾವ್ಯಸುಮದ ಸೌರಭ್ಯವನ್ನು ನೀಡಿವೆ. ಅಂತೆಯೇ ಸರ್ವಜ್ಞಮೂರ್ತಿ, ವೀರಶೈವ ಮಹಾಪುರುಷರು, ವೀರಶೈವ ಸಾಹಿತ್ಯ ಮತ್ತು ಇತಿಹಾಸ (ನಾಲ್ಕು ಭಾಗಗಳು) ಮಾದೇಶ್ವರ ಚರಿತ್ರೆ, ಮಹಾಕವಿ ಷಡಕ್ಷರದೇವ, ಕರ್ನಾಟಕ ಸಂದರ್ಶನ, ಕೆಳದಿ ರಾಣಿ ಚನ್ನಮ್ಮಾಜಿ ಹಾಗೂ ಬಿದನೂರು, ಶಿವಪ್ಪ ನಾಯಕ ಗ್ರಂಥಗಳು ಕರ್ನಾಟಕದ ಚರಿತ್ರೆಯ ಮೇಲೆ ಕ್ಷಕಿರಣಬೀರಿ ನಿಂತಿವೆ. ಇವುಗಳಲ್ಲಿ ಕರ್ನಾಟಕ ಸಾಹಿತ್ಯ ಚರಿತ್ರೆ ಹಾಸು ಹೊಕ್ಕಿದೆ. 'ಜೀವನ ಚಿತ್ರಗಳು' ಐತಿಹಾಸಿಕ ಮೌಲ್ಯಗಳಿಂದ ಕೂಡಿವೆ. ಅಂದಿನ ರಾಜಕೀಯ ಸ್ಥಿತಿಯು ಸಮಾಲೋಚಿಸಲ್ಪಟ್ಟಿದೆ. ಆಧ್ಯಾತ್ಮಿಕ ದೃಷ್ಟಿ ಅಡಕಗೊಂಡಿದೆ. ಚರಿತ್ರೆಯ ಮೌಲ್ಯಗಳನ್ನು ಕಂಡುಹಿಡಿಯಲು ಶಾಸ್ತ್ರಿಗಳು, ಕನ್ನಡ, ಸಂಸ್ಕೃತ, ಮರಾಠಿ, ತೆಲುಗು, ತಮಿಳು ಗ್ರಂಥಗಳನ್ನು ಪರಿಶೀಲಿಸಿ ತುಲನಾತ್ಮಕ ವಿಮರ್ಶೆಯನ್ನು ಒದಗಿಸಿದ್ದಾರೆ. ಇಲ್ಲಿ ವೀರಶೈವ ಧರ್ಮ-ದರ್ಶನಗಳ ಕುರಿತು, ಕವಿ ಕಾವ್ಯಗಳ ಬಗೆಗೆ, ರಾಜ್ಯ ಸಮಸ್ಯೆಗಳ ಕುರಿತು, ತೀರ್ಥಕ್ಷೇತ್ರಗಳ ಕುರಿತು ವಿಸ್ತಾರವಾದ, ವೈಶಿಷ್ಟ್ಯಪೂರ್ಣವಾದ ವಿಮರ್ಶೆ ಅವರ ಗ್ರಂಥಗಳ ಜೀವಾಳವಾಗಿದೆ. ಇದಲ್ಲದೆ ಇವರೊಬ್ಬ ಸಮರ್ಥ ಕವಿಗಳೆಂಬುದರಲ್ಲಿ ಸಂದೇಹವಿಲ್ಲ. 'ಶೂಲಪಾಣಿ' ಎಂಬ ಕಾವ್ಯ ನಾಮದಿಂದ ಕನ್ನಡಿಗರಿಗೆ ಚಿರಪರಿಚಿತರಾದ ಶ್ರೀಯುತರು 'ದುಂಬಿ ಮತ್ತು ನಾದ' ಕವನ ಸಂಗ್ರಹ ನೀಡಿದ್ದಾರೆ. ಈಗಾಗಲೇ ಅವರು ಶರಣ ಸಾಹಿತ್ಯ ಗ್ರಂಥಮಾಲೆಯಿಂದ ಮೂವತ್ತಕ್ಕೂ ಮೇಲ್ಪಟ್ಟು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಇನ್ನೂ ಹತ್ತಾರು ಕಾವ್ಯಗಳ ಸಂಪಾದನಾಕಾರ್ಯ ನೂತನ ಗ್ರಂಥ ರಚನೆ ನಡೆದಿದೆ. ಆಕಾಶವಾಣಿಯಿಂದ ಇವರ ಭಾಷಣ, ಕವಿತೆ, ಶಬ್ದ ಚಿತ್ರ ಮೊದಲಾದುವನ್ನು ಆಗಾಗ ಜನ ಕೇಳಿರಬಹುದು.

ನೂರು ತಿಂಗಳುಗಳ ಸುದೀರ್ಘ ಆಳಿಕೆಯಲ್ಲಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಕನ್ನಡ ಸಾಹಿತ್ಯ ಪರಿಷತ್ತಿಗೊಂದು ಹೊಸ ರೂಪ, ಹೊಸ ಮೆರುಗು ನೀಡಿದರು. ಅವರು ಪತ್ರಿಕಾ ಪ್ರಕಾಶನ, ಗ್ರಂಥ ಪ್ರಕಾಶನ,

ಸಭೆ ಸಮಾರಂಭಗಳನ್ನು ಏರ್ಪಡಿಸುವುದು, ಸಮ್ಮೇಲನಗಳನ್ನು ಅಲ್ಲಲ್ಲಿ ಕವಿಗೋಷ್ಠಿಗಳನ್ನು ಏರ್ಪಡಿಸಿ, ಕನ್ನಡ ಶಬ್ದಕೋಶದ ಕಾರ್ಯ ಆರಂಭಿಸಿ ಕನ್ನಡ ನಾಡಿನ ಈ ಕೇಂದ್ರ ಸಂಸ್ಥೆಯನ್ನು ಬಲಗೊಳಿಸಿದರು. ಕನ್ನಡ ಪರೀಕ್ಷೆಗಳನ್ನು ಏರ್ಪಡಿಸಿದರು. ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳಿರುವಾಗ ಕನ್ನಡ ಸಾಹಿತ್ಯ ಪರಿಷತ್ತಿಗೊಂದು ಹೊಸ ಕಳೆ ಪ್ರಾಪ್ತವಾಗಿತ್ತು. ಅದೀಗ ನಿರಾಶೆಯ ಮುಗಿಲಿನಿಂದ ಆವರಿಸಿದೆ. ಅವರು ಪರಿಷತ್ತಿನಿಂದ ನಿವೃತ್ತರಾಗುವವರೆಗೂ ಕಳಕಳಿಯಿಂದ ಅಭಿಮಾನದಿಂದ ತಮ್ಮ ಮನೆಯ ಕೆಲಸವೆಂಬಂತೆ ಆತ್ಮೀಯತೆಯಿಂದ ದುಡಿದರು. 'ನಡೆವರೆಡಹುವರಲ್ಲದೆ ಕುಳಿತರೆಡಹುವರೆ' ಎಂಬ ರಾಘವಾಂಕನ ಮಾತು ಕನ್ನಡ ಕುಲಕೋಟಿಗೆ ಗೊತ್ತು. ಸಾಮಾಜಿಕ ಕಾರ್ಯಗಳಲ್ಲಿಯಂತೂ ಇದು ವೇದವಾಕ್ಯ. ಕೆಲವರು ಶಾಸ್ತ್ರಿಗಳ ಮೇಲೆ ಕ್ರಿಯಾಲೋಪವೆತ್ತಿದರು. ಶಾಸ್ತ್ರಿಗಳು ತಡಮಾಡದೆ ಪರಿಷತ್ತಿನ ಆಡಳಿತದ ಹೊರೆಯನ್ನು ತಪ್ಪಿಸಿಕೊಂಡರು. ಆದರೆ ಪರಿಷತ್ತಿನಿಂದ ಹೊರ ಬೀಳಲಿಲ್ಲ. ಅಧಿಕಾರದಿಂದ ಜಾರಿದರು, ಕನ್ನಡ ನುಡಿ ತಾಯಿಯ ಚರಣಗಳಿಂದ ದೂರ ಹೋಗಲಿಲ್ಲ. ಸ್ವತಂತ್ರವಾಗಿ ನಿಂತು ಒಂದು ಪರಿಷತ್ತು ಮಾಡುವಷ್ಟು ಕೆಲಸ ಅವರೊಬ್ಬರೇ ಮಾಡಿದ್ದಾರೆ. ಇದನ್ನು ಮನಗಂಡ ಭಾರತ ಸರಕಾರ 'ಪದ್ಮಶ್ರೀ' ಬಹುಮಾನವನ್ನು ಅವರಿಗೆ ನೀಡಿ ಗೌರವಿಸಿದೆ. ಮೈಸೂರು ರಾಜ್ಯ ಸಾಹಿತ್ಯ ಅಕಾಡೆಮಿ 'ರಾಜ್ಯ ಪ್ರಶಸ್ತಿ' ನೀಡಿದೆ.

ಮೈಸೂರು ಸರ್ಕಾರ 'ಪಂಡಿತರತ್ನಂ' ಬಿರುದು ಈ ಮೊದಲೇ ಕೊಟ್ಟಿದೆ. ಮಹಾರಾಜರು 'ಆಸ್ಥಾನ ವಿದ್ವಾನ್' ಪದವಿ ಇತ್ತಿದ್ದಾರೆ.

ಇಂದಿನ ಕರ್ನಾಟಕ ಭಾಷೆಯ ಮೇಲೆ, ಕನ್ನಡ ನಾಡಿನ ನೆಲದ ಬಗೆಗೆ ಕರ್ನಾಟಕದ ಗೌರವಕ್ಕೆ ಕುಂದು ಬರುವುದಾದರೆ ಶ್ರೀ ಶಾಸ್ತ್ರಿಗಳು ಕಿಡಿ ಕಾರುತ್ತಾರೆ. ಶಾಸ್ತ್ರಿಗಳ ಲೇಖನಿಕೆಗೆ ಬಿಡುವಿಲ್ಲ. ತಲೆಗೆ ಪುರಸೊತ್ತಿಲ್ಲ. ಬಾಯಿಗೆ ವಿರಾಮವಿಲ್ಲ: ಅವರಿಂದು ಗಡಿನಾಡು ಕ್ರಿಯಾ ಸಮಿತಿಯ ಅಧ್ಯಕ್ಷರು. ಸರಕಾರದ ಗಡಿ ಸಲಹಾ ಸಮಿತಿಯ ಸದಸ್ಯರು. ಕರ್ನಾಟಕದ ಗಡಿಗಳ ಬಗೆಗೆ ಶಾಸ್ತ್ರಿಗಳ ಲಕ್ಷ್ಯ ಕೇಂದ್ರೀಕೃತವಾಗಿದೆ. ಬೆಂಗಳೂರಿಗೆ ಬಂದ ಮಹಾಜನ ಆಯೋಗದ ಮುಂದೆ ಶ್ರೀಯುತರು ನೀಡಿದ ಸಾಕ್ಷ್ಯ ಅವರ ನಲವತ್ತು ವರ್ಷಗಳ ಅನುಭವ ಅಧ್ಯಯನ ಮತ್ತು ಪ್ರವಾಸಗಳ ಸಾಕ್ಷಿಯಾಗಿದೆ.

ಕರ್ನಾಟಕದ ಬಹುಮುಖ ಪ್ರತಿಭೆಯ ವ್ಯಕ್ತಿಯಾದ ಶ್ರೀ ಶಾಸ್ತ್ರಿಗಳು ಒಂದು ಶಕ್ತಿಯಾಗಿ ಬಾಳಿದ್ದಾರೆ. ಅವರು ನೂರು ವರುಷ ಬಾಳಲಿ, ಕನ್ನಡನಾಡು ನುಡಿಗಳ ಸೇವೆ ಮಾಡಲಿ ಎಂದು ಹೇಳುವಾಗ ಶ್ರೀ ಡಿ. ವಿ. ಜಿ. ಯವರ ಕಗ್ಗದ ಒಂದು ಮಾತು ನೆನಪಿಗೆ ಬರುತ್ತದೆ.

ವಿಸ್ತಾರದಲಿ ಬಾಳು, ವೈಶಾಲ್ಯದಿಂ ಬಾಳು||
ಕತ್ತಲೆಯ ಮೊಡಕು ಮೂಲೆಗಳ ಸೇರದಿರು||
ಭಾಸ್ಕರನನುಗ್ರಹವೆ ನೂತ್ನ ಜೀವನ ಸತ್ಯ|
ಮೃತ್ಯುನಿನಗಲ್ಪತೆಯೊ—ಮಂಕುತಿಮ್ಮ

ಶಾಂ. ಮಂ. ಕೃಷ್ಣರಾಯ, ಗೋವಾ

———

# ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು

ಕಾವ್ಯ, ಕೀರ್ತನೆ, ಪಾಂಡಿತ್ಯ, ಸಾಹಿತ್ಯ ಸಮಾಜ ರಾಜಕೀಯ ಮತ್ತು ಪತ್ರಿಕೋದ್ಯಮ-ಇವೆಲ್ಲವೂ ಒಂದೇ ಒಂದು ವ್ಯಕ್ತಿಯಲ್ಲಿ ಅಥವಾ ಆ ವ್ಯಕ್ತಿಯ ಚಟುವಟಿಕೆಗಳಲ್ಲಿ ಕಂಡು ಬಂದರೆ ಆ ವ್ಯಕ್ತಿ ಬರೇ ಒಂದು ವ್ಯಕ್ತಿ ಮಾತ್ರವಲ್ಲ, ಅದೊಂದು ಶಕ್ತಿ, ಸಂಸ್ಥೆ (An Institution) ಎಂದು ಹೇಳುತ್ತಾರೆ. ನಮ್ಮ ನಾಡಿನಲ್ಲಿ ಅಂಥಾ ಸಂಸ್ಥೆಗಳು, ಸಂಸ್ಥೆಗಳೆಂದೆನ್ನಿಸಿಕೊಳ್ಳುವ ಮಂದಿ ಎಷ್ಟು ಜನ ಇದ್ದಾರೋ ಎಂದು ಬಲ್ಲವರು ಹೇಳಬೇಕು. ಸಂಸ್ಕೃತಿ ಸಮಾಜ ಮತ್ತು ಸಾಹಿತ್ಯ ಇವು ಕರ್ಣಾಟಕದಲ್ಲಿ ಪಾರಂಪರ್ಯವಾಗಿ ಬಳೆದು ಬಂದ ಜೀವಾಳವಾಗಿದೆ. ಈ ಪರಂಪರೆಗೆ ಅನುಗುಣವಾಗಿ ಆ ಜೀವಾಳವನ್ನು ತಮ್ಮ ಜೀವನಾಡಿಗಳಲ್ಲಿ ಅರಗಿಸಿ ಹರಿಯಿಸಿಕೊಂಡಿರುವವರಲ್ಲಿ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಒಬ್ಬರು.

ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರು ಒಟ್ಟು ಸೇರಲಾರರು. ಆದರೆ, ಶಿವ, ಮೂರ್ತಿ ಮತ್ತು ಶಾಸ್ತ್ರಿ ಇವರು ಒಟ್ಟು ಸೇರಿ ಓರ್ವ ವ್ಯಕ್ತಿಯಾಗಿ ಕಾಣಿಸಿಕೊಂಡಿದ್ದರೆ ಅವರು ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು. 'ಶಿವ, ನಿಶ್ಚಲ ಶಿವಭಕ್ತರು, ವೀರಶೈವರು, ವೀರಶೈವ ಸಾಹಿತ್ಯ ಸುಧೆಯನ್ನು ಕುಡಿದು ಅರಗಿಸಿಕೊಂಡವರು. 'ಮೂರ್ತಿ, ವ್ಯಕ್ತಿಶಃ ಹೇಗೆ ಪ್ರತಿಭಾವಂತ ಮೂರ್ತಿಯೋ, ಅಂತೆಯೇ, ಕೀರ್ತನ, ಭಾಷಣ, ತತ್ತ್ವ ಪ್ರತಿಪಾದನೆಗಳಲ್ಲಿಯೂ ಅಕ್ಷರಶಃ ಸಜೀವಮೂರ್ತಿಯೆನಿಸಿಕೊಂಡಿದ್ದಾರೆ. ಸಂಸ್ಕೃತ, ಕನ್ನಡ ಮತ್ತು ಹಿಂದಿ ಸಾಹಿತ್ಯಗಳನ್ನು ಶಾಸ್ತ್ರೀಯವಾಗಿ ಕರತಲಾಮಲಕವಾಗಿಸಿಕೊಂಡ ಪ್ರವೀಣರು ಶಾಸ್ತ್ರಿಗಳು. ತೆಲಗು, ತಮಿಳುಗಳನ್ನೂ ಕೆಲ ಮಟ್ಟಿಗೆ ಪರಿಚಯ ಮಾಡಿಕೊಂಡವರು. ಹೀಗೆ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ ತಮ್ಮ ಆ ಹೆಸರು ಒಪ್ಪಿದ ಹಾಗೆ ಇತರ ಯಾರಿಗೂ ಅವರ ಆ ಹೆಸರುಗಳು ಅಷ್ಟರಮಟ್ಟಿಗೆ ಸಂಪೂರ್ಣವಾಗಿ ಒಪ್ಪಿದ ಹಾಗೆ ಕಾಣುವುದಿಲ್ಲ.

ಮಹಾ ವಿದ್ವಾಂಸರಾಗಿದ್ದ ಮೈಸೂರಿನ ಆಸ್ಥಾನ ಮಹಾವಿದ್ವಾನ್, ಕರ್ನಾಟಕ ಭಾಷಾರತ್ನಂ ಕೈ॥ಕರಿಬಸವ ಶಾಸ್ತ್ರಿಗಳ ಶಿಷ್ಯರಾದ, ಆಸ್ಥಾನ ಕವಿ, ಅಭಿನವ ಕಾಲಿದಾಸ ಕೈ॥ಬಸವಪ್ಪ ಶಾಸ್ತ್ರಿಗಳ ಪ್ರಶಿಷ್ಯರಾದ, ಬಿ. ಶಿವಮೂರ್ತಿ ಶಾಸ್ತ್ರಿಗಳು 'ಗುರುವಿನಂತೆ ಶಿಷ್ಯ' ಎಂಬಂತೆ ಶೋಭಿಸಿಕೊಂಡಿದ್ದಾರೆ. ಮೈಸೂರು ಮಹಾರಾಜರ ಆಸ್ಥಾನವನ್ನು ಬೆಳಗಿದ ಪ್ರಸಿದ್ಧ ವಿದ್ವಾಂಸರ ಪರಂಪರೆಗೆ ಶಾಸ್ತ್ರಿಗಳೂ ಸೇರಿದ್ದಾರೆ. ಕೀರ್ತನ, ಪುರಾಣ ಭಾಷಣಗಳೊಡನೆ ಆರಂಭಗೊಂಡ ಅವರ ಚಟುವಟಿಕೆಗಳು ಪಾಂಡಿತ್ಯವನ್ನೂ ಸಾಹಿತ್ಯವನ್ನೂ ಏಕಪ್ರಕಾರವಾಗಿ ಬಳೆಸಿಕೊಂಡು ಬಂದಿವೆ. ಅವರ ಸಂಭಾಷಣೆ ಹಾಗೂ ವಾಗ್ಧಾರೆಯು ನಿರರ್ಗಳವಾಗಿ ಹರಿಯುತ್ತದೆ. ಒಂದು ಮಾತಿಗೆ ಗಾದೆಯಾದರೆ, ಇನ್ನೊಂದರಲ್ಲಿ ಹಾಸ್ಯ, ಮತ್ತೊಂದರಲ್ಲಿ ತತ್ತ್ವ ಪ್ರತಿಪಾದನೆ ಎಂಬಂತೆ ನಡೆಯುತ್ತದೆ. ಅವರ ಮಾತಿನ ಧಾಟಿ ಮಹಾಸಭೆಗಳಲ್ಲಿ ಕೀರ್ತನ ಮತ್ತು ಭಾಷಣಗಳಿಂದ ತಮ್ಮ ವಾಗ್ಝಾಲದಿಂದ ಸಭಿಕರನ್ನು ಸ್ತಬ್ಧತೆಗೊಳಗಾಗಿಸುತ್ತಾರೆ. ಅವರಂತೆ ಚುರುಕಾಗಿ, ಸ್ವಾರಸ್ಯವಾಗಿ, ಶಾಸ್ತ್ರಾಧಾರ ಸಹಿತವಾಗಿ ಮಾತಾಡುವವರು ಕನ್ನಡನಾಡಿನಲ್ಲಿ ಅಪರೂಪವೆನ್ನಬಹುದು. ಅವರು ಕನ್ನಡ ನಾಡಿನಲ್ಲಿ ಹಿರಿಯ ವಾಗ್ಮಿಗಳೆನಿಸಿದ್ದಾರೆ.

ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ವೀರಶೈವ ಸಾಹಿತ್ಯದ ಬಗೆಗೆ, ಕರ್ಣಾಟಕದ ಹಲವು ಚಾರಿತ್ರಿಕ ಸ್ಥಳಗಳ ಬಗೆಗೆ ನಡೆಸಿದ ಪರಿಶೋಧನೆಯು ಅಪಾರವಾಗಿದೆ. ಮಾತ್ರವಲ್ಲ, ಹಿರಿಯ ಸಾಹಿತ್ಯವೂ ಆಗಿದೆ. ತಮ್ಮ 'ಕರ್ಣಾಟಕಸಂದರ್ಶನ' ಎಂಬ ಮಹಾಗ್ರಂಥದಲ್ಲಿ, ಅವರು ಕನ್ನಡ ನೆಲ, ಕುಲ, ಪೌರಾಣಿಕ ಸ್ಥಳ, ಪುಣ್ಯಕ್ಷೇತ್ರ ಇತ್ಯಾದಿಗಳ ಬಗೆಗೆ ಮಾಡಿದ ಪರಿಚಯವು ಅವರು ತಮ್ಮ ೪೦ ವರ್ಷಗಳ ಕಾಲ ಕರ್ಣಾಟಕವೆಲ್ಲಾ ಸುತ್ತಾಡಿ ಕೈಗೊಂಡ ನಿರಂತರ ಸೇವೆಯ ಫಲವಾಗಿದೆ. ಬಸವೇಶ್ವರ, ಷಡಕ್ಷರದೇವ, ರಾಘವಾಂಕ, ಇಕ್ಕೇರಿ ರಾಜವಂಶ, ಹಲವು ವೀರ

ಶೈವ ಕವಿಗಳು, ರಾಜರು, ಪಾಳೆಯಗಾರರು, ನಾಯಕರು, ಮಠಾಧೀಶ್ವರರು, ಪೊಟ್ಟಲಕೆರೆ ಶಾಸನ ಮೊದಲಾದವರ ಬಗೆಗೆ ಅವರು ನಡೆಸಿದ ಸಂಶೋಧನೆಯು ಬಹು ಆಳವೂ ಪ್ರೌಢವೂ ಆಗಿದೆ. ಅವರ ಆಕಾಂಕ್ಷೆ ಮಿಗಿಲಾದದು.

ಪದ್ಮಶ್ರೀ ಶಿವಮೂರ್ತಿಶಾಸ್ತ್ರಿಗಳು ಬರೇ ತನ್ನ ಕೋಣೆಯ ನಾಲ್ಕು ಗೋಡೆಗಳ ಮಧ್ಯೆ ಕುಳಿತುಕೊಂಡು ಬರೆಯುವ ನಿಷ್ಕ್ರಿಯ ಸಾಹಿತಿಯಲ್ಲ. ಕರ್ಣಾಟಕದ ಪ್ರತಿಯೊಂದು ತಾಲ್ಲೂಕು, ಜಿಲ್ಲೆ, ಚಾರಿತ್ರಿಕ ಸ್ಥಳ, ಪುಣ್ಯಕ್ಷೇತ್ರಗಳೆಲ್ಲವನ್ನೂ ಒಂದು ಮೂಲೆ ಯಿಂದ ಇನ್ನೊಂದಕ್ಕೆ ಎಂಬಂತೆ ಒಂದಲ್ಲ ಹಲವುಬಾರಿ ಪ್ರತ್ಯಕ್ಷ ಸಂದರ್ಶಿಸಿ ವಿಚಾರ ವಿನಿಮಯ ನಡೆಸಿ ಪೌರಾಣಿಕ ಮತ್ತು ಚಾರಿತ್ರಿಕ ವಿವರಗಳನ್ನು ಪರಿಶೀಲಿಸಿ, ತನ್ನ ಕೀರ್ತನ—ಭಾಷಣಗಳ ಮೂಲಕ ಜನಮನವನ್ನು ತಣಿಸಿ ನಡೆಸಿದ ಪ್ರಯತ್ನದ ಫಲವು ಇವರ ಗ್ರಂಥಗಳಲ್ಲಿ ಮೇಲಿಂದ ಮೇಲೆ ಕಾಣುತ್ತದೆ. ಹೀಗಾಗಿ ಇಡೀ ಕರ್ಣಾಟಕವೇ ಇವರ ಪರಿಶೋಧನಾ ಕೇಂದ್ರವಾಯಿತು. ಕನ್ನಡ ಭೂಮಿಯೇ ಇವರ ಸೇವೆ ಮತ್ತು ಆರಾಧನಾ ದೈವವಾಯಿತು. ಎಲ್ಲಕ್ಕೂ ಮಿಕ್ಕಿ ವೀರಶೈವ ಸಾಹಿತ್ಯದ ಸರ್ವ ರೂಪುರೇಖೆಯು ಇವರ ನಿತ್ಯದ ಪಂಚಾಕ್ಷರೀ ಮಂತ್ರ ವಾಯಿತು. ಸಮಗ್ರ ಭಾರತವನ್ನು ಸಂಚರಿಸಿದ್ದರಿಂದ ಅವರಅನುಭವ ಭಂಡಾರವು ಅಧಿಕವಾಯಿತು. ಹಾಗೂ ಅಧಿಕೃತವಾಯಿತು.

ಕನ್ನಡನುಡಿ, ನಾಡು ಮತ್ತು ಶ್ರೇಷ್ಠ ಕವಿಗಳ ಬಗೆಗೆ ಉದ್ದಾಮ ಗ್ರಂಥಗಳನ್ನು ಬರೆದ, ಮತ್ತು ಹಲವು ವಿಷಯಗಳ ಮೇಲೆ ಗ್ರಂಥಗಳನ್ನು ಸಂಗ್ರಹಿಸಿ ಸಂಪಾದಿಸಿದ ಮತ್ತು ಪ್ರಕಟಿಸಿದ, ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಕೇವಲ ಒಂದೇ ವಿಧದ ಅಭ್ಯಾಸ ಬಲಕ್ಕೆ ಒಳಗಾದವರೇನಲ್ಲ. ಸಾಹಿತಿಗಳು, ವಾಗ್ಮಿಗಳು, ಪಂಶೋಧಕರು ಹೇಗೋ ಹಾಗೆಯೇ ಅವರು ಕವಿಗಳೂ ಆಗಿದ್ದಾರೆ. ಹಲವು ವಿಷಯಗಳ ಬಗೆಗೆ ತಾವು ನೋಡಿದ ತಿಳಿದ ಮತ್ತು ತಮಗೆ ಶ್ರೇಷ್ಠ ವ್ಯಕ್ತಿಗಳೆಂದೆನ್ನಿಸಿದವರನ್ನು ಕುರಿತು ಕವಿತೆಗಳನ್ನು ರಚಿಸಿದ್ದಾರೆ. ಆಧುನಿಕ ಹಾಗೂ ಪ್ರಾಚೀನ ಕಾವ್ಯ ನಿರ್ಮಾಣದ ಒಲವು ಶಾಸ್ತ್ರಿಗಳಲ್ಲಿ ಮೂರ್ತಿವತ್ತಾಗಿ ಬಂದಿದೆ. ಕಂದ, ವೃತ್ತ, ಷಟ್ಪದಿ, ಚೌಪದಿ, ತ್ರಿಪದಿ ಮತ್ತು ನವ್ಯ ಕವನಗಳು ಇವರ ವಿದ್ವತ್ತು, ಶೈಲಿ, ಸಂಸ್ಕಾರಗಳ ಪ್ರತಿಪಾದಕಗಳಾಗಿವೆ. "ದುಂಬಿ-ನಾದ" ಎಂಬ ಸಂಗ್ರಹದಲ್ಲಿ ಅವರ ಕವನಗಳನ್ನು ಓದಿ ನಾವು ಮಿಗಿಲಾಗಿ ಹರ್ಷಿಸಬಹುದು.

ಶ್ರೀ ಬಿ.ಶಿವಮೂರ್ತಿಶಾಸ್ತ್ರಿಗಳ ಬಹುಮುಖವಾದ ಈ ಸಾಹಿತ್ಯ ನಿರ್ಮಾಣವು ಒಂದು ಕಡೆ ಅವರೇ ಹೇಳಿದಂತೆ "ಮಳೆ ಹನಿ ನದಿಯಾದಂತೆ, ಕಾಸು ಕೂಡಿ ನಿಧಿಯಾದಂತೆ ಆಗಿದೆ ನನ್ನ ಪ್ರಯತ್ನ" ಆದರೆ ಅವರ ಈ 'ಪ್ರಯತ್ನವು' ಪ್ರಯತ್ನ ಮಾತ್ರ ಆಗಿರದೆ ಸಿದ್ಧಿಯನ್ನೂ ಪಡೆದಿದೆ ಎಂದು ನಾವು ಧಾರಾಳವಾಗಿ ಹೇಳಹುದು.

ಬಹುಶ್ರುತರಾದ ಶಾಸ್ತ್ರಿಗಳ ವರ್ಚಸ್ಸಿಗೆ ಇನ್ನೊಂದು ದೊಡ್ಡ ಆಧಾರವೆಂದರೆ ಅವರ ಪತ್ರಿಕೋದ್ಯಮವಾಗಿದೆ. ಐದುವರ್ಷಗಳ ಕಾಲ 'ಸ್ವತಂತ್ರ ಕರ್ಣಾಟಕ" ಪತ್ರಿಕೆಯನ್ನು ನಡೆಸಿದ ಇವರು ತಮ್ಮ "ಶರಣ ಸಾಹಿತ್ಯ ಮಾಲೆ"ಯ ಮೂಲಕ ಹಲವು ಗ್ರಂಥಗಳನ್ನು ಪ್ರಕಟಿಸಿದ್ದಾರೆ. "ಶರಣ ಸಾಹಿತ್ಯ" ಪತ್ರಿಕೆಯನ್ನು ಕಳೆದ ೩೦ ವರ್ಷಗಳಿಂದಲೂ ನಡೆಸಿಕೊಂಡು ಬಂದ ಅವರ ಈ ಸಾಹಸವು ನಿಜಕ್ಕೂ ಪ್ರಶಂಸನೀಯವಾಗಿದೆ. ಇದರಲ್ಲಿ ಉತ್ತಮ ಲೇಖನಗಳು ಮಾತ್ರವಲ್ಲದೆ, ವಿಚಾರ ತರಂಗ, ಗ್ರಂಥ ವಿಮರ್ಶೆ, ಕನ್ನಡ ಶಬ್ದವಿಜ್ಞಾನ, ಅಂಕೆ ಅಂಶಗಳು ಇತ್ಯಾದಿಗಳನ್ನು ಕುರಿತು ಪ್ರಕಟವಾಗುವ ಈ ಪತ್ರಿಕೆಯು ಹಿರಿಯರಿಗೆ ಹೇಗೋ ಹಾಗೆ ಕಿರಿಯರಿಗೂ ಉಪಯುಕ್ತವಾಗಿದೆ. ಈಗ ೩೦ ವರ್ಷಗಳ ಕಾಲದ ಅವಧಿಯನ್ನು ಯಶಸ್ವಿಯಾಗಿ ಕಳೆದ "ಶರಣ ಸಾಹಿತ್ಯ"ವು ಇನ್ನೂ ಹಲವಾರು ವರ್ಷಗಳ ಉತ್ತಮ ಸೇವೆಯನ್ನು ನಾಡಿಗೆ ಈಯುವುದೆಂದು ನಂಬಿರುತ್ತೇವೆ. ಶರಣ ಸಾಹಿತ್ಯದಲ್ಲಿ ಬರುವ ಹಲವು ಲೇಖನಗಳು ಗ್ರಂಥಕಾರರಿಗೂ, ಸಂಶೋಧಕರಿಗೂ, 'ಡಾಕ್ಟರೇಟು' ಪಡೆಯುವವರಿಗೂ' ಸಂಶೋಧಕರಿಗೂ ನೆರವಾಗಿರುವುದನ್ನು ಇಲ್ಲಿ ನಾವು ಸ್ಮರಿಸಿಕೊಳ್ಳಬಹುದು.

ಸಾಹಿತ್ಯ ಮತ್ತು ಪತ್ರಿಕೋದ್ಯಮ ರಂಗದಿಂದಿಡಿದು ಸುಮಾರು 1926 ರಿಂದೀಚೆಗೆ ಈ ನಲವತ್ತು ವರ್ಷದ ಅವಧಿಯಲ್ಲಿ ಶ್ರೀ ಶಿವಮೂರ್ತಿಶಾಸ್ತ್ರಿಗಳು ಹಲವು

ಬಗೆಯಲ್ಲಿ ನಾಡಿನ ಸೇವೆಯನ್ನು ಕೈಗೊಂಡಿದ್ದಾರೆ. ಹಲವಾರು ಸಾಹಿತ್ಯಕೂಟ, ಸಭೆ, ಸಮಿತಿಯೆಂಬುದಾಗಿ ದುಡಿದಿದ್ದಾರೆ. ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪದವಿಯನ್ನು ಎಂಟೂಕಾಲು ವರ್ಷಗಳ ಕಾಲ ಹೊತ್ತು (೧೦೦ ತಿಂಗಳ ಕಾಲ) ಅದರ ಬಳೆವಣಿಗೆಗೆ ಅಪಾರವಾಗಿ ಮತ್ತು ಉತ್ಸಾಹದಿಂದ ಹೆಣಗಿದ್ದಾರೆ. ನಾಡೆಲ್ಲಾ ಸುತ್ತಾಡಿ ಕರ್ಣಾಟಕದ ಏಕೀಕರಣ, ಸಾಹಿತ್ಯಾಭಿವೃದ್ಧಿಗಳೇ ಮೊದಲಾದುವುಗಳ ಬಗೆಗೆ ತಮ್ಮ ಕೀರ್ತನ ಭಾಷಣಗಳ ಮೂಲಕ ನಾಡಿನಲ್ಲಿ ಜನ ಜಾಗೃತಿಯನ್ನು ಉಂಟು ಮಾಡಿದ್ದಾರೆ. ನಾಡನ್ನು ಒಂದುಗೂಡಿಸಲು ಜಾಗ್ರತಗೊಳಿಸಲು ಅವರು ಮಾಡಿದ ಸೇವೆ ಸಾಮಾನ್ಯವಲ್ಲ. ಕನ್ನಡದ ಹುಚ್ಚು, ಕೆಚ್ಚು ಮತ್ತು ಮೆಚ್ಚುಗಳಿಂದ ಅವರು ಸ್ಫೂರ್ತಿಗೊಂಡು ಈ ಮಹತ್ಕಾರ್ಯವೆಸಗಿದ್ದಾರೆ. ಕರ್ಣಾಟಕದ ಇಂದಿಗೂ ಗಡಿನಾಡಿನ ಬಗೆಗೆ ಅವರು ಹಗಳಿರುಳೂ ಶ್ರಮಿಸುತ್ತಿದ್ದಾರೆ.

"ಆಸ್ಥಾನ ವಿದ್ವಾನ್" ಪದವಿಯಿಂದ ಹಿಡಿದು ಶ್ರೀ ಶಿವಮೂರ್ತಿಶಾಸ್ತ್ರಿಗಳು ಇಡೀ ಕರ್ನಾಟಕವನ್ನೇ ತಮ್ಮ "ಆಸ್ಥಾನ"ವನ್ನಾಗಿ ಮಾಡಿಕೊಂಡಿದ್ದಾರೆ. ಕೀರ್ತನ, ವ್ಯಾಖ್ಯಾನ ಕಲೆಗಳಲ್ಲಿ ಜನಜನಿತರಾದ ಅವರು 'ಕೀರ್ತನಾಚಾರ್ಯ' ಎಂಬ ಪ್ರಶಸ್ತಿಯನ್ನು ನ್ಯಾಯವಾಗಿ ಪಡೆದಿದ್ದಾರೆ. ಸಂಸ್ಕೃತ ಮತ್ತು ಕನ್ನಡ ಭಾಷಾ ವಾಙ್ಮಯಗಳಲ್ಲಿ ಅಲ್ಲದೆ ಪ್ರಾಪಂಚಿಕ ವಿಚಾರ ಜ್ಞಾನದಲ್ಲೂ ಪಳಗಿದ ಇವರು "ವಿದ್ಯಾವಾರಿಧಿ" ಎಂದು ಅನ್ನಿಸಿಕೊಂಡಿದ್ದಾರೆ. ಕರ್ಣಾಟಕದಲ್ಲಿ ಇವರು ನಡೆಯದ ಎಡೆಯಿಲ್ಲ, ನೋಡದ ಬೀಡಿಲ್ಲ, ಸುತ್ತಾಡದ ಕ್ಷೇತ್ರವಿಲ್ಲ. ಆದುದರಿಂದ ಶಾಸ್ತ್ರಿಗಳು ನಿಜವಾಗಿಯೂ "ಕರ್ಣಾಟಕ ವಿಭೂಷಣ"ರೇ ಆಗಿದ್ದಾರೆ.

ಸುಮಾರು 1947ರ ಕಾಲದಲ್ಲಿ ಅಂದಿನ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೊಡನೆ ನಾವು ಕೆಲವರು ಕರ್ಣಾಟಕದ ಪ್ರವಾಸ ಮಾಡುತ್ತಾ ಒಂದು ದಿನ ಚಿಕ್ಕ ಊರಿನಲ್ಲಿ ಉಳಿದುಕೊಂಡೆವು. ಅಲ್ಲಿ ಆಗ ವಿದ್ಯುಚ್ಛಕ್ತಿಯೇನೂ ಇರಲಿಲ್ಲ. ನಮ್ಮೊಡನೆ ಇದ್ದ ಪರಿಷತ್ತಿನ ಅಧ್ಯಕ್ಷರು ಆ ಊರಿನ ಓರ್ವರೊಡನೆ, "ಇಲ್ಲಿ ವಿದ್ಯುಚ್ಛಕ್ತಿ ಬೆಳಕು ಇಲ್ಲವೆ ?" ಎಂದು ಕೇಳಿದರು. ಅದಕ್ಕೆ ಉತ್ತರವಾಗಿ ಅವರು, 'ನಮಗೆಲ್ಲಿ ಸ್ವಾಮಿ ಆ ಬೆಳಕು ? ನಮಗೆ ನೀವೇ ಬೆಳಕು' ಎಂದು ಅಂದದ್ದು ಸಮಂಜಸವೂ, ಯೋಗ್ಯವೂ ಆದ ಮಾತಾಗಿತ್ತು. ಶ್ರೀ ಶಿವಮೂರ್ತಿಶಾಸ್ತ್ರಿಗಳನ್ನು 'ಸಮಾಜ ಭಾಸ್ಕರ' ಎಂದು ಕರೆದಾಗ ನಾವು ಮೇಲಿನ ಮಾತನ್ನು ನೆನಪಿಡುವುದು ಯೋಗ್ಯವಿದೆ. ಆದರೆ ಇವೆಲ್ಲಾ ಬಿರುದುಗಳಿಗೆ ಕಲಶಪ್ರಾಯವಾಗಿ ಶಾಸ್ತ್ರಿಗಳು ಬರೇ ಪಂಡಿತರು ಮಾತ್ರವಲ್ಲ. 'ಪಂಡಿತ ರತ್ನಂ' ಎಂಬ ಬಿರುದಿನಿಂದ ಮೈಸೂರು ಸರ್ಕಾರದಿಂದ ಕರೆಯಲ್ಪಟ್ಟಿದ್ದು ನಿಜಕ್ಕೂ ಅವರಿಗೆ ಒಪ್ಪುವಂಥದೇ ಆಗಿದೆ. ಕೀರ್ತನ ಕೇಸರಿ ಎಂಬುದು ಅವರಿಗೆ ಕನ್ನಡ ಜನ ಮೆಚ್ಚಿ ಕೊಟ್ಟ ಮೊದಲನೆಯ ಬಿರುದಾಗಿದೆ ಎಂಬುದು ಇಲ್ಲಿ ಗಮನಾರ್ಹವಾಗಿದೆ.

ಇಂದು ಶಾಸ್ತ್ರಿಗಳು ಕೇವಲ 'ಶಾಸ್ತ್ರಿ'ಗಳು ಅಲ್ಲ. ಕೇವಲ 'ಪಂಡಿತ ರತ್ನಂ' ಮಾತ್ರ ಅಲ್ಲ. ಅವರು ಕರ್ಣಾಟಕದ ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಓರ್ವ ಹಿರಿಯ ಮುಂದಾಳು ಆಗಿದ್ದಾರೆ. ಮೈಸೂರು ಸರ್ಕಾರವು ಆಗಿಂದಾಗ್ಗೆ ರಚಿಸುತ್ತಿರವ ಪ್ರಮುಖ ಸಮಿತಿಗಳಲ್ಲಿ ಅವರೋರ್ವ ಗಣ್ಯ ಸದಸ್ಯರಾಗಿದ್ದಾರೆ. ಸಾಹಿತ್ಯ ಅಕ್ಯಾಡಮಿ, ಸಂಗೀತ ಅಕ್ಯಾಡಮಿ, ಕನ್ನಡ ನಿಘಂಟು, ಕನ್ನಡ ವಸ್ತು ಕೋಶ, ಬಸವೇಶ್ವರ ಪುಣ್ಯೋತ್ಸವ ಸಮಿತಿ, ಗಡಿಸಲಹಾ ಸಮಿತಿ, ಆಕಾಶವಾಣಿ ಸಲಹಾಸಮಿತಿ, ರಾಜ್ಯೋತ್ಸವ ಸಮಿತಿ ಇತ್ಯಾದಿಗಳಲ್ಲಿ ಅವರು ಇಂದಿಗೂ ಸದಸ್ಯರು. ಹಿಂದೆ ಸಂಸ್ಕೃತ ಬೋರ್ಡ್, ಪಠ್ಯಪುಸ್ತಕ ಸಮಿತಿಗಳಲ್ಲೂ ಅವರು ಸೇವೆ ಸಲ್ಲಿಸಿರುವುದುಂಟು. ಕನ್ನಡ ನಾಡು ಗಡಿಭಾಗಗಳನ್ನೂ, ಗೋವಾ ಮೊದಲಾದ ಸ್ಥಳಗಳನ್ನೂ ಸಂದರ್ಶಿಸಿ ಜನಜಾಗೃತಿಯನ್ನು ಪ್ರಚೋದಿಸಿ ಸ್ತುತ್ಯರ್ಹವಾದ ಕೆಲಸವನ್ನು ಶ್ರಮವಹಿಸಿ ಮಾಡಿದ್ದಾರೆ. ಗಡಿನಾಡು ಕ್ರಿಯಾಸಮಿತಿಯ ಶ್ರೇಷ್ಠ ಅಧ್ಯಕ್ಷರಾಗಿದ್ದಾರೆ. ಗಡಿ ಸಮಸ್ಯೆಗಳ ಪರಿಶೀಲನೆ ಬಗೆಗೆ ಸರಕಾರದಿಂದ ಆರಿಸಲ್ಪಟ್ಟ ಓರ್ವ ಪ್ರತಿಭಾವಂತ ಸದಸ್ಯರಾಗಿದ್ದಾರೆ.

ಇಷ್ಟೇ ಅಲ್ಲ, ಶ್ರೀ ಶಿವಮೂರ್ತಿಶಾಸ್ತ್ರಿಗಳ ವೇಳೆಯೆಲ್ಲಾ ಸಾರ್ವಜನಿಕ ಚಟುವಟಿಕೆಗೆಂದು ವಿನಿಯೋಗ

ವಾಗುತ್ತದೆ. ಅವರ ಭಾಷಣವೇರ್ಪಡದ ಸ್ಥಳವಿಲ್ಲ ; ಸಂಸ್ಥೆಯಿಲ್ಲ, ಪುಣ್ಯಕ್ಷೇತ್ರಗಳಿಲ್ಲ, ಮಠಗಳಿಲ್ಲ, ವಿಶ್ವವಿದ್ಯಾಲಯಗಳಿಲ್ಲ, ಸಾಹಿತ್ಯ ಸಂಘಗಳಿಲ್ಲವೆಂಬಂತೆ ಒಂದಲ್ಲ ಒಂದು ಸ್ಥಳದಲ್ಲಿ ಶಾಸ್ತ್ರಿಗಳು ಇದ್ದೇಇದ್ದಾರೆ. ಬಿಡುವಿಲ್ಲದ ರೀತಿಯಲ್ಲಿ ಅವರ ಸೇವೆಯು ನಿರರ್ಗಳವಾಗಿ ಹರಿಯುತ್ತದೆ. ಕರ್ನಾಟಕ ಮಾತ್ರವಲ್ಲ, ಇಡೀ ಭಾರತವೆಲ್ಲಾ ಎಂಬಂತೆ ಅವರು ಹರಿದ್ವಾರದಿಂದ ರಾಮೇಶ್ವರದವರೆಗೆ, ಕುರುಕ್ಷೇತ್ರದಿಂದ ಋಷೀಕೇಶದವರೆಗೆ ಸಂಚರಿಸಿದ್ದಾರೆ. ನಾಡಿನ ಹಲವು ಆಢ್ಯ ಮಹನೀಯರಲ್ಲಿ ಮಾತುಕತೆ ನಡೆಸಿದ್ದಾರೆ. ತಮ್ಮ ವಿಚಾರಗಳನ್ನು ಚೆನ್ನಾಗಿ ದೃಢಪಡಿಸಿಕೊಂಡಿದ್ದಾರೆ.

ಶ್ರೀ ಶಿವಮೂರ್ತಿಶಾಸ್ತ್ರಿಗಳಿಗೆ ಕಳೆದ ಗಣರಾಜ್ಯದ ದಿನದಂದು (ತಾ|| ೨೬-೧-೬೬) ಭಾರತದ ರಾಷ್ಟ್ರಾಧ್ಯಕ್ಷರು "ಪದ್ಮಶ್ರೀ" ಎಂಬ ರಾಷ್ಟ್ರೀಯ ಬಿರುದನ್ನು ಇತ್ತು ಗೌರವಿಸಿದ್ದು ಅವರ ನಾಡು ಮತ್ತು ನುಡಿ ಸೇವೆಯ ವ್ಯಾಪ್ತಿ ಎಷ್ಟೆಂಬುದನ್ನು ಸೂಚಿಸುತ್ತದೆ. ಅಲ್ಲದೆ ೧೯೬೬ ನವಂಬರ್ ತಿಂಗಳ ೨ ರಂದು ರಾಜ್ಯ ಸರಕಾರವು ಅವರಿಗೆ ಸಾಹಿತ ಪ್ರಶಸ್ತಿಯನ್ನೂ ಇತ್ತು ಗೌರವಿಸಿ ಅವರ ಇಷ್ಟಮಿತ್ರರ ಮತ್ತು ನಾಡಿನ ಜನರ ಅಭಿಮಾನಾದರಗಳನ್ನು ಪುರಸ್ಕರಿಸಿದ್ದಾರೆ. ಇಂತಹ ಸಮರ್ಥರೂ ದಕ್ಷರೂ ಆದ ಸಾಹಿತಿ, ದೇಶಾಭಿಮಾನಿ, ಹಾಗೂ ಸಮಾಜಸೇವಕರನ್ನು ನಮ್ಮ ಸರಕಾರವು ಬೇಗನೆ ಶಾಸನ ಸಭೆಯ ಓರ್ವ ಪ್ರತಿನಿಧಿಯಾಗಿ ಆರಿಸಿ ಅವರ ಮಿಗಿಲಾದ ಜ್ಞಾನಾನುಭವಗಳ ಫಲವನ್ನು ಇನ್ನಷ್ಟು ನಮ್ಮ ನಾಡು ಹೊಂದಲು ಅವಕಾಶವೀಯುವದೆಂದು ನಾವು ಆಶಿಸುತ್ತೇವೆ ನಮ್ಮ ವಿಶ್ವವಿದ್ಯಾನಿಲಯಗಳು ಇಂತಹ ವಿಚಾರವಂತ ವಿದ್ವಾಂಸರಿಗೆ 'ಡಾಕ್ಟರೇಟ್' ಬಿರುದು ಕೊಟ್ಟು ಗೌರವಿಸುವರೆಂದು ಕೂಡ ನಾನು ನಂಬುತ್ತೇನೆ. ಇದಕ್ಕೆ ಅವರ ಸಂಶೋಧನೆಗಳು ಅರ್ಹವಾಗಿವೆ. ಶಾಸ್ತ್ರಿಗಳು ವಿಶ್ವವೆಂಬ ವಿದ್ಯಾಲಯದಲ್ಲಿ ಚೆನ್ನಾಗಿ ಕಲಿತು ಸಿದ್ಧರಾದವರು.

ಶ್ರೀ ಶಿವಮೂರ್ತಿಶಾಸ್ತ್ರಿಗಳು ತುಮಕೂರಿನಲ್ಲಿ ಹುಟ್ಟಿದವರು. (೧೯೦೩) ಬಾಲ್ಯದ ವಿದ್ಯಾಭ್ಯಾಸವನ್ನು ಮಠಾಧೀಶ್ವರರ ಸನ್ನಿಧಿಯಲ್ಲಿ ಪಡೆದರು. ಯುವಕರಾಗಿದ್ದಾಗಲೇ ತಮ್ಮ ಬುದ್ಧಿಬಲ, ಜ್ಞಾನಬಲಗಳನ್ನು ಬಹುಮುಖವಾಗಿ ತೋರಿಸಿದರು. ಸಂಸ್ಕೃತ ಮತ್ತು ಕನ್ನಡದಲ್ಲಿ ಅಪಾರ ಜ್ಞಾನವನ್ನು ಸಂಪಾದಿಸಿದರು. ಅಂದಿನಿಂದ ಈ ನಲವತ್ತು ವರ್ಷಗಳ ಕಾಲದ ಅವರ ಸೇವೆಯು ಕನ್ನಡ ನಾಡಿನಲ್ಲಿ ಬಹುಮುಖವಾಗಿ ಹರಿದಿದೆ. ಈಗ ಅವರು ನಡೆದಾಡುವ ಪುಸ್ತಕ ಭಂಡಾರವೆನಿಸಿದ್ದಾರೆ.

ವೈಯುಕ್ತಿಕವಾಗಿ ಶ್ರೀ ಶಿವಮೂರ್ತಿಶಾಸ್ತ್ರಿಗಳು ಸರಳ ಹಾಗೂ ಸೌಹಾರ್ದತೆಯಿಂದ ಕೂಡಿದ ವ್ಯಕ್ತಿಯಾಗಿದ್ದಾರೆ. ಆದರೆ ವಾದವಿವಾದಗಳಲ್ಲಿ ಸಿಂಹಪ್ರಾಯರೆನಿಸುತ್ತಾರೆ. ಬೆಂಗಳೂರು ನಗರದಲ್ಲಿ ಜೀವಿಸುವವರಾದರೂ ಅವರು ನಾಡಿನ ಸಂಸ್ಕೃತಿ ಸಂಸ್ಕಾರಗಳನ್ನು 'ಹಳ್ಳಿಯಿಂದ ಡಿಲ್ಲಿ'ಗೆ ಹೊತ್ತು ತಂದಂತೆ ಸರಳ ಜೀವನವನ್ನೇ ಅನುಸರಿಸುತ್ತಾರೆ. ಅವರ ಬಳಿಗೆ ಹೋದವರಿಗೆ ತಣ್ಣನೆಯ ಮಜ್ಜಿಗೆಯನ್ನಿತ್ತು, ಬಿಸಿಬಿಸಿ ಕಾಫಿಯಿತ್ತು ತಮ್ಮ ಸಾಂಸ್ಕೃತಿಕ ಪಾರಂಪರ್ಯದ ಹಿರಿಮೆಯನ್ನು ಪ್ರದರ್ಶಿಸುತ್ತಾರೆ. ಅವರು ಓದುವ, ಬರೆಯುವ ಕೊಠಡಿಯು ಶತಮಾನಗಳ ಕಾಲದ ಸಹಸ್ರಾರು ಗ್ರಂಥಗಳು, ತಾಳೆ ಓಲೆಗಳು ಇತರ ಲಿಖಾವಟ್ಟುಗಳಿಂದ ತುಂಬಿದ್ದು ಅದರ ಮಧ್ಯದಲ್ಲಿ ಹುದುಗಿ ಜ್ಞಾನೋಪಾಸನೆಯಲ್ಲಿ ಕುಳಿತಿರುವ ಶಾಸ್ತ್ರಿಗಳು ಅದರಿಂದ ತಮ್ಮ ತಲೆಯನ್ನು ಮಾತ್ರ ಹೊರಗೆ ಚಾಚಿರುತ್ತಾರೆ. ಇದು ಅವರ ಜ್ಞಾನಲಾಲಸೆಯ ಸುಸ್ಪಷ್ಟ ನಿದರ್ಶನವಾಗಿದೆ.

ಈ ರೀತಿ ಶಿವಮೂರ್ತಿಶಾಸ್ತ್ರಿಗಳು ನಾಡು ಮತ್ತು ನುಡಿಯ ಸೇವೆಯನ್ನೇ ಒಂದು ದೀಕ್ಷೆಯಾಗಿ ಮತ್ತು ಜೀವನದ ಧ್ಯೇಯವಾಗಿ ಕೈಗೊಂಡು, ನಾಡಿನ, ಜನರ, ಜನತಾ ಸರಕಾರದ ಮನ್ನಣೆಯನ್ನೂ ಸೌಹಾರ್ದತೆಯನ್ನೂ ಯಥೇಚ್ಛವಾಗಿ ಪಡೆದಿದ್ದಾರೆ. ಇನ್ನೂ ಪಡೆಯಲಿದ್ದಾರೆ. ಅವರ ಸೇವೆಯು ಇನ್ನೂ ಬಹುಮುಖವಾಗಿ ಬೆಳಗಲಿ, ಅವರು ಶತಾಯುಗಳಾಗಲಿ. ಅವರ ಪ್ರಯತ್ನಗಳು ಫಲಿಸಲಿ ಎಂದು ನಾವು ಅಭಿಮಾನ ಪೂರ್ವಕವಾಗಿ ದೇವರನ್ನು ಪ್ರಾರ್ಥಿಸುತ್ತೇವೆ.

---

ಡಾ|| ಐ. ಮಾ. ಮು[illegible]

## ಕೀರ್ತನಕೇಸರಿ, ಕೀರ್ತನಾಚಾರ್ಯ

# ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

ಕೀರ್ತನ ಕಲೆಗೆ ಅಪಾರ ಸೇವೆ ಸಲ್ಲಿಸಿರುವ ಮಹನೀಯರಲ್ಲಿ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಒಬ್ಬರು ಎಂಬುದು ಎಲ್ಲರಿಗೂ ತಿಳಿದ ಸಂಗತಿಯೇ. ಈ ಕ್ಷೇತ್ರದಲ್ಲಿ ಇವರು ತಮ್ಮದೇ ಆದ ಒಂದು ಹೆಸರು ಗಳಿಸಿದ್ದಾರೆ. ಕೀರ್ತನಲೋಕ ಇವರನ್ನು 'ರಾಜಕೀಯ ಕೀರ್ತನಕಾರರು' ಎಂದು ಕರೆಯುತ್ತದೆ.

ತಮ್ಮಲ್ಲಿ ರಕ್ತಗತವಾಗಿದ್ದ ಕೀರ್ತನಕಲೆಯನ್ನು ಶ್ರೀಯುತರು ಸ್ವಾತಂತ್ರ್ಯ ಹೋರಾಟದಲ್ಲಿ ದೇಶಪ್ರೇಮವನ್ನು ಹೆಚ್ಚಿಸುವುದಕ್ಕೆ ಹಾಗೂ ಕರ್ನಾಟಕ ಏಕೀಕರಣ ಸಾಧನೆಗೆ ವಿನಿಯೋಗಿಸಿದ್ದೇ ಇವರಿಗೆ ಈ ಹೆಸರನ್ನು ತಂದಿದೆ ಎನ್ನಬಹುದು.

ಪರದಾಸ್ಯಶೃಂಖಲೆ ಕಳಚಿದ ಮೇಲೆ, ಕರ್ನಾಟಕವು ಅಖಂಡ ಕರ್ನಾಟಕವಾದ ಮೇಲೆ, ಧ್ಯೇಯ ಸಾಧಿಸಿದ್ದಾಯಿತು ಎಂಬ ನೆಮ್ಮದಿಯಿಂದ ಕೀರ್ತನ ಮಾಡುವುದಕ್ಕೆ 'ವಿರಾಮ'ಕೊಟ್ಟು, ಕೇವಲ ಧಾರ್ಮಿಕ ಪ್ರಚಾರದಲ್ಲಿ, ಸಾಹಿತ್ಯ ಸೇವೆಯಲ್ಲಿ ತೊಡಗಿರುವುದು ಇವರ ಒಂದು ವೈಶಿಷ್ಟ್ಯ.

ಕಳೆದ ೧೦-೧೨ ವರ್ಷಗಳಿಂದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಪುರಾಣ ಪ್ರವಚನದಲ್ಲಿ ತೊಡಗಿದ್ದಾರೆ. "ಕರ್ನಾಟಕ ಏಕೀಕರಣ ಸಾಧನೆ, ಧರ್ಮ ಪ್ರಚಾರ, ಇವೆರಡೇ ನನ್ನ ಧ್ಯೇಯಗಳಾಗಿದ್ದವು ಒಂದನ್ನು ಸಾಧಿಸಿದೆ. ಎರಡನೆಯದನ್ನು ಸಾಧಿಸದಿದ್ದರೆ ನಮ್ಮ ದೇಶದಲ್ಲಿ ಅನೈಕ್ಯ ತಲೆದೋರಿ ನೈತಿಕ ಪತನವಾಗುತ್ತದೆ" ಎನ್ನುತ್ತಾರೆ ಇವರು.

ಕೀರ್ತನ ಕಲೆಗೆ ಅಗತ್ಯವಾದ ಸಾಹಿತ್ಯ ಜ್ಞಾನ, ಸಂಗೀತ ಜ್ಞಾನ, ಒಳ್ಳೆಯ ಶಾರೀರ, ವಿಷಯ ನಿರೂಪಣಾ ವಿಧಾನದಲ್ಲಿ ವಿಶೇಷ ಸಾಮರ್ಥ್ಯ, ಇವೆಲ್ಲವೂ ಶ್ರೀ ಶಿವಮೂರ್ತಿಶಾಸ್ತ್ರಿಗಳಲ್ಲಿರುವುದೇ ಇವರನ್ನು 'ಕೀರ್ತನ ಕೇಸರಿ'ಯನ್ನಾಗಿ, ಕೀರ್ತನ ಶಿರೋಮಣಿಯನ್ನಾಗಿ, ಕೀರ್ತನಾಚಾರ್ಯರನ್ನಾಗಿ ಮಾಡಿದೆಯೆನ್ನಬೇಕು.

**ಸಾಹಿತ್ಯಕ್ಕೆ ಪ್ರವೇಶ :**

"ಬಾಲ್ಯದಲ್ಲೇ ತುಮಕೂರಿನಲ್ಲಿದ್ದಾಗ ಆಸ್ಥಾನ ಮಹಾವಿದ್ವಾನ್, ಕರ್ನಾಟಕ ಭಾಷಾರತ್ನಂ ಕರಿಬಸವ ಶಾಸ್ತ್ರಿಗಳಲ್ಲಿ, ಕನ್ನಡ, ಸಂಸ್ಕೃತ ಕಲಿಯುವ ಸೌಭಾಗ್ಯ ನನಗೆ ಲಭಿಸಿತು. ಆರು ವರ್ಷ ಕಾಲ ಅವರಲ್ಲಿ ಕಲಿತೆ. ಸಾಹಿತ್ಯದಲ್ಲಿ ಕಿಂಚಿತ್ ತಿಳಿವಳಿಕೆ ನನ್ನಲಿದ್ದರೆ ಅದು ಅವರ ಕೃಪೆಯಿಂದಲೇ" ಎನ್ನುತ್ತಾ, ತಮ್ಮ ಬಾಲ್ಯ, ವಿದ್ಯಾಭ್ಯಾಸದ ದಿನಗಳು, ಶಿಕ್ಷಕರು, ಶಿಕ್ಷಣ ಕೊಡುವ ವಿಧಾನ, ತಮ್ಮ ಮೇಲೆ ಪ್ರಭಾವ ಬೀರಿದ ಮಹನೀಯರು ಇವೆಲ್ಲದರ ಬಗೆಗೆ ಹೆಮ್ಮೆಯಿಂದ ಹೇಳುತ್ತಾರೆ.

ತಂದೆ ತಾತಂದಿರೆಲ್ಲ ಪುರಾಣ ಪ್ರವಚನ ಮಾಡುತ್ತಿದ್ದುದರಿಂದ ಈ ಕಲೆ ಇವರಿಗೆ ರಕ್ತಗತವಾಗಿದ್ದು ಎರಡು ವರ್ಷ ಕಾಲ ಸಂಗೀತ ವಿದ್ವಾನ್ ಸದಾಶಿವಯ್ಯ ಎಂಬುವರಲ್ಲಿ ಸಂಗೀತವನ್ನೂ ಕಲಿತು, ಕೈ|| ಮಾಗಡಿ ವೀರಪ್ಪ ಶಾಸ್ತ್ರಿಗಳಿಂದ ಕೀರ್ತನ ಕಲೆ ಅರಿತು ತಮ್ಮಲ್ಲಿದ್ದ ಸಂಗೀತ ಜ್ಞಾನವನ್ನು ಹೆಚ್ಚಿಸಿಕೊಂಡಿದ್ದಾರೆ. ದೈವದತ್ತವಾಗಿರುವ ಇವರ ಒಳ್ಳೇ ಶಾರೀರ, ಇವರು ಶ್ಲೋಕ ಹೇಳಲಿ, ಪದ್ಯ ಹೇಳಲಿ, ಕಥೆ ಹೇಳಲಿ ಎಲ್ಲವೂ ಶ್ರೋತೃಗಳ ಮೇಲೆ ಅಗಾಧ ಪರಿಣಾಮ ಬೀರುತ್ತದೆ ಎಂಬುದು, ಇವರ ಉಪನ್ಯಾಸ, ಕೀರ್ತನೆ ಕೇಳಿದವರಿಗೆಲ್ಲ ಗೊತ್ತಿರುವ ವಿಷಯವೇ ಆಗಿದೆ.

**ಗ್ರಂಥ ರಚನೆಯ ಉದ್ದೇಶ**

ಕೀರ್ತನ ಕಲೆಯ ಮೇಲೆ ಒಂದು ದೊಡ್ಡ ಗ್ರಂಥ ರಚಿಸುವ ಮಹತ್ತರ ಕಾರ್ಯದಲ್ಲಿ ಶ್ರೀಯುತರು ತೊಡ

ಗಿರುವುದು ಕೀರ್ತನ ಪ್ರಪಂಚಕ್ಕೆ ಒಂದು ಸುಯೋಗ ವೆಂದೇ ಹೇಳಬೇಕು

ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ವೀರಶೈವ ಮತ ದವರಾಗಿದ್ದು ಶರಣಸಾಹಿತ್ಯಕ್ಕೆ ನಾಲ್ವತ್ತು ವರ್ಷಗಳಿಂದ ಅಪಾರ ಸೇವೆಸಲ್ಲಿಸುತ್ತ ಬಂದಿರುವರಾದರೂ ಇವರ ಹರಿ ಕಥೆ ಕೇಳುವಾಗ ಇವರಲ್ಲಿ ಯಾವುದೇ ಒಂದು ಪಂಥಕ್ಕೆ ಕಟ್ಟುಬಿದ್ದಿರುವ ವೌಢ್ಯವಿಲ್ಲವೆಂಬುದು ಚೆನ್ನಾಗಿ ತಿಳಿ ಯುತ್ತದೆ. ಅವರದು ಸಮನ್ವಯ ದೃಷ್ಟಿ.

ನಿಜಕ್ಕೂ ಇವರ ಅತ್ಯಂತ ಜನಪ್ರಿಯ ಹರಿಕಥೆ ಗಳೆಂದರೆ ಮಹಾಭಾರತದ ಸೂತ್ರಧಾರ ಶ್ರೀಕೃಷ್ಣನಿಗೆ ಸಂಬಂಧಿಸಿರುವವೇ. ಅವನ ಸುತ್ತ ಹೆಣದಿರುವ ಕಥೆ ಗಳೇ.

ಶಿವಪುರಾಣ, ಗಿರಿಜಾಕಲ್ಯಾಣ, ಇಂದ್ರಕೀಲ ವಿಜಯ, ಕಲ್ಯಾಣದ ಕ್ರಾಂತಿ, ಸುಭದ್ರಾಹರಣ ಮೊದ ಲಾದ ಕಥೆಗಳನ್ನು ಹೇಗೋ ಹಾಗೆಯೇ, ರುಕ್ಮಿಣೀ ಕಲ್ಯಾಣ, ಗಜೇಂದ್ರಮೋಕ್ಷ, ಶ್ರೀನಿವಾಸ ಕಲ್ಯಾಣ, ಶ್ರೀಕೃಷ್ಣ ಸಂಧಾನ ಮೊದಲಾದುವನ್ನೂ ಪರಿಣಾಮ ಕಾರಿಯಾಗಿ ಮಾಡುತ್ತಾರೆ. ಎಂಥ ಗಹನ ವಿಷಯ ವನ್ನೂ ಸರಳವಾದ ಶೈಲಿಯಲ್ಲಿ ನಿರೂಪಿಸುವ ಕಲೆಗಾರಿಕೆ ಇವರಲ್ಲಿ ಬೆಳದಿವೆ. ಕರ್ನಾಟಕದ್ಯಾದಂತ ಕೀರ್ತನ ಮಾಡಿರುವ ಇವರನ್ನು ಬೇರೆ ಬೇರೆ ಮಠಾಧಿಪತಿಗಳು, ಪಂಡಿತರು, ಸಂಘ ಸಂಸ್ಥೆಗಳು ಆಹ್ವಾನಿಸಿ, ಸತ್ಕರಿಸಿ, ಗೌರವಿಸಿರುವುದು ಇವರ ಪಾಂಡಿತ್ಯಕ್ಕೆ ಸಾಕ್ಷಿಯಾಗಿದೆ.

**ಪ್ರಶಸ್ತಿಗಳು**

ಇವರಿಗೆ ಕೀರ್ತನ ಕೇಸರಿ, ಕವಿರತ್ನ, ಶಿವಕೀರ್ತನ ಕವಿರಾಜ, ಕೀರ್ತನಾಚಾರ್ಯ, ಪಂಡಿತರತ್ನಂ, ವಿದ್ಯಾ ವಾರಿಧಿ, ಸಮಾಜ ಭಾಸ್ಕರ, ಮೊದಲಾದ ಪದವಿ ಗಳನ್ನು ಇವರ 'ಕೀರ್ತನಕಲೆ' ತಂದುಕೊಟ್ಟಿದ್ದರೆ, ಇವರ ಸಾಹಿತ್ಯ ಜ್ಞಾನ ಇವರು ಕನ್ನಡ ಪ್ರಾಚೀನ ಸಾಹಿತ್ಯದಲ್ಲಿ ನಡೆಸಿರುವ ಸಂಶೋಧನಾಕಾರ್ಯ ಮೊದ ಲಾದವು ಇವರಿಗೆ 'ವಿಮರ್ಶನಾಚಾರ್ಯ, ಕರ್ನಾಟಕ ಕವಿ ಭೂಷಣ'ಆಸ್ಥಾನ ವಿದ್ವಾನ್ ಬಿರುದು ಕೊಟ್ಟಿವೆ. ಹಲವು ಸಾರ್ವಜನಿಕ ಸಂಘ ಸಂಸ್ಥೆಗಳೊಂದಿಗೆ ಸಂಪರ್ಕ ವಿಟ್ಟಿರುವ ಶ್ರೀಯುತರು ಕರ್ನಾಟಕದ ಸಾಮಾಜಿಕ ಸಂಸ್ಕೃತಿ ಕ್ಷೇತ್ರಗಳಿಗೆ ಸಾಕಷ್ಟು ಸೇವೆ ಸಲ್ಲಿಸಿದ್ದಾರೆ.

ಸುಮಾರು ನಲವತ್ತು ವರ್ಷಕಾಲ ಕರ್ನಾಟಕ ಏಕೀಕರಣಕ್ಕಾಗಿ ದುಡಿದು, ತಮ್ಮಲ್ಲಿನ ಕೀರ್ತನ ಕಲೆ ಯನ್ನೇ ಈ ಹೋರಾಟದ ಮುಖ್ಯ ಸಾಧನವನ್ನಾಗಿ, ಪ್ರಯೋಗಿಸಿದ್ದಂತೂ 'ಕೀರ್ತನ ಕಲಾ' ಪ್ರಪಂಚಕ್ಕೆ ಒಂದು ಹೊಸ ನಿದರ್ಶನವೆನ್ನಬೇಕು.

ಕೀರ್ತನಾಕಾರರು ರಾಮಾಯಣ, ಭಾರತ ಭಾಗವತ ಕಥೆಗನ್ನು ಮಾಡುವಾಗ ಇದೇ ರೀತಿ ಭಾವೈಕ್ಯ, ದೇಶಪ್ರೇಮ, ರಾಷ್ಟ್ರನಿಷ್ಠೆ ಬೆಳೆಯುವಂತೆ ಜನರಲ್ಲಿ ಪ್ರೇರಿಸಿದರೆ ನಿಜಕ್ಕೂ ಅವರುಗಳಲ್ಲಿನ ಈ ಕಲೆ ಹತ್ತು ಪಟ್ಟು, ನೂರುಪಟ್ಟು ಫಲ ಕೊಡುವುದು ಎಂಬದರಲ್ಲಿ ಸಂಶಯವಿಲ್ಲ.

ಕಳೆದ ೩೦ ವರ್ಷಗಳಿಂದ 'ಶರಣ ಸಾಹಿತ್ಯ' ಎಂಬ ಮಾಸಿಕದ ಸಂಪಾದಕರಾಗಿ ತಮ್ಮದೇ ಆದ ಮುದ್ರಣಾ ಲಯವನ್ನಿಟ್ಟು ಹಲವಾರು ಮಹತ್ವದ ಗ್ರಂಥಗಳನ್ನು ಬರೆದಿರುವುದು ಕನ್ನಡ ನುಡಿಗೆ ಹೆಮ್ಮೆ ತರುವಂಥದು.

**ಸಾಹಿತ್ಯ ಕೃತಿಗಳು :**

ಇವರು ರಚಿಸಿರುವ ೧೨೦೦ ಪುಟಗಳ ವೀರಶೈವ ಸಾಹಿತ್ಯ ಮತ್ತು ಇತಿಹಾಸ, ೧೫೦೦ ಪುಟಗಳುಳ್ಳ ಕರ್ನಾಟಕ ಸಂದರ್ಶನ, ಬಿದನೂರು ಶಿವಪ್ಪನಾಯಕನ ಚರಿತ್ರೆ, ಮಹಾತ್ಮ ಕನಕದಾಸ, ಸರ್ವಜ್ಞಮೂರ್ತಿ, ಮಾಹೇಶ್ವರ ಚರಿತ್ರೆ, ದುಂಬಿ ಮತ್ತು ನಾದ, ಷಡಕ್ಷರ ಕವಿಯೂ ಅವನ ಕಾವ್ಯಗಳೂ, ಕವಿ ಲಕ್ಷ್ಮೀಶ, ಭಕ್ತ ಪುರಂದರದಾಸ, ಶಿವಯೋಗಿನಿಜಗುಣರು ಮೊದಲಾದುವು ಕನ್ನಡ ಸಾರಸ್ವತ ಲೋಕಕ್ಕೆ ವಿಶಿಷ್ಟ ಕೊಡುಗೆಗಳು ಎನಿಸಿಕೊಂಡಿವೆ.

೧೯೦೩ನೇ ಫೆಬ್ರವರಿ ೨೩ ರಂದು ತುಮಕೂರು ಹುಲಕುಂಟೆ ಮಠ ಎಂಬಲ್ಲಿ ಜನಿಸಿದ ಶ್ರೀಯುತರು ಅಪ್ಪರ್ ಸೆಕೆಂಡರಿ ಶಿಕ್ಷಣ (೧೯೨೩) ಮುಗಿಸಿದ ನಂತರ

೨-೩ ವರ್ಷ ಮಾತ್ರ ಶಾಲೆಯೊಂದರಲ್ಲಿ ಕನ್ನಡ ಅಧ್ಯಾಪಕರಾಗಿದ್ದರು. ಅನಂತರ ಸಾಹಿತ್ಯ ಪ್ರಚಾರದಲ್ಲಿ ತೊಡಗಿ ಇಂದಿನತನಕ ಅದನ್ನು ನಡಸುತ್ತಾ ಬಂತಿದ್ದಾರೆ.

ಈ ೬೫ನೇ ವಯುಸ್ಸಿನಲ್ಲಿಯೂ ರಾತ್ರಿ ಹನ್ನೆರಡು ಒಂದು ಘಂಟೆ ತನಕ ಸಾಹಿತ್ಯ ವ್ಯಾಸಂಗ ಮತ್ತು ಸಂಶೋಧನೆಯಲ್ಲಿ ತೊಡಗಿರುತ್ತಾರೆ.

ಇವರು ಸ್ವಂತ ಪುಸ್ತಕ ಭಂಡಾರದಲ್ಲಿ ಸುಮಾರು ೧೫ ಸಾವಿರ ರೂ. ಬೆಲೆಯ ಹೆಚ್ಚು ವಿವಿಧ ಭಾಷೆಗಳ ಮೌಲ್ಯ ಗ್ರಂಥಗಳಿವೆ ಎಂಬುದನ್ನು ನೋಡುವಾಗ ಸಾಹಿತ್ಯದಮೇಲೆ ಇವರಿಗಿರುವ ಪ್ರಭುತ್ವದ ಕಲ್ಪನೆ ಸಹಜವಾಗಿ ಬರುತ್ತದೆ.

**ಪರಿಷತ್ತಿನ ಅಧ್ಯಕ್ಷರಾಗಿ:**

೧೯೫೬ ರಿಂದ ೧೯೬೪ರ ವರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದು ಇವರು ಸಲ್ಲಿಸಿರುವ ಸೇವೆ ಚಿರಸ್ಮರಣೀಯವಾದುದು.

'ಕನ್ನಡ ನಿಘಂಟು ಪ್ರಕಟನೆಗೆ ನಾಂದಿಮಾಡಿದವರು ಇವರೇ. ಸರ್ಕಾರವು ೧೫ ಲಕ್ಷ ರೂ. ನೆರವು ನೀಡುವಂತೆ ಇವರು ಒತ್ತಾಯಪಡಿಸಿ, ಒಪ್ಪಂದಕ್ಕೆ ಕಟ್ಟು ಬೀಳುವಂತೆ ಮಾಡದಿದ್ದರೆ ಬಹುಶಃ ಇಷ್ಟುಬೇಗ ಈ ನಿಘಂಟಿನ ೪೦೦ ಪುಟಗಳು ಬರುತ್ತಿರಲಿಲ್ಲವೋ ಏನೋ ಎಂದು ಹಲವಾರು ಸಾಹಿತಿಗಳು ಅಭಿಪ್ರಾಯ ಪಟ್ಟಿದ್ದಾರೆ.

ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ೧೯೩೬ರಿಂದ ಆಸ್ಥಾನವಿದ್ವಾಂಸರಾಗಿ ಗೌರವಪಡೆದಿದ್ದಾರೆ. ೧೯೪೬ರಲ್ಲಿ ಮೈಸೂರು ಪ್ರಭುತ್ವದವರು ಇವರಿಗೆ 'ಪಂಡಿತರತ್ನಂ' ಎಂಬ ಬಿರುದು, ನವರತ್ನ ಕಂಕಣ ಕೊಟ್ಟಿದ್ದಾರೆ. ಶ್ರೀ ಶೃಂಗೇರಿ ಜಗದ್ಗುರುಗಳು, ಶ್ರೀ ಚಿತ್ರದುರ್ಗ ಜಗದ್ಗುರುಗಳು (ಹಿಂದಿನವರು ಮತ್ತು ಇಂದಿನವರು) ಶ್ರೀ ಕಾಶಿ ಜಗದ್ಗುರು(ಜಂಗಮವಾಡಿ) ಶ್ರೀ ಶೈಲ ಜಗದ್ಗುರು,ಶ್ರೀ ರಂಭಾಪುರಿ ಜಗದ್ಗುರು (ಹಿಂದಿನವರು) ಶ್ರೀ ಉಜ್ಜಯನಿ ಜಗದ್ಗುರು (ಹಿಂದಿನವರು) ಶ್ರೀ ಶ್ರವಣ ಬೆಳುಗೊಳದ ಶ್ರೀಗಳು (ಹಿಂದಿನವರು) ಶ್ರೀ ಹೊಂಬುಜದ ಶ್ರೀಗಳು ಮೊದಲಾದವರೆಲ್ಲರೂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳನ್ನು ಆಹ್ವಾನಿಸಿ ಗೌರವಿಸಿದ್ದಾರೆ, ಮೈಸೂರು ಮುಸ್ಲಿಂ ಅಸೋಸಿಯೇಷನ್, ಧರ್ಮಸ್ಥಳ, ಭದ್ರಾವತಿ ಕರ್ನಾಟಕ ಸಂಘ, ಮುಂಬಯಿ, ಹೊಸದಿಲ್ಲಿ, ಮದ್ರಾಸ್, ಹೈದ್ರಾಬಾದ್ ಕರ್ನಾಟಕ ಸಂಘಗಳು, ಬೆನಾರೆಸ್ ವಿದ್ವತ್ ಸಭೆ ಇತ್ಯಾದಿಯವರು ಶ್ರೀ ಶಾಸ್ತ್ರಿಗಳನ್ನು ಆಹ್ವಾನಿಸಿ ಬಿರುದುಗಳನ್ನೂ ಮಾನಪತ್ರವನ್ನೂ ಕೊಟ್ಟು ಗೌರವಿಸಿದ್ದಾರೆ.

ಕನ್ನಡ ನಿಘಂಟು ಸಂಪಾದಕ ಸಮಿತಿ, ಕನ್ನಡ ವಿಶ್ವಕೋಶ ಸಮಿತಿ, ಮೈಸೂರು ಸಂಸ್ಕೃತ ಬೋರ್ಡ್, ಅ.ಭಾ.ವೀ. ಮಹಾಸಭಾ ಕಾರ್ಯ ಸಮಿತಿ, ಭಾರತೀ ವಿದ್ಯಾಭವನ್ ಕಾರ್ಯಸಮಿತಿ, ಮೈ.ಲಿಂ.ವಿ. ನಿಧಿ ಸಂಘ ಮೊದಲಾದಕಡೆ ಪ್ರಮುಖ ಸದಸ್ಯರಾಗಿದ್ದಾರೆ.

ದಿವಂಗತ ಸರ್ ಮಿರ್ಜಾ ಇಸ್ಮಾಯಿಲ್, ಕೈ॥ ಎಚ್. ಸಿದ್ದಯ್ಯ, ಸರ್. ಎ. ಆರ್. ಮೊದಲಿಯಾರ್, ದಿ॥ ಬಿ. ಎನ್. ದಾತಾರ್. ಗೌರ್ನರ್ ಕೆ. ಸಿ. ರೆಡ್ಡಿ, ಮಾನ್ಯ ಕೆ. ಹನುಮಂತಯ್ಯ, ಡಾ॥ ಡಿ. ಸಿ. ಪಾವಟೆ, ಡಾ॥ ಟಿ. ಎಂ. ಎ. ಪೈ. ಶ್ರೀ ಬಿ. ಡಿ. ಜತ್ತಿ, ಶ್ರೀ ಎಸ್. ಆರ್. ಕಂಠಿ ಮೊದಲಾದವರು ಶಾಸ್ತ್ರಿಗಳ ಬಗ್ಗೆ ಮಿಗಿಲಾದ ಅಭಿಮಾನ ತಾಳಿದ್ದಾರೆ.

ಒಟ್ಟಿನಲ್ಲಿ ಸಮಗ್ರ ಕರ್ನಾಟಕಕ್ಕೆ ತಿಳಿದ ವ್ಯಕ್ತಿ ಶ್ರೀ ಶಾಸ್ತ್ರಿಗಳು. 'ಸ್ವತಂತ್ರ ಕರ್ನಾಟಕ' ಪತ್ರಿಕೆ ನಡೆಸಿ (೫ ವರ್ಷ) ಅಪಾರ ನಷ್ಟಪಟ್ಟು ಮನೆ, ಮಠ ಕಳೆದುಕೊಂಡಿದ್ದಾರೆ. ಕರ್ನಾಟಕ ಏಕೀಕರಣಕ್ಕೆ ಕಷ್ಟಪಟ್ಟು ಇವರು ಸದ್ಯಕ್ಕೆ ಇಂದಿನ ಆಡಳಿತದಲ್ಲಿ 'ಕ್ಯಾಕರ್ನ' ಆಗಿದ್ದಾರೆ ಎಂದು ನಮಗೆ ತಿಳಿಸಲು ದುಗುಡವಾಗಿದೆ.

(ಸಂಯುಕ್ತ ಕರ್ನಾಟಕ)

# ನಾಕಂಡ ಶಿವಮೂರ್ತಿ ಶಾಸ್ತ್ರಿಗಳು

ಸುಮಾರು ಮೂರು ದಶಕಗಳ ಹಿಂದಿನ ಮಾತು ಆಗಿನ್ನೂ ನಾನು ವಿದ್ಯಾರ್ಥಿ ದೆಶೆಯುಲ್ಲಿಯೇ ಇದ್ದೆ. ವಿಶ್ವೇಶ್ವರಪುರದಲ್ಲಿರುವ ಅಶಕ್ತಪೋಷಕ ಸಭೆಯ ಒಳಾಂಗಣದಲ್ಲಿ ಶ್ರೀ ಮಾನ್ ಶಿವಮೂರ್ತಿಶಾಸ್ತ್ರಿಗಳನ್ನು ನಾನು ಕಂಡದ್ದು. ಅವರು ಶಿವಕಥೆಯುನ್ನು ಮಾಡುವುದಕ್ಕಾಗಿ ಅಲ್ಲಿಗೆ ದಯಮಾಡಿಸಿದ್ದರು. ನನ್ನ ಮಿತ್ರನೇಕರು ಶ್ರೀ ಶಾಸ್ತ್ರಿಗಳ ಬಗೆಗೆ ನನಗೆ ಬಹಳ ಹೇಳುತ್ತಿದ್ದರು. ಕೇಳಿದರೆ ಶ್ರೀ ಶಾಸ್ತ್ರಿಗಳು ಮಾಡುವ ಶಿವಕಥೆ ಕೇಳಬೇಕು ಎಂದು. ಅಂದು ನಾನೂ ಕಾರ್ಯಕ್ರಮದ ಮೊದಲಿಂದ ಕಡೆಯುವರೆಗೂ ಕುಳಿತಿದ್ದು, ಅವರು ಮಾಡಿದ ಶಿವಕಥೆಯುನ್ನು ಕೇಳಿ ಆನಂದಪಟ್ಟೆ. ನನ್ನ ಮಿತ್ರರು ಹೇಳುತ್ತಿದ್ದುದು ಸುಳ್ಳಲ್ಲವೆಂದು ಆಗ ನನಗೆ ಅರಿವಾಯಿತು. ಹೊಸ ಮಾದರಿ ಉಪಕಥೆಗಳು, ಹೊಸ ರೀತಿಯ ನಿರೂಪಣೆ, ಕೇಳುವವರಿಗೆ ಬೇಸರ ಬಾರದಂತೆ ಕಥೆ ಹೇಳುವ ಧಾಟಿ ಇವುಗಳು ಶಾಸ್ತ್ರಿಗಳ ಶಿವಕಥೆಯ ವೈಶಿಷ್ಟ್ಯ. ಸಭೆ ಮುಗಿದಮೇಲೆ ನನ್ನ ಸಂಶಯವೊಂದನ್ನು ಪರಿಹರಿಸಿಕೊಳ್ಳಲು ಶಾಸ್ತ್ರಿಗಳ ಬಳಿಗೆ ಹೋಗಿ, ನನ್ನ ಪ್ರಶ್ನೆಯನ್ನು ಮುಂದಿಟ್ಟೆ. ಅವರು ಸಾವಧಾನದಿಂದ ಕೇಳಿ ಲೀಲಾಜಾಲವಾಗಿ ಉತ್ತರವಿತ್ತರು. ನನಗೆ ಬಹಳ ಹರ್ಷವಾಯಿತು. ಅಂದಿನಿಂದ ನನ್ನ-ಅವರ ಪರಿಚಯ ಬೆಳೆಯುತ್ತ ಬಂದಿತು.

ನನ್ನ ಗೆಳೆಯ ಶ್ರೀ ಫಜ್ಲುಲ್‌ಹಸನ್‌ರವರೊಡನೆ ಒಂದು ದಿನ ಶ್ರೀ ಶಾಸ್ತ್ರಿಗಳ ಮನೆಗೆ ಹೋಗಿದ್ದೆ. ಆಗ ಶ್ರೀ ಶಾಸ್ತ್ರಿಗಳು ಸುಲ್ತಾನ್ ಪೇಟೆ ಮತ್ತು ಅಕ್ಕಿಪೇಟೆಗಳ ಸಂಗಮ ಸ್ಥಳದಲ್ಲಿ ಒಂದು ಮಹಡಿ ಮನೆಯಲ್ಲಿ ವಾಸವಾಗಿದ್ದರು. 'ಸ್ವತಂತ್ರ ಕರ್ನಾಟಕ' ಎಂಬ ವಾರಪತ್ರಿಕೆಯೂ ಆಗ ಅವರ ಸಂಪಾದಕತ್ವದಲ್ಲಿ ಹೊರಡುತ್ತಿತ್ತು. ಅಲ್ಲದೆ ಶ್ರೀ ಶಾಸ್ತ್ರಿಗಳು ಕರ್ಣಾಟಕ ಏಕೀಕರಣ ಸಮಿತಿಯ ಕಾರ್ಯದರ್ಶಿಗಳೂ ಆಗಿದ್ದರು. ನಾವಿಬ್ಬರೂ ಅವರೊಡನೆ ಕರ್ಣಾಟಕ ಏಕೀಕರಣದ ಬಗೆಗೆ ಲೋಕಾಭಿರಾಮವಾಗಿ ಬಹಳ ಹೊತ್ತು ಮಾತನಾಡಿದೆವು. ನಾನು, ಗೆಳೆಯ ಹಸನ್‌ರವರು ಕೊರಟಗೆರೆ, ಮಧುಗಿರಿಗಳಿಗೆ ಪ್ರವಾಸದ ಕಾರ್ಯಕ್ರಮ ಇಟ್ಟುಕೊಂಡಿದ್ದ ವಿಷಯವನ್ನೂ ಶ್ರೀ ಶಾಸ್ತ್ರಿಗಳಿಗೆ ತಿಳಿಸಿದೆವು. ಆಗ ಶಾಸ್ತ್ರಿಗಳು ಬಹಳ ಸಂತೋಷಪಟ್ಟು, ಮಧುಗಿರಿಯಲ್ಲಿ ಸಬ್‌ಡಿವಿಜನ್ ಆಫೀಸರ್ ಆಗಿದ್ದ ಶ್ರೀ ಎಚ್. ರಾಮರಾಜ ಅರಸ್‌ರವರಿಗೂ, 'ಹೊಯಿಸಳ' ಎಂಬ ಕಾವ್ಯನಾಮದಿಂದ ಪ್ರಸಿದ್ಧಿ ಪಡೆದಿದ್ದ ಶ್ರೀ ಲಕ್ಷ್ಮಣರಾಯರಿಗೂ ಪರಿಚಯ ಪತ್ರಗಳನ್ನು ಬರೆದುಕೊಟ್ಟರು. ಹಾಗೂ ನಾಲ್ಕಾರು ಹಿತವಚನಗಳನ್ನಾಡಿ ನಮ್ಮನ್ನು ಬೀಳ್ಕೊಟ್ಟರು.

ನನಗೂ ಮಿತ್ರ ಫಜ್ಲುಲ್‌ಹಸನ್‌ರವರಿಗೂ ಮಧುಗಿರಿಯಲ್ಲಿ ಭವ್ಯ ಸ್ವಾಗತ ದೊರೆಯಿತು. ಶ್ರೀ ಭಾಸ್ಕರಾನಂದಜೀಯವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆಯೊಂದು ನಡೆದು, ನಾನು 'ಕನ್ನಡ ಸಾಹಿತ್ಯದಲ್ಲಿ ಭಕ್ತಿ ಕಾವ್ಯಗಳು' ಎಂಬ ವಿಚಾರವಾಗಿಯೂ, ನನ್ನ ಮಿತ್ರ 'ಹಿಂದೂ ಮುಸ್ಲಿಂ ಐಕಮತ್ಯ' ಎಂಬ ವಿಚಾರವಾಗಿಯೂ ಮಾತನಾಡಿದೆವು. ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿದ್ದ ಶ್ರೀ ಟಿ ಎಸ್. ರಾಜರತ್ನಂರವರು ವಿದ್ಯಾರ್ಥಿಗಳ ಸಭೆಯೊಂದನ್ನು ಏರ್ಪಡಿಸಿ, ನಮ್ಮನ್ನು ಬರಮಾಡಿಕೊಂಡು ಉಪನ್ಯಾಸ ಮಾಡಲು ಕೋರಿದರು.

ಮುಂದೆ ಶ್ರೀ ಶಾಸ್ತ್ರಿಗಳು ಆಗಾಗ್ಗೆ ನನಗೆ ಭೇಟಿಯಾಗುತ್ತಿದ್ದರು. ನನ್ನನ್ನು ಕಂಡಾಗಲೆಲ್ಲ ತಮ್ಮ ಕಾರ್ಯಕ್ರಮಗಳನ್ನು ನನಗೆ ತಿಳಿಸುವ ಸೌಜನ್ಯ ಅವರಲ್ಲಿತ್ತು. ಚಿಕ್ಕಪೇಟೆಯಲ್ಲಿರುವ ಮಹಂತಿನ ಮಠದಲ್ಲಿ ಒಮ್ಮೆ ಅವರ ಉಪನ್ಯಾಸ ಏರ್ಪಾಡಾಗಿತ್ತು. ವೀರಶೈವ ಮತದ ಮಹತ್ವವನ್ನು ಕುರಿತು ಅವರು ಮಾತನಾಡುವವರಿದ್ದರು. ಆ ಸಭೆಗೆ ಅಂದು ದಿ|| ಎಂ. ಆರ್. ಶ್ರೀನಿವಾಸಮೂರ್ತಿಗಳು ದಯಮಾಡಿಸಿದ್ದರು. ಆ

ದಿನದ ಕಾರ್ಯ ಕಲಾಪಗಳು ಬಹಳ ವೈಭವದಿಂದ ನಡೆದುವು. ಶ್ರೀ ಶಾಸ್ತ್ರಿಗಳ ಉಪನ್ಯಾಸ ಕೇಳಿದ ಮೇಲೆ ನನ್ನ ಮನಸ್ಸಿನ ಮೇಲೆ ಮಹತ್ತರವಾದ ಪರಿಣಾಮ ವುಂಟಾಗಿ, ನಾನೂ ಸಹ ವೀರಶೈವಧರ್ಮದ ಬಗೆಗೆ ಅಧ್ಯಯನ ಮಾಡತೊಡಗಿದೆ. ಹೀಗೆ ವೀರಶೈವಧರ್ಮದ ವಿಷಯವಾಗಿ ನನ್ನಲ್ಲಿ ಅಭಿರುಚಿಯನ್ನುಂಟುಮಾಡಿದವರು ಶ್ರೀ ಶಾಸ್ತ್ರಿಗಳೇ ಎಂದು ಘಂಟಾಘೋಷವಾಗಿ ಹೇಳಬಲ್ಲೆ.

ಒಮ್ಮೆ ನಾನು ಶ್ರೀ ಶಾಸ್ತ್ರಿಗಳೊಡನೆ ಮದ್ದೂರಿಗೆ ಹೋಗಿದ್ದೆ. ಅಲ್ಲಿ ಶ್ರೀ ಜಿ. ಪರಮಶಿವಯ್ಯನವರಿಗೆ ಹೈಕೋರ್ಟ್ ನ್ಯಾಯಾಧೀಶರ ಪದವಿ ದೊರೆತಿದ್ದುದಕ್ಕಾಗಿ ಸತ್ಕಾರ ಸಮಾರಂಭವೇರ್ಪಟ್ಟಿದ್ದಿತು. ಸಭೆಯಲ್ಲಿ ಹಾಡಲು ಸ್ವಾಗತ ಗೀತೆಗಳನ್ನು ಶ್ರೀ ಶಾಸ್ತ್ರಿಗಳೇ ರಚಿಸಿದ್ದರು. ಸಮಾರಂಭ ವೈಭವದಿಂದ ನಡೆಯಿತೆಂದು ಬೇರೆ ಹೇಳಬೇಕಾಗಿಲ್ಲ. ಅವರ ಕವನ ಶಕ್ತಿಯನ್ನು ಅಲ್ಲಿನ ಜನರು ಶ್ಲಾಘಿಸಿದರು.

ಶ್ರೀ ಶಾಸ್ತ್ರಿಗಳಿಗೆ ಸಮಾಜದಲ್ಲಿ ಒಂದು ಗಣ್ಯ ಸ್ಥಾನವಿದೆ. ಹಿರಿಯರು ಕಿರಿಯರಾದಿಯಾಗಿ ಎಲ್ಲರೂ ಅವರನ್ನು ಗೌರವದಿಂದ ಕಾಣುತ್ತಾರೆ. ಇವರೊಡನೆ ಪೇಟೆಯಲ್ಲಿ ನಡೆದು ಹೊರಟರೇ ಸಾಕು. ದಾರಿಯುದ್ದಕ್ಕೂ ಪರಿಚಯಸ್ಥರು: ಹೆಜ್ಜೆ ಹೆಜ್ಜೆಗೂ ನಮಸ್ಕಾರಗಳು. ಇವರ ಸಂಭಾಷಣೆಯಲ್ಲಿ ಹಲವಾರು ವಿಚಾರಗಳು ಅಡಕವಾಗಿರುವುದನ್ನು ನಾವು ಗಮನಿಸಬಹುದು. ಸಾಹಿತ್ಯ, ಸಂಗೀತ, ಮದುವೆ, ಪುಸ್ತಕಗಳ ಮುದ್ರಣ, ಲಗ್ನಪತ್ರಿಕೆ ಅಚ್ಚುಮಾಡಿಸುವ ವಿಚಾರ, ಬಸವ ಜಯಂತಿ, ಕಾಳಿದಾಸ ಜಯಂತಿ, ಗಾಂಧೀ ಜಯಂತಿ, ನೆಹರೂ ಜಯಂತಿ-ಇತ್ಯಾದಿ ಅನೇಕ ವಿಚಾರಗಳು. ಆ ಮಾತು ಕಥೆಯಲ್ಲಿ ಬಂದು ಹೋಗುತ್ತದೆ.

ವರ್ತಕ ಬಾಂಧವರೇನಾದರೂ ಸಿಕ್ಕಿದರೆ ಆ ಕ್ಷಣವೇ ಅವರನ್ನು ಎಚ್ಚರಿಸುವ ರೂಢಿ. "ಪರಿಷತ್ತನ್ನು ಮರೆಯಬೇಡಿ : ಚಂದಾ ಹಣ ನೆನಪಿದೆ ತಾನೇ ?" ಪರಿಷತ್ತಿನ ಬಗ್ಗೆ ಎಷ್ಟು ಅಭಿಮಾನ, ಶ್ರದ್ಧೆ! ಇದರಿಂದಾಗಿಯೇ ಅವರು ಪರಿಷತ್ತಿನಲ್ಲಿ ಎಂಟುವರ್ಷ ನಾಲ್ಕು ತಿಂಗಳುಗಳ ಕಾಲ ಅಧ್ಯಕ್ಷ ಪದವಿಯಲ್ಲಿದ್ದು ಕೀರ್ತಿಭಾಜನರಾಗಿದ್ದುದು. ಸಂಭಾಷಣೆಯಲ್ಲಿ ಅತಿ ಚತುರರು ದೊಡ್ಡ ಅಧಿಕಾರಿಗಳಂತೆ ತಮ್ಮನ್ನು ನೋಡಲು ಬಂದವರನ್ನು "ಈಗ ವೇಳೆಯಿಲ್ಲ-ಆಗ ಬಾ, ಆಮೇಲೆ ಬಾ" ಎಂದೆಲ್ಲ ಹೇಳಿ ಅಟ್ಟುವವರಲ್ಲ. ತಾವು ಮಾತನಾಡಬೇಕಾದ ವಿಷಯವನ್ನು ಬೇಗನೆ ಮಾತನಾಡಿ ಮುಗಿಸಿಬಿಡುತ್ತಾರೆ. ಬಂದವರನ್ನು ಗೌರವಿಸುತ್ತಾರೆ.

ನಾನೂ ಶಾಸ್ತ್ರಿಗಳೂ ಒಟ್ಟಿಗೆ ಅನೇಕ ಸ್ಥಳಗಳಿಗೆ ಹೋಗಿ ಬಂದಿದ್ದೇವೆ. ಇಡೀ ಕರ್ನಾಟಕದಲ್ಲ ಸಂಚರಿಸಿದ್ದೇವೆ. ಇವರು ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪೀಠದಲ್ಲಿದ್ದಾಗ ನನ್ನನ್ನು ವ್ಯವಸ್ಥಾಪಕನನ್ನಾಗಿ ನೇಮಿಸಿ, ಸುಮಾರು ಎರಡು ಮೂರು ವರ್ಷಗಳ ಕಾಲ ಪರಿಷತ್ತಿನಲ್ಲಿ ಸೇವೆ ಸಲ್ಲಿಸಲು ಅವಕಾಶ ಮಾಡಿಕೊಟ್ಟರು. ಇದಕ್ಕಾಗಿ ನನ್ನ ಕೃತಜ್ಞತೆ ಅವರಿಗೆ ಸಲ್ಲಲೇಬೇಕು.

ಶ್ರೀ ಶಾಸ್ತ್ರಿಗಳು ಹಟವಾದಿಗಳು : ಹಿಡಿದ ಕೆಲಸವನ್ನು ಏನಾದರೂ ಮಾಡಿ ಸಾಧಿಸಲೇಬೇಕೆನ್ನುವ ಧ್ಯೇಯವುಳ್ಳವರು : ಕಾರ್ಯ ತತ್ಪರತೆಗೆ ಇವರು ಉತ್ತಮ ಉದಾಹರಣೆ. 'ಆಲಸ್ಯಂ ಅಮೃತಂ ವಿಷಂ' ಎಂಬ ಸಂಸ್ಕೃತ ವಾಕ್ಯದಂತೆ ಇವರಿಗೆ ಆಲಸ್ಯವೆಂದರೆ ಎಂದಿಗೂ ಆಗುವುದಿಲ್ಲ. ಆಲಸ್ಯ ಅಮೃತದಂತೆ ಕಂಡು ಬಂದರೂ ಅದು ವಿಷವೇ. ಈ ಗುಟ್ಟನ್ನು ಅರಿತ ಶಾಸ್ತ್ರಿಗಳು ಒಂದು ನಿಮಿಷವನ್ನೂ ವ್ಯರ್ಥವಾಗಿ ಕಳೆಯುವುದಿಲ್ಲ. ಮಧ್ಯಾಹ್ನದ ವೇಳೆಯಲ್ಲಿಯೂ ಸಹ ಲೇಖನ ಬರೆಯುವುದು, ಪ್ರೂಫ್ ತಿದ್ದುವುದು, ಇತ್ಯಾದಿ ಕೆಲಸಗಳನ್ನು ಮಾಡುತ್ತಲೇ ಇರುತ್ತಾರೆ. "ಸ್ವಲ್ಪವಾದರೂ ವಿಶ್ರಾಂತಿ ಬೇಡವೇ ಶಾಸ್ತ್ರಿಗಳೇ" ಎಂದು ಕೇಳಿದರೆ—"ನೆಹರೂ ಹೇಳಿರುವುದೇನು ? 'ಆರಾಮ್ ಹರಾಮ್ ಹೈ' ಎಂದಲ್ಲವೇ ? ಆದ್ದರಿಂದ ನಾವು ಕಾಲವನ್ನು ವ್ಯರ್ಥಮಾಡಬಾರದು. ಏನಾದರೂ ಕೆಲಸ ಮಾಡುತ್ತಲೇ ಇರಬೇಕು." ಎಂದು ಉತ್ತರ ಕೊಡುತ್ತಾರೆ. ಇದಕ್ಕೆ ಕುರುಹಾಗಿ 'ಶರಣ ಸಾಹಿತ್ಯ' ಮಾಸಪತ್ರಿಕೆ ೩೦ ವರ್ಷಗಳಿಂದ ರಾರಾಜಿಸುತ್ತಿದೆ ; ಶರಣ ಸಾಹಿತ್ಯ ಗ್ರಂಥಮಾಲೆಯಲ್ಲಿ ಹಲವಾರು ಶ್ರೇಷ್ಠ ಗ್ರಂಥಗಳು ಬೆಳಕನ್ನು ಕಾಣುತ್ತಿವೆ.

ಯಾವ ವಿಚಾರವನ್ನೇ ಆಗಲಿ, ನಿರ್ಭಯವಾಗಿ, ನಿರ್ದಾಕ್ಷಿಣ್ಯವಾಗಿ ಪ್ರತಿಪಾದಿಸುವ ಸ್ವಭಾವ ಇವರದು. ಸಭೆ ಸಮಾರಂಭಗಳಲ್ಲಿ ತಾವು ಅಧ್ಯಕ್ಷತೆ ವಹಿಸಿದ್ದಾಗ, ಭಾಷಣಕಾರರೇನಾದರೂ ವಿಷಯವನ್ನು ಬಿಟ್ಟು ಬೇರೆ ಹೋದರೆ ಸಾಕು. ಆ ಕ್ಷಣವೇ ಅಧ್ಯಕ್ಷಪೀಠದಿಂದ 'ವಿಷಯಾಂತರವಾಯಿತು' ಎಂದು ಎಚ್ಚರಿಸುತ್ತಾರೆ. ತಾವೂ ಭಾಷಣ ಮಾಡುವಾಗಲೂ ಈ ಅಂಶ ಅವರ ಗಮನದಲ್ಲಿ ಇದ್ದೇ ಇರುತ್ತದೆ. ಅನಾವಶ್ಯಕ ವಿಚಾರಗಳನ್ನು ಅವರು ಹೇರುವುದಿಲ್ಲ: ಹಾಗೂ ಯಾವ ಪದ ಪ್ರಯೋಗ ಮಾಡಬೇಕಾದರೂ ಸಾಕಷ್ಟು ಆಲೋಚಿಸಿಯೇ ಮಾಡುತ್ತಾರೆಂಬುದು ಗಣನೀಯ ಅಂಶ. ಉಚಿತ ಪದಪ್ರಯೋಗ, ವಿಷಯಾಂತರವಾಗದಿರುವುದು ಅವರ ಭಾಷಣಗಳ ಹೆಗ್ಗುರುತು.

ಒಟ್ಟಿನಲ್ಲಿ ಹೇಳುವುದಾದರೆ ಶ್ರೀ ಶಾಸ್ತ್ರಿಗಳು ಕರ್ಮಯೋಗಿಗಳ ಪಂಥಕ್ಕೆ ಸೇರಿದವರು. 'ಯೋಗಃ ಕರ್ಮಸು ಕೌಶಲಂ'ಎಂಬಂತೆ ಯಾವಾಗಲೂ ಸತ್ಕರ್ಮಗಳಲ್ಲಿಯೇ ನಿರತರಾಗಿರುವವರು.

ಇಡೀ ಕರ್ಣಾಟಕದಲ್ಲಿ ನಡೆದ ಅನೇಕ ಸಮಾರಂಭಗಳಲ್ಲಿ ಶ್ರೀ ಶಾಸ್ತ್ರಿಗಳು ಅಧ್ಯಕ್ಷರಾಗಿ ಭಾಗವಹಿಸಿ, ವಿದ್ವತ್ಪೂರ್ಣ ಭಾಷಣಗಳನ್ನು ಮಾಡಿದ್ದಾರೆ. ಅನೇಕ ಗ್ರಂಥಗಳಿಗೆ ಮುನ್ನುಡಿ ಬರೆದು ಹರಸಿದ್ದಾರೆ, ನೂರಾರು ಲೇಖನಗಳೂ, ಗ್ರಂಥಗಳೂ ಇವರ ಲೇಖನಿಯಿಂದ ಹೊರಹೊಮ್ಮಿವೆ.

ಧರ್ಮಸ್ಥಳದಲ್ಲಿ ನಡೆದ ೩೫ನೇ ಸಾಹಿತ್ಯ ಸಮ್ಮೇಳನದಲ್ಲಿ ಇವರು ಅಧ್ಯಕ್ಷರಾಗಿದ್ದರು. ಹೊಂಬುಚದಲ್ಲಿ ನಡೆದ ಧರ್ಮ ಸಮ್ಮೇಳನದಲ್ಲಿ ಉದ್ಘಾಟಕರಾಗಿದ್ದರು. ಈ ಎರಡು ಸಮಾರಂಭಗಳಲ್ಲಿ ಭಾಗವಹಿಸುವ ಅವಕಾಶ ನನಗೂ ಲಭಿಸಿತ್ತು. ವೀರಶೈವರ ಸಭೆಯಲ್ಲಿ ಬಸವಣ್ಣನವರ ತತ್ವಗಳನ್ನು ಹೃದಯಂಗಮವಾಗಿ ಹೇಳಿದಂತೆ ಜೈನರ ಸಭೆಗಳಲ್ಲಿ ಜೈನ ವೇದಾಂತ ತಿಳಿಸುತ್ತಾರೆ. ಸಾರ್ವಜನಿಕ ಸಭೆಗಳಲ್ಲಿ ನೀತಿ ಪ್ರಚಾರ ಮಾಡಿದರೆ, ವಿದ್ಯಾರ್ಥಿಗಳ ಸಭೆಗಳಲ್ಲಿ ರಸವತ್ತಾದ ಕತೆಗಳನ್ನು ಹೇಳಿ ಮನರಂಜನೆ ಉಂಟುಮಾಡುತ್ತಾರೆ. ಪಂಡಿತರ ಸಭೆಗಳಲ್ಲಿ ಸುಪ್ರೌಢ ಭಾಷಣಗಳನ್ನು ಮಾಡಿ, ತಮ್ಮ ಸಂಶೋಧನೆಗಳನ್ನು ಹೊರಗೆಡಹುತ್ತಾರೆ.

ಯಶೋಲಕ್ಷ್ಮಿಯನ್ನು ಅರಸಿ ಇವರು ಹೋದವರಲ್ಲ: ಆ ಲಕ್ಷ್ಮೀದೇವಿ ತಾನಾಗಿಯೇ ಇವರ ಬಳಿಗೆ ಬಂದಿದ್ದಾಳೆ. ಮೊದಲು ಕೀರ್ತನಕೇಸರಿಗಳೆನಿಸಿದ್ದ ಶ್ರೀ ಶಾಸ್ತ್ರಿಗಳು ಆಸ್ಥಾನ ವಿದ್ವಾಂಸರೂ, 'ಪಂಡಿತರತ್ನಂ'ರವರೂ ಆಗಿ, ಈಗ ಸ್ವರಾಜ್ಯಲಭಿಸಿದ ಮೇಲೆ 'ಪದ್ಮಶ್ರೀ'ಗಳೂ ಆಗಿದ್ದಾರೆ. ಇದು ಕನ್ನಡ ನಾಡಿಗೊಂದು ಹೆಮ್ಮೆಯ ವಿಚಾರ. ಮೊದಲು ಶಾಲಾ ಮಾಸ್ತರರಾಗಿದ್ದು ಅನಂತರ ಕನ್ನಡ ಸಾಹಿತ್ಯ ಅಧ್ಯಕ್ಷರಾಗಿ ಈಗ'ಪದ್ಮಶ್ರೀ'ಪ್ರಶಸ್ತಿ ಪಡೆದು ಕೀರ್ತಿಪೆತ್ತಿದ್ದಾರೆ.

ಇಂದಿನ ಯುವಕರಿಗಂತೂ ಶ್ರೀ ಶಾಸ್ತ್ರಿಗಳು ಆದರ್ಶ ಪುರುಷರು. ಅವಿಶ್ರಾಂತ ದುಡಿತಕ್ಕೆ ಇನ್ನೊಂದು ಹೆಸರೇ ಶ್ರೀ ಶಿವಮೂರ್ತಿಶಾಸ್ತ್ರಿಗಳು. ಕರ್ಣಾಟಕ ಏಕೀಕರಣಕ್ಕೆ ಇವರು ಮಾಡಿದ ಸೇವೆ ಚಿರಸ್ಮರಣೀಯವಾದುದು, 'ಕರ್ಣಾಟಕ ವಿಭೂಷಣ' ಎಂಬ ಹೆಸರು ಇವರಿಗೆ ಅನ್ವರ್ಥವಾದುದು.

ಬ. ನ. ಸುಂದರರಾವ್

# ನಿರಂತರ ಕಾಯಕದ ಕಲಿ

"ಸುಮಾರು ೪೦ ವರ್ಷಗಳಿಂದ ಕನ್ನಡನಾಡು ನುಡಿಗಳ ಏಳಿಗೆಗಾಗಿ ನಾನು ಅಳಿಲು ಸೇವೆ ಸಲ್ಲಿಸಿದ್ದೇನೆ. ಉದಯಗಿರಿಯಿಂದ ನೀಲಗಿರಿಯವರೆಗೆ, ಮಂಗಳೂರಿನಿಂದ ಅನಂತಪುರದವರೆಗೆ, ಕಾಸರಗೋಡಿನಿಂದ ಗೋವೆಯವರೆಗೆ, ಬೀದರದಿಂದ ಬಿದನೂರುವರೆಗೆ ಹಲವಾರು ಸಲ ಸಂಚರಿಸಿದ್ದೇನೆ.

ಕರ್ನಾಟಕದ ತೀರ್ಥಕ್ಷೇತ್ರಗಳನ್ನು, ಐತಿಹಾಸಿಕ ಸ್ಥಳಗಳನ್ನು ಸಂದರ್ಶಿಸಿದ್ದೇನೆ. ಮುಂಬಯಿ, ಕಾಶಿ, ದಿಲ್ಲಿ, ಪ್ರಯಾಗ, ಆಗ್ರ, ಹೈದರಾಬಾದು, ಮದರಾಸು, ಕಲ್ಕತ್ತ, ರಾಮೇಶ್ವರಗಳನ್ನು ಸಂಚರಿಸಿ ವಿಶಾಲ ಭಾರತದಲ್ಲಿರುವ ಕನ್ನಡಿಗರನ್ನು ಪರಿಚಯ ಮಾಡಿಕೊಂಡಿದ್ದೇನೆ.

"ಕನ್ನಡ ಸಾಹಿತ್ಯವನ್ನು ತಕ್ಕಮಟ್ಟಿಗೆ ಅಧ್ಯಯನ ಮಾಡಿದ್ದೇನೆ. ೩೦ ವರ್ಷ 'ಶರಣ ಸಾಹಿತ್ಯ'ವನ್ನೂ, ೫ ವರ್ಷ ಸ್ವತಂತ್ರ ಕರ್ನಾಟಕ'ವನ್ನೂ ನಡೆಸಿ ಕನ್ನಡಿಗರ ಸೇವೆ ಸಲ್ಲಿಸಿದ್ದೇನೆ. ಶರಣ ಸಾಹಿತ್ಯ ಗ್ರಂಥಮಾಲೆಯಲ್ಲಿ ೩೬ ಪುಸ್ತಕಗಳನ್ನು ಪ್ರಕಟಿಸಿ ಕನ್ನಡಿಗರ ಕೈಗಿತ್ತಿದ್ದೇನೆ. ಆಕಾಶವಾಣಿಯಲ್ಲಿ ಕೂಡ ಹಲ ಕೆಲವು ಭಾಷಣಗಳನ್ನೂ, ಶಬ್ದ ಚಿತ್ರಗಳನ್ನೂ ನಿರೂಪಿಸಿದ್ದೇನೆ. ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯಗಳಲ್ಲಿ ವಿಸ್ತರಣ ಭಾಷಣ ಮಾಡಿದ್ದೇನೆ. 'ಸಾಹಿತ್ಯ ಪರಿಷತ್ಪತ್ರಿಕೆ' ಮತ್ತು 'ಕನ್ನಡನುಡಿ'ಗಳಿಗೆ ಸಂಪಾದಕನಾಗಿ ಸೇವೆ ಸಲ್ಲಿಸಿದ್ದೇನೆ. ಎಂಟೂಕಾಲು ವರ್ಷ ಪರಿಷತ್ ಅಧ್ಯಕ್ಷನಾಗಿ ಕೈಂಕರ್ಯ ಸಲ್ಲಿಸಿದ್ದೇನೆ."

'ಕರ್ನಾಟಕ ಸಂದರ್ಶನ' ಎಂಬ ಐನೂರ ಇಪ್ಪತ್ತು ಪುಟಗಳ ಗಾತ್ರದ ಗ್ರಂಥದಲ್ಲಿ ಕರ್ತೃ ಬರೆದಿರುವ ಮುನ್ನುಡಿಯಿಂದ ಮೇಲಿನ ವಾಕ್ಯಗುಚ್ಛಗಳು ಉದ್ಧೃತವಾಗಿವೆ.

ಈ ಕರ್ತೃ ಯಾರೆಂಬುದನ್ನು ಅಖಿಲ ಕರ್ನಾಟಕದ ಜನ ಸಮುದಾಯಕ್ಕೆ ಬಿಡಿಸಿ ಹೇಳಬೇಕಾದ ಅಗತ್ಯವಿಲ್ಲ. ನಮ್ಮ ದೇಶ ಭಾರತ, ನಮ್ಮದು ಕನ್ನಡ ನಾಡು ಎಂಬುದನ್ನು ಎಲ್ಲ ಕನ್ನಡಿಗರೂ ಹೇಗೆ ಬಲ್ಲರೋ, ಹಾಗೆಯೇ ಮೇಲೆ ಉಲ್ಲೇಖಿಸಿದ ಸಾಧನೆಗಳ ವ್ಯಕ್ತಿ ಹಲವು ಬಿರುದುಗಳುಳ್ಳ ಬಿ. ಶಿವಮೂರ್ತಿಶಾಸ್ತ್ರಿಗಳೆಂಬುದನ್ನೂ ಅವರು ಬಲ್ಲರು.

ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ, ಕರ್ನಾಟಕ ವಿಭೂಷಣ ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ (ನಾಡದು ೨೩ ರಂದು) ಅರುವತ್ತು ವರ್ಷ ತುಂಬುತ್ತವೆ. (ತಾ|| ೨೪-೨-೬೨) ಅವರಿಗೆ ವಯಸ್ಸಾಯಿತು ಎಂದಲ್ಲ, ಆಯುಸ್ಸಿನಲ್ಲಿ ವರ್ಷಚಕ್ರ ಒಂದು ಸುತ್ತು ಬಂತುಎಂದಷ್ಟೇ ಇದರ ಅರ್ಥ.

ತಮ್ಮ ಮುನ್ನುಡಿಯಲ್ಲಿ ಶಾಸ್ತ್ರಿಗಳು 'ಅಳಿಲು ಸೇವೆ' 'ತಕ್ಕಮಟ್ಟಿಗೆ' "ಕೈಂಕರ್ಯ" ಎಂಬ ಪದಗಳನ್ನು ಬಳಸಿದ್ದಾರೆ. ಅದು ಅವರ ಸೌಜನ್ಯಕ್ಕೆ ನಿದರ್ಶನ.

ಆದರೆ ಅವರ ವ್ಯಕ್ತಿತ್ವವನ್ನೂ, ಸಾಧನೆಗಳನ್ನೂ ಇನ್ನೊಂದು ದೃಷ್ಟಿ ಕೋನದಿಂದ ನಾವು ನೋಡಬೇಕು. ಅದು ಸಾರ್ವಜನಿಕರು ಅವರನ್ನು ಕಾಣುವ ದೃಷ್ಟಿಕೋನ.

ಈ ಕೆಳಗಿನದು ಕೆಲವರ್ಷಗಳ ಹಿಂದೆ [೧೯೫೫] ಬೆಂಗಳೂರಿನ ನಿಯೋಜ್ಯೋತಿ ಭವನದ ಮಾಲೀಕರೂ ಮಿತ್ರಮಂಡಲಿಯವರೂ ಶಾಸ್ತ್ರಿಗಳಿಗೆ ಅರ್ಪಿಸಿದ ಬಿನ್ನವತ್ತಳೆಯಿಂದ,

**ಪೂಜ್ಯಶಾಸ್ತ್ರಿಜಿಯವರೆ,**

"ಆಳುವ ಮಹಾಸ್ವಾಮಿಗಳವರಾದ ಮೈಸೂರು ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ರವರ ಸನ್ನಿಧಿಯಿಂದ ಅವರ ೩೧ ನೇ ವರ್ಷದ ವರ್ಧಂತಿ

ಮಹೋತ್ಸವದ ವಿಶೇಷ ದರ್ಬಾರಿನಲ್ಲಿ ಸಕಲ ರಾಜ ಮರ್ಯಾದೆಗಳೊಡನೆ ಆಸ್ಥಾನ ವಿದ್ವಾನರಾದ ತಮಗೆ "ಪಂಡಿತ ರತ್ನಂ" ಎಂಬ ಬಿರುದು ಪ್ರಾಪ್ತವಾಯಿತು. ಜ್ಞಾನವೃದ್ಧ, ವಯೋವೃದ್ಧ ಶ್ರೀ ಚಿತ್ರದುರ್ಗದ ನಿರಂಜನ ಜಗದ್ಗುರು ಜಯದೇವ ಮುರುಘ ರಾಜೇಂದ್ರರು ತಮಗೆ 'ಕೀರ್ತನಾಚಾರ್ಯ' ಎಂಬ ಬಿರುದನ್ನು ಕೊಟ್ಟು ಗೌರವಿಸಿದರು. ಈ ದಿನ ತಮ್ಮನ್ನು ಗೌರವಿಸುವ ಸುಯೋಗವು ನಮಗೆ ದೊರಕಿದುದಕ್ಕಾಗಿ ಹರ್ಷಿಸಿ ತಮ್ಮನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

"ಹಿಂದೂ ಧರ್ಮ ಮತ್ತು ಸಂಸ್ಕೃತಿಗಳ ಉಜ್ವಲಾಭಿಮಾನಿಗಳೂ ಕನ್ನಡ ಸಮಾಜದಲ್ಲಿ ಪ್ರಮುಖ ವಿದ್ವಾಂಸರೂ ; ಅವಿಶ್ರಾಂತ ಸಮಾಜ ಸೇವಕರೂ ಅಸದೃಶ ವಾಗ್ಮಿಗಳೂ, ಪ್ರಖ್ಯಾತ ಕೀರ್ತನಕಾರರೂ, ಐತಿಹಾಸಿಕ ಸಂಶೋಧಕರೂ, ಸರಸ ಕವಿಗಳೂ, ವಿನಯಾದಿ ಸದ್ಗುಣ ಸಂಪನ್ನರೂ ಅಖಿಲ ಕರ್ನಾಟಕದ ಪ್ರೀತಿ ಗೌರವಗಳಿಗೆ ಪಾತ್ರರೂ ಆದ ತಮ್ಮ ಪಾಂಡಿತ್ಯ ಮತ್ತು ಪ್ರತಿಭೆಗೆ ಮೆಚ್ಚಿ ಲಿಂಗೈಕ್ಯ ಶ್ರೀಮದ್ರಂಭಾಪುರಿ ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯರು ಆಶೀರ್ವಾದಪೂರ್ವಕ ಸುವರ್ಣ ಪದಕದೊಂದಿಗೆ 'ಕೀರ್ತನ ಕೇಸರಿ' ಮತ್ತು 'ಕವಿರತ್ನ' ಎಂಬ ಪ್ರಶಸ್ತಿಗಳನ್ನೂ, ಸುಪ್ರಸಿದ್ಧ ಶ್ರೀ ಶ್ರೀ ಶ್ರವಣಬೆಳಗೊಳದ ಸಿದ್ಧ ಸಿಂಹಾಸನಾಧೀಶ್ವರರಾದ ಶ್ರೀ ಮದಭಿನವ ಚಾರುಕೀರ್ತಿ ಪಂಡಿತಾಚಾರ್ಯ ಸ್ವಾಮಿಗಳವರು 'ಕೀರ್ತನ ವಿಚಕ್ಷಣ ಎಂಬ ಪ್ರಶಸ್ತಿಯನ್ನೂ, ಮಹಾ ತಪಸ್ವಿಗಳಾದ ಲಿಂಗೈಕ್ಯ ಶ್ರೀ ಮದುಜ್ಜಯಿನಿ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ಭಂಗಾರದ ಪದಕದೊಂದಿಗೆ 'ಶಿವಕೀರ್ತನ ಕವಿರಾಜ' ಎಂಬ ಬಿರುದನ್ನೂ ಶ್ರೀಶೈಲ ಸೂರ್ಯಸಿಂಹಾಸನಾಧೀಶರಾದ ಶ್ರೀ ಜಗದ್ಗುರುವಾಗೀಶ ಪಂಡಿತಾರಾಧ್ಯರು 'ವಿಮರ್ಶನಾಚಾರ್ಯ ಎಂಬ ಬಿರುದನ್ನೂ ಕಾಶಿ ಜಗದ್ಗುರು ವಿಶ್ವಾರಾಧ್ಯರು 'ಕರ್ನಾಟಕ ವಿಭೂಷಣ' ಎಂಬ ಬಿರುದನ್ನೂ ಕೊಟ್ಟರು."

ಹೀಗೆ ಅರಮನೆ ಗುರುಮನೆಗಳೆರಡರಿಂದಲೂ ಪುರಸ್ಕೃತರಾದವರು ಜನತೆಯಿಂದಲೂ ಸನ್ಮಾನಿತರಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ.

ಬಯಲಿನಿಂದ ಆರಂಭಿಸಿ, ವಿವಿಧ ಗಿರಿಶೃಂಗಗಳನ್ನೇರಿ, ಸಾಹಿತ್ಯ ಪರಿಷತ್ತಿನ ಅಧ್ಯಕ್ಷತೆಯ ಗೌರೀಶಂಕರ ಶಿಖರವನ್ನು ಶಾಸ್ತ್ರಿಗಳು ಆರೋಹಿಸಿರುವುದು, ಸಾರ್ವಜನಿಕರನ್ನು ವಿಸ್ಮಯಗೊಳಿಸಿರುವಂತಹ ಬೃಹತ್ ಸಾಧನೆ.

ಬಯಲು, ತುಮಕೂರು ಜಂಗಮ ಮನೆತನದಲ್ಲಿ ಜನನ. ಬಸವಯ್ಯ ಸ್ವಾಮಿಯವರ (ಬಿ) ಪುತ್ರರಾದ ಶಿವಮೂರ್ತಿಶಾಸ್ತ್ರಿಗಳು, ಪ್ರಾರಂಭದಲ್ಲಿ ಪಾಠ ಹೇಳುವ ಅಧ್ಯಾಪಕರಾದರು. ಕನ್ನಡ ಪಂಡಿತರು. ಆದರೆ ಶಾಲೆಯ ನಾಲ್ಕು ಗೋಡೆಗಳ ನಡುವೆ ಸದಾ ಬಂದಿಯಾಗಿರಲು ಇಷ್ಟಪಡದೆ, ಆಸ್ಥಾನ ವಿದ್ವಾನ್ ಕೈಲಾಸವಾಸಿ ಕರಿಬಸವ ಶಾಸ್ತ್ರಿಗಳಲ್ಲಿ ಅಭ್ಯಾಸ ಮಾಡಿ, ಜ್ಞಾನಾರ್ಜನೆ ಪಡೆದು ಕೀರ್ತನ ಕ್ಷೇತ್ರಕ್ಕಿಳಿದರು.

ಅವರು ಮಾಡಿರುವ ಕೀರ್ತನೆಗಳು, ಶಿವಕಥೆಗಳು ಸಹಸ್ರಾರು. ಒಮ್ಮೊಮ್ಮೆ ಶಿವಕಥೆಗೆ ಹತ್ತು ಸಾವಿರದಷ್ಟು ಜನ ನೆರೆಯುವುದಿತ್ತು. ಆ ದೊಡ್ಡ ಸಮುದಾಯವನ್ನೂ ಧ್ವನಿವರ್ಧಕ ಯಂತ್ರಗಳಿಲ್ಲದ ಆ ಕಾಲದಲ್ಲಿ ಕಂಚಿನ ಕಂಠದ ಅಸ್ಖಲಿತ ವಾಗ್ಝರಿಯಿಂದ ಶಾಸ್ತ್ರಿಗಳು ಬಂಧನದಲ್ಲಿಡುತ್ತಿದ್ದರು.

ಆ ಬಗೆಯ ಸಂಚಾರ ಜೀವನದಲ್ಲಿ ತಾಳೆಯಗರಿ ಗ್ರಂಥಗಳನ್ನು ಅವರು ಸಂಗ್ರಹಿಸತೊಡಗಿದರು.

ಅವರು ಸಂಪಾದಿಸಿದ ಸಂಗ್ರಹಿಸಿದ ಗ್ರಂಥಗಳಲ್ಲಿ ಕೆಲವು ಪ್ರಕಟಗೊಂಡಿವೆ. ಇನ್ನೂರಕ್ಕೂ ಹೆಚ್ಚು ತಾಳೆಯಗರಿ ಗ್ರಂಥಗಳು ಇನ್ನೂ ಅಪ್ರಕಟಿತವಾಗಿ ಉಳಿದಿವೆ.

ಈ ಪ್ರಾಚೀನ ಕೃತಿಗಳನ್ನು ದೊರಕಿಸುವುದಂತೂ ಸುಲಭದ ಕೆಲಸವಾಗಿರಲಿಲ್ಲ.

ಒಂದೂರು. ಅಲ್ಲಿ ಒಬ್ಬರು ವೃದ್ಧರ ಪೂಜಾಗೃಹದಲ್ಲಿ ತಾಳೆವೋಲೆಯೊಂದಿತ್ತು. ಅಪೂರ್ವ ಕೃತಿ.

'ಹರೀಶ್ವರನ ರಘಟಾ ಕಾವ್ಯ. ಅದನ್ನು ಪಡೆಯಬೇಕೆಂಬ ಆಸೆ ಶಾಸ್ತ್ರಿಗಳಿಗೆ. ಆತ ಕೊಡಲೊಲ್ಲ. ಅವನಿಗೆ ಮಕ್ಕಳಿರಲಿಲ್ಲ. ಅದಕ್ಕಾಗಿ ಕನ್ಯೆಯೊಬ್ಬಳನ್ನು ಮದುವೆಯಾಗಬೇಕೆಂಬ ಆಸೆ ಅವನದು. ಆ ಯೋಚನೆಗೆ ಊರಿನ ವಿರೋಧ. ಶಾಸ್ತ್ರಿಗಳು ಶಿವಕಥೆ ಮಾಡಿ, ತನ್ನ ಮದುವೆಯ ಬಗ್ಗೆ ಜನರ ಮನವೊಲಿಸುವುದಾದರೆ ತಾಳೆವೋಲೆಯನ್ನು ಕೊಡುವೆ ಎಂದ ಆತ. ಶಾಸ್ತ್ರಿಗಳೊಪ್ಪಿ ಅವನ ಪ್ರಾರ್ಥನೆಯನ್ನು ಈಡೇರಿಸಿದರು. ತಾಳೆವೋಲೆ ಇವರ ಗೃಗೆ ಬಂತು !

ಇಂತಹ ಉದಾಹರಣೆಗಳು ಹಲವು.

ಈ ಸಾಹಸಜೀವಿಯದು ನಿರಂತರಕಾಯಕದ ಕಥೆ. ಸಂಗೀತ ಸಾಹಿತ್ಯ ಸಂಶೋಧನೆಗಳಲ್ಲಿ ಆಸಕ್ತರಾದ ಇವರಿಗೆ ರಾಜಕೀಯವೂ ಇಷ್ಟವೇ. ಅವರು ಖಾದಿ ಟೋಪಿ ಹಾಕಿಕೊಳ್ಳುತ್ತಿದ್ದ ಕಾಲವೂ ಒಂದಿತ್ತು. ಹೈದರಾಬಾದ್ ಸರಕಾರ ತನ್ನ ಸಂಸ್ಥಾನದೊಳಗೇ ಬರಬಾರದೆಂದು ಶಾಸ್ತ್ರಿಗಳಿಗೆ ವಿಧಿಸಿದ ಆಜ್ಞೆ ಹದಿನೈದು ವರ್ಷ ಜಾರಿಯಲ್ಲಿತ್ತು. ಶಾಸ್ತ್ರಿಗಳ ಚಟುವಟಿಕೆ ಮೇಲೆ ಪೋಲೀಸರೂ ಕಣ್ಣಿಟ್ಟದ್ದೂ ಇತ್ತು. ಕೀರ್ತನಕಾರನ ವೇಷದಲ್ಲಿ ಒಬ್ಬ ಕ್ರಾಂತಿಕಾರಿಯೇ ಇರಬಹುದೆಂದು ನಮ್ಮ ನ್ಯಾಯ ರಕ್ಷಕರು ಶಂಕಿಸಿದುದೂ ಸಹಜವೇ.

ಜಗತ್ತಿನಲ್ಲಿ ಎರಡು ಘೋರ ಯುದ್ಧಗಳೂ; ಈ ದೇಶದಲ್ಲಿ ಸ್ವಾತಂತ್ರ್ಯ ಸಂಗ್ರಾಮ ನಡೆದ ಕಾಲಾವಧಿ. ವಾತಾವರಣ ತುಂಬಾ ಉಗ್ರ ಸತ್ಯಾಗ್ರಹ ಕ್ರಾಂತಿ ವಿದ್ರೋಹಗಳ ಮಾತು. ಕವಿಗಳ ಕಲ್ಪನೆಯ ಕುದುರೆಗಳಿಗೂ ಆಗ ರೆಕ್ಕೆ ಹುಟ್ಟಿತ್ತು.

ಬಿ. ಶಿವಮೂರ್ತಿಶಾಸ್ತ್ರಿಗಳು ಕರ್ನಾಟಕದ ಕನಸನ್ನು ಕಂಡ ಕೆಲವೇ ಅದ್ಯರಲ್ಲಿ ಒಬ್ಬರಾದರು.

ಬದುಕಿನಲ್ಲಿ ಅನಿರೀಕ್ಷಿತ ತಿರುವುಗಳಿರುವುದುಂಟು. ಅಂಥಸೊಂದರಲ್ಲಿ ಶಾಸ್ತ್ರಿಗಳು ಹಿಂದೆ ಹೊರಳಿದ್ದರೆ ಈ ದಿನ ಅವರು ಮಂತ್ರಿಯಾಗುತ್ತಿದ್ದರು. ಸಂಶಯವಿಲ್ಲ.

ಆದರೆ ಈಗಿನ ಮಂತ್ರಿಗಳ ನೇಕರಿಗೆ ಕರ್ನಾಟಕದ ಮಂತ್ರೋಪದೇಶ ಮಾಡಿರುವ ಹೆಗ್ಗಳಿಕೆ ಶಾಸ್ತ್ರಿಗಳದು.

'ಸ್ವತಂತ್ರ ಕರ್ನಾಟಕ ಪವರ್ ಪ್ರೆಸ್'ನ ಒಡೆಯರಾದ ಶಾಸ್ತ್ರಿಗಳಿಗೆ, ಅತಂತ್ರವಾಗಿದ್ದ ಕನ್ನಡ ರಾಜ್ಯ ಒಂದಾಯಿತೆಂದು ಈಗ ಸಮಾಧಾನ. ಆದರೆ ಈ ನಾಡಿಗೆ ಯೋಗ್ಯ ನಾಯಕತ್ವ ದೊರೆಕಿಲ್ಲ ಎಂದು ಅವರಿಗೆ ಅತೃಪ್ತಿ. ಅಸಮಾಧಾನ.

ಮಾತುಗಾರ ಶಾಸ್ತ್ರಿಗಳು ಸ್ನೇಹಪರರು. ಏನಾಗುತ್ತಿದೆ ಎಂಬುದರ ಅರಿವು ಶ್ರೋತೃಗಳಿಗೆ ಆಗುವುದಕ್ಕೆ ಮುನ್ನವೇ ಅವರ ಮನಸ್ಸನ್ನೂ ಜೇಬುಗಳನ್ನೂ ಶಾಸ್ತ್ರಿಗಳು ಸೂರೆ ಮಾಡಿರುತ್ತಾರೆ. ಜೇಬಿನ ಸೂರೆ ಪರಿಷತ್ತಿಗಾಗಿ, ಇಲ್ಲವೆ 'ಶರಣಸಾಹಿತ್ಯ'ಕ್ಕಾಗಿ.

ಮುಂದಿನ ತಿಂಗಳು ರಾಜ್ಯನಾಯಕರ ಸಮ್ಮುಖದಲ್ಲಿ ರಜತ ಮಹೋತ್ಸವ ಆಚರಿಸಲಿರುವ 'ಶರಣ ಸಾಹಿತ್ಯ' ಶಾಸ್ತ್ರಿಗಳ ಛಲಪ್ರವೃತ್ತಿಗೂ ದಕ್ಷತೆಗೂ ಗುರುತು.

ರಂಗಸ್ವಾಮಿಗುಡಿ ರಸ್ತೆಯಲ್ಲಿರುವ ಶಾಸ್ತ್ರಿಗಳ ಸ್ವಂತ ಮನೆ, ಮುದ್ರಣಾಲಯಗಳ ಆವರಣದಲ್ಲಿ ಅವರನ್ನು ಕಾಣುವುದೊಂದು ಅನುಭವ.

ಸರಸ್ವತಿ-ಲಕ್ಷ್ಮಿಯರು, ಜಗಜ್ಯೋತಿ ಬಸವೇಶ್ವರರು, ಬುದ್ಧ, ನೇತಾಜಿ, ಗುರುನಾನಕ್, ಗೋಮಟೇಶ್ವರ, ಲಿಂಕನ್, ಕಾರಿಯಪ್ಪ, ವಿವೇಕಾನಂದ, ರಾಷ್ಟ್ರ ನಾಯಕರು, ರಾಜ್ಯನಾಯಕರು, ಮೈಸೂರಿನ ಅರಸರು, 'Terms Cash' ಎಂಬ ಬೋರ್ಡ್— ಹೀಗೆ ಶಾಸ್ತ್ರಿಗಳ ಆಫೀಸು ಕೊಠಡಿಯ ಗೋಡೆಗಳ ತುಂಬ ರಾರಾಜಿಸುತ್ತಿರುವ ಫೋಟೋಗಳು, ಚಿತ್ರಗಳು ಶಾಸ್ತ್ರಿಯವರ ವರ್ಣರಂಜಿತ ಬದುಕಿಗೆ ಕನ್ನಡಿ ಹಿಡಿಯುತ್ತವೆ.

ಇದೇ ಕೊಠಡಿಯಲ್ಲಿ ಬಾಲ ಪ್ರತಿಭೆಗಳನ್ನು ಅವರು ಹಿಂದೆ ಕೊಡಹಾಕಿದರು. ಉಪಸಂಪಾದಕರಾಗಿ! ಅರ್ಚಿಕ ವೆಂಕಟೇಶ, ಕುಮಾರ ವೆಂಕಣ್ಣ, ಬಸವರಾಜ ಕಟ್ಟೀಮನಿ....

ಶಾಸ್ತ್ರಿಗಳು ಗಟ್ಟಿಗರು, ವಿವಾದ ಪುರುಷರಾಗಿದ್ದೂ ಎಂಟು ವರ್ಷ ಸಾಹಿತ್ಯ ಪರಿಷತ್ತಿನ ಯಾಜ

ಮಾನ್ಯವನ್ನು ನಿರ್ವಹಿಸಿಕೊಂಡಿರುತ್ತ ಹೊಸ ವಿಕ್ರಮ ವನ್ನು ಸ್ಥಾಪಿಸಿರುವುದೇನು ಸಾಮಾನ್ಯವೇ ?

ಕೇಳಿದರೆ ಅವರೆನ್ನುತ್ತಾರೆ :
"ಈ ಸುಖ ಬೇಡ. ಇನ್ನು ಸಾಕು."
ಹೀಗೂ ಉಂಟೆ ? ಎಂದೀರಾ ಎಲ್ಲಾದರೂ.

"ನಿಮ್ಮನ್ನೇ ಅಧ್ಯಕ್ಷ ಮಾಡ್ತೀನಿ. ಅನುಭವಿಸಿ ನೋಡಿ", ಎಂದು ಬೆದರಿಕೆ ಹಾಕುತ್ತಾರೆ, ರಸಿಕ ಶಾಸ್ತ್ರಿಗಳು.

ಬೆರಳೆಣಿಕೆಗೆ ಸಿಗದಷ್ಟು ಸಂಘ ಸಂಸ್ಥೆಗಳ ಕಾರ್ಯ ಸಮಿತಿ ಸದಸ್ಯರಾಗಿರುವ ಶಾಸ್ತ್ರಿಗಳ ಇನ್ನೊಂದು ಕಾರ್ಯಕ್ಷೇತ್ರ ಸಾಹಿತ್ಯ ಸೃಷ್ಟಿ. ಸಂಶೋಧಿಸಿರುವ, ಸಂಪಾದಿಸಿರುವ ಕೃತಿಗಳ ಜತೆಗೆ ಅವರ ಸ್ವಂತದ್ದೂ ಹಲವಿವೆ. 'ಶೂಲಪಾಣಿ'ಯಾಗಿ ಅವರು ಕವಿತೆಗಳನ್ನು ಬರೆದಿದ್ದಾರೆ. ನಾಲ್ಕು ಸಂಪುಟಗಳಲ್ಲಿರುವ 'ವೀರಶೈವ ಸಾಹಿತ್ಯ ಮತ್ತು ಇತಿಹಾಸ' ಅವರ ದೊಡ್ಡ ಕೃತಿ ಅಂಥದೇ ಇನ್ನೊಂದು 'ಕರ್ಣಾಟಕ ಸಂದರ್ಶನ'. ಕೆಲವು ಕಥೆ, ಕಾದಂಬರಿಗಳು [ರಾಣಿ ರುದ್ರಮದೇವಿ, ಶಿವಪ್ಪ ನಾಯಕ, ಕೆಳದಿ ರಾಣಿ ಚೆನ್ನಮ್ಮಾಜಿ] ಇವರ ಕೆಲವು ಪುಸ್ತಕಗಳು ಬಹುಮಾನಗಳನ್ನು ಪಡೆದಿವೆ; ಪಠ್ಯಪುಸ್ತಕ ಗಳಾಗಿವೆ.

ಶಾಸ್ತ್ರಿಗಳು ಸಾಮಾನ್ಯ ಎತ್ತರದ ಸ್ಥೂಲ ಕಾಯರು. ಆದರೆ ವೇದಿಕೆಯ ಮೇಲೆ ಅವರು ಎತ್ತರದ ವ್ಯಕ್ತಿಯಂತೆ ಭಾಸವಾಗುತ್ತಾರೆ. ಅದೇ ಅವರ ಯಶ ಸ್ಸಿನ ರಹಸ್ಯ.

ಕಳೆದ ಅರುವತ್ತು ವರುಷಗಳಲ್ಲಿ ಅವರು ಸಾಧಿ ಸಿರುವ ಕೆಲಸ, ಸಂಪಾದಿಸಿರುವ ಬಿರುದುಗಳು ಗಮ ನಾರ್ಹ ಪ್ರಮಾಣದವು. ಮುಂದಿನ ನಾಲ್ವತ್ತು ವರ್ಷ ಗಳಲ್ಲಿ ಅವರು ಸಾಧಿಸಬಹುದಾದ ಕೆಲಸ ಮತ್ತು ಸಂಪಾದಿಸಬಹುದಾದ ಬಿರುದುಗಳು ಮತ್ತಷ್ಟು ದೊಡ್ಡ ಪ್ರಮಾಣದವೇ ಆಗಿರುತ್ತವೆ. ಮುಂದಿನ ಕನ್ನಡ ಚರಿತ್ರೆ ಕಾರರು ಅವರನ್ನು ತಪ್ಪದೆ ನೆನೆಯುತ್ತಾರೆ. ಇದರಲ್ಲಿ ಸಂದೇಹವಿಲ್ಲ.

ನಿರಂಜನ
ತಾ॥ ೧೭-೨-೬೩ ಪ್ರಜಾವಾಣಿ

---

## ಶರಣ ಸಾಹಿತ್ಯಕಾರ

# ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

ಬೆಂಗಳೂರಿನ ಸ್ವತಂತ್ರ ಕರ್ಣಾಟಕ ಮುದ್ರಣಾಲಯದ ಮೂಲಕ, ಸುಪ್ರಸಿದ್ಧ ಶರಣ ಸಾಹಿತ್ಯ ಮಾಸಿಕದ ಯಶಸ್ವೀ ಹಾಗೂ ಹೊಣೆಗಾರ ಸಂಪಾದಕ, ಅನೇಕ ರಾಜಕೀಯ, ಸಾಹಿತ್ಯಕ, ಧಾರ್ಮಿಕ, ಸಾಮಾಜಿಕ ಸಂಸ್ಥೆಗಳ ಉಚ್ಚ ಪದಾಧಿಕಾರಿ, ಆಸ್ಥಾನವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ, ಕರ್ಣಾಟಕ ವಿಭೂಷಣ, ವಿದ್ಯಾವಾರಿದಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಯವರಿಗೆ ತಾ|| ೨೩-೨-೬೫ಕ್ಕೆ ಅರುವತ್ತು ಎರಡು ವರ್ಷ ತುಂಬಿ ೬೩ ನೇ ವರ್ಷ ಪ್ರಾರಂಭವಾಗುತ್ತದೆ. ಈ ಸಮಯದಲ್ಲಿ ಮಹಾಪುರುಷರಾದ ಅವರ ಹಿತ ಚಿಂತನೆ ಮಾಡುವುದು ನಮ್ಮಗಳ ಕರ್ತವ್ಯವಾಗಿದೆ.

ಬೆಂಗಳೂರಿನಲ್ಲಿ ನಡೆದ ಅವರ ಷಷ್ಟ್ಯಬ್ದಿ ಮಹೋತ್ಸವಕ್ಕೆ ನಾನು ಉಪಸ್ಥಿತನಿದ್ದೆನು. (ತಾ|| ೨೪-೨-೬೩) ಆಗ ಶಾಸ್ತ್ರಿಗಳ ಲೋಕ ಪ್ರಿಯತಾ, ಕಾರ‍್ಯದಕ್ಷತಾ, ವ್ಯಕ್ತಿ ಪ್ರಭಾವ ಮೊದಲಾದುವನ್ನು ಕಣ್ಣಾರ ಕಂಡು ನಾನು ಆಶ್ಚರ್ಯ ಭರಿತನಾಗಿರುವೆನು. ತ್ರಿಕಾಲ ಇಷ್ಟಲಿಂಗಪೂಜೆ, ಭಸ್ಮ-ರುದ್ರಾಕ್ಷಧಾರಣ ಇತ್ಯಾದಿಗಳು ಅವರ ಧರ್ಮಶ್ರದ್ಧೆಗೆ ನಿದರ್ಶನವಾಗಿರುತ್ತವೆ. ಗಂಭೀರಧ್ವನಿ, ದಿವ್ಯವಾಗ್ಮಿತ್ವ, ಬಹು ಭಾಷೆಗಳ ಪರಿಜ್ಞಾನ, ರಸ ಹಾಸ್ಯದ ಮಾತುಗಾರಿಕೆ ಇವು ಶಾಸ್ತ್ರಿಗಳ ಪ್ರಭಾವವನ್ನು ಇತರರ ಮೇಲೆ ಉಂಟು ಮಾಡಲು ಸಮರ್ಥವಾಗಿವೆ.

ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ತುಮಕೂರು ಹುಲುಕುಂಟೆ ಮಠದಲ್ಲಿ ಜಂಗಮರಾದ ಶ್ರೀ ಬಸವಯ್ಯ ಸ್ವಾಮಿಗಳ ಮಗನಾಗಿ ತಾ|| ೨೩-೨-೧೯೦೩ ರಂದು ಜನಿಸಿದರು. ಅವರು ಸೋಮವಾರ ಬೆಳಗ್ಗೆ ೬ ಗಂಟೆಗೆ ಜನ್ಮಧಾರಣ ಮಾಡಿದರು. ಮನೆತನವು ಬಡವರಾದುದರಿಂದ ತಂದೆ ಚಿಕ್ಕವಯಸ್ಸಿನಲ್ಲಿ (೧೯೧೮) ಕೈಲಾಸವಾಸಿಯಾದ್ದರಿಂದ ಶಾಸ್ತ್ರಿಗಳು ಬಾಲ್ಯದಲ್ಲಿ ಪ್ರೌಢ ವಿದ್ಯಾಭ್ಯಾಸ ಮಾಡಲಿಲ್ಲ. ಅವರು ಅಪ್ಪರ್ ಸೆಕೆಂಡರಿ ಪರೀಕ್ಷೆ ಪಾಸಾದಮೇಲೆ (೧೯೨೩) ಮೂರುವರ್ಷ ಕನ್ನಡ ಶಿಕ್ಷಕರಾಗಿದ್ದರು. ಅನಂತರ ಮಹಾ ವಿದ್ವಾನ್ ಕೈ|| ಪಿ. ಆರ್. ಕರಿಬಸವಶಾಸ್ತ್ರಿಗಳಲ್ಲಿ ಆರು ವರ್ಷ ಕನ್ನಡ-ಸಂಸ್ಕೃತ-ಶಾಸ್ತ್ರ-ಸಾಹಿತ್ಯ ಅಭ್ಯಾಸ ಮಾಡಿದರು. ಕೀರ್ತನ ಕಲೆ ಸಾಧಿಸಿದರು. ೧೯೨೫ ರಿಂದ ಕೀರ್ತನಕಾರರಾಗಿ ೧೯೩೭ ರ ವರೆಗೆ ಸಮಗ್ರ ಕರ್ನಾಟಕ ಸುತ್ತಾಡಿದರು. ಕೀರ್ತಿ, ಗೌರವ, ಧನ ಸಂಪಾದನೆ ಮಾಡಿದರು. ಈಗ ಅವರು ಸಮಾಜದ ಓರ್ವ ಮುಖಂಡರು, ವಿಖ್ಯಾತ ಲೇಖಕರು, ಹಾಗೂ ಗ್ರಂಥಕಾರರು ಎನಿಸಿದ್ದಾರೆ. ಶ್ರೀ ಶಾಸ್ತ್ರಿಗಳು ಸಂಶೋಧನಾತ್ಮಕ ಹಾಗೂ ವಿದ್ವತ್ಪೂರ್ಣ ೩೬ ಪುಸ್ತಕಗಳನ್ನು ಬರೆದು ಪ್ರಕಟಿಸಿದ್ದಾರೆ. ಶರಣ ಸಾಹಿತ್ಯ ಪ್ರೌಢಮಾಸಿಕವನ್ನು ೩೦ ವರ್ಷಗಳಿಂದ ನಡೆಸಿದ್ದಾರೆ. ಕರ್ಣಾಟಕ ಏಕೀಕರಣಕ್ಕಾಗಿ 'ಸ್ವತಂತ್ರ ಕರ್ಣಾಟಕ' ಎಂಬ ವಾರಪತ್ರಿಕೆಯನ್ನು ೫ ವರ್ಷ ನಡೆಸಿದ್ದಾರೆ. ಅದರಲ್ಲಿ ೪೦,೦೦೦ ರೂ. ನಷ್ಟವಾಗಿ ತಮ್ಮ ಹಿರಿಯರ ಆಸ್ತಿಪಾಸ್ತಿ ಮಾರಿ ಸಾಲ ತೀರಿಸಿದ್ದಾರೆ. ಆದರೂ 'ವಿಶಾಲ ಮೈಸೂರು' ಆಯಿತೆಂದು ಸಮಾಧಾನಗೊಂಡಿದ್ದಾರೆ.

ಇವರು ಮೈಸೂರು ಅರಮನೆ ವಿದ್ವಾಂಸರಾಗಿ 'ಪಂಡಿತರತ್ನಂ' ಬಿರುದು ಪಡೆದಿದ್ದಾರೆ. ಕಾಶಿ ಜಂಗಮವಾಡಿ, ಶ್ರೀಶೈಲ, ಶೃಂಗೇರಿ, ರಂಭಾಪುರಿ, ಉಜ್ಜಯಿನಿ, ಚಿತ್ರದುರ್ಗ ಜಗದ್ಗುರುಗಳಿಂದ ಬಿರುದು ಪಡೆದಿದ್ದಾರೆ. ಕೀರ್ತನಾಚಾರ್ಯ, ವಿದ್ಯಾವಾರಿಧಿ, ಕರ್ಣಾಟಕ ವಿಭೂಷಣ, ಪಂಡಿತ ರತ್ನಂ ಮೊದಲಾದ ಬಿರುದುಗಳಿಸಿದ್ದಾರೆ. ಹಿಂದು, ಮುಸ್ಲಿಂ, ಕ್ರಿಶ್ಚಿಯನ್, ಜೈನ ಮೊದಲಾದ ಸಮಾಜದವರ ಗೌರವ ಪಡೆದಿದ್ದಾರೆ. ಮುಂಬಯಿ,

ಮದ್ರಾಸ್, ಹೈದ್ರಾಬಾದ್, ದಿಲ್ಲಿ ಕರ್ಣಾಟಕ ಸಂಘಗಳ ಸನ್ಮಾನ ಪಡೆದಿದ್ದಾರೆ. ಶ್ರೀ ಶಾಸ್ತ್ರಿಗಳು ವ್ಯವಹಾರವಾದಿ, ಅನುಭವವಾದಿ ವಿದ್ವಾಂಸರಾಗಿದ್ದಾರೆ. ವೀರಶೈವ ಸಮಾಜಕ್ಕೂ, ಕರ್ಣಾಟಕಕ್ಕೂ ಅವರು ಮಾಡಿರುವ ಸೇವೆ ಅಪಾರವಾದುದು. ಇವರು ೩೦ ವರ್ಷಗಳಿಂದ ಅಖಿಲ ಭಾರತ ವೀರಶೈವ ಮಹಾ ಸಭಾ ಕಾರ್ಯಸಮಿತಿ ಸದಸ್ಯರಾಗಿದ್ದಾರೆ. ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಸಮಿತಿ ಉಪಾಧ್ಯಕ್ಷರಾಗಿದ್ದಾರೆ. ಕನ್ನಡಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಎಂಟೂಕಾಲು ವರ್ಷ ಸೇವೆ ಮಾಡಿದ್ದಾರೆ. ಈಗ ಕರ್ನಾಟಕ ಗಡಿನಾಡು ಕ್ರಿಯಾ ಸಮಿತಿ ಅಧ್ಯಕ್ಷರಾಗಿದ್ದಾರೆ. ೪೦ ವರ್ಷಗಳಿಂದ ಕರ್ಣಾಟಕ ರಾಜ್ಯ ರಚನೆಗೆ ಶ್ರಮಿಸಿದ್ದಾರೆ. ಮೈಸೂರುಸಂಸ್ಕೃತ ಬೋರ್ಡ್, ಭಾರತೀ ವಿದ್ಯಾಭವನ (ರಾಜ್ಯ) ಸದಸ್ಯರಾಗಿದ್ದಾರೆ. ಒಟ್ಟಿನಲ್ಲಿ ಕನ್ನಡ, ಸಂಸ್ಕೃತ, ತೆಲುಗು, ತಮಿಳ್ಳು, ಮರಾಠಿ, ಹಿಂದಿ ಮೊದಲಾದ ಭಾಷೆಗಳನ್ನು ಬಲ್ಲ ವಿದ್ವಾಂಸರೆನಿಸಿದ್ದಾರೆ. ಶಾಸ್ತ್ರಿಗಳು ಅಸದೃಶ ಸಾಹಸಿ, ಅಪ್ರತಿಮ ಧೈರ್ಯಶಾಲಿ, ಸರ್ವಧರ್ಮ ಸಹಿಷ್ಣು, ಪ್ರತಿಭಾನ್ವಿತ ಪಂಡಿತ, ಪ್ರಭಾವೀ ಸಮಾಜ ಸಾಹಿತ್ಯ ಸೇವಕರೆನಿಸಿದ್ದಾರೆ. ಇವರ ಅಪಾರ ಸೇವೆಗಾಗಿ ಕೇಂದ್ರ ಹಾಗೂ ರಾಜ್ಯ ಸರಕಾರಗಳಿಂದ ಉಚಿತ ಸನ್ಮಾನವಾಗುವುದು ಅಗತ್ಯವಾಗಿದೆ. ಕೆಲದಿನಗಳ ಹಿಂದೆ ರಾಜ್ಯಪಾಲರು ಶ್ರೀ ಕೆ. ಸಿ. ರೆಡ್ಡಿಯವರು ಶರಣ ಸಾಹಿತ್ಯ ಕಾರ್ಯಾಲಯದಲ್ಲಿ ಹೇಳಿರುವಂತೆ "ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳನ್ನು ಕಡೆಗಣಿಸುವುದು. ಕರ್ಣಾಟಕದ ರಾಜ್ಯವನ್ನು ಹಾಗೂ ಪಾಂಡಿತ್ಯ ಪ್ರತಿಭೆಗಳನ್ನು ಕಡೆಗಾಣಿಸಿದಂತೆ' ಎಂಬ ಮಾತನ್ನು ನಾವು ಸಂಪೂರ್ಣವಾಗಿ ಸಮರ್ಥಿಸುತ್ತೇವೆ.

ಜ್ಞಾ ಸಪ್ರಸಾದ

---

# ೬೦ ತುಂಬಿದ ಆದರ್ಶ ಕರ್ಮಯೋಗಿ
# ಬಿ. ಶಿವಮೂರ್ತಿ ಶಾಸ್ತ್ರಿಗಳು

ಶ್ರೀ ಬಿ. ಶಿವಮೂರ್ತಿಶಾಸ್ತ್ರಿಯೆಂದಾಗ ಕನ್ನಡ ಸಾಹಿತ್ಯ, ಕರ್ನಾಟಕ ಬಂದೇ ಬರಬೇಕು. ೬೦ ವರ್ಷಗಳಿಂದ ಅವಿಶ್ರಾಂತವಾಗಿ ನಾಡಿಗೋಸ್ಕರ, ನಾಡುನುಡಿಗೋಸ್ಕರ ದುಡಿಯುತ್ತಿರುವ ಆದರ್ಶ ಕರ್ಮಯೋಗಿ. ಪ್ರಾಥಮಿಕ ಶಾಲಾ ಉಪಾಧ್ಯಾಯರೊಬ್ಬರು, ನಾಡಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದರೆಂದರೆ ನಿಜಕ್ಕೂ ಅವರು ಕರ್ನಾಟಕದಲ್ಲಿ ತ್ಯಾಗ ಮಾಡಿರುವುದೇ ನಿದರ್ಶನ. ಶ್ರೀಯುತರ ಹೆಸರು ಕರ್ನಾಟಕದಲ್ಲಿ ಅಚ್ಚಳಿಯದೆ ಬದುಕುತ್ತಿದೆ. ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ, ಕರ್ನಾಟಕ ವಿಭೂಷಣ ಇತ್ಯಾದಿ ಬಿರುದಾಂಕಿತರಾಗಿ, ಅರಮನೆ ಗುರುಮನೆಗಳಿಂದ ಗೌರವಿಸಲ್ಪಟ್ಟಿದ್ದಾರೆ. ಇಂತಹ ಒಬ್ಬ ಕರ್ಮಯೋಗಿಯ ಸೇವೆಯನ್ನು ಪಡೆಯುತ್ತಿರುವ ಕರ್ನಾಟಕ ಮತ್ತು ಕನ್ನಡಿಗರು ಧನ್ಯರು. ಇಂದು ಹೇಳುವುದಾದರೆ, ಅನೇಕ ರಾಜಕಾರಣಿಗಳಿಗೆ ಕರ್ನಾಟಕದ ಪರಿಚಯದ ಪಾಠ ಹೇಳಿದ್ದಾರೆ ಎಂದರೆ ತಪ್ಪಾಗಲಾರದು. ಇವರ ಬಗ್ಗೆ ಬರೆಯುತ್ತಾ ಹೋದರೆ ಒಂದು ಸ್ಮರಸ್ಕೃತೀ ಭಂಡಾರವನ್ನು ನಿರ್ಮಿಸಬಹುದು. ಇವರನ್ನು ರಾಜ್ಯ ಸರ್ಕಾರ ವಿಧಾನ ಪರಿಷತ್ತಿಗೆ ಮುಂದಿನ ಸಾರಿಯಾದರೂ ನಾಮಕರಣ ಮಾಡಿ ಕೇಂದ್ರ ಸರ್ಕಾರದಿಂದ 'ಪದ್ಮಶ್ರೀ' ಪ್ರಶಸ್ತಿ ದೊರಕಲು ಅವಕಾಶ ಕಲ್ಪಿಸಿ ಕೊಟ್ಟು ಗೌರವಿಸಲಿ ಎಂದು ಕನ್ನಡಿಗರ ಕೂಗಾಗಿದೆ. ಇಂತಹ ಮಹಾತ್ಯಾಗಿಯು ೬೦ ವರ್ಷವಲ್ಲ ನೂರಾರು ವರ್ಷಗಳು ಬಾಳಿ ನಾಡಿನ ಸೇವೆಗೈಯಲು ಭಗವಂತನು ಅವರಿಗೆ ಆಯುರಾರೋಗ್ಯ ಭಾಗ್ಯ ಕರುಣಿಸಲಿಯೆಂದು ನಾಡಿನ ಪರವಾಗಿ ನಾವು ಪ್ರಾರ್ಥಿಸುತ್ತೇವೆ.

### ವೈಭವ ಪೂರ್ಣ ಹುಟ್ಟಿದ ಹಬ್ಬ

ಇವರ ಹುಟ್ಟು ಹಬ್ಬವು ನಗರದಲ್ಲಿ ವೈಭವ ಪೂರ್ಣವಾಗಿ ನಡೆಯಿತು. ಬೆಳಗಿನಿಂದ ರಾತ್ರಿ ೧೦ ರವರೆಗೂ ಮಠಾಧಿಪತಿಗಳು, ಸಾಹಿತಿಗಳು, ಸಚಿವರುಗಳು, ನ್ಯಾಯಾಧೀಶರುಗಳು, ಅಧಿಕಾರಿಗಳು, ವರ್ತಕರುಗಳು, ಸಂಘ ಸಂಸ್ಥೆಗಳ ಪ್ರತಿನಿಧಿಗಳಾದಿಯಾಗಿ ಸಹಸ್ರಾರು ಜನರು ಶುಭವನ್ನು ಕೋರಿದರು. ರಾಜ್ಯದ ಜಗದ್ಗುರುಗಳವರುಗಳು ; ರಾಜ್ಯಪಾಲರು ಮತ್ತಿತರುಗಳಿಂದ ಶುಭ ಕೋರಿ ಸಂದೇಶಗಳು ಬಂದಿದ್ದುವು. ಸಮಾರಂಭವು ಯಶಸ್ವಿಯಾಗಿ ನೆರವೇರಿತು.

ತಾ|| ೧೦-೩-೬೩ **ನವಪ್ರಪಂಚ**

# B. Shivamurthy Sastry
# He Struck Path for Himself

Writer, Scholar, Philosopher.

One of the most colourful personalities on the Kannada scene, Asthana Vidwan, Panditaratnam, Keertanakesari, Basavayyaswamy Sivamurthy Sastry is sixty. This man of abounding enthusiasm is not aging. It only marks a significant mile stone in a career of active public life. Today he has behind him a record of four decades of service to the Kannada State-one that could not be rivalled easily.

Sastry was born in a devote Saivaite family in Tumkur district on February 23, 1903. After a few years of general education, he started as a teacher at Gubbi. He was taught Kannada poetry and literature by such an eminent scholar as the late Karibasavappa Sastry who was the young man's mentor for a quite a few years.

During the 'twenties there lived in Gubbi a 'padre' who was a keen student of Kannada history, culture and language. He took on Sastry as companion on his frequent excursions and thus the young man's interest was kindled further.

It was not long before Sastry chose a larger arena to persue his interests. The entire Kannada State constituted that arena. He chose to become a 'keertanakara' and started giving religious discourses.

By then, he was well-versed in Kannada classics and had acquired a good knowledge of Sanskrit. Endowed with a deep, resonant voice he soon started attracting large audiences who immensely liked the colourful pouranik themes powerfully rendered. Thus for about a quarter of a century, Sastry turned out to be a "star performer and often his audiences numbered ten thousand. And at a time when the microphone had not yet come into vogue, his voice reach the last man in the gathering. Delivering discourses natu-

rally entailed extensive travel. And he started digging into Karnataka's cultural and religious history and heritage. Having thoroughly acquainted himself and works of the well-known Kannada poets and philosophers, he proceeded to tackle the lesser known poets and saints. As a result he has today a unique collection of over two hundred rare manuscripts which throw light on a galaxy of Kannada poets and religious men—known and unknown.

In the last twenty-five years, Sastry has published about thirty treatises based on these studies. Analysing the life, works and time of poets and Saivaite saints with a historical perspective is his forte. His monthly publication, "*Sharana Sahitya*" in which the results of his efforts are published is celebrating its Silver Jubilee next month.

Sastry's four-volume epic "Veerasaiva Sahitya Mattu Itihasa, running into over a thousand pages is an interesting narration giving a graphic picture of Saivaite cultural and religious heritage. Recently, he published a 518 page volume, Karanataka Sandarshana a colloection of forty-five articles and half a dozen poems extalling many famous places men and matters of Karnataka. He has written a couple of historical novels too and has dabbled in poetry also.

Sastry is widely travelled writer. Often while travelling from one town to another, he would suddenly get down in the middle of a jungle, penetrate a couple of miles on foot come upon a dilapidated old temple and exclaim :

This must be the temple built by King—in the year. He would then proceed with a detailed examination of the discovery.

He reminiscently says, my search for historical material and discourses have taken me across the entire length and breadth of Karnataka quite few times.

The Heads of many Veerasaiva Mutts have honoured him with titles. His Highness Sri Jayachamaraja Wadeyar conferred the title "Pandita-ratnam" on him and he has been an Asthana Vidwan of the Mysore Palace. Among the eulogies showered on him by a large number of organisation he fondly speaks of the

one by the Muslim Association. It speaks of the catholicity of his association with the people. He has been the president of Kannada Sahitya Parishat for the last seven years, again a record.

Sastry's works and achievements strike one as a somewhat perplexing assortment of accomplishment. Some feel that his scnolarship somehow lacks the requeisite degree of profoundity. His style of writing lacks finenesse and depth. His narration often runs along a zigzag course varying from profound to the pedestrain. But these however do not lessen the significant contribution of this ebullient student of Kannada literature and life.

Sastry is a fast talker. Easily, he is one of the most entertaining if somewhat loud orators in our State. He takes an obvious delight in remaining in the center of any activity. While speaking in public, he is given to the articals. And you can rest assured that he would make the show an enjoyable one.

24-2-1966—DECCAN HERALD.

---

## B. Shivamurthy Sastry: 60 Years young!

Mr. Shivamurthy Sastry who has entered 61 years of his busy life is one of the pioneers who cherished and worked for the ideal of unification of Karnataka. The politicians now adorning Government were set to the noble task of founding a Kannada State. Some of them have actually made successful careers in the body politics of Karnataka. It is by no means their own effort. Mr. Shivamurthy Sastry was always behind them. Mr. Sastry flourishes on controversy even those who do not like him always concede that he is a powerful opponent. Mr. Sastry has the gift of the gab and he can sway the audience by the torrent of his words. He is also an able 'Kirthana kara'.

As President of Sahitya Parishat he has put tremondous effort to lift the parishat from Moross of inaction and status and quo. Mr. Sastry's untiring energy in skill in handling men and his capacity for forgeing a working team has made parishat a live institution.

The sixty mellowing years has not curbed Mr. Sastry's enthusiasm. By sheer drive and action he has combated many impedimente in the way of compling Kannada encyclopaedia.

If only Mr. Shivamurthy Sastry had made politics a fulltime job he would have certainly left many politicians behind him. He has many other interest besides politics. He is a first rate scholar both in Kannada and Sanskrit and he has made profound study in Veerasiva cult and literature.

Already there is a murmer that he should not again contest for the Parishat. But we feel that he should continue to be the head of Parishat for some more years so that the Parishat may expand its activities and reflect the will of Kannada people.

10-3-1963 CONFIDENTIAL

# B. SHIVAMURTHY SASTRY

Turbaned and talkative, Mr. B. Shivamurthy Sastry, President of the Kannada Sahitya Parishad for the past seven years, is 60 years old: A controversial personality in Kannada literature, Sastry has to his credit several achievements, the most important of which is the collection of rare manuscripts and his own works based on them.

Sastry was born in a devout Saivite family on February 23, 1903. He started his career as a teacher and has remained one though not in the professional sense. It was his decision to become a "kirtanakara" that took him to the four corners of Karnataka and kindled his interest in research and scholarship.

Age has not withered his ability to hold an audience spell-bound and, even today, he is rated as one of the best speakers in Kannada. His rich and resonant voice being one of his greatest assets

In the last 25 years, Sastry has published about 30 treatises based on Karnataka's cultural heritage. His "Veerasaiva Sahitya, Mattu Itihasa" in four volumes is considered a classic. His monthly magazine "Sharana Sahitya" is heading towards a silver jubilee next month.

Summing up Sastry's literary output, a commentator has said: "His works strike one as a somewhat perplexing assortments of accomplishments. Some feel that his scholarship somehow lacks the requisite degree of profoundity. His style of writing lacks fineness and depth. His narration often runs along a zigzag course varying from the profound to the pedestrian. But these do not lessen the significant contribution of this ebullient student of Kannada literature and life."

The recipient of many titles, Sastry retains his love for old manuscripts. He will go any distance and face any situation if promised an addition to his already monumental collection.

Once, a manuscript, that Sastry was anxious to posses happe-

ned to be owned by an aged villager. Sastry used his powers persuasion but failed to take the old man into parting with it. But the villager had a price for the manuscript. He was desirous of marrying a second time at his age, but the whole village was opposed to it. Should Sastry succeed in persuading the villagers to give up their obstructionist attitude, he would be willing to hand over the manuscript to him. Sastry accepted the challenge and used his talent as a Kirtanakara during a recital in which he told his audience that an old man had a right to marry a second time under special circumstance. The villagers fell into the trap and ended their opposition to the old man's matrimonial ambition. And Sastry walked away with the manuscript on which he had set his heart.

17-3-63 THE ILLUSTRATED WEEKLY OF INDIA

---

# ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಜಯವಿಭವ ಮುರುಘರಾಜೇಂದ್ರ ಮಹಾಸ್ವಾಮಿಗಳು

ಕೃಪಾಪಾತ್ರರಾದ ಬೆಂಗಳೂರಿನಲ್ಲಿರುವ ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ, ಕರ್ನಾಟಕ ವಿಭೂಷಣ ಮುಂತಾದ ಬಿರುದಾಂಕಿತರಾದ ಬಿ. ಶಿವಮೂರ್ತಿಶಾಸ್ತ್ರಿಗಳ ಷಷ್ಟ್ಯಬ್ದ ಶಾಂತಿ ಸಮಾರಂಭದ ಅಧ್ಯಕ್ಷರು ಪ್ರಧಾನ ಕಾರ್ಯದರ್ಶಿಗಳು ಹಾಗೂ ಸದಸ್ಯರಿಗೆ,

ತ್ರಿಸಂಧ್ಯಾಸಮಯೇ ಕೃತಾನೇಕಾಶಿಷಸ್ತದುಪರಿ

ನೀವು ಭಕ್ತಿಪೂರ್ವಕವಾಗಿ ಬಿನ್ನೈಸಿಕೊಂಡ ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ, ಕರ್ನಾಟಕ ವಿಭೂಷಣ ಇತ್ಯಾದಿ ಬಿರುದಾಂಕಿತರಾದ ಬಿ.ಶಿವಮೂರ್ತಿಶಾಸ್ತ್ರಿಗಳವರ ಷಷ್ಟ್ಯಬ್ದ ಶಾಂತಿಮಹೋತ್ಸವಾಹ್ವಾನ ಪತ್ರಿಕೆಯು ತಲ್ಪಿ ಮಜಕೂರು ಶ್ರೀ ಮಹಾ ಸನ್ನಿಧಿ ದಿವ್ಯ ಚಿತ್ತಕ್ಕೆ ವೇದ್ಯವಾಗುವಂತೆ ಶ್ರುತಗೊಳಿಸಲಾಯ್ತು.

ಹಿಂದೂಧರ್ಮ ಮತ್ತು ಸಂಸ್ಕೃತಿಗಳ ಉಜ್ವಲಾಭಿಮಾನಿಗಳೂ, ಕನ್ನಡನಾಡಿನ ಪ್ರಖ್ಯಾತ ವಿದ್ವಾಂಸರೂ ಅವಿಶ್ರಾಂತ ಸಮಾಜ ಸೇವಕರೂ, ಅಸದೃಶ ವಾಗ್ಮಿಗಳೂ, ಪ್ರಸಿದ್ಧ ಕೀರ್ತನಕಾರರೂ, ಉಜ್ವಲ ಭಾಷಣಕಾರರೂ. ಇತಿಹಾಸ ಸಂಶೋಧಕರೂ, ಪೀಠಾಭಿಮಾನಿಗಳೂ, ಸರಸ ಕವಿಗಳೂ, ವಿನಯಾದಿ ಸದ್ಗುಣ ಸಂಪನ್ನರೂ, ಅಖಿಲ ಕರ್ನಾಟಕದ ಜನರ ಪ್ರೀತಿ ಗೌರವಾದಿಗಳಿಗೆ ಪಾತ್ರರೂ, ರಾಜಾಧಿರಾಜರಿಂದಲೂ, ಗುರುಪೀಠಗಳಿಂದಲೂ ಸನ್ಮಾನಿತರೂ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ, ಶರಣ ಸಾಹಿತ್ಯ ಪತ್ರಿಕೆಯ ಸಂಪಾದಕರೂ, ಪಂಡಿತರತ್ನಂ, ಆಸ್ಥಾನ ವಿದ್ವಾನ್, ಕೀರ್ತನಾಚಾರ್ಯ, ಕರ್ನಾಟಕ ವಿಭೂಷಣ ಮುಂತಾದ ಬಿರುದಾಂಕಿತರೂ ಆದ ಬಿ. ಶಿವಮೂರ್ತಿ ಶಾಸ್ತ್ರಿಗಳವರ ಷಷ್ಟ್ಯಬ್ದ ಶಾಂತಿಮಹೋತ್ಸವವನ್ನು ತಾ॥ ೨೪-೨-೬೩ ನೇ ಭಾನುವಾರದ ದಿವಸ ಬೆಂಗಳೂರು ಗಾಂಧಿನಗರದಲ್ಲಿರುವ ಶ್ರೀ ಡಿ. ಬಿ. ಎಸ್. ಗುರುಸಿದ್ಧಪ್ಪನವರ ಕಲ್ಯಾಣ ಮಂದಿರದಲ್ಲಿ ನೀವುಗಳು ನಡೆಯುವಂತೆ ಏರ್ಪಡಿಸಿರುವುದು ಅರಿಕೆಯಾಗಿ ಶ್ರೀ ಮಹಾಸನ್ನಿಧಿ ದಿವ್ಯಚಿತ್ತಕ್ಕೆ ತುಂಬಾ ಸಂತೋಷವಾಗಿದೆ.

ಏಕೆಂದರೆ ಬಿ. ಶಿವಮೂರ್ತಿಶಾಸ್ತ್ರಿಗಳವರು ಕನ್ನಡನಾಡಿನಲ್ಲೆಲ್ಲಾ ಸಂಚರಿಸಿ ಜನಜಾಗೃತಿ ಮಾಡಿರುತ್ತಾರೆ. ಅನೇಕ ಮಹಾಮಹಿಮರ ಗ್ರಂಥಗಳನ್ನು ಬರೆದಿರುತ್ತಾರೆ. ಶರಣ ಸಾಹಿತ್ಯ, ದಾಸ ಸಾಹಿತ್ಯ ಮುಂತಾದ ತತ್ವಗಳನ್ನು ಜನಸಾಮಾನ್ಯರೆಲ್ಲರಿಗೂ ತಿಳಿಯುವಂತೆ ಕೀರ್ತನ ರೂಪವಾಗಿಯೂ, ಭಾಷಣ ರೂಪವಾಗಿಯೂ ಬೋಧೆಮಾಡಿರುತ್ತಾರೆ. ಅಲ್ಲದೆ ಕರ್ನಾಟಕ ಏಕೀಕರಣದ ವಿಷಯದಲ್ಲಿ ಅನೇಕ ಎಡರುತೊಡರು ಬಂದಾಗ್ಯೂ ಲೆಕ್ಕಿಸದೆ ಶ್ರಮವಹಿಸಿ ಸೇವೆಸಲ್ಲಿಸಿ ಜಯಶೀಲರಾಗಿದ್ದಾರೆ. ಅವರು ಈವರೆಗೆ ಮಾಡಿದ ಕೃತಿಗಳೇ ಅವರ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿವೆ.

ಅಲ್ಲದೆ ಈಗ ಹಾಲಿ ಕನ್ನಡ ಸಾಹಿತ್ಯ ಪರಿಷತ್ತಿನ ಘನ ಅಧ್ಯಕ್ಷರಾಗಿಯೂ ಅನೇಕ ಸಂಸ್ಥೆಗಳ ಸದಸ್ಯರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಇಂಥವರ ಷಷ್ಟ್ಯಬ್ದ ಶಾಂತಿ ಮಹೋತ್ಸವವನ್ನು ಅಚ್ಚಕನ್ನಡಿಗರಾದ ನೀವುಗಳು ಕೈಗೊಂಡಿರುವುದು ಸ್ತುತ್ಯವೂ ಯೋಗ್ಯವೂ ಆಗಿದೆ. ಅಲ್ಲದೆ ಕನ್ನಡನಾಡಿಗೇನೇ ಹೆಮ್ಮೆಯಾದ ವಿಷಯವಾಗಿದೆ.

ನೀವುಗಳು ಕೈಕೊಂಡಿರುವ ಮೇಲ್ಕಂಡ ಷಷ್ಟ್ಯಬ್ದ ಶಾಂತಿ ಮಹೋತ್ಸವವು ವಿಜೃಂಭಣೆಯಿಂದ ನಡೆಯಲೆಂದೂ, ನಾಡಿಗೆ ಇನ್ನೂ ಹೆಚ್ಚಿನ ಸೇವೆ ಸಲ್ಲಿಸಲು ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳಿಗೆ ದೀರ್ಘಾಯುರಾರೋಗ್ಯಾದಿ ಸಕಲ ಸುಖಸಂಪತ್ತುಗಳುಂಟಾಗಲೆಂದೂ, ಈ ಸಮಾರಂಭದ ಅಧ್ಯಕ್ಷರಿಗೂ ಗೌರವ ಕಾರ್ಯದರ್ಶಿಗಳಿಗೂ, ಸದಸ್ಯರಿಗೂ, ಹಾಗೂ ಈ ಸಮಾರಂಭದಲ್ಲಿ ಭಾಗವಹಿಸಿದ ವಿದ್ವಾಂಸರಿಗೂ ಮತ್ತು ಸರ್ವೇ ಸಮಸ್ತರಿಗೂ ಶ್ರೀ ಮುರುಘೇಶನು ಆಯುರಾರೋಗ್ಯಾದಿ ಸಕಲ ಸುಖ ಸಂಪತ್ತನ್ನು ಕೊಟ್ಟು ಕಾಪಾಡಲೆಂದೂ ಹಾರೈಸೋಣವಾಗಿದೆ.

॥ ಸರ್ವೇಜನಾಃ ಸುಖಿನೋಭವಂತು ॥

ತಾ॥ ೨೨-೨-೧೯೬೩ ಇತ್ಯಾಶಿಷಃ

ಚಿತ್ರದುರ್ಗ ಬೃಹನ್ಮಠ ಮಹಾಸಂಸ್ಥಾನ

# ಸ ನ್ಮಾ ನ ಪ ತ್ರ

ಆಸ್ಥಾನ ವಿದ್ವಾನ್, ಕೀರ್ತನಾಚಾರ್ಯ, ಪಂಡಿತರತ್ನಂ, ಕರ್ನಾಟಕ ವಿಭೂಷಣ

## ಶ್ರೀ ಬಿ. ಶಿವಮೂರ್ತಿಶಾಸ್ತ್ರಿಯವರ

ಷಷ್ಟ್ಯಬ್ದಿಪೂರ್ತಿಸಮಾರಂಭದ ಶುಭಪ್ರಸಂಗದಲ್ಲಿ
ಕನ್ನಡ ಮಿತ್ರ ಸಮಾಜ ಸೊಲ್ಲಾಪುರ ಇವರು ಅರ್ಪಿಸಿದ

## ಸ ನ್ಮಾ ನ ಪ ತ್ರ

ಆಸ್ಥಾನ ವಿದ್ವಾನ್, ಕೀರ್ತನಾಚಾರ್ಯ, ಪಂಡಿತರತ್ನಂ, ಕರ್ನಾಟಕ ವಿಭೂಷಣ
ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಬೆಂಗಳೂರು, ಇವರಿಗೆ.

**ಮಾನ್ಯರೆ,**

ಸುಮಾರು ४೦ ವರ್ಷಗಳಿಂದ ಕನ್ನಡನಾಡು, ನುಡಿಗಳ ಏಳಿಗೆಗಾಗಿ, ಬೆಳವಣಿಗೆಗಾಗಿ, ತಾವು ಅಖಂಡವಾಗಿ ಜೀವನವನ್ನು ಶ್ರೀಗಂಧದಂತೆ ಸವೆಸಿದಿರಿ. ತತ್ಫಲವಾಗಿ ಇಂದು ನಾಡು ಕಟ್ಟಿದೆ. ನುಡಿಯು ಬೆಳೆದಿದೆ. ಈ ವಿಷಯವನ್ನು ತಮ್ಮ ಷಷ್ಟ್ಯಬ್ದಿ ಸಮಾರಂಭದ ಸುಮುಹೂರ್ತದಲ್ಲಿ ನೆನೆಯಲು ನಮಗೆ ಹೆಮ್ಮೆ ಎನಿಸುತ್ತದೆ. ತಮ್ಮ ಈ ಘನತರ ಸೇವೆಯಿಂದ ತಾವು ನಾಡಿಗೇನೇ ಮಾನ್ಯರಾದಿರಿ.

**ಆಸ್ಥಾನ ವಿದ್ವಾಂಸರೆ,**

ಕರ್ನಾಟಕ ರಾಜ್ಯ ನಿರ್ಮಾಣದ ಪೂರ್ವದಲ್ಲಿ ಸಾಹಿತ್ಯ-ಸಂಸ್ಕೃತಿ-ಪಾಂಡಿತ್ಯಗಳಿಗೆ ಪೋಷಕ ಸ್ಥಾನವಾಗಿದ್ದ ಮೈಸೂರು ಸಂಸ್ಥಾನದ ಆಸ್ಥಾನಕ್ಕೆ ಭೂಷಣಪ್ರಾಯರಾದಿರಿ. ಇದು ವಿದ್ಯಾಭಿಮಾನಿಗಳಿಗೆಲ್ಲ ಅಭಿಮಾನಾಸ್ಪದ ವಿಷಯ.

**ಕೀರ್ತನ ಕೇಸರಿಗಳೆ,**

ನಾಡಿನ ಉದ್ದ-ಅಗಲಕ್ಕೂ ಸಂಚರಿಸಿ, ಪಾಂಡಿತ್ಯಪೂರ್ಣವೂ ನವರಸ ಭರಿತವೂ ಆದ ತಮ್ಮ ಕೀರ್ತನೆಗಳಿಂದ, ಊರು, ಊರು,-ನಗರ ನಗರದಲ್ಲಿ ಅಜ್ಞ ಜನತೆಗೆ ಜ್ಞಾನಬೋಧೆ, ಮನರಂಜನೆ ಮಾಡಿದಿರಿ. ವೈಮನಸ್ಯಿತ ಜನತೆಗೆ ಅರಿವು ತಂದು ಕೊಟ್ಟಿರಿ. ಈ ವಿಷಯ ನಾಡಿಗರು ಅವರು ಹಳ್ಳಿಗರೇ ಇರಲಿ, ಪಟ್ಟಣದ ಪೌರರೇ ಇರಲಿ ಅವರು ಎಂದೆಂದಿಗೂ ಮರೆಯದ ಸಂಗತಿ

**ಪಂಡಿತರತ್ನರೆ,**

ಮಾತೃಭಾಷೆಯಾದ ಕನ್ನಡ, ದೇವಭಾಷೆಯಾದ ಸಂಸ್ಕೃತಗಳಂತೂ ಸರಿಯೇ, ತೆಲುಗು, ತಮಿಳು ಮೊದಲಾದ ಹಲವು ಭಾಷೆಗಳಲ್ಲಿಯೂ ತಮಗೆ ಹಿಡಿತವಿದೆ. ಅಲ್ಲದೆ ಸಾಹಿತ್ಯದಲ್ಲಿಯೂ ವಿಶೇಷ ಪರಿಶ್ರಮವಿದೆಯಲ್ಲದೆ ಶರಣ ಸಾಹಿತ್ಯದ ಮೇಲಂತೂ ತಮಗಿರುವ ಪ್ರತಿಭಾಪೂರ್ಣ ಪಾಂಡಿತ್ಯದ ದರ್ಶನವಾಗಿ ತಾವು ರಚಿಸಿದ ಹಲವು ಗ್ರಂಥ, ಲೇಖನಗಳೇ ಸಾಕ್ಷಿ. ಬರೆಹಗಾರರಿದ್ದಂತೆ ತಾವು ಶ್ರೇಷ್ಠ ವಾಗ್ಮಿಗಳೂ ಅಹುದು. ಅಲ್ಲದೆ, "ಶರಣ ಸಾಹಿತ್ಯ"ವೆಂಬ ಪಾಂಡಿತ್ಯಪೂರ್ಣ ಪತ್ರಿಕೆಯ ಸಂಪಾದಕತ್ವವನ್ನು ಯಶಸ್ವಿಯಾಗಿ ನಡೆಸಿಕೊಂಡು ಬಂದಿದ್ದೀರಿ. ಹೀಗೆ ಬಹುಮುಖಪಾಂಡಿತ್ಯವುಳ್ಳ ತಮಗೆ "ಪಂಡಿತರತ್ನಂ" ಎಂಬ ಪ್ರಶಸ್ತಿ, ಸಹಜವೇ!

**ಕರ್ನಾಟಕ ವಿಭೂಷಣರೆ,**

ಅಂದು ತಾವು ಕನ್ನಡ ನಾಡು ಗಳಿಸಲು ಹೋರಾಡಿದಂತೆ, ಇಂದು ತಾವು ನಾಡು ಕಟ್ಟುವ ಕಾರ್ಯದಲ್ಲಿ ಸಹ ಅಮೋಘ ಸೇವೆ ಸಲ್ಲಿಸಿದ್ದೀರಿ. ಕನ್ನಡ ವಿಶ್ವಕೋಶ, ನಿಘಂಟುಗಳಂಥ ಮೇರು ಕೃತಿಗಳ ರಚನಾಕಾರ್ಯ ನಡೆಸಿದ್ದೀರಿ. "ಕನ್ನಡ ಸಾಹಿತ್ಯ ಪರಿಷತ್" ನಂತಹ ಘನ ಸಂಸ್ಥೆಯ ಅಧ್ಯಕ್ಷ ಪದವಿಯನ್ನು ಕಳೆದ ಎಂಟು ವರ್ಷಗಳಿಂದ ವಿಭೂಷಿಸಿರುವಿರಿ. ಅದರಂತೆಯೇ ತಾವು ಕನ್ನಡದ ಅನೇಕ ಸಂಘ-ಸಂಸ್ಥೆಗಳ ಸದಸ್ಯರಾಗಿ, ಸಂಚಾಲಕರಾಗಿ, ಪೋಷಕರಾಗಿ ಕನ್ನಡ ಸಾಂಘಿಕ ಜೀವನದ ಏಳು-ಬಾಳಿಗಾಗಿ ಅವಿರತ ಶ್ರಮಿಸುತ್ತಿದ್ದೀರಿ.

ಕನ್ನಡ ಚಳುವಳಿಯ ವೀರಯೋಧರು, ಕನ್ನಡ ನಾಡ ಶಿಲ್ಪಿಗಳಲ್ಲೊಬ್ಬರು, ಕನ್ನಡ ಪ್ರತಿಭಾವಂತ ಸಾಹಿತಿಗಳು, ಕನ್ನಡ ಉಜ್ವಲ ವಾಗ್ಮಿಗಳು, ಕನ್ನಡ ಪಂಡಿತೋತ್ತಮರು, ಕನ್ನಡ ಪತ್ರಿಕಾ ಸಂಪಾದಕರು, ಕನ್ನಡ ಸಂಸ್ಕೃತಿಯ ಪ್ರಚಾರಕರು, ಕನ್ನಡ ಸರಸ್ವತಿಯ ಉಪಾಸಕರು, ಕನ್ನಡ ತಾಯಿಯ ಶ್ರೇಷ್ಠ ಪುತ್ರರು ತಾವು.

ಇಂತಿರುವ ನಿಮ್ಮ ಷಷ್ಟ್ಯಬ್ದಿ ಸಮಾರಂಭ ನೆರವೇರಿಸುವ ಸದವಕಾಶ ಒದಗಿದುದು ಕನ್ನಡಿಗರ ಭಾಗ್ಯವೆಂದು ಬಗೆಯುತ್ತೇವೆ ಎಂದೇ ನಾವು ಇಂಥ ಸುದಿನದ ಸಮಯದ ಈ ಮುಂದೆ ಕೂಡ ದಯಾಮಯ ದೇವನು ತಮಗೆ ಆಯುರಾರೋಗ್ಯ ಭಾಗ್ಯಗಳನ್ನು ಕರುಣಿಸಲೆಂದೂ, ತಮ್ಮ ಷಷ್ಟ್ಯಬ್ದಿ ಸಮಾರಂಭದಂತೆಯೇ ಶತಾಬ್ಧಿ ಸಮಾರಂಭವನ್ನು ಕಾಣುವ ಸುಯೋಗ ಕನ್ನಡಿಗರಿಗೂ ನಮ್ಮ ಕನ್ನಡ ಮಿತ್ರ ಸಮಾಜಕ್ಕೂ ಒದಗಿಸಲೆಂದೂ ಪ್ರಾರ್ಥಿಸುತ್ತೇವೆ.

ತಾ|| ೨೪-೨-೬೩ ಇಂತು ತಮ್ಮವರಾದ

ಅಧ್ಯಕ್ಷರು ಮತ್ತು ಸದಸ್ಯರು,

**ಕನ್ನಡ ಮಿತ್ರ ಸಮಾಜ, ಸೊಲ್ಲಾಪುರ**



# ಪ್ರಶಸ್ತಿ ಪದ್ಯಮಾಲಿಕೆ

ಆಸ್ಥಾನ ವಿದ್ವಾನ್ ಸದ್ರತ್ನಂ ಕರ್ಣಾಟಕ ವಿಭೂಷಣಃ
ಇತ್ಯಾದಿ ಬಿರುದೈರ್ಯುಕ್ತ ಶಿವಮೂರ್ತ್ಯಾಖ್ಯ ಶಾಸ್ತ್ರಿಣಃ
ಷಷ್ಟ್ಯಬ್ದಶಾಂತಿ ಸಮಯೇ ಭಾರತೀ ಶುಭ ಶಂಸಿನೀ ‖ ೧ ‖

ಶ್ರೀಶಂ ತಾಂ ದಯಗೆಯ್ಗೆ ಸರ್ವಸುಖಮಂ ದೀರ್ಘಾಯುವಂ ಶ್ರೀಯುವಂ ।
ಕ್ಲೇಶೌಘಂಗಳನೆಂದಿಗಂ ಗಣಿಸದೀ ಕರ್ಣಾಟಕ ಭೂಭಾಗದೊಳ್ ‖
ಈಶಾನುಗ್ರಹಕಾಂಕ್ಷೆಯಿಂ ಸಕಲರೊಳ್ ಸರ್ವಪ್ರಯತ್ನಂಗಳಿಂ ।
ದೇಶಪ್ರೇಮವನೊಲ್ಮೆಯಿಂ ನಿಲಿಸಿದೀ ಶ್ರೀಮಚ್ಛಿವಾಭಿಖ್ಯನೊಳ್ ‖ ೨ ‖

ಪರಶಿವಪದಭಕ್ತಾಗ್ರಣಿ ।
ವರಶಿವಮೂರ್ತ್ಯಾಖ್ಯವಿಬುಧ ನೀನಾದೊಡಮೇಂ ‖
ಪರಧರ್ಮಸಹನೆಯಧಿಕಂ ।
ನೆರೆವುದು ಪಂಡಿತಸುರತ್ನ ಬಿರುದುಂ ಸಾರ್ಥಂ ‖ ೩ ‖

ನೀನಧ್ಯಾಪಕನೀಶಭಕ್ತಿಭರಿತಂ ಸಂಕೀರ್ತನಾಚಾರ್ಯನುಂ ।
ನಾನಾಸಂಸ್ಥೆಗೆ ಸಭ್ಯನುಂ ಸುಕವಿತಾನಿರ್ಮಾಣನಿಷ್ಣಾತನುಂ ‖
ಗಾನಾಲಾಪನ ಕೋವಿದಂ ರಸಿಕನುಂ ಕರ್ಣಾಟಸಾಹಿತ್ಯದಾ ।
ಸ್ಥಾನಾಧ್ಯಕ್ಷನುಮಾಗಿ ಗೈಸುವೆ ಬೃಹತ್ಕರ್ಣಾಟ ಸತ್ಕೋಶಮಂ ‖ ೪ ‖

ದೇಶದ ಸೇವೆಯೆ ತಾ ಜಗ ।
ದೀಶನ ಸೇವೆಯೆಂಬ ಭಾವನೆ ಗೈವೈ ‖
ಪೇಶಲ ಗುಣಯುತ ಭಾಷಣ
ಕೌಶಲಮಂ ಬಣ್ಣಿಸಲ್ಕೆ ಸಾಧ್ಯಮೆ ನಿನ್ನೊಳ್ ‖ ೫ ‖

ನರ ಕರ್ಣಾಟಕದರ್ಶನಂ ಶರಣಸಾಹಿತ್ಯಂ ಸ್ವತಂತ್ರಾಖ್ಯದಾ |
ಸಿರಿ ಕರ್ಣಾಟಕ ವೀರಶೈವಮತಸಾಹಿತ್ಯಾದಿ ಸದ್ಗ್ರಂಥಮುಂ ||
ನೆರೆಗುಂ ನೀಂ ರಚಿಸಿರ್ಪ ಹೊತ್ತಗೆಗಳುಂ ನಾನಾವಿಚಾರಂಗಳೊಳ್ |
ನೆರೆ ಕರ್ಣಾಟಕದೈಕ್ಯಕಂ ದುಡಿದೆ ನೀಂ ಸ್ವಾತಂತ್ರ್ಯಕುಂ ದೇಶದಾ || ೬ ||

ಧೀರತೆ ಸದುದಾರತೆ ಗಂ |
ಭೀರತೆ ಹಿತಭಾಷಿತೆಯುಚಿತಜ್ಞತೆ ಯೆಂಬೀ ||
ಸಾರತರ ಗುಣಸಮೂಹಂ |
ಸೇರಿರ್ಪುವು ಸಹಜಮೆನಿಸಿ ನಿನ್ನೊಳಗೆಂದುಂ || ೭ ||

ನಟಗಾಯಕ ಶಿಲ್ಪಿಗಳಂ |
ಪಟುಗಳವರ್ ಗುಣಿಗಳಾಗೆ ಮನ್ನಿಪೆಯಲ್ತೇ ||
ಸಟೆಯಲ್ಲ ಲಲಿತ ಕಲೆಯೊಳ್ |
ದಿಟಮಾದರಮಧಿಕಮಿರ್ಪುದೆಂಬುದನುಸಿರ್ಗುಂ || || ೮ ||

ಎನಿತೋ ಸೇವೆಯಗೈದುಂ
ಜನರೊಳ್ ನೀನಳಿಲ ಸೇವೆಯೆಂದೇ ನುಡಿವೈ ||
ವಿನಯ ನಿರಹಂಕೃತಿಯುಂ |
ಜನನುತ ಸಲೆ ಬಿಜ್ಜೆಗಲ್ತರ್ಗಿಂತಿರವೇಡಾ || ೯ ||

ತಾ|| ೨೪-೨-೧೯೬೩

ಆಸ್ಥಾನ ವಿದ್ವಾನ್ ಎಂ. ಆರ್. ವರದಾಚಾರ್ಯ
ಬೆಂಗಳೂರು

# ಕನ್ನಡದ ದಾರಿಯನ್ನು ಸವೆಸಿರುವ ಶಿವಮೂರ್ತಿಶಾಸ್ತ್ರಿಗಳು

ಕನ್ನಡ ನಾಡಿನ ಜನರಲ್ಲಿ ಮಹಾ ಸಾಹಸಿ ಎಂಬ ಕೀರ್ತಿಯೊಂದಿಗೆ ಮನೆಮಾತಾಗಿರುವ ಪಂಡಿತರತ್ನಂ, ಆಸ್ಥಾನ ವಿದ್ವಾನ್, ಕೀರ್ತನಾಚಾರ್ಯ ಇತ್ಯಾದಿ ಬಿರುದಾಂಕಿತರಾದ ಪದ್ಮಶ್ರೀ ಶಿವಮೂರ್ತಿಶಾಸ್ತ್ರಿಗಳು ನನಗೆ ಪರಿಚಯವಾದದ್ದು ಸುಮಾರು 1940ರಲ್ಲಿ. ಆಗ ಅವರು ಪಠ್ಯಪುಸ್ತಕ ಆಯ್ಕೆಯ ಸಮಿತಿಯಲ್ಲಿದ್ದರು. ಮೊದಲ ಬಾರಿಗೆ ನಾನು ಅವರನ್ನು ಕಂಡಾಗ ಕೈಗೆ ನವರತ್ನ ಖಚಿತವಾದ ಭಂಗಾಕದ ಕಂಕಣವನ್ನು ತೊಟ್ಟಿದ್ದರು. ಕಾಶ್ಮೀರಶಾಲನ್ನು ಹೊದೆದಿದ್ದರು. ಅದು ಅರಮನೆಯಿಂದ ಪಡೆದದ್ದೆಂದು ತಿಳಿಯಿತು. ಮೈಸೂರು ಪೇಟವನ್ನು ಶೋಭಾಯಮಾನವಾಗಿ ಧರಿಸಿದ್ದರು. ಮುಖವು ಕಾಂತಿಯಿಂದ ಹೊಳೆಯುತ್ತಿದ್ದಿತು. ತೇಜಃಪುಂಜರಾಗಿ ಪ್ರಸನ್ನವದನರಾಗಿದ್ದರು. ಉದ್ದನೆಯ ಅಂಗಿಯನ್ನು ಧರಿಸಿದ್ದರು. ಪಂಚೆಯ ಜರಿ ಅಂಚು ಮಿನುಗುಟ್ಟುತ್ತಿತ್ತು. ಗಂಭೀರಾಕೃತಿಯ ದೇಹವುಳ್ಳರಾಗಿದ್ದು, ಧೃಢಕಾಯರಾದ ಅವರ ಭೌತಿಕ ಶರೀರವು ಒಳ್ಳೇ ಆಕರ್ಷಕವಾಗಿದ್ದಿತು. ಕೈಯಲ್ಲಿ ಹಿಡಿದ ಕರಿಯ ಮರದ ಬೆತ್ತವು ಅವರ ಹಿರಿಮೆಯನ್ನು ಪ್ರದರ್ಶಿಸುತ್ತಿತ್ತು. ಒಟ್ಟಿನಲ್ಲಿ ಈ ವ್ಯಕ್ತಿ ಪ್ರಥಮ ದರ್ಶನದಲ್ಲಿಯೇ ನನ್ನ ಮನಸ್ಸಿನ ಮೇಲೆ ಒಳ್ಳೇ ಪರಿಣಾಮವನ್ನುಂಟು ಮಾಡಿದರು. ಅವರ ವಿಷಯವನ್ನು ಕೆಲವು ಮಿತ್ರರಲ್ಲಿ ಕೇಳಿ ತಿಳಿದುಕೊಂಡಿದ್ದೆನು. ಅಂತೆಯೇ ಅವರು ಗೌರವಾನ್ವಿತ ವ್ಯಕ್ತಿಗಳಾಗಿದ್ದರು.

ಸ್ವತಃ ಪ್ರಕಟನಕಾರನಾಗಿದ್ದ ನನಗಾಗಲೇ ರಾಜಸೇವಾಸಕ್ತ ಸಿ.ಕೆ. ವೆಂಕಟರಾಮಯ್ಯನವರು, ದೇವುಡು ನರಸಿಂಹಶಾಸ್ತ್ರಿಗಳು, ಎಂ. ಆರ್. ಶ್ರೀನಿವಾಸಮೂರ್ತಿಗಳು ಇಂತಹ ಹಲವು ಮಹನೀಯರನೇಕರ ಪರಿಚಯ ಮತ್ತು ಸ್ನೇಹವು ದೊರೆತ್ತಿದ್ದಿತು. ನಮ್ಮ ಸಂಸ್ಥೆಯಾದ ಜಿ. ಎಸ್. ವಿಶ್ವ ಮತ್ತು ಕಂಪನಿಗೆ ಇವರು ಪುಸ್ತಕಗಳನ್ನು ಬರೆದಿದ್ದರು. ಅಲಭ್ಯವಾದ ಅವರ ಸ್ನೇಹ ಮತ್ತು ಅವರ ಪ್ರೋತ್ಸಾಹಗಳು ನನಗೆ ದೊರೆತದ್ದು ನಮ್ಮ ಸಂಸ್ಥೆಗೆ ಒಂದು ರಕ್ಷಾಕವಚದಂತೆ ಇದ್ದಿತು. ದಿನ ಬೆಳಗಾದರೆ ಕನ್ನಡ ಪ್ರಾಧ್ಯಾಪಕರ ಮತ್ತು ಇಂಗ್ಲಿಷ್ ಪ್ರೊಫೆಸರುಗಳ ಭೇಟಿಯು ನನಗೆ ನಡೆಯುತ್ತಲಿದ್ದಿತು. ಇಂತಹ ಪ್ರಾಜ್ಞರನ್ನು ಕಂಡು ಮಾತನಾಡಿಸಲು ನನಗೆ ಮನಸ್ಸು ಅಳುಕುತ್ತಿದ್ದಿತು. ಭಯಭಕ್ತಿ ವಿನಯಾದಿಗಳಿಂದ ಈ ಮಹನೀಯರನ್ನು ಒಲಿಸಿಕೊಂಡಿದ್ದೆನು. ಅವರೂ ಅಷ್ಟೇ ಪ್ರೀತಿಯಿಂದಲೂ ವಿಶ್ವಾಸದಿಂದಲೂ ನನ್ನನ್ನು ಕಾಣುತ್ತಿದ್ದರು.

ಆಗಿನ ಕಾಲವೇ ಒಂದು ರೀತಿಯದು. ಅಂದಿನ ಜನತೆ ಒಂದು ಬಗೆಯ ಗಾಂಭೀರ್ಯವನ್ನು ಹೊತ್ತ ಸಮಾಜವಾಗಿದ್ದಿತು. ಹಿರಿಯರಲ್ಲಿ ಮಾತನಾಡುವಾಗ, ಅವರ ಸಮಯ, ಬಂದ ಕೆಲಸ, ವ್ಯಕ್ತಿಯ ಯೋಗ್ಯತೆ ಮುಂತಾದುವನ್ನು ಬಹಳವಾಗಿ ಗಮನಿಸುವ ಕಾಲವಾಗಿದ್ದಿತು. ಇವರೆಲ್ಲರ ಗುಣಾವಗುಣಗಳನ್ನು ತುಲನೆ ಮಾಡುವ ಯೋಗ್ಯತೆಯು ಆಗ ನನ್ನಲ್ಲಿರಲಿಲ್ಲ. ತರುಣ ವಯಸ್ಸಿನವನಾದ ನನಗೆ ಅಂತಹವರ ದರ್ಶನಮಾತ್ರದಿಂದಲೇ ಓರಣ-ಒಪ್ಪುಗಳು ಸಹಜವಾಗಿಯೇ ಮೂಡಿ ಬಂದಿದ್ದವು. ಆ ಹಿರಿಯರಿತ್ತ ಆಶೀರ್ವಾದ, ಪ್ರೋತ್ಸಾಹಗಳು ಇಂದಿಗೂ ಅವರ ಬಗೆಗೆ ನನ್ನ ಹೃದಯದಲ್ಲಿ ಗೌರವ ಮತ್ತು ಕೃತಜ್ಞತೆಗಳನ್ನು ತುಂಬಿಸಿವೆ. ಆ ಹಿರಿಯರ ಪವಿತ್ರ ಪ್ರೇಮವು ನನಗೆ ಸಮಾಜದಲ್ಲಿ ಒಂದು ಸ್ಥಾನವನ್ನು ದೊರಕಿಸಿಕೊಟ್ಟಿದೆ. ನಡತೆ ಮತ್ತು ಗುಣಕ್ಕೆ ಮಾನ್ಯತೆಯನ್ನು ನೀಡುವ ಇಂತಹ ಪ್ರಾತಃಸ್ಮರಣೀಯ ಮಹನೀಯರನ್ನು ಹೊಂದಿರುವ ಕನ್ನಡ ಸಾಹಿತ್ಯ ಲೋಕವು ಅಭಿನಂದನೀಯವಾದುದು. ನಿಜಕ್ಕೂ ಕನ್ನಡ ಜನತೆಯ ಹಿತೈಷಿಗಳಿವರು. ಇಂತಹವರಲ್ಲಿ ಪದ್ಮಶ್ರೀ ಶಿವಮೂರ್ತಿಶಾಸ್ತ್ರಿಗಳೂ ಒಬ್ಬರಾಗಿದ್ದಾರೆ. ಕನ್ನಡ ನಾಡಿನ ಏಕೀಕರಣಕ್ಕೂ ಏಳಿಗೆಗೂ ಶ್ರಮಿಸಿದ ಮಹನೀಯರಾಗಿದ್ದಾರೆ. ಭಾರತರತ್ನ ಚಕ್ರವರ್ತಿ ರಾಜಗೋಪಾಲಾಚಾರ್ಯರ "ಶ್ರೀರಾಮರದಿವ್ಯಕಥೆ" ಎಂಬುದನ್ನು ತಮಿಳಿನಿಂದ ಕನ್ನಡಕ್ಕೆ ಅನುವಾದಿಸಿದವರು

ಶ್ರೀ ಕೆ. ಸಂಪದ್ಗಿರಿರಾಯರು. ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದವರು. ಡಾ॥ ಡಿ. ವಿ. ಗುಂಡಪ್ಪನವರು ನಮ್ಮ ಸಂಸ್ಥೆಯು ಪ್ರಕಟನೆಯಾದ ಈ ಪುಸ್ತಕವನ್ನು ಬಿಡುಗಡೆ ಮಾಡುವ ದಿನ ಪೂಜ್ಯ ರಾಜಾಜಿಯುವರು ಮದ್ರಾಸಿನಿಂದ ಬೆಂಗಳೂರಿಗೆ ದಯಮಾಡಿಸಿದ್ದರು. ಅಂದು ಸರ್ ಪುಟ್ಟಣ್ಣಶೆಟ್ಟರ ಪುರಭವನದಲ್ಲಿ ಒಂದು ಆಕರ್ಷಕ ಸಮಾರಂಭವೇರ್ಪಾಡಾಗಿದ್ದಿತು. ಅಂದೇ ರಾಜ್ಯದ ಮುಖ್ಯಮಂತ್ರಿಗಳಾಗಿ ಅಧಿಕಾರ ಸ್ವೀಕಾರ ಮಾಡಿದ್ದ ಮಾನ್ಯ ಬಿ. ಡಿ. ಜತ್ತಿಯವರು ರಾಜಾಜಿಯವರಿಂದ ಬಿಡುಗಡೆ ಮಾಡಲ್ಪಟ್ಟ "ಶ್ರೀರಾಮನ ದಿವ್ಯ ಕಥೆ*ಯ ಪ್ರಥಮ ಪ್ರತಿಯನ್ನು ಪಡೆದರು. ಅಂದಿನ ಸಭೆಯ ಅಧ್ಯಕ್ಷತೆಯನ್ನು ಡಾ॥ ಮಾಸ್ತಿವೆಂಕಟೇಶ ಅಯ್ಯಂಗಾರ್ಯರು ವಹಿಸಿದ್ದರು. ಹಿರಿಯರಾದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು ಈ ಸಮಾರಂಭದಲ್ಲಿ ಉಪಸ್ಥಿತರಾಗಿದ್ದರು. ಕರ್ನಾಟಕದ ಹೆಸರಾಂತ ಕವಿಗಳಲ್ಲನೇಕರು ಈ ಪ್ರಕಟನೋತ್ಸವಕ್ಕೆ ಆಗಮಿಸಿದ್ದರು. ಸಭೆಗೆ ಸಭೆಯೇ ಸರಸ್ವತೀದೇವಿಯ ಒಡ್ಡೋಲಗವೋ ಎಂಬಂತೆ, ಸಾಹಿತಿಗಳಿಂದಲೂ, ಸಾಹಿತ್ಯಾಭಿಮಾನಿಗಳಿಂದಲೂ, ಮುದ್ರಣಕಾರರಿಂದಲೂ, ಓದುಗರಿಂದಲೂ ತುಂಬಿ ಪ್ರಕಾಶಮಾನವಾಗಿದ್ದಿತು.

ತಮಿಳು ಜನರ ಮೆಚ್ಚಿನ "ಕಲ್ಕಿ ಪತ್ರಿಕೆ"ಯು "ಈ ಸಮಾರಂಭವು ತಮಿಳರಿಗೆ ಸ್ಫೂರ್ತಿಯನ್ನುಂಟುಮಾಡಿ, ಪ್ರಕಟನೋತ್ಸವವೆಂಬ ಒಂದು ಸಮಾರಂಭವನ್ನು ಕನ್ನಡಿಗರಿಂದ ತಮಿಳು ಜನರಿಗೆ ಆಚರಿಸಲು ಕೊಟ್ಟ ಬಳುವಳಿಯಂತಿದೆ. ಅಂದಿನ ಸರ್. ಪುಟ್ಟಣ್ಣಶೆಟ್ಟರ ಪುರಭವನವು ನಯನ ಮನೋಹರವಾಗಿ ಅಲಂಕರಿಸಲ್ಪಟ್ಟ ವೇದಿಕೆಯು ಸರಸ್ವತೀ ಪೀಠವೋ ಎಂಬಂತೆ ರಾರಾಜಿಸುತ್ತಿತ್ತು. ಕನ್ನಡ ಕವಿಕುಲದ ಶ್ರೇಷ್ಠರು ಒಟ್ಟಿಗೆ ಸೇರಿದ್ದರು. ಕಲಾತ್ಮಕವಾದ ಈ ಸಮಾರಂಭವು ಕಣ್ಮನಗಳನ್ನು ಸೂರೆಗೊಂಡಿದ್ದಿತು. ಕಲಾದೇವಿಯು ಬೆಂಗಳೂರಿನಲ್ಲಿಯೇ ವಾಸವಾಗಿದ್ದಾಳೆಯೋ ಎಂಬ ಭಾವವು ಉಂಟಾಯಿತು." ಹೀಗೆಂದು ಆ ಸಮಾರಂಭದ ಚಿತ್ರಗಳೊಂದಿಗೆ ಪುರವಣಿಯನ್ನು ಪ್ರಕಟಿಸಿದೆ.

ಅಂದಿನ ಸಭೆಯಲ್ಲಿ ಶ್ರೀಮಾನ್ ಬಿ. ಶಿವಮೂರ್ತಿಶಾಸ್ತ್ರಿಗಳವರು ಸ್ವಾಗತ ಪದ್ಯಮಾಲಿಕೆಯನ್ನು ರಚಿಸಿ ಸಮಾರಂಭವನ್ನು ಹರಸಿದ್ದರು. ನಮ್ಮ ಕನ್ನಡ ಸಾಹಿತಿಗಳು ಹಿಮಾಲಯದ ಶ್ರೇಣಿಯಂತೆ ಇತರರಿಗೆ ಪೂಜ್ಯರಾಗಿ ಗೋಚರಿಸಿದ್ದುದನ್ನು ಕಂಡು ಹುರಿದುಂಬಿ ಇದನ್ನೆಲ್ಲಾ ಬರೆಯಲು ಕಾರಣವಾಯಿತು.

ವಿದ್ಯಾವಾರಿಧಿ ಬಿ. ಶಿವಮೂರ್ತಿಶಾಸ್ತ್ರಿಗಳು ಈ ಶ್ರೇಣಿಯಲ್ಲೊಬ್ಬರಾಗಿದ್ದಾರೆ. ಅವರು ತಮಿಳಿನವರಲ್ಲಿಯೂ, ಆಂಧ್ರದವರಲ್ಲಿಯೂ ಮಿಲಿತವಾಗಿದ್ದಾರೆ. ಶಾಸ್ತ್ರಿಗಳವರ ಧರ್ಮಪತ್ನಿ ಶ್ರೀಮತಿ ಮುದ್ದುವೀರಮ್ಮನವರು ಜನ್ಮತಃ ತಮಿಳರು. ತಮಿಳು ಸಾಹಿತ್ಯವನ್ನು ಚೆನ್ನಾಗಿ ಓದಿಕೊಂಡಿರುವಂತಹವರು. ಕನ್ನಡದಲ್ಲಿಯೂ ಅಭಿಜ್ಞರು. ಎಷ್ಟೋ ಶೈವ ಪುರಾಣವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಇತರ ಶಾಸ್ತ್ರಗಳ ವಿಷಯದಲ್ಲಿ ಬೇಕಾದಷ್ಟು ಬರೆದಿದ್ದಾರೆ.

ಹೀಗೆ ಶಾಸ್ತ್ರಿ ಮಹಾಶಯರ ಪ್ರತಿಭೆಯು ಸೆಳೆತಕ್ಕೆ ಸಿಕ್ಕಿದವರಲ್ಲಿ ನಾನೂ ಒಬ್ಬ. ಹಾಗೆಯೇ ಅವರಲ್ಲಿ ಎಡೆಬಿಡದ ಸ್ನೇಹವು ಬೆಳೆದಿದೆ. ಅಂದಿನಿಂದ ಈ ವರೆಗೆ ಒಂದೇ ಬಗೆಯ ಸ್ನೇಹ ವಿಶ್ವಾಸಗಳು ಪರಸ್ಪರ ಹೊಂದಾಣಿಕೆಯಾಗಿ ಬೆಸಗೊಂಡಿವೆ ಎಂದು ಹೇಳಲು ಹರ್ಷಿಸುತ್ತೇನೆ.

ಅವರಲ್ಲಿ ಜಾತೀಯತೆಯ ಸೋಂಕಿಲ್ಲ. ಎಷ್ಟೋ ಸಾರಿ ತಮ್ಮ ಮನೆಗೆ ನನ್ನನ್ನು ಕರೆಸಿ, ಜೊತೆಯಲ್ಲೇ ಕುಳ್ಳಿರಿಸಿಕೊಂಡು ಊಟ ಮಾಡಿದ್ದಾರೆ. ಹಲವಾರು ಬಾರಿ ಫೋನ್ ಮಾಡಿ ನನ್ನ ಯೋಗಕ್ಷೇಮವನ್ನು ವಿಚಾರಿಸುತ್ತಾರೆ. ತಮ್ಮ ಕಾರ್ಯ ಗೌರವವನ್ನು ತಪ್ಪದೆ ದಿನ, ಎರಡು ದಿನಕ್ಕೊಮ್ಮೆಯಾದರೂ ತಿಳಿಸುತ್ತಾರೆ. ತಮಗೆ ಗೌರವ ಬರುವ ಕಡೆಗೆಲ್ಲಾ ನನ್ನನ್ನು ಆಹ್ವಾನಿಸುತ್ತಾರೆ. ಹೋದ ಕಡೆಗಳಲ್ಲೆಲ್ಲಾ ನನ್ನ ವಿಷಯದಲ್ಲಿ ನಾಲ್ಕು ಒಳ್ಳೆಯ ಮಾತಾಡಿ ಪರಿಚಯ ಮಾಡಿಸುತ್ತಾರೆ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷತೆ ಮತ್ತು ಆಡಳಿತವನ್ನು ಶಾಸ್ತ್ರಿಗಳು ವಹಿಸಿಕೊಂಡಾಗ (1956) ಅವರ ಒಟ್ಟಿಗೆ ಸುಮಾರು ಎಂಟೂಕಾಲು ವರ್ಷ ಪರಿಷತ್ತಿನ ಕಾರ್ಯವನ್ನು ಅವರೊಡನೆ ಶಕ್ತಿಮೀರಿ ಮಾಡಿದ್ದೇನೆ. ತಮಗಿಂತಲೂ, ತಮ್ಮ ಅಧಿಕಾರದ ಹಿರಿಮೆಗಿಂತಲೂ ಸಂಸ್ಥೆಯ ಹಿತವೇ ಹಿರಿದಾದುದೆಂದು ಶ್ರೀ ಶಾಸ್ತ್ರಿಗಳು ಭಾವಿಸಿದ್ದರು. ಸಭೆ ಸಮಾರಂಭಗಳಲ್ಲಿ ಪರಿಷತ್ತನ್ನು ಎರಡೂವರೆ ಕೋಟಿ ಕನ್ನಡಿಗರ ಪ್ರತೀಕವೆಂದು ಪುಷ್ಟೀಕರಿಸುತಿದ್ದರು. ರಾತ್ರಿ ಹಗಲೆನ್ನದೆ ತಮ್ಮ ಸ್ವಂತ ಕೆಲಸಕಾರ್ಯಗಳನ್ನು ಬಿಟ್ಟು ಕನ್ನಡ ಸಾಹಿತ್ಯ ಪರಿಷತ್ತಿನ ಏಳಿಗೆಗೆ ಶ್ರಮಿಸುತ್ತಿದ್ದರು. ಕನ್ನಡದಲ್ಲಿ ಜಾಗೃತಿಯುಂಟಾಗಬೇಕು. ಕನ್ನಡದಲ್ಲಿ ಪ್ರಕಟನೆಗಳು ಹೆಚ್ಚಾಗಬೇಕು. ಕನ್ನಡಾಭಿಮಾನದ ಸಂಘಗಳು ಕರ್ಣಾಟಕದಲ್ಲಿ ಒಳಗೂ ಹೊರಗೂ ವಿಪುಲವಾಗಿ ಬಳೆಯಬೇಕು. ಹೀಗೆ ಒಂದಲ್ಲ, ಎರಡಲ್ಲ ಸಾವಿರಾರು ಯೋಜನೆಗಳನ್ನು ಹಾಕಿದ್ದರು. ದುಡಿಯುವ ಮನಸ್ಸಿನಿಂದ ಸದಾ ಪರಿಷತ್ತಿನ ಹಿತೈಷಿಯಾಗಿ, ಪಾದರಸದಂತೆ ಜಾಗೃತರಾಗಿ ಕಾರ್ಯಮಗ್ನರಾಗಿದ್ದರು. ಹೀಗಾಗಿ ಎಷ್ಟೋ ಸಮಾರಂಭಗಳನ್ನು ಅಲ್ಲಿ ನಡೆಸಿದ್ದಾರೆ. ಹಿಂದೆಂದೂ ಸಮ್ಮೇಳನಾಧ್ಯಕ್ಷತೆಗೆ ಒಪ್ಪದಿದ್ದ ಶ್ರೀ ಕುವೆಂಪುರವರನ್ನು ಧಾರವಾಡದಲ್ಲಿ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಮಾಡಿದವರು ಶ್ರೀ ಶಾಸ್ತ್ರಿಗಳು. ಶ್ರೀಮಾನ್ ಶಾಸ್ತ್ರಿಗಳವರ ಜೊತೆಗೆ ಆಗ ನಾನೂ ಹೋಗಿ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಗಳಾಗಿದ್ದ ಶ್ರೀಮಾನ್ ಕೆ. ವಿ. ಪುಟ್ಟಪ್ಪನವರನ್ನು ಕಂಡು, ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಲು ಒಪ್ಪಿಗೆ ಕೊಡಿಯೆಂದು ಕೇಳಿದೆವು. ಆಗ ಶ್ರೀಮಾನ್ ಕುವೆಂಪುರವರು "ಶಾಸ್ತ್ರಿಗಳೇ, ತಮ್ಮಂತಹ ಹಿರಿಯರು ಬಂದು ಕೇಳಿದ ಮೇಲೆ, ಒಲ್ಲೆ ಎಂದು ಹೇಳಲು ಸಾಧ್ಯವೆ ?" ಎಂದು ತತ್ ಕ್ಷಣ ಸಮ್ಮತಿಸಿದರು. ಈ ಒಂದು ವಿಚಾರದಲ್ಲಿ ಹಿರಿಯ ಸಾಹಿತಿಗಳು ಹಿರಿಯರಾದ ಶಾಸ್ತ್ರಿಗಳ ಬಗೆಗೆ ಇಟ್ಟುಕೊಂಡಿರುವ ಗೌರವವನ್ನು ಕಂಡು ನಾವು ಸಂತೋಷಿಸಬೇಕು. ಅವರು ಪರಿಷದಧ್ಯಕ್ಷರಾಗಿ, ಧಾರವಾಡ, ಬಳ್ಳಾರಿ, ಗದಗ, ಉಡುಪಿ, ಬೀದರ-ಸಿದ್ಧಗಂಗಾ ಹೀಗೆ ಆರು ಸ್ಥಳಗಳಲ್ಲಿ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿ ಲಕ್ಷಗಟ್ಟಲೆ ಕನ್ನಡ ಕುಲದವರನ್ನು ಸೇರಿಸಿ ಯಶಸ್ವಿಯಾಗಿ ಅವನ್ನು ನಡೆಸಿದ್ದಾರೆ.

ಶಾಸ್ತ್ರಿಗಳ ವಿಚಾರವನ್ನು ವೈಯಕ್ತಿಕವಾಗಿ ಟೀಕಿಸಿದವರೂ ಇದ್ದಾರೆ. ಕೆಲ ಪತ್ರಿಕೆಗಳವರಂತೂ ತಮ್ಮ ಸಹಕಾರವನ್ನು ನಿಲ್ಲಿಸಿ, ಪತ್ರಿಕಾ ಧರ್ಮಕ್ಕೆ ಚ್ಯುತಿ ಉಂಟಾಗುವ ರೀತಿಯಲ್ಲಿ, ಶಾಸ್ತ್ರಿಗಳ ಬಗ್ಗೆ ಅವರು ಅಧ್ಯಕ್ಷರಾಗಿದ್ದಾಗ ನಡೆದುಕೊಂಡಿದ್ದಾರೆ.

ಕ್ಷುಲ್ಲಕವಾದ ವಿಷಯಗಳಿಗೆ ಬಣ್ಣಕಟ್ಟಿ ಭೂತಾಕಾರವಾದ ಬೊಬ್ಬೆಗಳಿಂದ ಹುಯಿಲೆಬ್ಬಿಸಿದರು, ಆಗಬಾರದ್ದೇನೋ ನಡೆದು ಹೋಗಿದೆಯೆಂದು ಹುಚ್ಚು ಕಲ್ಪನೆಗಳನ್ನು ಬಣ್ಣಿಸಿ ಬರೆಯಿಸುತ್ತಿದ್ದರು. ಆದರೂ ಶ್ರೀಮಾನ್ ಶಾಸ್ತ್ರಿಗಳು ಜಗ್ಗಲಿಲ್ಲ. ಧೈರ್ಯವಾಗಿ ಈ ಚೇಷ್ಟೆಗಳನ್ನು ಖಂಡಿಸಿ ಸತ್ಯವಾದ ಹೇಳಿಕೆಗಳನ್ನು ಕೊಡುತ್ತಿದ್ದರು. ಇದರಿಂದ ಶಾಸ್ತ್ರಿಗಳ ಬಗೆಗೆ ಕನ್ನಡ ಜನತೆಯ ಆದರಾಭಿಮಾನಗಳು ವೃದ್ಧಿಗೊಂಡವು. ದಿನೇ ದಿನೇ ಜನಮನ್ನಣೆಯು ಅಧಿಕವಾಗುತ್ತಿದ್ದಿತು. ಆಗ ಸ್ವಲ್ಪ ಪ್ರೋತ್ಸಾಹ ಪತ್ರಿಕೆಗಳಲ್ಲಿ ಬಂದಿದ್ದರೆ ಶಾಸ್ತ್ರಿಯವರು ಇನ್ನೂ ಹೆಚ್ಚಿನ ರೀತಿಯ ಸೇವೆಯನ್ನು ಪರಿಷತ್ತಿಗೆ ಮಾಡಲು ಅವಕಾಶವಿದ್ದಿರಬಹುದಾಗಿತ್ತೆಂದೇ ನನ್ನ ಭಾವನೆ.

ಶ್ರೀ ಶಾಸ್ತ್ರಿಗಳು ಪರಿಷತ್ತಿನಲ್ಲಿದ್ದಾಗ ಕನ್ನಡ ಸಂಘಗಳು, ನಾಟಕ, ಸಂಗೀತ, ಸಾಹಿತ್ಯ ಮುಂತಾದವುಗಳಿಗೆ ಪ್ರೋತ್ಸಾಹ ಕೊಡುತ್ತಿದ್ದರು. ಕನ್ನಡ ನಿಘಂಟು ತಯಾರಿಕೆಯು ಪರಿಷತ್ತಿನ ಹೊಣೆಯೆಂದೇ ಭಾವಿಸಿದ್ದರು. ಸರ್ಕಾರದೊಂದಿಗೆ 15 ಲಕ್ಷ ರೂಪಾಯಿಗಳ ಒಡಂಬಡಿಕೆಗೆ ಸಹಿಯಾದ ದಿನ ಅವರ ಸಂತೋಷಕ್ಕೆ ಎಣೆಯೇ ಇಲ್ಲ. ಪರಿಷತ್ತಿನ ಚರಿತ್ರೆಯಲ್ಲಿ ಈ ಘಟನೆಯನ್ನು ಸುವರ್ಣಾಕ್ಷರದಲ್ಲಿ ಬರೆದಿಡಬೇಕೆಂದು ಹೇಳುತ್ತಿದ್ದರು. ನಿಜವಾಗಿಯೂ ಈ ಕಾರ್ಯವು ಹೆಚ್ಚಿನ ಮಹತ್ವವುಳ್ಳುದೆಂದು ಬುದ್ಧಿಜೀವಿಗಳಿಗೆ ಗೊತ್ತಿರುವ ವಿಷಯವೇ. ಯಾಕೆಂದರೆ ಪರಿಷತ್ತನ್ನು ನಂಬಿ, ಸರ್ಕಾರವು 15 ಲಕ್ಷ ರೂಪಾಯಿಗಳನ್ನು ಕೊಡಲು ಕರಾರು ಆಗಿದೆ. ನಂಬಿಕೆ ಇಲ್ಲವೆಂದು ಹೇಳಿಕೊಳ್ಳಲು ಮಾರ್ಗವಿಲ್ಲದೆ, ಸರ್ಕಾರದ ಮುದ್ರಣಾಲಯದಲ್ಲಿ ಮುದ್ರಿಸಬೇಕೆಂದು ಅಪಶ್ರುತಿ ಹಾಡಲು ಸರ್ಕಾರವು ಪ್ರಾರಂಭಿಸಿತು. ಪರಿಷತ್ತಿನ ಅಧಿಕಾರಿವರ್ಗದವರು ಶಾಸ್ತ್ರಿ

ಗಳವರ ನೇತೃತ್ವದಲ್ಲಿ ಪರಿಷತ್ತಿನ 'ಅಚ್ಚುಕೂಟದಲ್ಲೇ ಮುದ್ರಣವಾಗಬೇಕೆಂದು ಹಟ ಹಿಡಿದರು. ಇದರಿಂದ ಪರಿಷತ್ತಿನ ಅಚ್ಚುಕೂಟವು ಸುಧಾರಿಸುವುದೆಂದೂ, ಹೊಸ ಮೊಳೆಗಳು, ಹೊಸ ಮುದ್ರಣಯಂತ್ರಗಳು ಒದಗುವುವೆಂದೂ, ಪರಿಷತ್ತಿಗೆ ನಿಘಂಟಿನ ಪ್ರತಿಗಳನ್ನು ಮಾರುವುದರಿಂದ ಮತ್ತು ಅಚ್ಚು ಮಾಡುವುದರಿಂದ ಲಕ್ಷಾಂತರ ರೂಪಾಯಿಗಳ ಲಾಭವಾಗುವುದೆಂದೂ ಶಾಸ್ತ್ರಿಗಳವರಿಗೆ ವಿಶೇಷವಾಗಿ ಮನವರಿಕೆಯಾಗಿತ್ತು.

ಈ ವಿಶೇಷ ಸೌಲಭ್ಯವನ್ನು ಪರಿಷತ್ತಿಗೆ ಪಡೆಯುವುದಕ್ಕಾಗಿ ನಿಘಂಟಿನ ಸಂಪಾದಕ ಸಮಿತಿಯ ಅಧ್ಯಕ್ಷರಾಗಿದ್ದ ದಿವಂಗತ ತೀ. ನಂ. ಶ್ರೀ ಯವರು ತುಂಬಾ ಶ್ರಮ ವಹಿಸಿದ್ದರು. ನಾಲ್ಕಾರು ಸಾರಿ ನಿಘಂಟಿನ ಸಮಿತಿಯ ಸದಸ್ಯರೊಂದಿಗೆ ಅವರೂ ಮಂತ್ರಿಗಳನ್ನು ಕಾಣಲು ಬಂದಿದ್ದರು. ಕನ್ನಡ ನಿಘಂಟಿನ ಸಂಪಾದಕ ಮಂಡಲಿಯ ಶ್ರೀಯುತರುಗಳಾದ ಡಿ. ಎಲ್. ನರಸಿಂಹಾಚಾರ್ಯರು, ದಿ||ಕೆ.ಜಿ. ಕುಂದಣಗಾರರು, ಡಾ|| ರಂ. ಶ್ರೀ ಮುಗಳಿಯವರು, ಡಾ|| ಆರ್. ಸಿ. ಹಿರೇಮಠ ಅವರು, ಪ್ರೊ||ಡಿ.ಜವರೇಗೌಡರು, ಪ್ರೊ|| ಡಿ ಕೆ. ಭೀಮಸೇನರಾಯರು, ಪ್ರೊ|| ಕೆ. ವಿ. ರಾಘವಾಚಾರ್ಯರು, ಪ್ರೊ||ಎಂ.ಮರಿಯಪ್ಪಭಟ್ಟರು, ಪ್ರೊ|| ಸ.ಸ. ಮಾಳವಾಡರು, ಶ್ರೀ ಎನ್. ಲಕ್ಷ್ಮೀನಾರಾಯಣರಾಯರು, ಶ್ರಿಸಿದ್ಧಯ್ಯಪುರಾಣಿಕರವರು, ರಾಜಸೇವಾಸಕ್ತ ಡಿ.ಸಿ. ಸುಬ್ಬರಾಯಪ್ಪನವರು, ಎಲ್. ಗುಂಡಪ್ಪನವರು, ಶ್ರೀ ಎನ್. ಬಸವಾರಾಧ್ಯರು, ದಿ|| ಗೋಪಾಲಕೃಷ್ಣರಾಯರು, ಶ್ರೀ ಅನ್ನದಾನಯ್ಯ ಪುರಾಣಿಕರವರು, ಡಾ|| ಕೆ. ಎಂ. ಕೃಷ್ಣರಾಯರು, ಶ್ರೀ ಎಚ್. ಎಸ್. ಸೀತಾರಾಂರವರು, ನಿಘಂಟಿನ ಬಗೆಗೆ ಸಹಾನುಭೂತಿಯನ್ನು ತೋರಿದ್ದಾರೆ. ಈ ಮಹತ್ಕಾರ್ಯ ಸಾಧನೆಗಾಗಿ ಶಾಸ್ತ್ರಿಗಳವರು ವಿಧಾನಸೌಧಕ್ಕೆ ಒಂದು ನೂರು ಸಲವಾದರೂ ಹೋಗಿ ಬಂದಿದ್ದಾರೆ. ನಾನೂ ಪರಿಷತ್ತಿನ ಅಧಿಕಾರಿವರ್ಗದವನಾಗಿದ್ದುದರಿಂದ ಈ ಒಡಂಬಡಿಕೆಗೆ ಸಾಕ್ಷಿ ಹಾಕಿದ್ದೇನೆ.

ಶ್ರೀಮಾನ್ ಬಿ. ಶಿವಮೂರ್ತಿಶಾಸ್ತ್ರಿಗಳಲ್ಲಿ ತಮ್ಮ ನಿಲುವಿಗೆ ಇತರರನ್ನು ಒಲಿಸಿಕೊಳ್ಳುವ ಛಾತಿಯು ತುಂಬಾ ಇದೆ. ಅವರು ಮಂತ್ರಿಗಳನ್ನು, ಸರ್ಕಾರದ ಅಧಿಕಾರಿಗಳನ್ನು, ಮುಖಂಡರನ್ನು ತಮ್ಮದೇ ಆದ ವಾದ-ವೈಖರಿಗಳಿಂದ, ಸಾರ್ವಜನಿಕವಾಗಿ ಭಾಷಣ ಮಾಡಿ, ಹೊಗಳಿ, ಮೋಡಿ ಮಂತ್ರವನ್ನು ಹಾಕಿ, ತಮ್ಮ ಸೂಚನೆಗೆ ಒಪ್ಪಿಸಿ, ಅವರಿಂದಲೇ 'ಅಸ್ತು' ಎಂದು ಹೇಳಿಸುತ್ತಾರೆ. ಮತ್ತೆ ಮಾರನೇ ದಿನವೇ ಅಥವಾ ಕೆಲಸ ಆಗುವವರೆಗೆ ಭಗೀರಥನಂತೆ ಅದನ್ನು ಸಾಧಿಸಿ ಕೆಲಸದಲ್ಲಿ ಜಯವನ್ನು ಪಡೆಯುತ್ತಾರೆ.

ತಾವು ಪರಿಷತ್ತಿನ ಅಧ್ಯಕ್ಷರಾಗಿದ್ದ ಸಮಯದಲ್ಲಿ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರವರನ್ನು ಬರಮಾಡಿಕೊಂಡು ಅಚ್ಚು ಕೂಟದ ವಿಸ್ತರಣವನ್ನು ಆರಂಭಗೊಳಿಸಿದರು. ನಿಘಂಟಿನ ಮೊದಲನೆಯ ಪ್ರತಿಯನ್ನು ಶ್ರೀಮನ್ಮಹಾರಾಜರವರ ಅಮೃತ ಹಸ್ತದಿಂದಲೇ ಹೊಸ ಮುದ್ರಣಯಂತ್ರದಿಂದ ಅಚ್ಚು ಮಾಡಿಸಿದರು. ಹಿಂದಿನ ಸಮ್ಮೇಳನದ ಅಧ್ಯಕ್ಷರುಗಳಿಗೆ ಬಿನ್ನವತ್ತಳೆಯನ್ನು ಅರ್ಪಿಸಿ, ಶ್ರೀಮನ್ಮಹಾರಾಜರವರ ಸಮ್ಮುಖದಲ್ಲಿ ಈ ಸಮಾರಂಭವನ್ನು ವಿಜೃಂಭಣೆಯಿಂದ ನೆರವೇರಿಸಿ,, ಪರಿಷತ್ತಿನ ಘನತೆಯನ್ನು ಉಳಿಸಿ ಹಿರಿಯರಿಗೆ ಮನ್ನಣೆ ಕೊಟ್ಟಿದ್ದಾರೆ.

ಇಡೀ ರಾಷ್ಟ್ರದಲ್ಲಿಯೇ ಪರಮೋತ್ಕೃಷ್ಟವಾದ ಸ್ಥಾನವನ್ನು ಅಲಂಕರಿಸಿದ್ದ ರಾಷ್ಟ್ರಾಧ್ಯಕ್ಷ ದಿ|| ಡಾ|| ರಾಜೇಂದ್ರಪ್ರಸಾದರವರನ್ನೂ, ಡಾ|| ಎಸ್. ರಾಧಾಕೃಷ್ಣನ್‌ರವರನ್ನೂ ಪರಿಷತ್ತಿಗೆ ಆಹ್ವಾನಿಸಿ, ಗೌರವದಿಂದ ಸನ್ಮಾನಿಸಿ ಬಿನ್ನವತ್ತಳೆಗಳನ್ನು ಅರ್ಪಿಸಿದ್ದಾರೆ. ಬಿನ್ನವತ್ತಳೆಯ ಕರಂಡವನ್ನು ಡಾ|| ಎಸ್. ರಾಧಾಕೃಷ್ಣನ್‌ರವರಿಗೆ ತಾವು ಕೊಡದೆ, ಕೋಶಾಧಿಕಾರಿಯಾಗಿದ್ದ ನನ್ನಿಂದಲೇ ಕೊಡಿಸಿ, ಕನಸಿನಲ್ಲೂ ಅಲಭ್ಯವಾದ ಮಹದವಕಾಶವನ್ನು ನನಗೆ ದೊರೆಕಿಸಿದ್ದಾರೆ. ಪರಿಷತ್ತಿನ ಸರಸ್ವತೀ ಮಂದಿರಕ್ಕೆ, ಈ ಸಮಾರಂಭಗಳಿಂದ ಅತ್ಯಂತ ಜಾಜ್ವಲ್ಯಮಾನವಾದ ಪ್ರತಿಭೆಯನ್ನು ತಮ್ಮ ಕಾಲದಲ್ಲಿ, ತಮ್ಮ ಸೇವಾಮನೋಭಾವದ ಸಂಕೇತವಾಗಿ ಅರ್ಪಿಸಿದ್ದಾರೆ. ಸಮಾರಂಭಗಳು ಮುಗಿದ ಮೇಲೆ "ದೇವರೇ ನಮ್ಮನ್ನು ಕಾಪಾಡಿದನು" ಎಂದು ಉದ್ಗಾರವನ್ನು ತೆಗೆದಿದ್ದಾರೆ. ಹಲವು ವೇಳೆ ಭಾವೈಕ್ಯರಾಗಿ ಪರಿಷತ್ತಿನ

ಕುರ್ಚಿಯಲ್ಲಿ ನ್ಯೈಮರೆತು ಕುಳಿತಿದ್ದಾರೆ. ಇದು ಅವರ ಹಿರಿಯದಾದ ಕಾರ್ಯತತ್ಪರತೆಯ ನಿದರ್ಶನ ವೆನ್ನಬಹುದು; ಹಾಗೂ ಅವರ ಸಾಹಸ ಜೀವನದ ನಿದರ್ಶನವೆನ್ನಬಹುದು.

ಸಾಹಿತ್ಯ ಪರಿಷತ್ತು ಎಂದರೆ ಶಾಸ್ತ್ರಿಗಳಿಗೆ ಪಂಚ ಪ್ರಾಣವಾಗಿದೆ. ಈ ದೃಷ್ಟಿಯಲ್ಲಿ ಅವರಷ್ಟು ದುಡಿದವರು ತುಂಬಾ ಕಡಮೆಯೆಂದೇ ನನ್ನ ಭಾವನೆ. 'ಎಲ್ಲೋ ಕೆಲವರಿಗಾಗಿ ಪರಿಷತ್ತಿನ ಸೊತ್ತು ವಿನಿಯೋಗವಾಗಿದೆ' ಎಂಬ ಭಾವನೆಯನ್ನು ತೊಡೆದು ಹಾಕಿ, ಕೆಲವೇ ಮಂದಿ ಮಂಡಿಸುತ್ತಿದ್ದ ಸಂಕುಚಿತ ಭಾವನೆಯ ಜಮಖಾನವನ್ನು ಕಿತ್ತೊಗೆದು, ಸಭಾಮಂದಿರದ ತುಂಬಾ ಆಧುನಿಕ ನಮೂನೆಯ ಕುರ್ಚಿಗಳನ್ನು ಅಳವಡಿಸಿ, ಪರಿಷತ್ತಿನಲ್ಲಿ ತರುಣಸಾಹಿತಿಗಳು, ಸಾಹಿತ್ಯಾಭಿಮಾನಿಗಳು ಕೂರುವ ಹಕ್ಕಿದೆಯೆಂಬುದನ್ನು ಸ್ಥಾಪಿಸಿದ್ದಾರೆ. ಸಂಕುಚಿತ ಭಾವದ ಮಡಿವಂತಿಕೆಯ ಮನೋಭಾವದಿಂದ ಮುಸ್ಸಂಜೆಯಂತೆ ಮಸುಕುಮುಸುಕಾಗಿ ಕತ್ತಲೆಕವಿದಿದ್ದ ಕನ್ನಡ ಸಾಹಿತ್ಯ ಪರಿಷತ್ತಿಗೆ ಒಂದು ಹೊಸಕಳೆಯನ್ನು ತುಂಬಿಸಿಕೊಟ್ಟಿದ್ದಾರೆ.

ಪರಿಷತ್ತಿನ ಆಜೀವ ಸದಸ್ಯನಾಗಿ ಬಹಳ ವರ್ಷಗಳಾಗಿದ್ದರೂ, ನನ್ನ ಯೋಗ್ಯತೆಗೂ ಮಿಾರಿದಂತೆ, ಪರಿಷತ್ತಿನ ಕೋಶಾಧಿಕಾರಿಯನ್ನಾಗಿಯೂ, ಕೆಲವು ಕಾಲ ಕಾರ್ಯದರ್ಶಿಯನ್ನಾಗಿಯೂ ಮತ್ತು ಬಿ. ಎಂ. ಶ್ರೀ ಅಚ್ಚುಕೂಟದ ಮೇಲ್ವಿಚಾರಕನನ್ನಾಗಿಯೂ ನೇಮಿಸಿಕೊಂಡು ಕನ್ನಡಾಂಬೆಯ ಸೇವೆಗೆ ನನ್ನನ್ನು ಬದ್ಧಕಂಕಣನನ್ನಾಗಿ ಮಾಡಿದರು. ಹಾಗಾಗಿ ಸಾರ್ವಜನಿಕರಿಂದ ಹಣವಸೂಲಿಯನ್ನು ಪರಿಷತ್ತಿನ ಅಭಿವೃದ್ಧಿಗಾಗಿ ಆರಂಭಿಸಿದೆವು. ಲಕ್ಷಾಂತರ ರೂಪಾಯಿಗಳ ಸಂಗ್ರಹಣೆಗಾಗಿ ಕಾರ್ಯಕ್ರಮವೊಂದನ್ನು ಹಾಕಿಕೊಂಡಿದ್ದೆವು. ಸ್ವಲ್ಪ ಹಣವೂ ಶೇಖರಣೆಯಾಯಿತು. ಆದರೆ, ಹಲವಾರು ಪ್ರತಿಕೂಲ ಕಾರಣಗಳಿಂದ ಆ ನಮ್ಮ ಪ್ರಯತ್ನವು ಮುಂದುವರೆಯಲಿಲ್ಲ.

ನನ್ನ ಹಾಗೇ ಇನ್ನೂ ಎಷ್ಟೋ ಜನರನ್ನು ಶಾಸ್ತ್ರಿಗಳು ಮುಂದಕ್ಕೆ ಎಳೆತಂದಿದ್ದಾರೆ. ಒಬ್ಬರಿಂದ ಅಸಾಧ್ಯವಾದುದನ್ನು ಹತ್ತಾರು ಜನರ ಸಹಾಯದಿಂದ ಸಾಧಿಸಿದ್ದಾರೆ. ಆದರೂ ನಮ್ಮ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಈಗಿನ ಅದರ ಪರಿಸ್ಥಿತಿಯನ್ನು ಬೇರೆ ಪ್ರಾಂತಗಳಲ್ಲಿರುವ ಇತರ ಭಾಷೆಯವರ ಪರಿಷತ್ತುಗಳೊಂದಿಗೆ ಹೋಲಿಸಿದರೆ ನಮ್ಮ ಸಾಧನೆಯು ತುಂಬಾ ಕಡಮೆ. ಬೇರೆ ಭಾಷೆಯ ಜನ ಪರ್ವತದಷ್ಟು ಸಾಧನೆಗಳನ್ನು ಮಾಡಿಕೊಂಡಿದ್ದಾರೆ. ಅವರವರ ಭಾಷೆಗೆ ಏನೇನು ಅಗತ್ಯವಿದೆಯೋ ಅದನ್ನೆಲ್ಲ ಸಾರ್ವಜನಿಕರಿಂದ, ಸರ್ಕಾರದ ವತಿಯಿಂದ ಮಾಡಿಸಿದ್ದಾರೆ. ಹಾಗೆಯೇ ಮುಂದುವರಿಸುತ್ತಿದ್ದಾರೆ.

ಕನ್ನಡಿಗರಾದ ನಮ್ಮಲ್ಲಿರುವ ಜಾತೀಯತೆ, ಅನೈಕ್ಯತೆ, ಸಂಕುಚಿತ ಭಾವನೆ, ಕನ್ನಡಿಗರಲ್ಲೇ ಕನ್ನಡ ಭಾಷಾಭಿಮಾನದ ಶೂನ್ಯತೆ, ಸರ್ಕಾರದಿಂದ ಪರಿಷತ್ತಿಗೆ ದೊರಕಬೇಕಾಗಿರುವ ದ್ರವ್ಯಸಹಾಯ, ಹೀಗೆ ಎಷ್ಟೋ ವಿಧಗಳಲ್ಲಿ ಅನಾಯಕತೆ, ಅನಿಷ್ಟಗಳ ಹಿಡಿತದಿಂದ ವಿಮೋಚನೆಗೊಂಡು ಮತ್ತಷ್ಟು ಸೇವಾಭಾವದಿಂದ ದುಡಿಯುವ ಅಧಿಕಾರಿವರ್ಗ ಸದಾ ಪರಿಷತ್ತಿಗೆ ಭಗವಂತನ ಅನುಗ್ರಹದಿಂದ ದೊರೆಯಬೇಕಾಗಿದೆ.

ಶ್ರೀಮಾನ್ ಶಾಸ್ತ್ರಿಗಳ ಮನಸ್ಸು ಬಹಳ ಉದಾರವಾದುದು. ಅದು ಪಾದರಸದಂತೆ ಸದಾ ಎಚ್ಚರವಿರುತ್ತದೆ. ಅವರು ತಮ್ಮವರೆಂದರೆ ಎಲ್ಲೂ ಕೈ ಬಿಡುವುದಿಲ್ಲ. ತಾವೂ ಮರ್ಯಾದೆ ಕೊಟ್ಟು ಬೇರೆಯವರಿಂದಲೂ ಗೌರವವನ್ನು ಪಡೆಯುತ್ತಾರೆ. ಇದು ಅವರಲ್ಲಿರುವ ಹಿರಿಯ ಗುಣಗಳಲ್ಲೊಂದು.

ಸ್ನೇಹಕ್ಕಿಂತಲೂ ಅಧಿಕವಾದ ವಸ್ತುವನ್ನು ಅವರು ಕಂಡರಿಯರೆಂದೇ ನನ್ನ ಭಾವನೆ. ನಮ್ಮಲ್ಲಿ ಎಷ್ಟೋ ಸಾರಿ ತತ್ತ್ವಕ್ಕೋಸ್ಕರವಾಗಲಿ, ನಿಬಂಧನೆಗಳ ಅನುಷ್ಠಾನದಲ್ಲಿಯಾಗಲಿ ಭಾರಿ ಘರ್ಷಣೆಗಳು ಉದ್ಭವಿಸಿವೆ. ಅವರೇ ಗೆದ್ದಿದ್ದರೂ ಸೋತಿದ್ದರೂ, ಸಂಘ ಸಂಸ್ಥೆಗಳು ವ್ಯಕ್ತಿಗಳಿಗಿಂತ ಹಿಂದಾದುದು ಎಂದು ಕಾಯಾ, ವಾಚಾ, ಮನಸಾ ಆಚರಣೆಯಲ್ಲಿ ತೋರಿಸಿದ್ದಾರೆ. ಹಿರಿಯರು, ಕಿರಿಯರು ಎಂಬ ಭೇದ ಭಾವನೆ ಇಲ್ಲದೆ ಸಮತಾಭಾವವನ್ನು ನೈತುಂಬಾ ಬಳಿಸಿಕೊಂಡಿದ್ದಾರೆ. ಆದ್ದರಿಂದಲೇ ಅವರು ಕರ್ಣಾಟಕದಲ್ಲಿ ಸುಮಾರು 40ವರ್ಷಗಳಿಂದಲೂ

ಗಣ್ಯ ಸ್ಥಾನದಲ್ಲಿದ್ದಾರೆ. ಕರ್ಣಾಟಕದ ಐಕ್ಯತೆಗಾಗಿ ದುಡಿದ ಹಿರಿಯರಲ್ಲಿ ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳೊಬ್ಬರು.

ಪ್ರಾರಂಭ ಜೀವನದಲ್ಲಿ ಸಾಧಾರಣ ಸ್ಕೂಲು ಮಾಸ್ತರಾಗಿದ್ದು ಹರಿಕಥೆ ಶಿವಕಥೆಗಳನ್ನು ಮಾಡಿಕೊಂಡಿದ್ದು ಬಡತನದಲ್ಲಿಯೇ ಜೀವನವನ್ನು ಪ್ರಾರಂಭಿಸಿದ ಶಾಸ್ತ್ರಿಗಳು ಕ್ರಮಕ್ರಮವಾಗಿ ಆಸ್ಥಾನ ವಿದ್ವಾಂಸರಾಗಿ, ಪತ್ರಿಕಾಕರ್ತರಾಗಿ, ಸಾಹಿತಿಗಳಾಗಿ, ಪರಿಷತ್ತಿನ ಅಧ್ಯಕ್ಷರಾಗಿ ಹೀಗೆ ಜೀವನದಲ್ಲಿ ನಾನಾ ರೀತಿಯ ಪ್ರಗತಿಯನ್ನು ಸಾಧಿಸಿದ್ದಾರೆ. 'ಕಾಯಕವೇ ಕೈಲಾಸ'ಎಂದು ಭಾವಿಸಿ, ದುಡಿಮೆ-ಜ್ಞಾನಗಳಿಂದಲೇ ಕೀರ್ತಿ ಭಾಗಿಗಳಾಗಿ, ತಮ್ಮಿಂದ ಭಾಷೆಗೂ, ನಾಡಿಗೂ ಮಿಗಿಲಾದ ಸೇವೆಯನ್ನು ಸಲ್ಲಿಸಿ, ಗುರುಮನೆ ಅರಮನೆಗಳಿಂದ ಬಿರುದುಗಳನ್ನು ಪಡೆದು, ಯಶಸ್ಸು ಕೀರ್ತಿಗಳಿಸಿ, ನಾನಾ ಬಿರುದಾಂಕಿತರಾಗಿ ರಾಷ್ಟ್ರದ ಸಮಗ್ರ ಮನ್ನಣೆಯ ನಿದರ್ಶನವಾದ "ಪದ್ಮಶ್ರೀ" ಎಂಬ ಹಿರಿಯ ಪ್ರಶಸ್ತಿಯನ್ನು ಕೂಡ ಗಳಿಸಿದ್ದಾರೆ. ಈ ಘಟನೆಯಿಂದ ಅವರ ಸಾಮರ್ಥ್ಯವನ್ನು ನಾವು ಸುಲಭವಾಗಿ ಊಹಿಸಬಹುದು.

ಎಲ್ಲರಿಗೂ ಇಂತಹ ಈ ಸದವಕಾಶಗಳು ದೊರೆಯುವುದಿಲ್ಲ. ಶ್ರೇಷ್ಠ ಸಂಜಾತರಾದವರಿಗೆ ಮಾತ್ರ ಲಭಿಸುತ್ತದೆ. ಕಾಳಿದಾಸನಿಗೆ ಕಾಳಿಕಾಂಬೆಯ ಕೃಪೆಯ ವರ ಪ್ರಸಾದವಿದ್ದಂತೆ, ಶಾಸ್ತ್ರಿಗಳಿಗೆ ಯಾವ ರೂಪದಲ್ಲೋ ದೈವಾನುಗ್ರಹ ಉಂಟಾಗಿರಬೇಕು. ವಿಷಯದಲ್ಲಿ ತನ್ಮಯರಾಗಿ ಕೀರ್ತನಗಳನ್ನು ಮಾಡುವಾಗ ಈಶ್ವರನು ಒಲಿದಿರಬೇಕು. ಇಲ್ಲದಿದ್ದರೆ ಇಂಥಾ ಅದ್ಭುತ ಯಶಸ್ಸು ದೊರೆಯುವುದು ದುರ್ಲಭ. ತಾಯಿಭುವನೇಶ್ವರಿಯು ಕೆಚ್ಚೆದೆಯ ಅಚ್ಚಕನ್ನಡಿಗರಾದ ಅವರನ್ನು ಕರುಣಿಸಲಿ, ಕನ್ನಡ ನಾಡಿನ ಚರಿತ್ರೆಯಲ್ಲಿ ಅವರ ಹೆಸರು ಧೃವನಕ್ಷತ್ರದಂತೆ ಶಾಶ್ವತವಾಗಿ ನಿಲ್ಲುವಂತಾಗಲಿ. ಅವರು ಕರ್ಣಾಟಕವನ್ನು ಕಟ್ಟಲು ಪಟ್ಟ ಕಷ್ಟನಷ್ಟಗಳು ಅಷ್ಟಿಷ್ಟಲ್ಲ. ಕೆಲ ಸಮಯ ಈ ವ್ಯವಹಾರದಲ್ಲಿ ಅವರ ಪ್ರಾಣಕ್ಕೇ ಹಲವು ವೇಳೆ ಅಪಾಯ ಬಂದಿತ್ತೆಂಬುದು ನನಗೆ ಗೊತ್ತಿರುವ ಸಂಗತಿ.

ಶ್ರೀಮಾನ್ ಬಿ. ಶಿವಮೂರ್ತಿಶಾಸ್ತ್ರಿಗಳ ವಿಷಯದಲ್ಲಿ ಏನಾದರೂ ಬರೆಯಬೇಕೆಂದು ಯೋಚಿಸಿದರೆ ಬರೆಯುತ್ತಾ, ಬರೆಯುತ್ತಾ ಹನುಮಂತನ ಬಾಲದಂತೆ ಇದು ಬೆಳೆದಿದೆ. ಸ್ನೇಹಕ್ಕೆ ಮಿತಿಯಿಲ್ಲ-ಎಷ್ಟು ಬೇಕಾದರೂ ಬರೆಯ ಬಲ್ಲ ಶಕ್ತಿ ಉಂಟಾಗುತ್ತದೆ. ಶ್ರೀಮಾನ್ ಶಾಸ್ತ್ರಿಗಳಿಂದ ಕನ್ನಡನಾಡಿಗೆ, ಭಾರತ ದೇಶಕ್ಕೆ ಇನ್ನೂ ಹೆಚ್ಚಾದ ಸೇವೆಯು ಅಖಂಡವಾಗಿ ದೊರಕಲಿ. ಅವರ ಕೀರ್ತಿಯು ಜ್ವಾಜ್ವಲ್ಯಮಾನವಾಗಿ ಬೆಳಗಲಿ, ಅವರ ವಂಶೋದ್ಧಾರವಾಗಲಿ. ಈಶ್ವರನು ಅವರಿಗೂ, ಅವರ ಕುಟುಂಬದವರಿಗೂ ದೀರ್ಘಾಯುರಾರೋಗ್ಯ ಭಾಗ್ಯಗಳನ್ನು ದಯಪಾಲಿಸಲಿ. ಅವರಿಗೆ ಸನ್ಮಂಗಳಗಳನ್ನು ಅನುಗ್ರಹಿಸಲೆಂದು ಆ ಭಗವಂತನಲ್ಲಿ ನನ್ನ ಪ್ರಾರ್ಥನೆ.

ಜಿ. ಶ್ರೀನಿವಾಸ್

---

# ಪಂಡಿತರತ್ನ, ಆಸ್ಥಾನ ವಿದ್ವಾನ್
# ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳಿಗೆ
## ಅನಂತ ಪ್ರಣಾಮಗಳು

**ಹಿರಿಯರೆ,**

ನಿಮ್ಮ ಅದ್ಭುತ ವಾಗ್ವೈಖರಿಯನ್ನು ಕಂಡು ತರುಣನಾದ ನಾನು ಅಂದು ಮಂತ್ರ ಮುಗ್ಧನಾಗಿದ್ದೆ. ಆ ಕಾಲದಲ್ಲೇ ನಾನು ನಿಮ್ಮ ಘನವಾದ ವ್ಯಕ್ತಿತ್ವವನ್ನು ಕಾವ್ಯವಾಣಿಯಲ್ಲಿ ಚಿತ್ರಿಸಿದೆ. ಈ ಪದ್ಯ ಬರೆದು ಆಗಲೇ 24 ವರ್ಷಗಳು ಸಂದಿವೆ. ಇದು ಈವರೆಗೆ ಎಲ್ಲೂ ಪ್ರಕಟವಾಗಿಲ್ಲ. ಪ್ರಾಯಃ ತಮ್ಮ ಸಂಭಾವನಾ ಗ್ರಂಥದಲ್ಲಿ ಬೆಳಕು ಕಾಣಲೆಂದೇ ಇದು ಇಷ್ಟು ದೀರ್ಘ ಅವಧಿಯ ತಪಸ್ಸು ಮಾಡಿದೆಯೋ ಏನೋ !

ಈ ಪದ್ಯವನ್ನು ಪ್ರತಿಮಾಡಿ ಕಳಿಸುವಾಗ ಇದನ್ನು ಮತ್ತೆ ಮತ್ತೆ ಓದಿದೆ. ಒಂದಕ್ಷರವನ್ನೂ ಬದಲು ಮಾಡುವ ಅಗತ್ಯವಾಗಲಿಲ್ಲ. ಪರಿಣತಮತಿಯಾದವನು ಬರೆದಂತೆಯೇ ಇದೆ. ನನ್ನ ಮಟ್ಟಿಗೆ ಹೇಳುವುದಾದರೆ ಇದು ನಾನು ಬರೆದ ಅನೇಕ ಉತ್ತಮ ಕವಿತೆಗಳಲ್ಲಿ ಒಂದು. ತಾವು ತಮಗೆ ಸೂಕ್ತ ತೋರಿದಂತೆ ಇದನ್ನು ಸೂಕ್ತ ಸ್ಥಳದಲ್ಲಿ ಬಳಸಿಕೊಳ್ಳಿ. ಈಗ ನನ್ನ ಮನಕ್ಕೆ ನೆಮ್ಮದಿ ಮತ್ತು ತೃಪ್ತಿಯುಂಟಾಯಿತು.

ಬೆಂಗಳೂರು
೧೫-೧೧-೬೭

ಪೂಜ್ಯರೆ,

ನಾನು ಬೆಂಗಳೂರಿಗೆ ಬರಲು, ಬಂದು ಒಬ್ಬ ವ್ಯಕ್ತಿಯಾಗಲು, ಇದೇ ನಾಡಿನ ಜನ ಮನ್ನಣೆ ಪಡೆದ ಕವಿಯಾಗಲು, ಅಸಂಖ್ಯಾತ ನಾಡವರ ಮೆಚ್ಚಿಗೆ ಪಡೆದ ಪತ್ರಿಕೋದ್ಯಮಿಯಾಗಲು, ನಗರದ ಓರ್ವ ಪ್ರತಿಷ್ಠಿತ ವ್ಯಕ್ತಿ ಎನಿಸಲು ತಾವೇ ಕಾರಣರು ಎಂದು ನಾನು ವಿನಮ್ರನಾಗಿ ಹೇಳಿಕೊಳ್ಳುವುದರಲ್ಲಿ ನನಗೆ ಹೆಮ್ಮೆಯೇ ಇದೆ. ಇಂದು ನನಗೆ ಬಂದಿರುವ ಕೀರ್ತಿಗೆ ತಾವೇ ಕಾರಣರು. ಜೊತೆಗೆ ದೇವರ ಕೃಪೆ, ನನ್ನ ತಾಯಿ ತಂದೆಗಳ ಪುಣ್ಯ ಅದಕ್ಕೆ ಪುಟಗೊಟ್ಟಿದೆ. ನನ್ನ ತಾರುಣ್ಯಾವಸ್ಥೆಯಲ್ಲಿ ನೀವು ನನ್ನ ಮೇಲೆ ತೋರಿದ ಕರುಣೆ, ಅಂತಃಕರುಣೆ, ವಿಶ್ವಾಸ, ಆದರ, ಗೌರವ ಗಳನ್ನು ನಾನು ಯಾವಜ್ಜೀವವೂ ಅತ್ಯಂತ ಕೃತಜ್ಞತೆ ಯಿಂದ ಸ್ಮರಿಸಿಕೊಳ್ಳುತ್ತೇನೆ. ನಿಮಗೆ ನಿತ್ಯ ನಿತ್ಯ ಮಂಗಳವನ್ನು ಕೋರುತ್ತೇನೆ. ತಮ್ಮ ಆಶೀರ್ವಾದ, ಪ್ರೇಮಾಂತಃಕರಣಗಳು ಈ ಬಡವನಾದ ತರುಣ ಕವಿಯ ಮೇಲೆ ಸದಾ ಇರಬೇಕೆಂದು ಅನನ್ಯಭಕ್ತಿ ಯಿಂದ ಪ್ರಾರ್ಥಿಸುತ್ತೇನೆ.

ಇಂತು ತಮ್ಮ ಕರುಣೆಯ ಕಂದ
**ಅರ್ಚಿಕ ವೆಂಕಟೇಶ**

## ಕೀರ್ತನ ಕೇಸರಿ

# ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳಿಗೆ

‘ಕೀರ್ತನದ ಕೇಸರಿಯೆ,’ ಕವಿಗಳಲಿ ‘ಕವಿರತ್ನ’
ನಿನ್ನ ವಾಗ್ಝರಿ ಗಂಗೆ, ಭಾವ ಪಾವನೆ ತುಂಗೆ,
ನಿನ್ನ ಘನ ಪಾಂಡಿತ್ಯ, ಮೈವೆತ್ತ ಸಾಹಿತ್ಯ,
ನಿನ್ನ ಲೇಖನ ಶಕ್ತಿ, ಇಮ್ಮೈಯ ಬಿರುಗತ್ತಿ,
ನಿನ್ನ ಆಗಾಂಭೀರ್ಯದಲಿ ತುಂಬ ಮಾಧುರ್ಯ,
ಕೀರ್ತಿ ಕಾಲನ ಧೂಳಿಯಾದುದೇನೋ ಸತ್ಯ !
ಓ, ಶರಣಸಾಹಿತ್ಯ ಸರ್ವಭೌಮರ ಹೃದಯ
ದಂತರಂಗವನರಿತ ಪುಣ್ಯಾತ್ಮ, ನಿನ್ನ ಕೃತಿ
ಸಂತತಂ ಭವ್ಯಾನುಭೂತಿಯಲಿ ಮೀಯುತಿದೆ ;
ತೋಷತೂರ್ಯಸ್ವನದಿ ತುಂಬುತಿದೆ; ಕುಶಲಮತಿ
ಹೃದಯವನು; ಕಿವಿಗೆ ಸೊದೆ, ಬಗೆಗಮೃತವಾಗುತಿದೆ;
ಮುದವೆತ್ತಲುಂ ನಾದಮಾಧುರ್ಯ ಪರ್ಬುತಿದೆ!
ಶಿವಮೂರ್ತಿಶಾಸ್ತ್ರಿ ನಿನಗಕ್ಕೆ ಸಂಪದ ಸುಖಂ,
ಶಿವನೊಲುಮೆ, ಸೌಭಾಗ್ಯಮಾರೋಗ್ಯ ಸಂತತಂ!

ದಿ|| ೨೭-೯-೧೯೪೩ ಬೆಳಗಾಂವಿ

---

# ಬಿ. ಶಿವಮೂರ್ತಿಶಾಸ್ತ್ರಿಗಳು

ದೃಢ ಸಂಕಲ್ಪ-ಅದನ್ನು ಕಾರ್ಯರೂಪಕ್ಕೆ ತರುವ ನಿಶ್ಚಲತೆ ಎರಡೂ ಮೂಡಿದ ಪಕ್ಷದಲ್ಲಿ ವ್ಯಕ್ತಿ ಏನನ್ನು ಸಾಧಿಸಬಹುದೆನ್ನುವುದಕ್ಕೆ ಬಿ. ಶಿವಮೂರ್ತಿಶಾಸ್ತ್ರಿಗಳ ಜೀವನಕೃತಿಯೋಗ್ಯ ನಿದರ್ಶನವಾಗಿದೆ.

ಶಾಲೆ ಕಾಲೇಜುಗಳನ್ನು ಸೇರಿ ಶಾಸ್ತ್ರಿಗಳು ಪದವಿಗಳನ್ನು ದೊರಕಿಸಿಕೊಳ್ಳಲಿಲ್ಲ. ಆದರೆ ಅರಮನೆಯಿಂದ 'ಆಸ್ಥಾನ ವಿದ್ವಾನ್, ಪಂಡಿತರತ್ನಂ'ಪ್ರಶಸ್ತಿ ದೊರಕಿಸಿಕೊಂಡರು ; ಇಂಗ್ಲೀಷ್ ಭಾಷೆಯ ವಿಶೇಷ ಪರಿಚಯವಿಲ್ಲ. ಆದರೆ 'ಸ್ವತಂತ್ರ ಕರ್ಣಾಟಕ'ಎಂಬ ವಾರಪತ್ರಿಕೆಯನ್ನು ದಕ್ಷತೆಯಿಂದ ೫ ವರ್ಷ ನಡೆಸಿದರು ; ಸಂಗೀತ ಜ್ಞಾನ ಬಹಳ ಸ್ವಲ್ಪ-ಆದರೆ ಸಹಸ್ರಾರು ಜನ ಮೆಚ್ಚುವಂತೆ ಕೀರ್ತನ ಮಾಡಬಲ್ಲರು. ಕೀರ್ತನ ಕೇಸರಿ, ಕೀರ್ತನಾಚಾರ್ಯ ಅನಿಸಿಕೊಂಡರು.

ಶಾಸ್ತ್ರಿಗಳ ವ್ಯಕ್ತಿತ್ವ ಅಸಾಮಾನ್ಯವಾದುದು. ಕಲ್ಲಿನಿಂದ ನೀರು ತೆಗೆಯಬಲ್ಲರು. ಒಣಗಿದ ಕಾಷ್ಠದಲ್ಲಿ ಹೂವರಳಿಸಬಲ್ಲರು, ಕನ್ನಡನಾಡಿನಲ್ಲಿ ಅವರು ಹೋಗದ ಸ್ಥಳವಿಲ್ಲ ; ಕಾಣದ ವ್ಯಕ್ತಿಯಿಲ್ಲ.

ಶಾಸ್ತ್ರಿಗಳ 'ಶಾಲೆಯ' ಅಭ್ಯಾಸ ತುಮಕೂರಿನಲ್ಲಿ ಅಪ್ಪರ್ ಸೆಕೆಂಡರಿವರೆಗೆ ನಡೆಯಿತು. (೧೯೨೩)ಮುಂದೆ ಅವರು ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳವರ ಶಿಷ್ಯರಾದ ಮಹಾ ವಿದ್ವಾನ್, ಕರ್ನಾಟಕ ಭಾಷಾರತ್ನಂ ಪಿ. ಆರ್. ಕರಿಬಸವ ಶಾಸ್ತ್ರಿಗಳಲ್ಲಿ ಸಂಸ್ಕೃತ, ಕನ್ನಡ ಅಭ್ಯಾಸ ಮಾಡಿದರು. ಸ್ವಪ್ರಯತ್ನದಿಂದ ಹಿಂದಿ, ತೆಲಗು ಭಾಷೆಗಳನ್ನು ರೂಢಿಸಿಕೊಂಡು ಈಗ ತಮಿಳು ಅಭ್ಯಾಸ ಆರಂಭಿಸಿದ್ದಾರೆ.

ತಮ್ಮ ಜೀವಮಾನವನ್ನು ಶಾಸ್ತ್ರಿಗಳು ಉಪಾಧ್ಯಾಯರಾಗಿ ಆರಂಭಿಸಿದರು.(೧೯೨೩-೨೫)ಶಾಸ್ತ್ರಿಗಳ ಬೃಹತ್-ಚೇತನಕ್ಕೆ ಉಪಾಧ್ಯಾಯವೃತ್ತಿ ತುಂಬಾ ನೀರಸವಾಗಿ ಕಂಡು ಬಂದಿರಬೇಕು. ಉಪಾಧ್ಯಾಯ ವೃತ್ತಿಗೆ ಶರಣು ಹೊಡೆದು ಕೀರ್ತನಕಾರರಾದರು ಕೀರ್ತನಕಾರ ವೃತ್ತಿ ಶಾಸ್ತ್ರಿಗಳ ಅಭ್ಯುದಯಕ್ಕೆ ಕಾರಣವಾಯಿತು. ಬಹಳ ಜನರ ಅಭಿಮಾನ ಗೌರವವನ್ನು ಅವರಿಗೆ ದೊರಕಿಸಿ ಕೊಟ್ಟಿತು. ಕನ್ನಡ ಸಾಹಿತ್ಯ ಪರಿಷತ್ತಿನ ಸಮ್ಮೇಳನಗಳಲ್ಲಿ 'ಕರ್ನಾಟಕದ ವಿಜಯ'ದ ಮೇಲೆ ಕೀರ್ತನೆ ಮಾಡಿ ಖ್ಯಾತರಾದರು. ೧೯೩೬ ರಲ್ಲಿ ವಿಜಯನಗರ ಮಹೋತ್ಸವಕ್ಕಾಗಿ ದುಡಿದರು. ೧೯೩೭ನೆಯ ಇಸವಿಯಲ್ಲಿ ಶಾಸ್ತ್ರಿಗಳು 'ಶರಣ ಸಾಹಿತ್ಯ' ಮಾಸಪತ್ರಿಕೆಯನ್ನು ಸ್ಥಾಪಿಸಿ ಇಂದಿನವರೆಗೂ ಯಶಸ್ವಿಯಾಗಿ ನಡೆಸಿಕೊಂಡು ಬಂದಿದ್ದಾರೆ. ೧೯೩೮ ರಲ್ಲಿ ಕರ್ನಾಟಕ ಏಕೀಕರಣಕ್ಕೇ ಮೀಸಲಾದ ಸ್ವತಂತ್ರ ಕರ್ನಾಟಕ ವಾರ ಪತ್ರಿಕೆ ಆರಂಭಿಸಿದರು. ಕೆಲವು ವರ್ಷಗಳ ನಂತರ ಅದನ್ನು ಪ್ರೋತ್ಸಾಹ ದಾರಿದ್ರ್ಯದಿಂದ ನಿಲ್ಲಿಸಬೇಕಾಯಿತು. ಶರಣ ಸಾಹಿತ್ಯ ಆರಂಭಿಸಿದ ಎರಡು ವರ್ಷಗಳಲ್ಲಿ 'ಆಸ್ಥಾನ ವಿದ್ವಾನ್' ಪದವಿ ದೊರೆಯಿತು. ರಾಜಾಸ್ಥಾನಕ್ಕೆ ಪ್ರವೇಶ ದೊರೆತ ಮೇಲೆ ನಾಲ್ಕೇ ವರ್ಷಗಳಲ್ಲಿ ಶಾಸ್ತ್ರಿಗಳು 'ಪಂಡಿತ ರತ್ನಂ' ಎಂಬ ಘನವಾದ ಪ್ರಶಸ್ತಿ ದೊರಕಿಸಿಕೊಂಡರು. ಶಾಸ್ತ್ರಿಗಳು ಪಂಡಿತ ರತ್ನರಾದಾಗ ಅವರ ವಯಸ್ಸು ನಲವತ್ತಾರು. ಪ್ರಾಯಶಃ ಇಷ್ಟು ಸಣ್ಣ ವಯಸ್ಸಿನಲ್ಲಿ ಇಂಥ ಘನ ಪ್ರಶಸ್ತಿಯನ್ನು ಮೈಸೂರು ಅರಮನೆಯಿಂದ ಪಡೆದವರು ಬಿ. ಶಿವಮೂರ್ತಿಶಾಸ್ತ್ರಿಗಳೊಬ್ಬರೇ! ವೀರಶೈವ ಸಾಹಿತ್ಯ, ವೀರಶೈವ ಚರಿತ್ರೆ, ವೀರಶೈವರ ಹೆಚ್ಚುಗಾರಿಕೆಯನ್ನು ಪ್ರಸಾರ ಮಾಡುವುದೇ 'ಶರಣ ಸಾಹಿತ್ಯ'ದ ಉದ್ದೇಶವಾದರೂ ಶಾಸ್ತ್ರಿಗಳು ಇತರ ಸಾಹಿತ್ಯ, ಧರ್ಮಗಳನ್ನು ಅಲಕ್ಷ್ಯ ಮಾಡಿಲ್ಲ. ಸರ್ವಧರ್ಮ ಸಮನ್ವಯವನ್ನು ಸಾಧಿಸಲು, 'ಶರಣ ಸಾಹಿತ್ಯ' ಪ್ರಯತ್ನಿಸುತ್ತಿದ್ದರೂ ಸರ್ವಧರ್ಮಗಳ ಪರಿಚಯ ಮಾಡಿಕೊಡುವ ಕೆಲಸವನ್ನು ಈ ಪತ್ರಿಕೆ ಧಾರಾಳವಾಗಿ ಮಾಡಿದೆ ವೀರಶೈವ ಹಾಗೂ ವೀರಶೈವೇತರ ವಿದ್ವಾಂಸರು 'ಶರಣ ಸಾಹಿತ್ಯ' ಪತ್ರಿಕೆಗೆ ವಿದ್ವತ್ಪೂರ್ಣ ಲೇಖನಗಳನ್ನು ಬರೆದಿದ್ದಾರೆ. ಹಾಗೂ ಬರೆಯುತ್ತಿದ್ದಾರೆ.

ಕನ್ನಡ ಸಾಹಿತ್ಯಕ್ಕೆ ಶಾಸ್ತ್ರಿಗಳು ಮಾಡಿರುವ ಸೇವೆ ಎರಡು ಮುಖವಾಗಿದೆ; ಪ್ರಕಟನಾಕಾರ್ಯ, ಸಂಶೋಧನಾಕಾರ್ಯ. ತಾವು ಹೋದ ಹೋದಲ್ಲಿ ದೊರೆಕಿದ ಪ್ರಾಚೀನ ಕನ್ನಡ ಸಂಸ್ಕೃತ ಗ್ರಂಥಗಳನ್ನು ಶೇಖರಿಸಿ, ಶಾಸ್ತ್ರಿಗಳು ರಕ್ಷಿಸಿಕೊಂಡು ಬಂದಿದ್ದಾರೆ. ಇದರ ಫಲವಾಗಿ ರಾಘವಾಂಕನ 'ವೀರೇಶಚರಿತೆ' ಪ್ರಕಟವಾಯಿತು. 'ಕ್ಷಿತಿಯೊಳು ಶಿವಭಕ್ತರ್ಗೆ ಶಿವಂಗಾಂ ಮಾರಿದ ಮತಿಯೊಳ್ಪರೆದಜಗಿಜ ಹರಿಗಿರಿ ಸುರಪತಿ ಗಿರಪತಿ ಮೊದಲಾದುಡುಕುಳಿದೇವರ ನವನೀಶರು ಮೊದಲೆನಿಸಿದ ಭವಿಗಳನು ತುತಿಸಿದೆನಾದೊಡೆ ಸಲೆಶಿವದೂಷಕ ನಾನೆಂಬತಿ ಬಿರುದಿನ ಶಿವಕವಿ ಹಂಪೆಯ ರಾಘವ ಪಂಡಿತ ನೆನಲೀ ಮಿಾಸಲುಗವಿತೆಯು ಚಿತ್ತ್ರೈಸುದೆರಡರಿಯದ ನಿಚ್ಚಟರು 'ಎಂದು ರಾಘವಾಂಕನು ತನ್ನ ವೀರೇಶ ಚರಿತೆಯ ಬಗ್ಗೆ ಹೇಳಿಕೊಂಡಿದ್ದಾನೆ. ಹರಿಶ್ಚಂದ್ರ ಕಾವ್ಯ, ಸಿದ್ಧರಾಮ ಚರಿತ್ರೆ ಬರೆದ ಕವಿ ರಾಘವಾಂಕನ ಪರಿಚಯ ಅತ್ಯವಶ್ಯವಾಗಿ ಬೇಕಾಗಿತ್ತು. ಕಟುಧರ್ಮವನ್ನೇ ಋಜುಧರ್ಮವೆಂದು ಬಗೆದು, ಜಾತಿಮತದ ಕೋಟೆಯೊಳಗೆ ಸೆರೆಯಾಗಿರುವ ರಾಘವಾಂಕನ ಪರಿಚಯ 'ವೀರೇಶ ಚರಿತೆ' ಮಾಡಿಕೊಡುತ್ತದೆ. ವಿಶೇಷ ಪರಿಶ್ರಮದಿಂದ ಪಾಠಗಳನ್ನು ಪರಿಷ್ಕರಿಸಿ ಶಾಸ್ತ್ರಿಗಳು ವೀರೇಶ ಚರಿತೆಯನ್ನು ಪ್ರಕಟಿಸಿ ಕನ್ನಡಿಗರಿಗೆ ಉಪಕಾರ ಮಾಡಿದ್ದಾರೆ.

ನಿಜಗುಣ ಶಿವಯೋಗಿಯ 'ಪುರಾತನ ತ್ರಿವಿಧಿ' ಪಾಲ್ಕುರಿಕೆ ಸೋಮನಾಥನ 'ಬಸವೋದಾಹರಣಂ' ಘನಲಿಂಗಿ ದೇವರ 'ವಚನಗಳು, ಸಂಕ್ಷಿಪ್ತ ಶಿವಪೂಜಾವಿಧಿ, ಪಾಲ್ಕುರಿಕೆ ಸೋಮನಾಥನ 'ಗಣಸಹಸ್ರನಾಮ' ಮೊದಲಾದ ಗ್ರಂಥಗಳನ್ನು ಶಾಸ್ತ್ರಿಗಳು ಪ್ರಕಟಿಸಿದ್ದಾರೆ.

'ಸರ್ವಜ್ಞಮೂರ್ತಿ' 'ಹಿಂದೂ ಧರ್ಮ' ಎರಡು ಶಾಸ್ತ್ರಿಗಳ ಸ್ವತಂತ್ರ ಗ್ರಂಥಗಳು. ಸರ್ವಜ್ಞಮೂರ್ತಿಯ ಬಗೆಗೆ ಪ್ರಚಾರದಲ್ಲಿರುವ ಕೆಲವು ತಪ್ಪು ಅಭಿಪ್ರಾಯಗಳನ್ನು ತಿದ್ದಲು ಶಾಸ್ತ್ರಿಗಳು ಪ್ರಯತ್ನಿಸಿದ್ದಾರೆ.

ಬಿಳಗಿ, ಕೆಳದಿ, ಸ್ವಾದಿ, ಕೊಡಗು ರಾಜ ಮನೆತನಗಳ ಬಗೆಗೆ ಅನೇಕ ವಿಷಯಗಳನ್ನು ಸಂಗ್ರಹಿಸಿ ಶಾಸ್ತ್ರಿಗಳು ಪ್ರಕಟಿಸಿ ಕನ್ನಡ ನಾಡಿನ ಇತಿಹಾಸ ರಚನೆಗೆ ನೆರವಾಗಿದ್ದಾರೆ. ಪೊಟ್ಟಲಕೆರೆ, ಬಿಳಗಿ, ಶಿವಗಂಗೆ, ಸೇಲಂ, ಕೊಯಮುತ್ತೂರು ಜಿಲ್ಲೆಗಳಲ್ಲಿ ದೊರಕುವ ಕನ್ನಡ ಶಾಸನಗಳನ್ನು ಸಂಗ್ರಹಿಸಿ ಪ್ರಕಟ ಮಾಡಿದ್ದಾರೆ.

ಶಾಸ್ತ್ರಿಗಳು ತಮ್ಮ ಚಟುವಟಿಕೆಗಳ ವ್ಯಾಪ್ತಿಗಳನ್ನು ಬಹುವಾಗಿ ಬೆಳಸಿಕೊಂಡಿದ್ದಾರೆ. ಅನೇಕ ಸಾರ್ವಜನಿಕ ಸಂಸ್ಥೆಗಳಲ್ಲಿ, ಸರಕಾರದ ಸಮಿತಿಗಳಲ್ಲಿ ಸದಸ್ಯರಾಗಿದ್ದುಕೊಂಡು ಸೇವೆಸಲ್ಲಿಸುತ್ತಿದ್ದಾರೆ. ಸರ್ಕಾರದ ಪಠ್ಯಪುಸ್ತಕ ಸಮಿತಿ, ದಿ ರೀಜನಲ್ ಹಿಸ್ಟಾರಿಕಲ್ ಕಮಿಟಿ, ಚಾಮರಾಜೇಂದ್ರ ಸಂಸ್ಕೃತ ಕಾಲೇಜ್ ಕಮಿಟಿ, ಗ್ರಾಮಾಭಿವೃದ್ಧಿ 'ಪತ್ರಿಕಾ ಸಂಪಾದಕ ಮಂಡಲಿ, ಪೇಪರ್ ಅಡ್ವೈಸರಿ ಕಮಿಟಿಗಳಲ್ಲಿದ್ದಾರೆ. ಅನಾಥಶಿಶು ಸಂರಕ್ಷಣಾಲಯಕ್ಕೆ ಆರು ವರ್ಷಕಾಲ ಅಧ್ಯಕ್ಷರಾಗಿದ್ದರು. ಕೆಲವು ಕಾಲ ಪರಿಷತ್ತಿನ 'ಕನ್ನಡ ನುಡಿ' ಪತ್ರಿಕೆಯ ಸಂಪಾದಕರಾಗಿದ್ದರು. ಕಾರ್ಯ ಸಮಿತಿ ಸದಸ್ಯರಾಗಿದ್ದರು.

ಈಗ ಪರಿಷ್ಪತ್ರಿಕೆಯ ಸಂಪಾದಕ ಮಂಡಳಿ ಮತ್ತು ಕನ್ನಡಕೋಶ ಸಂಪಾದಕ ಮಂಡಲಿಯಲ್ಲಿ ಸದಸ್ಯರಾಗಿದ್ದಾರೆ. ಶಾಸ್ತ್ರಿಗಳ ಚೈತನ್ಯ ಸಾಹಿತ್ಯಕ್ಕೇ ಮಿಾಸಲಾಗಿದ್ದರೆ .ಅವರಿಂದ ನಾಡಿಗೆ ಬಹಳ ಸೇವೆಯಾಗುತ್ತಿತ್ತು. ಕನ್ನಡ ನಾಡಿನ ಸಂಘಟನೆಯ ಹಾಗೂ ಏಕೀಕರಣದ ಪ್ರಚಾರಕ್ಕೆ ಶಾಸ್ತ್ರಿಗಳು ವಿಶೇಷ ಶ್ರದ್ಧೆಯಿಂದ ದುಡಿದಿದ್ದಾರೆ. ಕನ್ನಡ ನಾಡಿನ ಹಳ್ಳಿಗಳಲ್ಲಿ ಮೂಲೆಮೂಲೆಗಳಲ್ಲಿ ಅಖಂಡ ಕರ್ನಾಟಕದ ದುಂದುಭಿನಾದ ಮೊಳಗಿಸಿ ಬಂದಿದ್ದಾರೆ ತಮ್ಮ ಕೀರ್ತನ ಭಾಷಣಗಳಿಂದ.

ವೀರಶೈವ ಹಾಗೂ ವೀರಶೈವೇತರ ಗುರುಪೀಠಗಳು ಶಾಸ್ತ್ರಿಗಳನ್ನು ಬಹಳವಾಗಿ ಪುರಸ್ಕರಿಸಿವೆ. ವೀರಶೈವ ಸಿದ್ಧಾಂತ, ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷ ಸ್ಥಾನವೂ ಶಾಸ್ತ್ರಿಗಳಿಗೆ ದೊರೆತಿದೆ. ಅ.ಭಾ. ವೀರಶೈವ ಮಹಾಸಭಾ ಕಾರ್ಯ ಸಮಿತಿ ಸದಸ್ಯರಾಗಿ ಹಲವು ವರ್ಷಗಳಿಂದ ಇದ್ದಾರೆ.

ಶಾಸ್ತ್ರಿಗಳ ವ್ಯಕ್ತಿತ್ವದಲ್ಲಿ ಒಂದೆರಡು ಸ್ವಾರಸ್ಯವಾದ ಗುಣಗಳು ಕಂಡು ಬರುತ್ತವೆ. ಆಗಾಗ್ಗೆ ದೊಡ್ಡ ದೊಡ್ಡ ಸಭೆಗಳನ್ನು ಕೂಡಿಸಿ ಹತ್ತು ಜನರನ್ನು ಬಾಯಿ ತುಂಬ ಹೊಗಳಿ ಅವರಿಂದ ತಾವೂ ಬಾಯಿತುಂಬ ಹೊಗಳಿಸಿಕೊಳ್ಳಬೇಕು ಎಂಬ ಹಂಬಲ ಇವರಿಗೆ. ಶಾಸ್ತ್ರಿಗಳು ಉತ್ಸವ ಪ್ರಿಯರು, ಸ್ನೇಹಪ್ರಿಯರು, ಬೆಂಗಳೂರಿಗೆ ಬರುವ ಹಿರಿಯ ಕನ್ನಡಿಗರನ್ನು ತಮ್ಮ ಕಾರ್ಯಾಲಯಕ್ಕೆ ಬರಮಾಡಿಕೊಂಡು ಆತಿಥ್ಯ ಮಾಡಿದ ಹೊರತು ಶಾಸ್ತ್ರಿಗಳ ಮನಸ್ಸಿಗೆ ನೆಮ್ಮದಿಯಿಲ್ಲ. ಭಿನ್ನಾಭಿಪ್ರಾಯಗಳನ್ನು ಬೆಳೆಯಗೊಡದೆ, ಅವು ವೈಯ್ಯಕ್ತಿಕ ಅವಿಶ್ವಾಸಕ್ಕೆ ಎಡೆ ಮಾಡದಂತೆ ಎಚ್ಚರವಾಗಿರುವುದು ಶಾಸ್ತ್ರಿಗಳ ಹೆಚ್ಚಿನ ಗುಣ. ಅವರ ಜನಪ್ರಿಯತೆಯ ರಹಸ್ಯವೇ ಇದು.

ಸಹಾಯ ಕೋರಿದವರಿಗೆ ಇಲ್ಲವೆನ್ನುವುದು ಶಾಸ್ತ್ರಿಗಳ ಜಾಯಮಾನಕ್ಕೆ ಬಂದಿಲ್ಲ. ಅನೇಕ ಸಲ ತಮ್ಮ ಮಹತ್ವದ ಕೆಲಸಗಳನ್ನೂ ಬದಿಗೊತ್ತಿ ಕಂಡವರ ಕೆಲಸಕ್ಕೆ ತೊಡಗುತ್ತಾರೆ. ಪರರ ಸೇವೆಗೆ ತೊಡಗಿದಾಗ ತಮಗಾಗುವ ಕಷ್ಟ ನಷ್ಟಗಳನ್ನು ಅವರು ಸಹಿಸುವರು.

ಶಾಸ್ತ್ರಿಗಳ ಬರೆವಣಿಗೆಯಲ್ಲಿ ಮೊನಚಿದೆ, ಕಾವಿದೆ, ವಿಚಾರ ವೀಕ್ಷಣೆಯೂ ಇದೆ. ಆಗಾಗ್ಗೆ ಅದು ಪುರಾಣದ ಜಾಡು ಹಿಡಿಯುವುದೂ ಉಂಟು. ಪುನರಾವರ್ತನೆಗಳೂ, ಉತ್ಪ್ರೇಕ್ಷೆಗಳೂ ತಲೆ ಹಾಕುವುದೂ ಉಂಟು. ಆದರೆ ಶೈಲಿಯಲ್ಲಿ ಜೀವವಿದೆ, ಲಾಲಿತ್ಯವಿದೆ, ರಸವಿದೆ.

ಶಾಸ್ತ್ರಿಗಳು ಉತ್ತಮ ಮಾತುಗಾರರೆನ್ನುವುದನ್ನು ಕನ್ನಡ ನಾಡೇ ಬಲ್ಲುದು. ಸಂದರ್ಭೋಚಿತವಾಗಿ ಹಾಸ್ಯ ಬಳಸಿಕೊಂಡು, ಕ್ಲಿಷ್ಟ ವಿಷಯವನ್ನು ಲಲಿತವಾಗಿ ನಿರೂಪಿಸಿ ಶ್ರಾವಕರ ಚಿತ್ತವನ್ನು ಅಪಹರಿಸುತ್ತಾರೆ. ಇವರು ನಾಡಿನ ಹಿರಿಯ ವಾಗ್ಮಿಗಳು.

ಶ್ರೀ ಸಿ. ಕೆ. ವೆಂಕಟರಾಮಯ್ಯನವರು ಶರಣ ಸಾಹಿತ್ಯದ ಹದಿಮೂರನೆಯ ವಾರ್ಷಿಕೋತ್ಸವ ಸಮಯದಲ್ಲಿ ಹೇಳಿರುವಂತೆ 'ಅವರ ಕೀರ್ತನ ಭಾಷಣಗಳು ವಿದ್ವತ್ಪೂರ್ಣವಾಗಿಯೂ ಬೋಧಪ್ರದವಾದ ಉದಾತ್ತ ಭಾವನೆಗಳಿಂದ ತುಂಬಿಯೂ ಇರುತ್ತವೆ. ಜೊತೆಗೆ ವಿಶೇಷ ಜನ ರಂಜಕವಾಗಿಯೂ ಇರುತ್ತವೆ. ಧಾರ್ಮಿಕವಾದ ಅಥವಾ ಸಾಮಾಜಿಕವಾದ ಸಂಕುಚಿತ ಭಾವನೆಗಳೇ ಇಲ್ಲದಿರುವುದು ಶ್ರೀಮಾನ್ ಶಿವಮೂರ್ತಿಶಾಸ್ತ್ರಿಗಳ ಮತ್ತೊಂದು ದೊಡ್ಡ ಗುಣ. ಶರಣ ಸಾಹಿತ್ಯ ಪತ್ರಿಕೆಯಲ್ಲಿ ಪ್ರಕಟವಾಗುತ್ತಿರುವ ಲೇಖನಗಳನ್ನು ನೋಡಿದರೆ ಅವರ ಮನಸ್ಸೆಷ್ಟು ಉದಾರವೆಂಬುದು ಸುಸ್ಪಷ್ಟವಾಗಿ ಗೊತ್ತಾಗುತ್ತದೆ.'

ಅ. ನ. ಕೃಷ್ಣರಾವ್
(ಕನ್ನಡ ಕುಲ ರಸಿಕರು ಎಂಬ ಗ್ರಂಥದಿಂದ)

---

### ಆಸ್ಥಾನ ವಿದ್ವಾನ್, ಪಂಡಿತ ರತ್ನಂ

# ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರೀ

## ಅವರಿಂದ ರಚಿತವಾಗಿರುವ ಗ್ರಂಥಗಳು

1) ವೀರಶೈವ ಸಾಹಿತ್ಯ ಮತ್ತು ಇತಿಹಾಸ. (ಭಾಗ 1,2,3,4)
2) ಕರ್ಣಾಟಕ ಸಂದರ್ಶನ. (ಭಾಗ 1, 2)
3) ದುಂಬಿ ಮತ್ತು ನಾದ (ಕವನ ಸಂಗ್ರಹ)
4) ವೀರಶೈವ ಮಹಾಪುರುಷರು (ಅರುವತ್ತು ಜೀವನ ಚರಿತ್ರೆಗಳು)
5) ಶ್ರೀ ಮಾದೇಶ್ವರ ಚರಿತೆ. (ಸಂತರ ಜೀವನ ಚರಿತೆ)
6) ಮಹಾಕವಿ ಷಡಕ್ಷರದೇವ (ಕವಿ, ಕಾವ್ಯ ವಿಮರ್ಶೆ)
7) ಬಿದನೂರ ಪ್ರಭು ಶಿವಪ್ಪನಾಯಕ. (ಮಲೆನಾಡಿನ ರಾಜ್ಯಗಳ ಇತಿಹಾಸ)
8) ಸರ್ವಜ್ಞ ಮೂರ್ತಿ (ಕವಿ ಕಾವ್ಯ ವಿಮರ್ಶೆ)
9) ಮಹಾತ್ಮ ಕನಕದಾಸ (ಕವಿ, ಕಾವ್ಯ ವಿಮರ್ಶೆ)
10) ಮಹಾಕವಿ ಲಕ್ಷ್ಮೀಶ (ಕವಿ, ಕಾವ್ಯ ವಿಮರ್ಶೆ)
11) ಕರ್ಣಾಟಕ ವಿಜಯ (ನಾಟಕ)
12) ಕೆಳದಿ ರಾಣಿ ಚೆನ್ನಮ್ಮಾಜಿ (ನಾಟಕ)
13) ಆಕಾಶವಾಣಿಯ ಶಬ್ದ ಚಿತ್ರಗಳು.
14) ಶರಣ ಚರಿತ ಮಾನಸ (೧೫೫ ಕಂದ ಪದ್ಯಗಳು)
15) ಹರಿಹರ ಮತ್ತು ರಾಘವಾಂಕ (ಕವಿ, ಕಾವ್ಯ ವಿಮರ್ಶೆ)

## ಶ್ರೀ ಬಿ. ಶಿವಮೂರ್ತಿಶಾಸ್ತ್ರಿರವರಿಂದ ಸಂಪಾದಿಸಿ ಪ್ರಕಟವಾಗಿರುವ ಗ್ರಂಥಗಳು

1) ಪುರಾತನರ ತ್ರಿವಿಧಿ—ನಿಜಗುಣ ಶಿವಯೋಗಿ.
2) ವೀರೇಶ ಚರಿತೆ—ಮಹಾಕವಿ ರಾಘವಾಂಕ.
3) ಬಸವೋದಾಹರಣಂ (ತಂಸ್ಕೃತ)— ಪಾಲ್ಕುರಿಕೆ ಸೋಮನಾಥ.
4) ಘನಲಿಂಗಿ ದೇವರ ವಚನಗಳು— ಘನಲಿಂಗಿದೇವ.
5) ತುರುಗಾಯಿ ರಾಮಣ್ಣನ ವಚನಗಳು— ತುರುಗಾಯಿ ರಾಮಣ್ಣ.
6) ನ್ಯಾಯ ಶತಕಸಂಸ್ಕೃತ—ರಾಮೇಶ್ವರಮುಖಿ
7) ಕನ್ನಡ ಕಲಿ ಸಿರುವನ ಚರಿತೆ— (ದಿ|| ಹು. ಶ್ರೀ. ಜೋಯಿಸರು)
8) ಕನ್ನಡ ಆದಿತ್ಯ ಪುರಾಣ. (ಭಾಗ ೧)
9) ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ— ರತ್ನಾಕರ. (ಭಾಗ ೧) ಶಾಂತ ಲಿಂಗದೇಕ
10) ಗಣ ಸಹಸ್ರ ನಾಮಾವಳಿ— ಪಾಲ್ಕುರಿಕೆ ಸೋಮನಾಥ.
11) ಷಡಕ್ಷರ ಮಂತ್ರ ಮಹಿಮೆ— ಕೊಂಡಕುಳಿ ಕೇಶಿರಾಜ.
12) ಮಾದೇಶ್ವರ ಸಾಂಗತ್ಯ—ಗುರುಸಿದ್ಧ ಕವಿ.
13) ಪಂಪಾಸ್ಥಾನ ವರ್ಣನೆ- (ಚಂಪು) ಅಷ್ಟಭಾಷಾ ಕವಿ ಚಂದ್ರಶೇಖರ.
14) ಕನ್ನಡ ಶತಕ ಸಾಹಿತ್ಯ. (ಐವರು ಪ್ರಾಚೀನ ಕವಿಗಳು)
15) ಬಸವಲಿಂಗ ನಾಮಾವಳಿ—
16) ಶರಣ ಬಸವ ರಗಳೆ ಪಾಲ್ಕುರಿಕೆ ಸೋಮನಾಥ.
17) ಸಂಕ್ಷಿಪ್ತ ಶಿವಪೂಜಾವಿಧಿ. (ಚೌಡದಾನ ಪುರದ ವಿರೂಪಾಕ್ಷ ಒಡೆಯರು)

## ಪ್ರಕಟಣೆಗೆ ಸಿದ್ಧವಾಗಿರುವ ಗ್ರಂಥಗಳು

1) ದೀಕ್ಷಾಬೋಧೆ—ಕೆರೆಯ ಪದ್ಮರಸ.
2) ಸಾನಂದ ಚರಿತೆ—ಕುಮಾರ ಪದ್ಮರಸ.

3) ಅರುವತ್ತುಮೂವರ ಪುರಾಣ (ಷಟ್ಪದಿ)
ವೀರಭದ್ರಕವಿ.
4) ಬಸವರಾಜೀಯ—ಪಾಲ್ಕುರಿಕೆ ಸೋಮನಾಥ.
5) ಪಂಚಶಕ ನೀತಿಗಳು—ಸ್ವಾದಿ ಸದಾಶಿವರಾಜ.
6) ತೋಂಟದ ರಾಯನ ಸಾಂಗತ್ಯ—
7) ಆರಾಧ್ಯ ಚರಿತ್ರೆ—ನೀಲಕಂಠಾಚಾರ್ಯ.
8) ಚತುರಾಚಾರ್ಯ ಪುರಾಣ—
ಸಂಪಾದನೆ ಪರ್ವತೇಶ್ವರ.
9) ವೀರಶೈವ ಚರಿತ್ರೆ—(ಕನ್ನಡ, ತೆಲುಗು, ತಮಿಳು,
ಸಂಸ್ಕೃತ, ಮರಾಠಿ.)
10) ಶರಭ ಚರಿತೆ ಕವಿ ನಿಶ್ಚಿತಾತ್ಮ.
11) ಕಾಕತೀಯ ಚರಿತ್ರೆ—
12) ಕೈವಲ್ಯ ಪದ್ಧತಿ—ನಿಜಗುಣ ಶಿವಯೋಗಿ.

## ಶ್ರೀ ಬಿ. ಶಿವಮೂರ್ತಿಶಾಸ್ತ್ರಿ ಅವರಿಂದ
### ಬರೆಯಲ್ಪಟ್ಟ ಲೇಖನಗಳು
### (ಗ್ರಂಥಸ್ಥವಲ್ಲದ)

1) ಜೈನಧರ್ಮ ಮತ್ತು ಮಹಾವೀರಸ್ವಾಮಿ. (ಶ.ಸಾ. ೨೮-೧)
2) ಕನ್ನಡದ ಉದ್ಧಾರಕರು ( „ ೨೮-೧೬)
3) ಹರಿಭಕ್ತಿಸಾರ ಕುರಿತ ( „ „ )
4) ವಚನ ವಾಙ್ಮಯದಲ್ಲಿ
ಕಾವ್ಯಗುಣ ( „ ೨೮-೪)
5) ಶಿವಯೋಗಿ ಸರ್ಪಭೂಷಣರು ( „ „ )
6) ಸರ್ವಜ್ಞ ವಚನಗಳು ( „ ೨೮-೫)
7) ಹರಿಹರ-ರಾಘವಾಂಕರು
ಸ್ಮರಿಸಿರುವ ಪೂರ್ವ ಕವಿಗಳು
(ಸಾ. ಪ. ೧೯೬೪) ಮತ್ತು (ಶರಸಾ. ೨೧-೧)
8) ಮೃತ್ಯುಂಜಯ
ಶಿವಯೋಗಿಗಳು ( „ ೨೮-೭)
9) ಕನ್ನಡ ಜಾಣ್ಣುಡಿಗಳು ( „ ೨೮-೮)
10) ಪಿ. ಆರ್. ಕರಿಬಸವಶಾಸ್ತ್ರಿಗಳು
ಮತ್ತು
ಗಂಗಾಧರ ಮಡಿವಾಳೇಶ್ವರ ( „ ೨೮-೮)
11) ಕನ್ನಡ ಶಬ್ದ ವಿಜ್ಞಾನ ( „ ೩೦-೬)
( „ ೨೭-೯)
(ಶ.ಸಾ ೨೯-೪೦೯-೬)
12) ದೇಶಭಕ್ತ ಮಂಜಪ್ಪ
ಹರ್ಡೇಕರ್ ( „ ೨೮-೧೧,೧೨)
13) ಜಗನ್ಮಾಯಿಕಂ ವಾ
ಪ್ರಾಸಾದಿಕಂ,
(ಸಂಸ್ಕೃತ) ( „ „ )
14) ಹಿಂದೂ ಸಂಘಟನೆಗೆ ಬಸವಣ್ಣನವರು
ತೋರಿದ ದಾರಿ. ('ವಿಕ್ರಮ' ವಿಜಯ ದಶಮಿ)

1967

15) ವೇದಾಂತ ಮತ್ತು ವಿಜ್ಞಾನ. (ಶ.ಸಾ ೨೭-೧)
16) ವೀರಶೈವ ಧರ್ಮ ಮತ್ತು
ಶ್ರೀ ಶೈಲಕ್ಷೇತ್ರ (ಶ್ರೀ ಶೈಲಸಂಚಿಕೆ ೧೯೯೪)
17) ಡಾ|| ಫ. ಗು. ಹಳಕಟ್ಟಿ (ಶ.ಸಾ. ೨೭-೨,೩)
18) ಕನಕದಾಸರ ಜಾಣ್ಣುಡಿಗಳು ( „ ೨೭-೧೦)
19) ಗೋವೆಯಲ್ಲಿ ನನ್ನ ಅನುಭವಗಳು( „ )
20) ಕೊಂಕಣಿ ಶಬ್ದ ಸಂಪತ್ತು ( „ )
21) ಹಿಂದೀ ವಿರೋಧ ಸಲ್ಲದು (ಶ.ಸಾ ೨೭-೧೧)
22) ಮಹಾತ್ಮ ಕನಕದಾಸರು ( „ ೨೭-೧೨)
23) ವೀರಶೈವ ಧರ್ಮ ( „ ೨೯-೨,೩)
24) ಕೈ|| ಪಿ. ಮಹಾದೇವಯ್ಯನವರು( „ „ )
25) ಕೈ|| ಡಿ. ಎಸ್. ಮಲ್ಲಪ್ಪನವರು ( „ ೨೯-೪)
26) ಕೆಲವು ಐತಿಹಾಸಿಕ ಸ್ಥಳಗಳು ( „ „ )
27) ಹರಿಭಕ್ತಿಸಾರದ ಕಥೆಗಳು ( „ ೨೯-೫)
28) ಮುಪ್ಪಿನ ಷಡಕ್ಷರ ಸ್ವಾಮಿಗಳು( „ ೨೯-೭)
29) ಕನ್ನಡಿಗರ ಇಂದಿನ ಅಗತ್ಯಗಳು( „ ೨೯-೮)
30) ಕೊಡಗರ ಇಂದಿನ ನಡೆನುಡಿಗಳು( „ )
31) ಹರಿಹರನ ರಗಳೆಗಳು ( „ )
32) ಕರ್ನಾಟಕಕ್ಕಾಗಿ ದುಡಿದ (ಪ್ರಜಾವಾ ೧೯೬೬)
ಸುಪ್ರತಿಷ್ಠರು. (ಶ.ಸಾ. ೨೯-೬)
33) ಶಿವಶರಣರ ಚರಿತ್ರೆಗಳು
ಮತ್ತು
ಭಾರತದಲ್ಲಿ ವೀರಶೈವರ ಕುರುಹುಗಳು
(ಶ.ಸಾ. ೨೯-೧೦)

34) ಶಿವಶರಣರ ತತ್ವಗಳೂ
ಭಾರತದ ರಾಜ್ಯಾಂಗವೂ ( „ ೨೯-೧೧)
(ಗೋವೆಯ ಕನ್ನಡ ಸಂಘದ ಪ್ರಕಟಣೆ 1967)
(ಶ.ಸಾ. ೨೯-೧೧,೧೨)
35) ಕನ್ನಡ ನಾಡು ಶರಣರ ಬೀಡು. 'ತರಳಬಾಳು ಜಗದ್ಗುರು ವಿಶೇಷ ಸಂಚಿಕೆ' ೧೯೬೬,
36) ಕೊಂಡುಗುಳಿ ಕೇಶಿರಾಜನ ಕಾಲವಿಚಾರ.
37) ಅಮರಗೊಂಡದ ಮಲ್ಲಿಕಾರ್ಜುನ.
(ಶರಸಾ. ೩೦-೧)
38) ಬಿಜ್ಜ ಮಹಾದೇವಿ
39) ಆಚಾರ್ಯ ರೇವಣ್ಣ ಸಿದ್ಧ
ಮತ್ತು
ರುದ್ರಮುನಿಗಳು (ಶರಸಾ. ೩೯-೧೧,೧೨)
40) ವಚನ ಶಾಸ್ತ್ರದ ಉದ್ಧಾರಕರು
1) ಆಚಾರ್ಯ ಮರುಳಸಿದ್ಧ
2) ಪಂಡಿತಾಚಾರ್ಯ (ಶರಸಾ ೩೦-೩)
41) ಆಚಾರ್ಯ ಏಕೋರಾಮ (—ಏಕಾಂತರಾಮ)
42) ಕೈ|| ಬಸವನಾಳರು. ಸ್ಮಾರಕ ಸಂಚಿಕೆ
43) ಭಾರತೀಯ ಸಂಸ್ಕೃತಿ
ಸರಕಾರದ ಪ್ರಕಟಣೆ.
44) ಕವಿ ಪುಲಿಗೆರೆಯ ಸೋಮ (ಶರಸಾ.)
45) ಸಪ್ತ ಕಾವ್ಯದ ಗುರುಬಸವ (ಶರಸಾ.೩೦-೬,೭)
46) ಶ್ರೀ ನಿಜಗುಣ ಶಿವಯೋಗಿ
('ಸ್ವರೂಪ ದರ್ಶನದಲ್ಲಿ'. ೧೯೫೪.)
47) ಬಿಳಗಿ ರಾಜರ ಚರಿತ್ರೆ ಶಿವಾನುಭವ.
48) ಕೆಳದಿ ರಾಜರ ಚರಿತ್ರೆ ಶಿವಾನುಭವ.
49) ವೀರಶೈವ ಮಠಗಳು (ಜಯಕ)
50) "ರಾಮಾಯಣದ ವಾನರರು ಕಪಿಗಳಲ್ಲ ಕನ್ನಡಿಗರು."(ಕರ್ಮವೀ.)ಸಂಯುಕ್ತಕ ವಿಶೇಷ ಸಂಚಿಕೆ. 'ಭರತ ಭಕ್ತಿಕಾವ್ಯ' ಪೀಠಿಕೆ.
51) ಬಿಳಗಿಯ ಶಾಸನಗಳು.
(ಶರಸಾ ?)
52) ಕೈ||ಸರ್. ಸಿದ್ದಪ್ಪ ಕಂಬಳಿ,
ಕೈ|| ಎಚ್. ಸಿದ್ದಯ್ಯನವರು.
53) ವಿಜಯನಗರ ಸಾಮ್ರಾಜ್ಯದಿಂದ ವೀರಶೈವರಿಗೆ ಆದ ಸಹಾಯ
54) ಕನ್ನಡ ಸಾಹಿತ್ಯದ ಸಿಂಹಾವಲೋಕನ
55) ವೀರಶೈವರ ಸಮನ್ವಯ ದೃಷ್ಟಿ
56) ದಯಾ-ಧರ್ಮ ಪ್ರಧಾನ ಮತ
57) ವೀರಶೈವ ಮತ್ತು ಸನಾತನ ಧರ್ಮ.
58) ಧರ್ಮಸ್ಥಳದಲ್ಲಿ ಭಾಷಣಗಳು ಮತ್ತು ವಿಶೇಷ ಸಂಚಿಕೆ ಲೇಖನಗಳು.
59) ಬೊಂಬಾಯಿ, ಮದರಾಸು, ಹೊಸದೆಹಲಿ, ಬೆನಾರಸ್ ಮತ್ತು ಹೈದರಾಬಾದು ಕರ್ಣಾಟಕ ಸಂಘಗಳಲ್ಲಿ ಭಾಷಣಗಳು.
60) ಅನುಭವ ಮಂಟಪ, (ಶರಸಾ ?)
61) ಪೊಟ್ಟಲಗೆರೆ ಶಾಸನ, ಶರಸಾ. ?
62) ನಿಜಗುಣ ಶಿವಯೋಗಿ ಶಬ್ದ ಚಿತ್ರ. „
63) ಹರಿಶ್ಚಂದ್ರ ಕಾವ್ಯ ಸಂಗ್ರಹ „
64) ಬಸವೇಶ್ವರ ಶಬ್ದ ಚಿತ್ರ. „
65) ಶಿವಶರಣೆಯರು ಶಬ್ದ ಚಿತ್ರ „
66) ಸರ್ಪಭೂಷಣ ಶಿವಯೋಗಿ „
67) ಅಮರಗೊಂಡ-ಗುಬ್ಬಿ. „

### ಸರ್ಕಾರದ ಪರವಾಗಿ ಸಂಪಾದಿಸಿದ ಗ್ರಂಥಗಳು

1) ಕನ್ನಡ ಜೈಮಿನಿ ಭಾರತ.
(ದಿವಂಗತ ದೇವಡು ಅವರೊಡನೆ)
2) ಕನಕದಾಸರ ಕೀರ್ತನೆಗಳು
ಡಾ|| ಕೆ. ಎಂ. ಕೃಷ್ಣರಾವ್ ಅವರೊಡನೆ
3) ಹರಿಭಕ್ತಿಸಾರ
ಡಾ|| ಕೆ. ಎಂ. ಕೃಷ್ಣರಾವ್ ಅವರೊಡನೆ

### ಸಾಹಿತ್ಯ ಪರಿಷತ್ತಿನಲ್ಲಿ ಸಂಪಾದಿಸಿ ಪ್ರಕಟಿಸಿದ ಗ್ರಂಥಗಳು

1) ಕರ್ಣಾಟಕ ಕವಿ ಚರಿತ್ರೆ (ಭಾಗ I.)
ಪ್ರೊ|| ಡಿ. ಎಲ್. ನರಸಿಂಹಾಚಾರ್,
ಶ್ರೀ ಕಾ. ಸ. ಧರಣೇಂದ್ರಯ್ಯ,
ಶ್ರೀ ಜಿ. ವೆಂಕಟ ಸುಬ್ಬಯ್ಯ ಅವರೊಂದಿಗೆ.
2) ಗಮಕ ಕಾವ್ಯ ಮಂಜರಿ.
3) ಸೋಮೇಶ್ವರ ಶತಕ—ಪ್ರಸ್ತಾವನೆ.

## ಶ್ರೀ ಬಿ. ಶಿವಮೂರ್ತಿಶಾಸ್ತ್ರೀ ಅವರಿಂದ ರಚಿತವಾದ ಕವನಗಳು

ನೀಲಗಿರಿ ಶಿಖರದಲಿ (ಗಮಕ ಕಾವ್ಯಮಂಜರಿ: ಪರಿಷತ್ತಿನ ಪ್ರಕಟನೆ)
1) ಕರುಣೆಯನಿಧಿ (ಶರಸಾ. ೨೮-೭)
2) ಜಯವಿಭವ ಜಗದ್ಗುರು ( „ ೨೭-೧)
3) ಇನ್ನಿಲ್ಲ ಜವಹರನು ( „ ೨೭-೪)
4) ಮಂಗಳ ಗೀತೆಗಳು ( „ ೨೭-೭)
5) ಹಿಮಗಿರಿಯ ಶಿಖರದಲಿ (ವೀರ ಗೀತೆಗಳು)
6) ಓ ಅಜಂತದ ಗವಿಯೆ (ಸರ್ಕಾರಿ ಪಠ್ಯ ಪುಸ್ತಕ)
7) ಇಮ್ಮಡಿ ಪುಲಿಕೇಶಿ(ಹೈಸ್ಕೂಲ್ IIನೇ ತರಗತಿ ಪಠ್ಯಪುಸ್ತಕ)

# ವಿದ್ವತ್ ಸನ್ಮಾನಂ

ಕರ್ಣಾಟದೇಶೇ ನಿತರಾಂ ವಿಲೀನಾ
ಕಲ್ಯಾಣಪುರ್ಯಾಂ ಕೃತಕಾರ್ಯರಂಗಾ ।
ಕರ್ಣಾಟವಾಣೀಪರಿರಂಜನಾಯ
ವಿನಿರ್ಮಿತಾಽಽಸ್ತೇ ಪರಿಷತ್ಸುಧೀಭಿಃ ॥೧॥

ತಸ್ಯಾಸ್ಸದಸ್ಯೈಃ ಸುವಿಚಾರದಕ್ಷೈಃ
ಅಧ್ಯಕ್ಷತಾಯಾಂ ಸುನಿಯೋಜಿತಸ್ಸನ್ ।
ಸದೈವ ಸಂಶೋಧನದತ್ತದೃಷ್ಟಿಃ
ವಿರಾಜತೇಽಯಂ ಶಿವಮೂರ್ತಿಶಾಸ್ತ್ರೀ ॥೨॥

ಪದ್ಮಶ್ರೀಯಾ ಶೋಭತ ಏಷ ಧೀಮಾನ್
ಸತಾಂ ಹಿತಾಯಾಖಿಲಭಾರತೇಽಸ್ಮಿನ್ ।
ಪಾಂಡಿತ್ಯಪೂರ್ಣಃ ಖಲು ಯೋಗನಿಷ್ಠಃ
ಸುನಿರ್ಮಲಾಂತಃಕರಣಃ ಪ್ರಶಾಂತಃ ॥೩॥

ಕರ್ಣಾಟವಾಣೀಪರಿಶೋಧನೇನ
ಸಂಲಬ್ಧಕಲ್ಯಾಣಮತಿಃ ಸುನೀತಿಃ ।
ಕರ್ಣಾಟವಾಗ್ವೈಭವಶೋಭನೇನ
ವಿಖ್ಯಾತನಾಮಾ ಸುಕವೀಂದ್ರಸಿಂಹಃ ॥೪॥

ಸಮಗ್ರದೇಶೇ ಶರಣಾರ್ಯತತ್ತ್ವಂ
ಪ್ರಚಾರಯನ್ವರ್ತತ ಏಷ ವಿದ್ವಾನ್ ।
ಸದ್ಭಕ್ತಹೃತ್ಪದ್ಮವಿರಾಜಮಾನಾ
ತದೀಯವಾಣೀ ವಿತತಾ ಜಗತ್ಯಾಂ ॥೫॥

ನ ಕೇವಲಂ ಕನ್ನಡ ವಾಙ್ಮಯೇಽಥ
ಹ್ಯನ್ಯಾಸು ಭಾಷಾಸ್ವಪಿ ಲಬ್ಧಕೀರ್ತಿಃ ।
ಸುಸಂಸ್ಕೃತಾ ಯಸ್ಯ ವಿವೇಚನೈವ
ಸಮಗ್ರವಿದ್ವದ್ಭಿರುಪಾಸ್ಯತೇಽದ್ಯ ॥೬॥

ಸತ್ಯಾ ವಿಶುದ್ಧಾ ಪರಿಪೂರ್ಣಭಾವಾ
ವಿವೇಕಪೂರ್ಣಾ ಸರಸಾ ಸಮಗ್ರಾ ।
ಆದರ್ಶಭೂತಾ ಹಿ ತದೀಯವಾಣೀ
ಸಮಾದೃತಾಽಽಸ್ತೇ ಧರಣೀತಲೇಽಸ್ಮಿನ್ ॥೭॥

ಅತಸ್ತದೀಯಂ ಪರಿಶುದ್ಧಜನ್ಮ
ಸಾರಸ್ವತಂ ಶಾಶ್ವತಕೀರ್ತಿಪುಷ್ಟಮ್ ।
ಲೋಕಸ್ಯ ತಾವತ್ಖಲು ಮಾರ್ಗದರ್ಶಿ
ಭೂಯಾದಿತಿ ಪ್ರಾರ್ಥಯತೇ ಸ ಲೋಕಃ ॥೮॥

ಸಂವರ್ಧತಾಂ ಶ್ರೀಶಿವಮೂರ್ತಿಶಾಸ್ತ್ರೀ
ಸುತೀಕ್ಷ್ಣಬುದ್ಧಿರ್ವಿದುಷಾಂ ವರೇಣ್ಯಃ ।
ಸದೋಪಕಾರಾಯ ನೃಣಾಂ ಸಮಾಜೇ
ಸಮರ್ಪಿತಂ ತಸ್ಯ ಹಿ ಜೀವನಂ ಸ್ಯಾತ್ ॥೯॥

ಸಮಾಜಕಲ್ಯಾಣವಿಧಾನಯೋಗೇ
ಕೃತಶ್ರಮಃ ಪ್ರಾಪ್ತವಿಶಾಲದೃಷ್ಟಿಃ ।
ಸ ಏವ ಧನ್ಯಃ ಶಿವಮೂರ್ತಿಶಾಸ್ತ್ರೀ
ಲೋಕೈಕಸಂಪ್ರೀಣನಬದ್ಧಕಕ್ಷ್ಯಃ ॥೧೦॥

ಇತೋಽಧಿಕಂ ಲೋಕಹಿತಂ ವಿಧಾತುಂ
ಜೀವೇಚ್ಚಿರಂ ಪಂಡಿತರತ್ನವರ್ಯಃ ।
ಲಿಂಗ ಪ್ರಸಾದಂ ಹಿ ಸಮಶ್ನುಯಾತ್ಸಃ
ಸಮತ್ವದರ್ಶೀ ವಿಷಮೇ ಪ್ರಪಂಚೇ ॥೧೧॥

ಇತಿ,
ತದಭ್ಯುದಯಾಕಾಂಕ್ಷೀ,
ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯಃ

# ಪದ್ಮಶ್ರೀ 'ಶಾಸ್ತ್ರೀ'

ಕರುನಾಡ ಏಕೀಕರಣ
    ಕರ್ತೃವೇ ಧೀರ ।
ಮೆಚ್ಚಿ ಒಲಿದಳು ಜಯಶ್ರೀ
    ಹೇ ! ಕನ್ನಡ ಕುಮಾರ !! ॥ ೧ ॥

ಶುಭಕೃತು ವರ್ಷದ ಮಾಘ ಮಾಸದಲಿ
ಜನ್ಮವೆತ್ತಿದಿರೈ ನೀವು
    ನಗರ ತುಮಕೂರಿನಲಿ ॥ ೨ ॥

ಗುರುಕುಲದಿ ನೀವ್ ಕಲಿತು
    ಗುರುವಾಗಿ ಬಂದಿರಿ ।
ಅರುಹಲೆಮಗೆಲ್ಲಾ ಸತ್ಯ
    ಶಾಂತಿ-ದಮ ಗುಣಗಳನು ॥ ೩ ॥

ಕರ್ಣಾಟಕ ಸಮ್ಮೇಳನ
    ನಿಮ್ಮ ಧ್ಯೇಯದ ಮಂತ್ರ ।
ಜತೆಗೆ ಓಡಿಸಲು-
    ಭಾರತೀಯ ಗಣತಂತ್ರ ॥ ೪ ॥

ಅದರ ದೆಸೆಯಿಂದಾದಿರಿ
    ಪರಿಷತ್ತಿನಧ್ಯಕ್ಷ ।
ನಿಮ್ಮಯ ಕಾರ್ಯಕೆ
    ಮೆಚ್ಚಿದನು ಫಾಲಾಕ್ಷ ॥ ೫ ॥

ನಿಮ್ಮ ಸಾಹಸದಿಂದ
    ಕಂಡೆವು ಕರ್ನಾಟಕವ ।
ಮಾತೆ ಸುಖಿಸಿದಳು ನೋಡಿ
    ಈ ನಿಮ್ಮ ಆಟವ ॥ ೬ ॥

ಶ್ರೀ ದೇವಿ ಕೃಪೆಯಿಂದ
    ಪದೆದಿರಿ 'ಪದ್ಮಶ್ರೀ' ।
ಪದವ ಘನ ವಿಜೇತರೇ
    ಹೇ ಜ್ಞಾನ ಭಂಡಾರಿ ॥ ೭ ॥

ಕೋರುವೆವು ಈಶನಲಿ
    ಕೊಡಲಾಯುರಾರೋಗ್ಯವ ।
ಮಾಡಲಿನ್ನಿನಿತು ಸೇವೆ
    ಜನತೆಗೆ ಬಹು ಯೋಗ್ಯವ ॥ ೮ ॥

**ಕವಿ : ಫಾಲಾಕ್ಷ. ರಾ. ಹೀರೇಮಠ**

---

# ಪ್ರ ಶ ಸ್ತಿ  ಪ ತ್ರಿ ಕೆ

**ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳೆ,**

ಹಿರಿಯ ಸುಸಂಸ್ಕೃತ ವಂಶದಲ್ಲಿ ಕರ್ನಾಟಕದ ಕೇಂದ್ರಗಳಲ್ಲೊಂದಾದ ತು ಮ ಕೂ ರಿ ನ ಲ್ಲಿ (ತಾ|| ೨೩-೨-೧೯೦೩ ರಲ್ಲಿ) ಜನ್ಮತಾಳಿ, ಕನ್ನಡ, ಸಂಸ್ಕೃತ, ಹಿಂದಿ, ತೆಲುಗು ಭಾಷೆಗಳಲ್ಲಿ ಪ್ರಾವೀಣ್ಯ ಪಡೆದು, ಮಹಾವಿದ್ವಾನ್, ಕರ್ನಾಟಕ ಭಾಷಾರತ್ನಂ ಕೈ|| ಪಿ. ಆರ್. ಕರಿಬಸವಶಾಸ್ತ್ರಿಗಳ ನೇತೃತ್ವದಲ್ಲಿ ಮಾರ್ಗದರ್ಶನ ಹೊಂದಿ, ಕನ್ನಡ ನಾಡಿನ ವಿದ್ವನ್ಮಣಿಗಳಲೊಬ್ಬರಾಗಿ, ಪಂಡಿತರತ್ನಂ, "ಪದ್ಮಶ್ರೀ" ಪ್ರಶಸ್ತಿಗಳನ್ನು ಪಡೆದಿರುವ ತಮ್ಮನ್ನು (೧೯೬೬) ಈ ಸಮಾರಂಭಕ್ಕೆ ಸ್ವಾಗತಿಸಿ ಗೌರವಿಸಲು ನಾವು ಅತ್ಯಂತ ಹರ್ಷಿಸುತ್ತೇವೆ.

ವಿದ್ಯಾದಾನದ ಉದಾತ್ತ ಧ್ಯೇಯದಿಂದ ತಾವು ಆರಂಭದಲ್ಲಿ ಉಪಾಧ್ಯಾಯ ವೃತ್ತಿಯನ್ನವಲಂಬಿಸಿದುದು ತಮ್ಮ ಸೇವಾಮನೋಧರ್ಮದ ದ್ಯೋತಕವಾಗಿದೆ. ಜನ ಸಾಮಾನ್ಯರ ಮನಸ್ಸಿನಲ್ಲಿ ಧಾರ್ಮಿಕ ಜ್ಞಾನವನ್ನು ಬೆಳಗಿಸಿ ಪುರಾಣೇತಿಹಾಸಗಳನ್ನು ಪ್ರಚಾರ ಮಾಡುವ ಸಲುವಾಗಿ ಕೀರ್ತನರಂಗದಲ್ಲಿ ನಿಮ್ಮ ಕಲಾ ಪ್ರತಿಭೆಯಿಂದ ಬಹುಕಾಲ ಜನಜಾಗೃತಿಯನ್ನುಂಟು ಮಾಡಿದ್ದೀರಿ. ಅಲ್ಲದೆ ಭಾರತದ ಸ್ವರಾಜ್ಯ ಚಳುವಳಿಯ ಮುಖಂಡರ ತ್ಯಾಗಪೂರ್ಣಜೀವನವನ್ನು ಕುರಿತು ಕೀರ್ತನಗಳನ್ನು ಮಾಡಿ ಜನಮನದಲ್ಲಿ, ದೇಶಾಭಿಮಾನ, ದೇಶಪ್ರೇಮುಗಳನ್ನು ಮೂಡಿಸಿದ ತಮಗೆ "ಕೀರ್ತನಾಚಾರ್ಯ" ಎಂಬ ಬಿರುದು ಯಥೋಚಿತವಾಗಿದೆ. ಕರ್ನಾಟಕ ವಿಭೂಷಣ, ಶಿವಕೀರ್ತನ ಕವಿರಾಜ, ವಿದ್ಯಾವಾರಿಧಿ, ಸಮಾಜ ಭಾಸ್ಕರ ಇವೇ ಮುಂತಾದ ಬಿರುದುಗಳಿಗೆ ಶಿಖರಪ್ರಾಯವಾಗಿ ಮೈಸೂರು ಶ್ರೀಮನ್ ಮಹಾರಾಜರವರು, ನಿಮ್ಮ ಪಾಂಡಿತ್ಯ ಪ್ರತಿಭೆಗಳನ್ನು ಗುರುತಿಸಿ "ಪಂಡಿತರತ್ನಂ" ಎಂಬ ಘನ ಗೌರವದ ಪ್ರಶಸ್ತಿಯನ್ನು ದಯಪಾಲಿಸಿ (೧೯೪೪) ತಮ್ಮನ್ನು ಅರಮನೆಯ ವಿದ್ವಾಂಸರನ್ನಾಗಿರಬೇಕೆಂದು ಆಹ್ವಾನಿಸಿದುದು ನಮ್ಮ ನಾಡಿಗೆ ಕೀರ್ತಿಯನ್ನೂ ಗೌರವವನ್ನೂ ಉಂಟು ಮಾಡಿದೆ.

ಕರ್ನಾಟಕ ಏಕೀಕರಣ ಕಾರ್ಯದಲ್ಲಿ ತನುಮನವನ್ನಿತ್ತು ೪೦ ವರ್ಷಗಳಿಂದ ಅವಿಶ್ರಾಂತವಾಗಿ ದುಡಿದಿದ್ದೀರಿ. ಕರ್ನಾಟಕದ ಹಿರಿಯ ಮಠಾಧಿಪತಿಗಳಿಂದಲೂ, ಸಂಘ ಸಂಸ್ಥೆಗಳಿಂದಲೂ ಮಾನಮನ್ನಣೆ ಗಳಿಸಿದ್ದೀರಿ. ಇದರಿಂದಾಗಿ ಕರ್ನಾಟಕ ಚರಿತ್ರೆಯಲ್ಲಿ ತಮ್ಮ ಹೆಸರು ಶಾಶ್ವತವಾಗಿ ನಿಲ್ಲುವುದರಲ್ಲಿ ಯಾವ ಸಂದೇಹವೂ ಇಲ್ಲವೆಂದು ಅತ್ಯಂತ ಸಂತೋಷದಿಂದ ತಿಳಿಯಬಯಸುತ್ತೇವೆ.

**ಆದರ್ಶ ಕರ್ಮಯೋಗಿಗಳೆ,**

ತಮ್ಮ ಅವಿಶ್ರಾಂತ ದುಡಿಮೆ, ಕನ್ನಡ ನಾಡುನುಡಿಗಳ ಅಭಿಮಾನಗಳನ್ನು ಕಂಡ ಕನ್ನಡದ ಜನತೆ ತಮ್ಮನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಆರಿಸಿ ಗೌರವಿಸಿತು. (೧೯೫೬) ತಾವೂ ಸಹ ನೂರು ತಿಂಗಳ ಕಾಲ ಪರಿಷತ್ತಿನ ಅಧ್ಯಕ್ಷರಾಗಿ, ಅದರ ಏಳಿಗೆಗೆ ದುಡಿದಿರುವುದನ್ನು ಕನ್ನಡ ಸಾಹಿತ್ಯ ಪರಿಷತ್ತು ಸದಾ ಸ್ಮರಿಸುತ್ತದೆಂಬುದನ್ನು ವಿನಮ್ರವಾಗಿ ತಮಗೆ ತಿಳಿಸಬಯಸುತ್ತೇವೆ. ಕನ್ನಡ ಕೋಶ ರಚನೆಗಾಗಿ ಸರ್ಕಾರದಲ್ಲಿ ಕರಾರು ಮಾಡಿಕೊಂಡ ತಮ್ಮ ಸಾಹಸವು ನಿಜಕ್ಕೂ ಶ್ಲಾಘ್ಯವಾಗಿದೆ. ಕನ್ನಡ ಕೋಶದ ಚರಿತ್ರೆಯಲ್ಲಿಯೂ ತಮ್ಮ ಹೆಸರು ಶಾಶ್ವತವೆನಿಸಿದೆ. ಕನ್ನಡ ಕೋಶವು ನಾಡಿಗೂ ಪರಿಷತ್ತಿಗೂ ಉಪಕಾರಿಯೆನಿಸಿದೆ.

ತಾವು ವಿದ್ವನ್ಮಣಿಗಳು. ಅನೇಕ ಗ್ರಂಥಗಳನ್ನು ಸಂಸ್ಕರಿಸಿದ್ದೀರಿ. ವಿಮರ್ಶ ಲೇಖನಗಳನ್ನು ಬರೆದಿ

ದ್ದೀರಿ. ಸಾಹಿತ್ಯ ದೇವಿಯ ಸತತ ಆರಾಧಕರಾಗಿ ದ್ದೀರಿ. ಅಲ್ಲದೆ 'ಶರಣ ಸಾಹಿತ್ಯ' ಮತ್ತು 'ಸ್ವತಂತ್ರ ಕರ್ನಾಟಕ' ಪತ್ರಿಕೆಗಳ ಸಂಪಾದಕರೂ ಆಗಿದ್ದೀರಿ. ನಿಮ್ಮಂತಹ ಹಿರಿಯರನ್ನು ಘನ ಸರ್ಕಾರದವರು, ಕನ್ನಡ-ಕನ್ನಡ ನಿಘಂಟು ಸಮಿತಿಯ ಸದಸ್ಯರನ್ನಾಗಿ ಆಯ್ದಿರುವುದು ಅತ್ಯಂತ ಉಚಿತವಾಗಿದೆ. ತಾವು ಮಾಡಿರುವ ಸಂಶೋಧನೆಗಳು ತಮಗೆ 'ಡಾಕ್ಟರೇಟ್' ಪದವಿ ದೊರೆಕಿಸಿ ಕೊಡಲು ಅರ್ಹವಾಗಿವೆಯೆಂದು ನಮ್ಮ ಭಾವನೆ.

ಕಳೆದ ನಲವತ್ತು ವರ್ಷಗಳ ತಮ್ಮ ಅಮೋಘ ಸೇವೆಗೆ ಗೌರವ ಸೂಚಕವಾಗಿ ಭಾರತದ ರಾಷ್ಟ್ರಾಧ್ಯಕ್ಷರು "ಪದ್ಮಶ್ರೀ" ಪ್ರಶಸ್ತಿಯನ್ನಿತ್ತು ತಮ್ಮನ್ನು ಗೌರವಿಸಿರುವುದು ಕನ್ನಡಿಗರೆಲ್ಲರಿಗೂ ಅಮಿತಾನಂದವನ್ನುಂಟು ಮಾಡಿದೆ. ಈ ಪ್ರಶಸ್ತಿ ಕರ್ನಾಟಕಕ್ಕೆ, ಕನ್ನಡ ಜನಕ್ಕೆ ಕೊಟ್ಟ ಪ್ರಶಸ್ತಿಯೆಂದು ಭಾವಿಸುತ್ತೇವೆ. ಈ ಹಿರಿಯ ಪ್ರಶಸ್ತಿಗೆ ತಾವು ಸರ್ವಥಾ ಅರ್ಹರಾಗಿದ್ದೀರಿ.

ತಮ್ಮ ತುಂಬು ಜೀವನವು ಸುದೀರ್ಘವಾಗಿ ಮುಂದುವರೆದು ತಮ್ಮ ಸೇವೆಯು ಸಮಾಜಕ್ಕೂ, ದೇಶಕ್ಕೂ ಸದಾ ದೊರಕುವಂತೆ ಪರಮಾತ್ಮನು ತಮಗೆ ಆಯುರಾರೋಗ್ಯ ಭಾಗ್ಯಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇವೆ.

---

ಕನ್ನಡ ಸಾಹಿತ್ಯ ಪರಿಷತ್ತು ಮಾನ್ಯ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳಿಗೆ 'ಪದ್ಮಶ್ರೀ' ಪ್ರಶಸ್ತಿಯು ದೊರೆತ ಸಂದರ್ಭದಲ್ಲಿ ಸಮರ್ಪಿಸಿದ ಸನ್ಮಾನ ಪತ್ರಿಕೆ.

(ತಾ|| ೨೮-೨-೬೬)



# ಶ್ರೀ ಶಾಸ್ತ್ರೀಣಾಂ ಸಂಕ್ಷಿಪ್ತ ಜೀವನ ಪರಿಚಯಃ

ವಿದ್ಯಾಧ್ಯಾಪನ ಭಾಷಣ ಕೀರ್ತನ ಗ್ರಂಥ ರಚನಾ ಸಾಹಿತ್ಯ ಪ್ರಸಾರಾದಿ-ಸಮಾಜ-ದೇಶ-ರಾಷ್ಟ್ರೋದ್ಧಾರ ಕಾರ್ಯ ಕಲಾಪ ವೈಭವೈರ್ದಿಗಂತ ವಿಶ್ರಾಂತ ಕೀರ್ತಯಃ, ಆಸ್ಥಾನ ವಿದ್ವಾನ್ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಣಃ ವಿಂಶತಿ ತಮಕ್ರಿಸ್ತ ಶತಮಾನಸ್ಯ ತೃತೀಯೇ ವರ್ಷೇ ತುಮಕೂರು ಸ್ಥಿತ ಹುಲಕುಂಟೆ ಮಠಾಧಿಪತಿ ಭೂತಯೋರ್ಲಿಂಗೈಕ್ಯ ಶ್ರೀ ಬಸವಯ್ಯ ಸ್ವಾಮಿ ಶ್ರೀಮತಿ ನೀಲಾಂಬಿಕಾ ದಾಂಪತ್ಯೋರ್ಗರ್ಭೇಲಬ್ಧ ಜನ್ಮಾನಃ(೨೩-೨-೧೯೦೩)

ಲಿಂಗೈಕ್ಯ—ಶ್ರೀ ಮಾಗಡಿ ವೀರಪ್ಪ ಶಾಸ್ತ್ರೀ ಮಹಾಶಯೇಭ್ಯಃ, ಆಸ್ಥಾನ ಮಹಾವಿದ್ವಾನ್ 'ಕರ್ಣಾಟಕ ಭಾಷಾರತ್ನಂ' ಆದುಪಾಧಿಮದ್ಭ್ಯಃ ಲಿಂಗೈಕ್ಯ ಪಿ. ಆರ್. ಕರಿಬಸವಶ್ಯಾಸ್ತ್ರೀ ಮಹೋದಯೇಭ್ಯಶ್ಚ, ಕನ್ನಡ, ಸಂಸ್ಕೃತ, ಹಿಂದಿ, ತೆಲುಗು, ತಮಿಳು ಆದಿ ಭಾಷಾಸು ಲಬ್ಧಪ್ರಾವೀಣ್ಯಾಃ, ವರ್ಷದ್ವಯಪರ್ಯಂತ ಮಧ್ಯಾಪನ ಕಾರ್ಯಂ ಕೃತವಂತಃ, ಅನಂತರಂ ಶಿವ ಕೀರ್ತನ ಸೇವಾಮಂಗೀಕೃತ್ಯ ವರ್ಷದಶಕ ಕಾಲಮಖಂಡ ಕರ್ನಾಟಕ ದೇಶೇಷು ಪರ್ಯಟಂತೋ ಧರ್ಮೋಪದೇಶಂ ಸಮಾಜ ಭಾಷೋದ್ಧಾರಕಾರ್ಯಂಚ ಸಾಧಿತವಂತಃ. ಆಸ್ಥಾನ ವಿದ್ವಾನ್, 'ಪಂಡಿತ ರತ್ನಂ' ಆದಿ ಪದವುಪಲಭ್ಯ ಕನ್ನಡ ಸಾಹಿತ್ಯ ಪರಿಷದಧ್ಯಕ್ಷ ಸ್ಥಾನಂ ನವವರ್ಷ ಪರ್ಯಂತವ್ಯಲಿ ಕೃತವಂತಃ ಅ. ಭಾ. ವೀ. ಮಹಾಸಭಾ, ಮೈಸೂರು ಸಂಸ್ಕೃತ ಬೋರ್ಡ್, ಭಾರತೀಯ ವಿದ್ಯಾಭವನಂ, ಸಾಹಿತ್ಯ ಅಕ್ಯಾಡೆಮಿ, ಕನ್ನಡ ನಿಘಂಟು, ಕನ್ನಡ ವಿಶ್ವಕೋಶ, ಸಂಗೀತ ನಾಟಕ ಅಕ್ಯಾಡೆಮಿ ಆದಿ ಸಂಸ್ಥಾನಾಂ ಸದಸ್ಯತ್ವಮಧ್ಯಾವಧಿ ಸಮಲಂಕುರ್ವಂತಿ ಇತಿ ಮಹಾನಯಂ ವಿಶೇಷಃ.

'ಶರಣ ಸಾಹಿತ್ಯಮದ್ಯಾಪಿ ಸಂಪಾದಯಂತಿ. ಗ್ರಂಥಮಾಲಾಯಾಂ ತ್ರಿಂಶತ್ಯಧಿಕ ಗ್ರಂಥಾನ್ ರಚಿತವಂತಃ. ವೀರಶೈವ ಸಾಹಿತ್ಯೇತಿಹಾಸಃ ಭಾಗಚತುಷ್ಟಯಾತ್ಮಕಃ, ಕರ್ನಾಟಕ ಸಂದರ್ಶನಂ ಭಾಗದ್ವಯಾತ್ಮಮ್, ಮಾದೇಶ್ವರ ಚರಿತಮ್, ದುಂಬಿ ನಾದ ಕವನಮ್, ಶಿವಪ್ಪನಾಯಕ ಚರಿತಮ್, ಕೆಳದಿ ರಾಣಿ ಚನ್ನಮ್ಮಾಜಿ ಚರಿತಮ್, ವೀರಶೈವ ಮಹಾಪುರುಷಾಃ ಭಾಗದ್ವಯಾತ್ಮಕಾಃ, ಆಕಾಶವಾಣಿ ಕಲಾಕೃತಯಃ, ಮಹಾಕವಿ ಷಡಕ್ಷರ ದೇವಃ ಆದಿ ಗ್ರಂಥಾಸ್ತೈರ್ಲಿಖಿತಾಃ, ಮಹಾಕವಿ ಲಕ್ಷ್ಮೀಶಃ, ನಿಜಗುಣ ಪ್ರಶಸ್ತಿಃ, ಸರ್ವಜ್ಞಮೂರ್ತಿಃ, ಹರಿಹರಃ—ರಾಘವಾಂಕಶ್ಚೇತಿ ಅನ್ಯೇಪಿ ಗ್ರಂಥಾಸ್ತೈರ್ನಿರ್ಮಿತಾಃ.

ಶ್ರೀ ರಂಭಾಪುರಿ, ಚಿತ್ರದುರ್ಗ, ಶ್ರೀಶೈಲ, ಉಜ್ಜಯಿನಿ, ಶ್ರವಣಬೆಳುಗೊಳ, ಕಾಶೀ ವಿಶ್ವಾರಾಧ್ಯಾದಿ ಪೀಠಾಧಿಪತಿಭಿಶ್ಚ, ಕೀರ್ತನ ಕೇಸರಿ, ಕೀರ್ತನಾಚಾರ್ಯಃ ಶಿವಕೀರ್ತನ ಕವಿರಾಜಃ, ಕವಿರತ್ನಂ, ವಿದ್ಯಾವಾರಿಧಿಃ, ಕರ್ನಾಟಕ ವಿಭೂಷಣಾದ್ಯುಪಾಧಿ ಪ್ರದಾನೇನ ಸಂಮಾನಿತಾಃ ಶಾಸ್ತ್ರಿಣಃ.

ಧರ್ಮಸ್ಥಲಾದ್ಯನೇಕಾಭಿಃ ಸಂಸ್ಥಾಭಿರ್ಮಾನ ಪ್ರದತ್ತಾನಿ, ಸ್ವತಂತ್ರ ಕರ್ಣಾಟಕ, ಸಾಹಿತ್ಯ ಪರಿಷತ್ ಪತ್ರಿಕಾ, ಕನ್ನಡನುಡಿ ಆದಿ ನಿಯತ ಕಾಲಿಕಾ: ಪತ್ರಿಕಾಶ್ಚೈತೈಃ ಸಂಪಾದಿತ:. ಚತ್ವಾರಿಂಶದ್ ವರ್ಷ ಪರ್ಯಂತಂ ಕರ್ನಾಟಕ ಏಕೀಕರಣಾರ್ಥ ಪ್ರಯತಂತ ಶಾಸ್ತ್ರಿಣಃ, ನವದಿಲ್ಲಿ, ಮುಂಬಯಿ, ಮದ್ರಾಸ್, ಹೈದರಾಬಾದ್ ಆದಿ ಮಹಾನಗರ ಸ್ಥಿತ ಕರ್ಣಾಟ ಸಂಘೈಶ್ಚ ನಿಮಂತ್ರ್ಯ ಸಂಮಾನಿತಃ ಶಾಸ್ತ್ರಿಣಃ ಶ್ರೀ ಶೃಂಗೇರಿ, ಹೊಂಬುಜ, ಧರ್ಮಸ್ಥಳ, ಉಡುಪಿ ಆದಿ ಮಠಾಧಿ ಪತಿಭಿಶ್ಚ ಸಮಾಹೂಯ ಸಂಮಾನಿತಾಃ.

ಈದೃಗ್ಭ್ಯಃ ಪಂಡಿತ ಪ್ರವರೇಭ್ಯಃ ಆಸ್ಥಾನ ವಿದ್ವಾನ್ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಭ್ಯಃ ೧೮೮೭ ವಿಶ್ವಾವಸು ನಾಮ ಸಂವತ್ಸರೇ ಮಾಘಮಾಸೇ, ಶುಕ್ಲ ಪಕ್ಷೇ, ಷಷ್ಠೀತಿಥೌ, ಗುರುವಾಸರೇ, ಶ್ರೀಮುದಥಣಿ ಶಿವಯೋಗಿನಾಂ ಯಾತ್ರಾ ಪ್ರಸಂಗೇ ಸಂಮಿಲಿತಯಾ 'ವೀರಶೈವ-ವಿದ್ವತ್-ಪರಿಷದಾ ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀಣಾಂ ಸರ್ವತೋಮುಖ ಪಾಂಡಿತ್ಯ ಪ್ರತಿಭಾಮಾಕಲಯ್ಯ "ಸಮಾಜ ಭಾಸ್ಕರಃ" ಇತಿ ಪ್ರಶಸ್ತಿ ಪ್ರದೀಯತೇ.

---

ಶ್ರೀ ಮುದಥಣಿ ಶಿವಯೋಗಿನಾಂ ವಾರ್ಷಿಕ ಯಾತ್ರಾ ಪ್ರಸಂಗೇ ಸಂಮಿಲಿತಯಾ 'ವೀರಶೈವ ವಿದ್ವತ್ ಪರಿಷದಾ' ಬೆಂಗಳೂರು ನಗರವಾಸಿಭ್ಯಃ ಆಸ್ಥಾನ ವಿದ್ವಾನ್ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಭ್ಯಃ ಪಂಡಿತಪ್ರವರೇಭ್ಯಃ ಪ್ರದೀಯಮಾನಾ 'ಸಮಾಜ ಭಾಸ್ಕರಃ' ಇತಿ ಪ್ರಶಸ್ತಿ ಪತ್ರಿಕಾ, ಮುರುಘಾಮಠಃ, ಧಾರವಾಡಃ. (ದಿ॥೨೭-೧-೧೯೬೬)

# ಪದ್ಮಶ್ರೀ ಶಿವಮೂರ್ತಿಶಾಸ್ತ್ರಿಗಳನ್ನು ಕುರಿತು

## ಕನ್ನಡಿಗರಿಗೆ ಮನ್ನಣೆ

ವಿದ್ವಾಂಸರಾದ ಆಸ್ಥಾನ ವಿದ್ವಾನ್ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಯರಿಗೆ ಗಣರಾಜ್ಯೋತ್ಸವ ಸಂದರ್ಭದಲ್ಲಿ 'ಪದ್ಮಶ್ರೀ' ಪ್ರಶಸ್ತಿ ದೊರೆತುದು ಕನ್ನಡಿಗರಿಗೆಲ್ಲಾ ಹೆಮ್ಮೆಯ ವಿಷಯ. ಮತ್ತು ಸಂತೋಷದ ಸಂಗತಿ. ಈ ಪ್ರಶಸ್ತಿಗೆ ಶ್ರೀ ಶಾಸ್ತ್ರಿಯವರು ಸತ್ಪಾತ್ರರು. 'ಶರಣ ಸಾಹಿತ್ಯ'ದ ಮೂಲಕ ಶ್ರೀಯುತರು ಕನ್ನಡ ಸಾಹಿತ್ಯಕ್ಕೆ ಗಣ್ಯ ಸೇವೆ ಸಲ್ಲಿಸಿದ್ದಾರೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಶ್ರೀ ಶಾಸ್ತ್ರಿಗಳು ಕನ್ನಡ ನುಡಿಯ ಏಳಿಗೆಗೂ ನಾಡಿನ ಮೇಲ್ಮೆಗೂ ಶ್ರಮಿಸಿದರು. ಸ್ವಯಂ ವಿದ್ವಾಂಸರು. ತಾಯಿ ನುಡಿಯಾದ ಕನ್ನಡದ ಮೇಲೆ ಸಹಜ ಮಮತೆ ಅವರಿಗಿದ್ದರೂ ಸಕಲರ ಮಾತೃಭಾಷೆಯಾದ ಸಂಸ್ಕೃತದ ಮೇಲೂ ಅವರಿಗೆ ತುಂಬಾ ಅಭಿಮಾನವಿದೆ. ಜೊತೆಗೆ ಪರಿಶ್ರಮವೂ ಗಣನೀಯವಾಗಿದ್ದು ಅವರ ಲೇಖನ ಭಾಷಣಗಳಲ್ಲಿ ಅದು ಅಭಿವ್ಯಕ್ತವಾಗುತ್ತದೆ. ಶ್ರೀ ಶಾಸ್ತ್ರಿಯವರು ಉತ್ತಮ ಭಾಷಣಕಾರರು ಕನ್ನಡದಲ್ಲಿ ಅವರ ವಕ್ತೃತ್ವ ಅಸಾಧಾರಣವಾದುದು. ಅವರ ವಾಗ್ಮಿತೆಯಿಂದ ಕನ್ನಡ ನಾಡು ನುಡಿಗಳಿಗೆ ಪ್ರಯೋಜನವಾಗಿದೆ. ಇಂತಹ ಕನ್ನಡ ಗಣ್ಯರಿಗೆ 'ಪದ್ಮಶ್ರೀ' ಪ್ರಶಸ್ತಿ ಪ್ರಾಪ್ತವಾದ ಸಹರ್ಷ ಸಂದರ್ಭದಲ್ಲಿ ಅವರನ್ನು ನಾವು ಮನಃಪೂರ್ವಕವಾಗಿ ಅಭಿನಂದಿಸಿ ಅವರಿಂದ ಮತ್ತಷ್ಟು ಸೇವೆ ನಾಡಿಗೆ ನುಡಿಗೆ ದೀರ್ಘಕಾಲ ಸಲ್ಲುವಂತಾಗಲೆಂದು ಹಾರೈಸುತ್ತೇವೆ

—ಜನವಾಣಿ

ರಾಗಿದ್ದಾರೆ. ಕಳೆದ ಇಪ್ಪತ್ತೆಂಟು ವರ್ಷಗಳಿಂದ 'ಶರಣ ಸಾಹಿತ್ಯ' ಮಾಸಪತ್ರಿಕೆಯನ್ನು ಯಶಸ್ವಿಯಾಗಿ ನಡೆಸುತ್ತಿರುವ ಶಾಸ್ತ್ರಿಗಳು, ಪುರಾತನ ತ್ರಿವಿಧಿ, ವೀರೇಶ ಚರಿತೆ, ಮನೋವಿಜಯ. ಬಸವೋದಾಹರಣಂ ಮೊದಲಾದ ಪ್ರಾಚೀನ ಗ್ರಂಥಗಳನ್ನು ಪ್ರಕಟಿಸಿಯೂ ವೀರಶೈವ ಸಾಹಿತ್ಯ ಮತ್ತು ಇತಿಹಾಸ, ವೀರಶೈವ ಮಹಾಪುರುಷರು, ಕರ್ನಾಟಕ ಸಂದರ್ಶನ ಮುಂತಾದ ಮಹತ್ವದ ಗ್ರಂಥಗಳನ್ನು ರಚಿಸಿಯೂ ತಮ್ಮ ಪಾಂಡಿತ್ಯವನ್ನು ಬೆಳಗಿದ್ದಾರೆ. ಹಲವು ವರ್ಷ 'ಕನ್ನಡ ನುಡಿ'ಯ ಸಂಪಾದಕತ್ವವನ್ನು ವಹಿಸಿದ್ದರು. ಅವರು ೧೯೫೬ ರಿಂದ ೧೯೬೪ ರವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಕೀರ್ತನ ಕೇಸರಿ, ಕವಿರತ್ನ, ಕರ್ನಾಟಕ ವಿಭೂಷಣ, ವಿದ್ಯಾವಾರಿಧಿ ಇತ್ಯಾದಿ ಬಿರುದುಗಳಿಂದ, ಅರಮನೆ—ಗುರುಪೀಠ ಹಾಗೂ ಸಾರ್ವಜನಿಕರ ಗೌರವಕ್ಕೆ ಪಾತ್ರರಾದ ಶಾಸ್ತ್ರಿಗಳು ಇದೀಗ 'ಪದ್ಮಶ್ರೀ' ಪ್ರಶಸ್ತಿಯಿಂದ ರಾಷ್ಟ್ರ ಮನ್ನಣೆಯನ್ನು ಪಡೆದುದಕ್ಕಾಗಿ 'ನುಡಿ'ಯು ಅವರಿಗೆ ತನ್ನ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಈ ಗೌರವ ಅವರಿಗೆ ಸಂದುದಕ್ಕಾಗಿ ಪರಿಷತ್ತಿಗೆ ತುಂಬ ಸಂತೋಷವಾಗಿದೆ.

—ಕನ್ನಡನುಡಿ

### ಪಂಡಿತರತ್ನಂ ಬಿ. ಶಿವಮೂರ್ತಿಶಾಸ್ತ್ರಿಗಳಿಗೆ "ಪದ್ಮಶ್ರೀ" ಪ್ರಶಸ್ತಿ

ಈ ವರ್ಷದ ಗಣರಾಜ್ಯೋತ್ಸವದಂದು ರಾಷ್ಟ್ರ ಪ್ರಶಸ್ತಿ ಪಡೆದ ಮಹನೀಯರಲ್ಲಿ ಕನ್ನಡದ ಖ್ಯಾತ ವಿದ್ವಾಂಸರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳೂ ಒಬ್ಬ

### ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

ಕರ್ನಾಟಕ ಸಾಹಿತ್ಯ ಪರಿಷನ್ಮಂದಿರದ ಮಾಜಿ ಕಾರ್ಯಾಧ್ಯಕ್ಷರೂ 'ಕನ್ನಡನುಡಿ' ಪತ್ರಿಕೆಯ ಸಂಪಾದಕರೂ ಆಗಿದ್ದ, ಆಸ್ಥಾನ ವಿದ್ವಾನ್, ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳಿಗೆ ಕೇಂದ್ರ ಸರಕಾರವು "ಪದ್ಮಶ್ರೀ" ಎಂಬ ಗೌರವ ಪ್ರಶಸ್ತಿಯನ್ನಿತ್ತು ಸನ್ಮಾನಿ

ಸಿರುವದು ಔಚಿತ್ಯ ಪೂರ್ಣವಾಗಿದೆ. ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿ, 'ಶರಣಸಾಹಿತ್ಯ' ಎಂಬ ಮಾಸಪತ್ರಿಕೆಯನ್ನು ಹೊರಡಿಸುತ್ತಿರುವ ಶ್ರೀಯುತರು ಉಜ್ವಲ ದೇಶಾಭಿಮಾನಿಗಳೂ, ಶ್ರೇಷ್ಠ ಪ್ರಚಾರಕರೂ, ಪಳಗಿದ ಸಾಹಿತಿಗಳೂ ಆಗಿರುವರು. ಅವರಿಗೆ ನಮ್ಮ ಅಭಿನಂದನೆಗಳು.

ಕನ್ನಡದ ಕೀರ್ತಿಕೇತುವನ್ನು ದಶದಿಕ್ಕುಗಳಲ್ಲಿ ತಮ್ಮ ಕೀರ್ತನ ವೈಖರಿಯಿಂದ ಎತ್ತಿಹಿಡಿದು ಕನ್ನಡಮ್ಮನ ಊಳಿಗದಾಳಾಗಿ ಕರ್ನಾಟಕದ ಜನತೆಯ ಸೇವೆಯಲ್ಲಿ ತನು ಮನ ಧನವನ್ನು ಸವೆಸಿದ ಹಾಗೂ ಸವೆಸುತ್ತಿರುವ,ಆಸ್ಥಾನ ವಿದ್ವಾನ್, ಕೀರ್ತನ ಕೇಸರಿ, ಬಿ.ಶಿವಮೂರ್ತಿಶಾಸ್ತ್ರಿಗಳಿಗೆ ರಾಷ್ಟ್ರಪತಿಗಳಿಂದ ಪ್ರಜಾರಾಜ್ಯ ದಿನದಂದು ಪದ್ಮಶ್ರೀ ಪ್ರಶಸ್ತಿಯು ದೊರೆತುದು ಕನ್ನಡಿಗರಾದ ನಮಗೆಲ್ಲ ಹೆಮ್ಮೆಯ ಮಾತು. ಪದ್ಮಶ್ರೀ ಶಿವಮೂರ್ತಿಶಾಸ್ತ್ರಿಗಳು ಕನ್ನಡ ಸಾಹಿತ್ಯ ಪರಿಷತ್ತನ್ನು ಸಚೇತನಗೊಳಿಸುವಲ್ಲಿ ನಿರಲಸರಾಗಿ ದುಡಿದುದನ್ನು ನೆನೆದಾಗ ಅವರಿಗೆ ಈ ಗೌರವವು ಎಂದೋ ಸಲ್ಲಬೇಕಾಗಿದ್ದಿತೆಂದು ನಾವು ಹೇಳದಿರುವೆವು. ಅವರ ಆಳವಾದ ಕನ್ನಡದ ಅಭ್ಯಾಸ, ಕಾವ್ಯಶ್ರೀ ಹಾಗೂ ಎಲ್ಲಕ್ಕಿಂತ ಮಿಗಿಲಾಗಿ ಕರ್ನಾಟಕವು ಏಕೀಕೃತವಾಗಬೇಕೆಂಬ ಬಗೆಗೆ ಅವರಿಗಿದ್ದ ಅಮಿತ ಉತ್ಸಾಹ, ಅಭಿಮಾನಗಳು ಅನುಕರಣೀಯವಾಗಿವೆ. "ತುಲ್ಯನಿಂದಾಸ್ತುತಿರ್ಮೌನೀ" ಎಂಬಂತೆ ಅವರು ಅನೇಕ ಟೀಕಾಕಾರರ ಸಲ್ಲದ ಬಿರುನುಡಿಗಳಿಗೆ ಬೆದರದೆ ತಮ್ಮ ಗುರಿಯೆಡೆಗೆ ಹಿರಿನೋಟ ಬೀರಿ 'ಕ್ರಿಯಾಸಿದ್ಧಿಯು ಸತ್ವದಲ್ಲಿದೆಯಲ್ಲದೆ ಉಪಕರಣಗಳಲ್ಲಿಲ್ಲೆಂದು' ತೋರಿಸಿಕೊಟ್ಟಿರುವರು. ನಾವು ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ.

—ಸಂದರ್ಶನ

## ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು

**ಕೀರ್ತನಕೇಸರಿ ಇಂದು ರಾಷ್ಟ್ರೀಯವ್ಯಕ್ತಿ, ಸೇವೆಗೆ ಅರ್ಹವಾದ ಸನ್ಮಾನ, ದುಡಿಯುವವರಿಗೆ ದೊರೆತ ಭರವಸೆ**

ಶ್ರೀಯುತ ಬಿ. ಶಿವಮೂರ್ತಿಶಾಸ್ತ್ರಿಗಳು ತಮ್ಮ ವಿವಿಧ ಮುಖ ಶಕ್ತಿಕೂಟದಿಂದ, ಬಹುಮುಖ ಕ್ಷೇತ್ರಗಳಲ್ಲಿ ಬೃಹತ್ತು ಮಹತ್ತುಗಳಿಂದ ಸೇವೆಗೈದು, ಕನ್ನಡನಾಡಿನ ಜನಕೋಟಿಗೆ ಪರಿಚಿತರಾಗಿರುವರು. ಅವರು ಕೋಶ ಓದಿ ಪಂಡಿತ ಮಾನ್ಯರಾದುದಲ್ಲದೆ,ದೇಶ ತಿರುಗಿ ನಾಡಿನ ಉದ್ದಗಲದಲ್ಲಿ ಸಂಚರಿಸಿ, ನಾಡುನುಡಿಯ ಧರ್ಮ ಹಾಗೂ ಸಮನ್ವಯದ ಸೂತ್ರವನ್ನು ಪ್ರಚುರಪಡಿಸಿ ಬಹುಜನ ಪ್ರಿಯತೆಯನ್ನು ಸಂಪಾದಿಸಿಕೊಂಡಿದ್ದಾರೆ. ಅವರ ಸಂದರ್ಶನ ಪಡೆದು ರೇಡಿಯೋದ ಮೂಲಕ ಪ್ರಚಾರ ಮಾಡಿದಂತೆ ಅವರು ಸೇವೆಗೈದು ೪೦ ವರ್ಷಗಳ ಕಾರ್ಯವನ್ನು ಚತುರ್ಮುಖವಾಗಿ ವಿಂಗಡಿಸಬಹುದು. ಸಾಮಾಜಿಕವಾಗಿ ಅವರು ಕೈಕೊಂಡ ಮಹತ್ತರ ಕಾರ್ಯವೆಂದರೆ, ಕನ್ನಡ ನಾಡಿನಲ್ಲಿ ಸಂಚರಿಸಿ, ನಗರ–ಗ್ರಾಮಗಳಲ್ಲಿ ಊರಿನ ಮುಖ್ಯರನ್ನು ಸಂದರ್ಶಿಸಿ, ಅಲ್ಲಿನ ದೇವಾಲಯಗಳಲ್ಲಿ ಪುರಾಣ ಕೀರ್ತನೆಗಳನ್ನು ನಡೆಸಿ ಧರ್ಮನೀತಿ-ನಿಯಮಗಳನ್ನು ಪಾಂಡಿತ್ಯಪೂರ್ಣಭಾಷೆಯಿಂದ ಜನಮನರಂಜನೆಯ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ. ಈ ಮೂಲಕ ನಿರಕ್ಷರಿಗಳಿಗೆ ಬೇಕಾದ ಧರ್ಮವನ್ನು ಕಥೆಗಳ ರೂಪದಲ್ಲಿ ರಂಜನೆಯ ರೀತಿಯಲ್ಲಿ ಪ್ರಸಾರ ಮಾಡಿ, ಪುರಾಣ ಪುಣ್ಯ ಕಥೆಗಳ ಶ್ರವಣ ಮಾಡಿಸಿ, ಜನರ ಮನಸ್ಸನ್ನು ತಿದ್ದುವ ಕಾರ್ಯದಲ್ಲಿ ಅಮೋಘವಾದ ಸೇವೆಯನ್ನು ನಡೆಸಿದ್ದಾರೆಂದು ಹೇಳಬಹುದು. ಅವರ ಜೀವನದ ನಾಂದಿಯಂತಿದ್ದ ಅವರ ಈ ಪುಣ್ಯಕಾರ್ಯ, ಅವರ ಅರಳುವ ಪ್ರತಿಭೆಗೆ ಪೋಷಕವಾಗಿ, ಅವರೊಬ್ಬ ನಾಡಿನ ಹಿತಚಿಂತಕರ ವರ್ಗದಲ್ಲಿ ಪರಿಗಣಿಸಲ್ಪಡುವಂತಾಯ್ತು.

ಈ ಸಂದರ್ಭದಲ್ಲಿ ಅವರು ಮತೀಯತೆಯ ಸಂಕುಚಿತ ದೃಷ್ಟಿ ತೊರೆದು ಸರ್ವಧರ್ಮಸಮನ್ವಯದ ದಾರಿಯಲ್ಲಿ ಹೆಜ್ಜೆಯಿಟ್ಟು, ಉಡುಪಿ, ಶೃಂಗೇರಿ, ಶ್ರವಣಬೆಳುಗೊಳ, ಹೊಂಬುಜ ಮುಂತಾದ ವಿವಿಧ ಧರ್ಮೀಯರ ಗುರುಗಳಿಂದ ಕೂಡ ಮೆಚ್ಚಿಗೆಯನ್ನು ಪಡೆದಿದ್ದಾರೆ.

ಅವರ ಈ ಅಪಾರವಾದ ಅನುಭವ, ನಾಡುನುಡಿಗಳ ಹಿತಚಿಂತನೆ, ಅವುಗಳ ಅಭಿವೃದ್ಧಿಗಾಗಿ ದುಡಿಯ ಬಯಸುವ ಶ್ರದ್ಧೆ–ನಾಡಿಗೆ ಸತ್ಫಲಗಳನ್ನು ನೀಡಬೇಕಾ

ಗಿದೆ. ಮುಂದೆ ಅವರ ಜೀವಿತಕಾಲದಲ್ಲಿ ಗ್ರಂಥಗಳ ಪ್ರಕಟನೆಯ ಕಾರ್ಯ ಯಶಸ್ವಿಯಾಗಿ ನಡೆದು, ಉದ್ಗ್ರಂಥಗಳೇ ಹೊರಬರಲಿ, ಈಗಾಗಲೇ ಪ್ರಕಟವಾದ ಗ್ರಂಥಗಳಿಗೆ ಉತ್ತಮ ಟಿಪ್ಪಣಿ, ಹಾಗೂ ಪೋಷಕವಾದ ಮುನ್ನುಡಿ ಹಿನ್ನುಡಿಗಳಿಂದ ಅಭ್ಯಾಸಿಗಳಿಗೆ ಅನುಕೂಲವಾಗುವಂತೆ ಪ್ರಕಟಗೊಳ್ಳುವಂತಾಗಲಿ.

ಸರಕಾರದಿಂದ ನೇಮಿತವಾಗಲಿರುವ ಸಮಿತಿಗಳಲ್ಲಿ ಅವರ ಸೇವೆಯ ಸದುಪಯೋಗವಾಗಲಿ. ಮುಂದೆ ಆಚರಿಸಲಿರುವ ಶ್ರೀ ಭಾರತ ಜ್ಯೋತಿ ಬಸವಣ್ಣನವರ ಜಯಂತ್ಯುತ್ಸವದಲ್ಲಿ ಅವರ ಕಾರ್ಯಗೌರವವು ಪ್ರಮುಖವಾದುದಾಗಲಿ. ಭಗವಂತನು ಅವರಿಗೆ ಆಯುರಾರೋಗ್ಯ ಉತ್ಸಾಹವನ್ನಿತ್ತು ಕರುಣಿಸಲಿ ಎಂದು ಹಾರೈಸುವೆವು.

—ಸ್ವತಂತ್ರ

## ಪದ್ಮಶ್ರೀ ಪ್ರಶಸ್ತಿ

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸುಮಾರು ಎಂಟೂ ಕಾಲು ವರ್ಷಗಳ ಕಾಲ ಅಧ್ಯಕ್ಷರಾಗಿದ್ದು ನಾಡುನುಡಿಗಳಿಗೆ ಸೇವೆ ಸಲ್ಲಿಸಿರುವ ಶ್ರೀಮಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳಿಗೆ ಅವರ ಸಾಹಿತ್ಯ ಸೇವೆಗಾಗಿ ಈ ಸಲದ ಗಣರಾಜ್ಯೋತ್ಸವ ಸಮಯದಲ್ಲಿ ಭಾರತದ ರಾಷ್ಟ್ರಪತಿಗಳು "ಪದ್ಮಶ್ರೀ" ಎಂಬ ಪ್ರಶಸ್ತಿಯನ್ನಿತ್ತು ಗೌರವಿಸಿರುವುದು ನಮಗೆ ತುಂಬಾ ಸಂತೋಷವನ್ನುಂಟುಮಾಡಿದೆ. ಶಾಸ್ತ್ರಿಗಳು ದಕ್ಷರು. ಶಾಲೆಯ ಉಪಾಧ್ಯಾಯರಾಗಿ, ಕೀರ್ತನಕಾರರಾಗಿ, ಪತ್ರಿಕೆಯ ಸಂಪಾದಕರಾಗಿ, ವೀರಶೈವ ಗ್ರಂಥಗಳ ಸಂಶೋಧನಾಕಾರ್ಯದಲ್ಲಿ ಅಮೋಘ ಸೇವೆ ಸಲ್ಲಿಸಿ, ಅರಮನೆ ಮತ್ತು ಗುರುಪೀಠ ಹಾಗೂ ಸಾರ್ವಜನಿಕರಿಂದ ಗೌರವ ಸಂಪಾದಿಸಿ ಅನೇಕ ಬಿರುದಾವಳಿಗಳನ್ನು ಪಡೆದು, ಕರ್ನಾಟಕದಲ್ಲಿ ಒಬ್ಬ ಗಣ್ಯವ್ಯಕ್ತಿ ಆಗಿದ್ದಾರೆ. ಕರ್ನಾಟಕದ ಏಕೀಕರಣಕ್ಕಾಗಿ ನಾಡಿನ ಮೂಲೆ ಮೂಲೆಗೂ ಸುತ್ತಿ ತಮ್ಮ ಕೀರ್ತನ ಮತ್ತು ಭಾಷಣಗಳಿಂದ ಕನ್ನಡಿಗರನ್ನು ಚೇತನಗೊಳಿಸಿದ್ದಾರೆ. ಅನೇಕ ಪ್ರಾಚೀನ ವೀರಶೈವ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಅದರ ಅಭಿವೃದ್ಧಿಗಾಗಿ ದುಡಿದಿದ್ದಾರೆ. ಕೇಂದ್ರ ಸರ್ಕಾರ ಅವರಿಗೆ 'ಪದ್ಮಶ್ರೀ' ಪ್ರಶಸ್ತಿ ಇತ್ತು ಗೌರವಿಸಿರುವುದು ಉಚಿತವಾಗಿದೆ. ಇನ್ನೂ ಅವರ ಯಶಸ್ಸು ಬೆಳಗಲಿ, ನಾಡುನುಡಿಗಳಿಗೆ ಅವರಿಂದ ಹೆಚ್ಚಿನ ಸೇವೆ ಸಲ್ಲಲಿ.

—ಜೀವನ

## "ಪದ್ಮಶ್ರೀ"

ಆಗೊಮ್ಮೆ ಈಗೊಮ್ಮೆ ನಮ್ಮೆಡೆಗೆ ಹೊರಳುವ ಈ ಗೌರವ ಈ ಸಲ ಕನ್ನಡಿಗರಿಗರಿಬ್ಬರಿಗೆ ಬಂದಿದೆ. ಹಿಂದೂಸ್ಥಾನ ಮಶೀನ ಟೂಲ್ಸ್ ಫ್ಯಾಕ್ಟರಿಯ ಮ್ಯಾನೇಜಿಂಗ ಡೈರೆಕ್ಟರ್ ಶ್ರೀ ಎಸ್. ಎಂ. ಪಾಟೀಲ ಮತ್ತು ಸಾಹಿತಿ, ಕೀರ್ತನಕಾರ, ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ ಶ್ರೀ ಶಿವಮೂರ್ತಿಶಾಸ್ತ್ರಿಗಳಿಗೆ 'ಪದ್ಮಶ್ರೀ' ಪ್ರಶಸ್ತಿ ದೊರೆತುದು ಕನ್ನಡಿಗರಿಗೆ ತುಂಬ ಸಂತಸವನ್ನುಂಟು ಮಾಡಿದೆ.

ಶ್ರೀ ಶಿವಮೂರ್ತಿಸ್ವಾಮಿಗಳು ಕೀರ್ತನಕಾರರು, ಸಾಹಿತಿಗಳು, ಆಸ್ಥಾನ ವಿದ್ವಾಂಸರು. ಅವರು ಅನೇಕ ಪುಸ್ತಕಗಳನ್ನು ವೀರಶೈವ ಧರ್ಮ ಹಾಗೂ ಸಾಹಿತ್ಯ ಕುರಿತು ಬರೆದಿದ್ದಾರೆ. ಒಂದು ಪತ್ರಿಕೆಯ (ಶರಣ ಸಾಹಿತ್ಯ) ಸಂಪಾದಕರೂ ಅವರಹುದು. ಇತ್ತೀಚಿನ ವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಸ್ಥಾನವೂ ಅವರದಾಗಿತ್ತು. ಶಾಸ್ತ್ರಿಗಳ ಕನ್ನಡ ಸಾಹಿತ್ಯ ಸೇವೆಗೆ 'ಪದ್ಮಶ್ರೀ' ಪ್ರಶಸ್ತಿಯು ಒಂದು ರಾಷ್ಟ್ರೀಯ ಮೆಚ್ಚುಗೆ.

— ಕರ್ಮವೀರ



# 'ಜಗನ್ಮಾಯಿಕಂ ವಾ ಪ್ರಾಸಾದಿಕಮ್'


## ಲೇಖಕಃ–ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರೀ


ಶ್ಲೋಕ॥ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥ ೧ ॥
ಚಿನ್ಮಯಂ ಜಯದೇವಾಖ್ಯಂ ಯತಿರಾಜಂ ತಪೋಧನಂ ।
ಶಿವಯೋಗಸಮಾರೂಢಂ ವಂದೇಽಹಂ ತಂ ಜಗದ್ಗುರುಂ ॥ ೨ ॥

ವೃತ್ತ ॥ ಶ್ರೀ ನಂದೀಶ್ವರ ಭೃಂಗಿ ವೀರ ವೃಷಭ ಸ್ಕಂದಾಸ್ತಥಾ ಶೈಲಜಾ ।
ಸ್ಫೂರ್ಜದ್ದಾರುಕ ರೇಣುಕಾದಿ ಗಣಕಾಃ ಸಾನಂದ ಕುಭೋದ್ಭವಾ ॥
ಪೂರ್ಣಾನಂದ ಭೃಗೂಪಮನ್ಯು ಕಣಭೃಗ್‌ಭ್ರಾಜದ್ದಧೀಚ್ಯಾದಯೋ ।
ಜೀಯಾಸುಸ್ಸ್ಫುಟ ವೀರಶೈವ ನಿಯುತಾಃ ಪ್ರಾಂಚಃ ಪರಂ ಪಂಡಿತಾಃ ॥ ೩ ॥

ಶ್ರೀಶ್ರೀ ಅರಭಾವಿ ಪುಣ್ಯಾರಣ್ಯ ಶ್ರೀಮನ್ನಿರಂಜನ ಮಹಾಂತಸ್ವಾಮಿನಃ,
ಸನ್ಮಾನ್ಯಾಃ ಅಧ್ಯಕ್ಷಮಹಾಶಯಾಃ, ಪಂಡಿತಪ್ರಕಾಂಡಾಃ, ಸ್ವಾಗತಾಧ್ಯಕ್ಷಾಃ ಸದಸ್ಯವರೇಣ್ಯಾಶ್ಚ,

ಅಸ್ಮಿನ್ ಶ್ರೀಮದಥಣೀ ಮುರುಘೇಂದ್ರ ಶಿವಯೋಗಿನಾಂ ಯಾತ್ರಾಪ್ರಸಂಗೇ ಅನಯಾ ಸಭಯಾ ಆಜ್ಞಪ್ತೋಽಹಂ ಭವತಾಂ ಸನ್ನಿಧೌ ಕಿಂಚಿದಿವ ಆಸ್ಮಾಕೀನಂ ಪ್ರಾಚೀನಂ ಮತಮಧಿಕೃತ್ಯ ಭಾಷಣಂ ಕರ್ತುಂ ಉದ್ಯತೋಽಸ್ಮಿ.

ಅಸ್ಮಾಕಂ ಭಾರತೀವರ್ಷೇ ಅನೇಕಾನಿ ದರ್ಶನಾನಿ ಮುನಿಭಿಃರಚಿತಾನಿ ತತ್ತನ್ಮತಾಚಾರ್ಯೈಃಶ್ಚ ಪ್ರವರ್ತಿತಾನಿ ತಾನಿ ಸ್ವಭಾಷ್ಯಾದಿ ಗ್ರಂಥೈಶ್ಚವಿಸ್ತೃತಾನಿ ವಿರಾಜಂತೇ.

ತತ್ರ ದರ್ಶನೇಷು ಪ್ರತ್ಯಕ್ಷೀಭೂತಸ್ಯ ಅಸ್ಯಜಗತಃ ಜಡಚೇತನಾತ್ಮಕಸ್ಯಕಶ್ಚನ ಕರ್ತಾ ವರ್ತತ ಇತಿ ಬಹುಭಿಃ ಮುನಿಭಿಃ ಆಚಾರ್ಯೈಶ್ಚ ಪ್ರತಿಪಾದಿತಮೇವ. ತತ್ರದಾರ್ಶನಿಕಾನಾಂ ಪ್ರಾಚೀನಃ ಕಪಿಲೋನಾಮ ಮಹರ್ಷಿಃ ಸ್ವದರ್ಶನೇ ಸಾಂಖ್ಯಾಖ್ಯೇ ಅಸ್ಯಜಗತಃ ಕರ್ತ್ರೀ ಪ್ರಕೃತಿರಿತಿ ಪ್ರತಿಪಾದಯತಿಸ್ಮ. ತಥಾ ಸ್ವಶಿಷ್ಯ ಪ್ರಶಿಷ್ಯದ್ವಾರಾ ತದ್ದರ್ಶನಂ ಸರ್ವತ್ರ ಪ್ರಚಾರಿತಂ.

ಸಾಂಖ್ಯಮತೇಃ ಪ್ರಕೃತೇಃ ಜಡತಯಾ ಸೃಷ್ಟ್ಯಾದಿ ಕಾರ್ಯಂ ಕರ್ತುಂ ನೈವಶಕ್ನೋತಿ ಸಾ ಇತಿ ಅಕ್ಷೇಪೇ ಸತಿ ತೇಹಿ "ಯಥಾ ಅಯಸ್ಕಾಂತಃ ಸ್ವಸನ್ನಿಧಿಸ್ಥಿತಾಂ ಸೂಚೀಂ ಚಾಲಯತಿ, ತಥಾ ಪುರುಷಸನ್ನಿಧಿಸ್ಥಿತಾಯಾಃ ಪ್ರಕೃತೇಃ ಸೃಷ್ಟಿ ಸಾಮರ್ಥ್ಯಸ್ಯ ಜಾಯಮಾನತಯಾ ಪ್ರಕೃತಿರೇವ ಜಗತಃಕರ್ತ್ರೀ ಇತಿ ಸಮರ್ಥಯಂತಿ. ಪುರುಷಸ್ತು ಪದ್ಮಪಲಾಶವತ್ ನಿರ್ಲಿಪ್ತಃ, ಸರ್ವಸ್ಯಚ ಸಾಕ್ಷೀಭೂತಃ ಇತಿ ನಿರೂಪಿತಃ ಜಗತಿ ಸರ್ವತ್ರ, ಸತ್ವಂರಜಃತಮಶ್ಚೇತಿ ತ್ರಯಾಣಾಂ ಗುಣಾನಾಂ ಉಪಲಭಮಾನತಯಾಚ ತೇಷಾಂ ಕಾರಣಭಾವಾತ್ ಪ್ರಕೃತೇಃ ಜಗತ್ಕರ್ತೃತ್ವಂ ಕಥಯಂತಿ.

ಅತಏವ ಪ್ರಕೃತಿ ಕಾರಣವಾದಂ ತತ್ಕಾಲೀನಾ ವಿಮರ್ಶಕಾಃ ಸೇಶ್ವರಸಾಂಖ್ಯಾಃ ಆಕ್ಷಿಪ್ಯ ಚೈತನ್ಯವಾದಂ ದೃಢೀಕೃತವಂತಃ. ತಥಾಹಿ ಅಚೇತನಾತ್ಮಿಕಾಯಾಃ ಪ್ರಕೃತೇಃ ಜಗತ್ಕರ್ತೃತ್ವಾದಿಕಸ್ಯ ಅಸಂಭವಾತ್ ಚೇತನಾಯಾ ಏವ ತತ್‌ಕರ್ತೃತ್ವಂ ಅಂಗೀಕರಣೀಯಮಿತಿ. ಜಡ ಪ್ರಕೃತಿ ವಾದಸ್ಯ ನಿರಸನಾರ್ಥಂ "ಮಾಯಾಂತು

ಪ್ರಕೃತಿಂ ವಿದ್ಯಾತ್ । ಮಾಯಿನಂತು ಮಹೇಶ್ವರಂ" ಇತಿ ಶ್ರುತಿವಾದಂ ಮಂಡಯಂತಿಚ. ಏವಂ ಸ್ವಮತ ಸಮರ್ಥನಾರ್ಥಂ ತ್ಯೈಃ ದತ್ತಮುದಾಹರಣಂ ಖಂಡ ಯಂತಿಚ. ದೃಷ್ಟಾಂತೀಭೂತಂ ವಸ್ತುದ್ವಯಮಪಿ ಅಚೇತನಾತ್ಮಕಂ, ದಾರ್ಷ್ಟಾಂತಿಕೇಚ ಏಕಂ ಚೇತ ನಾತ್ಮಕಂ ಅನ್ಯದಚೇತನಾತ್ಮಕಂ. ಅತಃ, ಕಥಂ ದೃಷ್ಟಾಂತ ದಾರ್ಷ್ಟಾಂತಿಕ ಭಾವಃ ? ಅಪಿತು, ನಸ್ಯಾ ದೇವ. ಅತಃ, ಜಗತ್ ಸೃಷ್ಟಿಕರ್ತೃತ್ವಂ ನ ಅಚೇತ ನಾತ್ಮಿಕಾಯಾಃ ಪ್ರಕೃತೇಃಕಿಂತು ಚೈತನ್ಯಸ್ಯೈವ ಇತಿ ಸ್ವೀಯಚೈತನ್ಯಕರ್ತೃತ್ವಂ ಸಾಧಯಂತಿಸ್ಮ. ಪುರುಷಸ್ಯ ಚೇತನತಯಾ ತತ್ಕರ್ತೃತ್ವಸ್ಯ ಅಂಗೀ ಕಾರೇ ದ್ವೈತಾಪತ್ತ್ಯಾಚ ನಕತೃತ್ವಂ ಉರರೀಕೃತಂ. ಕಿಂತು ತತ್ಪ್ರೇರಕಃ ಜಗದಧಿಷ್ಠಾನಭೂತಃ ಸಕಲ ಕಾರ್ಯಕಾರಣಂ ಕಶ್ಚನ ಈಶ್ವರಃ ಸ್ವಪ್ರಕಾಶ ಚೈತನ್ಯ ರೂಪಃ ಜಗತ್ಕಾರಣತಯಾ ಅಂಗೀಕೃತಃ.

ಪ್ರೇರಕಾನಂತತ್ವೇ ಜಗದ್ವಿನಾಶಾರಗಶ್ಯಾಚ ತತ್ಪ್ರೇ ರಕಸ್ಯ ಏಕತಯಾ ಏಕೇಶ್ವರವಾದಂ ಮಂಡಯಿತ್ವಾ ಸೇಶ್ವರಾದ್ವೈತಿನಃ ಸೇಶ್ವರಸಾಂಖ್ಯಾಶ್ಚ ಇತಿ ಖ್ಯಾತಿವ ಭಜಂತ. ತಏವಹಿ ಕಾಲಾಂತರೇ ಶಿವಾದ್ವೈತವಾ ದಿನಃ, ವೀರಶೈವಾಃ, ದ್ವೈತಾದ್ವೈತಿನಃ, ವಿಶೇಷಾದ್ವೈ ತಿನಃ, ಶಕ್ತಿವಿಶಿಷ್ಟಾದ್ವೈತಿನಶ್ಚ ಇತಿ ನಾಮಾಂತರೇಣ ಆಹೂತಾ ಇತಿ ಅನುಮಾತುಂ ಶಕ್ಯತೇ ಶ್ರೀಕರಭಾಷ್ಯೇ ಅಸ್ಯೈವ ಶಿವಾದ್ವೈತಸ್ಯಸೇಶ್ವರಾದ್ವೈತಮಿತಿ ಅಭಿ ಧಾನಂ ವರ್ತತಇತಿ. ಅಸ್ಮಿನ್ನೇವಮತೇ ಸಾಂಖ್ಯ ಯೋಗೌ ಅಂತರ್ಭೂತೌ ಇತ್ಯಪಿ ಸಮರ್ಥಿತಮಸ್ತಿ.

"ಭೋಕ್ತಾ ಭೋಜ್ಯಂ ಪ್ರೇರಯಿತಾ ಸರ್ವಮ್ಮೇ ತತ್ತ್ವಚ್ಚರಾಚರಮ್ ಭಾವಯೇತ್ ಶಿವರೂಪೇಣ ಶಿವೋ ಭವತಿ ವಸ್ತುತಃ" ಇತ್ಯಾದಿನಾ ಪ್ರಾಚೀನತಮೇ ಸಿದ್ಧಾಂತಶಿಖಾಮಣೌಬಹು ಸುಷ್ಟು ಪ್ರತಿಪಾದಿತಂ.ಶ್ರೀ ಶಂಕರಾಚಾರ್ಯಾಸ್ತುಸ್ವೀಯೇಷುಬ್ರಹ್ಮಸೂತ್ರಭಾಷ್ಯಾದಿ ಗ್ರಂಥೇಷು ಸಾಂಖ್ಯಮತಂಖಂಡಯಿತ್ವಾಬ್ರಹ್ಮಾದ್ವೈ ತಮತಂ ನಿರೂಪಿತವಂತಃ. ತತ್ರಬ್ರಹ್ಮಣಃ ಪರಮ ಕಾರಣತ್ವೇಪಿಮಾಯಾಯಾಃ ಜಗತ್ಕಾರಣತ್ವಂ ಅಂಗೀ ಕೃತ ವಂತಶ್ಚ. ಸಾಚ ಬ್ರಹ್ಮಾಶ್ರಿತಜೀವ ವಿಷಯಣೀತಿ ನಿರೂಪಯಂತಿ. ತೇಹಿ ಬ್ರಹ್ಮಾದ್ವೈತಂ, ಸಾಧ ಯಿತುಂ "ಬ್ರಹ್ಮಸತ್ಯಂ ಜಗನ್ಮಿಥ್ಯಾ" ಇತಿ ಉದ್ಘೋ ಷಿತವಂತಃ. ತದರ್ಥಂಚ "ರಜ್ಜುಸರ್ಪ, ಶಶಶೃಂಗ, ಶುಕ್ತಿರಜತ, ಸ್ಥಾಣುಚೋರನ್ಯಾಯಮುದಾಹರಂತಿ ವಸ್ತುತಃ ಜಗನ್ನಾಸ್ತಿ. ಕಾಲತ್ರಯೇಽಪಿ ಜಗತೋ ವಿದ್ಯಮಾನತಯಾ ಮಿಥ್ಯಾ ಇತಿ ವ್ಯವಹರಂತಿ. ಮಾಯಯಾ ಭಾಸಮಾನತ್ವಾತ್ ಅಸ್ಯಜಗತಃ ಮಾಯಿ ಕತ್ವಂ ಅಭಾಸತ್ವಂಚ ಮಾಯಾವಾದಂ ಸಮರ್ಥ ಯಂತಿ. ಸೂತ್ರಭಾಷ್ಯೇ ಅಧ್ಯಾಸವಾದಂಚ ಆಶ್ರಿತ್ಯ ಜಗತೋ ಮಾಯಿಕತ್ವಮಂಗೀಕುರ್ವಂತಿ. 'ತಮೇ ತಮಧ್ಯಾಸಂ ಪಂಡಿತಾಃ ಅವಿದ್ಯಾ ಇತಿ ವದಂತಿ. ಇತಿ.

ಇತಿ ಪ್ರಾಂಜಲತಯಾ ನಿರೂಪಯಂತಿಸ್ಮ. ಜಗ ತೋಮಾಯಿಕತ್ವ ಕಥನೇ ಅನ್ಯದೇಕಂ ಬೀಜಂ ವರ್ತತೇ. ತನ್ಮತೇ ಬ್ರಹ್ಮಣೋ ನಿರ್ವಿಶೇಷತಯಾ ತಸ್ಯ ಜಗತ್ ಕತೃತ್ವೇ ನಿರ್ವಿಶೇಷ ಭಂಗಃ ಸ್ಯಾದೇವ. ಸವಿಶೇಷತ್ವೇಚ ಬ್ರಹ್ಮಣೋ ದ್ವೈತಾಪತ್ತ್ಯಾ ಬ್ರಹ್ಮಾದ್ವೈತಂ ನೈವ ಸಂಘಟತೇ. ಅತ ಏವ, ಅಧ್ಯಾಸಮೂಲಕತಯಾ ಜಗತಃ ಮಾಯಿಕತ್ವಮುಪಪಾದ್ಯ ಬ್ರಹ್ಮಾದ್ವೈತ ವಾದಮೇವ ಆಮೂಲಾಗ್ರಂ ಸ್ವಭಾಷ್ಯೇಷು ಪ್ರತಿ ಪಾದಯಂತಿಸ್ಮ.

ಶಿವಾದ್ವೈತಿನಸ್ತು ಸ್ವಮತಾನುಸಾರೇಣ ಜಗತೋ ಶಿವಾಭಿನ್ನಚಿಚ್ಛಕ್ತೇಃ ವಿಕಾಸರೂಪತ್ವಾತ್ ಮಿಥ್ಯಾತ್ವಂ ನಾಂಗೀಕುರ್ವಂತಿ. ಮಾಯಾತತ್ತ್ವಮೇತೈರಂಗೀ ಕೃತಂ. ನಸಾಮಿಥ್ಯಾ. ಕಿಂತು ತಥ್ಯಭೂತಾ (ಚಿಚ್ಛಕ್ತೇರಪರರೂಪಾ) ಏಕಸ್ಯ ಸತ್ಯತ್ವಂ ಇತರಸ್ಯಚ ಮಿಥ್ಯಾತ್ವಂ ನೈವಯುಕ್ತಮೇತತ್. ಬ್ರಹ್ಮಾದ್ವೈತ ಮತೇ ಸತ್ಯಮಿಥ್ಯಾದಿನಾದ್ವೈತಮೇವಸ್ಯಾತ್ನ ಅದ್ವೈತ ಮಿತಿಚ ಆಕ್ಷಿಪಂತಿ. ಜಗತಃ ಪ್ರತ್ಯಕ್ಷಸಿದ್ಧ ತಯಾನಾಭಾಸಮಾನತಾ "ತತ್ರಲೀನಮಭೂತ್ ಪೂರ್ವಂ ಚೇತನಾಚೇತನಂ ಜಗತ್" ಇತಿ ಪ್ರಮಾ ಣಾನುರೋಧೇನ ಭೂತೇಪಿ ಶಿವಾ ಭಿನ್ನತಯಾ ಜಗದಾ ಸೀದೇವೇತಿ ಸ್ವೀಕುರ್ವಂತಿ. ಅತಃ ತ್ರೈ[illegible]ಲಿಕ ನಿಷೇಧ ಪ್ರತಿಯೋಗಿತ್ವಂ ನಾಸ್ಮಿನ್ ಶಿವಾದ್ವೈ[illegible] ಸಂಭವತೀತಿ

ನಿರೂಪಯಂತಿ. ಶಿವಸ್ಯ ಬ್ರಹ್ಮಣೋಸ್ವಾಭಿನ್ನ ಸ್ವ ಸ್ವರೂಪಮಾಯಾದ್ವಾರಾ ಕಾರಣತ್ವಂ ಜಗತಃ ಸ್ವಾಭಿನ್ನಮಾಯಾಯಾಃ ಬ್ರಹ್ಮಣಶ್ಚ ಭೇದಃ ಏವಂ ಮಾಯಾಯಾಃ ಜಗದುಪಾದಾನತಯಾ ಜಗನ್ಮಾಯ ಯೋರಭೇದಸ್ಯ ಸದಾಸಿದ್ಧತಯಾ "ಸರ್ವಂ ಶಿವಮಯಂ ಜಗದಿತಿಚ" ನಿರೂಪಯಂತಿ ಜಗನ್ಮಾಧ್ಯಾಸಿಕಂ. ಕಿಂತು ಜಗತಿ ಭಾಸಮಾನಂ ದ್ವೈತಂ ಮಿಥ್ಯಾಭೂತಂ, ಶಿವಾದ್ವೈತೇ ಮಾಯಾ ಬ್ರಹ್ಮಾದ್ವೈತ ಇವ ನ ಅಸತ್. ದ್ವೈತ-ವಿಶಿಷ್ಟಾದ್ವೈತವಾದಿನೋಪಿಮಾಯಾಯಾಃ ಸತ್ಯ ತ್ವಂ ಅಂಗೀಕುರ್ವಂತೀತಿ ಅತ್ರಸ್ಮರ್ತ್ತವ್ಯಂ. ಕಿಂತು ಸದೇವ, ಅಸತೋವಸ್ತುನಃ ನಕಸ್ಯಾಪಿ ಕಾರಣತ್ವಂ ಸಂಭವತಿ. ವಂಧ್ಯಾಪುತ್ರಾದೇರಿವ ಇತಿ ಸ್ವಮತ ಮಲಂಕುರ್ವಂತಿ. ಶಿವಾಭಿನ್ನಾ ಸದ್ರೂಪಾಚ ಮಾಯಾ ಜಗತಃ ಕಾರಣಂ. ಅತ ಏವ ಶಿವಾದ್ವೈತಮತೇ ಜಗತೋನಾಭಾಸತ್ವಂ. ಕಿಂತು ವಿಕಾಸೋ ದೃಢೀಕ್ರಿಯತೇ. ಸತ್ಯಭೂತಾತ್ ಶಿವಾತ್ ಚಿಚ್ಛಕ್ತಿದ್ವಾರಾ ಜಗದ್ವಿಕಾಸಂ ಪ್ರಾಪ್ನೋತಿ. ಅತೋನ್ಯೈತೀದಂತ್ರೈಕಾಲಿಕ ನಿಷೇಧ ಪ್ರತಿಯೋಗಿ ಸ್ಯಾತ್ ಶಿವಸ್ಯಜಗದಧಿಷ್ಠಾನಕಾರಣತ್ವಮುಕ್ತಂ ಶ್ರೀಕರ ಭಾಷ್ಯೇ 'ಜಗದಧಿಷ್ಠಾನಭೂತ ಪರಶಿವೇಚ್ಛಯಾ ಜಗ ತ್ಕಾರಣಂ ಸನ್ಮಾಯೇತಿ ವದಂತಿ. ಪ್ರತ್ಯಕ್ಷಂ ವಸ್ತು ನಾಸ್ತೀತಿ ವಕ್ತುಂನೈವಶಕ್ಯತೇ ಸದೇವ ವಸ್ತುವಿಕಾಸಂ ಲಭತೇನಾಸದೇವಾಭಾಸತೇ.

ಶಿವಾದ್ವೈತಮಿದಂ ಅನುಸರತಿ ವಿಜ್ಞಾನಂ. ಕಿಂತು ನ ಬ್ರಹ್ಮಾದ್ವೈತಂ. ಬೌದ್ಧವಾದೇಚ ಆತ್ಮನಾ ತಥಾ: ಈಶ್ವರಸ್ಯಚ ನಾಂಗೀಕಾರಾತ್ ತನ್ಮತಂ ಅಚೇತನ ಮಿತ್ಯಾಕ್ಷಿಪ್ಯ ಸ್ವಚೈತನ್ಯವಾದಂ ಕಥಯಂತಿಸ್ಮ. ಏವಂ ಪೂರ್ವೋಕ್ತಾಯಾಃ ಸನ್ಮಾಯಾಯಾಃ ಶಿವಾನುಗ್ರಹ ರೂಪತಯಾ ಅರ್ಥಾತ್ ಶಿವಪ್ರಸಾದರೂಪತಯಾ ಜಗತಃ ಸನ್ಮಾಯಿಕತ್ವಂ ಅಥವಾ ಪ್ರಾಸಾದಿಕತ್ವಂ ಅನುಗ್ರಾಹಕತ್ವಂವಾಸ್ಯಾದೇವ. ಅನುಗ್ರಹಸ್ಯೈ ವಾಸ್ಮಿನ್ ಶಿವಾದ್ವೈತಮತೇ 'ಪ್ರಸಾದಃ' ಇತಿ ವ್ಯವ ಹಾರೋ ದೃಶ್ಯತೆ. ತಸ್ಮಾತ್ ಪ್ರಾಸಾದಿಕತ್ವಂ ಅಸ್ಯ ಜಗತಃ ಸಂಭವತೀತಿ ಸಂಕ್ಷೇಪೇಣ ಶಿವಾದ್ವೈತಸ್ಯ ಏಕ ದೇಶವಿಷಯಃ ನಿರೂಪಿತೋಮಯಾ.

ಅಸ್ಮಿನ್ ಶುಭಾವಸರೇ, ಮದೀಯಾಲ್ಪಸೇವಾ ಯೈವ ಸಂತುಷ್ಟಾಃ ಅಖಿಲ ಭಾರತೀಯ ವೀರಶೈವ ವಿದ್ವತ್ ಸಭಾಸದಃ, ಭವಂತಃ ಮಾಂ 'ಸಮಾಜ ಭಾಸ್ಕರಃ' ಇತಿ ಉಪಾಧಿನಾ ವಿಭೂಷಿತವಂತಃ. ಇತಿ ಸರ್ವಾನ್ ಸದಸ್ಯವರೇಣ್ಯಾನ್ ಸಧನ್ಯವಾದಂ ಅಭಿ ನಂದ್ಯ. ಧಾರವಾಡ ಮುರುಘಾಮಠಾಧ್ಯಕ್ಷ ಲಿಂಗೈಕ್ಯ ಶ್ರೀಗುರು ಮೃತ್ಯುಂಜಯ ಮಹಾಸ್ವಾಮಿನಾಂ ಕರಕಂಜ ಸಂಜಾತಾನಾಂ ಶ್ರೀ ಮಹಾಂತ ಶಿವಯೋಗಿನಾಂ ಪಾದಾರವಿಂದೇ ಪುನಃ ಪುನಃ ಪ್ರಣಮ್ಯಚ ಏತದವ ಕಾಶಂ ಕಲ್ಪಿತವತಾಂ ತತ್ರಭವತಾಂ ಸವಿನಯಂ ಧನ್ಯ ವಾದಂ ಸಮರ್ಪ್ಯ ಮಯಾ ವಿರಮ್ಯತೆ.

॥ ಸರ್ವೇಜನಾಃ ಸುಖಿನೋಭವಂತು ॥

ದಿ॥ ೨೬-೧-೧೯೬೬ ಧಾರವಾಡ

ಈ ಭಾಷಣವು ತಾ॥ ೨೭-೧-೬೬ ರಂದು ಧಾರವಾಡ ಮುರುಘಾಮಠದಲ್ಲಿ ಅ. ಭಾ. ವೀರಶೈವ ಸಂಸ್ಕೃತ ವಿದ್ವತ್ ಪರಿಷತ್ತಿನಲ್ಲಿ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ನಿರೂಪಿಸಿದುದು. (ಸಂ.)

ಕನ್ನಡ ನಾಡಿನ ಸರ್ವತೋಮುಖ ಏಳಿಗೆಗೆ ಇಡೀ ಜೀವಮಾನವನ್ನೇ ಮೀಸಲು ಮಾಡಿ ನಿರಂತರ ಶ್ರಮಿಸುತ್ತಿರುವ ಮಹಾ ಸೇವಕರಲ್ಲಿ ಅಗ್ರಪಂಕ್ತಿಗೆ ಸೇರತಕ್ಕವರು ಬಹಳ ಕಡಿಮೆ ಜನ. ಅಂಥ ಕೆಲವೇ ಹಿರಿಯರಲ್ಲಿ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳೂ ಒಬ್ಬರು.

ಶ್ರೀ ಶಾಸ್ತ್ರಿಗಳು ಅಪ್ರತಿಮ ಸಾಹಸ ಶೀಲರು. ಇಂದಿನ ಪೀಳಿಗೆಯವರು ಹೇಳಿಕೊಳ್ಳುವಂಥ 'ಕಾಲೇಜು ಶಿಕ್ಷಣ'ವನ್ನು ಅವರು ಪಡೆಯದಿದ್ದರೂ 'ಡಾಕ್ಟರೇಟ್' ಪಡೆದ ಆಧುನಿಕ ಪಂಡಿತವರೇಣ್ಯರು ಶ್ರೀ ಶಾಸ್ತ್ರಿಗಳ ಮುಂದೆ ಖಂಡಿತ ನಿಲ್ಲಲಾರರು. ಸಂಸ್ಕೃತ-ಕನ್ನಡ ಭಾಷೆಗಳನ್ನು ಅವರು ಆಳವಾಗಿ ಅಧ್ಯಯನ ಮಾಡಿದವರು. ವಿಶಾಲ ಪ್ರಪಂಚವೇ ಅವರ ವಿಶ್ವವಿದ್ಯಾನಿಲಯ. ಅಲ್ಲಿ ಪಡೆದ ಅನುಭವ ಅಪಾರ. ಜೊತೆಗೆ ದೇಶಾಟನ. ಪಂಡಿತ ಜನರ ಸಂಪರ್ಕ ಇವು ಶಾಸ್ತ್ರಿಗಳನ್ನು ಮೇಧಾವಿಗಳನ್ನಾಗಿ ಮಾಡಿದುವು.

ಶ್ರೀ ಶಾಸ್ತ್ರಿಗಳು ಹುಟ್ಟು ಪ್ರತಿಭಾಶಾಲಿಗಳು. ಪ್ರವಾಸವೆಂದರೆ ಅವರಿಗೆ ತುಂಬ ಪ್ರೀತಿ. ಕನ್ನಡ ನಾಡನ್ನು ಹತ್ತಾರು ಸಲ ಸುತ್ತಾಡಿ ಮೂಲೆ ಮೂಲೆಗಳನ್ನು ನೋಡಿ ಬಂದಿದ್ದಾರೆ. ನಾಡಿನ ಕಲೆ, ಸಾಹಿತ್ಯ, ಇತಿಹಾಸಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದ್ದಾರೆ. ಈ ನಾಡಿನ ಅಭ್ಯುದಯಕ್ಕಾಗಿ ಚಿಂತಿಸಿದ್ದಾರೆ.

ಶ್ರೀ ಶಿವಮೂರ್ತಿಶಾಸ್ತ್ರಿಗಳವರು ಅಸಮಾನ ವಾಗ್ಮಿಗಳು. ಅವರ ಹಾಗೆ ನಿರರ್ಗಳವಾಗಿ ಮಾತನಾಡುವ ಭಾಷಣಕಾರರು ಇಡೀ ನಾಡಿನಲ್ಲಿ ನಾಲ್ಕಾರು ಜನ ಸಿಗುತ್ತಾರೋ ಇಲ್ಲವೋ ? ಹಾಗೆಯೇ ಅವರು ಕೀರ್ತನಕಲಾವಿಚಕ್ಷಣರು. ಕೀರ್ತನಕಾರರಾಗಿಯೇ ಅವರು ಇಡೀ ನಾಡಿನಲ್ಲಿ ಎಷ್ಟೋ ಬಾರಿ ಸಂಚರಿಸಿ ಜನ ಜಾಗೃತಿಯನ್ನುಂಟುಮಾಡಿದರು. ಜೊತೆಗೆ 'ಶರಣ ಸಾಹಿತ್ಯ' ಮಾಸಿಕದ ಸಂಪಾದಕರಾಗಿ ಅವರು ಪತ್ರಿಕೋದ್ಯಮದಲ್ಲಿಯೂ ತಮ್ಮ ಸೇವೆ ಸಲ್ಲಿಸುತ್ತಿದ್ದಾರೆ. 'ಸ್ವತಂತ್ರ ಕರ್ನಾಟಕ' ಪತ್ರಿಕೆ ಐದು ವರ್ಷ ನಡೆಸಿ ಬಿಟ್ಟಿದ್ದಾರೆ. ಸಂಶೋಧಕರಾಗಿ ಅನೇಕ ಪ್ರಾಚೀನ ಕಾವ್ಯಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ.

ಹೀಗೆ ನಾಡಿಗೆ ನುಡಿಗೆ ಅಖಂಡ ಸೇವೆ ಸಲ್ಲಿಸಿ ಜನಪ್ರಿಯರಾಗಿರುವ ಶ್ರೀಯುತರಿಗೆ ಈ ಸಲದ ಗಣರಾಜ್ಯೋತ್ಸವದಂದು ರಾಷ್ಟ್ರಪತಿಗಳು 'ಪದ್ಮಶ್ರೀ' ಪ್ರಶಸ್ತಿ ಇತ್ತು ಗೌರವಿಸಿದುದು ಸರ್ವ ಸೂಕ್ತವಾಗಿದೆ. ಕನ್ನಡಕ್ಕೆ ಸಂದ ಈ ಗೌರವಕ್ಕಾಗಿ ಕನ್ನಡಿಗರೆಲ್ಲ ಹೆಮ್ಮೆ ಪಡುವಂತಾಗಿದೆ.

ಕಡು ಕಷ್ಟಕರವೆನಿಸುವಷ್ಟು ಅಸ್ತವ್ಯಸ್ತವಾಗಿ ವಿವಿಧ ಆಡಳಿತಕ್ಕೆ ಒಳಪಡಿಸಿದ್ದ ನಾಡನ್ನು ಒಂದುಗೂಡಿಸುವಲ್ಲಿ, ಅವರು ಕೈಕೊಂಡ ಸಂಚಾರ, ಮಾಡಿದ ಪ್ರಚಾರ, ಹಾಗೂ ಜನಜಾಗೃತಿ, ಸರಕಾರಗಳಲ್ಲಿ ಮುಂದಿಟ್ಟ ವಿಚಾರಗಳು, ಕನ್ನಡ ನಾಡಿನ ಏಕೀಕರಣದ ಸಾಧನೆಯಲ್ಲಿ ಅಮೂಲ್ಯವಾದ ಶಕ್ತಿಯೆನಿಸಿವೆ. ಹಿರಿಯ ಧುರೀಣರ ಸಂಘಟನೆಯಲ್ಲಿ ಸೇರಿಕೊಂಡು ಧೈರ್ಯದಿಂದ ಮುನ್ನುಗ್ಗಿದ ಅವರ ಸೇವೆ ಪ್ರಶಂಸಾರ್ಹವಾಗಿದೆ. ರಾಜ್ಯವಿಂದು ಸಮಗ್ರತೆಯ ಆಧಾರದಿಂದ ರಚಿತವಾಗುವಲ್ಲಿ ಅವರ ಸೇವೆಯ ಸೌರಭವೂ ಅಲ್ಲಿ ವಾಸಿಸಲು ಸಾಧ್ಯವಾಗುವಂತಿದೆ.

ಇನ್ನು ಅವರ ಮತ್ತೊಂದು ಮರೆಯಲಾಗದ ಬಹು ಬೆಲೆಯುಳ್ಳ ಬಹುಭಾಗ್ಯವನ್ನು ತಂದ ಕ್ಷೇತ್ರವೆಂದರೆ, ಆದು ಸಾಹಿತ್ಯ ಕ್ಷೇತ್ರ. ಕನ್ನಡದ ಸುಪ್ರಸಿದ್ಧ ಹಿರಿಯ ಸಾಹಿತಿಗಳಾದ ಕೈ॥ ಪಿ.ಆರ್. ಕರಿಬಸವಶಾಸ್ತ್ರಿಗಳ ಸಾಧನಾ ಕ್ಷೇತ್ರದಲ್ಲಿ ಪಳಗಿ ರೂಪುಗೊಂಡ ಅವರು, ಸಾಹಿತ್ಯದ ಪುನರುದ್ಧಾರಕ್ಕೆ ಒಂದು ಸಂಸ್ಕಾರದ ರೂಪು ಗೊಟ್ಟರೆನ್ನಬೇಕು. ಅವರು 'ಶರಣ ಸಾಹಿತ್ಯ' ಪತ್ರಿಕೆಯ ಸಂಪಾದಕರಾಗಿ ಪತ್ರಿಕೋದ್ಯಮದಲ್ಲಿ ಸೇವೆಗೈದರಲ್ಲದೆ, ಆ ಮೂಲಕ ವಿಮರ್ಶಾತ್ಮಕ ಬರೆಹಗಳಿಂದ ವೈಚಾರಿಕ ಶಕ್ತಿಯನ್ನು ಬೆಳಗಿಸುವ, ವಿಚಾರ ಪ್ರಚೋದಕ, ವಿಮರ್ಶಾ ಪೋಷಕ ಲೇಖನಗಳನ್ನು ಪ್ರಕಟಿಸಿದರು. ಅಲ್ಲದೆ ೩೦ ಗ್ರಂಥಗಳನ್ನು ಪರಿಷ್ಕರಿಸಿ, ಸಂಪಾದಿಸಿ ಸೂಕ್ತ ಟಿಪ್ಪಣಿಗಳನ್ನು ಕೊಟ್ಟು ಪ್ರಕಟಿಸಿದ್ದಾರೆಂದರೆ ಅವರ ೪೦ ವರ್ಷಗಳ ಸೇವಾ ಕ್ಷೇತ್ರದಲ್ಲಿ ಆದ ಕಾರ್ಯದ ಬೃಹತ್ತು ಮಹತ್ತುಗಳ ಅರಿವಾಗದಿರದು. ಅವರು ನಿಜಗುಣ ಶಿವಯೋಗಿಗಳ ಕಾಲ ವಿಚಾರದಲ್ಲಿ, ಸೋಮೇಶ್ವರ ಶತಕ ಕರ್ತೃ ನಾಲ್ಕುರಿಕೆ ಸೋಮನಾಥ

ನಲ್ಲ ಪುಲಿಗೆರೆಯ ಸೋಮನೇ ಎಂಬ ವಿಚಾರದಲ್ಲಿ, ಆಧಾರ ಪೂರ್ವಕವಾಗಿ ಸಮರ್ಥಿಸಿ ಸಂಶೋಧನಾತ್ಮಕ ವಾಗಿ ವಿವರಿಸಿ ಪ್ರಕಟಿಸಿದ್ದಾರೆ. ಅವರು ಸಾಹಿತ್ಯ ಪರಿಷತ್ತಿನ ಸದಸ್ಯತನದಲ್ಲಿ ೩೫ ವರ್ಷಗಳಿಂದಲೂ ಇದ್ದು ಅದರ ಸಂಬಂಧವನ್ನು ಹೊಂದಿದ್ದಾರೆ. ಹಾಗೂ ಕಾರ್ಯಕಾರೀ ಸಮಿತಿಯಲ್ಲೂ ಕೆಲಸ ಮಾಡಿದ ಅನು ಭವ ಅವರಿಗಿತ್ತು. ಅದಕ್ಕೆ ಅಧ್ಯಕ್ಷರಾಗಿ ೧೦೦ ತಿಂಗ ಳಿದ್ದು ಸೇವೆ ಸಲ್ಲಿಸಿದ್ದಾರೆ. ಅವರು ಸರಕಾರದೊಂದಿಗೆ ಮಾಡಿಕೊಂಡ ಒಪ್ಪಂದದ ಯೋಜನೆಗಳಿಂದ ಕನ್ನಡ–ಕನ್ನಡ ಕೋಶವನ್ನು ಪ್ರಕಟಿಸುವ ಬಹು ದೊಡ್ಡ ಅಗತ್ಯ ಕಾರ್ಯವನ್ನು ಆರಂಭಿಸಿ ಸುಭದ್ರ ನಾಂದಿ ಹಾಕಿಕೊಟ್ಟರು. ಅದರ ಪ್ರಕಟಣೆ ಆಲಸ್ಯದಿಂದಿರು ವುದು ಶೋಚನೀಯವಾದರೂ, ಅದರ ಆಲಸ್ಯದಿಂದ ಅಮೃತವು ವಿಷವಾಗುವಂಥ ಕೀಳು ಕೆಲಸ ನಡೆಯ ಲಾರದು. ಪರಿಷತ್ತು ಜನತಾ ವಿಶ್ವವಿದ್ಯಾನಿಲಯ ವೆನಿಸುವಂತೆ ಅವರು ಮಾಡಿದ್ದಾರೆ.

ಅವರ ಮುಂದಿನ ಜೀವನವೆಲ್ಲವೂ ಗ್ರಂಥಗಳ ಪ್ರಕಟಣೆಯ ಕಾರ್ಯದಲ್ಲಿ ಮಗ್ನವಾಗಿರುವುದಾಗಿ ಹೇಳಿರುವುದು ಸ್ವಾಗತಾರ್ಹವಾದ ವಿಷಯವೆನಿಸಿದೆ.

'ಪದ್ಮಶ್ರೀ' ಪ್ರಶಸ್ತಿ ವಿಜೇತ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳನ್ನು ಅವರ ಕಚೇರಿಯಲ್ಲಿ ಕಂಡು 'ಅಭಿವಂದನೆಗಳು, ಶಾಸ್ತ್ರಿಗಳೆ' ಎಂದು ನಮ ಸ್ಕರಿಸಿದಾಗ, ಹಸನ್ಮುಖದಿಂದ ನನ್ನನ್ನು ಬರಮಾಡಿ ಕೊಂಡು 'ಎಲ್ಲಾ ಭಗವಂತನ ಕೃಪೆ' ಎಂದು ವಿನಮ್ರ ವಾಗಿ ನುಡಿದರು. ನನ್ನ ಪ್ರಶ್ನೆಗಳಿಗೆ ಸೂಕ್ತ ಉತ್ತರ ವಿತ್ತರು.

—ಸಂದರ್ಶಕ

## ೪೦ ವರ್ಷಗಳ ಸೇವೆ

ಶಾಸ್ತ್ರಿಗಳೆ, ತಾವು ಕನ್ನಡ ನಾಡುನುಡಿಗಳ ಅಭ್ಯುದಯಕ್ಕಾಗಿ [illegible] ವರ್ಷಕ್ಕೆ ಮೇಲ್ಪಟ್ಟು ಶ್ರಮಿಸಿದ್ದೀರಿ. ನಿಮ್ಮ[illegible]ತೆಯೇ ಇನ್ನೂ ಎಷ್ಟೋ ಜನ ಶ್ರಮಿಸಿದ್ದಾರೆ. [illegible], ಕನ್ನಡ ನಾಡು ಎಷ್ಟು ಮುನ್ನಡೆಯಬೇಕೋ ಅಷ್ಟು ಮುನ್ನಡೆದಿದೆ ಎಂದು ತಾವು ಭಾವಿಸಿದ್ದೀರಾ ? ಇಲ್ಲವಾದರೆ ಅದಕ್ಕೇನು ಕಾರಣ ? ಇದಕ್ಕೆ ಪರಿಹಾರವೇನು ?

ಶ್ರೀ ಶಾಸ್ತ್ರಿಗಳು ಉತ್ತರವೀಯಲು ಪ್ರಾರಂಭಿಸಿದರು.

ಈ ಪ್ರಶ್ನೆ ನಿಜಕ್ಕೂ ಬಹಳ ಚೆನ್ನಾಗಿದೆ. ನಾನು ೧೯೨೬ ನೇ ಜೂನ್ ತಿಂಗಳಲ್ಲಿ ಕನ್ನಡ ದೇಶದ ಸಂಚಾರ ವನ್ನು ಪ್ರಾರಂಭಿಸಿದೆ. ಅದಕ್ಕೆ ಮೊದಲು ೩ ವರ್ಷ ಶಾಲಾ ಮಾಸ್ತರನಾಗಿ ಕೆಲಸ ಮಾಡಿದೆ. ಮಾಸ್ತರ ಕೆಲಸ ಬೇಸರವಾಗಿ, ಕೀರ್ತನ, ವ್ಯಾಖ್ಯಾನಗಳ ಮೂಲಕ ಕನ್ನಡ ನಾಡಿನಲ್ಲಿ ಸಂಚರಿಸಿದೆ. ೧೯೩೬ ರ ವರೆಗೆ ನಾಕಂಡ ಕನ್ನಡ ನಾಡನ್ನು ಹಲವು ಬಾರಿ ಸುತ್ತಿದೆ. ಉದಯಗಿರಿಯಿಂದ ನೀಲಗಿರಿಯವರೆಗೆ ಅಡ್ಡಾಡಿದೆ. ಪಶ್ಚಿಮ ಸಮುದ್ರದಿಂದ ಕಡಪಾ, ಅನಂತ ಪುರ ಜಿಲ್ಲೆಯವರೆಗಿನ ಕನ್ನಡ ನಾಡನ್ನು ವಿಮರ್ಶಾ ತ್ಮಕ ದೃಷ್ಟಿಯಿಂದ ಸುತ್ತಿ ನೋಡಿದೆ. ಈ ನನ್ನ ಸಂಚಾ ರಾನುಭವದಲ್ಲಿ ಪರಮ ಪವಿತ್ರಳಾದ ಕರ್ನಾಟಕ ಮಾತೆಯು, ರುಂಡ ಮುಂಡಗಳು, ಕೈಕಾಲುಗಳು, ದಿಕ್ಕಾ ಪಾಲಾಗಿ ಬಿದ್ದಂತೆ ನನಗೆ ಭಾಸವಾಯಿತು. ಒಂದೇ ಭಾಷೆ, ಸಾಹಿತ್ಯ ಸಂಸ್ಕೃತಿಗೆ ಸೇರಿದ ಜನ, 'ನಾವೆಲ್ಲರೂ ಒಂದು ಪ್ರಾಂತದವರು, ಕನ್ನಡ ಕುಲದವರು, ಒಂದು ಮನೆತನಕ್ಕೆ ಸೇರಿದವರು.' ಎಂಬ ಅರಿವು ಇಲ್ಲದಂತೆ ವರ್ತಿಸುವುದನ್ನು ಮನಗಂಡು ಮರುಗಿದೆ. ಕನ್ನಡ ಭಾಷೆ ವಿವಿಧ ಕಡೆಗಳಲ್ಲಿ ಬಹಳ ಹಿಂದೆ ಬಿದ್ದಂತೆ ನನಗೆ ತೋರಿತು. ಮೈಸೂರು, ಧಾರವಾಡ, ಮಂಗಳೂರು ಗಳಲ್ಲಿ ಕೆಲಮಟ್ಟಿಗೆ ಕನ್ನಡದ ಏಳ್ಗೆಗೆ ಪ್ರಯತ್ನ ನಡೆಯು ತ್ತಿತ್ತು. ಕೊಡಗು, ಹೊಸೂರು, ಮಡಕಶಿರಾ, ಅಕ್ಕಲ ಕೋಟೆ, ಜತ್ತ, ಸೊಲ್ಲಾಪುರ, ಆದವಾನಿ ಮೊದಲಾದ ಕಡೆಗಳಲ್ಲಿ ಕನ್ನಡ ಹಿಮ್ಮೆಟ್ಟುತ್ತಿತ್ತು ಎಂದು ನನ್ನ ಅನುಭವಕ್ಕೆ ಬಂದಿತು. ಕರ್ನಾಟಕದ ಚರಿತ್ರೆ, ಸಾಹಿತ್ಯ, ಸಂಸ್ಕೃತಿಗಳ ಅಭ್ಯಾಸವನ್ನು ಬಾಲ್ಯದಿಂದ ಆಸಕ್ತಿಯಿಂದ ಮಾಡುತ್ತಿದ್ದ ನನಗೆ ನನ್ನ ಗುರುವರ್ಯರಾದ ಕರ್ನಾಟಕ ಭಾಷಾರತ್ನಂ ವೇ|| ಕರಿಬಸವಶಾಸ್ತ್ರಿಗಳ ಉಪದೇಶದ ಫಲವಾಗಿ ಕನ್ನಡದ ಅಭಿಮಾನ ಬಹಳವಾಗಿ ನನ್ನಲ್ಲಿ ಉಕ್ಕೇರಿತು. ಕನ್ನಡ ತಲೆ ಎತ್ತಿ ನಿಲ್ಲಬೇಕೆಂಬ ಹಟ ಹುಟ್ಟಿತು. ಅದಕ್ಕಾಗಿ ಪ್ರಯತ್ನಿಸಲು ಸಂಕಲ್ಪಿಸಿದೆ.

# ಕನ್ನಡದ ಪ್ರಗತಿ

**ಕನ್ನಡದ ಸರ್ವತೋಮುಖ ಪ್ರಗತಿಯಾಗುವುದು ಹೇಗೆ ಎಂದು ನೀವು ಚಿಂತಿಸಿದ್ದೀರಾ ?**

ಕರ್ನಾಟಕ ರಾಜ್ಯವು ಉದಯವಾಗಿ ಕನ್ನಡಿಗರೆಲ್ಲ ಒಂದಾಗಿ ಕೂಡದ ಹೊರತು ಕರ್ನಾಟಕದ ಸರ್ವಾಂಗೀನ ಉನ್ನತಿ ಆಗಲಾರದೆಂಬುದನ್ನು ನಾನು ಮನಗಂಡೆನು. ಅಲ್ಲಿಂದ ಒಂದೇ ಸಮನೆ ಕರ್ನಾಟಕ ಏಕೀಕರಣದ ದುಂದುಭಿಯನ್ನು ಮೂಲೆ ಮೂಲೆಗಳಲ್ಲಿ, ಊರು ಕೇರಿಗಳಲ್ಲಿ, ಮನೆಮಠಗಳಲ್ಲಿ ಮೊಳಗಿಸಲು ಪ್ರಾರಂಭಿಸಿದೆನು. ಈ ಕಾರ್ಯದಲ್ಲಿ ದಿವಂಗತರಾದ ಬೆನಗಲ್ ರಾಮರಾಯರು,ಆಲೂರು ವೆಂಕಟರಾಯರು ಮುದವೀಡು ಕೃಷ್ಣರಾಯರು, ಪ್ರೊ|| ಬಸವನಾಳ್, ಬಿ. ಎಂ. ಶ್ರೀ, ಪ್ರೊ|| ಟಿ. ಎಸ್. ವೆಂಕಣ್ಣಯ್ಯ ಎಲ್ಲಕ್ಕೂ ಹೆಚ್ಚಾಗಿ ಶ್ರೀ ಆರ್. ನರಸಿಂಹಾಚಾರ್ ಶ್ರೀ ಎಂ. ಶಾಮರಾವ್ ಮೊದಲಾದವರ ಪರಿಚಯವಾಗಿ ನನ್ನ ಅಭಿಪ್ರಾಯಗಳು ದೃಢಗೊಂಡು 'ನಮ್ಮ ನಾಡಿನ ಏಕೀಕರಣ ಆಗುತ್ತದೆ' ಎಂಬ ಭರವಸೆ ನನಗುಂಟಾಯಿತು. ಈ ಹಾದಿಯಲ್ಲಿ ಹಿರಿಯ ಕನ್ನಡಿಗರಾದ ದಿ|| ಬಿ. ಎನ್. ದಾತಾರ್, ದಿ|| ಮೊಹರೆ ಹನುಮಂತರಾವ್, ಶ್ರೀಯುತರಾದ ಡಾ|| ಆರ್. ಆರ್. ದಿವಾಕರ್, ಎಸ್. ನಿಜಲಿಂಗಪ್ಪ ಮೊದಲಾದ ಮಹನೀಯರು ಕರ್ನಾಟಕ ಏಕೀಕರಣಕ್ಕೆ ಕಂಕಣ ಕಟ್ಟಿದುದು ತನ್ನ ಧೈರ್ಯವನ್ನು ಹೆಚ್ಚಿಸಿತು. ೧೯೦೩ ರಲ್ಲಿ ದಿ|| ಬೆನಗಲ್ ರಾಮರಾಯರಿಂದ ಪ್ರಾರಂಭವಾದ ಈ ಏಕೀಕರಣ ಚಳುವಳಿ ನಾನಾ ರೂಪದಲ್ಲಿ ಮುಂದುವರಿದು ದೇವರ ಕೃಪೆಯಿಂದ ೧೯೫೬ ನೇ ನವೆಂಬರ್ ೧ ರಂದು ವಿಶಾಲ ಮೈಸೂರು ಅಥವಾ ಕರ್ಣಾಟಕ ರಾಜ್ಯ ಉದಯವಾಯಿತು. ಅಂದು ನನ್ನ ಮನಸ್ಸಿಗೆ ಒಂದು ಬಗೆಯ ನೆಮ್ಮದಿಯಾಯಿತು. ನಾನು ಆನಂದದಿಂದ ಕುಣಿದಾಡಿದೆನು. ಸುಖವಾಗಿ ನಿದ್ರೆ ಮಾಡಿದೆನು.

**ನೀವು ಆಗ ಪರಿಷತ್ತಿನ ಅಧ್ಯಕ್ಷರಾಗಿದ್ದಿರಲ್ಲವೆ ?**

ಹೌದು,ಆಗ ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷನಾಗಿದ್ದುದು ಆ ದಿಸೆಯಲ್ಲಿ ಹೆಚ್ಚು ಕೆಲಸ ಮಾಡಲು ಸಹಾಯವಾಯಿತು. ೧೯೬೪ ನೇ ಅಕ್ಟೋಬರ್ ೨೫ ನೇ ತಾರೀಖಿನವರಿಗೆ ನಾನೇ ಪರಿಷತ್ತಿನ ಅಧ್ಯಕ್ಷನಾಗಿದ್ದು ಕರ್ನಾಟಕದ ಪರಿಪೂರ್ಣತೆಗೆ ಕನ್ನಡ ನುಡಿಯ ಏಳಿಗೆಗೆ ಕನ್ನಡಿಗರ ಭಾವೈಕ್ಯತೆಗೆ ನನ್ನ ಕೈಲಾದ ಸೇವೆ ಸಲ್ಲಿಸಿದ್ದೇನೆಂದು ಧೈರ್ಯದಿಂದ ಹೇಳುತ್ತೇನೆ.

**ಕನ್ನಡ ಭಾಷೆ ಮುಂದುವರಿದಿಲ್ಲ**

ಇಷ್ಟಾದರೂ 'ಕನ್ನಡ ಭಾಷೆ ಎಷ್ಟು ಮುಂದುವರಿಯಬೇಕೋ ಅಷ್ಟು ಮುಂದುವರಿದಿಲ್ಲ' ಎಂಬುದೇ ನನ್ನ ಅಭಿಪ್ರಾಯ. ಕನ್ನಡ ರಾಜ್ಯಭಾಷೆಯಾದರೂ ನಮ್ಮ ಸರ್ಕಾರ ಆ ಬಗ್ಗೆ ಹೆಚ್ಚಿನ ತೀವ್ರತೆ ತೋರಿಸುತ್ತಿಲ್ಲ. ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಮಾಧ್ಯಮವಾಗಿಲ್ಲ. ನಾಡಿನಲ್ಲಿ ಮೂಲೆಗುಂಪಾಗಿ ಬಿದ್ದಿರುವ ಸಾವಿರಾರು ಶಿಲಾ ಶಾಸನಗಳೂ, ತಾಮ್ರಶಾಸನಗಳೂ ಸಂಶೋಧಿಸಲ್ಪಟ್ಟು ಪ್ರಕಟವಾಗಿಲ್ಲ. ಕನ್ನಡಿಗರ ಮನಸ್ಸಿನಲ್ಲಿ 'ನಮ್ಮ ಕನ್ನಡ ಭಾಷೆ, ಸಂಸ್ಕೃತದಂತೆ ಪ್ರಾಚೀನ, ಇಂಗ್ಲೀಷಿನಂತೆ ಪ್ರಭಾವಯುತ' ಎಂಬ ಅರಿವುಂಟಾಗಿಲ್ಲ. ೨೦೦೦ ವರ್ಷಗಳ ನಾಡಿನ ಉಜ್ವಲ ಚರಿತ್ರೆ ಸಂಶೋಧಿಸಲ್ಪಟ್ಟು ಪ್ರಮಾಣ ಪೂರ್ವಕವಾಗಿ ಪ್ರಕಟವಾಗಿಲ್ಲ. ಕನ್ನಡಕ್ಕೆ ಒಂದು ವಿಶ್ವಕೋಶ, ಕನ್ನಡ ಕೋಶ ಇನ್ನೂ ದಕ್ಕಿಲ್ಲ. ಇತ್ಯಾದಿ ಕಾರಣದಿಂದ ಕನ್ನಡ ಇನ್ನೂ ತಲೆಯೆತ್ತಿ ನಿಂತಿಲ್ಲ ಎಂಬುದೇ ನನ್ನ ಅಭಿಪ್ರಾಯ.

ನಮ್ಮ ಸರಕಾರ, ಸಾರ್ವಜನಿಕರು ಈ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಕನ್ನಡದ ಏಳಿಗೆಗೆ ಕಂಕಣ ಕಟ್ಟಿದಾಗ ಇದರ ಉನ್ನತಿ ಸಾಧ್ಯವಾಗುತ್ತದೆ. ಇದಕ್ಕೆ ನಿದರ್ಶನವಾಗಿ ಲಂಡನ್‌ನಲ್ಲಿನ ಇಂಡಿಯಾ ಲೈಬ್ರರಿಯಲ್ಲಿ ಭಾರತದ ಎಲ್ಲ ಭಾಷೆಗಳ ಸಾವಿರಗಟ್ಟಲೆ ಪುಸ್ತಕ ಇದ್ದರೆ 'ಕನ್ನಡದ ಕೇವಲ ೨೮೬ ಪುಸ್ತಕಗಳು ಇವೆ' ಎಂಬುದನ್ನು ನಾವಿಲ್ಲಿ ಸ್ಮರಿಸಿಕೊಳ್ಳಬಹುದು. ಈ ಪರಿಸ್ಥಿತಿಗೆ ಕಾರಣರು ನಾವು. ನಮ್ಮ ಜನರು, ವಿಶೇಷವಾಗಿ ನಮ್ಮ ಸರ್ಕಾರ ಎಂದು ಹೇಳದೆ ಗತ್ಯಂತರವಿಲ್ಲ.

## ಏಕೀಕರಣದ ಅನಂತರ

**ಶಾಸ್ತ್ರಿಗಳೆ, ಕರ್ನಾಟಕ ಏಕೀಕರಣವಾದ ಮೇಲೆ ಅಖಿಲ ಕರ್ನಾಟಕದ ರಾಜಕೀಯ, ಸಾಹಿತ್ಯ, ಕಲೆ ಮೊದಲಾದವುಗಳಲ್ಲಿ ಪ್ರಗತಿ ಸಾಧಿತವಾಗಿದೆಯೆಂದು ಭಾವಿಸುತ್ತೀರಾ? ಇಲ್ಲವಾದರೆ ಇದಕ್ಕೆ ಯಾರು ಹೊಣೆ?**

ನೀವು ಕೇಳಿದ ಈ ಪ್ರಶ್ನೆಯೂ ಅತ್ಯಂತ ಮಹತ್ವದ್ದೂ ಉಪಯುಕ್ತತೆಯಿಂದ ಕೂಡಿದ್ದೂ ಆಗಿದೆ. ೫೦ ವರ್ಷಗಳ ಹೋರಾಟದ ಅನಂತರ ಕರ್ನಾಟಕ ಏಕೀಕರಣವಾಯಿತು. ಪರಭಾಷೆಯ ದಬ್ಬಾಳಿಕೆಗೆ ಕನ್ನಡಿಗರು ಒಳಗಾಗದಂತಾಯಿತು ಎಂಬುದೇನೋ ಸಮಾಧಾನದ ಸಂಗತಿಯೇ! ಆದರೆ ಕನ್ನಡಿಗರದಲ್ಲಿ ಮೈಸೂರಿನವರು, ಮುಂಬಯಿಯವರು, ಹೈದರಾಬಾದಿನವರು, ಕೊಡಗಿನವರು ಎಂಬ ಭೇದ ಭಾವ ತೊಲಗಿಲ್ಲ. ಸರಕಾರದಲ್ಲಿ ಕೂಡ ಈ ಬಗ್ಗೆ ಇನ್ನೂ ಹೊಂದಾಣಿಕೆ ಇಲ್ಲ. ಕರ್ನಾಟಕದಲ್ಲಿ ಜಾತೀಯತೆ ಪ್ರಬಲವಾಗಿದ್ದು ಅದರ ಪರಿಣಾಮವಾಗಿ ರಾಜಕೀಯ ಪ್ರಗತಿಗೆ ಕೂಡ ತಡೆಯಾಗಹತ್ತಿದೆ. ಸಮರ್ಥರೂ, ಯೋಗ್ಯರೂ, ಅಧಿಕಾರಕ್ಕೆ ಬರಲು ಅಥವಾ ಉನ್ನತ ಸ್ಥಾನಕ್ಕೆ ಬರಲು ಈ ಜಾತೀಯತೆ ಅಡ್ಡಿಯಾಗುತ್ತಿದೆ. ಸರ್ಕಾರದಲ್ಲಿ ನೌಕರಿ ಪಡೆಯಲು, ಕಾಲೇಜುಗಳಲ್ಲಿ ಸೀಟು ಪಡೆಯಲು ಈ ಜಾತಿ ಅಡ್ಡಿಯಾಗುತ್ತಿದೆ. ಹಲವು ಸಂದರ್ಭಗಳಲ್ಲಿ ಈ ರೋಗ ಬಡವರನ್ನೂ, ಅಲ್ಪ ಸಂಖ್ಯಾತರನ್ನೂ ಕೆಳಮುಖ ಮಾಡುತ್ತಿದೆ. ಆದ್ದರಿಂದ ಸಮಗ್ರ ಕರ್ನಾಟಕದ ಪ್ರಗತಿಯಾಗಲು ಅಡಚಣೆಯಾಗಿದೆ.

### ಕಲೆ, ಸಾಹಿತ್ಯದಲ್ಲೂ ಪ್ರಗತಿಯಿಲ್ಲ

ಇನ್ನು ಕಲೆ, ಸಾಹಿತ್ಯದ ವಿಷಯ ಗಮನಿಸಿದರೂ ಅಲ್ಲಿಯೂ ಪ್ರಗತಿಯಾಗಿಲ್ಲ ಎಂದೇ ನಾನು ಹೇಳಬೇಕಾಗುತ್ತದೆ. ಸಾಹಿತ್ಯಕ್ಕಾಗಿ ಮೀಸಲಾದ ಪರಿಷತ್ತು, ಕಲೆಗಾಗಿ ಸ್ಥಾಪಿತವಾದ ಅಕಾಡೆಮಿ ಕೂಡ ತೃಪ್ತಿಕರವಾಗಿ ಕೆಲಸ ಮಾಡುತ್ತಿಲ್ಲ ಇದಕ್ಕೆ ಜನಗಳ. ಸ್ವಾರ್ಥ ದ್ವೇಷಾಸೂಯೆಗಳು ಮುಖ್ಯಕಾರಣವೆನ್ನಬಹುದು. ಅಕಾಡೆಮಿಗಳಿಗೆ ಸದಸ್ಯರನ್ನು ಆರಿಸುವಾಗ ಆ ವಿಷಯದಲ್ಲಿ ತಜ್ಞರಾದವರನ್ನು ಆರಿಸುವುದನ್ನು ಬಿಟ್ಟು ಯಾರದೋ ದಾಕ್ಷಿಣ್ಯಕ್ಕೆ ಒಳಗಾಗಿ ವಿಷಯಗಳನ್ನು ತಿಳಿಯದೇ ಇರುವ ಅಥವಾ ಮಂತ್ರಿಗಳಿಗೆ ಹೆಚ್ಚಾಗಿ ಬೇಕಾಗಿರುವ ಜನಗಳನ್ನು ಆರಿಸುವುದು ಇಲ್ಲಿ ಅನರ್ಥಕ್ಕೆ ಕಾರಣವಾಗಿದೆ.

ಕರ್ನಾಟ ಏಕೀಕರಣವಾದ ಮೇಲೆ ಕಲಾ ಪ್ರಪಂಚದಲ್ಲಿಯೂ ನಮ್ಮ ನಾಡು, ಜನ ಮುಂದುವರಿದಿಲ್ಲ. ಇತ್ತ ನಮ್ಮ ಸರ್ಕಾರವು ಸಾಕಷ್ಟು ಗಮನ ಹರಿಸಿಲ್ಲವೆಂಬುದೇ ನನ್ನ ಸ್ಪಷ್ಟ ಅಭಿಪ್ರಾಯ.

## ಪರಿಷತ್ತು ಏನು ಮಾಡಬೇಕು?

**ಕನ್ನಡ ಸಾಹಿತ್ಯ ಪರಿಷತ್ತು ಇಡೀ ನಾಡಿನ ಏಕೈಕ ಸಾಂಸ್ಕೃತಿಕ ಸಂಸ್ಥೆ, ನೀವು ಎಂಟೂಕಾಲು ವರ್ಷ ಅದರ ಅಧ್ಯಕ್ಷರಾಗಿದ್ದಿರಿ. ಅಪಾರ ಸೇವೆ ಸಲ್ಲಿಸಿದಿರಿ. ಈಗ ಆ ಸಂಸ್ಥೆ ಏನು ಮಾಡಬೇಕೆಂದು ನೀವು ಬಯಸುತ್ತೀರಿ?**

ಈ ಪ್ರಶ್ನೆ ನನಗೆ ತುಂಬಾ ಪ್ರಿಯವಾದುದು. ೧೯೧೫ ರಲ್ಲಿ ಪುಣ್ಯ ಶ್ಲೋಕರಾದ ಎಚ್. ವಿ. ನಂಜುಂಡಯ್ಯ, ಎಂ. ವೆಂಕಟಕೃಷ್ಣಯ್ಯ, ಕರ್ಪೂರ್ ಶ್ರೀನಿವಾಸರಾವ್, ಸರ್ ಕೆ. ಪಿ. ಪುಟ್ಟಣ್ಣಶೆಟ್ಟಿ, ಆಲೂರು ವೆಂಕಟರಾವ್ ಮೊದಲಾದ ಹಿರಿಯರ ಪ್ರಯತ್ನದ ಫಲವಾಗಿ ಸರ್ ಎಂ. ವಿಶ್ವೇಶ್ವರಯ್ಯನವರ ಪ್ರೋತ್ಸಾಹದಿಂದ ಇದು ಸ್ಥಾಪಿತವಾಯಿತು. ಕರ್ನಾಟಕ ಏಕೀಕರಣವಾಗಲು ಪರಿಷತ್ತು ಮತ್ತು ಅದು ನಡೆಸಿದ ಸಾಹಿತ್ಯ ಸಮ್ಮೇಳನಗಳು ಬಹುಮಟ್ಟಿಗೆ ಕಾರಣ. ಅದರ ಧ್ಯೇಯೋದ್ದೇಶಗಳು ಅಮೋಘವಾಗಿವೆ. ನಾನು ಪರಿಷತ್ತಿನ ಅಧ್ಯಕ್ಷನಾಗಿದ್ದಾಗ (೧೭-೬-೫೬) ಅಲ್ಲಿ ಅನೇಕ ಅನಾನುಕೂಲಗಳಿದ್ದವು. ಪರಿಷತ್ತಿನ ಹಿಂಭಾಗದ ಪೌಳಿ ಬಿದ್ದುಹೋಗಿತ್ತು. ಸಭಾಭವನದಲ್ಲಿ ಕೂಡಲು ಪೂರ್ತಿ ಕುರ್ಚಿಗಳಿರಲಿಲ್ಲ. ಪರಿಷತ್ತಿನ ಒಂದು ಕೋಣೆಯಲ್ಲಿ ಪುಸ್ತಕಗಳು ರಾಶಿರಾಶಿಯಾಗಿ ಬಿದ್ದಿದ್ದುವು. ಸದಸ್ಯ ಸಂಪತ್ತು ಅಷ್ಟು ಅಧಿಕವಾಗಿರಲಿಲ್ಲ. ಗ್ರಂಥ ಪ್ರಕಟನೆಗೆ ಹಣವಿರಲಿಲ್ಲ. ಆಗ ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ಕೆ. ಹನುಮಂತಯ್ಯನವರನ್ನು ಕಂಡು ಪರಿಸ್ಥಿತಿ ವಿವರಿಸಿದೆ. ಅವರು ೩೫,೦೦೦ ರೂ.

ಗಳನ್ನು ಪರಿಷತ್ತಿನ ಅಭ್ಯುದಯಕ್ಕೆ ಉದಾರವಾಗಿ ಕೊಡಿಸಿಕೊಟ್ಟರು. ಕನ್ನಡ-ಕನ್ನಡ ನಿಘಂಟು ಕಾರ್ಯ ಸಾಗುತ್ತಿತ್ತು. ಅದಕ್ಕೆ ಸ್ಥಿರವಾದ ನೆಲೆ ಇರಲಿಲ್ಲ. ಆಗ ಮುಖ್ಯ ಮಂತ್ರಿಗಳಾಗಿದ್ದ ಶ್ರೀ ಬಿ. ಡಿ. ಜತ್ತಿ, ವಿದ್ಯಾಮಂತ್ರಿ ಶ್ರೀ ಅಣ್ಣಾರಾಯರು, ಆಗಿನ ಅರ್ಥ ಮಂತ್ರಿ ದಿ॥ ಟಿ. ಮರಿಯಪ್ಪನವರನ್ನು ಕಂಡು ಮಾತ ನಾಡಿದೆ. ದೂರ ದೃಷ್ಟಿಯಿಂದ ಅವರು ನನ್ನ ಕೋರಿಕೆ ಒಪ್ಪಿಕೊಂಡರು, ಅದರ ಫಲವಾಗಿ ಸರಕಾರಕ್ಕೂ ಪರಿಷತ್ತಿಗೂ ಒಂದು ಕರಾರಾಯಿತು. ೧೫ ಲಕ್ಷ ರೂಪಾಯಿಗಳನ್ನು ಸರ್ಕಾರ ಕೊಡಲೊಪ್ಪಿತು. ಜೊತೆಗೆ ಆಗ ಪರಿಷತ್ತಿನ ಕೋಶಾಧಿಕಾರಿಯಾಗಿದ್ದ ಶ್ರೀ ಜಿ. ಶ್ರೀನಿವಾಸನ್ನರ ನೆರವಿನಿಂದ ಸಾರ್ವಜನಿಕರಿಂದ ಹಣ ಕೂಡಿಸಿ ಅಚ್ಚುಕೂಟವನ್ನು ಮಾಡಲಾಯಿತು. ಮುದ್ರಣ ಯಂತ್ರ ತರಿಸಲಾಯಿತು. ನಿಘಂಟಿಗೆ ಕಾಗದ, ಅಚ್ಚು ಮೊಳೆ ಸಂಗ್ರಹಿಸಲಾಯಿತು. ನಾನು ಅಧ್ಯಕ್ಷನಾಗಿದ್ದಾಗ ೮೦ ಪುಟ ನಿಘಂಟು ಅಚ್ಚಾಗಿತ್ತು, ಈಗ ಅದರ ಮೂರು ಸಂಚಿಕೆಗಳು ಮಾತ್ರ ಪ್ರಕಟವಾಗಿವೆ.

**ಇಂದಿನ ಸ್ಥಿತಿ**

ಪರಿಷತ್ತಿನ ಇಂದಿನ ಸ್ಥಿತಿ ಚಿಂತಾಜನಕವಾಗಿದೆ. ಕಾವ, ಜಾಣ ಪರೀಕ್ಷೆಗಳು ನಿಂತಿವೆ. ಕನ್ನಡ ರಾಜ್ಯೋತ್ಸವವನ್ನು ಉದಾಸೀನ ಮಾಡಲಾಗಿದೆ. ಗಡಿನಾಡು ಕನ್ನಡಿಗರ ಕಷ್ಟಸುಖವನ್ನು ಪರಿಷತ್ತು ಗಮನಿಸುತ್ತಿಲ್ಲ. ಪರಿಷತ್ಪತ್ರಿಕೆ ಕ್ರಮವಾಗಿ ಬೆಳಕಿಗೆ ಬಂದಿಲ್ಲ. ಜೊತೆಗೆ ೨೩೦೦ ಮಂದಿ ಯಷ್ಟಿದ್ದ ಸದಸ್ಯ ಸಂಪತ್ತು ೮೦೦ ಒಳಗೆ ಇದೆ. ಇದಕ್ಕಿಂತ ನಿದರ್ಶನ ಇನ್ನೇನು ಬೇಕು ?

## ಸಾಹಿತಿ, ಕಲಾವಿದರ ಸ್ಥಿತಿಗತಿ?

**ಕನ್ನಡ ಸಾಹಿತಿ, ಕಲಾವಿದ, ಸಂಗೀತಗಾರ, ಶಿಲ್ಪಿ ಇವರಲ್ಲಿ ಯಾರ ಸ್ಥಿತಿಯೂ ಚೆನ್ನಾಗಿಲ್ಲ. ಇದಕ್ಕೆ ಸರ್ಕಾರದ ಔದಾಸೀನ್ಯ ಕಾರಣವೆ? ಇಲ್ಲವೆ ಜನರ ಅಭಿಮಾನ ಶೂನ್ಯತೆ ಕಾರಣವೆ ?**

ಈ ಪ್ರಶ್ನೆಯೂ ತಕ್ಕಷ್ಟು ಸತ್ವಪೂರ್ಣವಾಗಿದೆ. ಹಿಂದೆ, ಸಾಹಿತ್ಯ, ಸಂಗೀತ, ಶಿಲ್ಪಾದಿ ಕಲೆಗಳಿಗೆ ರಾಜಾಶ್ರಯವಿತ್ತು. ಇಂದು ಕಾಲ ಭಿನ್ನವಾಗಿದೆ. ಪ್ರಜಾಪ್ರಭುತ್ವ ಪ್ರಾಪ್ತವಾಗಿ, ದೇಶ ಸ್ವತಂತ್ರವಾಗಿ ೨೦ ವರ್ಷಗಳಾದವು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಅಕ್ಯಾಡಮಿ ಮೂಲಕ ಕಲಾವಿದರಿಗೆ ಪ್ರೋತ್ಸಾಹ ಕೊಡುತ್ತಿವೆ. ಆದರೆ ಸಾಲದು. ಸಂಗೀತಗಾರ ತನ್ನ ವೀಣೆ, ಪಿಟೀಲುಗಳನ್ನು, ಸಾಹಿತಿ ತನ್ನ ಕುರ್ಚಿ-ಮೇಜುಗಳನ್ನು ಹರಾಜು ಹಾಕಿಸಿಕೊಳ್ಳುವ ಸ್ಥಿತಿ, ಅವನು ವಾಸಿಸುವ ಸಮಾಜಕ್ಕಾಗಲಿ, ಅವನು ನೆಲೆಸಿರುವ ರಾಜ್ಯಕ್ಕಾಗಲಿ, ಗೌರವ ತರುವ ಮಾತಲ್ಲ. ಸಮಾಜ ಬಾಂಧವರು, ಮುಖ್ಯವಾಗಿ ಸರಕಾರದವರು ನಾಡಿನ ವಿದ್ವಾಂಸರಿಗೆ ಹಾಗೂ ಸಾಹಿತಿ, ಕಲಾವಿದರಿಗೆ ವಸತಿಗೆ ಒಂದು ಮನೆ, ಜೀವನಕ್ಕೆ ಒಂದು ಮಾರ್ಗ ಕಲ್ಪಿಸಿ ಕೊಡುವುದು ಅಗತ್ಯ. "ದೇಶದ ಉನ್ನತಿಗೆ ಸರಕಾರ ಶರೀರವಾದರೆ ಸಾಹಿತ್ಯ ಕಲೆಗಳು ಆತ್ಮ ಸ್ವರೂಪ" ಇದನ್ನು ಎಲ್ಲರೂ ಮನಗಾಣಬೇಕು. ಕವಿ ಕಲಾವಿದರು ಜೀವನಕ್ಕಾಗಿ ಕಳೆಯುವ ಕಾಲವನ್ನು ಸಾಹಿತ್ಯ ಕಲೆಗಳಿಗಾಗಿ ಮೀಸಲು ಮಾಡಿದರೆ ಅದರಿಂದ ಅವರಿಗಾಗುವ ಲಾಭಕ್ಕಿಂತ ಸಮಾಜಕ್ಕೂ ರಾಷ್ಟ್ರಕ್ಕೂ ಹೆಚ್ಚು ಲಾಭಪ್ರದ. ಈ ರಹಸ್ಯವನ್ನು ನಮ್ಮ ಸರಕಾರ ಮತ್ತು ಸಮಾಜ ಗಮನಿಸಬೇಕು.

## ಕರ್ನಾಟಕದ ಏಳಿಗೆ?

**ಶಾಸ್ತ್ರಿಗಳೆ, ಕೊನೆಯ ಪ್ರಶ್ನೆ. ಕನ್ನಡನಾಡು ಸರ್ವತೋಮುಖ ಅಭಿವೃದ್ಧಿಗೆ ಬರಬೇಕಾದರೆ ಯಾವ ಕಾರ್ಯ ಆಗಬೇಕೆಂದು ತಾವು ಅಪೇಕ್ಷಿಸುತ್ತೀರಿ ?**

ಈ ಪ್ರಶ್ನೆ ಮೇಲಿನ ಎಲ್ಲ ಪ್ರಶ್ನೆಗಳಿಗೂ ಪೂರಕವಾಗಿದೆ. ಕನ್ನಡನಾಡು ಸರ್ವಾಂಗೀನ ಉನ್ನತಿ ಸಾಧಿಸಬೇಕಾದರೆ ನಮ್ಮ ಸರ್ಕಾರ ಅತಿ ವೇಗದಿಂದ ಕೆಲಸ ಮಾಡಬೇಕು. ಕೇಂದ್ರದಲ್ಲಿ ನಮ್ಮ ರಾಜ್ಯಕ್ಕೆ ತಕ್ಕ ಪ್ರಾತಿನಿಧ್ಯ ಸಿಗಬೇಕು. ಹಾಸನ—ಮಂಗಳೂರು ರೈಲು ಮಾರ್ಗ, ಮಂಗಳೂರು—ಕಾರವಾರ ಬಂದರು ನಿರ್ಮಾಣ, ಕಾರವಾರ—ಹುಬ್ಬಳ್ಳಿ ರೈಲು ಮಾರ್ಗ, ಕೃಷ್ಣಾ—ಮಲಪ್ರಭಾ ನದಿಗಳ ಅಣೆಕಟ್ಟು ಇವೆಲ್ಲ ಆಗಬೇಕು.

ಇದರಿಂದ ನಾಡಿನ ವ್ಯವಸಾಯ ಕೈಗಾರಿಕೆಗಳು ಅಭಿವೃದ್ಧಿ ಹೊಂದುತ್ತವೆ. ಸರ್ಕಾರ ಗ್ರಾಮಗಳ ಅಭಿವೃದ್ಧಿಗೆ ಗಮನ ಕೊಡಬೇಕು. ವಿದ್ಯಾರ್ಥಿಗಳು ಸ್ವಾವಲಂಬಿಯಾಗುವಂತೆ ಅವರಿಗೆ ವ್ಯವಸಾಯ ಕೈಗಾರಿಕೆಗಳ ಶಿಕ್ಷಣ ಕೊಡಬೇಕು. ದೇಶದಲ್ಲಿ ಜಾತೀಯ ಪ್ರಾಮುಖ್ಯತೆ ಅಳಿದು ನೀತಿ ಮತ್ತು ಪ್ರತಿಭೆ, ಸೇವೆ ಮತ್ತು ಸೌಜನ್ಯಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಪ್ರಾಪ್ತವಾಗಬೇಕು. ಅಧ್ಯಾತ್ಮದ ನೆಲಗಟ್ಟಿನಲ್ಲಿ ಲೌಕಿಕದ ಮನೆ ನಿರ್ಮಾಣವಾಗಬೇಕು. ಪಂಪ-ರನ್ನರ ವೀರಶ್ರೀ, ಹರಿಹರ ರಾಘವಾಂಕರ ಭಕ್ತಿಶ್ರೀ, ಕುಮಾರವ್ಯಾಸ ಲಕ್ಷ್ಮೀಶರ ಕಾವ್ಯಶ್ರೀ ಕನ್ನಡಿಗರ ಹೃದಯದಲ್ಲಿ ತುಂಬಿ ತುಳುಕಿ ಅವರನ್ನು ನರಸಿಂಹರನ್ನಾಗಿ ಮಾಡಬೇಕು. 'ಕಾಯಕವೇ ಕೈಲಾಸ' ಎಂಬ ತತ್ತ್ವವನ್ನು ಕನ್ನಡಿಗರು ಕಾರ್ಯರೂಪಕ್ಕೆ ತರಬೇಕು, ಸರಕಾರ ಈ ಬಗ್ಗೆ ಜನಕ್ಕೆ ಮಾರ್ಗದರ್ಶನ ಮಾಡಬೇಕು. ಶಾಸನ ಸಭೆಯಲ್ಲಿ ವಿದ್ವಾಂಸರೂ ಅನುಭವಿಗಳೂ, ಹೆಚ್ಚು ಹೆಚ್ಚು ಇರುವಂತಾಗಬೇಕು. ಹೀಗಾದರೆ ಕರ್ಣಾಟಕವು ಸರ್ವಾಂಗೀನ ಉನ್ನತಿ ಪಡೆಯುತ್ತದೆ. ಸಮಗ್ರ ಭಾರತಕ್ಕೆ ಮಾರ್ಗದರ್ಶನ ಮಾಡುತ್ತದೆ. ನೀವು ಕೇಳಿದ ಪ್ರಶ್ನೆಗಳಿಗೆ ನನ್ನ ೪೦ ವರ್ಷಗಳ ಸಾರ್ವಜನಿಕ ಜೀವನದ ಅನುಭವದ ಬಲದಿಂದ ಉತ್ತರವಿತ್ತಿದ್ದೇನೆ.

ಶಾಸ್ತ್ರಿಗಳೆ, ದೇವರು ನಿಮಗೆ ಇತೋಪ್ಯತಿಶಯ ಸನ್ಮಂಗಳ ಪರಂಪರೆಯನ್ನುಂಟು ಮಾಡಲಿ ಎಂದು ನಮಸ್ಕರಿಸಿ ಎದ್ದು ಬಂದೆನು.

**ಸಂಯುಕ್ತ ಕರ್ಣಾಟಕ**

॥ ಸಿರಿಗನ್ನಡಂ-ಗೆಲ್ಗೆ-ಬಾಳ್ಗೆ ॥

---

# 'ಪದ್ಮಶ್ರೀ'–'ಪಂಡಿತರತ್ನಂ' ಪ್ರಭೆ

ಸೇವೆಯೆಂಬುದಕೊಂದು ರೂಪುಂಟೆ, ಕುಲವುಂಟೆ,
ಸೇವೆಯ ಸ್ವರೂಪಕ್ಕೆ ಆದಿ ಅಂತ್ಯಗಳುಂಟೆ,
ಇದರರ್ಥ ಏನು ತಿಳಿಯಲಿದಿಕೊ ಬಾ ನೋಡಿಲ್ಲಿ
ಶಿವಮೂರ್ತಿಶಾಸ್ತ್ರಿಗಳ–ಸಜ್ಜನರ ನೆರವಿ ; ॥ ೧ ॥

ಆ ನೆರವಿಯಲ್ಲಿ ಬೆಳಗಿ ಅರುವತ್ತು ಬರಿಸದಲಿ,
ನೀನು ತಾನೆಂದೆಂಬ ಭೇದವರಿಯದೆ ಬಾಳಿ,
ಕನ್ನಡವ ಕರ್ಣಾಟ ದೇಶವನು ಬಳಸಿ,
ಭೂಷಣವಗಳಿಸಿರಲು ಪದ್ಮಶ್ರೀಯಾಗಿ— ॥ ೨ ॥

ಕನ್ನಡದ ಜನರ ಏಕೀಕರಣದಲ್ಲಿ,
ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ,
ಶರಣರಲಿ, ಕನ್ನಡದ ಕೋಶದಲಿ, ದೇಶದಲಿ,
ಹೆಸರಾಂತ ಪಂಡಿತರ ರತ್ನನಾಗಿ— ॥ ೩ ॥

ಶಾರದೆಯ ವರಪುತ್ರ, ಕಬ್ಬಿಗರ ಕುಲಪುತ್ರ,
ಶುದ್ಧಾಂತರಂಗದಲಿ ನಿಂತು ನಲಿದು,
ಬದ್ಧಕಂಕಣನಾಗಿ ತ್ಯಾಗಿಗಳ ಸತ್ಪಾತ್ರ,
ಸಲಿಪೆ ನಿನಗೀಸವಿಯ ರಾಮಸೂಕ್ತಿ— ॥ ೪ ॥

ನಿನ್ನ ನಂಬಿದ ಜನಕೆ ನಿನ್ನನಪ್ಪಿದ ಕುಲಕೆ,
ನಿನ್ನ ನುಡಿಯಲಿ ನಡೆದ ಪರಿಣತರಿಗೆ,
ನಿನ್ನ ಭಾವಕೆ, ನಿನ್ನ ಕಾರ್ಯರಂಗಕೆ,
ಸಲ್ಲುವುದು ದೇವಾದಿದೇವನೊಲಿಮೆ— ॥ ೫ ॥

ಡಿ. ಆರ್. ರಾಮಯ್ಯ

# ಅಭಿನಂದನಾಷ್ಟಕಂ

ಕೀರ್ತನ ಕೇಸರೀ ನಾಮ್ನಾ
ಭೂಮ್ನಾಬಿರುದೇನ ಭೂಷಿತೋ ಜಯತಾತ್
ಶಿವಮೂರ್ತಿಶಾಸ್ತ್ರಿವರ್ಯಃ
ಜನಹಿತಧುರ್ಯಃ ಶಿವಾಚಾರ್ಯಃ ॥ ೧ ॥

ಧನ್ಯಃ ಕೀರ್ತನ ಕೇಸರೀ ಸುಮಧುರಂ
ಸಂಕೀರ್ತಯನ್ ಶಂಕರಂ।
ಧನ್ಯೇಯಂ ಜನತಾ ತದೀಯ ಸುಗುಣಾನ್
ಸಂಕೀರ್ತಯಂತೀ ಮುಹುಃ ॥
ಧನ್ಯಂ ಭೂವಲಯಂಭಗೀರಥ
ಸುತಾವೀಚೀ ಸಮಾನೈಶ್ಶುಭೈಃ
ಶ್ರೀಮತ್ಕೀರ್ತನ ಕೇಸರಿಂದ್ರಚರಿತೈ
ರ್ಧಾವಲ್ಯಮಾಪಾದಿತಂ ॥ ೨ ॥

ಜಯಚಾಮನೃಪತಿದತ್ತಂ
ಪಂಡಿತರತ್ನಪ್ರಶಸ್ತಿಮಾಸಾದ್ಯ ॥
ರಾಜತೇ ವಿಬುಧವರೇಣ್ಯಃ
ಪರಿಮಲಯುಕ್ತಂ ಸುವರ್ಣಮಿವ ॥ ೩ ॥

ಶ್ರೀವೀರಶೈವಾನ್ವಯರತ್ನಮೇಷಃ
ಭೂಪಾಲರತ್ನೇನ ವಿತೀರ್ಣಮೇತತ್ ॥
ಪ್ರಶಸ್ತಿರತ್ನಂ ಪರಿಗೃಹ್ಯಲೋಕೇ
ಕರೋತಿರತ್ನತ್ರಿತಯಸ್ಯಯೋಗಂ ॥ ೪ ॥

ದತ್ತೇನ ರಾಷ್ಟ್ರಪತಿನಾ ಬಿರುದೇನ ಧೀಮಾನ್
ಪದ್ಮಶ್ರೀಯಾ ಸುಮಹಿತೇನ ವಿಭೂಷಿತಶ್ಚೇತ್ ।
ಸಾಽಪಿ ಪ್ರಶಸ್ತಿರನುರೂಪಮವಾಪ್ಯ ಕಾಂತಂ
ಕಾಂತೇವ ಪಂಡಿತವರಂ ನಿತರಾಂ ವಿಭಾತಿ ॥ ೫ ॥

ವಿಭಕ್ತ ಕರ್ಣಾಟಕ ಭೂವಿಭಾಗಾನ್
ಗುಣೈಃ ಸ್ವಕೀಯೈ ಸ್ಸುದೃಢಂ ನಿಬಧ್ಯ ॥
ಅಖಂಡ ಕರ್ಣಾಟಕ ಜನ್ಮದಾತಾ
ವಿಭಾತಿ ಧೀರಶ್ಶಿವಮೂರ್ತಿವರ್ಯಃ ॥ ೬ ॥

ಪುತ್ರಶ್ಶರಣ ಸಾಹಿತ್ಯಂ
ಪುತ್ರಿಕಾ ಪರಿಷತ್ತಥಾ ॥
ಉಭಯೋಃ ಪಾಲನೇ ವ್ಯಗ್ರಃ
ಶಿವಮೂರ್ತಿ ಮಹೋದಯಃ ॥ ೭ ॥

ಕರ್ಣಾಟದೇಶ ಜನತೈಕಹಿತಂ ವಿತನ್ವನ್
ಆರೋಗ್ಯ ಭಾಗ್ಯ ಮಧಿಗಮ್ಯ ವಿಶಾಲಚೇತಾಃ ॥
ಜೀಯಾಚ್ಚಿರಂ ಗುಣಗಣೈಕನಿಧಿರ್ಬುಧೇಂದ್ರಃ
ಶ್ರೀ ಪಾರ್ವತೀಶ ಕೃಪಯಾ ಶಿವಮೂರ್ತಿಶಾಸ್ತ್ರೀ ॥ ೮ ॥

ಉಭಯ-ಭಾಷಾ ಪಂಡಿತ ವಿದ್ವಾನ್
ಎಚ್. ವಿ. ನಾರಾಯಣಶಾಸ್ತ್ರೀ,
ಸಹಾಯಕ ಸಂಪಾದಕಃ,
ಕರ್ಣಾಟಕ ನಿಘಂಟು ಕಾರ್ಯಾಲಯಃ

ದಿ॥ ೨೨-೧೨-೧೯೬೭ ಬೆಂಗಳೂರು-10

---

ಬೆಂಗಳೂರು ಲಾಲ್‌ಬಾಗ್ ರೋಡಿನಲ್ಲಿರುವ ಓರಿಯಂಟ್ ಪವರ್ ಪ್ರೆಸ್ಸಿನ ಮಾಲೀಕರಾದ
ಜಿ. ಶ್ರೀನಿವಾಸನ್‌ರವರಿಂದ ಮುದ್ರಿಸಲ್ಪಟ್ಟಿತು—1968

# ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳ ಜೀವನದ ಪ್ರಮುಖ ಘಟನಾವಳಿಗಳು.

ಜನನ ದಿ. ೨೩-೨-೧೯೦೩. ತುಮಕೂರಿನಲ್ಲಿ. ತಂದೆ-ಬಸವಯ್ಯಸ್ವಾಮಿಗಳು, ಹುಲುಕುಂಟೆಮಠ, ತುಮಕುರು. ವಿದ್ಯಾಭ್ಯಾಸ ತುಮಕೂರು ೧೯೦೮-೧೯೨೩, ಉಪಾಧ್ಯಾಯವೃತ್ತಿ ೧೯೨೩ ರಿಂದ ೧೯೨೫. ಕೀರ್ತನ ವೃತ್ತಿ-ಕರ್ಣಾಟಕವ ಸಂಚಾರ, ೧೯೨೬ ರಿಂದ ೧೯೩೬. ಈವರೆಗೆ ತುಮಕೂರಿನಲ್ಲಿಯೇ ವಾಸ.

ಶರಣ ಸಾಹಿತ್ಯ ಪ್ರಾರಂಭ ೧೯೩೭ ಬೆಂಗಳೂರಿನಲ್ಲಿ. ಸ್ವತಂತ್ರ ಕರ್ಣಾಟಕ (ವಾರ ಪತ್ರಿಕೆ) ೧೯೩೮ ರಿಂದ ೧೯೪೨ ವರೆಗೆ ಬೆಂಗಳೂರಿನಲ್ಲಿ.

ಬೆಂಗಳೂರಿನಲ್ಲಿ ಸ್ವತಂತ್ರ ಕರ್ಣಾಟಕ ಮುದ್ರಣಾಲಯ ಸ್ಥಾಪನೆ. ೧೯೩೯

ಆಸ್ಥಾನ ವಿದ್ವಾನ್ ೧೯೪೦

ಪಂಡಿತ ರತ್ನಂ ೧೯೪೮

ಸಾಹಿತ್ಯ ಪರಿಷತ್ ಅಧ್ಯಕ್ಷತೆ ೧೯೫೬ರಿಂದ ೧೯೬೪. ಷಷ್ಟ್ಯಬ್ದಶಾಂತಿ ತಾ|| ೨೪-೨-೧೯೬೩ರಂದು ಬೆಂಗಳೂರಿನಲ್ಲಿ

ಪದ್ಮಶ್ರೀ ೧೯೬೬

ಮೈಸೂರು ಸಾಹಿತ್ಯ ಅಕಾಡಮಿ ಸನ್ಮಾನ ೧೯೬೭

ಪ್ರಶಸ್ತಿ ಗ್ರಂಥ "ದೇವ ಗಂಗೆ" ಸಮರ್ಪಣ ಬೆಂಗಳೂರಿನಲ್ಲಿ ದಿನಾಂಕ ೧೪-೯-೧೯೬೮ ರಂದು.

೧೯೨೬ ರಿಂದ ೧೯೩೬ರಲ್ಲಿ ಶ್ರೀ ಶ್ರವಣಬೆಳಗೊಳ, ಶ್ರೀ ರಂಭಾಪುರಿ, ಉಜ್ಜಯಿನಿ, ಶ್ರೀ ಶೈಲ, ಚಿತ್ರದುರ್ಗ, ಮತ್ತು ಕಾಶಿ ಜಗದ್ಗುರುಗಳಿಂದ ಬಿರುದುಗಳು.

ಕೀರ್ತನ ವಿಚಕ್ಷಣ, ಕೀರ್ತನ ಕೇಸರಿ, ಶಿವಕೀರ್ತನ ಕವಿರಾಜ, ವಿಮರ್ಶನಾಚಾರ್ಯ, ಕೀರ್ತನಾಚಾರ್ಯ, ಕರ್ಣಾಟಕ ವಿಭೂಷಣ, ವಿದ್ಯಾವಾರಿಧಿ, ಸಮಾಜ ಭಾಸ್ಕರ ಇತ್ಯಾದಿ.

ಸದಸ್ಯತ್ವ: ಮೈಸೂರು ಸಾಹಿತ್ಯ ಅಕಾಡಮಿ, ಸಂಗೀತ ನಾಟಕ ಅಕಾಡಮಿ, ಕನ್ನಡ ನಿಘಂಟು ಸಂಪಾದಕ ಸಮಿತಿ, ಕನ್ನಡ ವಿಶ್ವಕೋಶ ಸಮಿತಿ, ಆಕಾಶವಾಣಿ ಸಲಹಾ ಸಮಿತಿ, ಬಸವ ಸಮಿತಿ ಕಾರ್ಯಸಮಿತಿ, ಅ. ಭಾ. ವೀ: ಮಹಾಸಭಾ ಕಾರ್ಯಸಮಿತಿ, ಸರ್ಪಭೂಷಣಮಠ ಟ್ರಸ್ಟ್ ಕಮಿಟಿ ಸದಸ್ಯತ್ವ, ಮೈಸೂರು ಲಿಂಗಾಯತ ವಿದ್ಯಾಭಿವೃದ್ಧಿ ಸಮಿತಿ, ಮೈಸೂರು ಮುದ್ರಣಕಾರ ಸಹಕಾರ ಸಂಘ ಮತ್ತು ಸಂಘಗಳ ಕಾರ್ಯಸಮಿತಿಸದಸ್ಯತ್ವ. ಮೈಸೂರು ಸರ್ಕಾರದ ಗಡಿ ಸಲಹಾಸಮಿತಿ ಇತ್ಯಾದಿಗಳು.

